# Rishigaḷa Amruthavāṇi

## Dēvathegaḷu: Ṛgvēdadinda parichaya

Divine sayings of Rishis –
Deities: Introduction from Ṛgvēda

2 September 2004

N. R. NANJUNDAIAH

96B, 37 Cross, 10 Main, II Block
Rajajinagar
Bangalore 560 010
Phone: 91 80 2332 5840



**JAGADGURU SRI SRI BHARATHI THEERTHA MAHASWAMIGAL**

SRI SARADHA PEETHAM SRI[illegible]

|| ಓಂ ಶ್ರೀ ಮಹಾಗಣಪತಯೇ ನಮ: ||







# ಶ್ರೀ ಗಣೇಶ ಸೂಕ್ತ

ಕುಸೀದ ಕಾಣ್ವಋಷಿಗಳು, ಗಾಯತ್ರೀ ಛಂದಸ್ಸಿನ ಋಕ್‌ಗಳಲ್ಲಿ - ಇಂದ್ರ ಮತ್ತು ಬ್ರಹ್ಮಣಸ್ಪತಿರೂಪಿ - ಗಣಪತಿಯನ್ನು ಸ್ತುತಿಸುತ್ತಾರೆ.

ಬ್ರಹ್ಮಣಸ್ಪತಿಯು ಪ್ರಸಿದ್ಧ ಕರ್ಮಗಳಿಗೆ ಪ್ರಭು, ದೇವ ಸಂಬಂಧಿ ಸ್ವರ್ಗದೊಡೆಯ, ಅಪರಿಮಿತ ಅನ್ನವಂತ, ಮಂತ್ರಗಳೊಡೆಯ, ಶ್ಲಾಘ್ಯರ ನಡುವೆ ಪ್ರಕಾಶಿತನಾಗಿರುವವ.

ಭೂತ-ಭವಿಷ್ಯತ್-ವರ್ತಮಾನಗಳನ್ನೂ, ಅಪಹೃತವಾದದ್ದನ್ನೂ ಕಾಣುವ ಬ್ರಹ್ಮಣಸ್ಪತಿಯು ಕ್ರಾಂತದರ್ಶಿ, ಕವಿಗಳಲ್ಲೇ ಕವಿ ಮಹದಾದ ಆನೆಯಂತಹ ಬ್ರಹ್ಮಣಸ್ಪತಿಯನ್ನು, ಕಾರ್ಯ ನಿಮಿತ್ತವಾಗಿ ಯಜಮಾನ ಋಷಿಯು ಆಹ್ವಾನಿಸುತ್ತಾನೆ.

ಇಂದ್ರ ರೂಪಿ ಗಣಪತಿಯು, ಸತ್ಯಾತ್ಮಕ ಶಕ್ತಿಯುಳ್ಳ ಮರುದ್ಗಣಗಳೊಡೆಯ, ಪರಾಕ್ರಮಿ, ಯುದ್ಧ ನಿಪುಣ; ಶತ್ರುನಾಶ ಶಿಷ್ಯರಕ್ಷಣೆ ಅವನ ಕಾರ್ಯ. ಸಕಲ ಕರ್ಮಗಳು ನಡೆಯುವುದೂ, ಅನ್ನಾಧಿಪತಿ ಇಂದ್ರನು ಜೊತೆಗೆ ಇರುವುದರಿಂದಲೇ.

ಭಯಂಕರ ವೃಷಭವನ್ನು ತಡೆಯಲು ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ದಾನಮಾಡಲು ಅಪೇಕ್ಷಿಸುವ ಇಂದ್ರನನ್ನೂ, ದೇವ ಮಾನವರು ಯಾರು ತಡೆಯಲಾರರು. ದಾನರಹಿತರ ಮತ್ತು ಶತ್ರುಗಳ ಧನವನ್ನು ಸ್ವಶಕ್ತಿಯಿಂದ ಅಪಹರಿಸಿ, ಗ್ರಹಣ ಯೋಗ್ಯರಿಗೆ. ಬಲಗೈಲಿ ಹಿಡಿದದ್ದನ್ನು ಎಡಗೈಲಿದಾನ ಮಾಡುತ್ತಾನೆ.

ಅನೇಕ ಕಾಮನಾಯುತರೂ, ಮೇಧಾವಿಗಳೂ, ದಾನಿ ಇಂದ್ರನನ್ನು ಪ್ರಶಂಸಿಸಿ ಸ್ತುತಿಸುತ್ತಾರೆ.

ಮೇಧಾವಿ, ಪ್ರಾಜ್ಞರ ನಡುವೆ, ಪ್ರಾಜ್ಞ ವಿಸ್ತೃತ ಪ್ರಮಾಣ ಉಳ್ಳವನಾದ ಸ್ವಯಂಪ್ರಕಾಶಕ ಧನಾಧಿ ಪತಿ, ಅನೇಕ ವಿಧ ಕರ್ಮನಿರತ ಇಂದ್ರನು, ಬ್ರಹ್ಮಣಸ್ಪತಿಯ ಮಿತ್ರ.

ಆಹ್ಲಾದಕರ ಅನ್ನಗಳೊಡಯ ಬ್ರಹ್ಮಣಸ್ಪತಿಯು, ಕ್ಷಿಪ್ರವಾಗಿ ಯಜ್ಞಗೃಹ ಪ್ರವೇಶ ಮಾಡಲಿ.

ಸಮೀಪದಿಂದಾಗಲೀ ದೂರದಿಂದಗಲಿ, ಸ್ತುತನಾದ ಇಂದ್ರನು, ಯಜಮಾನನ ಸಾಮರೂಪ ಸ್ತೋತ್ರಗಳನ್ನು ನಾನಾರೂಪದಿಂದ ಗೌರವಿಸಲಿ, ಕೇಳಲಿ, ಗಾನಮಾಡಲಿ. ಯಜಮಾನನ ಇಷ್ಟಾರ್ಥಪೂರೈಸಲಿ.

ಗಣಪತಿಯು, ಯಜಮಾನನನ್ನು ತೇಜೋಯುತನನ್ನಾಗಿ ಮಾಡಲಿ. ಅವನು ಯಾಚಿಸದಾಗಲೆಲ್ಲಾ ಧನ ಕೊಡಲಿ:

ಸಂಪತ್ತಿನಲ್ಲಿ ಭಾಗವಿಲ್ಲದಿರುವ ಸ್ಥಾನದಲ್ಲಿಯೂ, ಯಜಮಾನನು, ಭಾಗಿಯಾಗುವಂತೆ ಗಣಪತಿಯು ಅನುಗ್ರಹಿಸಲಿ. ಯಜಮಾನನು ಧನದಿಂದ ವಂಚಿತನಗದಿರಲಿ: ಅವನಿಗೆ ಧನಮದ ಉಂಟಾಗದಿರಲಿ. ಧನಮದದಿಂದ ಯಾರೂ ಯಜಮಾನನನ್ನು ಹಿಂಸಿಸದಿರಲಿ.





# ಸರಸ್ವತೀ ಸೂಕ್ತಮ್

ಋಷಿಗಳಾದ ಭರದ್ವಾಜರು, ಬಾರ್ಹಸ್ಪತ್ಯರು, ವಸಿಷ್ಠರು, ಗೃತ್ಸಮದರು, ಗೃತ್ಸಮದ ಭಾರ್ಗವ, ಶೌನಕ, ದೇವಶ್ರವಾಯಾಮನಃ, ಅತ್ರಿ, ಇವರುಗಳು ಗಾಯತ್ರೀ ತ್ರಿಷ್ಟುಪ್ ಜಗತೀ, ಅನುಷ್ಟುಪ್, ಬೃಹತೀ, ಸತೋಬೃಹತೀ, ಪ್ರಸ್ತಾರ ಪಂಕ್ತಿ - ಛಂದಸ್ಸಿನ ಋಕ್‌ಗಳಲ್ಲಿ ಸರಸ್ವತೀ ದೇವತೆಯನ್ನು (ಸರಸ್ವತೀ ದೇವತೆ, ನದೀ, ಸರಸ್ವಾನ ದೇವ, ರಾಖ, ಸಿನೀವಾಲಿಗಳನ್ನು) ಪ್ರಾರ್ಥಿಸುತ್ತಾರೆ.

ದೇವತೆ ಸರಸ್ವತಿಯು ಪೂಜ್ಯಳು, ದೇವಾತ್ಮಳು ಶುಭ್ರವರ್ಣ ಕಾಂತಿಯುಕ್ತಳು, ಪ್ರಕಾಶಮಾನಳು. ಸರಸ್ವತಿಯು, ಸ್ತುತಿಕರ್ತರ ರಕ್ಷಕಿ, ದಾನಾದಿ ಯುಕ್ತಳು, ಅನ್ನಯುಕ್ತಳು ಸಂಪದ್ಯುಕ್ತಜನಪೋಷಕಿ - ಎಂದೆಲ್ಲಾ ಪ್ರಸಿದ್ಧಳಾಗಿದ್ದಾಳೆ.

ಮಹಾತ್ಮರಲ್ಲೇ ಉತ್ತಮ ಸ್ವರೂಪಿಣಿಯಾದ ಅಂತರಿಕ್ಷವ್ಯಾಪಿ ಸರಸ್ವತಿಯು ಸುವರ್ಣನಿರ್ಮಿತ ರಥವಂತಳು, ಕಲ್ಯಾಣಾತ್ಮಕಳು: ಸದ್ಬುದ್ಧಿಯ ಜನರನ್ನು, ಸತ್ಕಾರ್ಯಕ್ಕೆ ನೆನೆಪಿಸುತ್ತಾ, ಅವರ ಮನಸ್ಸನ್ನು ಪ್ರಕಾಶಗೊಳಿಸಿ ಅವರ ಬುದ್ಧಿಯನ್ನು ಚುರುಕುಗೊಳಿಸುತ್ತಾಳೆ.

ಪ್ರಸಿದ್ಧ ಪ್ರಜಾಪತಿ ನಿರ್ಮಿಸಿದ ಸರಸ್ವತಿಯು, ದೇವತಾತ್ಮರಲ್ಲೇ ಶ್ರೇಷ್ಠಳೆನಿಸಿ, ಧನರೂಪಿ, ಐಶ್ವರ್ಯಯುಕ್ತಳಾಗಿ, ಜನರನ್ನು ಶುದ್ಧಗೊಳಿಸುವವಳಾಗಿದ್ದಾಳೆ.

ಸಕಲ ಭೂತಗಳಿಗೂ ವಿನಯದಿಂದ ಪ್ರಾರ್ಥಿಸುವ ಮಿತ್ರರಿಗೂ, ಸರಸ್ವತಿಯು, ತನ್ನೊಡನಿರುವ ಸಂಬದ್ಧವಾದ ಧನದಿಂದ ಉತ್ಕೃಷ್ಟ ದಾನಮಾಡುತ್ತಾಳೆ.

ಎರಡೂ ಲೋಕಕ್ಕೆ ಸೇರಿದ - ದಿವ್ಯ ಮತ್ತು ಪ್ರಾರ್ಥಿವ - ಇವರುಗಳನ್ನು ಮಾನವರು ಪಡೆದದ್ದು ಸರಸ್ವತೀ ದೇವಿಯ ಮಾಹಾತ್ಮ್ಯದಿಂದಲೇ.

ನದಿಗಳ ಮಧ್ಯದಲ್ಲಿ ಪ್ರಾರಂಭಿಸಿ, ಪರ್ವತದ ಉನ್ನತ ಪ್ರದೇಶಗಳನ್ನು ಸುಲಭವಾಗಿ ಛೇದಿಸುತ್ತಾ, ಸಮಸ್ತ ಪ್ರವಾಹಗಳನ್ನೂ ಅಂತರ್ಗತ ಮಾಡಿಕೊಂಡು, ಆತಂಕಗಳನ್ನು ದಾಟಿ, ಉಕ್ಕಿನ ಪಟ್ಟಣದಂತೆ ದೃಢವಾಗಿ, ನದೀ ರೂಪದಲ್ಲಿ ಉದಕದೊಡನೆ, ವೃಕ್ಷಾದಿಗಳನ್ನು ಕೆಳಗುರುಳಿಸುತ್ತಾ ಪ್ರವಹಿಸುತ್ತಾಳೆ. ಪೃಥ್ವೀ ಲೋಕಕ್ಕೆ ಸೇರಿದ ಉದಕಭರಿತ ಅಧಿಕ ಶಬ್ದದಿಂದ, ವೇಗವಾಗಿ ಮುಂದಕ್ಕೆ ಹರಿಯುತ್ತಾ, ಸಮುದ್ರ ಪರ್ಯಂತ ಪ್ರವಹಿಸುತ್ತಾಳೆ.

ಮಾತೃ ಪ್ರಾಯಳಾದ ಸರಸ್ವತಿಯು, ಸರ್ವವ್ಯಾಪಕಿಯಾಗಿ, ಅತ್ಯಧಿಕ ಪ್ರವಾಹಿಯಾಗಿ, ಪ್ರೀತಿಪಾತ್ರ ಗಂಗಾದಿ ಸಪ್ತ ಸಹೋದರಿಯರಲ್ಲಿ ಅತಿಶಯ ಪ್ರೀತಿಪಾತ್ರಳಾಗಿ ಇದ್ದಾಳೆ. ನದೀರೂಪಿಸಿಂದ, ಅಪಾರ ನೀರಿಗೆ ಆಶ್ರಯಳಾಗಿ, ಅತಿಶಯವಾಗಿ ತಿಳಿಯಲ್ಪಡುವ ಶ್ರೇಷ್ಠ ಉತ್ಕೃಷ್ಟದಾನಿ - ಸರಸ್ವತಿಯೇ.

ಮಾಧ್ಯಮಿಕಾಸ್ಥಾನದ ದೇವಗಣಕ್ಕೆ ಸಖಿಯಾದ, ನದಿಗಳ ಮಧ್ಯದಲ್ಲೇ ಅತಿಶಯ ಶಕ್ತಳಾದ ಸರಸ್ವತಿಯು, ದ್ಯಾವಾಪೃಥ್ವಿಗಳೆರಡರ ವ್ಯಾಪಿನಿ.

ಸೂರ್ಯನು ಅಹಸ್ಸನ್ನು ಕೊನೆಗಾಣಿಸುವಂತೆ, ಸರಸ್ವತಿ ಹಾಗೂ ಸಹೋದರೀ ನದಿಗಳು, ಶತ್ರುಗಳನ್ನು ಕೊನೆಗಾಣಿಸುತ್ತಾರೆ. ಪ್ರಸಿದ್ಧ ಶತ್ರು ಭಯಂಕರವಾಗಿ, ಅಸುರರಿಂದಾವೃತ ಭೋಗಗಳನ್ನು, ಪುನಃ ಮಾನವರಿಗೇ ಒದಗಿಸುತ್ತಾ, ಮಾನವರಿಗಾಗಿಯೇ ಉದಕವನ್ನು ಪ್ರವಹಿಸುತ್ತಾರೆ.

ಪ್ರತಿಯುದ್ಧದಲ್ಲೂ ಯಜಮಾನನ ಸ್ತುತಿಗೆ ಪಾತ್ರಳಾಗಿ, ಸರಸ್ವತಿಯು, ನಿಂದಿತ ಶತ್ರುಗಳ ಸ್ವಹಿತ ಚಿಂತಕ ಸ್ವಾರ್ಥಿ, ಲೋಭಿ ಅಸುರರನ್ನೂ ನಾಶಪಡಿಸುತ್ತಾಳೆ. ಶಕ್ತಿಯುತ ಶಬ್ದದಿಂದಲೇ, ಶತ್ರುಗಳಿಂದಲೂ ಶತ್ರು ಪ್ರಜೆಗಳಿಂದಲೂ ಯಜಮಾನನನ್ನು ರಕ್ಷಿಸುತ್ತಾಳೆ.

ರಾಕಾ ದೇವತೆಯು ಉತ್ತಮ ಧನಿ; ಪುತ್ರೋತ್ಪನ್ನ ಸೂಚಿ, ಶ್ರೇಷ್ಠರೂಪಿಣಿ, ಶುಭಾತ್ಮಕ ಬುದ್ಧಿಯವಳು; ಪರಾಕ್ರಮ, ಬಹುಧನ, ಬುದ್ಧಿ, ಪ್ರಶಸ್ತ ಪುತ್ರರು - ಇವನ್ನೆಲ್ಲಾ ಯಜಮಾನನಿಗೆ ಅನುಗ್ರಹಿಸುವವಳು.

ಸಿನೀವಾಲಿ ದೇವತೆಯು, ಮೃದು ಜಘನದವಳು, ದೇವಭಗಿನಿ, ಅನೇಕ ಪುತ್ರವಂತಳು. ಶ್ರೇಷ್ಠ ಬಾಹು ಉಳ್ಳವಳು, ಹವಿಸ್ಸನ್ನು ಸೇವಿಸಿ ಯಜಮಾನನಿಗೆ ಪುತ್ರಾದಿಗಳನ್ನು ಕೊಡುವವಳು.

ಕುಹೂ ರಾಕಾ, ಸಿನೀವಾಲಿ ಎಂದೆಲ್ಲಾ ಪ್ರಸಿದ್ಧಳಾಗಿರುವುದು, ಸರಸ್ವತಿಯೇ!

ಮೇಘವು, ಸರಸ್ವದ್ದೇವನ ಸ್ಥಾನ ರೂಪಿ, ವೃಷ್ಟಿರೂಪ ರಸಾಶ್ರಯಿ. ಸಕಲರಿಗೂ ಗೋಚರಿಸುವ ಪ್ರವೃದ್ಧಮಾನ ಸರಸ್ವದ್ದೇವನು ಮಧುರ ರಸಯುಕ್ತ ಘೃತ ಹರಿಸುವವ, ಜಲ ಸಂಘಗಳ ಮೂಲಕ ಯಜಮಾನನನ್ನು ರಕ್ಷಿಸುವವ.

ಉತ್ತಮ ಪತ್ನಿಯರನ್ನೂ ಪುತ್ರರನ್ನೂ ಅಪೇಕ್ಷಿಸುವವರು, ಸರಸ್ವದ್ದೇವನನ್ನು ಪ್ರಾರ್ಥಿಸುತ್ತಾರೆ; ಅವನ ಅನಗ್ರಹದಿಂದ, ಅನ್ನ ಪುತ್ರಾದಿಗಳನ್ನು ಹೊಂದುತ್ತಾರೆ.

ಪೂಷನಂತೆ, ಸರಸ್ವತಿಯು, ಸೋತೃವಿಗೆ, ಭೋಗ ಯೋಗ್ಯ ಧನ ಒದಗಿಸಿ, ಸಂಗ್ರಾಮದಲ್ಲಿ ರಕ್ಷಿಸಿದ್ದಾಳೆ. ರಾಜ ನಹುಷನ, ಪ್ರಾರ್ಥನಾಫಲವಾಗಿ ಸಹಸ್ರಾರು ವರ್ಷಗಳಿಗಾಗುವಷ್ಟು ಘೃತಕ್ಷೀರ ಕರೆದಿದ್ದಾಳೆ. ಪಿತೃ ಋಣ ತೀರಿಸಲು, ವೃದ್ಧ ಋದ್ಧಾಶ್ವನಿಗೆ, ದಿವೋದಾಸನೆಂಬ ಪುತ್ರನನ್ನು ಅನುಗ್ರಹಿಸಿದ್ದಾಳೆ.

ಸರಸ್ವತಿಯು, ಯಜಮಾನನನ್ನು ಸೇವಿಸುವವಳಾಗಿದ್ದಾಳೆ. ಯಜಮಾನನನ್ನು ಒಳ್ಳೆಯ ಕೆಲಸಕ್ಕೆ ಪ್ರವರ್ತಿಸುತ್ತಾಳೆ. ಸೋತೃವಿನ ಜ್ಞಾನ ಸ್ತುತಿಗೆ ಪಾತ್ರಳಾಗಿ, ಉತ್ತಮ ಸ್ತುತಿ ನಿರೀಕ್ಷಿಸುತ್ತಾಳೆ; ಸ್ತುತಿಗೆ ಪಾತ್ರಳಾಗುತ್ತಾಳೆ.

ಜಮದಗ್ನಿಗಳಂತೆಯೇ ವಸಿಷ್ಠರೂ, ಸರಸ್ವತಿಯ ಆಗಮನಕ್ಕಾಗಿ - ಪೂರ್ವಾಪರ - ರೂಪದ ಎರಡು ಬಾಗಿಲುಗಳನ್ನೂ ತೆರೆದು, ಸರಸ್ವತಿಯನ್ನು ವೃದ್ಧಿಸಲು, ಆಹುತಿ, ಸ್ತುತಿ, ಪೂಜೆ, ನಮಸ್ಕಾರಗಳನ್ನು ಅರ್ಪಿಸಿ ಪ್ರಾರ್ಥಿಸಿದ್ದಾರೆ.

ದಾನಾರ್ಥವಾಗಿ ಇಂದ್ರನನ್ನು ಸ್ತುತಿಸಿದಂತೆಯೇ, ಯಜಮಾನರು, ತಮ್ಮ ರಕ್ಷಣಾರ್ಥವಾಗಿ, ಉತ್ತಮ ಸ್ತುತಿ ನಿರ್ಮಿಸಿ, ಕರ್ಮಗಳಿಂದ ಸರಸ್ವತಿಯನ್ನು ಪೂಜಿಸುತ್ತಾರೆ. ಸರಸ್ವತಿಯ ತೃಪ್ತ್ಯರ್ಥ, ಮಹಾಶಕ್ತಿಯುತ ಉತ್ತಮ ನಿರ್ಮಿತ ಸೋತ್ರ ಪಠಣ, ಪೂಜೆಗಳನ್ನು ನಿರ್ವಹಿಸುತ್ತಾರೆ.

ಸರಸ್ವತಿಯ ಅನುಗ್ರಹವು, ಪುತ್ರ ಪೌತ್ರಧನದಾನಾದಿಗಳ ಮಹತ್ವಫಲ ಉಳ್ಳದ್ದು. ದೇವಾಪೇಕ್ಷಿಗಳು, ಉತ್ತಮ ಕಾರ್ಯವಂತರೂ, ಸರಸ್ವತಿಯನ್ನು ಯಜ್ಞಕ್ಕೆ ಆಹ್ವಾನಿಸಿ ಪ್ರಾರ್ಥಿಸಿ ಪೂಜಿಸುತ್ತಾರೆ. ಯಜ್ಞವನ್ನು ಪ್ರದಕ್ಷಿಣವಾಗಿ ಸುತ್ತುತ್ತಾ ಸ್ವಧಾರೂಪ ಹವಿಸ್ಸನ್ನರ್ಪಿಸಲು, ದರ್ಭಾಸನ ಹಾಸಿ, ಹರ್ಷದಿಂದ ಆಹ್ವಾನಿಸುವ ಪಿತೃಗಳ ಸ್ತುತಿಯಿಂದ, ಸರಸ್ವತಿಯು ತೃಪ್ತಿಹೊಂದುತ್ತಾಳೆ. ಫಲಪ್ರಾಪ್ತಿಗಾಗಿ ಹವಿಸ್ಸನ್ನರ್ಪಿಸಲು ಆಹ್ವಾನಿಸುವ ಯಜಮಾನನಿಗೆ ಅಪೇಕ್ಷಿತ ಫಲನೀಡುತ್ತಾಳೆ. ವೃದ್ಧಿಗೆ ಅಡಚಣೆ, ಹರ್ಷರಹಿತ ಸೇರುವುದು, ಹರ್ಷರಹಿತ ಕ್ಷೇತ್ರ ಪಡೆಯುವುದು, - ಇವುಗಳ ವಿರುದ್ಧ, ಯಜಮಾನನಿಗೆ ಸರಸ್ವತಿಯು ರಕ್ಷಣೆ ಒದಗಿಸುತ್ತಾಳೆ.

ಸರಸ್ವತಿಯು ಯಜಮಾನನ ಆಹ್ವಾನ ಸೋತ್ರ ಪ್ರಾರ್ಥನಾ ಸ್ತುತಿ ಇಚ್ಛಿಸಲಿ, ದ್ಯುಲೋಕ ಅಂತರಿಕ್ಷ ಎಲ್ಲಿದ್ದರೂ ಯಜ್ಞಕ್ಕೆ ಬರಲಿ, ಯಜಮಾನನ ಭಕ್ತಿಗೆ ಅನುಗುಣವಾಗಿ ಅವನ ಪ್ರಶಂಸೆ, ಸ್ವೀಕರಿಸಲಿ. ತೃಪ್ತಿಯಿಂದ ಯಜ್ಞವನ್ನು ರಕ್ಷಿಸಿ, ಯಜ್ಞಸಾಂಗಗೊಳಿಸಿ, ಸೋಮರಸಯುಕ್ತ ಹವಿಸ್ಸನ್ನು ಸ್ವೀಕರಿಸಲಿ.

ಯಜಮಾನನ್ನು ತಿಳಿದು, ಅವನ ಪ್ರಾರ್ಥನೆ ಅರಿತು, ಮಿತ್ರತ್ವದಿಂದ, ಧನ, ಗೃಹ, ಕಲ್ಯಾಣ, ರೋಗರಹಿತ, ಅನ್ನ, ಪುತ್ರ ಸಂಪತ್ತುಗಳಿಂದ ತೃಪ್ತಿಗೊಳಿಸಲಿ.

ಯಜಮಾನನ ಸ್ತುತಿಲಾಲಿಸುತ್ತಾ ಉದಕ ಸೇಚನ ಮಾಡುತ್ತಾ ಸ್ತುತಿಸಲು ಬೇಕಾದಷ್ಟು ಅನ್ನಭಾಗ, ಧನ ವೃಷ್ಟಿಕೊಡಲಿ, ಯಜಮಾನನಿಗೆ, ತಡೆಯಲಾಗದ ಪ್ರವಾಹದಿಂದ ಹಿಂಸೆ ಆಗದಂತೆ ರಕ್ಷಿಸಲಿ.

ಸರಸ್ವತ್ಯಾದಿದೇವತೆಗಳು ಯಜಮಾನನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಲಿ.





# ಶ್ರೀ ರುದ್ರ ಸೂಕ್ತ

ಋಷಿಗಳಾದ ಕಣ್ವೋಘೌರರು, ಕುತ್ಸ ಅಂಗೀರಸರು ಗೃತ್ಸಮದರು ವಸಿಷ್ಠರು ಪ್ರಗಾಥಃಕಾಣ್ವರು, ಅತ್ರಿ, ಬಂಧುಃ ಪ್ರುತ ಬಂಧುರ್ವಿಪ್ರ ಬಂಧು ಗೌಪಾನರು - ಇವರುಗಳು ಗಾಯತ್ರೀ, ಜಗತೀ, ತ್ರಿಷ್ಟುಪ್, ಅನುಷ್ಟುಪ್ - ಛಂದಸ್ಸಿನ ಋಕ್‌ಗಳಲ್ಲಿ ಶ್ರೀರುದ್ರದೇವನನ್ನು ಸ್ತುತಿಸುತ್ತಾರೆ.

ರುದ್ರದೇವನು ಸಂತೋಷದಾಯಕ ಸುಖದಾಯಕ, ಉದಾರದಾನಿ, ಸಜ್ಜನಪಾಲಕ, ಅನ್ನಾಹಾರಯುಕ್ತ ಉದಕರೂಪಿ, ಅತ್ಯಧಿಕ ಧನದಾತ, ಲೋಕೋಪಕಾರಿ ಶುದ್ಧ ಸುಖಕರ.

ಅಪ್ರತಿಹತ ವೇದೈಕಗಳನ್ನು ರುದ್ರನು, ಜಗನ್ನಿರ್ಮಾಪಕನಾಗಿ, ಜಗತ್ತನ್ನೇಧರಿಸಿ ಐಶ್ವರ್ಯಯುಕ್ತನಾಗಿ, ಯಜ್ಞಪಾಲಕನಾಗಿ, ಯಜ್ಞಸಾಧಕನಾಗಿ ಪ್ರಭುವಾಗಿ ಇದ್ದಾನೆ.

ರುದ್ರದೇವನು ನಿತ್ಯತರುಣ, ದೃಢಾಂಗ, ಜಟಾಧಾರಿ, ಕಾಮವರ್ಷಕ, ಸರ್ವಜ್ಞ, ಶ್ರೇಷ್ಠಸ್ತುತ್ಯರ್ಹ, ಇಷ್ಟಾರ್ಥಪ್ರದ.

ಉತ್ತಮನಾಸಿಕದ ಮೃದು ಉದರದ ರುದ್ರನು, ಬಭ್ರುವರ್ಣ ಶ್ವೇತವರ್ಣ ಹೊಂಬಣ್ಣ - ಇಂತಹ ನಾನಾವರ್ಣಗಳಲ್ಲಿ ನಾನಾರೂಪಗಳಲ್ಲಿ ಪ್ರಕಾಶಮಾನ ಕಾಂತಿಪ್ರಕಟಿಸುತ್ತಾ, ಮಹಾತೇಜಸ್ವಿಯಾಗಿದ್ದಾನೆ. ನಾನಾರೂಪತ್ಮಾಕ, ಹಾರಧಾರಿಯಾಗಿ ಹಿರಣ್ಮಯ ಸೂರ್ಯ ಪ್ರಕಾಶಿಯಾಗಿ, ರುದ್ರನು ಅಲಂಕಾರಗಳಿಂದ ಪ್ರಕಾಶಿತನಾಗಿದ್ದಾನೆ. ಪ್ರಕಟಿತ ಮಹಾಶಕ್ತಿವಂತನಾಗಿ ಇರುವ, ರುದ್ರನಿಗಿಂತಲೂ ಅಧಿಕಶಕ್ತಿಯುತರು ಬೇರೆ ಯಾರೂ ಇಲ್ಲವೇ ಇಲ್ಲ!

ಸಕಲದೇವತೆಗಳ ನಡುವೆ ಅತ್ಯಂತ ಶ್ರೇಷ್ಠವಾದ ಲೋಕವನ್ನೆಲ್ಲಾ ಧರಿಸಿರುವ ವಿಶ್ವಶಕ್ತಿಯು, ರುದ್ರನಿಂದ ಬೇರಾಗುವುದೇ ಇಲ್ಲ.

ರುದ್ರನ ಹಸ್ತವು ಬಹು ಧನ್ಯವಾದದ್ದು; ಜೀವಂತ ಸುಬಂಧುವನ್ನು ಮುಟ್ಟಿದ ರುದ್ರನ ಹಸ್ತವು ಸಮಸ್ತ ಜಗತ್ತಿಗೂ ಔಷಧವಾಗಿ, ಮಂಗಳ ಉಂಟುಮಾಡುವಂತಹದು: ಮೃತರನ್ನೂ ಬದುಕಿಸುವ ಸ್ಪರ್ಶ ಉಳ್ಳದ್ದಾಗಿದೆ.

ನಾಶರಹಿತರಾದ ಮರುದ್ದೇವತೆಗಳ ಪಿತೃವಾದ ರುದ್ರನು, ಭೂತ ಭವಿಷ್ಯತ್ತಿನ ಜ್ಞಾನಿ, ಲೋಕ ರಕ್ಷಕ, ಶ್ರೇಷ್ಠ ಆಹ್ವಾನ ಉಳ್ಳವನು, ಜ್ಞಾನ ಕರ್ಮಿಗಳಿಗೆ ಸ್ವಾಮಿ, ಪೃಥ್ವಿ ಅಂತರಿಕ್ಷಗಳಿಗೆ ಸ್ವಾಮಿ, ಪಾಪರಹಿತ, ಪ್ರೀತಿಕರ, ವಕ್ರಗತಿಯವ.

ಪ್ರಖ್ಯಾತ ರಥಾರೂಢ, ಧನುರ್ಬಾಣಧಾರಿ, ವಜ್ರಾಯುಧಿ ರುದ್ರನು, ಸಿಂಹದಂತೆ ಭಯಂಕರವಾಗಿ ಶತ್ರುಗಳನ್ನೂ ಶತ್ರುವೀರರನ್ನೂ, ನಾಶಪಡಿಸುವವನಾಗಿದ್ದಾನೆ. ಶ್ರೇಷ್ಠಬಾಣಗಳು, ಸಾರ್ಥಕಬಿಲ್ಲುಗಳಿಂದ ಮಹತ್ತಾದ ಲೋಕಗಳನ್ನು ರಕ್ಷಿಸುತ್ತಾ, ತೀಕ್ಷ್ಣವಾದ ಶತ್ರುಗಳನ್ನು ಸೋಲಿಸುವ ರುದ್ರನ ಹಸ್ತವು ಶಕ್ತಿಯುತ, ಪ್ರಸಿದ್ಧ ಸುಖಕಾರಕ.

ಪೃಥ್ವಿ ಹಾಗೂ ದ್ಯುಲೋಕದ ಜನರು, ರುದ್ರನ ಪ್ರಭುತ್ವ ಮತ್ತು ಸಂಪತ್ತುಗಳನ್ನು ಅರಿತಿದ್ದಾರೆ. ರುದ್ರನನ್ನು ಭಕ್ತಿಯಿಂದ ಸ್ತೋತ್ರ ಮಾಡುವ ಮನುಷ್ಯರಿಗೂ, ಪ್ರಾಣಿಗಳಿಗೂ, ರೋಗಾದಿ ಉಪದ್ರವಗಳಿಲ್ಲದೇ, ಸುಖಉಂಟಾಗುತ್ತದೆ. ಗ್ರಾಮದಲ್ಲಿನ ಸಕಲ ಮನುಷ್ಯಾದಿ ಪ್ರಾಣಿಗಳಿಗೆ, ರೋಗ ರಾಹಿತ್ಯ ಹಾಗೂ ಪುಷ್ಟಿಗಾಗಿ, ರುದ್ರನಿಗೆ ಸ್ತೋತ್ರ, ಹವಿಸ್ಸು, ನಮಸ್ಕಾರಗಳ ಅರ್ಪಣೆ ಆಗುತ್ತದೆ.

ಬೃಹಸ್ಪತಿಯ ಪುತ್ರ - ಶಂಯುವು, ಅನುಭವಿಸಿದ ಸುಖವನ್ನು ತಾವೂ ಪಡೆಯಲು, ಯಜಮಾನ ಋಷಿಯು, ಅಪೇಕ್ಷಿಸುತ್ತಾನೆ. ತಮ್ಮ ಮೂಲಪುರುಷ - ಮನುವು ಪಡೆದ, ರುದ್ರ ಸಂಬಂಧಿಯಾದ, ರೋಗನಾಶಕವಾದ, ಭಯರಾಹಿತ್ಯ ಉಂಟುಮಾಡುವ ಔಷಧಿಗಳನ್ನು, ರುದ್ರನಿಂದ ತಾನು ಪಡೆಯಲು ಯಜಮಾನನು ಇಚ್ಛಿಸುತ್ತಾನೆ.

ರುದ್ರನಿಗೆ ಸ್ತುತಿಗಳು, ಮಧುವಿಗಿಂತಲೂ ಮಧುರ ರುಚಿಕರ.

'ಆಯುಷ್ಮಾನ್ ಭವ' - ಎಂದು ಆಶೀರ್ವದಿಸುವ ತಂದೆಗೆ ವಂದಿಸುವಂತೆ, ಯಜಮಾನ ಋಷಿಯು, ರುದ್ರನ ಎದರು ನಮಸ್ಕರಿಸುತ್ತಾ, ಪ್ರಾಣಸ್ತುತಿಪಾಠ ಕೇಳುವಂತೆ, ರುದ್ರನ ಮಲನಾಶಕ ತೇಜಸ್ಸಿಗೆ ಕಾಂತಿಯುತ ಪ್ರಭಾವಕ್ಕೆ ನಮಿಸುತ್ತಾನೆ. ದೇವಲೋಕದಿಂದ ಬರುವಂತೆ ರುದ್ರನನ್ನು ಆಹ್ವಾನಿಸುತ್ತಾನೆ.

ಭಕ್ತಯಜಮಾನರು ರುದ್ರನಿಂದ ಪಡೆದ ಸ್ತುತಿ ಮಂತ್ರಗಳನ್ನು, ರುದ್ರನಿಗೇ ಅರ್ಪಿಸುತ್ತಾರೆ. ಸ್ಫೂರ್ತಿರೂಪ ಸ್ತುತಿಗಳಿಂದ ರುದ್ರನನ್ನು ಸ್ತುತಿಸಿ ಪೂಜಿಸಿ, ಯಾಗಾದಿಗಳಲ್ಲಿ ಹವಿಸ್ಸು, ಚರುಪುರೋಡಾಶಾದಿಗಳನ್ನು ಹೋಮಮಾಡಿ, ರುದ್ರನನ್ನು ಸಮಾಧಾನ ಚಿತ್ತನನ್ನಾಗಿ ಮಾಡುತ್ತಾರೆ; ಹಾಗೆಯೇ ಮಾಡುತ್ತಿರುವುದಾಗಿಯೂ ರುದ್ರನಲ್ಲಿ ಅರಿಕೆ ಮಾಡಿಕೊಳ್ಳುತ್ತಾರೆ.

ಯಾಚಕ ಯಜಮಾನನು, ದುಃಖರಾಹಿತ್ಯಕ್ಕಾಗಿ, ಉತ್ತಮ ಮನಃಸ್ಥಿತಿಯ ಲಾಭಕ್ಕಾಗಿ, ರುದ್ರನಿಗೆ ದೈನ್ಯದಿಂದ ಉತ್ತಮೋತ್ತಮ ಸ್ತುತಿಹವಿಸ್ಸುಗಳನ್ನು ಅರ್ಪಿಸುತ್ತಾನೆ. ಪ್ರಕಾಶಮಾನ ರುದ್ರನು, ಮಾನವಯಜ್ಞದಲ್ಲಿ ಭಾಗವಹಿಸಲಿ, ಸ್ತುತಿಗಳನ್ನು ಕೇಳಲಿ, ಪ್ರಸನ್ನನಾಗಿ ಯಜ್ಞಗೃಹದಲ್ಲಿ ನಾಯಕನಾಗಿದ್ದು ಯಜಮಾನನನ್ನು ಆದರಿಸಲಿ.

ಹವಿಸ್ಸಿನ ರೂಪ ಅನ್ನ ಸ್ತುತಿಗಳಿಂದ ತೃಪ್ತಿಪಡಿಸುವ, ಯಜಮಾನನ ಪಕ್ಷವನ್ನು ವಹಿಸಿ, ರುದ್ರನು, ಯಜಮಾನನನ್ನು ಅನ್ನದಿಂದ ತೃಪ್ತಿಪಡಿಸಲಿ, ರಕ್ಷಿಸಲಿ.

ರುದ್ರನು, ದೇವತೆಗಳಿಂದಾದ ಪಾಪಗಳನ್ನೂ ಕ್ಷಮಿಸುವಂತಹ ಕ್ಷಮಾವಂತ, ಯಜಮಾನನಿಂದ, ದೇವತೆಗಳ ಕ್ರೋಧವನ್ನು ದೂರಮಾಡಿ, ಯಜಮಾನನನ್ನು ಸುರಕ್ಷಿತವಾಗಿ ಪಾಪದ ಕೊನೆದಾಟಿಸಲಿ. ಪಾಪದ ಹೊಡೆತ ತಪ್ಪಿಸಲಿ.

ರುದ್ರನು ಅನೇಕ ಔಷಧಯುಕ್ತ ಮಾನವರ ಶರೀರದ ರೋಗರೂಪಿ ಪಾಪಗಳನ್ನು ಹಾಗೂ ಇತರ ಯಾವುದೇ ಪಾಪಗಳನ್ನೂ ಶತ್ರುಗಳನ್ನೂ ನಾಶಮಾಡಲಿ.

ರುದ್ರನು ಸಮಸ್ತ ಔಷಧಗಳಿಗೂ ಪ್ರಭುವಾಗಿ ವೈದ್ಯರಲ್ಲೇ ಶ್ರೇಷ್ಠ ವೈದ್ಯನಾಗಿ, ರೋಗನಾಶಕನಾಗಿ ಔಷಧ ಉಳ್ಳವನಾಗಿ ಪ್ರಕಾಶಿಸುತ್ತಾನೆ.

ರುದ್ರಸಂಬಂಧಿ ಔಷಧವನ್ನು, ಭೂಮಿಯಲ್ಲಿ ಹೇಗೆ ಬೇಕೋ ಹಾಗೆ ಬೆಳೆಸುತ್ತಾ, ಯಜಮಾನನನ್ನೂ ಅವನ ವೀರ ಪುತ್ರರನ್ನೂ ಔಷಧಯುಕ್ತರನ್ನಾಗಿ ಮಾಡಲಿ. ಕುದುರೆ, ಗೋವು, ಪಶು ಮನುಷ್ಯರು - ಅವರ ಪುತ್ರಾದಿಗಳಿಗೆ ಔಷಧಿಕೊಡುವಂತಾಗಲಿ; ರುದ್ರದತ್ತ ವನಸ್ಪತಿಯ ಸೇವನೆಯಿಂದ, ಶತಸಂವತ್ಸರಕಾಲ ಪೂರ್ಣವಾಗಿ ಜೀವಿಸುವಂತಾಗಲಿ.

ಔಷಧ, ಆಯುಧ, ರಕ್ಷಕ ಕವಚಗಳು ವಾಸಗೃಹ - ವಂಶಾಭಿವೃದ್ಧಿ, ಮಂಗಳಕರ ಪೂರ್ಣಸುಖ, ರಕ್ಷಣೆ, - ಇವುಗಳನ್ನು ಯಜಮಾನರು ರುದ್ರನಿಂದ ಪಡೆಯುವಂತಾಗಲಿ.

ರುದ್ರನ ಅನುಗ್ರಹದಿಂದ ಯಜಮಾನನ ಮನೆಯಲ್ಲಿ, ಅವನ ಮಕ್ಕಳು ಮೊಮ್ಮಕ್ಕಳು ಮನುಷ್ಯಯೋಗ್ಯ ಅನ್ನ, ಸಂತೋಷಗಳನ್ನು , ರಕ್ಷಣೆ ಸುಖಗಳನ್ನು ಪಡೆಯುವಂತಾಗಲಿ. ಯಜಮಾನನ ಹೆಣ್ಣುಗಂಡು ಮೇಕೆಗಳು, ಕುದುರೆಗಳು, ಗೋವುಗಳು, ಹೆಂಗಸರು, ಗಂಡಸರು ಸುಖಹೊಂದಲಿ.

ಯಜಮಾನನು, ರುದ್ರನನ್ನು ಇತರ ದೇವತೆಗಳೊಂದಿಗೆ ಸೇರಿಸಿಯಾಗಲೀ ನ್ಯೂನವಾದ, ಅಮಂಗಳ ಸ್ತುತಿಯಿಂದಾಗಲಿ - ಪೂಜಿಸುವುದಿಲ್ಲ. ಯಜಮಾನನು ಹಾಗೇನಾದರೂ ಪೂಜಿಸಿದರೂ - ರುದ್ರನು ಕ್ರೋಧಿತನಾಗದಿರಲಿ. ಯಜಮಾನನು ಅಪರಾಧಿಯಾದರೂ - ಅವನನ್ನು ಪೂರ್ಣವಾಗಿ ಕ್ಷಿಪ್ರವಾಗಿ ಕ್ಷಮಿಸಲಿ. ಯಜಮಾನನಿಗಿಂತ ಬೇರೆ - ಯಾವ ಶತ್ರುವನ್ನೂ, ನಾಶಮಾಡಲಿ.

ರೌದ್ರನಾದ ರುದ್ರನು, ಕ್ರೋಧದಿಂದ ಯಜಮಾನನನ್ನು ಹಿಂಸಿಸದೇ, ಅವನ ಮೇಲೆ ಕೋಪಗೊಳ್ಳದೇ, ಅವನನ್ನು ಶತ್ರುಗಳಿಗೆ ಬಿಟ್ಟುಕೊಡದೇ, ಅವನನ್ನು ಬಂಧನಕ್ಕೆ ಸಿಲುಕಿಸದೇ - ರಕ್ಷಿಸಲಿ.

ರುದ್ರನ ದುಃಖಕಾರಕ ಕ್ರೋಧ ಬುದ್ಧಿಯು, ವೀರಪುತ್ರರೊಡಗೂಡಿದ ಯಜಮಾನನನ್ನು ಬಿಟ್ಟು ಬೇರೆ ಕಡೆಗೆ ತಿರುಗಲಿ. ರುದ್ರನು ತನ್ನ ಧೃಡ ಧನುಸ್ಸನ್ನು ಯಜಮಾನನಿಂದ ಬೇರೆಡೆಗೆ ತಿರುಗಿಸಲಿ ಮತ್ತು ಯಜಮಾನನು ರುದ್ರನ ಆಯುಧಕ್ಕೆ ಲಕ್ಷ್ಯವಾಗದಿರಲಿ.

ಮನುಷ್ಯ ಹಾಗೂ ಗೋವುಗಳನ್ನು ವಧಿಸುವ, ರುದ್ರನಿಗೆ ಸೇರಿದ ವಿದ್ಯುತ್ ರೂಪಶಕ್ತಿ ಆಯುಧಗಳನ್ನು ರುದ್ರನು ಯಜಮಾನನಿಂದ ದೂರ ಇರಿಸಲಿ.

ಯಜಮಾನನಲ್ಲಿರುವ ವೃದ್ಧರು, ಬಾಲಕರು, ಪ್ರಜೋತ್ಪಾದಕ ಯುವಕರು, ಗರ್ಭಸ್ಥ ಶಿಶುಗಳು, ಮಾತಾಪಿತೃಗಳು - ಇವರ್‍ಯಾರನ್ನೂ ಹಾಗೂ ಯಜಮಾನರ ಪುತ್ರಪೌತ್ರರನ್ನೂ, ಗೋ ಅಶ್ವ ವೀರರನ್ನೂ, ರುದ್ರನು ವಧಿಸುವುದು ಬೇಡ. ಯಜಮಾನರೂ ಅವನ ಪುತ್ರರೂ, ಶತ್ರುಗಳನ್ನು ಎದುರಿಸುವ ಸಾಮರ್ಥ್ಯ ಪಡೆಯಲಿ.

ಸೋಮ ದೇವನು ಅತ್ಯುತ್ಕೃಷ್ಟ ಮದಕಾರಕ, ಸಮೃದ್ಧಯುಕ್ತ ಅಧಿಕಬಲಗಳ ಸಂಪಾದಕ. ತನ್ನಸುತ್ತಲೂ ಅಲಂಕರಿಸಿರುವ ಭಕ್ತಪ್ರಜೆಗಳಿಗಾಗಿ ಸಮೃದ್ಧ ಅನ್ನ ಕೊಡಲಿ.

ಸೋಮನನ್ನು ಕುರಿತುಯಾಗ ಮಾಡದಿರುವ, ಸೋಮನನ್ನು ಹಿಂಸಿಸುವ, ಸೋಮ ವೈರಿಗಳು - ಸೋಮನನ್ನು ಹಿಂಸಿಸದಿರಲಿ; ಇತರ ಶತ್ರುಗಳೂ ಹಿಂಸಿಸದಿರಲಿ.

ವೃಷ್ಟಿದಾಯಕರಾದ ಪರ್ವತಸಮಾನ ರುದ್ರಪುತ್ರರಾದ - ಮರುದ್ದೇವತೆಗಳು, ಪ್ರೀತಿಯಿಂದ ಕರೆಬಂದಾಗ ಸಂಗ್ರಾಮದಲ್ಲಿ ಸಮಾನ ಪ್ರೀತಿಯಿಂದ ಯಜಮಾನನ ಸಹಾಯಕ್ಕೆ ಬಂದು ರಕ್ಷಿಸುವ - ಇಂದ್ರ, ಯಜಮಾನನಿಗೆ ಅನ್ನ ಶಕ್ತಿಗಳನ್ನು ಕೊಟ್ಟು ಪೋಷಿಸುವ ಪೂಷದೇವ, ಸಮಾನ ತೃಪ್ತಿ ಅಪೇಕ್ಷಿಸುವ-ಮಿತ್ರಾವರುಣರು, ಅದಿತಿ, ನಾಗಾದಿದೇವತೆಗಳು, ಸ್ವರ್ಗೀಯ ದೇವತೆಗಳೂ, ಪೃಥ್ವಿ - ಎಲ್ಲರೂ ಯಜಮಾನಋಷಿಯನ್ನು , ಮಹಾತ್ಮನನ್ನಾಗಿ ಮಾಡಲಿ; ರಕ್ಷಣೆಕೊಡಲಿ.

ರುದ್ರಾದಿ ಸಕಲ ದೇವತೆಗಳ ಅನುಗ್ರಹ ಯಾವ ಸ್ತೋತ್ರ ಪಠನದಿಂದ ಆಗುವುದೋ, ಯಾವ ಪ್ರಕಾರದಲ್ಲಿ ಯಜಮಾನರು ಯೋಗ್ಯರಾಗಿ ತಿಳಿಯಲ್ಪಡುವರೋ, ಅಂತಹ ಸ್ತೋತ್ರ ಪಠನವನ್ನು ಯಾವಾಗ ಮಾಡೋಣ? - ರುದ್ರದೇವನಿಗೆ, ಅತ್ಯಂತ ಸುಖಕರ ಸ್ತೋತ್ರವನ್ನು ಯಾವಾಗ ಪಠಿಸೋಣ?







# ಪುರುಷ ಸೂಕ್ತ

ಆದಿಪುರುಷನು, ಸ್ವಪ್ರಕಾಶಕ ದಿವ್ಯ ಲೋಕದಲ್ಲಿ, ಯಾವುದೇ ಬದಲಾವಣೆಯೂ ಇಲ್ಲದೆ, ನಿಜಸ್ಥಿತಿಯಲ್ಲೇ ಸಂಸಾರಾತೀತನಾಗಿ ಸ್ಥಾಪಿತನಾಗಿದ್ದಾನೆ. ಆದಿಪುರುಷನು, ಅಸಂಖ್ಯಾತ ಶಿರಸ್ಸುಗಳನ್ನೂ ಕಣ್ಣುಗಳನ್ನೂ ಪಾದಗಳನ್ನೂ ಹೊಂದಿದ್ದಾನೆ. ಬ್ರಹ್ಮಾಂಡ ರೂಪ ವಿಶ್ವವನ್ನು ಸಕಲದಿಕ್ಕುಗಳಿಂದಲೂ ಸುತ್ತುವರಿದು, ಆದಿಪುರುಷನು, ವಿಶ್ವಕ್ಕಿಂತಲೂ ಹತ್ತು ಅಂಗುಲ ಅತಿಕ್ರಮಿಸಿ - ಇದ್ದಾನೆ. ಬ್ರಹ್ಮಾಂಡವು ಆದಿಪುರುಷನಿಂದಲೇ ಜನಿಸಿದ್ದು. ಭೂತ ಭವಿಷ್ಯತ್ ವರ್ತಮಾನ ಜಗತ್ತಿನ ಸಕಲ ಶಕ್ತಿಗಳೂ ಶಕ್ತಿಯುತವಾಗಿರುವುದು - ಆದಿಪುರುಷನ ಸಾಮರ್ಥ್ಯದಿಂದಲೇ. ಈ ಹಿಂದೆ ಇದ್ದ, ಇಂದು ನಮಗೆ ಗೋಚರವಾಗಿ ಇರುವ, ಮುಂದೆ ಸಂಭವಿಸುವ ಸಕಲ ಜಗತ್ತೂ ಸಹಾ - ಆದಿಪುರುಷನ ಈಶ್ವರಾಂಶವೇ.

ಪ್ರಪಂಚದಲ್ಲಿ ಗೋಚರಿಸುವ ಸಕಲ ಭೂತಗಳೂ ಆದಿಪುರುಷನ ಈಶ್ವರಾಂಶದ ಕಾಲು ಭಾಗಮಾತ್ರ ಉಳಿದ ಮುಕ್ಕಾಲು ಭಾಗ - ಗೋಚರಾತೀತ.ಆದಿಪುರುಷನು, ಅಮೃತತ್ವದ ಒಡೆಯ,; ಗೋಚರಾತೀತನಾದರೂ, ಹಸಿವು ಬಾಯಾರಿಕೆ ಇರುವ ಪ್ರಾಣಿರೂಪದಲ್ಲೂ ವ್ಯಕ್ತ ರೂಪದಲ್ಲಿ ಹಾಗೂ ನಾನಾ ಅಚೇತನ ರೂಪಗಳಲ್ಲಿಯೂ ವ್ಯಾಪಿಸಿದ್ದಾನೆ.

ಪರಮಪುರಷನೂ, ವಿರಾಟ ಪುರುಷನೂ ಆದ ಆದಿಪುರುಷನು, ಮೊದಲು ಉತ್ಪನ್ನನಾದನು ಅನಂತರ ಜಗತ್ ಸೃಷ್ಟಿಯಾಯಿತು. ಪುರುಷನ ಅಂಶಗಳಾದ ದೇವತೆಗಳು ಉತ್ಪನ್ನರಾದರು. ಪುರುಷನು ದೇಹಾಭಿಮಾನಿಯಾಗಿ, ಚೇತನ ಹಾಗೂ ಅಚೇತನ ರೂಪನಾಗಿ ಕಾಣಿಸಿಕೊಂಡನು ದೇವತಿರ್ಯಕ್‌ಮನುಷ್ಯರೂಪ ಧರಿಸಿದನು: ನಂತರ ಭೂಮಿಯನ್ನು ಧರಿಸಿದನು. ಜಗತ್‌ಸೃಷ್ಟಿಯ ಅನಂತರ, ಪುರುಷನ ಅಂಗದೇವತೆಗಳು ಯಜ್ಞ ನೆರವೇರಿಸಿದರು. ಪುರುಷಸಂಜ್ಞಿಕ ಈ ಯಜ್ಞಕ್ಕೆ, ವಸಂತ ಋತು, ತುಪ್ಪವಾಗಿ, ಗ್ರೀಷ್ಮ ಋತು - ಸಮಿತ್ತಾಗಿ, ಶಿಶಿರ ಋತು - ಹವಿಸ್ಸಾಗಿ, ಸಹಕರಿಸಿದವು. ಯಜ್ಞಕ್ಕೆ ಏಳು ಛಂದಸ್ಸುಗಳೂ ಪರಿಧಿಗಳಾಗಿ, ಇಪ್ಪತ್ತೊಂದು ತತ್ವಗಳು ಸಮಿತ್ತುಗಳಾಗಿ ನಿರ್ದಿಷ್ಟವಾದವು.

ಪುರುಷನ ಅಂಗದೇವತೆಗಳೂ, ಸಾಧ್ಯರು, ಋಷಿಗಳೂ, ಪುರುಷನನ್ನು ದರ್ಭಾಸನದ ಮೇಲೆ ಕೂಡಿಸಿ, ಪ್ರೋಕ್ಷಣೆ ಮಾಡಿದರು. ಅನಂತರ ಪುರುಷನನ್ನು ಯೂಪ ಸ್ಥಂಭಕ್ಕೆ ಬಂಧಿಸಿದರು. ಅನಂತರ ಪುರುಷರೂಪ ಪಶುವನ್ನು ಆಹುತಿಯಾಗಿ ಅರ್ಪಿಸಿ - ಯಾಗಮಾಡಿದರು. ಆಚರಿತ ಯಾಗದಿಂದ - ಋಗ್ ಯಜುಸ್ ಸಾಮಗಳೂ, ಗಾಯತ್ರ್ಯಾದಿ ಛಂದಸ್ಸುಗಳೂ, ದಧಿಮಿಶ್ರಿತ ಆಜ್ಯ, ಉತ್ಪನ್ನವಾದವು. ಅನಂತರ ಪಕ್ಷ್ಯಾದಿಗಳು, ಆರಣ್ಯಕ ಮೃಗಗಳೂ, ಗ್ರಾಮವಾಸಿಗಳಾದ ಅಶ್ವಾದಿಗಳು, ಅಶ್ವವ್ಯತಿರಿಕ್ತ ಇತರ ಪ್ರಾಣಿಗಳೂ, ಗೋವುಗಳು ಆಡು, ಕುರಿ ಇತ್ಯಾದಿ ಅದೇ ಜಾತಿಯ ಪ್ರಾಣಿಗಳೂ, ಉತ್ಪನ್ನವಾದವು. ಅನಂತರ ಮಾನವನೂ/ಪುರುಷನೂ ಉತ್ಪನ್ನನಾದನು.

ಯಜ್ಞದಲ್ಲಿ ಯಜ್ಞಪುರುಷನನ್ನು ಆಹುತಿ ಕೊಡಲು ಸಂಕಲ್ಪಿಸಿದಾಗ, ಯಜ್ಞ ಪುರುಷನ ಮನಸ್ಸಿನಿಂದ - ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಮುಖದಿಂದ ಇಂದ್ರ ಅಗ್ನಿಗಳೂ, ಪ್ರಾಣದಿಂದ ವಾಯುವೂ, ಹೊಕ್ಕಳಿನಿಂದ ಅಂತರಿಕ್ಷವೂ, ಶಿರಸ್ಸಿನಿಂದ ದ್ಯುರ್ಲೋಕ, ಪಾದಗಳಿಂದ ಭೂಮಿ, ಕಿವಿಗಳಿಂದ ದಿಕ್ಕುಗಳು - ಉತ್ಪನ್ನವಾದವು. ಯಜ್ಞಪುರುಷನ ಮುಖದಿಂದ ಬ್ರಾಹ್ಮಣ, ಬಾಹುಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯರು, ಪಾದಗಳಿಂದ ಶೂದ್ರ - ಹೀಗೆ ಜನನವಾಯಿತು.

ವಿರಾಟ ಪುರುಷನ ದೇಹದಿಂದ - ಸಕಲ ಲೋಕಗಳೂ - ಹೀಗೆಯೇ ಉತ್ಪನ್ನವಾದವು.ಹೀಗೆ - ಮಾನಸಿಕ ಸಂಕಲ್ಪಿತ ರೂಪದ ಯಜ್ಞದಿಂದ, ದೇವತೆಗಳು ಪ್ರಜಾಪತಿಯನ್ನು ಪೂಜಿಸಿದರು.ಈ ರೀತಿ ಆಚರಿತ ಯಜ್ಞಪ್ರಕಾರಗಳೇ - ಮುಖ್ಯ ಧರ್ಮಗಳಾಗಿ ಪ್ರಸಿದ್ಧವಾದವು.ವಿರಾಟ ಪುರುಷನನ್ನು ಉಪಾಸನೆ ಮಾಡುವವರು, ಪ್ರಧಾನ ದೇವತೆಗಳೂ, ಸಾಧ್ಯರೂ, ವಾಸಮಾಡುವ ಸ್ವರ್ಗವನ್ನೇ ಪಡೆಯುತ್ತಾರೆ.





# ಶ್ರೀಸೂಕ್ತ

(ಶ್ರೀಸೂಕ್ತವನ್ನು ವಿಧಿಪೂರ್ವಕವಾಗಿ ಜಪಿಸಿ ಪ್ರತಿದಿನ ಸಂಸ್ಕೃತಾಗ್ನಿಯಲ್ಲಿ ಆಜ್ಯಾಹುತಿಯನ್ನು ಅರ್ಪಿಸಿ, ಶ್ರೀದೇವಿಯ ಅನುಗ್ರಹ ಪಡೆಯಬಹುದು. ಶತಸಹಸ್ರ ಆವರ್ತಮಾಡಿ ದಶಾಂಶ ಪಾಯಸ ಹೋಮ ಮಾಡಿದರೆ ಸಂಪದನುಗ್ರಹ ಉಂಟಾಗುತ್ತದೆ. ಅಭಿಷೇಕದಲ್ಲಿ ಶ್ರೀಸೂಕ್ತ ಪ್ರಯೋಗವಾಗುತ್ತದೆ).

ಋಷಿಗಳಾದ ಆನಂದ ಕರ್ದಮ, ಶ್ರೀದ, ಚಿಕ್ಲೀತ, ಶ್ರೀಪುತಾಃ - ಇವರುಗಳು ಅನುಷ್ಟುಪ್ ಬೃಹತೀ ತ್ರಿಷ್ಟುಪ್ ಪ್ರಸಾರ ಪಂಕ್ತಿ ಛಂದಸ್ಸಿನ ಋಕ್‌ಗಳಲ್ಲಿ ಶ್ರೀ ಮತ್ತು ಅಗ್ನಿ ದೇವನನ್ನು ಸ್ತುತಿಸುತ್ತಾರೆ.

ಶ್ರೀದೇವಿಯು ಗೌರವರ್ಣದ ನಯನಮನೋಹರೆ, ಸಮಸ್ತ ಲಕ್ಷಣಗಳಿಂದ ಕೂಡಿದ ಸುವರ್ಣಮಯ ಶರೀರದವಳಾದ ಶ್ರೀದೇವಿಯು ಹೆಣ್ಣುಜಿಂಕೆಯಂತಿದ್ದಾಳೆ; ಚಿನ್ನಬೆಳ್ಳಿಯ ಕಮಲಾಕೃತಿಯ ಪುಷ್ಪಮಾಲಾಧಾರಿಣಿ ಆಗಿದ್ದಾಳೆ.

ಸರ್ವವ್ಯಾಪಕಳೂ, ಪೂರ್ಣಕಾಮಳೂ ಆದ ಶ್ರೀ ದೇವಿಯು, ಯಾರೂ ಧರಿಸಲಾಗದ ಆಕಾರ ಹಾಗೂ ರೂಪ ಧಾರಿಣಿಯಾಗಿದ್ದಾಳೆ. ಕಮಲದಂತೆ ಬಳುಕುತ್ತಾ ಕಮಲಾಸನಸ್ಥಿತಳಾಗಿ ಪೃಥ್ವೀರೂಪಿ ಶ್ರೀದೇವಿಯು ಶೀತಲ ಚಂದ್ರ ಪ್ರಕಾಶದಂತೆ ಆಹ್ಲಾದಕರ ಮಂದಹಾಸಯುಕ್ತಳೂ, ಅರುಣಛಾಯೆಯಂತಹ ಸೂರ್ಯಕಾಂತಿ ತೇಜೋಯುಕ್ತಳೂ ಆಗಿದ್ದಾಳೆ.

ವೃಷ್ಟಿಪ್ರದಳೂ ಸಸ್ಯ ಸಂಪದ್ಯುಕ್ತಳೂ, ಪ್ರಾಣಿಸಂಪದ್ಯುಕ್ತಳೂ ಕ್ರೀಡಾವಿಶಿಷ್ಟ ಗುಣಯುಕ್ತಳೂ ಆದ ಶ್ರೀದೇವಿಯು - ಹೂವನ್ನು ಬಿಡದೇ, ಫಲವನ್ನು ಕೊಡುವ ಬಿಲ್ವವೃಕ್ಷದಂತಹ - ಕೀರ್ತಿವಂತಳು.

ಐಶ್ವರ್ಯಯುಕ್ತಳೂ, ಭಕ್ತಾಭೀಷ್ಟದಾತೆಯೂ, ವರದಾತೆಯೂ ಆದ ಶ್ರೀದೇವಿಯು, ಚಿಕ್ಲೀತ ಹಾಗೂ ಕರ್ದಮರ ತಾಯಿ; ಇಂದ್ರ ಸೇವಿತೆ.

ಅಶ್ವ ರಥಸೈನ್ಯಗಳ ಮಧ್ಯದಲ್ಲಿ 'ಬೃಂಹಣ' ಧ್ವನಿಮಾಡುತ್ತಾ, ಆಸೀನಳಾಗಿರುವ ದಂಡಪಾಣಿ ಶ್ರೀದೇವಿಗೆ, ಸರೋವರದಲ್ಲಿ ಆನೆಗಳು ತಮ್ಮ ನೀರುತುಂಬಿದ ಸೊಂಡಲಿನಿಂದ ಅಭಿಷೇಕ ಮಾಡಲು ಸಿದ್ಧವಾಗಿವೆ.

ಮಾನವರ ಅಂತರ್‌ಜ್ಞಾನವನ್ನೂ, ಬಾಹ್ಯ ದಾರಿದ್ರ್ಯ ದುಃಖಗಳನ್ನೂ ಪರಿಹರಿಸುವ ಶ್ರೀದೇವಿಯೇ- ಮಹಾಲಕ್ಷ್ಮಿ.

ಮಹಾಲಕ್ಷ್ಮಿಯ ಅಕ್ಕ ಜೇಷ್ಠಲಕ್ಷ್ಮಿಯು ದಾರಿದ್ರ್ಯ, ದೌರ್ಭಾಗ್ಯ ಅಭಿಮಾನಿ ದೇವತೆ. ಹಸಿವು ಬಾಯಾರಿಕೆಯಿಂದ ಕೃಶಳಾಗಿ ಇದ್ದಾಳೆ.

ಮಹಾಲಕ್ಷ್ಮಿಯು ಕೃಪೆ ಮಾಡಿದರೆ ಭಕ್ತರಿಗೆ ಸರ್ವಾಹ್ಲಾದಕರಳಾಗಿ, ಧನಕನಕ ಸುವರ್ಣಾದಿಗಳನ್ನೂ, ಗೋ ಅಶ್ವ ಮಹಿಷಾದಿ ಪಶು ಸಂಪತ್ತನ್ನೂ, ಕಳತ್ರ ಪುತ್ರ ಪೌತ್ರ ಮಿತ್ರ ಬಂಧು ದಾಸೀಜನ-ಇಂತಹ ಎಲ್ಲಾ ಬಗೆಯ ಲಾಭವನ್ನೂ, ಭಕ್ತರಿಗೆ ಉಂಟುಮಾಡುತ್ತಾಳೆ. ಸಂತುಷ್ಟಿ, ಸತ್ಯವಾದಮಾತು, ಧನಧಾನ್ಯ, ಕೀರ್ತಿ ಸಂಪದಭಿವೃದ್ಧಿ, ಸಮಸ್ತ ಮನೋಭೀಷ್ಟಗಳನ್ನೂ ಉಂಟುಮಾಡುತ್ತಾಳೆ.

ಯಜಮಾನನು ಅಗ್ನಿಯನ್ನು ಪ್ರಾರ್ಥಿಸುತ್ತಾನೆ ''ದಾರಿದ್ರ್ಯ ದೌರ್ಭಾಗ್ಯಗಳನ್ನು ನಾಶಗೊಳಿಸಲು, ಜೇಷ್ಠಲಕ್ಷ್ಮಿಯನ್ನು ಅಗ್ನಿಯು ಯಜಮಾನನ ಮನೆಯಿಂದ ಹೊರದೂಡಲಿ. ವಿಶಿಷ್ಟಗುಣಗಳ ಮಹಾಲಕ್ಷ್ಮಿ-ಶ್ರೀದೇವಿಯನ್ನು ನನ್ನ ಬಳಿಗೆ ಕರೆತರಲಿ''.

ಚಿಕ್ಲೀತ, ಕರ್ದಮರು ಯಜಮಾನನ ಮನೆಯಲ್ಲೇ ವಾಸಿಸಲಿ, ಶ್ರೀದೇವಿಯನ್ನು ಯಜಮಾನನ ವಂಶದಲ್ಲೇ ವಾಸಿಸುವಂತೆ ಮಾಡಲಿ.







# ಶ್ರೀದೇವೀ ಸೂಕ್ತ

## ಅಂಬ್ರಣೀ ಸೂಕ್ತ ಅಭಿಷೇಕಕ್ಕೆ

ಋಷಿ ವಾಗಾಂಭೃಣಿ, ದೇವೀ ವಾಗಾಂಭೃಣಿಯನ್ನು, ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸಿನ ಋಕ್‌ಗಳಲ್ಲಿ ಸ್ತುತಿಸುತ್ತಾರೆ.

ವಾಗಂಭೃಣಿಯು ಅಂಭೃಣೀ ಋಷಿಯ ಪುತ್ರಿ, ಪರಬ್ರಹ್ಮವಸ್ತುವನ್ನು ಚೆನ್ನಾಗಿ ತಿಳಿದು ಸಾಕ್ಷಾತ್ಕರಿಸಿಕೊಂಡು ಪರಬ್ರಹ್ಮನಲ್ಲಿ ತಾದಾತ್ಮ್ಯ ಪಡೆದು, ಪರಬ್ರಹ್ಮವಸ್ತುವೇ ಆಗಿದ್ದಾಳೆ, ಸಮಸ್ತ ಧನಗಳನ್ನೂ ಸಂಗ್ರಹಿಸಿಕೊಂಡು ಆ ಧನಕ್ಕೆ ಒಡತಿ ಆಗಿದ್ದಾಳೆ.

ವಾಗಂಭೃಣಿ ಹಾಗೂ ದೇವತೆಗಳು ಪರಸ್ಪರಾವಲಂಬನದಿಂದ ಕರ್ತವ್ಯ ನಿರತರಾಗಿದ್ದಾರೆ. ಇಂದ್ರ, ಅಗ್ನಿ, ಮಿತ್ರ, ವರುಣ, ಅಶ್ವಿನೀಗಳಂತಹ ಜೊತೆ ದೇವತೆಗಳು, ತಮ್ಮ ಕರ್ತವ್ಯ ನಿರ್ವಹಣೆಗೆ ವಾಗಂಭೃಣಿಯನ್ನೇ ಅವಲಂಬಿಸಿರುತ್ತಾರೆ.

ತ್ವಷ್ಟ, ಪೂಷ, ಭಗ - ಇವರುಗಳನ್ನು ಧರಿಸಿದವಳು ವಾಗಾಂಭೃಣಿಯೇ. ತ್ರಿಪುರ ಸಂಹಾರಕಾಲದಲ್ಲಿ ಶಿವಧನಸ್ಸು ಬಗ್ಗಿಸಿದವಳೂ, ಸ್ವರ್ಗಲೋಕ ದೇವತಾತ್ಮ ಸೋಮಲತೆಯನ್ನು ಧರಿಸಿದವಳೂ, ಯಜ್ಞಾರ್ಹ ದೇವತೆಗಳಿಗೆ ಮುಖ್ಯಳೂ, ಪ್ರಪಂಚದ ನಾನಾವಸ್ತು ರೂಪದಿಂದ ಪ್ರಾಣಿಗಳಿಗೆ ಚೈತನ್ಯ ತರುವವಳೂ, ಸಮಸ್ತ ಜಗತ್ತನ್ನೂ ಅಂತರ್ಯಾಮಿ ರೂಪದಿಂದ ಪ್ರವೇಶಿಸಿದವಳೂ ಸ್ತುತಿಸುವವರಿಗಾಗಿ ಪುಷ್ಟಿಮಾಡುವವಳೂ, ಅನೇಕ ಪ್ರದೇಶಗಳಲ್ಲಿ ಆಹ್ವಾನಿತಳಾಗಿ, ಪೂಜಿತಳಾಗಿ ಇರುವವಳೂ-ವಾಗಂಭೃಣಿಯೇ!

ವಾಗಂಭೃಣಿಯು ಸರ್ವಕಾಲದಲ್ಲೂ ಸರ್ವ ಪ್ರದೇಶದಲ್ಲೂ, ಸ್ವರ್ಗ ಆಕಾಶ ಭೂಮಿಗಳ ಒಳಗೂ ಹೊರಗೂ ವ್ಯಾಪಿಸಿದ್ದಾಳೆ. ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿದ್ದು, ನಾನಾ ಆಕಾರದಿಂದ ಗೋಚರಿಸುತ್ತಾ ಸ್ವರ್ಗವನ್ನು ಪ್ರವೇಶಿಸುತ್ತಾಳೆ. ಯಾವ ನಿಯಮಕ್ಕೂ ಒಳಗಾಗದೆ ತಾನು ಸ್ಥಿರವಾಗಿದ್ದು ಸ್ವಪ್ರೇರಣೆಯಿಂದ ಸಮಸ್ತಲೋಕ ಪ್ರಾಣಿಗಳನ್ನು ಉತ್ಪನ್ನ ಮಾಡುವವಳಾಗಿದ್ದಾಳೆ.

ಮಾನವರ ಸಮಸ್ತವ್ಯಾಪಾರವನ್ನೂ - ನೋಡುವ, ಉಸಿರಾಡುವ, ಕೇಳುವ - ಹೀಗೆ ಸಕಲ ಕರ್ಮಗಳನ್ನೂ - ಅಂತರ್ಯಾಮಿಯಾದ ವಾಗಾಂಭೃಣಿಯೇ ನಡೆಸುವಳು.

ಪರಮಾತ್ಮನ ಬುದ್ಧಿಯೇ ಸೃಷ್ಟಿಗೆ ಕಾರಣ. ಪರಬ್ರಹ್ಮವಸ್ತುವೇ ಆಗಿ, ವಾಗಾಂಭೃಣಿಯು ತಾನು ರಕ್ಷಿಸಲು ಇಚ್ಛಿಸುವ ಮನುಷ್ಯನನ್ನು ಸರ್ವಾಧಿಕನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಜ್ಞಾನಿಯನ್ನಾಗಿ ಮಾಡಬಲ್ಲಳು. ಯುದ್ಧದಲ್ಲಿ ಯಜಮಾನನಿಗೆ ಧನದಾತಳಾಗಿದ್ದಾಳೆ.

ವಾಗಂಭೃಣಿಯನ್ನೂ ತಿಳಿಯದವರು ಅಧೋಗತಿಗೆ ಇಳಿಯುತ್ತಾರೆ.

# ಋಗ್ವೇದ ದೇವತಾ



ಋಗ್ವೇದ ಮೂರ್ತಿ ಸ್ವರೂಪ

ಋಗ್ವೇದಃ ಶ್ವೇತವರ್ಣಸ್ಯಾತ್ ದ್ವಿಭುಜೊ ರಾಸಭಾನನಃ।
ಅಕ್ಷಮಾಲಾಧರಸ್ಸೌಮ್ಯಃ ಪ್ರೀತೋಽವ್ಯಾಖ್ಯಾಕೃತೋದ್ಯಮಃ॥



॥ ಓಂ ಶ್ರೀ ಮಹಾಗಣಪತಯೇ ನಮ: ॥

ಯೋ ವೇದಾದೌಸ್ವರ: ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: । ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ: ॥
ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: । ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ,
ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:
ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು
ಅವರ ಪರಿವಾರದವರಿಗೆ ನಮೋ ನಮ: ।



ಗೆ :
ಆಪ್ತ ಕಾರ್ಯದರ್ಶಿಗಳ ಮೂಲಕ,
ಶ್ರೀ ಶ್ರೀ ವಿದ್ಯಾಶಂಕರ ಭಾರತಿ ಮಹಾಸ್ವಾಮಿಗಳು,
ಶ್ರೀ ಆವನಿ ಶೃಂಗೇರಿ ಜಗದ್ಗುರುಗಳು, ಶ್ರೀ ಶಾರದಾ ಪೀಠಮ್,
ಆವನಿ, ಪಶ್ಚಿಮ ಕಾರ್ಡ್ ರಸ್ತೆ, ರಾಜಾಜಿನಗರ,
ಬೆಂಗಳೂರು-560086.
ಇವರಲ್ಲಿ ನಮಸ್ಕಾರಗಳು.



ಸನ್ಮಾನ್ಯರೇ,

ವಿಶ್ವಾಮಿತ್ರ ಗೋತ್ರದ ಕುಣಿಗಲ್ ತಾಲ್ಲೂಕು, ನಾಗಸಂದ್ರದ ದಿ॥ ಎನ್.ರಾಮಯ್ಯನವರ ಹಿರಿಯ ಪುತ್ರ ಎನ್.ಆರ್. ನಂಜುಂಡಯ್ಯನ ಸಾಷ್ಟಾಂಗ ಪ್ರಣಾಮಗಳನ್ನು ಶ್ರೀ ಶ್ರೀ ವಿದ್ಯಾಶಂಕರ ಭಾರತಿ ಮಹಾಸ್ವಾಮಿಗಳಲ್ಲಿ, ತಾವು ನನ್ನ ಪರವಾಗಿ ಅರ್ಪಿಸಲು ಪ್ರಾರ್ಥಿಸುತ್ತೇನೆ.

ಮಕ್ಕಳು, ಮೊಮ್ಮಕ್ಕಳೊಂದಿಗೆ, ನಿವೃತ್ತ ಒಂಟಿ ಜೀವನ ನಡೆಸುತ್ತಿದ್ದೇನೆ. ಋಕ್ ಶಾಖೆಯವನಾದ ನನಗೆ ಋಗ್ವೇದವನ್ನು ಪರಿಚಯಮಾಡಿಕೊಳ್ಳುವ ಅವಕಾಶ ನನ್ನ 75ನೇ ವಯಸ್ಸಿನಲ್ಲಿ ದೊರೆಯಿತು.

ನಾನು ಋಗ್ವೇದಿಯಾದ್ದರಿಂದ ಅದನ್ನು ತಿಳಿಯಬಯಸಿ 'ಋಗ್ವೇದ ಸೂಕ್ತಸಾರ' - ಎಂಬ ಶ್ರೀ ಸೂರ್ಯನಾರಾಯಣ ಇವರ ಕೃತಿ ಓದಿದೆ. 5 ವರ್ಷಗಳಿಂದ ಸತತವಾಗಿ ಅಭ್ಯಾಸ ಮಾಡಿದೆ. ಇದನ್ನು ಸೂರ್ಯನಾರಾಯಣರವರ ಪ್ರೋತ್ಸಾಹದೊಂದಿಗೆ ಹಾಗೂ ವೇ॥ ಬ್ರ॥ ಶ್ರೀ ಶ್ಯಾಮ್‌ಭಟ್ಟರನ್ನು ಭೇಟಿ ಮಾಡಿ ನಾನು ಋಗ್ವೇದದ ಬಗ್ಗೆ ತಿಳಿಸಿ ಅವರ ಆಶೀರ್ವಾದದೊಂದಿಗೆ ಈ ಕೆಳಕಂಡಂತೆ ಬೇರ್ಪಡಿಸಿದ್ದೇನೆ.

ಋಗ್ವೇದದಲ್ಲಿ ಕಂಡುಬರುವ ಎಲ್ಲಾ ದೇವತೆಗಳ ಬಗ್ಗೆಯೂ ಎಲ್ಲಾ ಋಷಿಗಳು ಹೇಳಿರುವ ಬಗ್ಗೆಯೂ ಅವರುಗಳ ಪರಿಚಯ, ವಿಶೇಷ ಗುಣಗಳು, ಸಾಹಸಗಳು, ಋಷಿಗಳ ಬೇಡಿಕೆಗಳು ಇವುಗಳನ್ನು ವಿಂಗಡಿಸುವ ಪ್ರಯತ್ನ ಮಾಡಿದ್ದೇನೆ. ಆಶ್ರಮ ವಿಭಾಗ, ಸ್ತೋತ್ರ ವಿಭಾಗ, ಕೈಗೊಂಡ ಅಮೃತವಾಣಿ, ಋಗ್ವೇದದಿಂದ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಿದೆ ಹಾಗೂ ಸಿದ್ದಪಡಿಸಿದ್ದೇನೆ.

ನಾನು ಸಿದ್ದಪಡಿಸಿರುವ ಪುಸ್ತಕಗಳಿಗೆ 'ದೇವತೆಗಳು', 'ಋಷಿಗಳ ಅಮೃತವಾಣಿ', 'ಋಗ್ವೇದ ಸೂಕ್ತ ಸಾರದಿಂದ ಪರಿಚಯ' ಎಂಬುದಾಗಿ ಕರೆದಿದ್ದೇನೆ. ತಾವು ದಯಮಾಡಿ ನನ್ನ ಪರವಾಗಿ ಶ್ರೀ ಶ್ರೀಗಳವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಈ ವಿಚಾರವನ್ನು ತಿಳಿಸಲು ತಮ್ಮಲ್ಲಿ ವಿನಂತಿಸುತ್ತೇನೆ.

ಶ್ರೀ ಶ್ರೀಗಳವರ ಆಶೀರ್ವಾದವನ್ನು ಬೇಡುತ್ತೇನೆ. ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರವನ್ನು ತಿಳಿಸುವುದು.

(2005ನೇ ಇಸವಿ ಜನವರಿ ತಿಂಗಳು ದತ್ತ ಜಯಂತಿಯ ದಿನ ಗುರುಗಳಿಗೆ ಪುಸ್ತಕಗಳನ್ನು ಅರ್ಪಿಸಲಾಗಿದೆ)

ಇಂತಿ ನಮಸ್ಕಾರಗಳು

ದಿನಾಂಕ : 01.03.2005 (ಎನ್.ಆರ್. ನಂಜುಂಡಯ್ಯ)

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥



॥ ಓಂ ಶ್ರೀ ಮಹಾಗಣಪತಯೇ ನಮ: ॥

ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ. । ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ ॥

ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: । ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ, ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ: ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।





ಗೆ :

ಆಪ್ತ ಕಾರ್ಯದರ್ಶಿಗಳು,
ಶ್ರೀ ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳವರು,
ಶ್ರೀ ಆದಿಶಂಕರಾಚಾರ್ಯ ಶಾರದಾ ಲಕ್ಷ್ಮೀನೃಸಿಂಹ ಪೀಠಮ್,
ಶ್ರೀಮಠ, ಹರಿಹರಪುರ, ಚಿಕ್ಕಮಗಳೂರು ಜಿಲ್ಲೆ
ಇವರಲ್ಲಿ ನಮಸ್ಕಾರಗಳು.

ಸನ್ಮಾನ್ಯರೇ,

ವಿಶ್ವಾಮಿತ್ರ ಗೋತ್ರದ ಕುಣಿಗಲ್ ತಾಲ್ಲೂಕು, ನಾಗಸಂದ್ರದ ದಿ॥ ಎನ್.ರಾಮಯ್ಯನವರ ಹಿರಿಯ ಪುತ್ರ ಎನ್.ಆರ್. ನಂಜುಂಡಯ್ಯನ ಸಾಷ್ಟಾಂಗ ಪ್ರಣಾಮಗಳನ್ನು ಶ್ರೀ ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳಲ್ಲಿ, ತಾವು ನನ್ನ ಪರವಾಗಿ ಅರ್ಪಿಸಲು ಪ್ರಾರ್ಥಿಸುತ್ತೇನೆ.

ನಾನು ವಿದ್ವಾಂಸನಲ್ಲ, ಸಂಸ್ಕೃತ ಭಾಷಾ ಜ್ಞಾನ 'ಇಲ್ಲವೇ ಇಲ್ಲ' ಎನ್ನುವಷ್ಟು ಕಡಿಮೆ. ಕುತೂಹಲದಿಂದ 'ಋಗ್ವೇದ ಸೂಕ್ತಸಾರ'-ಎಂಬ ಶ್ರೀ ಸೂರ್ಯನಾರಾಯಣ, ಸಂಸ್ಕೃತ ಪಂಡಿತರು ಇವರ ಕೃತಿ ಓದಿದೆ. 5 ವರ್ಷಗಳಿಂದ ಸತತವಾಗಿ ಅಭ್ಯಾಸ ಮಾಡಿದೆ. ನನಗಾದ ಸಂತೋಷವನ್ನು ಸ್ನೇಹಿತರಲ್ಲಿ ಹಂಚಿಕೊಂಡೆ.

ನಾನು ತಾಯಿಯ ಕಡೆಯಿಂದ, ತಂದೆಯ ಕಡೆಯಿಂದ ಹಾಗೂ ಪತ್ನಿಯ ಕಡೆಯಿಂದ ವೈದಿಕ ಪರಂಪರೆಗೆ ಸೇರಿದವನು. ಹಾಗಾಗಿ ನನಗೆ ವೇದದ ಬಗೆಗೆ ತಿಳಿಯಬೇಕೆಂಬ ಅತೀವ ಆಕಾಂಕ್ಷೆ ಅಂತರಾಳದಲ್ಲಿತ್ತು. ಇದಕ್ಕೆ ಪೂರಕವಾಗಿ ಋಗ್ವೇದ ಸೂಕ್ತ ಸಾರ ಎಂಬ ಗ್ರಂಥವು ನನಗೆ ತುಂಬಾ ಹಿಡಿಸಿತು. ಅದರಿಂದಾಗಿ ನಾನು ಕೆಲವು ವರ್ಷಗಳ ತನಕ ಅಧ್ಯಯನ, ಸಲಹೆ, ಪ್ರೋತ್ಸಾಹಗಳಿಂದ ಪ್ರೇರಿತನಾಗಿ ಹಾಗೂ ವಿದ್ವಾಂಸರಾದ ವೇ॥ ಬ್ರ॥ ಎಸ್.ವಿ. ಶಾಮಭಟ್ಟರಿಂದ ಪ್ರೋತ್ಸಾಹ, ಆಶೀರ್ವಾದಗಳನ್ನು ಪಡೆದು ನಾನು ಮಾಡಿದ ಎಲ್ಲಾ ಭಾಗಗಳನ್ನು ಅವರ ಮುಂದಿಟ್ಟು ಅನುಮತಿ ಪಡೆದು ಒಂದು ಕರಡು ಪ್ರತಿಯನ್ನು ತಯಾರಿಸಿದ್ದೇನೆ.

ಋಗ್ವೇದದಲ್ಲಿ ಕಂಡುಬರುವ ಎಲ್ಲಾ ದೇವತೆಗಳ ಬಗ್ಗೆಯೂ ಎಲ್ಲಾ ಋಷಿಗಳು ಹೇಳಿರುವಂತೆ ದೇವತೆಗಳ ಪರಿಚಯ, ಮಹಿಮೆಗಳು, ಆಶ್ರಮದಲ್ಲಿಯ ಕಾರ್ಯಕ್ರಮಗಳು, ಅವರಿಗಿದ್ದ ತೊಂದರೆಗಳು, ದೇವತೆಗಳಿಂದ ಪಡೆದ ಪ್ರಯೋಜನಗಳು ಇವುಗಳನ್ನು ಒಂದೊಂದು ದೇವತೆಯಡಿಯಲ್ಲಿಯೂ ಪ್ರತ್ಯೇಕವಾಗಿ ವಿಭಜಿಸಿ ಹೊರತೆಗೆದಿದ್ದೇನೆ. ಇದಕ್ಕೆ ''ದೇವತೆಗಳು'', ''ಋಷಿಗಳ ಅಮೃತವಾಣಿ'', ''ಋಗ್ವೇದದಿಂದ ಪರಿಚಯ'' ಎಂಬ ಹೆಸರನ್ನು ಕೊಟ್ಟಿದ್ದೇನೆ. ಪ್ರತಿ ಭಾಗ ಮುಗಿದಾಗಲೂ ಆ ಭಾಗವನ್ನು ಎಡತೊರೆ ಶ್ರೀ ಶ್ರೀ ಶಂಕರ ಭಾರತೀ ಸ್ವಾಮಿಗಳಿಗೂ, ಹೆಬ್ಬೂರು ಮಠದ ಹಿರಿಯ ಸ್ವಾಮಿಗಳು (ಗಣಪತಿ ಸೋಮಯಾಜಿಗಳು) ರವರಿಗೂ ತೋರಿಸುತ್ತಾ ಬಂದು 2004ರ ದಸರಾದಂದು ಮುಗಿಸಿರುತ್ತೇನೆ.

ಮುಂದಿನ ಪೀಳಿಗೆಯವರು ಸಂಸ್ಕೃತ ಅಥವಾ ಮಂತ್ರವನ್ನು ತಿಳಿಯದವರು ಕನ್ನಡದಲ್ಲಿ ಸ್ವಲ್ಪ ಮಟ್ಟಿಗಾದರೂ ತಿಳಿಯಲು ಸಾಧ್ಯವಾಗಬಹುದೆಂದು ಈ ಪರಿವರ್ತನಾ ಕಾರ್ಯವನ್ನು ಮಾಡಿರುತ್ತೇನೆ.

ಸ್ವ ಸಂತೋಷಕ್ಕಾಗಿ ಮಾಡಿರುವ ಈ ದೇವತೆಗಳ ಪುಸ್ತಕಗಳನ್ನು ಶ್ರೀ ಶ್ರೀ ಗಳವರ ಸನ್ನಿಧಿಯಲ್ಲಿ ತಾವು ನನ್ನ ಪರವಾಗಿ ಸಾಷ್ಟಾಂಗ ನಮಸ್ಕಾರಗಳೊಂದಿಗೆ ಅರ್ಪಿಸಲು ತಮ್ಮಲ್ಲಿ ವಿನಂತಿಸುತ್ತೇನೆ. ಗುರುಗಳ ಆಶೀರ್ವಾದವನ್ನು ಬಯಸುತ್ತೇನೆ.

ಇಂತಿ ನಮಸ್ಕಾರಗಳು

ಪ್ರಾರಂಭ : 17.10.1997

ಮುಕ್ತಾಯ : 17.10.2004

(ಎನ್.ಆರ್. ನಂಜುಂಡಯ್ಯ)
ನಂ. 96/ಬಿ, 37ನೇ ಅಡ್ಡರಸ್ತೆ, 2ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು-560010

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥







ಯೋ ವೇದಾದೌಸ್ವರ: ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: । ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ: ॥

ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: । ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ, ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।

ಸನ್ಮಾನ್ಯ ಆಪ್ತ [illegible]ರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

ವಿಶ್ವಾಮಿತ್ರ ಗೋತ್ರದ ಕುಣಿಗಲ್ ತಾಲ್ಲೂಕು, ನಾಗಸಂದ್ರದ ದಿ॥ ಎನ್.ರಾಮಯ್ಯನವರ ಹಿರಿಯ ಪುತ್ರ ಎನ್.ಆರ್. ನಂಜುಂಡಯ್ಯನ ನಮಸ್ಕಾರಗಳು.

ತಾವು ನನ್ನ ಪರವಾಗಿ ಶ್ರೀ ಶ್ರೀ ಶ್ರೀ ಆಶ್ರಮದ ಹಿರಿಯ ಸ್ವಾಮಿಗಳಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಮತ್ತು ಈ ಕೆಳಗಿನ ವಿಚಾರಗಳನ್ನು ನನ್ನ ಪರವಾಗಿ ತಿಳಿಸಲು ವಿನಂತಿಸುತ್ತೇನೆ.

ನಾನು 'ಋಗ್ವೇದ ಸೂಕ್ತಸಾರ' ಎಂಬ ಗ್ರಂಥದಿಂದ ದೇವತೆಗಳು, ಋಷಿಗಳ ಅಮೃತವಾಣಿ, ಋಗ್ವೇದದಿಂದ ಪರಿಚಯವೆಂಬ ಹೆಸರಿನಲ್ಲಿ ಭಾಗ-1ರಲ್ಲಿ ಹತ್ತು ದೇವತೆಗಳ ವಿಚಾರಗಳು, ಭಾಗ-2ರಲ್ಲಿ ಅಗ್ನಿದೇವನ ವಿಚಾರ, ಭಾಗ-3ರಲ್ಲಿ ಇಂದ್ರ ದೇವನ ವಿಚಾರಗಳನ್ನೊಳಗೊಂಡ ಭಾಗಗಳನ್ನು (ದೇವತೆಗಳ ಸ್ತೋತ್ರಗಳು, ಆಶ್ರಮಗಳಲ್ಲಿ ಮಾಡುತ್ತಿದ್ದ ಕಾರ್ಯಕ್ರಮಗಳು, ದೇವತೆಗಳಿಂದ ಪಡೆದ ನಾನಾ ಪ್ರಯೋಜನಗಳು, ಅಲ್ಲಲ್ಲಿ ಕಂಡುಬಂದ ವಿಶೇಷತೆಗಳನ್ನು ವಿಭಜಿಸಿ ಹೊರತೆಗೆದಿದ್ದೇನೆ ಹಾಗೂ ಋದ್ಧಾಗಿ ಸ್ವಾಮಿಗಳಿಗ ತಲುಪಿಸಿದ್ದೇನೆ.

ಸ್ವಾಮಿಗಳಲ್ಲಿ ಇಂದ್ರಾಗ್ನಿಗಳ ವಿಚಾರಗಳನ್ನು ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ ಎಲ್ಲಾ ಋಷಿಗಳ ಒಮ್ಮತದ ಅಭಿಪ್ರಾಯವು ಎಂಬಂತೆ ಯಥಾಶಕ್ತಿ ಸಿದ್ದಪಡಿಸಿ ಈಗ ಗುರುಗಳ ಸನ್ನಿಧಿಗೆ ತಲುಪಿಸುತ್ತಿದ್ದೇನೆ. ಕಾರಣಾಂತರಗಳಿಂಡ ತಡವಾಯ್ತು, ನಾನು ವಿದ್ವಾಂಸನೂ ಅಲ್ಲ, ಪಂಡಿತನೂ ಅಲ್ಲ. ಆದರೆ ವೈದಿಕ ಪರಂಪರೆಯವನಾಗಿದ್ದರಿಂದ ಪಿತರ ದೇವತೆಗಳು ಈ ಆಸೆಯನ್ನು ಕೊಟ್ಟರೂ (ವೇದವು ಏನನ್ನು ಹೇಳುತ್ತದೆ ಎಂದು ತಿಳಿಯುವ) [illegible] ಗ್ರಂಥಕರ್ತರಾದ ಶ್ರೀ ಸೂರ್ಯನಾರಾಯಣ, ವಿಜಯನಗರ ಮತ್ತು ವಿದ್ವಾಂಸರಾದ ವೇ॥ ಬ್ರ॥ ಶ್ರೀ ಶ್ಯಾಮಭಟ್ಟರುಗಳ ಸಲಹೆ, ಪ್ರೋತ್ಸಾಹಗಳು ದೊರೆಯಿತು. ತಮ್ಮ ಆಶೀರ್ವಾದಗಳಿಂದ ಹಾಗೂ ಎಡತೊರೆ ಮಹಾಸ್ವಾಮಿಗಳ ಆಶೀರ್ವಾದದಿಂದ ಇದಾಗಿದೆ. ದೇವತೆಗಳು ನನಗೆ ಆರೋಗ್ಯವನ್ನು ಕರುಣಿಸಿ ಈ ಕೆಲಸವನ್ನು ಮುಗಿಸಲು ಶಕ್ತಿ ನೀಡಿದ್ದಾರೆ.

ಇರಬಹುದಾದ ಯಾವುದೇ ತಪ್ಪು-ನೆಪ್ಪುಗಳನ್ನು ಕ್ಷಮಿಸಿ ಉಪಯುಕ್ತವಾದುದನ್ನು ಮಾತ್ರ ಸ್ವೀಕರಿಸಲು ಪ್ರಾರ್ಥನೆ. ಆಶೀರ್ವದಿಸಿದ ಮಹಾಸ್ವಾಮಿಗಳವರಿಗೂ, ಪ್ರತಿ ಭಾಗದಲ್ಲೂ ನನಗೆ ಸಲಹೆ, ಪ್ರೋತ್ಸಾಹಗಳನ್ನು ನೀಡಿ ಈ ಕಾರ್ಯವನ್ನು ಮಾಡಲು ಆಶೀರ್ವದಿಸಿದ ಶ್ರೀ ಎಸ್.ವಿ. ಶ್ಯಾಮಭಟ್ಟರವರಿಗೂ ಮತ್ತು ಸೂರ್ಯನಾರಾಯಣರವರಿಗೂ ನನ್ನ ಹೃತ್ಪೂರ್ವಕವಾದ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಗುರುಗಳು ಪರಾಮರ್ಶಿಸಿ ಅನುಗ್ರಹಿಸಿ ಆಶೀರ್ವದಿಸಬೇಕೆಂದು ಚರಣಾರವಿಂದಗಳಲ್ಲಿ ಸಾಷ್ಟಾಂಗ ನಮಸ್ಕಾರಗಳೊಂದಿಗೆ ಪ್ರಾರ್ಥಿಸುತ್ತೇನೆ.

ಇಂತಿ ನಮಸ್ಕಾರಗಳು

**(ಎನ್.ಆರ್. ನಂಜುಂಡಯ್ಯ)**
ರಾಜಾಜಿನಗರ, ಬೆಂಗಳೂರು-10
ದಿನಾಂಕ : 31.12.2004

ಆಪ್ತ ಕಾರ್ಯದರ್ಶಿಗಳು, ಶ್ರೀ ಕಾಮಾಕ್ಷೀ ಶಾರದಾಪೀಠ,
ಶ್ರೀ ಕೋದಂಡಾಶ್ರಮ ಮಠ, ಹೆಬ್ಬೂರು-572 120
ತುಮಕೂರು ಜಿಲ್ಲೆ

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥



॥ ಓಂ ಶ್ರೀ ಮಹಾಗಣಪತಯೇ ನಮಃ ॥

ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸಮಹೇಶ್ವರಃ ॥

ವೇದ. ಶಿವಃ ಶಿವೋವೇದೋ ವೇದಾಧ್ಯಾಯೀ ಸದಾಶಿವಃ ।

ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ,

ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮಃ

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು

ಅವರ ಪರಿವಾರದವರಿಗೆ ನಮೋ ನಮಃ ।



ಗೆ :

ಆಪ್ತ ಕಾರ್ಯದರ್ಶಿಗಳು,

ಶ್ರೀ ಶ್ರೀ ಶೃಂಗೇರಿ ಜಗದ್ಗುರುಗಳ ಸಂಸ್ಥಾನ,

ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ.

ಇವರಲ್ಲಿ ನಮಸ್ಕಾರಗಳು.



ಸನ್ಮಾನ್ಯರೇ,

ವಿಶ್ವಾಮಿತ್ರ ಗೋತ್ರದ ಕುಣಿಗಲ್ ತಾಲ್ಲೂಕು, ನಾಗಸಂದ್ರದ ದಿ॥ ಎನ್.ರಾಮಯ್ಯನವರ ಹಿರಿಯ ಪುತ್ರ ಎನ್.ಆರ್. ನಂಜುಂಡಯ್ಯನ ಸಾಷ್ಟಾಂಗ ಪ್ರಣಾಮಗಳನ್ನು ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳಲ್ಲಿ, ತಾವು ನನ್ನ ಪರವಾಗಿ ಅರ್ಪಿಸಲು ಪ್ರಾರ್ಥಿಸುತ್ತೇನೆ.

ಮಕ್ಕಳು, ಮೊಮ್ಮಕ್ಕಳೊಂದಿಗೆ, ನಿವೃತ್ತ ಒಂಟಿ ಜೀವನ ನಡೆಸುತ್ತಿದ್ದೇನೆ. ಋಕ್ ಶಾಖೆಯವನಾದ ನನಗೆ ಋಗ್ವೇದವನ್ನು ಪರಿಚಯಮಾಡಿಕೊಳ್ಳುವ ಅವಕಾಶ ನನ್ನ 75ನೇ ವಯಸ್ಸಿನಲ್ಲಿ ದೊರೆಯಿತು.

ನಾನು ವಿದ್ವಾಂಸನಲ್ಲ, ಸಂಸ್ಕೃತ ಭಾಷಾ ಜ್ಞಾನ 'ಇಲ್ಲವೇ ಇಲ್ಲ' ಎನ್ನುವಷ್ಟು ಕಡಿಮೆ. ಕುತೂಹಲದಿಂದ 'ಋಗ್ವೇದ ಸೂಕ್ತಸಾರ' - ಎಂಬ ಶ್ರೀ ಸೂರ್ಯನಾರಾಯಣ ಇವರ ಕೃತಿ ಓದಿದೆ. 5 ವರ್ಷಗಳಿಂದ ಸತತವಾಗಿ ಅಭ್ಯಾಸ ಮಾಡಿದೆ. ನನಗಾದ ಸಂತೋಷವನ್ನು ಸ್ನೇಹಿತರಲ್ಲಿ ಹಂಚಿಕೊಂಡೆ.

ನನಗೆ ಲೇಖನ ಕಲೆ ತಿಳಿಯದು. ಆದರೂ ಈ ಮಹಾ ಜ್ಞಾನ ಭಂಡಾರದಿಂದ ನಾನು ತಿಳಿದುಕೊಂಡ ಅಂಶಗಳನ್ನು ವಿಂಗಡಿಸಿದೆ.

ಋಗ್ವೇದದಲ್ಲಿ ಕಂಡುಬರುವ ಎಲ್ಲಾ ದೇವತೆಗಳ ಬಗ್ಗೆಯೂ ಎಲ್ಲಾ ಋಷಿಗಳು ಹೇಳುವ ಬಗ್ಗೆಯೂ ಅವರುಗಳ ಪರಿಚಯ, ವಿಶೇಷ ಗುಣಗಳು, ಸಾಹಸಗಳು, ಋಷಿಗಳ ಬೇಡಿಕೆಗಳು ಇವುಗಳನ್ನು ವಿಂಗಡಿಸುವ ಪ್ರಯತ್ನ ಮಾಡಿದ್ದೇನೆ. ಆಶ್ರಮ ವಿಭಾಗ, ಸ್ತೋತ್ರ ವಿಭಾಗ, ಕೈಗೊಂಡ ಅಮೃತವಾಣಿ, ಋಗ್ವೇದದಿಂದ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಿದೆ.

ಸ್ವ ಸಂತೋಷಕ್ಕಾಗಿ ಮಾಡಿರುವ ಈ ಕೆಲಸವನ್ನು ಶ್ರೀ ಶ್ರೀ ಗಳ ಪಾದಕಮಲದಲ್ಲಿ ಅರ್ಪಿಸಲು ಇಚ್ಛಿಸುತ್ತಿದ್ದೇನೆ.

ದಯಮಾಡಿ ನನ್ನ ಪರವಾಗಿ ತಾವು ಶ್ರೀ ಶ್ರೀ ಗಳವರ ಪಾದಕಮಲದಲ್ಲಿ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸಲು ವಿನಂತಿಸುತ್ತೇನೆ. ಶ್ರೀ ಶ್ರೀ ಯವರು ಪರಿಶೀಲಿಸಿ, ನನ್ನನ್ನು ಆಶೀರ್ವದಿಸಲು ಬೇಡುತ್ತೇನೆ.

ನಾನು ಸಿದ್ಧಪಡಿಸಿರುವ ಪುಸ್ತಕಗಳಿಗೆ 'ದೇವತೆಗಳು', 'ಋಷಿಗಳ ಅಮೃತವಾಣಿ', 'ಋಗ್ವೇದ ಸೂಕ್ತ ಸಾರದಿಂದ ಪರಿಚಯ' ಕರಡು ಪ್ರತಿಗಳನ್ನು ಗುರುವಿನ ಚರಣಾರವಿಂದಗಳಿಗೆ ನಮಸ್ಕರಿಸಿ ಕಳುಹಿಸುತ್ತಿದ್ದೇನೆ.

ಇಂತಿ ನಮಸ್ಕಾರಗಳು

ದಿನಾಂಕ : 17.10.2004 **(ಎನ್.ಆರ್. ನಂಜುಂಡಯ್ಯ)**

॥ ಹರ ನಮಃ ಪಾರ್ವತಿ ಪತಯೇ ಹರಹರ ಮಹಾದೇವ ॥



ಯೋ ವೇದಾದೌಸ್ವರ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: । ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ: ॥
ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: । ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ, ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:
ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।



ಋಗ್ವೇದ ದಂಸ್ಟ್ರಾರರಾದ ಇಂದ್ರ, ಅಗ್ನಿ ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು
ಸನ್ಮಾನ್ಯ ಗೌರಿಶಂಕರ್ ರವರಿಗೆ,
ಆಡಳಿತಾಧಿಕಾರಿಗಳು, ಶ್ರೀ ಶೃಂಗೇರಿ ಶಂಕರಮಠ,
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಂ, ಶೃಂಗೇರಿ - 577139.
ಚಿಕ್ಕಮಗಳೂರು ಜಿಲ್ಲೆ
ಇವರಲ್ಲಿ ನಮಸ್ಕಾರಗಳು.



ಸನ್ಮಾನ್ಯ ಗೌರಿಶಂಕರ್‌ರವರೆ,

ಬೆಂಗಳೂರು ರಾಜಾಜಿನಗರ ನಿವಾಸಿ ಎಸ್.ಆರ್. ನಂಜುಂಡಯ್ಯ ಎಂಬ ವೈದಿಕ ಪರಂಪರೆಯ ವಿಶ್ವಾಮಿತ್ರ ಗೋತ್ರದ ಸ್ಮಾರ್ತ, ಬ್ರಾಹ್ಮಣ, ವೇದಾಭಿಮಾನಿಯ ಅನಂತ ನಮಸ್ಕಾರಗಳು. ನಾನು ತಮ್ಮನ್ನು ಶ್ರೀ ಶೃಂಗೇರಿಯಲ್ಲಿ ಕಳೆದ ವರ್ಷ ಫೆಬ್ರವರಿಯಲ್ಲಿ ಭೇಟಿ ಮಾಡಿ ನಾನು ದೇವತೆಗಳು, ಋಷಿಗಳ ಅಮೃತವಾಣಿ, ಋಗ್ವೇದದಿಂದ ಪರಿಚಯ ಎಂಬ ಪುಸ್ತಕವನ್ನು ಸಿದ್ಧಪಡಿಸುತ್ತಿದ್ದೇನೆ ಎಂದು ಹೇಳಿದ್ದೆ. ಮುಗಿದ ನಂತರ ಕಳುಹಿಸಲು ತಾವು ಹೇಳಿದಿರಿ.

ನಂತರ ಬೆಂಗಳೂರು ಶಂಕರಪುರಂ ಶಂಕರಮಠದಲ್ಲಿ ತಮಗೆ ನೀಡಿದ ಸನ್ಮಾನ ಸಮಾರಂಭದಲ್ಲಿ ಕಡೆಯವರೆವಿಗೂ ಇದ್ದು ಎಲ್ಲರ ಭಾಷಣಗಳನ್ನು ಕೇಳಿ ಸಂತಸಪಟ್ಟೆ ಮತ್ತೆ ಕಳೆದ ನವೆಂಬರ್‌ನಲ್ಲಿ ತಮಗೆ ಕನ್ನಡ ರಾಜ್ಯ ಪ್ರಶಸ್ತಿ ದೊರೆತದು ಆ ಕ್ಷಣ ಗೊತ್ತಾಯಿತು. ಹೋದ ಸಲ ಮತ್ತು ಈ ಸಲ ದಸರಾದಲ್ಲಿ ಶೃಂಗೇರಿಯ ದಸರಾ ಕಾರ್ಯಕ್ರಮಗಳನ್ನು ನೇರ ಪ್ರಸಾರದಲ್ಲಿ ನೋಡಿ ಆನಂದವಾಗಿದೆ. ಇವುಗಳೆಲ್ಲದಕ್ಕೂ ತಮಗೆ ಹೃತ್ಪೂರ್ವಕ ನಮಿಸುತ್ತೇನೆ.

ಇನ್ನು ನನ್ನ ಬಗೆಗೆ ಅಲ್ಪ ಪರಿಚಯ

ನಮ್ಮ ತಾಯಿ ಮಂಡ್ಯ ಜಿಲ್ಲೆ, ನಾಗಮಂಗಲ ಕೆರೆಬೀದಿ ನರಸಿಂಹಭಟ್ಟರ ಮೂರನೆಯ ಮಗಳು. 102 ವರ್ಷಗಳು ಇದ್ದು 12.08.2004ರಂದು ಕಣ್ಮರೆಯಾಗಿದ್ದಾರೆ. ನಮ್ಮ ತಂದೆ ಶ್ರೀ ಎನ್.ರಾಮಯ್ಯನವರು ಕುಣಿಗಲ್ ತಾಲ್ಲೂಕು ನಾಗಸಂದ್ರ ಗ್ರಾಮದ ದಿ॥ ವೇ॥ ಬ್ರ॥ ನಂಜುಂಡ ಭಟ್ಟರ ಹಿರಿಯ ಮಗ. ವೃತ್ತಿಯಲ್ಲಿ ಉಪಾಧ್ಯಾಯರು ಹಾಗು ವೇದ ಬಲ್ಲವರು. ದಿನಾ 20 ಸರ್ಗ ರಾಮಾಯಣ, ಪಾರಾಯಣ ಮಾಡಿ, ಆಗಾಗ ಶ್ರೀ ರಾಮಪಟ್ಟಾಭಿಷೇಕ ಮಾಡುತ್ತಿದ್ದರು. 1946ರಲ್ಲಿ ಕಾಶೀ ಯಾತ್ರೆಗೆ ಹೊರಟು ಕಾಶಿಯಲ್ಲಿ 20 ದಿನ ಇದ್ದು, ಅಲ್ಲಿಂದ ಹೆಬ್ಬೂರು ರಾಮಶಾಸ್ತ್ರಿಗಳ ಜೊತೆ ಅಯೋಧ್ಯೆಗೆ ಹೋಗಿ ಅಲ್ಲಿ 108ನೆಯ ಶ್ರೀ ರಾಮ ಪಟ್ಟಾಭಿಷೇಕವನ್ನು ಮಾಡಿ ಗಯಾಗೆ ಹೋಗಿ ಅಲ್ಲಿ ಪಿತೃ ಕಾರ್ಯವನ್ನು ಮುಗಿಸಿ ಅಲ್ಲೇ 14.05.1946ರಂದು ಸ್ವರ್ಗಸ್ಥರಾದರು.

ಇವರ ಹಿರಿಯ ಪುತ್ರ ಎನ್.ಆರ್.ನಂಜುಂಡಯ್ಯನೇ ನಾನು. ಚಿಕ್ಕಂದಿನಲ್ಲಿ ತಂದೆಯವರಿಂದ ಅಲ್ಪಸ್ವಲ್ಪ ವೇದದ ಬಗ್ಗೆ ತಿಳಿದಿದ್ದೆ. ಬೆಂಗಳೂರಿನಲ್ಲೂ ಪುರಾಣ ಪ್ರವಚನಗಳನ್ನು ಕೇಳುತ್ತಾ ಬಂದೆ. ಆದರೂ ವೇದದ ವಿಚಾರಗಳನ್ನು ತಿಳಿಯುವ ಆಸೆ ಬಹಳವಾಗಿತ್ತು. ಇದಕ್ಕೆ ಪೂರಕವಾಗಿ 1997ರಲ್ಲಿ ಶ್ರೀ ಸೂರ್ಯನಾರಾಯಣರವರಿಂದ ಪ್ರಕಟಿತವಾದ ಋಗ್ವೇದ ಸೂಕ್ತಸಾರ ಪರಿಚಯ ಎಂಬ ಗ್ರಂಥದಿಂದ ಅವರ ಅಪ್ಪಣೆ, ಸಲಹೆಗಳು, ಪ್ರೋತ್ಸಾಹಗಳೊಂದಿಗೆ ಹಾಗೂ ವಿದ್ವಾಂಸರಾದ ಶ್ರೀ ಎಸ್.ವಿ.ಶ್ಯಾಮಭಟ್ಟರವರ ಆಶೀರ್ವಾದಗಳೊಂದಿಗೆ ಎಡತೊರೆ ಸ್ವಾಮಿಗಳು ಮತ್ತು ಹೆಬ್ಬೂರು ಮಹಾಸ್ವಾಮಿಗಳವರ ಆಶೀರ್ವಾದಗಳೊಂದಿಗೆ ನಾನು ಈ ಕೆಲಸವನ್ನು ಮಾಡಲು ಸಾಧ್ಯವಾಗಿದೆ.

ತಾವು ದಯಮಾಡಿ ನನ್ನ ಪರವಾಗಿ ಗುರುಗಳಿಗೆ ನಮಸ್ಕಾರಗಳನ್ನು ತಿಳಿಸಿ ಇದರ ಬಗ್ಗೆ ಗುರುಗಳು ಆಶೀರ್ವದಿಸಲು ನನ್ನ ಪರ ಪ್ರಾರ್ಥಿಸಬೇಕೆಂದು ಕೇಳಿಕೊಳ್ಳುತ್ತೇನೆ. ಇಂತಿ ನಮಸ್ಕಾರಗಳು

ದಿನಾಂಕ : 17.10.2004 **(ಎನ್.ಆರ್. ನಂಜುಂಡಯ್ಯ)**

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

॥ ಓಂ ಶ್ರೀ ಮಹಾಗಣಪತಯೇ ನಮ: ॥

ವೇದ: ಶಿವ: ಶಿವೋವೇದೋ ವೇದಾಧ್ಯಾಯಿ ಸದಾಶಿವ : ।

ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥



**ಮ॥ ರಾ॥ ಸುದರ್ಶನ ಚಪಳೂಣಕರ್**
ಆಪ್ತ ಕಾರ್ಯದರ್ಶಿಗಳು,
ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಹಾಸಂಸ್ಥಾನಂ,
ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ - 571 602.
ಮೈಸೂರು ಜಿಲ್ಲೆ.

ಮ॥ ಶ್ರೀ ಸುದರ್ಶನ್‌ರವರಿಗೆ ರಾಜಾಜಿನಗರ ನಿವಾಸಿ ಎನ್. ಆರ್. ನಂಜುಂಡಯ್ಯನ ನಮಸ್ಕಾರಗಳು. ತಾವು ಪೂಜ್ಯ ಶ್ರೀ ಶ್ರೀಗಳವರು ಕೃಪೆ ಮಾಡಿದ ಆಶೀರ್ವಾದ ಪತ್ರವನ್ನು ಕಳುಹಿಸಿದ್ದೀರಿ. ತಲುಪಿದೆ ಅದಕ್ಕಾಗಿ ತಮಗೆ ಧನ್ಯವಾದಗಳು ಮತ್ತು ಗುರುಗಳ ಚರಣಾರವಿಂದಗಳಿಗೆ ನಮಸ್ಕಾರಗಳು.

ತಮಗೆ ಪತ್ರ ಬರೆಯಲು ತಡವಾದುದಕ್ಕೆ ಕ್ಷಮೆ ಕೋರುತ್ತೇನೆ (ನಮ್ಮ ಮಾತೃಶ್ರೀಯವರು ಮೂರು ವಾರಗಳ ಕಾಲ ನರ್ಸಿಂಗ್ ಹೋಂನಲ್ಲಿದ್ದು 12.08.2004ರಂದು ದೈವಾಧೀನರಾದರು ಮತ್ತು ಉತ್ತರಕ್ರಿಯಾದಿಗಳು ನನ್ನ ಮನೆಯಲ್ಲಿಯೇ ನಡೆದವು) ಕೊನೆಯ ದಿನ ವೇ॥ ಬ್ರ॥ ಎಸ್.ವಿ.ಶ್ಯಾಮಭಟ್ಟರು ನಮ್ಮ ಮನೆಗೆ ದಯಮಾಡಿ ಪಿತರ ದೇವತೆಗಳ ಬಗೆಗೆ ಹಾಗೂ ನಮ್ಮ ಕರ್ತವ್ಯಗಳ ಬಗ್ಗೆ ತಿಳುವಳಿಕೆ ನೀಡಿ ಆಶೀರ್ವದಿಸಿದರು. ಮರುದಿನ ಶ್ರೀ ಸೂರ್ಯನಾರಾಯಣರವರು ಬಂದು ವಿಚಾರ ವಿನಿಮಯ ಮಾಡಿಕೊಂಡರು. ಇಬ್ಬರಿಗೂ ತಾವು ಕಳುಹಿಸಿದ್ದ ಗುರುಗಳ ಆಶೀರ್ವಾದ ಪತ್ರವನ್ನು ತೋರಿಸಿದ್ದೆ. ಇಬ್ಬರೂ ಸಂತೋಷಗೊಂಡರು.

ನಮ್ಮ ತಾಯಿಯವರ ಬಗೆಗೆ : - ನಾಗಮಂಗಲ, ಕೆರೆ ಬೀದಿ, ದಿ॥ ವೇ।ಬ್ರ॥ ನರಸಿಂಹ ಭಟ್ಟರ ಮಗಳು, ಹಾಲಿ 102 ವರ್ಷಗಳು. ಕುಣಿಗಲ್ ತಾಲ್ಲೂಕು ಯಡಿಯೂರು ಹೋಬಳಿ, ನಾಗಸಂದ್ರ ಗ್ರಾಮದ ದಿ॥ ವೇ॥ಬ್ರ॥ ನಂಜುಂಡ ಭಟ್ಟರ ಹಿರಿಯ ಸೊಸೆ. ನಮ್ಮ ತಂದೆಯ ಹೆಸರು ಎನ್. ರಾಮಯ್ಯ, ಉಪಾಧ್ಯಾಯರು ಹಾಗೂ ವೈದಿಕ ವಿದ್ಯೆಯನ್ನು ಮಾಗಡಿ ರಾಮ ಶಾಸ್ತ್ರಿಗಳು ಎಂಬ ವಿದ್ವಾಂಸರಿಂದ ಕಲಿತವರು. **ದೇವನಾಗರಿ** ಲಿಪಿ ಓದುತ್ತಿದ್ದರು ಮತ್ತು ಬರೆಯುತ್ತಿದ್ದರು.

ಶ್ರೀ ರಾಮನ ಪರಮ ಭಕ್ತರು, ವಿರಕ್ತರು, ಪ್ರತಿದಿನವೂ 20 ಸರ್ಗ ರಾಮಾಯಣ, ಪಾರಾಯಣ ಮಾಡಿ ಆಗಾಗ ಶ್ರೀ ರಾಮ ಪಟ್ಟಾಭಿಷೇಕವನ್ನು ಮಾಡುತ್ತಾ ಇದ್ದರು. ಒಂದು ಸಲ ನಮ್ಮ ಊರಿನಲ್ಲಿ ಮತ್ತೊಂದು ಸಲ ನಾಗಮಂಗಲ ಕೇಶವಸ್ವಾಮಿ ದೇವಸ್ಥಾನದಲ್ಲಿ ದೊಡ್ಡದ್ದಾಗಿ ಕಾರ್ಯಕ್ರಮವನ್ನು ಮಾಡಿದ್ದರು. 1946ನೇ ಇಸವಿಯಲ್ಲಿ ಕುಣಿಗಲ್ ಪಕ್ಕ ಹೇರೂರಿನಲ್ಲಿ ಸಾರ್ವಜನಿಕ ಸಹಾಯದೊಂದಿಗೆ ಶಿವಾಲಯವೊಂದನ್ನು ಕಟ್ಟಿ ಪೂಜಾದಿಗಳಿಗೆ ವ್ಯವಸ್ಥೆಯನ್ನು ಮಾಡಿ ಕಾಶೀ ಯಾತ್ರೆಗೆ ಹೊರಟರು.

**ಅಯೋಧ್ಯೆಯಲ್ಲಿ 108ನೆಯ ಶ್ರೀ ರಾಮ ಪಟ್ಟಾಭಿಷೇಕವನ್ನು ಮಾಡಿ ಗಯಾಗೆ ಬಂದು ಅಲ್ಲಿ ಪಿತೃ ಕಾರ್ಯಗಳನ್ನು ಮಾಡಿ 14.05.1946ರಂದು ಅಲ್ಲೇ ದೈವಾಧೀನರಾದರು. ಅವರ ಸ್ಮರಣಾರ್ಥವಾಗಿ ನನ್ನ ಗ್ರಂಥದಲ್ಲಿ ಶ್ರೀ ರಾಮಪಟ್ಟಾಭಿಷೇಕದ ಫೋಟೋವೊಂದನ್ನು ಸೇರಿಸಿದ್ದೇನೆ.**

ಹಾಲೀ ನಾನು ಬರೆದ ಋಗ್ವೇದ ಪರಿಚಯ ವಿಚಾರಗಳನ್ನು ಎರಡು ಭಾಗ ಮಾಡಿ ಅದರಲ್ಲಿ ಒಂದು ಭಾಗವನ್ನು ಜೊತೆಯಲ್ಲಿ ಕಳುಹಿಸುತ್ತಿದ್ದೇನೆ. ಗುರುಗಳಿಗೆ ಕಾಣಿಕೆ ಹಾಗೂ ಮಠದಲ್ಲಿ ಅರ್ಚನೆಗಾಗಿ ಕಾಣಿಕೆ ಜೊತೆಯಲ್ಲಿದೆ. ತಮ್ಮ ಮಠದ ಆಡಳಿತಗಾರರಾದ ಮ॥ ರಾ॥ ಶ್ರೀ ಸೀತಾರಾಮ ಭಟ್ ದಾಮ್ಲೆರವರಿಗೂ ನನ್ನ ವಂದನೆಗಳನ್ನು ತಿಳಿಸಲು ಕೋರುತ್ತೇನೆ.

ಗೌರವ ವಂದನೆಗಳೊಂದಿಗೆ, ಇಂತಿ ನಮಸ್ಕಾರಗಳು

ದಿನಾಂಕ : 02.09.2004 **(ಎನ್.ಆರ್.ನಂಜುಂಡಯ್ಯ)**

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥





ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।
ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥

ಪರಮಪೂಜ್ಯ ಶ್ರೀ ಶ್ರೀ ಶ್ರೀ ನಾರಾಯಣಾಶ್ರಮ ಮಹಾಸ್ವಾಮಿಗಳವರ ಚರಣಾರವಿಂದಗಳಲ್ಲಿ ರಾಜಾಜಿನಗರ ವಾಸಿ ಶ್ರೀ ಎನ್.ಆರ್. ನಂಜುಂಡಯ್ಯ ಎಂಬ ವಿಶ್ವಾಮಿತ್ರ ಗೋತ್ರದ ಸ್ಮಾರ್ತ ಬ್ರಾಹ್ಮಣ ವೇದಾಭಿಮಾನಿಯ ಸಾಷ್ಟಾಂಗ ನಮಸ್ಕಾರಗಳು.

ನಾನು ''ಋಗ್ವೇದ ಪರಿಚಯ'' ದಿಂದ ದೇವತೆಗಳೆಡೆಗೆ ಋಷಿಗಳ ಅಮೃತವಾಣಿ ಎಂಬ ಹೆಸರಿನಲ್ಲಿ ಇಲ್ಲಿಯವರೆಗೆ ನಾಲ್ಕು ಭಾಗಗಳನ್ನು ತಮಗೆ ತಲುಪಿಸಿರುತ್ತೇನೆ. ಈ ಹಿಂದೆ ತಮ್ಮಲ್ಲಿಗೆ ಬಂದಿದ್ದಾಗ ನಾನು ಹೇಳಿದ್ದಂತೆ ಕನ್ನಡ ಅಕ್ಷರ ಮಾಲಿಕೆಯ ಅಡಿಯಲ್ಲಿ ಇಂದ್ರ ಮತ್ತು ಅಗ್ನಿ ಇವರ ವಿಚಾರಗಳನ್ನು ಪುನಃ ಪುನಃ ಬಾರದಂತೆ ಆದಷ್ಟು ಬಿಡದಂತೆ ಮಾಡಿ ತಲುಪಿಸುತ್ತಿದ್ದೇನೆ.

ಅದರಲ್ಲಿ ಪವಮಾನ, ವಾಯು, ಸೋಮರ ವಿಚಾರಗಳು ಇವೆ. ನಂತರ ಅಗ್ನಿಯ ವಿಭಾಗ, ಕಡೆಯದಾಗಿ ಇಂದ್ರನ ವಿಭಾಗಗಳು ಇವೆ. ಹಿಮಾಲಯ ಪರ್ವತದಷ್ಟಿರುವ ವೇದರಾಶಿಯಲ್ಲಿ ಇದೊಂದು ಕಣ ಮಾತ್ರ (ಪರಿಚಯ) (ಇಲ್ಲಿ ಸುಮಾರು 50 ದೇವತೆಗಳ ವಿಚಾರವನ್ನು 100 ಋಷಿಗಳು 1028 ಸೂಕ್ತಗಳಲ್ಲಿ ಹಾಗೂ 10,550 ಮಂತ್ರಗಳನ್ನೊಳಗೊಂಡ ವಿಚಾರಗಳು ಒಳಗೊಂಡಿದೆ). ಹಿಂದಿನಂತೆಯೇ ಕೆಳಗಿನಂತೆ ಅವನ್ನು ಪರಿಚಯ ಮಾಡಿದ್ದೇನೆ. (1) ಸ್ತೋತ್ರಗಳು - ಹಿರಿಮೆ - ಮಹಿಮೆಗಳು (2) ಆಶ್ರಮಗಳಲ್ಲಿಯ ಕಾರ್ಯಕ್ರಮಗಳು (3) ಅಂದು ಇದ್ದ ತೊಂದರೆಗಳು, ಅವಶ್ಯಕತೆಗಳು ಮುಂದಕ್ಕೆ ಅವರಿಗೆ ಬೇಕಾದ ಅವಶ್ಯಕತೆಗಳನ್ನು ದೇವತೆಗಳಲ್ಲಿ ಕೇಳಿಕೊಂಡ ಪ್ರಾರ್ಥನಾ ವಿಭಾಗವಿದೆ. (ಎಲ್ಲವನ್ನೂ ಒಳಗೊಂಡ ಭಾಗ 1 ಮತ್ತು ಭಾಗ 2 ಅನ್ನು ಈ ತಿಂಗಳ ಕೊನೆಗೆ ತಲುಪಿಸುತ್ತೇನೆ).

★ ಇದರ ಜೊತೆಯಲ್ಲಿ ನಿನ್ನೆ ಬಂದ ಎಡತೊರೆ ಶ್ರೀ ಶ್ರೀ ಶ್ರೀ ಶಂಕರಭಾರತೀ ಮಹಾಸ್ವಾಮಿಗಳವರ ಆಶೀರ್ವಾದ ಪತ್ರವನ್ನು ಸೇರಿಸಿದ್ದೇನೆ.

ತಾವು ದಯಮಾಡಿ ತಮ್ಮದೊಂದು ಆಶೀರ್ವಾದ ಪತ್ರವನ್ನು ಮುಂದೆ ಓದುವವರಿಗೆ ಅನುಕೂಲವಾಗುವಂತೆ ಕರುಣಿಸಬೇಕೆಂದು ತಮ್ಮಲ್ಲಿ ಬೇಡುತ್ತೇನೆ. ಇಡೀ ಋಗ್ವೇದದಲ್ಲಿ ಏನಿದೆ ಎಂದು ತಿಳಿಯಬಯಸಿ ಹೊರಟ ಈ ಯಾತ್ರಿಕನಿಂದ ತಾವು ಅನುಗ್ರಹಿಸಿ ಕರುಣಿಸಿದಷ್ಟನ್ನು ಮಾಡಿ ತಮಗೆ ಅನಂತ ಸಾಷ್ಟಾಂಗ ನಮಸ್ಕಾರಗಳೊಂದಿಗೆ ಒಪ್ಪಿಸುತ್ತಿದ್ದೇನೆ. ನಾನು ಬರೆದಿರುವ ಎಲ್ಲಾ ಪುಸ್ತಕಗಳಲ್ಲಿ ಇರಬಹುದಾದ ಯಾವುದೇ ತರಹದ ತಪ್ಪು ನೆಪ್ಪುಗಳನ್ನು ನನ್ನ ಪಾಲಿಗೆ ಬಿಟ್ಟು ಕ್ಷಮಿಸಿ ಯೋಗ್ಯವಾದುದನ್ನು ಮಾತ್ರ ಸ್ವೀಕರಿಸಲು ಪ್ರಾರ್ಥಿಸುತ್ತೇನೆ. ಆರೋಗ್ಯ ಮತ್ತು ಈ ಕೆಲಸದಲ್ಲಿ ಇಷ್ಟು ಮಾತ್ರ ಮಾಡಲು ನನಗೆ ಅನುಗ್ರಹಿಸಿ ಆಶೀರ್ವದಿಸಿದಕ್ಕಾಗಿ ತಮಗೆ ಅನಂತಾನಂತ ನಮಸ್ಕಾರಗಳು. ಹಾಲಿ 5ನೇ ಭಾಗ ಮಾತ್ರ ಜೊತೆಯಲ್ಲಿ ಇದೆ.

ದಿನಾಂಕ : 12.07.2004
ಮಹಾಸ್ವಾಮಿಯವರ ಸನ್ನಿಧಿಗೆ,
ಶ್ರೀ ಕಾಮಾಕ್ಷೀ ಶಾರದಾಪೀಠ
ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು - 572120, ತುಮಕೂರು ಜಿಲ್ಲೆ

ಇಂತಿ ಸಾಷ್ಟಾಂಗ ನಮಸ್ಕಾರಗಳು
**(ಎನ್.ಆರ್.ನಂಜುಂಡಯ್ಯ)**
96/ಬಿ, 37ನೇ ಅಡ್ಡರಸ್ತೆ, 2ನೇ ಬ್ಲಾಕ್,
10ನೇ ಮುಖ್ಯರಸ್ತೆ, ರಾಜಾಜಿನಗರ,
ಬೆಂಗಳೂರು - 560010.

॥ ಓಂ ಶ್ರೀ ಮಹಾಗಣಪತಯೇ ನಮ: ॥



ವೇದ: ಶಿವ: ಶಿವೋವೇದೋ ವೇದಾಧ್ಯಾಯಿ ಸದಾಶಿವ : ।
ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

**ವೇ॥ ಬ್ರ॥ ಶ್ರೀ ಎಸ್.ವಿ.ಶ್ಯಾಮಭಟ್ಟರವರಿಗೆ,**
ಸಂಸ್ಕೃತ ಪಂಡಿತರು ಮತ್ತು ವಿದ್ವಾಂಸರು,
ಅನೇಕ ಉಪಯುಕ್ತ ಪುಸ್ತಕಗಳ ಗ್ರಂಥಕರ್ತರು,
ನಂ. 103, 17ನೇ ಕ್ರಾಸ್, 1ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು - 560010.

ಸನ್ಮಾನ್ಯ ವೇ॥ ಬ್ರ॥ ಎಸ್.ವಿ. ಶ್ಯಾಮಭಟ್ಟರವರಿಗೆ ರಾಜಾಜಿನಗರ 2ನೇ ಬ್ಲಾಕ್‌ನಲ್ಲಿ ವಾಸವಾಗಿರುವ ಶ್ರೀ ಎನ್.ಆರ್. ನಂಜುಂಡಯ್ಯನವರ ಸಾಷ್ಟಾಂಗ ನಮಸ್ಕಾರಗಳು.

ನಾನು ತಮ್ಮ ಆಶೀರ್ವಾದದಿಂದ ಆಶ್ವಲಾಯನ ಸೂತ್ರ ಋಗ್ವೇದದಲ್ಲಿ ನಾನಾ ಋಷಿಗಳು ಅನುಗ್ರಹಿಸಿರುವಂತೆ ದೇವತೆಗಳ ಸ್ತೋತ್ರಗಳು, ಮಹಿಮೆಗಳು, ಋಷಿಗಳು ಅವರಿಗಾಗಿ ಮಾಡಿದ ನಾನಾ ಕರ್ಮಗಳು, ಅವರಿಂದ ಪಡೆದ ಅನುಕೂಲತೆಗಳು ಮತ್ತು ಇತರೇ ವಿಚಾರಗಳು ಇವೆ. ಅದನ್ನು ಆದಷ್ಟು ವಿಭಜಿಸಿ ತೆಗೆದಿದ್ದೇನೆ.

ಇಡೀ ಋಗ್ವೇದದಲ್ಲಿ ಎಲ್ಲಾ ಋಷಿಗಳ ಅಭಿಪ್ರಾಯಗಳನ್ನು ತಿಳಿಯಬಯಸಿ ಅದನ್ನು ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ ಮೇಲಿನಂತೆ ಸ್ತೋತ್ರ ವಿಭಾಗ, ಆಶ್ರಮ ವಿಭಾಗ, ಪ್ರಾರ್ಥನಾ ವಿಭಾಗವೆಂದು ಹೊರತೆಗೆದಿದ್ದೇನೆ. ಹಾಲಿ 5ನೇ ಭಾಗದಲ್ಲಿ ವಾಯು, ಅಗ್ನಿ, ಇಂದ್ರರಿಂದ ಪಡೆದ ನಾನಾ ಪ್ರಯೋಜನಗಳು ಇವುಗಳನ್ನು ಪುನಃ ಪುನಃ ಬಾರದಂತೆ ಸಿದ್ಧಪಡಿಸಿದ್ದೇನೆ. ಈ ಪುಸ್ತಕಗಳನ್ನು ತಯಾರಿಸುವಲ್ಲಿ ನನ್ನ ಸ್ವಂತ ವಿಚಾರಗಳು ಏನೂ ಇಲ್ಲ. ಎಲ್ಲವೂ ಋಗ್ವೇದ ಪರಿಚಯ ಗ್ರಂಥದ ಆಧಾರದಡಿಯಲ್ಲಿ ಇದೆ.

ದೇವತೆಗಳ ಹೆಸರಿನಲ್ಲಿ ತೆಗೆದಿದ್ದೇನೆ. ಸಂಸ್ಕೃತ ಅಥವಾ ಮಂತ್ರಗಳ ಮೂಲಕ ತಿಳಿಯಲಾಗದವರಿಗೆ ಅನುಕೂಲವಾಗಬಹುದೆಂದು ಭಾವಿಸಿ ಈ ಕೆಲಸವನ್ನು ಮಾಡಿದ್ದೇನೆ. ಋಷಿಗಳು ದೇವತೆಗಳ ಬಗ್ಗೆ ಹೇಳಿರುವಷ್ಟನ್ನೇ ಋಗ್ವೇದ ಸೂಕ್ತ ಸಾರ ಪುಸ್ತಕಗಳಿಂದ ವಿಷಯಗಳನ್ನು ಇಲ್ಲಿಗೆ ತೆಗೆದುಕೊಂಡಿದ್ದೇನೆ. ಏನೇನು ಗೊತ್ತಿಲ್ಲದ ನನ್ನಿಂದ ಗುರುಗಳು ಈ ಕೆಲಸವನ್ನು ಮಾಡಿರುತ್ತೀರಿ, ಇದಕ್ಕಾಗಿ ತಮ್ಮನ್ನು ಅಭಿನಂದಿಸುತ್ತೇನೆ. ತಮ್ಮ ಅನುಮತಿಯನ್ನು ಆಶೀರ್ವಾದ ರೂಪದಲ್ಲಿ ಬೇಡುತ್ತಿದ್ದೇನೆ. ನಂತರವೇ ಬೇರೆಯವರಿಗೆ ಸಿಗುವಂತೆ ಮಾಡುವ ಯೋಚನೆ. ಈ ಪುಸ್ತಕಗಳಿಗೆ ತಮ್ಮ ಅನುಗ್ರಹ, ಆಶೀರ್ವಾದಗಳನ್ನು ಮುನ್ನುಡಿ ರೂಪದಲ್ಲಿ ಕರುಣಿಸಿ ಬೇರೆ ಆಸಕ್ತರು ನೋಡುವಂತಾಗಲು ತಾವು ಕೃಪೆ ಮಾಡಬೇಕೆಂದು ಚರಣಾರವಿಂದಗಳಲ್ಲಿ ಪ್ರಾರ್ಥಿಸುತ್ತೇನೆ.

(ಇದರೊಂದಿಗೆ 5ನೇ ಭಾಗದ ಪುಸ್ತಕವನ್ನು ಲಗತ್ತಿಸಿರುತ್ತೇನೆ)

ಇಂತಿ ನಮಸ್ಕಾರಗಳು

ಗೌರವ ವಂದನೆಗಳೊಂದಿಗೆ,

ದಿನಾಂಕ : 30.06.2004

**(ಎನ್.ಆರ್.ನಂಜುಂಡಯ್ಯ)**

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

॥ ಓಂ ಶ್ರೀ ಮಹಾಗಣಪತಯೇ ನಮ: ॥





**ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।**
**ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥**

ಪರಮಪೂಜ್ಯ ಶ್ರೀ ಶ್ರೀ ಶಂಕರಭಾರತೀ ಮಹಾಸ್ವಾಮಿಯವರ ಚರಣಾರವಿಂದಗಳಲ್ಲಿ ಬೆಂಗಳೂರು ರಾಜಾಜಿನಗರ ನಿವಾಸಿ ಶ್ರೀ ಎನ್.ಆರ್. ನಂಜುಂಡಯ್ಯ ಎಂಬ ವೈದಿಕ ಪರಂಪರೆಯ ವಿಶ್ವಾಮಿತ್ರಗೋತ್ರದ ಸ್ಮಾರ್ತ ಬ್ರಾಹ್ಮಣ ವೇದಾಭಿಮಾನಿಯ ಸಾಷ್ಟಾಂಗ ನಮಸ್ಕಾರಗಳು.

ಋಗ್ವೇದ ಪರಿಚಯ ಗ್ರಂಥಕರ್ತರಾದ ಶ್ರೀ ಸೂರ್ಯನಾರಾಯಣ, ವಿಜಯನಗರ, ರವರ ಪ್ರೋತ್ಸಾಹ ಸಲಹೆಗಳು ಹಾಗೂ ತಮ್ಮ ಅನುಗ್ರಹ, ಆಶೀರ್ವಾದಗಳಿಂದ ಈವರೆಗೆ ತಮಗೆ ಮೂರು ಪುಸ್ತಕಗಳನ್ನು ತಲುಪಿಸಿರುತ್ತೇನೆ. ಋಗ್ವೇದ ಪರಿಚಯದಿಂದ ಅದೇ ವಿಚಾರಗಳನ್ನು ದೇವತೆಗಳ ಹೆಸರಿನಲ್ಲಿ ಸ್ತೋತ್ರಗಳು, ಆಶ್ರಮ ವಿಭಾಗ, ನಾನಾ ಪ್ರಾರ್ಥನೆಗಳು ಅಲ್ಲಲ್ಲಿ ಕಂಡುಬಂದ ವಿಶೇಷ ವಿಚಾರಗಳು ಎಂಬುದಾಗಿ ಋಷಿವಾಣಿ ಎಂದು ದೊರೆತ ಎಲ್ಲಾ ದೇವತೆಗಳ ಬಗೆಗೆ ಯಥಾಮತಿ ಬರೆದು ತಲುಪಿಸಿರುತ್ತೇನೆ. ಎಲ್ಲಾ ಋಷಿಗಳ ಒಟ್ಟು ಅಭಿಪ್ರಾಯವನ್ನು ತಿಳಿಯ ಬಯಸಿ ಇಂದ್ರನ ವಿಭಾಗವನ್ನು **ಕನ್ನಡ ಅಕ್ಷರ ಮಾಲಿಕೆಯಡಿಯಲ್ಲಿ ಹಿಂದಿನಂತೆಯೇ ಮಾಡಿ ತಲುಪಿಸುತ್ತಿದ್ದೇನೆ.** ಇದಾದ ನಂತರ ಇತರೇ ದೇವತೆಗಳ ಅಡಿಯಲ್ಲಿ ಇಲ್ಲಿಯವರೆವಿಗೆ ಬಂದ ದೇವತೆಗಳನ್ನು ಬಿಟ್ಟು ಉಳಿದೆಲ್ಲ ದೇವತೆಗಳ ವಿಚಾರಗಳು ಹಿಂದಿನಂತೆಯೇ ಸ್ತೋತ್ರಗಳು, ಮಾಡಿದ ಕರ್ಮಗಳು, ಪಡೆದ ಪ್ರಯೋಜನಗಳು ಅವುಗಳನ್ನು ಪುಟ 53 ರಿಂದ 85ರವರೆವಿಗೂ 33 ದೇವತೆಗಳ ವಿಚಾರವನ್ನು ಹೊರತೆಗೆದಿದ್ದೇನೆ.

ಸಂಸ್ಕೃತ ಅಥವಾ ಮಂತ್ರ ವಿಭಾಗಗಳು ಬಾರದವರಿಗೆ ಕನ್ನಡದಲ್ಲಿ ಸ್ವಲ್ಪಮಟ್ಟಿಗಾದರೂ ಗೊತ್ತಾಗಲಿ ಎಂಬ ಅಭಿಲಾಷೆಯಿಂದ ಈ ರೀತಿಯಲ್ಲಿ (ದೇವತೆಗಳು. ಋಷಿಗಳ ಅಮೃತವಾಣಿ, ಋಗ್ವೇದದಿಂದ ಪರಿಚಯ ಎಂಬುದಾಗಿ) (ಇಂದ್ರನ ವಿಭಾಗ ಮಾತ್ರ ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ ಇದೆ) ಹೊರತೆಗೆದಿದ್ದೇನೆ.

1997ರ ದೀಪಾವಳಿಯಿಂದ ಇಲ್ಲಿಯವರೆವಿಗೂ 20.01.2004ರವರೆಗೂ ಈ ಕೆಲಸದಲ್ಲಿ ತಲ್ಲೀನನಾಗಿ ಯಥಾಮತಿ ಬರೆದಿದ್ದೇನೆ. ಇದರಲ್ಲಿ ಇರಬಹುದಾದ ಯಾವುದೇ ತರಹದ ತಪ್ಪು ನೆಪ್ಪುಗಳನ್ನು ಕ್ಷಮಿಸಿ ಯೋಗ್ಯವಾದುದನ್ನು ಮಾತ್ರ ದಯಮಾಡಿ ಸ್ವೀಕರಿಸಲು ಪ್ರಾರ್ಥಿಸುತ್ತೇನೆ. ತಮ್ಮ ಅನುಗ್ರಹ ಆಶೀರ್ವಾದಗಳೊಂದಿಗೆ ಈ ಕಾರ್ಯ ಮಾಡಿದ್ದೇನೆ ಎಂದು ತಿಳಿಸುತ್ತಾ ತಮ್ಮ ಅನುಗ್ರಹ, ಆಶೀರ್ವಾದವನ್ನು ಸದಾ ಬಯಸುತ್ತೇನೆ.

ಗೆ :

**ಶ್ರೀ ಶ್ರೀ ಶಂಕರಭಾರತೀ ಸ್ವಾಮಿಗಳು,**
ಶ್ರೀ ಯೋಗಾನಂದೇಶ್ವರ ಸರಸ್ವತಿ ಮಹಾಸಂಸ್ಥಾನಂ,
ಚಂದ್ರಮೌಳಿ, ಕೃಷ್ಣರಾಜನಗರ - 571602.
ಮೈಸೂರು ಜಿಲ್ಲೆ.

ಇಂತಿ ಸಾಷ್ಟಾಂಗ ನಮಸ್ಕಾರಗಳು

**ಎನ್.ಆರ್. ನಂಜುಂಡಯ್ಯ**
96/ಬಿ, 37ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ
2ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - 560010.

(ನಾಲ್ಕನೆಯ ಪುಸ್ತಕವನ್ನು ಇದರೊಂದಿಗೆ ಲಗತ್ತಿಸಿದ್ದೇನೆ)

ದಿನಾಂಕ : 20.01.2004, ಮಂಗಳವಾರ

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥



॥ ಓಂ ಶ್ರೀ ಮಹಾಗಣಪತಯೇ ನಮಃ ॥





**ಮ॥ ರಾ॥ ಸೀತಾರಾಮ ಭಟ್ ದಾಮ್ಲೆ**
ಆಡಳಿತ ಅಧಿಕಾರಿಗಳು,
ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತಿ ಮಠ,
ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ - 571 602.
ಮೈಸೂರು ಜಿಲ್ಲೆ.

ಮ॥ ರಾ॥ ಸೀತಾರಾಮ ಭಟ್ ದಾಮ್ಲೆರವರಿಗೆ ಬೆಂಗಳೂರು ರಾಜಾಜಿನಗರ ನಿವಾಸಿ ಎನ್.ಆರ್. ನಂಜುಂಡಯ್ಯನ ವಂದನೆಗಳು. ತಾವು 10.11.2003ರಂದು RBK / THH / 03 - 301 Dated : 10.11.2003 ಪ್ರಕಾರ ಬರೆದ ಪತ್ರ ತಲುಪಿ ಸಂತೋಷವಾಯಿತು. ಅದಕ್ಕಾಗಿ ಮೊದಲು ತಮಗೆ ವಂದಿಸುತ್ತೇನೆ. ಅನಾರೋಗ್ಯದಿಂದ ಈ ಕಾಗದ ಬರೆಯಲು ತಡವಾದುದಕ್ಕೆ ಕ್ಷಮೆ ಕೋರುತ್ತೇನೆ.

''ಋಗ್ವೇದ ಪರಿಚಯ'' ಗ್ರಂಥಕರ್ತರಾದ ಮ॥ ರಾ॥ ಸೂರ್ಯನಾರಾಯಣರವರಿಂದ ಋಗ್ವೇದ ಪರಿಚಯ ಪುಸ್ತಕವು ನನಗೆ ದೊರೆಯಿತು. ನನಗೆ ಋಗ್ವೇದದ ಬಗ್ಗೆ ತಿಳಿಯಬೇಕೆಂಬ ಹಂಬಲ ಬಹಳವಾಗಿ ಇತ್ತು. ನಾನು ಅನೇಕ ಸಲ ಓದಿ ಓದಿ ನನಗೆ ತೋರಿದ ವಿಚಾರಗಳನ್ನು ಗ್ರಂಥಕರ್ತರಲ್ಲಿ ತಿಳಿಸಿದೆ. ಅವರು ನಾನು ಮಾಡಿದುದನ್ನು ನೋಡಿ ನನ್ನನ್ನು ಬೆಂಗಳೂರಿನಲ್ಲೇ ಮಹಾಸ್ವಾಮಿಯವರನ್ನು ಕರಣಿಕರ ಪಾಠಶಾಲೆ ಹಾಗೂ ರಾಮಚಂದ್ರಪುರ ಮಠಗಳಲ್ಲಿ ಭೇಟಿ ಮಾಡಿಸಿದರು ಹಾಗು ನಾನು ಏನು ಮಾಡುತ್ತೇನೆಂಬುದರ ಬಗ್ಗೆಯು ಅವರಿಗೆ ತಿಳಿಸಿದರು. ನಾನು ಮಾಡಿದ ಪ್ರತಿ ಭಾಗವನ್ನು ಅವರಿಗೆ ತೋರಿಸಿ ಅವರೊಂದಿಗೆ ವಿಚಾರ ವಿನಿಮಯ ಮಾಡಿ ಸಲಹೆ ಪಡೆದು ಅವರ ಸಲಹೆಗಳು ಮತ್ತು ಗುರುಗಳ ಆಶೀರ್ವಾದಗಳಿಂದ ಈ ಹಿಂದಿನ ಮೂರು ಪುಸ್ತಕಗಳನ್ನು ತಯಾರಿಸಿ ಗುರುಗಳಿಗೆ ತಲುಪಿಸಿದ್ದೇನೆ. ಹಾಲಿ ನಾಲ್ಕನೆಯ ಭಾಗವೊಂದನ್ನು ಸಿದ್ಧಪಡಿಸಿದ್ದೇನೆ. ಇದು ಬರೀ ಇಂದ್ರನ ಬಗೆಗೆ ಪುನಃ ಬೇರೊಂದು ರೀತಿಯಲ್ಲಿ ಸಿದ್ಧಮಾಡಿದ್ದೇನೆ.

ಇಡೀ ಋಗ್ವೇದದಲ್ಲಿ ಎಲ್ಲಾ ಋಷಿಗಳ ಅಭಿಪ್ರಾಯವನ್ನು ತಿಳಿಯಬೇಕೆಂದು ಬಯಸಿ ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ ಹಿಂದಿನಂತೆಯೇ (1) ಸ್ತೋತ್ರ ವಿಭಾಗ (2) ಆಶ್ರಮ ವಿಭಾಗ (3) ಇಂದ್ರನಿಂದ ಪಡೆದ ನಾನಾ ಪ್ರಯೋಜನಗಳು ಇವುಗಳನ್ನು ಹಿಂದಿನಂತೆಯೇ ಆದರೆ ಕನ್ನಡ ಅಕ್ಷರ ಮಾಲಿಕೆಯಡಿಯಲ್ಲಿ ಜೋಡಿಸಿ ಪುನಃ ಪುನಃ ಬಾರದಂತೆ ರಚಿಸಿದ್ದೇನೆ. ಈ ಪುಸ್ತಗಳನ್ನು ತಯಾರಿಸುವಲ್ಲಿ ನನ್ನ ಸ್ವಂತ ವಿಚಾರಗಳು ಏನೂ ಇಲ್ಲ. ಎಲ್ಲವೂ ಋಗ್ವೇದ ಪರಿಚಯ ಗ್ರಂಥದ ಆಧಾರದಡಿಯಲ್ಲಿ ಇದೆ. ದೇವತೆಗಳ ಹೆಸರಿನಲ್ಲಿ ತೆಗೆದಿದ್ದೇನೆ. ಸಂಸ್ಕೃತ ಅಥವಾ ಮಂತ್ರಗಳ ಮೂಲಕ ತಿಳಿಯಲಾಗದವರಿಗೆ ಅನುಕೂಲವಾಗಬಹುದೆಂದು ಭಾವಿಸಿ ಈ ಕೆಲಸವನ್ನು ಮಾಡಿದೆ. ಇದರಲ್ಲಿ ಇರಬಹುದಾದ ಯಾವುದೇ ತರಹದ ತಪ್ಪುನೆಪ್ಪುಗಳನ್ನು ತಳ್ಳಿಹಾಕಿ ಕ್ಷಮಿಸಿ ಉಪಯುಕ್ತವಿದ್ದರೆ ಓದುಗರು ಸ್ವೀಕರಿಸಲು ಆಶಿಸುತ್ತೇನೆ. ಗುರುಗಳಿಗೆ ನನ್ನ ನಮಸ್ಕಾರವನ್ನು ತಿಳಿಸುವುದು. ಅವರ ಆಶೀರ್ವಾದವನ್ನು ಸದಾ ನಿರೀಕ್ಷಿಸುತ್ತಿರುತ್ತೇನೆ.

**(ನಾಲ್ಕನೆಯ ಪುಸ್ತಕವನ್ನು ಇದರೊಂದಿಗೆ ಲಗತ್ತಿಸಿದ್ದೇನೆ)**

ಗೆ :
ಯಡತೊರೆ ಶ್ರೀ ಜಗದ್ಗುರು ಯೋಗಾನಂದೇಶ್ವರ
ಸರಸ್ವತೀ ಮಹಾ ಸಂಸ್ಥಾನಂ, ಚಂದ್ರಮೌಳಿ ರಸ್ತೆ,
ಕೃಷ್ಣರಾಜನಗರ - 571602, ಮೈಸೂರು ಜಿಲ್ಲೆ.

ಇಂತಿ ಸಾಷ್ಟಾಂಗ ನಮಸ್ಕಾರಗಳು

ಎನ್.ಆರ್. ನಂಜುಂಡಯ್ಯ
96/ಬಿ, 37ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ,
2ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - 560010.



ದಿನಾಂಕ : 18.01.2004, ಭಾನುವಾರ



॥ ಹರ ನಮಃ ಪಾರ್ವತಿ ಪತಯೇ ಹರಹರ ಮಹಾದೇವ ॥

|| ಓಂ ಶ್ರೀ ಮಹಾಗಣಪತಯೇ ನಮ: ||



**ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: |**
**ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ||**

ಪರಮಪೂಜ್ಯ ಶ್ರೀ ಶ್ರೀ ಶ್ರೀ ನಾರಾಯಣಾಶ್ರಮ ಮಹಾಸ್ವಾಮಿಗಳವರ ಚರಣಾರವಿಂದಗಳಲ್ಲಿ ರಾಜಾಜಿನಗರ ವಾಸಿ ಶ್ರೀ ಎನ್.ಆರ್. ನಂಜುಂಡಯ್ಯ ಎಂಬ ವಿಶ್ವಾಮಿತ್ರ ಗೋತ್ರದ ಸ್ಮಾರ್ತ ಬ್ರಾಹ್ಮಣ ವೇದಾಭಿಮಾನಿಯ ಸಾಷ್ಟಾಂಗ ನಮಸ್ಕಾರಗಳು.

ನಾನು ''ಋಗ್ವೇದ ಪರಿಚಯ'' ದಿಂದ ದೇವತೆಗಳೆಡೆಗೆ ಋಷಿಗಳ ಅಮೃತವಾಣಿ ಎಂಬ ಹೆಸರಿನಲ್ಲಿ ಮೂರು ಪುಸ್ತಕಗಳನ್ನು ತಮಗೆ ತಲುಪಿಸಿದ್ದೇನೆ. ಮೂರನೆಯ ಭಾಗ ''ಇಂದ್ರ'' ವಿಭಾಗ ತಮಗೆ ತಲುಪಿಸಿದಾಗ ನಾನು ತಮಗೆ ಇದೇ ವಿಚಾರಗಳನ್ನು ಕನ್ನಡ ಅಕ್ಷರ ಮಾಲಿಕೆಯ ಅಡಿಯಲ್ಲಿ ತಯಾರಿಸಿ ತಂದು ತಲುಪಿಸುತ್ತೇನೆ ಎಂದು ಅಂದು ಹೇಳಿ ಬಂದಿದ್ದೆ. ಐದು ತಿಂಗಳಾದ ಮೇಲೆ ತಮ್ಮ ಅನುಗ್ರಹ ಆಶೀರ್ವಾದಗಳಿಂದ ನಾನು ಹೇಳಿದಂತೆ ಸಿದ್ಧಮಾಡಿ ತಮ್ಮ ಸನ್ನಿಧಿಗೆ ತಲುಪಿಸುತ್ತಿದ್ದೇನೆ. ನಾನಾ ತೊಂದರೆಗಳಿಂದ ನಿಧಾನವಾಗಿದೆ. ಇದರಲ್ಲಿ ನನ್ನದು ಎನ್ನುವುದು ಏನೂ ಇಲ್ಲ. ಗುರುಗಳು ಒಳಗಿದ್ದು ಪ್ರೇರೇಪಿಸಿದಂತೆ ಮಾಡಿದ್ದೇನೆ.

ಇಡೀ ಋಗ್ವೇದ ಪರಿಚಯ ಎಂಬ ಗ್ರಂಥದಿಂದ 1028 ಸೂಕ್ತಗಳ ವಿಚಾರಗಳನ್ನು ಒಳಗೊಂಡಿರುವಂತೆ ಈ ನಾಲ್ಕೂ ಪುಸ್ತಕಗಳನ್ನು ತಯಾರಿಸಲಾಗಿದೆ. ಇಲ್ಲಿಯವರೆಗೆ ಮಂಡಲ ಮಂಡಲ ಪ್ರಕಾರ ವಿಚಾರಗಳನ್ನು ಹೊರತೆಗೆದೆ. ಈ ಸಾರಿ ಇಂದ್ರನ ವಿಭಾಗವನ್ನು ಇಡೀ ಋಗ್ವೇದದಲ್ಲಿ ಬಂದ ಎಲ್ಲ ಋಷಿಗಳ ವಾಣಿಯು ಒಂದು ಕಡೆ ಕನ್ನಡ ಅಕ್ಷರ ಮಾಲೆಯಡಿಯಲ್ಲಿ ಸೇರಿದೆ ಹಾಗೂ ಇದು ಸುಮಾರು 100 ಋಷಿಗಳ ಒಟ್ಟಾರೆ ಅಭಿಪ್ರಾಯವೆಂಬುದು ನನ್ನ ಅಭಿಪ್ರಾಯ.

ಈ ಹಿಂದಿನಂತೆ ಮೊದಲು (1) ಸ್ತೋತ್ರ ವಿಭಾಗಗಳು (2) ಆಶ್ರಮ ವಿಭಾಗಗಳು (3) ಪ್ರಾರ್ಥನೆಗಳು. ಇದು 1 ರಿಂದ 40 ಪುಟಗಳ ವರೆಗೆ ಇದೆ. ನಂತರ ಇತರೇ ದೇವತೆಗಳು ಎಂಬ ಹೆಸರಿನಲ್ಲಿ 33 ಪುಟಗಳು ಹಿಂದಿನ ದೇವತೆಗಳನ್ನು ಬಿಟ್ಟು ಉಳಿದ ದೇವತೆಗಳಾಗಿರುತ್ತಾರೆ. ಒಟ್ಟು ನನಗೆ ಸುಮಾರು 50 ದೇವತೆಗಳು ಇಲ್ಲಿ ದೊರೆತಿದ್ದಾರೆ.

ನನ್ನ ಪಾಲಿಗೆ ನಾನು ಬರೆದಿರುವ ವಿಚಾರಗಳು ಸಮುದ್ರದಲ್ಲಿಯ ಒಂದು ಹನಿ ನೀರಿನಂತೆ ಅಥವಾ ಹಿಮಾಲಯ ಪರ್ವತದ ಒಂದು ಸಣ್ಣ ಕಲ್ಲಿನ ಚೂರಿನಂತೆ ಮಾತ್ರ. ಇದೂ ಸಹ ತಮ್ಮ ಅನುಗ್ರಹ ಆಶೀರ್ವಾದದಿಂದ ಆಗಿದೆ ಎಂದು ತಮಗೆ ತಿಳಿಸಬಯಸುತ್ತೇನೆ.

ಮೊದಲನೇ ಭಾಗದಲ್ಲಿ ಹತ್ತು ದೇವತೆಗಳು, ಎರಡನೇ ಭಾಗದಲ್ಲಿ ಮೂರು ದೇವತೆಗಳು
ಮೂರರಲ್ಲಿ ಒಂದು ಇಂದ್ರ ಮಾತ್ರ, ನಾಲ್ಕರಲ್ಲಿ ಮೂವತ್ತಾರು ಇತರೇ ದೇವತೆಗಳು ಇದ್ದಾರೆ

ನಾನು ಬರೆದಿರುವ ಎಲ್ಲಾ ಪುಸ್ತಕಗಳಲ್ಲಿ ಇರಬಹುದಾದ ಯಾವುದೇ ತರಹದ ತಪ್ಪು ನೆಪ್ಪುಗಳನ್ನು ನನ್ನ ಪಾಲಿಗೆ ಬಿಟ್ಟು ಕ್ಷಮಿಸಿ ಯೋಗ್ಯವಾದುದನ್ನು ಮಾತ್ರ ಸ್ವೀಕರಿಸಲು ಪ್ರಾರ್ಥಿಸುತ್ತೇನೆ. ಆರೋಗ್ಯ ಮತ್ತು ಈ ಕೆಲಸದಲ್ಲಿ ಇಷ್ಟು ಮಾತ್ರ ಮಾಡಲು ನನಗೆ ಅನುಗ್ರಹಿಸಿ ಆಶೀರ್ವದಿಸಿದಕ್ಕಾಗಿ ತಮಗೆ ಅನಂತಾನಂತ ನಮಸ್ಕಾರಗಳು.

ದಿನಾಂಕ : 07.01.2004

ಇಂತಿ ಸಾಷ್ಟಾಂಗ ನಮಸ್ಕಾರಗಳು

**(ಎನ್.ಆರ್.ನಂಜುಂಡಯ್ಯ)**
96/ಬಿ, 37ನೇ ಅಡ್ಡರಸ್ತೆ, 2ನೇ ಬ್ಲಾಕ್,
10ನೇ ಮುಖ್ಯರಸ್ತೆ, ರಾಜಾಜಿನಗರ,
ಬೆಂಗಳೂರು - 560010.

ಮಹಾಸ್ವಾಮಿಯವರ ಸನ್ನಿಧಿಗೆ,
ಶ್ರೀ ಕಾಮಾಕ್ಷೀ ಶಾರದಾಪೀಠ
ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು - 572120, ತುಮಕೂರು ಜಿಲ್ಲೆ

|| ಹರ ನಮ: ಪಾರ್ವತೀ ಪತಯೇ ಹರಹರ ಮಹಾದೇವ ||

॥ ಓಂ ಶ್ರೀ ಮಹಾಗಣಪತಯೇ ನಮ: ॥







ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯಚ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನುವೇ ॥

ದಿನಾಂಕ : 27.08.2003

ಮ॥ ರಾ॥ ಶ್ರೀ ಕೇಶವಮೂರ್ತಿಗಳವರಿಗೆ,
4ನೇ ಮಂತ್ರಾಲಯ, ಪುಣ್ಯಸ್ಥಳ ಬಸವಾಪಟ್ಟಣ,
ಚೆನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

ಮ॥ ರಾ॥ ಕೇಶವಮೂರ್ತಿಗಳವರಿಗೆ ಬೆಂಗಳೂರಿನ ರಾಜಾಜಿನಗರದಲ್ಲಿ ವಾಸಿಸುತ್ತಿರುವ ಎನ್.ಆರ್.ನಂಜುಂಡಯ್ಯನವರ ನಮಸ್ಕಾರಗಳು. ನಮ್ಮ ಗುರುಗಳ ಅನುಗ್ರಹದಿಂದ ನಾವು ಕ್ಷೇಮ. ಅಲ್ಲಿ ತಮ್ಮೆಲ್ಲರ ಕ್ಷೇಮಾತಿಶಯಂಗಳಿಗೆ ಪತ್ರ ನಿರೀಕ್ಷಿಸುತ್ತೇನೆ.

ಗುರೂಜಿಯವರು ಕಣ್ಮರೆಯಾದ ನಂತರ ಒಂದೆರಡು ಸಲ ತಮ್ಮನ್ನು ಭೇಟಿಯಾಗಿದ್ದೆ. ಕಡೆಯ ಸಲ (15 ದಿನಗಳು ಮುಂಚೆ) ಗುರುಗಳ ದರ್ಶನ ಪಡೆದಾಗ ಆರೋಗ್ಯ ಮತ್ತು ಭಗವಂತನ ಚಿಂತನೆಗಳನ್ನು ಅವರಲ್ಲಿ ಕೇಳಿಕೊಂಡಿದ್ದೆ. ಗುರುಗಳು ತಕ್ಕಮಟ್ಟಿಗೆ ಆರೋಗ್ಯವನ್ನು ಅನುಗ್ರಹಿಸಿದ್ದಾರೆ. ಅವರು ಕಣ್ಮರೆಯಾದಂದಿನಿಂದ ಅವರ ಅಂತಃಪ್ರೇರಣೆಯಂತೆ ಕನ್ನಡದಲ್ಲಿ ಋಗ್ವೇದ ಪರಿಚಯ ಎಂಬ ಗ್ರಂಥದಿಂದ ದೇವತೆಗಳು ಎಂಬ ಹೆಸರಿನಲ್ಲಿ ಒಂದೊಂದು ದೇವತೆಗಳ ವಿಚಾರವನ್ನು ಮೂರು ವಿಭಾಗಗಳಾಗಿ ವಿಭಜಿಸಿ (1) ದೇವತಾ ಪ್ರಾರ್ಥನೆಗಳು (2) ಆ ದೇವತೆಗಳಿಗೆ ಆಶ್ರಮಗಳಲ್ಲಿ, ದೇವಸ್ಥಾನದಲ್ಲಿ ನಡೆಸುತ್ತಿದ್ದ ಕಾರ್ಯಕ್ರಮಗಳು (3) ದೇವತೆಗಳಿಂದ ಋಷಿಗಳು, ಮುನಿಗಳು, ಯಾಜ್ಞಿಕರು, ಋತ್ವಿಜರು, ಋಷಿಗಳು, ಜನತೆ, ಮುನಿಗಳು ಪಡೆದುಕೊಂಡು ನಾನಾ ಪ್ರಯೋಜನಗಳು ಎಂದು ವಿಂಗಡಿಸಿ ವೇದದಿಂದ ದೇವತೆಗಳು ಎಂಬುದಾಗಿ ಪರಿವರ್ತಿಸಿರುತ್ತೇನೆ.

ಸಂಸ್ಕೃತ ಅಥವಾ ವೇದಮಂತ್ರಗಳು ಬಾರದ ವೇದ ವಿಚಾರವನ್ನು ತಿಳಿಯ ಬಯಸುವ ಆಸ್ತಿಕ ವೇದಾಭಿಮಾನಿಗಳಿಗೆ ಋಗ್ವೇದದಲ್ಲಿ ಏನಿದೆ ಎಂಬುವುದರ ಪರಿಚಯ ಇದು. ಜೊತೆಯಲ್ಲಿ ಬಂದ ಬೇರೆ ಬೇರೆ ದೇವತೆಗಳ ವಿಚಾರವು ಅಲ್ಲಲ್ಲಿ ಇದೆ.

| | |
|---|---|
| ದೇವತೆಗಳು | ಪ್ರಥಮ ಕರಡು ಪ್ರತಿ ಪವಮಾನ ಇತರೆ ದೇವತೆಗಳು |
| ಋಷಿಗಳ ಅಮೃತವಾಣಿ | ಎರಡನೆಯ ಕರಡು ಪ್ರತಿ ಅಗ್ನಿ ಮತ್ತು ಇತರೆ ದೇವತೆಗಳು |
| ಋಗ್ವೇದ ದಿಂದ ಪರಿಚಯ | ಮೂರನೆಯ ಕರಡು ಪ್ರತಿ ಇಂದ್ರ ಮತ್ತು ಇತರೆ ದೇವತೆಗಳು |

ಗುರುಗಳ ಪ್ರತಿನಿಧಿಗಳಾದ ತಮಗೆ ಈ ಮೇಲಿನ ಮೂರು ಪುಸ್ತಕಗಳನ್ನು ಕಳುಹಿಸುತ್ತಿದ್ದೇನೆ. ದಯಮಾಡಿ ಒಂದು ಸಲ ನೋಡಿ ಗುರುಗಳ ಪರವಾಗಿ ಆಶೀರ್ವದಿಸಬೇಕೆಂದು ಬೇಡುತ್ತೇನೆ. ತಮ್ಮ ಅಭಿಪ್ರಾಯವನ್ನು ನಿರೀಕ್ಷಿಸುತ್ತಿರುತ್ತೇನೆ.

ಗೌರವ ನಮಸ್ಕಾರಗಳೊಂದಿಗೆ,

ಇಂತಿ ಸಾಷ್ಟಾಂಗ ನಮಸ್ಕಾರಗಳು
(ಎನ್.ಆರ್.ನಂಜುಂಡಯ್ಯ)
96/ಬಿ, 37ನೇ ಅಡ್ಡರಸ್ತೆ, 2ನೇ ಬ್ಲಾಕ್,
10ನೇ ಮುಖ್ಯರಸ್ತೆ, ರಾಜಾಜಿನಗರ,
ಬೆಂಗಳೂರು - 560010.

**ಋಗ್ವೇದ ಪರಿಚಯ ಗ್ರಂಥದಿಂದ ಮೇಲಿನ ವಿಚಾರಗಳನ್ನು ತೆಗೆಯಲಾಗಿದೆ**

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

॥ ಓಂ ಶ್ರೀ ಮಹಾಗಣಪತಯೇ ನಮ: ॥



ವೇದ: ಶಿವ: ಶಿವೋವೇದೋ ವೇದಾಧ್ಯಾಯಿ ಸದಾಶಿವ : ।
ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

**ವೇ॥ ಬ್ರ॥ ಶ್ರೀ ॥ ಸತ್ಯನಾರಾಯಣ ಶಾಸ್ತ್ರಿಗಳು, (ಗಣಿ)**
ಪ್ರಧಾನ ಅರ್ಚಕರು (ಆರ್ಯಭಟ ಪ್ರಶಸ್ತಿ ವಿಜೇತರು),
ಮಹಾಗಣಪತಿ ದೇವಸ್ಥಾನ, ದೇವಸ್ಥಾನ ರಸ್ತೆ
ಮಲ್ಲೇಶ್ವರಂ, ಬೆಂಗಳೂರು - 560003.

ವೇ॥ ಬ್ರ॥ ಶ್ರೀ ॥ ಸತ್ಯನಾರಾಯಣ ಶಾಸ್ತ್ರಿಗಳಿಗೆ ರಾಜಾಜಿನಗರ ನಿವಾಸಿ ವಿಶ್ವಾಮಿತ್ರ ಗೋತ್ರದ ವೈದಿಕ ಪರಂಪರೆಯ ಎನ್.ಆರ್.ನಂಜುಂಡಯ್ಯ ಎಂಬ ವೇದಾಭಿಮಾನಿಯ ನಮಸ್ಕಾರಗಳು.

ನಾನು ದಸರಾ 1944ರಿಂದ ಬೆಂಗಳೂರು ಮಲ್ಲೇಶ್ವರಂ, ಸಂಪಿಗೆ ರಸ್ತೆ, ರಾಜಾ ಮಿಲ್‌ನಲ್ಲಿ ಕೆಲಸದಲ್ಲಿ ಇದ್ದು 16.08.1981ರಲ್ಲಿ ನಿವೃತ್ತನಾದೆ. ನಂತರ 10 ವರುಷಗಳ ಕಾಲ ಅಂಗಡಿಯೊಂದರಲ್ಲಿ ಕೆಲಸ ಮಾಡಿ 1992ರಿಂದ ಪೂರ್ಣ ನಿವೃತ್ತಿ ಜೀವನ ಮಾಡುತ್ತಿದ್ದೇನೆ. ಆಗ ದಿನವೂ ಪುರಾಣಗಳು, ಹರಿಕಥೆಗಳು, ಪ್ರವಚನಗಳು ಮುಂತಾದವುಗಳನ್ನು ಕೇಳುತ್ತಾ ಬೇರೆ ಸಮಯದಲ್ಲಿ ಆಧ್ಯಾತ್ಮಿಕ ಪುಸ್ತಕಗಳಾದ ರಾಮಾಯಣ, ಮಹಾಭಾರತ, ಭಾಗವತ, ಭಗವದ್ಗೀತೆಗಳನ್ನು ಓದುತ್ತಾ ಬಂದಿದ್ದೇನೆ.

10ನೇ ವಯಸ್ಸಿಗೆ ಉಪನಯನವಾದ ಕೂಡಲೇ ನಮ್ಮ ತಂದೆಯವರು ಸಂಧ್ಯಾವಂದನೆ, ದೇವತಾರ್ಚನೆ, ರುದ್ರ, ಚಮೆ, ಪುರುಷಸೂಕ್ತ, ಮಂತ್ರಪುಷ್ಪ ಮುಂತಾದ ಮಂತ್ರಗಳನ್ನು ಕಲಿಸಿದ್ದರು. ವೇದದ ಬಗ್ಗೆ ತಿಳಿಯಬೇಕೆಂಬ ಹಂಬಲ ಹೃದಯಾಂತರಾಳದಲ್ಲಿತ್ತು. ಇದೇ ಸಮಯದಲ್ಲಿ (1997) ಶ್ರೀ ಸೂರ್ಯನಾರಾಯಣರವರು **"ಋಗ್ವೇದ ಪರಿಚಯ"** ಎಂಬ ಪುಸ್ತಕಗಳನ್ನು ತಂದುಕೊಟ್ಟರು. ಅದನ್ನು ಓದುತ್ತಾ ಬಂದು ಅದರಲ್ಲಿ ತಲ್ಲೀನನಾದೆ. ನಂತರ ಮಂತ್ರ, ಅರ್ಥ ರೂಪದಿಂದ ಒಂದರಿಂದ ಸಾವಿರದ ಇಪ್ಪತ್ತೆಂಟು ಸೂಕ್ತಗಳವರೆಗೆ ಓದಿ ಒಂದು ಹೊಸ ರೀತಿಯಲ್ಲಿ ಅದೇ ವಿಚಾರಗಳನ್ನು ಪರಿವರ್ತಿಸಲು ಪ್ರಾರಂಭಿಸಿದೆ. ಅದೇ **"ದೇವತೆಗಳು ಋಷಿಗಳ ಅಮೃತವಾಣಿ" (ಋಗ್ವೇದದಿಂದ ಪರಿಚಯ)**

ಎ) ದೇವತೆಗಳ ಸ್ತೋತ್ರ ವಿಭಾಗಗಳು
ಬಿ) ದೇವತೆಗಳಿಗಾಗಿ ಮಾಡಿದ ಕಾರ್ಯಕ್ರಮಗಳು
ಸಿ) ದೇವತೆಗಳಲ್ಲಿ ಮಾಡಿಕೊಂಡ ನಾನಾ ಪ್ರಾರ್ಥನೆಗಳು

<u>ಮೊದಲನೆಯ ಭಾಗ</u> ಆಶ್ವಲಾಯನ ಸೂತ್ರ

**1) ಪವಮಾನ ಸೋಮ, 2) ವಿಶ್ವೇ ದೇವತೆಗಳು, 3) ಅಶ್ವಿನಿ ದೇವತೆಗಳು, 5) ಮರುತ್ ದೇವತೆಗಳು 5) ಆದಿತ್ಯ, 6) ಸೂರ್ಯ 7) ಸವಿತೃ 8) ಮಿತ್ರ ವರುಣರು 9) ವರುಣರು ಮತ್ತು 10) ಉಷೋ ದೇವಿಯರು.**

**<u>ಎರಡನೆಯ ಭಾಗ</u> : - 1) ಅಗ್ನಿ ದೇವರು ಮತ್ತು 2) ವಾಯು ಸೋಮರು**

<u>ಮೂರನೆಯ ಭಾಗ</u> : ಇಂದ್ರ ಮತ್ತಿತರ ದೇವತೆಗಳು. ಸರಸ್ವತಿ ನದೀ, ಪರ್ಜನ್ಯ, ದ್ಯಾವಾ ಪೃಥ್ವಿ, ಅಬ್ ದೇವತೆ, ಇಂದ್ರಾಣಿ, ಅರಣ್ಯ, ಗೋವು, ತ್ವಷ್ಟ, ಪೂಷನ್, ಜ್ಞಾನ ದೇವತೆ, ಬ್ರಹ್ಮಣಸ್ಪತಿ, ಬ್ರಹಸ್ಪತಿ, ರುದ್ರರು
ಋಭುಗಳು, ಮನ್ಯು, ಓಷಧಿ, ಋತು, ವಾಕ್, ವಾಸ್ತೋಷ್ಪತಿ, ವಾಚಸ್ಪತಿ, ವಾಗಂಭ್ರಣಿ, ರಾತ್ರಿ, ವೇನ, ಸುಪರ್ಣ, ದಧಿಕ್ರಾ, ಹಿರಣ್ಯ ಗರ್ಭ, ಬಾವವೃತ್ತ ಲಿಂಗೋಕ್ತ, ಶಕಟ, ನಿಋತಿ, ದ್ಯೂತ, ದು:ಸ್ವಪ್ನ, ಅಲಕ್ಷ್ಮಿ, ಪಿತರ ದೇವತೆಗಳು, ಶರಣ್ಯು, ಯಮ-ಯಮೀ, ಮೃತ್ಯುದಾತ, ಯಜಮಾನ, ಜಮದಗ್ನಿ ಭಾರ್ಗವರು, ನಚಿಕೇತ ಯಮ, ರಾಜನಿಂದ ರೈತನವರೆಗೆ ಪ್ರಶಂಸೆಗಳು, ಅಶ್ವಸ್ತುತಿ, ದಾನದ ಸ್ತುತಿ ಮಹಿಮೆಗಳು, ವಿಶ್ವಕರ್ಮ, ಗ್ರಾವಗಳು, ಪುರುಷ, ಸೂರ್ಯ, ಊರ್ವಸಿ, ಯಾಜ್ಞಿಕರಿಂದ ರೋಗಪರಿಹಾರ. ಇಷ್ಟೂ ಋಗ್ವೇದದಿಂದ ಸಂಗ್ರಹಿಸಿ ಮಾಹಿತಿ ಒದಗಿಸಲಾಗಿದೆ.

ಗ್ರಂಥಕರ್ತರನ್ನು ಆಗಾಗ ಭೇಟಿಮಾಡಿ ಅವರೊಂದಿಗೆ ಚರ್ಚಿಸಿ, ಸಮಲೋಚಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಇದು ಮಲ್ಲೇಶ್ವರಂ ಮಹಾಗಣಪತಿ, ಸರಸ್ವತಿ ಮತ್ತು ಗುರುವರ್ಯರುಗಳ ಅನುಗ್ರಹ, ಆಶೀರ್ವಾದದಿಂದ ಆಗಿದೆ.

ಇದರ ಪ್ರತಿ ಒಂದನ್ನು ತಮಗೆ ತಲುಪಿಸುತ್ತಿದ್ದೇನೆ.

ಇಂತಿ ನಮಸ್ಕಾರಗಳು,

ದಿನಾಂಕ: (ಎನ್.ಆರ್. ನಂಜುಂಡಯ್ಯ

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥



॥ ಓಂ ಶ್ರೀ ಮಹಾಗಣಪತಯೇ ನಮಃ ॥

# ದೇವತೆಗಳು ಋಷಿಗಳ ಅಮೃತವಾಣಿ

## ಋಗ್ವೇದ ದಿಂದ ಪರಿಚಯ

## ಪ್ರಥಮ ಪ್ರತಿ ಪವಮಾನ ಇತರೇ ದೇವತೆಗಳು



ಋಗ್ವೇದದಿಂದ ದೇವತೆಗಳೆಡೆಗೆ ಋಷಿಗಳ ಅಮೃತವಾಣಿ ಎಂಬ ಹೆಸರಿನಲ್ಲಿ ಈ ಪ್ರಥಮ ಭಾಗವನ್ನು ಕೆಳಕಂಡಂತೆ ಹತ್ತು ದೇವತೆಗಳ ವಿಚಾರಗಳೊಂದಿಗೆ (ಸ್ತೋತ್ರಗಳು, ಆಶ್ರಮದಲ್ಲಿನ ವಿಚಾರಗಳು, ವೇದದ ಕಾಲದಲ್ಲಿ ಇದ್ದ ತೊಂದರೆಗಳು, ಅವಶ್ಯಕತೆಗಳು, ಪ್ರಾರ್ಥನೆಯ ರೂಪದಲ್ಲಿ ಹೊರತೆಗೆಯಲಾಗಿದೆ)



ಸ್ತೋತ್ರಗಳು – 14 ಪುಟ ; ಆಶ್ರಮ – 5 ಪುಟ ; ಪ್ರಾರ್ಥನೆಗಳು – 9 ಪುಟ ; ಒಟ್ಟು – 28 ಪುಟಗಳು

ಈ ಹತ್ತು ದೇವತೆಗಳ ಋಷಿವಾಣಿಯನ್ನು ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಗ್ರಂಥಕರ್ತರ ಅಪ್ಪಣೆ, ಸಲಹೆಗಳೊಂದಿಗೆ ಹಾಗೂ ಗುರು–ಹಿರಿಯರ ಅನುಗ್ರಹ ಆಶೀರ್ವಾದಗಳೊಂದಿಗೆ ತಯಾರಿಸಿರುತ್ತೇನೆ.

ದಿನಾಂಕ : 01.11.2001 ಎನ್.ಆರ್. ನಂಜುಂಡಯ್ಯ

॥ ಓಂ ಶ್ರೀ ಮಹಾಗಣಾಧಿಪತಾಯೇ ನಮಃ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ, ಗರುಡ
ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮಃ

ಯೋ ವೇದಾ ದೌಸ್ವರಃ ಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ।
ತಸ್ಯ ಪ್ರಕೃತಿ ಲೀನಸ್ಯ ಯಃ ಪರಮೇಶ್ವರಃ ॥

ವೇದಃ ಶಿವಃ ಶಿವೋ ವೇದೋ ವೇದಾದ್ಯಾಯಿ ಸದಾಶಿವಃ।
ತಸ್ಮಾತ್ ಸರ್ವ ಪ್ರಯತ್ನೇನಾ ವೇದ ಮೇವ ಸದಾ ಜಪೇತ್ ॥

ಋಗ್ವೇದ ದಂಸ್ಕಾರರು
ಇಂದ್ರ / ಅಗ್ನಿ / ಶ್ರೀಮನ್ ನಾರಾಯಣ

ಹಿಂದಿನ, ಇಂದಿನ, ಮುಂದೆ ಬರುವ ಎಲ್ಲಾ ಋಷಿಗಳಿಗೆ ಮುನಿಗಳಿಗೆ / ಯಾಜ್ಞಿಕರಿಗೆ
ಬೇರೆ ವಿದ್ವಾಂಸರಿಗೆ ಅವರ ಸಹಾಯಕರಿಗೆ ನಮ್ಮ ನಮಸ್ಕಾರಗಳು

# ಮರುತ್ ದೇವತೆಗಳು

ಒಬ್ಬೊಬ್ಬ ಋಷಿಗಳು
ಒಬ್ಬೊಬ್ಬ ದೇವತೆಯನ್ನು ಹೊಗಳಿರುವುದು, ವರ್ಣನೆ, ವಿಶೇಷ ಸಮಾಚಾರಗಳು

1. ರಾಕ್ಷಸರ ಅಥವಾ ದುಷ್ಟರ ನಿಗ್ರಹ ಮಾಡಿರುವುದು ಇತ್ಯಾದಿ
2. ಆಶ್ರಮದಲ್ಲಿ ಋಷಿಗಳು, ಯಜಮಾನರು, ಯಾಜ್ಞಕರು, ಋತ್ವಿಜರು ಏನೇನು ಕಾರ್ಯಗಳನ್ನು ಮಾಡುತ್ತಿದ್ದರು.
3. ಋಷಿಗಳು ಅವರ ಅನುಯಾಯಿಗಳು ಆ ಕಾಲದಲ್ಲಿ ಏನೇನು ದಾನಗಳನ್ನು ಮಾಡಿದ್ದಾರೆ ಹಾಗೂ ತೊಂದರೆಗಳನ್ನು ಎದುರಿಸಿದ್ದಾರೆ ಅನುಕೂಲತೆಗಳನ್ನು ಪಡೆದಿದ್ದಾರೆ ಅವುಗಳ ಬಗ್ಗೆ ವಿವರಗಳು

ರಾಜಾಜಿನಗರ ದಿನಾಂಕ : 31.01.2001 (ಎನ್.ಆರ್.ನಂಜುಂಡಯ್ಯ)

## ಮರುತ್ ದೇವತೆಗಳು :

ಕಣ್ವರು :

ಸ್ವರ್ಗದ ಗೋವಿನ ಹಾಲಿನಿಂದ ಉತ್ಪನ್ನರಾದವರು. ಇವರ ರಥ ಜಿಂಕೆಯದು. ಹೆಣ್ಣು ಜಿಂಕೆಯ ರಥ. ಚಾವಟಿ ಧ್ವನಿಗೆ ಅದು ಇತರರಿಗೆ ಶೌರ್ಯ ಪ್ರೋತ್ಸಾಹ ತರುತ್ತದೆ. ಪರ್ವತ ಭೂಮಿಯನ್ನು ಅಲುಗಾಡಿಸುತ್ತಾರೆ. ಮೇಘಗಳು ಚಲಿಸಿ ಅಪ್ಪು ಮಳೆ ಸುರಿಯುವಂತೆ ಮಾಡುತ್ತಾರೆ. ನಮಗೆ ಹಸಿವೆಯಾಗಲು, ಮಾತನಾಡಲು ಆಗುವುದು ಇವರಿಂದಲೇ. ಸಕಲ ಪ್ರಾಣಿಗಳನ್ನು ಚೇತನಗೊಳಿಸಿ ಅವುಗಳ ಸ್ವರೂಪಕ್ಕೆ ತಕ್ಕ ವ್ಯವಹಾರ ಮಾಡಿಸುವವರು ಇವರೇ. ಇವರು ರುದ್ರ ಪುತ್ರರು. ಮಿಂಚು, ಮೇಘ, ಘರ್ಜನೆಗಳಿಂದ ಮರುಭೂಮಿಯಲ್ಲೂ ಮಳೆ ಸುರಿಸುತ್ತಾರೆ. ಇವರು ಎಲ್ಲಿದ್ದಾರೆ ಯಾರಿಗೂ ತಿಳಿಯದು. ಗುಣಗಾನ ಒಳ್ಳೆಯದು. ರಾಕ್ಷಸರು ಸಾಯುವಂತೆ ಮಾಡುತ್ತಾರೆ. ಇವರು 49 ಜನರಿದ್ದಾರೆ. ಇವರ ಎದುರಾಳಿಗಳೇ ಇಲ್ಲ. ಮೇರು ಹಿಮಗಿರಿಗಳನ್ನು ಕಂಪಿಸುತ್ತಾರೆ. ರಥದ ರಭಸಕ್ಕೆ ಮಾನವರು ಹೆದರುತ್ತಾರೆ. ಇವರ ಶಕ್ತಿ ಸಕಲ ಲೋಕಕ್ಕೂ ಹರಡುತ್ತದೆ. ಇವರು ಸ್ವತಃ ಶುದ್ಧರು ಹಾಗೂ ಇತರರನ್ನು ಶುದ್ಧಿ ಮಾಡುವವರೂ. ಸರ್ವಜ್ಞರು.

/8 ಅಸಾಧಾರಣ ತೇಜಸ್ಸುಳ್ಳವರು. ಹೊಂಬಣ್ಣದ ಕಿರೀಟಧಾರಿಗಳು. ವಿದ್ಯುತ್ ರೂಪದವರು. ಆಯುಧವುಳ್ಳವರು. ಘೃತದಿಂದ ಪುಷ್ಟರಾಗುವರು. ದಾನ ಶೀಲರು. ದ್ಯಾವಾ ಪೃಥ್ವಿಗಳನ್ನು ವೃಷ್ಟಿಯಿಂದ ತೋಯಿಸುವವರು. ವೃತ್ರಾಸುರ ವಧೆ ಕಾಲದಲ್ಲಿ ಇಂದ್ರನಿಗೆ ಸಹಾಯಕರಾಗಿದ್ದರು. ರಾಜಋಷಿಗಳಾದ ಶರ್ಯಾತಿ ಮತ್ತು ಯದು ಅವರನ್ನು ಧನಕಾಮಿ ಕಣ್ವರನ್ನು ರಕ್ಷಿಸಿದರು. ತ್ರಿತನನ್ನು ಯುದ್ಧಬಂಧನದಿಂದ ಬಿಡಿಸಿದರು. ಸೂರ್ಯನ ಸಂಚಾರಕ್ಕೆ ತೇಜೋಮಯ ಮಾರ್ಗವನ್ನು ನಿರ್ಮಿಸಿದರು. ತಮ್ಮ ಪ್ರಭೆಯಿಂದ ಜಗತ್ತನ್ನು ವ್ಯಾಪಿಸಿದರು. ಯಾರ ಪ್ರಭುತ್ವಕ್ಕೂ ಒಳಗಾಗದವರು. ವಾಯುವಿನೊಂದಿಗೆ ಅಂತರಿಕ್ಷದಲ್ಲಿ ಸಂಚರಿಸಿ ವೃಷ್ಟಿಯಿಂದ ದ್ಯಾವಾ ಪೃಥ್ವಿಗಳನ್ನು ನಡುಗಿಸಿದಂತೆಯೇ ಸ್ತುತಿ ಕರ್ತರನ್ನು ಹರ್ಷಗೊಳಿಸುತ್ತಾರೆ.

ಗಂಡು ಹೆಣ್ಣು ಜಿಂಕೆಗಳಿಂದ ಓಡಿಸುವ ರಥದಲ್ಲಿ ಅಂತರಿಕ್ಷದ ಮೇಲ್ಭಾಗದಲ್ಲಿ ಸುವರ್ಣ ಚಾವಟಿ ಹಿಡಿದು ಸಾಗುವಾಗ ಪರ್ವತಗಳೂ ದಾರಿ ಬಿಡುತ್ತವೆ.

ಪರ್ವತಗಳನ್ನು ಕಂಪಿಸಿ, ಕತ್ತರಿಸಿ, ಕುಗ್ಗಿಸಿ, ಸಮವಾಗಿ ನಡುಗುವಂತೆ ಮಾಡಿ ಅವುಗಳ ಮೇಲೆ ಪ್ರಭುತ್ವ ಮಾಡುತ್ತಾರೆ. ನದಿಗಳು ನಿರಂತರವಾಗಿ ಪ್ರವಾಹ ಹೊಂದುತ್ತವೆ. ಹೊಂಬಣ್ಣದ

ಆಭರಣದಿಂದ ಪ್ರಕಾಶಿಸುತ್ತಾರೆ. ಹವಿಸ್ಸು ಸೇವಿಸಿ ಕಾಂತಿಯುತರಾಗುತ್ತಾರೆ. ಇವರ ವೀಣಾ ನಾದ ಶಬ್ದದೊಂದಿಗೆ ಋಷಿಗಳ ಸ್ತುತಿ ಶಬ್ದವೂ ಸೇರಿ ಶೋಭಿಸುತ್ತದೆ. ಮರುತ್‌ಗಳಿಗೆ ಸಂಚಾರ ಮಾರ್ಗ ಅನುಕೂಲ ಮಾಡಿಕೊಡಲು, ದ್ಯುಲೋಕವು ಅಂತರಿಕ್ಷವನ್ನು ತ್ಯಜಿಸಿ ಇನ್ನೂ ಮೇಲೆ ಹೋಗುತ್ತದೆ. ಮರುತ್‌ಗಳ ಮಾತೃಭೂತರಾದ ಗೋವುಗಳು ಒಂದೇ ಜಾತಿಯದಾಗಿದ್ದು, ಸಮಾನ ಬಂಧುತ್ವ ಹೊಂದುವಂತೆ ಮರುತ್‌ಗಳು ಸಮಾನ ಬಂಧುತ್ವದಿಂದ ಒಟ್ಟಿಗೆ ವ್ಯಾಪಿಸಿದ್ದಾರೆ. ಇವರನ್ನು ಎದುರಿಸುವವರೇ ಇಲ್ಲವಾದ್ದರಿಂದ ಅವರನ್ನು ರಕ್ಷಿಸಿಕೊಳ್ಳುವ ವಿಚಾರವೇ ಇಲ್ಲ. ಹವಿಸ್ಸು ಹವಿರ್ದಾನ ಪೂಜಿಸುವವರನ್ನು ಸಂಪದಭರಿತರನ್ನಾಗಿ ಮಾಡುತ್ತಾರೆ. ಹವಿಸ್ಸು ಅರ್ಪಿಸುವವರು ಎಲ್ಲರೂ ಇವರ ಬಂಧುಗಳೇ. ಇವರ ರಕ್ಷಣೆಯಲ್ಲಿ ಇದ್ದವರೆಲ್ಲರೂ ಹಿಂದಿನ ದಿನಗಳಲ್ಲಿ ಧನವಂತರಾಗಿಯೇ ಇದ್ದರು. ತಗ್ಗು ಪ್ರದೇಶಕ್ಕೆ ಹರಿಯುವ ನೀರಿನಂತೆ ಅಧೋಮುಖ ದೃಷ್ಟಿಯುಳ್ಳವರು. ಭೂಲೋಕದ ಸಮಸ್ತ ಪ್ರಾಣಿಗಳು ಅಂತರಿಕ್ಷ, ಸ್ವರ್ಗ ಪ್ರಕಾಶದಿಂದ ಬೆಳೆಯುವಂತೆ ಮಾಡಿದರು. ದಶಾಪವಿತ್ರದಿಂದ ಪರಿಶೋಧಿತವಾಗಿ ದ್ರೋಣ ಕಳಶ, ಆಧವನೀಯ, ಪೂತಭೃತ ಪಾತ್ರೆಗಳಲ್ಲಿ ಮಂತ್ರ ಪುರಸ್ಸರವಾಗಿ ಹಿಂಡಲ್ಪಟ್ಟ ಹಾಲು ಮೊಸರಿನೊಂದಿಗೆ ಸೇರಿರುವ ಶುದ್ಧ ಸೋಮವನ್ನು ಸ್ನೇಹಿತ ಮಿತ್ರ, ದುಃಖ ನಿವಾರಕ, ವರುಣ, ಆರ್ಯಮರೂ ಸೇವಿಸುತ್ತಾರೆ.

/10 ರಶ್ಮಿ ಭಾರ್ಗವರು:

ಇವರು ಉತ್ತಮ ಋಷಿಗಳಂತೆ ಇದ್ದಾರೆ. ಅಗ್ನಿಯಂತೆ ತೇಜಸ್ವಿಗಳು, ವಾಯುವಿನಂತೆ ಸ್ವಯಂ ಪ್ರೇರಕರು, ತಗ್ಗಿನಲ್ಲಿ ಹರಿಯುವ ನೀರಿನಂತೆ ಗಮನ ಶೀಲರು ಅಶ್ವಗಳಂತೆ ಶೀಘ್ರ ಹಾಗೂ ದೂರಗಾಮಿಗಳು. ಉಷಸ್ಸಿನ ರಶ್ಮಿಯಂತೆ ಕಾಂತಿಯುತರು. ಕಲ್ಯಾಣಾತ್ಮಕ ಆಭರಣಗಳಿಂದ ಪ್ರಕಾಶಿಸುವವರು. ಎಲ್ಲರಲ್ಲೂ ಸಮಾನ ಬಂಧುತ್ವರೂ ಪಾಪ ರಹಿತರೂ ಉದಾರದಾನಿಗಳು, ಉತ್ತಮ ಸುಖಪ್ರದರು, ಶೀಘ್ರ ರಕ್ಷಕರು, ಶತ್ರುಗಳನ್ನು ಪ್ರಕಾಶಮಾನ ಆಯುಧಗಳಿಂದ ನಡುಗಿಸಿ ನಾಶ ಮಾಡುತ್ತಾರೆ. ದ್ಯುಲೋಕ ಪುತ್ರರು. ಮಾನವ ರೂಪದಿಂದ ವೀರಪುರುಷರಂತೆ ಅಲಂಕೃತರು, ಶ್ಯೇನ ಪಕ್ಷಿಯಂತೆ ಉತ್ತಮ ಸಂಚಾರಿಗಳು. ಇವರನ್ನು ಬಹುಸಂಖ್ಯಾತ ಸೇನೆಯೂ ಸೋಲಿಸಲಾರದು.

ಗೌತಮರು :

ಚಿತ್ರ ವಿಚಿತ್ರ ಆಭರಣ ಆಯುಧಧಾರಿಗಳು, ಸ್ತೋತ್ರ ಮಾಡುವವರನ್ನು ಪ್ರಸನ್ನರಾಗಿ ನೋಡುತ್ತಾರೆ. ಪೂಜಿಸದವರನ್ನು ವಧಿಸುತ್ತಾರೆ. ಯಜ್ಞದಲ್ಲಿ ಇರಲು ಅರ್ಹರು. ಶತ್ರು ರೂಪದಲ್ಲಿರುವವರನ್ನು ಶೋಧಿಸಿ ದಮನ ಮಾಡುತ್ತಾರೆ. ಹವಿಸ್ಸಿನಿಂದ ಚುರುಕುಗೊಳ್ಳುತ್ತಾರೆ. ಸ್ತೋತ್ರಗಳಿಂದ ಸಂತೋಷಗೊಳ್ಳುತ್ತಾರೆ. ಸಂಪತ್ತುಗಳನ್ನು ಕರುಣಿಸುತ್ತಾರೆ. ಇವರ ರಥದ ವೇಗಕ್ಕೆ ಭೂಮಿ

ಅದರುತ್ತದೆ. ಗೌತಮರ ಪುತ್ರರಿಗಾಗಿ ಯಜ್ಞಕ್ಕೆ ಬಂದರು. ಇವರು ಯಜ್ಞ ಅಭಿವೃದ್ಧಿಕಾರಕರು.

ಅಗಸ್ತ್ಯರು :

ಇವರು ಇಂದ್ರನಷ್ಟೇ ಬಲಶಾಲಿಗಳು. ಇವರು ಸ್ವಸಾಮರ್ಥ್ಯದಿಂದಲೇ ಬಲಶಾಲಿಗಳಾದರು. ಇಂದ್ರನಿಗೆ ಸಹಾಯ ಮಾಡಿದ್ದರಿಂದ ಇಂದ್ರನನ್ನು ಜೊತೆಯಲ್ಲಿಯೇ ಹವಿಸ್ಸನ್ನು ಸ್ವೀಕರಿಸುತ್ತಾರೆ. ಶಕ್ತಿಯನ್ನು ಪ್ರದರ್ಶಿಸುತ್ತಾರೆ. ವೃತ್ರಾಸುರನ ವಧೆಯ ಕಾಲದಲ್ಲಿ ಮರುತ್‌ಗಳು ಇಂದ್ರನಿಗೆ ಸಹಾಯ ಮಾಡಿ ಶಕ್ತಿ ಪ್ರದರ್ಶಿಸಿದರು. ವೃಷ್ಟಿ ಪ್ರಧಾನಕ್ಕಾಗಿ ಲೋಕವೆಲ್ಲಾ ಸಂಚರಿಸುತ್ತಾರೆ. ಮಹಾ ಬಲಿಷ್ಠರಾದರೂ ಯಜಮಾನರನ್ನು ಪೀಡಿಸುವುದಿಲ್ಲ. ಸುವರ್ಣ ಆಭರಣ ಕಾಂತಿಯುತರು. ಯಾನದಲ್ಲಿ ಇಂದ್ರನನ್ನು ಏರಿಸಿ ಭೂಮಿಗೆ ವೃಷ್ಟಿ ತರುತ್ತಾರೆ. ವಿದ್ಯುತ್ ಆಯುಧದಿಂದ ಪ್ರಾಣಿಗಳನ್ನು ಸೀಳುವ ಸಾಮರ್ಥ್ಯವುಳ್ಳವರು. ಇವರ ಆಗಮನವನ್ನು ಪರ್ವತಗಳು ಪ್ರತಿಧ್ವನಿಸುತ್ತವೆ. ಇವರ ಶಕ್ತಿಯನ್ನು ಹತ್ತಿರದಿಂದಲಾಗಲೀ ದೂರದಿಂದಲಾಗಲೀ ತಿಳಿಯಲು ಸಾಧ್ಯವಿಲ್ಲ. ಸ್ವಸಾಮರ್ಥ್ಯದಿಂದ ದ್ವೇಷಿಗಳನ್ನು ವಶಪಡಿಸಿಕೊಳ್ಳುತ್ತಾರೆ. ಸಮುದ್ರದ ಎದುರು ದಂಡೆಯಲ್ಲಿರುವ ಧನವನ್ನೂ ತರಬಲ್ಲರು. ರೋದಸಿಯು ಇವರ ರಥವನ್ನೇರುತ್ತಾರೆ. ಇವರು ಮಳೆಗರೆಯುತ್ತಾರೆ. ಹೊಗಳುವಿಕೆಯಿಂದ ತೃಪ್ತರಾಗುತ್ತಾರೆ. ಪೃಶ್ನಿ ದೇವಿಯಲ್ಲಿ ಮರುತ್‌ಗಳ ಸೃಷ್ಟಿಯಾಯಿತು. ಅಮೂರ್ತರಾದರೂ ಮೂರ್ತರಂತೆ ಇರುತ್ತಾರೆ. ನೀರಿನ ಅಲೆಗಳಂತೆ ಅಸಂಖ್ಯಾತರು. ದೃಢ ಪರ್ವತವನ್ನು ಚಲಿಸುವಂತೆ ಮಾಡುತ್ತಾರೆ. ಅನಾಯಾಸವಾಗಿ ದೇವಲೋಕಕ್ಕೆ ಹೋಗುತ್ತಾರೆ. ದೇವತೆಗಳ ಉಪಕಾರಕ್ಕಾಗಿ ಸಹಾಯವನ್ನೂ ಮಾಡುತ್ತಾರೆ. ಉಷೋದಯದಲ್ಲಿ ಪ್ರಾಣಿಗಳನ್ನು ವ್ಯಾಪಾರಕ್ಕೆ ಪ್ರೇರಿಸುತ್ತಾರೆ. ಎದುರು ನಿಲ್ಲಲಾರದೆ ಬಲಾಢ್ಯರೂ ಓಡಿಹೋಗುತ್ತಾರೆ. ಶುಭದಾನಿಗಳು. ಸುಂದರ ಪ್ರಕಾರವುಳ್ಳವರು. ಇವರ ಆಕರ್ಷಕ ಆಗಮನವು ಇಷ್ಟಾರ್ಥವನ್ನು ನೀಡುತ್ತದೆ.

ಗೃತ್ಸಮದರು :

ಮರುತ್‌ಗಳು ಕಟಕಾದಿ ಸುವರ್ಣ ಆಭರಣಯುಕ್ತರು. ಭಯಂಕರ ರೂಪಿಗಳಾಗಿ ಸ್ಥಿರ ವೃಕ್ಷಗಳನ್ನು ಚಲಿಸುವಂತೆ ಮಾಡುತ್ತಾರೆ. ಇವರು ರುದ್ರ ಪುತ್ರರು. ಶ್ರೇಷ್ಠ ದಾನಿಗಳು. ಮೇಘದಲ್ಲಿ ನುಗ್ಗಿ ಸಂಚರಿಸಿ ವಿದ್ಯುತ್ತನ್ನು ಆಗತ್ಯವಾದ ವೃಷ್ಟಿ ಉದಕವನ್ನೂ ಸುರಿಸುವರು. ಇಂದ್ರ ಸಮಾನ ಮನಸ್ಸಿನಿಂದ ಹವಿಸ್ಸನ್ನು ಅರ್ಪಿಸುವವರಿಗೆ ನಾಶರಹಿತ ಉದಕ ಹಾಗೂ ಧನ ಕೊಡುತ್ತಾರೆ. ತಾಯಿ ಪೃಶ್ನಿ ಸಹಿತರಾಗಿ ಶಸ್ತ್ರಾಯುಧ ಧರಿಸಿ ಬರುತ್ತಾರೆ. ಕ್ರೂರ ತೋಳಗಳಂತಹ ಅಸುರ ಶತ್ರುಗಳಿಂದ ಯಜಮಾನರನ್ನು ರಕ್ಷಿಸುತ್ತಾರೆ. ತ್ರಿತ ಋಷಿಯನ್ನು ಹಿಂಸಕರಿಂದ ರಕ್ಷಿಸಿದ್ದಾರೆ. ಅಂಗೀರಾ ರೂಪದಲ್ಲಿ ಅಗ್ನಿಗಿಂತಲೂ ಮುಂಚೆಯೇ

ಮಾಡುತ್ತಾರೆ. ಪೃಥ್ವಿ, ಅಂತರಿಕ್ಷ, ಪರ್ವತಗಳಲ್ಲಿ ಸಂಚರಿಸುತ್ತಾ ಮೇಘ ಕಂಪಿಸಿ ಮಳೆ ಸುರಿವಂತೆ ಮಾಡುತ್ತಾರೆ. ಇವರ ಅನುಗ್ರಹ ಪಡೆದವರು ಯಾರೂ ತೊಂದರೆಗೆ ಒಳಗಾಗುವುದಿಲ್ಲ. ರಾಜನನ್ನು ಧನಯುತನನ್ನಾಗಿ ಯಜಮಾನರುಗಳಿಗೆ ಅಶ್ವ, ಗೋವು, ಅನ್ನಾದಿಗಳನ್ನು ಕೊಡಿಸುತ್ತಾರೆ. ವೇಗವಾದ ಅಶ್ವಗಳೊಂದಿಗೆ ಯಜ್ಞಭೂಮಿಗೆ ಬರುತ್ತಾರೆ.

ಇವರು ಒಟ್ಟಿಗೆ ಉತ್ಪನ್ನರಾದವರು. ಸೌಂದರ್ಯವಂತರು. ಒಟ್ಟಿಗೆ ವೃಷ್ಟಿ ಸುರಿಸುವವರು. ಪ್ರಕಾಶಮಾನ ಆಯುಧ ಧರಿಸಿರುವವರು, ಹಾರ ಧರಿಸಿರುವವರು. ಯಜ್ಞ ಕರ್ತರಾಗಲೀ ಇತರ ಯಾರ ಸಹಾಯವಿಲ್ಲದೆ ತಮಗೆ ತೋಚಿದಂತೆ ಸರ್ವತ್ರ ವೃದ್ಧಿಸುತ್ತಾರೆ. ಸೂರ್ಯ ರಶ್ಮಿಗಳಂತೆ, ಪ್ರಕಾಶಿಸುತ್ತಾ ಮೇಘದಿಂದ ಮಳೆ ಸುರಿಸುತ್ತಾರೆ. ಚುಕ್ಕೆಗಳಿಂದ ಕೂಡಿದ ಸಾರಂಗ, ಹೂಡಿದ ಸುಖ ಸುಂದರ ರಥದಲ್ಲಿ ಸುವರ್ಣ ಕವಚ ಧಾರಿಗಳಾಗಿ ಶತ್ರುಗಳನ್ನು ಹೊಡೆದೋಡಿಸುತ್ತಾರೆ. ಪರ್ವತ, ನದಿ ಯಾವುದರಿಂದಲೂ ತಡೆಯಿಲ್ಲದೆ ಯಾವ ಪೃಥ್ವಿಗಳಲ್ಲಿ ಸಂಚರಿಸುತ್ತಾ ಇಚ್ಛಿಸಿದ ಪ್ರದೇಶಕ್ಕೆ ಹೋಗುತ್ತಾರೆ. ಅವರಿಗೆ ಅರ್ಪಿಸಿದ ಸ್ತುತಿಗಳನ್ನು ತಿಳಿಯುತ್ತಾರೆ. ಆಭರಣಾಲಂಕೃತರು ಅವರ ಬಲ ಅಪ್ರತಿಹತವಾದದು. ಭಯಂಕರ ರೂಪದಿಂದ ತಮ್ಮ ಬಲದಿಂದ ಶತ್ರುಗಳನ್ನು ಹಿಂಸಿಸುತ್ತಾರೆ. ವಾಗ್ದೇವಿಯು ದಿವ್ಯವಾಗಿ ಉತ್ಪನ್ನಳು, ಮಂಗಳ ಸ್ವರೂಪಿಣಿ, ಮರುತ್ತಗಳ ಮಾತೆ ಅಥವಾ ಮಾಧ್ಯಮಿಕ ಉದಕ ತುಂಬಿದ ರಥದಲ್ಲಿ ಸ್ಥಿತಳಾಗಿದ್ದಾಳೆ.

ಮರುತ್ತಗಳೊಡನೆ ಪೂಜ್ಯಳಾಗಿದ್ದಾಳೆ. ಒಬ್ಬರೊಗೊಬ್ಬರು ಹೋಲಿಕೆವುಳ್ಳವರು. ಪ್ರಭೂತ ಧನವುಳ್ಳವರು. ಮೇಧಾವಿಗಳು. ನಿತ್ಯ ತರುಣರು. ಉತ್ತಮ ವೇಗದ ಸ್ವಯಂ ಪ್ರೇರಿತ ಸಂಚಾರ ಸ್ವಭಾವದವರು. ಧನ ದಾನ ಮಾಡುವವರು, ಅಹಸ್ಸಿನಂತೆ ಒಂದೇ ಸಮನೆ ಆವಿರ್ಭವಿಸುತ್ತಾರೆ. ವೃಕ್ಷ ಸಮೂಹವು ಹಿಂಸಿತವಾಗುತ್ತದೆ. ಲೌಕಿಕ ಪತಿ ಪತ್ನಿಯಲ್ಲಿ ಗರ್ಭ ಸ್ಥಾಪಿಸುವಂತೆ ಮರುತ್‌ಗಳು ಗರ್ಭರೂಪಿ ಉದಕವನ್ನು ಫಲವತ್ತಾದ ಭೂಮಿಯಲ್ಲಿ ಸ್ಥಾಪಿಸುತ್ತಾರೆ. ದ್ಯಾವಾ ಪೃಥ್ವಿಗಳ ನಡುವೆ ಸಂಚರಿಸುತ್ತಾ ಸ್ತುತಿ ಸ್ವೀಕರಿಸುತ್ತಾರೆ. ಇವರಲ್ಲಿ ದೊಡ್ಡವರಿಲ್ಲ, ಚಿಕ್ಕವರಿಲ್ಲ, ಎಲ್ಲರೂ ಎಲ್ಲದರಲ್ಲಿಯೂ ಸಮಾನರು. ಸರ್ವನಾಶಕರೂ ಆಗಿದ್ದಾರೆ. ಪಕ್ಷಗಳನ್ನು ರಚಿಸಿಕೊಂಡು ಆಕಾಶವಲಯದ ಸುತ್ತಲೂ ಅಂತರಿಕ್ಷ ಸೀಮಾ ಪ್ರದೇಶದಲ್ಲಿ ಸಂಚರಿಸುತ್ತಾರೆ. ಎಲ್ಲರಿಗೂ ಗೋಚರವಾಗುವ ತೇಜಸ್ಸು ಹೊಂದಿದ್ದಾರೆ. ದೂರದಲ್ಲಿದ್ದರೂ ಕೇಳಿಸಲ್ಪಡುತ್ತಾರೆ. ಮೇಘದೊಂದಿಗೆ ಐಕ್ಯ ರೂಪದಲ್ಲಿದ್ದಾರೆ. ಭೂಮಿಯನ್ನು ಫಲವತ್ತಾಗಿ ಮಾಡಲು ವೃಷ್ಟಿ ಸುರಿಸುತ್ತಾರೆ. ಯಜ್ಞ ಯಾಗಾದಿಗಳು, ಶ್ರೇಯಸ್ಕರ ಎಂದು ತಿಳಿದಿದ್ದಾರೆ. ಅಲಂಕೃತ ರಥದಲ್ಲಿ ವಿಹಾರಕ್ಕೆ ಸಿದ್ಧರಾದ ತರುಣರಂತೆ ಸಂಚರಿಸುತ್ತಾರೆ.

ಅಗ್ನಿ, ಮರುತ್‌ಗಳಿಬ್ಬರೂ ಶಿಖರಕ್ಕಿಂತಲೂ ಉನ್ನತ ಪ್ರದೇಶದಲ್ಲಿ ವ್ಯವಹರಿಸುವವರು. ಯಜಮಾನನ ಹಿಂಸಕರನ್ನು ನಾಶಮಾಡುವವರು. ಸ್ತುತಿಗಳಿಂದ, ಪ್ರಶಂಸೆಗಳಿಂದ ಸೋಮಪಾನಗಳಿಂದ ಆದಿತ್ಯನಂತೆ ಪ್ರಕಾಶಿತರಾಗುತ್ತಾರೆ. ಮಾನವ ಹಿತಕಾರಿಗಳು. ಬಲರ್ಥ ಉತ್ಪನ್ನರಾದವರು, ಪಾಪ ರಹಿತರು, ಶತ್ರು ಹಿಂಸಕರು. ಯಜ್ಞಾರ್ಥ ಆಹ್ಲಾದಕರ ಧನವಂತರು. ಅನುಗ್ರಹ ಬುದ್ಧಿಯಿಂದ ಸ್ವರ್ಗಾದಿಗಳಿಗೆ ಒಯ್ಯುವವರು. ದೂರ ಪ್ರದೇಶದಿಂದ ಬರುವ ಶ್ರೇಷ್ಠರು. ಶತ್ರುಗಳನ್ನು ಭಯದಿಂದ ನಡುಗಿಸುತ್ತಾರೆ. ಯಜ್ಞಾದಿಗಳಲ್ಲಿ ಸ್ತುತಿ ಕೇಳುವವರಾಗಿದ್ದಾರೆ. ಗೋಮತಿ ನದಿ ತೀರದಲ್ಲಿ ದಾನ ಮಾಡುವವರಲ್ಲಿ ಹೆಸರಾಂತವರಾಗಿದ್ದಾರೆ. ದಾನದಲ್ಲಿ ವ್ಯತ್ಯಾಸ ಮಾಡದವರು.

ಇವರು ಪ್ರಶ್ನಿ ಪುತ್ರರು ಪರಸ್ಪರ ಪ್ರೀತಿ ಯುಳ್ಳವರು, ಮರಣ ಧರ್ಮ ರಹಿತರು. ಧನ ಸಂಪತ್ತಿಗೆ ಖ್ಯಾತಿಯುಳ್ಳವರು. ಇವರು ಇಂದ್ರನ ಒಡನಾಡಿಗಳು, ಉತ್ಪತ್ತಿಯಿಂದಲೇ ಹಾರ ಹೊಂದಿರುವವರು. ಗೌತಮನಿಗಾಗಿ ನೀರಿನೊಂದಿಗೆ ಬಂದವರು.

ಅತ್ಯಂತ ಪೂಜ್ಯರು, ವೇಗಗಾಮಿಗಳು, ಪಾಪರಹಿತರು, ಅಸಾಧಾರಣ ಬಲದವರು, ಕಾಂತಿಯುತರು. ರುದ್ರಪುತ್ರರು, ಉತ್ತಮ ಸುವರ್ಣಾಭರಣಧಾರಿಗಳು, ನದಿ ಪ್ರವಾಹ ಪ್ರೇರಿತರು, ಆಯುಧವಂತರು, ಅನ್ನವಂತರು, ಉತ್ಕೃಷ್ಟ ಜ್ಞಾನಿಗಳು, ಶತ್ರುಹಿಂಸಕರು, ಅಂತರಿಕ್ಷ ವಾಸಿಗಳು.

ಭರದ್ವಾಜರು :

ಮರುತ್‌ಗಳ ಯಜ್ಞ ಪ್ರಚಾರಕರು, ಶತ್ರುಭಯಂಕರರು, ರುದ್ರ ಪತ್ನಿ ಮಾಧ್ಯಮಿಕ ದೇವಿಯು ಸ್ವಪ್ರಕಾಶಳು ಸ್ವಶಕ್ತಿಯಿರುವವಳು. ಮರುತ್‌ಗಳಲ್ಲಿ ಪ್ರಸ್ತುತಳಾಗಿದ್ದಾಳೆ. ಧರಿತ್ರಿಯಂತೆ ಮರುತ್‌ಗಳನ್ನು ಭರಿಸಲು ಅಂತರಿಕ್ಷಸ್ಥಳು. ಮಾನವರೆಲ್ಲರ ಹೃದಯಾಂತರ್ಗತ ಪಾಪಗಳನ್ನು ಶೋಧಿಸಿ ಶುದ್ಧೀಕರಿಸುವವಳು ಪ್ರಶ್ನಿಯೇ?

ವರ್ಷಕಾಲದಲ್ಲಿ ಸೃಷ್ಟಿಕರ್ತನ ಇಷ್ಟಾನುಸಾರ ಅಂತರಿಕ್ಷ, ಉದಕ ಕರೆಯುವುದು. ಸ್ವಂತ ಬಲದಿಂದಲೇ ತಮ್ಮನ್ನು ರಕ್ಷಿಸಿಕೊಳ್ಳಬಲ್ಲರು. ಛೇದಕರು ಯಾರೂ ಇಲ್ಲವೇ ಇಲ್ಲ. ಉತ್ತಮ ದಾನಿಗಳು. ಯಜಮಾನನ ಚೋರರು ಮತ್ತು ಶತ್ರುಗಳನ್ನು ನಾಶಮಾಡುತ್ತಾರೆ. ದ್ಯಾವ ಪೃಥ್ವಿಯನ್ನು ಒಟ್ಟುಗೂಡಿಸುತ್ತಾರೆ.

ಸೂರ್ಯಾತ್ಮಕ ತೇಜಸ್ಸಿನಿಂದ ಕೃಷ್ಣರಾತ್ರಿ ನಾಶ ಮಾಡಿ ಉಷ ಕಾಲದಲ್ಲಿ ಯಜಮಾನನ್ನು ಪ್ರೇರಿಸುತ್ತಾರೆ. ಮನೋಹರ ಧ್ವನಿಯಿಂದ ಮೇಘ ಹಿಂಡುತ್ತಾರೆ.

ಆತ್ರೇಯರು :

ಮರುತ್‌ಗಳು ಅನ್ನ ಹೊಂದಿರುವವರು. ಉತ್ತಮ ದಾನ ಮನಸ್ಕರು, ಅತ್ಯಧಿಕ ಬಲವಂತರು, ಆಯುಧವಂತರು, ಚಲನ ಸ್ವಾಭಾವಿಗಳು, ದರ್ಶನೀಯರು, ಜಗತ್ ಪ್ರೇರಕರು, ಸಹನಶೀಲರು, ಪುರುಷ್ಕಾನಿಧಿಯಲ್ಲಿರುವವರು. ಇವರಿಗೆ ರುದ್ರನೇ ತಂದೆ, ಪ್ರಶ್ನಿಯೇ ತಾಯಿ. ಸ್ವಪ್ರಕಾಶ ಪ್ರಭೆಯಿಂದ ಕೂಡಿದವರು. ಸ್ವಪ್ರೇರಣೆಯಿಂದ ಮಾನವ ಕಲ್ಯಾಣಕ್ಕೋಸ್ಕರ ಮೇಘ ಸೀಳುತ್ತಾರೆ. ವಿದ್ಯುತ್‌ಗಳು ಮರುತ್‌ಗಳನ್ನು ನಿಯಮಿತವಾಗಿ ಅನುಸರಿಸುತ್ತವೆ. ಆಕರ್ಷಕ ಸ್ವರೂಪದವರು. ಹೊಂಬಣ್ಣದವರು, ಆಭರಣವಂತರು, ವೃಕ್ಷಾದಿಗಳಿಗೆ ನೇತೃಗಳು, ಕಾಲನಿಯಮಗಳನ್ನು ಮೀರಿ ಜಗತ್ತನ್ನೇ ತುಂತುರುಗಳಿಂದ ತೋಯಿಸುವವರು. ಪೃಥ್ವಿ , ದ್ಯುಲೋಕದಲ್ಲಿ ತೇಜಸ್ಸು ಹರಡುತ್ತಾ ಸಂಚರಿಸುತ್ತಾರೆ.

ಪುತ್ರರು ಭೃತ್ಯಾದಿಗಳನ್ನು ಸ್ವಪ್ರೇರಣೆಯಿಂದ ರಕ್ಷಿಸುತ್ತಾರೆ. ದರ್ಪ ತೋರಿಸುತ್ತಾ ಘರ್ಜನೆಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಾರೆ. ಜಗತ್ತಿನ ರಕ್ಷಣಾ ಭಾರ ಯಜ್ಞ ನಿರ್ವಹಣಾ ಭಾರ ನಕ್ಷತ್ರಗಳ ಭಾರ ಹೊತ್ತಿರುವ ಇವರು ಶಾಶ್ವತ ಬಲಕ್ಕೆ ಪ್ರಿಯರಾದವರು. ಚಂದಸ್ಸಿನಿಂದ ಸ್ತುತಿತರಾಗುತ್ತಾರೆ. ಪ್ರತಿ ಗಣದಲ್ಲೂ ಏಳರಂತೆ ಏಳು ಗಣದಲ್ಲಿದ್ದಾರೆ. ಕೆಲವರು ಮರೆಯಲ್ಲಿ ಕೆಲವರು ಎದುರಿನಲ್ಲಿ ಇದ್ದು ಯಜಮಾನನನ್ನು ರಕ್ಷಿಸುತ್ತಾರೆ. ಇವರು ಮಾನವ ಹಿತಕಾರಿಗಳು, ಕಷ್ಟ ರಹಿತರು, ಹಾರ, ಆಯುಧ, ಧನಸ್ಸು ಹೊಂದಿದ್ದಾರೆ. ಅಂತರಿಕ್ಷದಲ್ಲಿ ಉದಕ ಕೋಶದಂತೆ ಮೇಘವಿದೆ. ಮರುತ್‌ಗಳು ಆ ಮೇಘಗಳನ್ನು ವೃಷ್ಟಿ ರೂಪದಿಂದ ಕೆಳಗೆ ಇಳಿಸಿ ನದಿ ಪ್ರವಾಹವಾಗಿ ಹರಿಯುವಂತೆ ಮಾಡುತ್ತಾರೆ. ಉದಕದೊಂದಿಗೆ ತಾವೂ ಸಂಚರಿಸುತ್ತಾರೆ. ಋಷಿಗಳು ಇವರ ಜಿಂಕೆಯ ರಥವನ್ನೂ ಸ್ತುತಿಸುತ್ತಾರೆ. ಇವರು ಶಿಲಾ ರೂಪ ಆಯುಧವುಳ್ಳವರು. ವಿದ್ಯುತ್ ಪ್ರಕಾಶರು, ರಕ್ತಾಂಶುಕರು, ಕಾಂತಿಯುತರು. ಭುಜದಲ್ಲಿ ಆಯುಧ, ಪಾದದಲ್ಲಿ ಕಟಕ, ವಕ್ಷಸ್ಥಳದಲ್ಲಿ ಹಾರ, ರಥದಲ್ಲಿ ಮಧುರ ಉದಕ, ಹಸ್ತದಲ್ಲಿ ವಿದ್ಯುತ್, ಶಿರದಲ್ಲಿ ಸುವರ್ಣ ಕಿರೀಟಗಳನ್ನು ಧರಿಸಿದ್ದಾರೆ. ಅಂತರಿಕ್ಷದಲ್ಲಿ ಮೋಡ ಚಲಿಸುವವರಾಗಿ ಗುಡುಗು ಶಬ್ದ ಮಾಡುವವರಾಗಿ ಉದಕ ಸುರಿಸುತ್ತಾರೆ.

ಎಲ್ಲವನ್ನೂ ಕಂಪಿಸುವಂತೆ ಮಾಡುತ್ತಾರೆ. ಸೂರ್ಯೋದಯವಾದಾಗ ಸೋಮಪಾನದಿಂದ ಹರ್ಷಿತರಾಗುತ್ತಾರೆ. ತಾವು ಹಿಂಸಿತರಾಗದೆ, ಮಿತ್ರರನ್ನು ಹಿಂಸಿಸದೆ, ಶತ್ರುಗಳನ್ನು ಪ್ರತಿಭಟಿಸಿ ರಕ್ಷಣೆ

ವಿಶಿಷ್ಟರು :

ಮರುತ್‌ಗಳು ರುದ್ರಪುತ್ರರು, ಕಾಂತಿಯುತರು, ಪ್ರಕಾಶಿತರು, ಸಂಚಾರಶೀಲರು, ಮಾರ್ಗದರ್ಶಕರು, ಕಾಮ ವರ್ಷಕರು, ವಸತಿ ದಾಯಕರು, ಧನ ಪ್ರದರು, ಉದಕದಾತರು, ಪೂಜಾರ್ಹರು, ಉತ್ತಮ ಅಶ್ವವುಳ್ಳವರು, ಮಾನವ ಹಿತಕಾರಿಗಳು, ಪರಸ್ಪರ ಒಟ್ಟಾಗಿ ಸೇರಿಕೊಳ್ಳುವವರು. ಅಲಂಕೃತ ಮಾನವರಂತೆ ಶೋಭಿಸುವವರು. ಎಳೆ ಕರುಗಳಂತೆ ಆಟವಾಡುವವರು, ವಾಯುವಿನಂತೆ ಶಬ್ದ ಮಾಡುವವರು, ಶ್ಯೇನ ಪಕ್ಷಿಯಂತೆ ಉತ್ತಮ ಗಮನಿಗಳು, ಅಶ್ವದಂತೆ ಉತ್ತಮ ಗತಿಯುಳ್ಳವರು. ರುದ್ರ-ಪ್ರಶ್ನಿಯರ ಯೋಗದಿಂದ ಉತ್ಪನ್ನರಾದವರು. ಉತ್ಪತ್ತಿ ಕ್ರಮವನ್ನು ಯಾರೂ ಅರಿತಿಲ್ಲ. ಅವರಿಗೇ ಗೊತ್ತು. ಪ್ರಶ್ನಿಯು ಅಂತರಿಕ್ಷ ರೂಪಿಯಾದ ಜಠರದಲ್ಲಿ ಮರುತ್ಗಳನ್ನು ಧರಿಸಿದ್ದರನ್ನು ಪ್ರಾಜ್ಞರು ಮಾತ್ರ ಅರಿತಿದ್ದಾರೆ. ಸ್ಕಂದ ಪ್ರದೇಶದಲ್ಲಿ ವಿಶೇಷ ಅಲಂಕಾರ, ಎದೆಯ ಮೇಲೆ ಹೊಂಬಣ್ಣದ ಹಾರ, ಮಿಂಚುಗಳಂತೆ ಪ್ರಕಾಶಿಸುವ ಆಯುಧಗಳಿಂದ ಪ್ರಕಾಶಿಸುತ್ತಾ ಉದರ ವೃದ್ಧಿಗೊಳಿಸುತ್ತಾರೆ. ತಮ್ಮನ್ನು ತಾವೇ ಅಲಂಕರಿಸಿಕೊಳ್ಳುತ್ತಾರೆ. ಅಂತರಿಕ್ಷ ತೇಜಸ್ಸಿನಿಂದ ಕಂಗೊಳಿಸುತ್ತಾ ದ್ಯಾವ ಪೃಥ್ವಿಗಳನ್ನು ಸುಖಪಡಿಸುತ್ತಾರೆ. ಇವರು ಸಂಪದ್ಯುಕ್ತರನ್ನು ದರಿದ್ರನ್ನು ಒಂದೇ ರೀತಿ ಹುರಿದುಂಬಿಸುತ್ತಾರೆ. ಸಂಗ್ರಾಮದಲ್ಲಿ ಶತ್ರುಗಳನ್ನು ಪ್ರತಿಭಟಿಸುತ್ತಾರೆ. ಆಹ್ವಾನದಿಂದ ತೃಪ್ತಿ ಹೊಂದಿ ಶತ್ರುಜನರ ಶಕ್ತಿಯನ್ನು ಕುಗ್ಗಿಸಿ ಅಘಾತ್ರಿ ಮತ್ತು ಲೋಭಿಗಳಿಗೆ ಕೆಡುಕು ಮಾಡುತ್ತಾರೆ.

ಇವರು ಯಜ್ಞಾರ್ಹರು. ದೋಷರಹಿತರು, ಕಾಂತಿಯುತರು, ವೃಷ್ಟಿ ಸುರಿಸುವವರು, ದ್ಯಾವ ಪೃಥ್ವಿಗಳು ಕಂಪಿಸುವಂತೆ ಮಾಡುತ್ತಾರೆ. ಉದಕದಿಂದ ಕೂಡಿದ್ದಾರೆ. ಅತ್ಯಧಿಕ ಬಲಯುತರಾಗಿದ್ದಾರೆ. ಸರ್ವತ್ರ ಸಂಚಾರಿಗಳು. ಸ್ತುತಿಸಿದಾಗ ವೃದ್ಧಿ ಹೊಮದುತ್ತಾರೆ. ಯಜ್ಞ ಕರ್ತರನ್ನು ಹುಡುಕಿಕೊಂಡು ಹೋಗಿ ಅವರ ಇಷ್ಟಾರ್ಥವನ್ನು ನೆರವೇರಿಸುತ್ತಾರೆ. ಮರುತ್‌ಗಳು ಕೊಡುವ ಪ್ರಮಾಣದಲ್ಲಿ ದಾನಾದಿಗಳನ್ನು ಇತರ ಯಾವ ದೇವತೆಯರೂ ಕೊಡುವುದಿಲ್ಲ. ಭೂಮಿಯಿಂದ ಸ್ವರ್ಗದ ವರೆಗೂ ವ್ಯಾಪಿಸಿರುವವರು. ಇವರ ಪ್ರಭಾವಿತ ಜನ್ಮವು ರುದ್ರನಿಂದಾಗಿದೆ. ಇವರಿಂದ ಸ್ವರ್ಗ ಸ್ಥಾನ ಪ್ರಬಲವಾಗಿದೆ. ಸಂಚಾರಕಾಲದಲ್ಲಿ ವೃಕ್ಷಗಳು ಭಯಗೊಳ್ಳುತ್ತವೆ. ಆದರೆ ಪ್ರಾಣಿ ಸಮೂಹಗಳನ್ನು ಹಿಂಸಿಸುವುದಿಲ್ಲ. ಯಜಮಾನನು ಮರುತ್‌ಳಿಂದ ರಕ್ಷಿತವಾಗಿದ್ದಾನೆ. ಧನವಂತನಾಗುತ್ತಾನೆ. ಅಂತರಂಗ ಬಹಿರಂಗ ಪಾಪಗಳನ್ನು ಪರಿಹರಿಸುತ್ತಾರೆ. ಇಷ್ಟಾರ್ಥಪ್ರದರು.

## ವಿವಿಧ ಋಷಿಗಳಿಂದ ಮರುತ್ ದೇವತೆಗಳಿಗಾಗಿ ಆಶ್ರಮದಲ್ಲಿನ ಕಾರ್ಯಕ್ರಮಗಳು :

### ಅಗಸ್ತ್ಯರ ಆಶ್ರಮದಲ್ಲಿ

ಋಷಿಗಳು ಕರ್ತವ್ಯ ಪಾಲಿಸಲು ಸೂಚಿಸುತ್ತಾರೆ. ಸ್ತೋತ್ರಗಳಿಂದ ಸಖರನ್ನಾಗಿ ಮಾಡಿಕೊಳ್ಳಲು ಹೇಳಿದ್ದಾರೆ. ಇಂದ್ರನು ನಮಗೆ ಹೇಳಬೇಕಾದುದೆಲ್ಲವನ್ನೂ ಒಳ್ಳೆಯ ಮಾತಿನಿಂದಲೇ ಹೇಳಲಿ. ಯಜಮಾನನು ಖಾದ್ಯಾದಿ ವಸ್ತುಗಳನ್ನು ಮಧುರ ಹವಿಸ್ಸನ್ನು ಸಿದ್ಧಪಡಿಸಿ ಅವರ ಮಹಿಮೆಗಳನ್ನು ಪ್ರಶಂಸಿಸುತ್ತಾ ಯಾಗ ಭೂಮಿಗೆ ವಿಶ್ರಾಂತಿಗೆ ಬರಲು ಪ್ರಾರ್ಥಿಸುತ್ತಾರೆ. ತಮ್ಮ ಅನುಕೂಲಕ್ಕಾಗಿಯೇ ಮರುತ್ ದೇವತೆಗಳನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳುತ್ತಾರೆ. ಶುಭಕರ ಸ್ತುತಿಗಳಿಂದ ತೃಪ್ತಿಗೊಳಿಸುತ್ತಾರೆ. ಯಜ್ಞಕ್ಕೆ ಬರಲು ಆಹ್ವಾನಿಸುತ್ತಾರೆ. ಸ್ತೋತ್ರಗಳಿಂದ ಆನಂದ ಪಡಲಿ, ಅವರ ಶರೀರ ವೃದ್ಧಿಯಾಗಲಿ, ಹೃತ್ಪೂರ್ವಕವಾಗಿ ಆದರದಿಂದ ನಮಸ್ಕಾರಗಳಿಂದ ಆಹ್ವಾನಿಸುತ್ತಾರೆ. ಕ್ರೋಧ ಬಿಟ್ಟು ಪ್ರಸನ್ನ ಹೃದಯರಾಗಿ ಹರ್ಷದಿಂದ ಯಜಮಾನನು ಅರ್ಪಿಸುವ ಸ್ತುತಿ ಹವಿಸ್ಸು ಸ್ವೀಕರಿಸಲು ಪ್ರಾರ್ಥಿಸುತ್ತಾರೆ.

### ಕಣ್ವ ಋಷಿಗಳ ಆಶ್ರಮದಲ್ಲಿ

ಪೂಜೆ - ಹವಿಸ್ಸು ಅರ್ಪಿಸಲಾಗುತ್ತಿದೆ. ಯಜ್ಞ ಕರ್ಮಗಳನ್ನು ಮಾಡುತ್ತಾರೆ. ಯಜ್ಞಕ್ಕೆ ಬರಲಿ ನಮ್ಮ ಜೊತೆಯಲ್ಲಿ ಇರಲಿ. ಪರಿಷ್ಕ ಪಂಕೋತ್ತನ್ನರು ಮೂರು ಸವನಗಳಲ್ಲಿಯೂ ಯಜ್ಞ ಯಾಜ್ಞಿಕರಿಂದ ಸ್ತುತಿಗಳು ಹವಿಸ್ಸು, ಸೋಮಗಳಿಂದ ಶಕ್ತಿ ವೃದ್ಧಿತರಾಗಿ ಹರ್ಷಿತರಾಗಿ ಉತ್ತಮ ಜ್ಞಾನಿಗಳಾಗಿದ್ದಾರೆ.

ಋಷಿ ದೇಶದ ಶರಣ್ಯಾವರ್ತ ಸರಸ್ಸಿನ ದಡಕ್ಕೆ ಸೋಮಪಾನಕ್ಕಾಗಿ ಬಂದು ರಥದಿಂದ ಇಳಿಯುತ್ತಾರೆ.

ಉಶನ ಋಷಿಯು ಸ್ತುತಿಸಿ ಮರುತ್‌ಗಳನ್ನು ತಮ್ಮ ಅಭಿಮುಖಿ ಮಾಡಿಕೊಳ್ಳುತ್ತಾರೆ. ಅವರಿಗೆ ಧರ್ಭಾಸನ ನೀಡುತ್ತಾರೆ. ಯಜಮಾನರು ಇವರನ್ನು ಅರಿತಿದ್ದಾರೆ. ಹಾಗೂ ಇವರ ಸ್ತೋತ್ರದಿಂದ ಮಿತ್ರತ್ವ ಪಡೆದಿದ್ದಾರೆ. ಯಜ್ಞ ಕಾಲದಲ್ಲಿ ಬಂಧುತ್ವ ಪಡೆಯುತ್ತಾರೆ. ಪ್ರಶಂಸಿಸಿ ನಮಸ್ಕಾರ ಮಾಡುತ್ತಾರೆ. ಶ್ಯೇನ ಪಕ್ಷಿಯಂತೆ ವೇಗವಾಗಿ ದಯಮಾಡಿಸಿ ಹವಿಸ್ಸು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಪೃಶ್ನಿಯು ಮರುತ್‌ಗಳ ಮಾತೆ. ಇವರ ಸಮೀಪ ಸಮಸ್ತ ದೇವತೆಗಳು, ಸೂರ್ಯ ಚಂದ್ರರು ತಮ್ಮ ತಮ್ಮ ಕಾರ್ಯ ನಿರತರಾಗಿರುತ್ತಾರೆ. ಯಜ್ಞ ವೇದಿಕೆಯ ಮೇಲೆ ಓಡಾಡುತ್ತಿರುವ ಸಮಸ್ತ ಸ್ತೋತೃ ಜನರು ಇವರನ್ನು ಸ್ತುತಿಸುತ್ತಾರೆ.

## ಗೌತಮರ ಅಶ್ರಮದಲ್ಲಿ

ಮರುತ್‌ಗಳಿಗೆ ಸ್ತೋತ್ರಗಳು ಹವಿಸ್ಸು, ಸೋಮ ಅರ್ಪಿತವಾಗುತ್ತಿದೆ. ಆಹ್ವಾನಿಸಿ ಉಪಚರಿಸುತ್ತಿದ್ದಾರೆ. ಅಗ್ನಿಷ್ಟೋಮ ನೆರವೇರಿಸಲಾಗುತ್ತಿದೆ. ದರ್ಭಾಸನದಲ್ಲಿ ಕೂಡಲು ಪ್ರಾರ್ಥಿಸುತ್ತಾರೆ. ಸೋಮದಿಂದ ತೃಪ್ತರಾಗಲು ಪ್ರಾರ್ಥಿಸುತ್ತಾರೆ. ಅನೇಕ ವರ್ಷಗಳಿಂದ ಹವಿಸ್ಸು ಪಡೆಯುತ್ತಿರವ ಇವರು ಈಗಲೂ ಬರಲಿ, ಪೂಜೆ - ಹವಿಸ್ಸು - ಸೋಮಗಳನ್ನು ಸ್ವೀಕರಿಸಲಿ. ಇಂದ್ರ ಮರತ್‌ಗಳನ್ನು ಆಹ್ವಾನಿಸುತ್ತಾರೆ.

## ಗೃತ್ಸಮದರ ಅಶ್ರಮದಲ್ಲಿ

ಪ್ರಾಣಾ ಅಪಾನ, ಉದಾನ, ಸಮಾನ, ಬ್ರಹ್ಮ, ಪಂಚ ಸಂಖ್ಯಾತ ಮರುತ್‌ಗಳು ಮಾನವರಿಂದ ಸ್ತುತಿ ಮತ್ತು ಸೋಮವನ್ನು ಅಪೇಕ್ಷಿಸುತ್ತಾರೆ. ಹವಿ ರೂಪ ಅನ್ನಕ್ಕಾಗಿ ಅನ್ನ ಯುಕ್ತರಾಗಿ ಯಾಗ ಭೂಮಿಯಲ್ಲಿ ಯಜಮಾನನ ಬಳಿಗೆ ಬರಲು ಸ್ತುತಿ, ಪ್ರಾರ್ಥನೆ ನಮಸ್ಕಾರಗಳಿಂದ ಮರುತ್‌ಗಳಿಗೆ ಚಮಸ ಪಾತ್ರೆಯ ಸೋಮ ತೋರಿಸಿ ಆಹ್ವಾನಿಸುತ್ತಾರೆ.

## ಆತ್ರೇಯರ ಅಶ್ರಮದಲ್ಲಿ

ಮರುತ್ ಸಂಘದ ಉತ್ಕೃಷ್ಟತೆಯನ್ನು ರಮಣೀಯ ಸ್ತುತಿ ಹವಿಸ್ಸು ದಾನ ಭಕ್ತಿ ಭಾವದಿಂದ ಹೊಗಳುತ್ತಾರೆ. ಇವರು ದ್ಯುಲೋಕದ ಅಥವಾ ಯಾವುದೇ ಪ್ರದೇಶದಿಂದ ಯಜ್ಞಾಭಿಮುಖವಾಗಿ ಯಜ್ಞಕ್ಕೆ ಬರಲಿ. ಮೂರು ಲೋಕದಲ್ಲಿ ಎಲ್ಲಿದ್ದರೂ ಬರಲಿ. ನದಿಯಾಗಲೀ ಸಮುದ್ರವಾಗಲೀ ಅವರನ್ನು ತಡೆಯದಿರಲಿ. ಶತ ಸಂವತ್ಸರ ಜೀವಿಸಬಲ್ಲ ಯಜಮಾನನ ಸ್ತುತಿ ಕೇಳಲಿ, ಯಜಮಾನರು ಸ್ತುತಿ ಹವಿಸ್ಸು ಅರ್ಪಿಸಲಿ.

ವೇಗಗಾಮಿ, ಪ್ರಕಾಶಮಾನಿ, ದರ್ಶನೀಯ ರೂಪಿ, ಆಕರ್ಷಕ ಹೊಂಬಣ್ಣದ ಶಬ್ದ ಮಾಡುವ ಅಶ್ವಗಳನ್ನು ಭಾರ ವಹಿಸಲು ರಥಕ್ಕೆ ಹೂಡಲಿ. ಸಾವಕಾಶ ಮಾಡದ ಕುದುರೆಗಳು ಗಮನ ಹೊಂದಲಿ. ಯಜಮಾನರೂ ಅಶ್ವವನ್ನು ಹೊಂದಿದ್ದಾರೆ. ಅಗ್ನಿಯನ್ನು ಸೇವಿಸುತ್ತಾರೆ. ಇವರ ಮಹಾತ್ಮೆಯನ್ನು ಯಾರು ಅರಿಯಬಲ್ಲರು. ಹಾಗೂ ಯಾರು ಸ್ತುತಿಸಬಲ್ಲರು. ಅಗ್ನಿಯು ಎಲ್ಲರಿಗೂ ರಕ್ಷಣೆ ನೀಡುವವನು ಪ್ರಸನ್ನ ಚಿತ್ತದವನು. ಯಜ್ಞ ಕಾಲದಲ್ಲಿ ಆಚರಿತ ಅರ್ಪಿತ ಕರ್ಮಸ್ತುತಿ, ಪೂಜೆ, ಪ್ರದಕ್ಷಿಣೆ, ನಮಸ್ಕಾರ, ಹವಿಸ್ಸುಗಳನ್ನು ಅರ್ಪಿಸುತ್ತಾರೆ. ಉತ್ತಮ ದ್ಯುಲೋಕ, ಮಧ್ಯಮ ಅಂತರಿಕ್ಷ, ಐಹಿಕ ಪಾರ್ಥಿವ ಲೋಕ ಎಲ್ಲಿದ್ದರೂ ಯಜ್ಞಕ್ಕೆ ಬರಲಿ. ಪೃಸ್ನಾನರಾಜ್ಞೆಯು ಬಂದು ಸೋಮಪಾನ ಮಾಡಲಿ.

ಇವರ ಸ್ಥಾನ ಯಾವುದೋ ಎಲ್ಲಿಂದ ಬರುತ್ತಾರೆ, ಎಲ್ಲಿಗೆ ಹೋಗುತ್ತಾರೆ ಯಾರಿಗೂ ತಿಳಿಯದು. ಉದ್ದೇಶಿತ ಯಜ್ಞಕ್ಕೆ ಬರಲಿ. ಇಂದ್ರನೊಡನೆ ದ್ಯುಲೋಕದಿಂದ ಆಪರ್ಷಿಸಿ, ಸ್ತೋತ್ರ ಹವಿಸ್ಸು ಸ್ವೀಕರಿಸಲಿ. ಋಷಿಗಳಿಗೆ ಅಭಿಮುಖವಾಗಿ ಅವರ ಯಜ್ಞ ಸಫಲಗೊಳಿಸಲಿ.

ಭರದ್ವಾಜರ ಆಶ್ರಮದಲ್ಲಿ

ಜ್ಞಾನಿಯಾದ ಸ್ತೋತೃವಿನ ಮುಂದೆ ಗೋಚರಿಸುತ್ತಾರೆ. ಮಾನವರ ಇಷ್ಟಾರ್ಥ ಸಾಧನೆಗಾಗಿ ಓಷಧಿ ವನಸ್ಪತಿಗಳನ್ನು ವೃದ್ಧಿಸುತ್ತಾರೆ. ಅಧಿಕ ಬಲದ ಸ್ತೋತ್ರಗಳ ಹವಿಸ್ಸು ಅರ್ಪಿಸಲಾಗುತ್ತದೆ.

ವಸಿಷ್ಠರ ಆಶ್ರಮದಲ್ಲಿ

ಶುದ್ಧ ಯಾಗದಲ್ಲಿ ಪರಿಶುದ್ಧ ಹವಿಸ್ಸು ಅರ್ಪಿಸುತ್ತಾರೆ ಮರುತ್‌ಗಳಿಗಾಗಿ ಕರ್ಮಗಳನ್ನು ಆಚರಿಸುತ್ತಾರೆ. ಕರ್ಮ ನಿರತ ಯಜಮಾನನಿಗೆ ವಂಚನೆಯಾಗದಂತೆ ಅಪರಿಮಿತ ದಾನಗಳನ್ನು ಪದೇಪದೇ ಇಚ್ಛಿಸುತ್ತಾರೆ. ಮರುತ್‌ಗಳ ಹೆಸರನ್ನು ಪಠಿಸಿ ಕರೆಯುತ್ತಾರೆ. ಮರುತ್‌ಗಳು ಯಜಮಾನರ ಸಮೀಪವರ್ತಿಗಳಾಗಿ ಅವರ ಗೃಹದಲ್ಲೇ ಇರುತ್ತಾರೆ. ಹಿಂದೆ ಮಾಡಿದ ದಾನಾದಿಗಳು ಈಗಲೂ ಪ್ರಶಂಸಿತವಾಗುತ್ತಿವೆ. ಸಹಸ್ರಾರು ಗೃಹಸ್ಥ ಗೃಹಗಳಲ್ಲಿ ಯಜ್ಞಾರ್ಪಿತ ಯಾಗ ಹವಿಸ್ಸುಗಳನ್ನು ಸೇವಿಸಲು ಪ್ರಾರ್ಥಿಸುತ್ತಾರೆ. ಮರುತ್‌ಗಳ ತೇಜಸ್ಸು ಅಧಿಕವಾಗಲಿ ಬಲ ಶಾಶ್ವತವಾಗಿರಲಿ. ಸಂಘವು ವೃದ್ಧಿಯಾಗಲಿ ಪ್ರಜೆಗಳು ಇವರನ್ನು ಪೂಜಿಸುತ್ತಿರಲಿ. ಮರುತ್‌ಗಳು ರಕ್ಷಣೆಗಳೊಂದಿಗೆ ಯಜ್ಞಕ್ಕೆ ಬರಲಿ. ಉದಕ ಒದಗಿಸಲಿ. ಅನುಗ್ರಹ ಬುದ್ಧಿಯಿಂದ ಪ್ರಜೆಗಳು ಅನ್ನ ವಂತರಾಗುವಂತೆ ಮಾಡಲಿ. ಇವರ ಆಯುಧಗಳು ಯಜಮಾನನಿಂದ ದೂರವೇ ಇರಲಿ. ಉತ್ತಮ ಸ್ತೋತ್ರಗಳನ್ನು ನಿರ್ಮಿಸಿ ಸ್ತುತಿಸುತ್ತಾರೆ. ಈ ಸ್ತುತಿಗಳನ್ನು ಅಪೇಕ್ಷಿಸಿ ಮರುತ್‌ಗಳು ಯಜಮಾನನಲ್ಲಿಗೆ ಅನೇಕ ವೇಳೆ ಬರುತ್ತಾರೆ.

ರಶ್ಮಿ ಭಾರ್ಗವರ ಆಶ್ರಮದಲ್ಲಿ

ಸ್ತೋತ್ರಗಳಿಲ್ಲದೆ ಹವಿಸ್ಸು ಅರ್ಪಿಸದಿದ್ದರೆ ಇವರು ಎಲ್ಲಿಗೂ ಹೊರಡುವುದಿಲ್ಲ. ಇದು ಯಾಜ್ಞಿಕರಿಗೆ ಗೊತ್ತು, ಋಷಿಗಳಿಗೂ ಗೊತ್ತು. ಆದ್ದರಿಂದ ಯಾಜ್ಞಿಕರು ಅವರನ್ನು ಅವರವರ ಘನತೆಗೆ ತಕ್ಕಂತೆಯೇ ಸ್ತುತಿಸಬೇಕೆಂದು ಯಾಜ್ಞಿಕರಿಗೆ ಗೊತ್ತಿದೆ. ಹಾಗೆಯೇ ಅದೇ ರೀತಿ ಆಹ್ವಾನಿಸುತ್ತಾರೆ. ಯಜಮಾನನಲ್ಲಿಗೆ ಪ್ರಿಯ ಸ್ತುತಿಗಳಿಗೆ ಅಭಿಮುಖವಾಗಿ ಬರಲಿ.

## ವಿವಿಧ ಋಷಿಗಳಿಂದ ಮರುತ್ ದೇವತೆಗಳಲ್ಲಿ ಮಾಡಿಕೊಂಡ ಪ್ರಾರ್ಥನೆಗಳು :

1) ಅಗಸ್ತ್ಯರು

ಧನ ಧಾನ್ಯ ಕೊಡಲು ಪ್ರಾರ್ಥಿಸುತ್ತಾರೆ. ಐಶ್ವರ್ಯ ಬಲ, ಜಯ ಅಪೇಕ್ಷಿಸುತ್ತಾರೆ. ಯಾಗ ಜ್ಞಾನ ಕೊಡಲಿ ನಮ್ಮಿಂದ ಕರ್ಮ ಮಾಡಿಸಿಯೇ ಸಹಾಯ ಮಾಡಲಿ. ಕೀರ್ತಿ ತರಲಿ ಸತ್ರಯಾಗ ವೃದ್ಧಿ ಪಡಿಸಲಿ ಯಜಮಾನನ ಶರೀರ ರಕ್ಷಣೆ ಮಾಡಲಿ. ಆರೋಗ್ಯ ದೀರ್ಘಾಯುಸ್ಸು, ಶರೀರ ಪೋಷಣೆಗೆ ಕಾರ್ಯಕ್ರಮಗಳನ್ನು ಮಾಡಲು ಶಕ್ತಿ ನೀಡಲಿ. ಕೋಪ ಬಿಟ್ಟು ಇಂದ್ರ ಮರುತ್ ಗಳು ನಮ್ಮ ಶತ್ರುಗಳನ್ನು ನಾಶ ಮಾಡಲಿ. ಇಚ್ಛಿಸುವ ಸುಖ, ಉತ್ತಮ ಜೀವನ ಅನ್ನ, ಆಹಾರ ದೀರ್ಘಾಯುಸ್ಸು, ಕೊಡಲಿ. ನಿಮ್ಮ ಆಯುಧವು ನಮ್ಮ ಶತ್ರುಗಳನ್ನು ಸೋಲಿಸಲಿ. ತೃಣ ಪ್ರಾಯರಾದ ನಮ್ಮನ್ನು ನಮ್ಮ ಪುತ್ರರನ್ನು, ಭೃತ್ಯರನ್ನು" ಬಾಧೆಗಳಿಂದ ಬಿಡಿಸಲಿ. ಚಿರ ಕಾಲ ಉತ್ಕೃಷ್ಟ ಜೀವಿಗಳಾಗಿ ನಾವು ಇರುವಂತೆ ದೇವತೆಗಳು ನಮ್ಮನ್ನು ಅನುಗ್ರಹಿಸಲಿ.

2) ಕಣ್ವರು :

ಸಂಪೂರ್ಣ ಆಯುಸ್ಸು ಪ್ರಾರ್ಥಿಸುತ್ತಾರೆ. ವಜ್ರ-ವೈಢೂರ್ಯ ಗಜ, ಅಶ್ವ ಪಶುಗಳನ್ನು ಕೃಪೆ ಮಾಡಲು ಪ್ರಾರ್ಥಿಸುತ್ತಾರೆ. ಯಜ್ಞ ರಕ್ಷಿಸಲಿ ಕತೃಗಳ ಅವರ ಪುತ್ರರ ರಕ್ಷಣೆ ಮಾಡಲಿ. ಮೋಸ ಮಾಡುವವರು ಮತ್ತು ಪ್ರಬಲ ಶತ್ರುಗಳನ್ನು ನಾಶಮಾಡಲಿ. ಋಷಿಗಳಿಗೆ ಬೇಕು ಬೇಕಾದುದನ್ನು ಕೊಡಲಿ. ಪುತ್ರ ಪೌತ್ರರು ಮೊಮ್ಮಕ್ಕಳು ಸಹಸ್ರಾರು ಸಂಖ್ಯೆಯಲ್ಲಿ ಪ್ರಪ್ರ. ರಕ್ಷಣೆಗಾಗಿ ಪ್ರಾರ್ಥನೆ. ನಮ್ಮ ಇಷ್ಟಾರ್ಥಗಳನ್ನು ತಿಳಿದು ಅದನ್ನು ಅನುಗ್ರಹಿಸಲಿ. ರಾಕ್ಷಸರನ್ನು, ಕತ್ತಲನ್ನು ನಾಶ ಮಾಡಲಿ. ಸೂರ್ಯ ತೇಜಸ್ಸು ತರಲಿ. ಹಗಲೂ ರಾತ್ರಿ ರಕ್ಷಣೆಗಾಗಿ ಬೇಡುತ್ತಾರೆ. ಧನಕಾಮರಾದ ಕಣ್ವರು ರಕ್ಷಣೆ ಧನವನ್ನು ಯಾಚಿಸುತ್ತಾರೆ. ಈ ಗೋತ್ರೋತ್ಪನ್ನರು ಸ್ತುತಿಸಲಿ, ಪ್ರಶಂಸಿಸಲಿ, ಸ್ತುತಿಸಿದಾಗಲೆಲ್ಲಾ ಮರುತ್ ಗಳು ಅನುಗ್ರಹಿಸಲಿ.

ಯಾವ ಪ್ರದೇಶದಲ್ಲಿ ಯಾವ ಯಜಮಾನನಲ್ಲಿ ತಡೆಹಿಡಿಯಲ್ಪಟ್ಟಿದ್ದಾರೆ. ಮೇಧಾವಿ ಸ್ತುತಿಕರ್ತರಲ್ಲಿಗೆ ಯಾವಾಗ ಬರುತ್ತಾರೆ, ಯಾವ ಸ್ತುತಿ ಮಾಡಿ ಇವರ ಅನುಗ್ರಹ ಪಡೆಯಬಹುದು ಇನ್ನು ಗೊತ್ತಿಲ್ಲ.

ಯಜಮಾನನಿಗೆ ಶಕ್ತಿ ಅನ್ನ ಲಾಭ ಸುಖ ಕೊಡಲಿ. ಬಾಯಾರಿದಾಗ ಗೌತಮರಿಗೆ ನೀರಿನಿಂದ ತುಂಬಿದ ಭಾವಿಯನ್ನು ಕೊಟ್ಟು ರಕ್ಷಣೆ ಮಾಡಿದಂತೆ ಯಜಮಾನನಿಗೂ ಕೊಡಲಿ.

ಸಿಂಧೂ ನದಿಯಲ್ಲಿ, ಅಸಿಕ್ನಿ ನದಿಯಲ್ಲಿ ಸಮುದ್ರಗಳಲ್ಲಿ, ಪರ್ವತದಲ್ಲಿ ತಮ್ಮಲ್ಲಿ ಇರುವ ಎಲ್ಲಾ ಔಷಧಿಗಳೊಡನೆ ಬರಲಿ. ಔಷಧಿಗಳನ್ನು ಅವರು ದೇಹದೊಳಗೆ ತುಂಬಿ ರೋಗ ಗುಣವಾಗಿದೆ ಎಂದು ಪ್ರಕಟಿಸಲಿ. ಸ್ತುತಿಕರ್ತರ ಮಧ್ಯೆ ರೋಗಿಯಾದವನ ರೋಗಾತ್ಮಕ ಪಾಪವನ್ನು ಪೂರ್ಣ ಹೋಗಲಾಡಿಸಿ ಕಾಂತಿ ಉಂಟು ಮಾಡಿ ರೋಗದಿಂದ ಕುಗ್ಗಿದ ಅವನ ದೇಹವನ್ನು ಆರೋಗ್ಯಕರವನ್ನಾಗಿ ಮಾಡಲಿ. ಇಂದ್ರ, ವರುಣ, ಅಶ್ವಿನೀ, ಮರುತ್ ದೇವತೆಗಳು ಪಾತಃ ಸವನ ಕಾಲದಲ್ಲಿ ಸೋಮಪಾನಕ್ಕೆ, ಹೋತೃವಿನಿಂದ ಪ್ರಾರ್ಥಿತರಾಗಿ ಆಹ್ವಾನಿತರಾಗುತ್ತಾರೆ. ಒಟ್ಟಾಗಿ ಬರುವಂತೆ ಬಿಂದು ಋಷಿ ಪ್ರಾರ್ಥಿಸುತ್ತಾನೆ. ಅಂತರಿಕ್ಷದಿಂದ ಭೂಮಿಗೆ ಯಾವಾಗ ಬರುತ್ತಾರೆ, ಎಂದು ನಿರೀಕ್ಷಿಸುತ್ತಾರೆ.

3) ಆತ್ರೇಯರು :

ಯಜಮಾನನನ್ನು ಹಿಂಸಕ ಶತ್ರುಗಳಿಂಧ ರಕ್ಷಿಸಲಿ. ಯಮುನಾ ನದಿಯ ದಡದಲ್ಲಿ ಪ್ರಸಿದ್ಧ ಅಶ್ವರೂಪ, ಗೋ ರೂಪ ಧನವನ್ನು ಯಜಮಾನ ಋಷಿಯು ಹೊಂದುವಂತಾಗಲಿ. ಯಜಮಾನನ ಪಾಪಗಳು ನಾಶವಾಗಲಿ, ಶತ್ರುಗಳನ್ನು ಎದುರಿಸುವ ಶಕ್ತಿ ನಮಗಿರಲಿ. ಮಾನವ ಋಷಿ ಜಿಂಕೆಯ ರಥದಲ್ಲಿರುವ ಮರುತ್ ದೇವತೆಗಳನ್ನು ಧ್ಯಾನಿಸುತ್ತಾನೆ. ಧನಗಳು ಪಶುಗಳು ಪುತ್ರರು. ಧಾನ್ಯಗಳು ಇವನ್ನು ಮರುತ್‌ಗಳು ರಕ್ಷಿಸಲಿ.

ಇವು ಋಷಿಗಳಿಗೆ ಗೊತ್ತಿಲ್ಲ.

- ಇವರ ಉತ್ಪತ್ತಿಯನ್ನು ಯಾರು ಅರಿತಿದ್ದಾರೆ.
- ಇವರ ಪ್ರತಸ್ವರಾದ ಇವರ ಧ್ವನಿ ಯಾರು ಕೇಳಬಲ್ಲರು.
- ಇವರ ಸುಖದಲ್ಲಿ ಯಾರು ಭಾಗಿಗಳು ಮತ್ತು ಇವರ ಸಂಚಾರ ಕ್ರಮ ಯಾರಿಗೆ ಗೊತ್ತು.

ಧನ ಪ್ರದೇಶಕ್ಕೆ ಹೋಗಿ ಸೇರುವ ಉತ್ತಮಮಾರ್ಗಕ್ಕೆ ನಮ್ಮನ್ನು ಕರೆದೊಯ್ಯಲಿ. ಇವರು ಕೊಡುವ ಧನ ನಾಶರಹಿತವಾದದ್ದು. ಯಜಮಾನನ ಶ್ರದ್ಧೆ, ಭಕ್ತಿ, ಪೂಜೆ ಮುಂತಾದುವುಗಳನ್ನು ಅರಿತು ಅದಕ್ಕೆ ತಕ್ಕ ಪ್ರತಿಫಲ ಕೊಡಲಿ. ಅನುಗ್ರಹ ದೃಷ್ಟಿಯಿಂದ ಸುಖ ಕೊಡಲಿ. ಮರುತ್‌ಗಳ ಪಿತೃ ರುದ್ರನು ಹಾಗೂ ತಾಯಿ ಪೃಶ್ನಿಯು ಉತ್ತಮ ಧನ ಒದಗಿಸಿಕೊಡಲಿ. ಯಜಮಾನನ ಸ್ಥಿತಿಗಳನ್ನು, ಪದಾರ್ಥಗಳನ್ನು ಒಯ್ಯುವಂತೆ ಒಯ್ಯಲಿ. ನಿಧಾನ, ಧನವನ್ನು ಕೊಡಲಿ. ಯಜಮಾನನಿಗೆ ಗೋವು, ಅಶ್ವ, ಪರಿಷ್ಕಾರಥ, ಉತ್ತಮ ಪುತ್ರರು ಐಶ್ವರ್ಯ ಸೃಷ್ಟಿಸಿ ಕೊಡಲಿ. ಇವರಿಂದ ಕೊಡಲ್ಪಟ್ಟ ರಕ್ಷಣೆ ಸುಖವನ್ನು ಅನುಭೋಗಿಸುವಂತಾಗಲಿ.

ಅಡಗಿಕೊಂಡಿರುವ ಮೋಸಗಾರರನ್ನು ಶತ್ರುಗಳನ್ನು ದೂರ ತಳ್ಳಿ, ಅವರಿಂದ ಋಷಿಯು ಗಾಬರಿಗೊಳ್ಳದಂತೆ ಮಾಡಲಿ. ಶತ್ರುಗಳಿಂದ ರಕ್ಷಿಸಲಿ.

4) ಗೃತ್ಸಮದರು :

ಇಷ್ಟಾರ್ಥ ಪೂರೈಕೆಗಾಗಿ ತನ್ನಲ್ಲಿರುವ ಕೂಡಿಟ್ಟಿರುವ ಗೋವು, ಧನ, ದಕ್ಷಿಣೆಗಳನ್ನು ಈ ಹಿಂದೆ ತ್ರಿತನಿಗೆ ಕೊಟ್ಟಂತೆ, ನಮಗೂ ಕೊಡಲಿ. ಭಕ್ತ ಜನರ ಪಾಪ ಪರಿಹರಿಸಲಿ. ಅಶ್ವ, ಅನ್ನ ಪುತ್ರರನ್ನು ಯುದ್ಧ ಕುಶಲತೆ ಇವುಗಳಿಗಾಗಿ ಪ್ರಾರ್ಥಿಸುತ್ತಾರೆ.

5) ವಸಿಷ್ಠರು :

ಮರುತ್‌ಗಳು ಯಜಮಾನನಲ್ಲಿಗೆ ಬರಲಿ. ಆಯುಧಗಳು ದೂರ ಇರಲಿ. ಯಜಮಾನನ್ನು ರಕ್ಷಿಸಲಿ. ಯಜಮಾನನಿಗೆ ಧನ ಸಂಪತ್ತು ದಾನ ಇವುಗಳನ್ನು ಪಡೆಯುವಾಗ ಕಡೆಯವನಾಗದಿರಲಿ. ಶತ್ರುಗಳನ್ನು ಸೋಲಿಸಲಿ. ಯಜಮಾನರು ತಮ್ಮ ತಮ್ಮ ಗೃಹಗಳನ್ನು ಸುಖವಾಗಿ ಸೇರುವಂತಾಗಲಿ. ಯಜಮಾನನಿಗೆ ಶಕ್ತಿ ವೃದ್ಧಿಸಲಿ. ಶತ್ರುಗಳು ಹಾಗೂ ಇತರರು ಯಾರೂ ಅಪಹರಿಸಲಾಗದ ಧನವನ್ನು ಶೀಘ್ರವಾಗಿ ಕೊಡಲಿ. ಇಂದ್ರ, ಮಿತ್ರ, ವರುಣ, ಅಗ್ನಿ, ಅಪ್‌ದೇವತೆ, ಓಷಧಿ ವೃಕ್ಷಗಳು ಯಜಮಾನನ ಸ್ತೋತ್ರಗಳನ್ನು ಸ್ವೀಕರಿಸಲಿ. ದೇವತೆಗಳು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಲಿ. ಮಾನವ ಸ್ವಭಾವದವರಾದ ನಾವು ಅರಿಯದೇ ಮಾಡಿದ ಪಾಪವನ್ನು ನಾಶ ಮಾಡಲಿ. ಆಯುಧಗಳಿಗೆ ಪರವಶಿಸದಿರಲಿ. ಯಜಮಾನರಿಗೆ ಅಪೇಕ್ಷಿತ ರಕ್ಷಣೆ ಕೊಟ್ಟು ಕಾಪಾಡಲಿ.

6) ಭರದ್ವಾಜರು :

ಮಂತ್ರ ಪಠಿಸಿ, ಸ್ತೋತ್ರ ಮಾಡಿ ಯಜಮಾನನು ಆ ಬಲದ ಮೇಲೆ ಇಷ್ಟಾರ್ಥವನ್ನು ಬಯಸುತ್ತಾನೆ.

7) ರಶ್ಮಿ ಭಾರ್ಗವರು :

ಅನ್ನ ಭರಿತರಾಗಿ ರಥದಲ್ಲಿ ಒಟ್ಟಾಗಿ ಯಜ್ಞಕ್ಕೆ ಬರಲಿ. ವಸತಿ ಅಪೇಕ್ಷಿತ ಧನವಂತರಾಗಲಿ. ಶತ್ರುಗಳನ್ನು ದೂರದಿಂದಲೇ ಓಡಿಸಲಿ. ದೇವತೆಗಳು ಜೊತೆಯಲ್ಲಿ ಸೋಮಪಾನ ಮಾಡಲಿ. ಯಾಜ್ಞಿಕರಿಗೆ ಕೊಡಬೇಕಾದ ಸಂಪತ್ತು ಬಹುಕಾಲದಿಂದಲೂ ಇವರಲ್ಲಿದೆ. ಯಾಜ್ಞಿಕರನ್ನು ಉತ್ತಮ ಧನವಂತರನ್ನಾಗಿ ಮಾಡಲಿ.

॥ ಓಂ ಶಾಂತಿ ಶಾಂತಿ ಶಾಂತಿಃ ॥

!! ಓಂ ಶ್ರೀ ಮಹಾಗಣಪತಯೇ ನಮ: !!

ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ : ।
ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ: ॥

ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।
ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳಿಗೆ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋನಮ: ।

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।

ಋಗ್ವೇದ ದಂಸ್ಟ್ರಾರರಾದ ಇಂದ್ರ, ಅಗ್ನಿ, ನಾರಾಯಣ ಇವರಿಗೆ ನಮಸ್ಕಾರಗಳು.

# ಪವಮಾನ ಸೋಮ ದೇವರು

## ಋಗ್ವೇದದ 9ನೇ ಮಂಡಲದಲ್ಲಿ ಬಂದ ಪವಾಮಾನ ಸೋಮ ದೇವರು

**ವಿಭಾಗಗಳು :**

- ಪವಮಾನ ಸೋಮನ ಸ್ತೋತ್ರಗಳು
- ಸೋಮರಸ ಉತ್ಪಾದಿಸುತ್ತಿದ್ದ ಕ್ರಮಗಳು ಅಥವಾ ವಿಧಾನಗಳು
- ವಿಶೇಷ ಸ್ತೋತ್ರಗಳು
- ಯಾಜ್ಞಿಕರು ಯಾಗ ಭೂಮಿಯಲ್ಲಿ
- ಆ ಕಾಲದಲ್ಲಿನ ಇದ್ದ ಅವಶ್ಯಕತೆಗಳು (ಪ್ರಾರ್ಥನಾ ರೂಪದಲ್ಲಿ)

ಕೃತಜ್ಞತೆ :
ಎಸ್. ಸೂರ್ಯನಾರಾಯಣ ಕಲ್ಲಳ್ಳಿ, ಬೆಂಗಳೂರು – 560042
ವರಿಂದ ರಚಿತವಾದ ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಆಯ್ದು ತೆಗೆಯಲಾಗಿದೆ.
ಅವರ ಅಪ್ಪಣೆಯನ್ನು ಪಡೆಯಲಾಗಿದೆ. ಅವರ ಪ್ರೋತ್ಸಾಹದೊಂದಿಗೆ
ಈ ಕಿರು ಹೊತ್ತಿಗೆಯನ್ನು ತಯಾರಿಸಲಾಗಿದೆ.

## ಸ್ತೋತ್ರಗಳು

ಯಜ್ಞಾರ್ಥವಾಗಿ ಉತ್ಪನ್ನರಾದವರು, ಮರಣ ಧರ್ಮ ರಹಿತರು, ದ್ರವೀ ಗುಣದವರು, ಅನೇಕ ಕರ್ಮಗಳುಳ್ಳವರು, ಯಾರ ಹಿಂಸೆಗೂ ಒಳಗಾಗದವರು, ಪಚ್ಚೆ ವರ್ಣದವರು, ಗೋಕ್ಷೀರ ಮಿಶ್ರಿತರಾದವರು, ಪ್ರವಾಹ ರೂಪಿಗಳು, ಪ್ರಜಾಪಾಲಕರು, ದೇವತೆಗಳಿಗೆ ಒಡೆಯರು, ಯಜಮಾನರನ್ನು ಹರ್ಷಗೊಳಿಸುತ್ತಾರೆ. ಮಾನವರ ಎಲ್ಲಾ ವ್ಯವಹಾರಗಳನ್ನು ನೋಡ ಬಲ್ಲರು, ಉತ್ತಮ ಮಾರ್ಗದಲ್ಲಿ ಸಂಚರಿಸುತ್ತಾರೆ.

### ನಾನಾ ರೂಪಿ ಪವಮಾನ ಸೋಮದೇವರಿಗೆ ನಮೋ ನಮ:

ಇಂದ್ರ, ಪಾನಾರ್ಥವಾಗಿಯೇ ಹಿಂಡಲ್ಪಡುತ್ತಾರೆ. ಅಮೃತದಂತೆ ರುಚಿಕರ ಮತ್ತು ಸಂತೋಷದಾಯಕ, ರಾಕ್ಷಸರನ್ನು ಸಂಹಾರ ಮಾಡುವಷ್ಟು ಬಲಶಾಲಿ, ಇಷ್ಟಾರ್ಥ ಪ್ರದರು, ಕಾಮ ವರ್ಷಕರು, ಸೋಮವೆಂಬ ಅಮೃತ ಕರೆಯುವವರು, ಸ್ತೋತ್ರಗಳಿಂದ ಶತ್ರು ನಾಶ ಮಾಡಬಲ್ಲರು, ಯುದ್ಧದಲ್ಲಿ ಅಪ್ರತಿಹತ ಶತ್ರುಗಳನ್ನು ಸದೆ ಬಡಿಯುವವರು. ಅಂತರಿಕ್ಷಧಾರಕರು, ದೇವತೆಗಳಿಗೆ ಒಡೆಯರು, ಶತ್ರು ಧನ ಕಸಿದು ಯಜಮಾನನಿಗೆ ಕೊಡುತ್ತಾರೆ. ದಿವ್ಯ ಸ್ವರೂಪಿಗಳು, ಹೊಂಬಣ್ಣ, ಹಸಿರು, ಕೆಂಪು ಮಿಶ್ರಿತ ಬಣ್ಣದವರು.

### ಪುತ್ರ, ಪೌತ್ರದಾತರಾದ ಪವಮಾನ ಸೋಮದೇವರಿಗೆ ನಮೋ ನಮ:

ಗೂಢ ಮನಸ್ಸನ್ನು ಅರಿಯುವ ಮನಸ್ಸಿಗೆ ಸೋಮನು ಈಶ್ವರನೇ ಆಗಿದ್ದಾನೆ. ಸ್ವರ್ಗವಾಸಿಗಳು, ಇವನನ್ನು ಶತ್ರುಗಳು ಹೊಂದಲೂ ಸಾಧ್ಯವಿಲ್ಲ, ಸೋಲಿಸಲು ಸಾಧ್ಯವಿಲ್ಲ, ದ್ಯಾವಾ ಪೃಥ್ವಿಗಳಲ್ಲಿ ಶ್ರೇಷ್ಠ, ಸಾರಭೂತವಾದದ್ದನ್ನು ಸ್ತೋತೃಗಳಿಗೆ ಕೊಡುತ್ತಾರೆ. ಸ್ತುತಿಸಿದವರು ಸಕಲ ವಿಧ, ಹರ್ಷ, ಅಪೇಕ್ಷಿತ ಧನ ಪಡೆಯುತ್ತಾರೆ. ಫಣಿಗಳಿಂದ ಅಪಹೃತ ಗೋಧನವನ್ನು ಹಿಂದಕ್ಕೆ ತಂದು ಕೊಟ್ಟರವರು ಸೋಮನೇ.

### ಭಕ್ತರ ಮನಸ್ಸು ಅರಿತು ಅನುಗ್ರಹಿಸುವ ಸೋಮನಿಗೆ ನಮೋ ನಮ:

ಪಾಪ ಕರ್ಮ ಮಾಡುವವರನ್ನು ಸಂಹರಿಸುತ್ತಾರೆ. ಮರಣ ಧರ್ಮ ರಹಿತ, ಶತ್ರು ಹಂತಕ, ಸ್ವರ್ಗ ಲೋಕವಾಸಿ, ದೇವತೆಗಳ ಹರ್ಷಕಾರಕ. ಹೊಂಬಣ್ಣದ ಸೋಮನು ಅಂತರಿಕ್ಷದಲ್ಲಿ ಸೂರ್ಯನಿಂದ ಶೋಧಿತನಾಗುತ್ತಾನೆ. ಋತ್ವಿಕರಿಗೆ, ಯಾಜ್ಞಿಕರಿಗೆ ಗೋಧನ ಕೊಡಲು ಇಚ್ಛಿಸುತ್ತಾನೆ. ಸರ್ವಜ್ಞ, ಸರ್ವವೀಕ್ಷಕ, ಅಹಿಂಸಕ, ಶಕ್ತಿದಾಯಕ, ಇಷ್ಟಾರ್ಥಪ್ರದ, ಪೃಥ್ವಿಯ ಸ್ವರ್ಗದ ತೇಜಸ್ವಿ ಧನವನ್ನು, ಬಲವನ್ನು ಒದಗಿಸುತ್ತಾನೆ.

ಸ್ವರ್ಗ, ಭೂಮಿಗಳ ಶ್ರೇಷ್ಠ ಧನಗಳ ವೃದ್ಧಿಕಾರಕ, ಅನ್ನ ಆಹಾರಗಳಿಗೆ ಸ್ವಾಮಿ. ದೇವ ಯಜ್ಞದಲ್ಲಿದ್ದು ಕೀರ್ತಿ ಶಾಲಿಗಳು ಆಗುವಂತೆ ಅನುಗ್ರಹಿಸುತ್ತಾನೆ.

### ಋತ್ವಿಕರಿಗೆ, ಯಾಜ್ಞಿಕರಿಗೆ ಗೋಧನ ಕೊಡುವ ಸೋಮದೇವನಿಗೆ ನಮ:

ಸೋಮದೇವನು ಮನುಷ್ಯರನ್ನು ಅವರ ಬುದ್ಧಿಯನ್ನು ಅವರ ವಶದಲ್ಲಿ ಇರಿಸಿಕೊಳ್ಳುವಂತೆ ಮಾಡುತ್ತಾನೆ. ಸೂರ್ಯರಶ್ಮಿಗಳ ಮೂಲಕ ಹೊಂಬಣ್ಣದವನು ನಿರ್ವಂಚನೆಯ ಸ್ತುತಿಗಳನ್ನು ಅಪೇಕ್ಷಿಸುತ್ತಾನೆ. ಅನ್ನದಾತ, ಧನದಾತ, ಗೋಪಾಲಕ, ಜನಪಾಲಕ, ಉದಕ ಪ್ರೇರಕ, ಬಹುದನಿ. ಹತ್ತಿರ ಹಾಗೂ ದೂರದ ದೇವತೆಗಳನ್ನು ಸೇವಿಸುತ್ತಾನೆ. ಸೂರ್ಯ ತೇಜಸ್ಸಿನೊಂದಿಗೆ ಎಲ್ಲವನ್ನು ನೋಡಬಲ್ಲನು. ಇಂದ್ರಾದಿಗಳು ಇರುವ ಸ್ಥಳದಲ್ಲಿ ಸೋಮ, ರಸ ಹರಿಸಿ ಅವರನ್ನು ಸಂತೋಷಗೊಳಿಸುತ್ತಾನೆ. ದ್ಯಾವಾ ಪೃಥ್ವಿಗಳ ಶ್ರೇಷ್ಠ ಧನವನ್ನು ಯಾಜ್ಞಕರಿಗೆ ಹಾಗೂ ಸ್ತುತಿಸುವವರಿಗೆ ತಂದು ಕೊಡುತ್ತಾನೆ. ದೇವತೆಗಳನ್ನು ಬೇಗ ಸಮೀಪಿಸಿ ಮಿಂಚಿನ ಕಾಂತಿಯಂತೆ ಅಂತರಿಕ್ಷ ವ್ಯಾಪಿಸಿ ದ್ಯಾವಾ ಪೃಥ್ವಿಗಳನ್ನು ವ್ಯಾಪಿಸುತ್ತಾನೆ ಮತ್ತು ಬೆಳಗಿಸುತ್ತಾನೆ.

## ಸೂರ್ಯ ರೂಪಿನಲ್ಲಿರುವ ಸೋಮದೇವನಿಗೆ ನಮಃ

ಸಕಲ ದೇವತೆಗಳಿಂದಲೂ ಸಮಾನ ಪೂಜೆಗೊಳ್ಳುತ್ತಾನೆ. ಸಕಲ ವ್ಯವಹಾರಗಳನ್ನು ವಿಶೇಷ ರೀತಿ ನೋಡಬಲ್ಲನು. ದ್ಯುಲೋಕದಿಂದ ಬಂದು ಯಜಮಾನರ ಇಷ್ಟಾರ್ಥಗಳನ್ನು ಸಾಧಿಸಿಕೊಡುತ್ತಾನೆ. ದೇವತೆಗಳ ಪ್ರೀತ್ಯರ್ಥವಾಗಿ ಹಿಂತಲ್ಪಡುತ್ತಾನೆ. ಪರಿಶುದ್ಧ, ಪ್ರಭಾವಿ, ಪಚ್ಚೆವರ್ಣದವನು. ರಾಕ್ಷಸರು, ಯಾಜ್ಞಿಕರ ಮೇಲೆ ಬೀಳುವ ಮೊದಲೇ ದೂರ ಓಡಿಸುತ್ತಾನೆ. ಸೂರ್ಯನಂತೆ ಸಕಲವನ್ನು ನೋಡಬಲ್ಲನು. ಸಕಲ ಲೋಕ ಅತಿಕ್ರಮಿಸಿ ಪರ್ವತದಲ್ಲಿರುತ್ತಾನೆ. ಸಕಲ ರಮಣೀಯ, ಸಂಪತ್ತು ಜಯಿಸಿದ್ದಾನೆ. ಸಹಸ್ರ ಮುಖ ನೋಟದವನು.

## ಅಂತರಿಕ್ಷದಿಂದ ಪೃಥ್ವಿಗೂ, ಪೃಥ್ವಿಯಿಂದ ಅಂತರಿಕ್ಷಕ್ಕೂ ಮೇಲೆ ಸ್ವರ್ಗ, ದ್ಯುಲೋಕಗಳ ಸಂಚಾರಿ ಸೋಮದೇವನಿಗೆ ನಮಃ

ಸಾವಿರಾರು ಯಜಮಾನರ ಪೋಷಕ. ಇಂದ್ರನ ಹೃದಯ ಪ್ರವೇಶಿಸಲು ಇಚ್ಛಿಸುತ್ತಾನೆ. ಸಕಲ ಜಗತ್‌ಪ್ರಭು, ಸರ್ವವ್ಯಾಪಿ, ಸಕಲ ನದಿಗಳ ಮಿತ್ರ, ಪಾಪಿಷ್ಟರ ನಾಶಕ. ದಾನವಂತರಲ್ಲಿ ಉದಾರ ದಾನಿ. ಉತ್ತಮ ವೇದಿಕೆಯಲ್ಲಿರುವವನು. ಶತ್ರು ಧನ ಅಪಹರಿಸಿ ರಾಕ್ಷಸರನ್ನು ಓಡಿಸುತ್ತಾನೆ. ಉತ್ತರವೇದಿಕೆಯಲ್ಲಿ ಇರುವವನು. ನಾಶರಹಿತ ಅನ್ನ ಹೊಂದಿದ್ದಾನೆ. ಧ್ಯಾನಾತ್ಮಕ ಸ್ತೋತ್ರಗಳಿಂದ ಸೋಮನು ಸ್ತೋತೃಗಳಿಗೆ ಧನ ಕೊಡುತ್ತಾನೆ.

## ಸ್ತೋತ್ರಪ್ರಿಯ ಪವಮಾನ ಸೋಮನಿಗೆ ನಮಃ

ಸೋಮನು ವಿಶ್ವೇ ದೇವತೆಗಳಲ್ಲಿದ್ದಾನೆ. ದ್ಯುಲೋಕ ಶಿಖರ ಪ್ರಾಯನಾಗಿದ್ದಾನೆ. ಎಲ್ಲವನ್ನು ತಿಳಿದ ಸೋಮನನ್ನು ಧ್ಯಾನಾತ್ಮಕ ಸ್ತುತಿಗಳು ಅವಲಂಬಿಸಿವೆ. ತನ್ನ ಪ್ರಶಂಸೆಗಾಗಿ ಮಾನವರನ್ನು ಅವಲಂಬಿಸಿದ್ದಾನೆ. ಆದಿತ್ಯ ಮೂರು ಲೋಕಗಳು, ಐದು ಋತುಗಳು, ಹನ್ನೆರಡು ತಿಂಗಳುಗಳು, ಗೋಕ್ಷೀರ, ವಸತೀವರೀಗಳು, ಚಮಕಗಳು ಇವುಗಳಿಂದ ಪ್ರಸಿದ್ಧನಾಗಿದ್ದಾನೆ. ಪೂಜಾರ್ಹ ದೇವತೆಗಳನ್ನು ತಾನು ಸೂರ್ಯ ರಶ್ಮಿಯಲ್ಲಿದ್ದು ಸೇವಿಸುತ್ತಾನೆ. ಸೂರ್ಯ ಪುತ್ರಿಗೆ ಸಂತೋಷ ತರುತ್ತಾನೆ. ಇಂದ್ರನ ಶಕ್ತಿಗಾಗಿ ಧಾರಾರೂಪವಾಗಿ ಹರಿಯುತ್ತಾನೆ. ಸ್ತುತಿಗಳನ್ನು ಆಲಿಸುತ್ತಾನೆ. ನಾಶ ರಹಿತ, ಮಾನವ ವ್ಯವಹಾರಗಳನ್ನು ನೋಡುತ್ತಾನೆ. ಗೋವು, ರಥ, ಸುವರ್ಣಗಳ ಪವಮಾನ.

## ಯಾರ ಕೃಪೆಯಿಂದ ಸ್ವರ್ಗ ಲಭಿಸುವುದೋ ಆ ಪವಮಾನ ಸೋಮನಿಗೆ ನಮಃ

ಇಂದ್ರ ಶಕ್ತಿಗಾಗಿಯೇ ಧಾರಾರೂಪ ಹರಿಯುತ್ತಾನೆ. ಸ್ತೋತ್ರಗಳ ಮೂಲಕ ಹರ್ಷಗೊಂಡು ದೇವತೆಗಳನ್ನು ಹರ್ಷಗೊಳಿಸಿ ಅವರನ್ನು ಜತೆಯಲ್ಲಿ ಕರೆತರುತ್ತಾನೆ. ಯಜಮಾನನಿಗೆ ಅನ್ನ, ಆಯುಸ್ಸು ವೃದ್ಧಿಸುತ್ತಾನೆ. ಸೋಮನು ದ್ರೋಣಕಲಶ ಅಭಿಮುಖವಾಗಿ ಹರಿಯುತ್ತಾನೆ. ಇವನು ಪ್ರರ್ಜನ್ಯನ ಮಗ, ಭೂಮಿ ಪುತ್ರ. ಶ್ಯೇನ ಪಕ್ಷಿಯಂತೆ ವೇಗ ಸಂಚಾರಿ. ಪೃಥ್ವಿಯಲ್ಲಿ ನಡೆಯುವ ಯಜ್ಞದಲ್ಲಿ ಸೋಮನಿರುತ್ತಾರೆ. ಪರ್ವತಗಳಲ್ಲಿ ನಿವಾಸ ಸ್ಥಾನ ಹೊಂದಿದ್ದಾನೆ. ಸೋಮನ ಪ್ರಜ್ಞೆಯಿಂದಲೇ ದೇವತೆಗಳು ಜಗತ್ತನ್ನು ನಿರ್ಮಿಸುತ್ತಾರೆ. ಅಂಗೀರಾದಿ ಪಿತೃಗಳು ಔಷಧಿಗಳಲ್ಲಿ ಗರ್ಭ ಸ್ಥಾಪಿಸುತ್ತಾರೆ.

## ದ್ಯುಲೋಕ ಹಾಗೂ ಈ ಲೋಕದ ದೇವತೆಗಳ ಉತ್ಪತ್ತಿ ಅರಿತಿರುವ ಪವಮಾನ ಸೋಮನಿಗೆ ನಮಃ

ಸೋಮನು ವಾಯುವಿನಂತೆ ಸ್ವತಂತ್ರ ಗಮನಿ. ಸವಿತೃವಿನಂತೆ ಜಗತ್ ಪೂಜಿತನಾಗಿದ್ದಾನೆ. ಇಂದ್ರನಂತೆ ಮಹತ್‌ಕರ್ಮಿ. ಅಸುರರ ನಾಶಕ. ಪೂಜ್ಯ ಮರುತ್‌ಗಳ ಗುಂಪಿನಂತೆ ಬಲಶಾಲಿ. ಆರ್ಯಮನಂತೆ ಉದಾರಿ / ಮಿತ್ರನಂತೆ ಸ್ತುತಿಪಾತ್ರ. ವರುಣನಂತೆ ಮಹತ್ತಕರ್ಮಿ. ಸೋಮನು ಮಹತ್ವ ಸ್ಥಾನ ಪಡೆದಿದ್ದಾನೆ. ಪೂಜ್ಯ ಕವಚಧಾರಿ, ಆಯುಧಧಾರಿ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಜಯಿಸುತ್ತಾನೆ. ಅನ್ನ, ಬಲ, ಧನ, ಹಿರಣ್ಯ ಸಂಪತ್ ಒದಗಿಸುತ್ತಾನೆ.

### ಆದಿತ್ಯನು ಸೋಮನನ್ನು ದೇವತೆಗಳನ್ನು ರಕ್ಷಿಸುತ್ತಾನೆ. ಶತ್ರುಗಳಿಂದ ರಕ್ಷಿಸುತ್ತಾನೆ. ನಮ್ಮ ರಕ್ಷಕ ಆದಿತ್ಯ ಮತ್ತು ಪವಮಾನರಿಗೆ ನಮ:

ಸವನ ತ್ರಯಗಳಲ್ಲೂ ನಡೆಯುವ ಯಜ್ಞಗಳಲ್ಲಿ ಸೂರ್ಯನಿಂದ ಆವೃತ್ತನಾಗಿದ್ದಾನೆ. ಕರ್ಮ ಫಲಾನುಸಾರ, ದ್ಯುಲೋಕ ಸಂಪತ್ತು ಅನ್ನ ಒದಗಿಸುತ್ತಾನೆ. ದ್ಯಾವಾ ಪೃಥ್ವಿಗಳ ನಡುವೆ ಸಂಚರಿಸುತ್ತಾನೆ. ಅಹಸ್ಸಿನ ಕಾಂತಿಯಿಂದ ಚಲಿಸುವ ಸೋಮನು ಅಶ್ವದಂತೆ ಕ್ರೀಡಿಸುತ್ತಾನೆ. ಸೂಕ್ಷ್ಮ ದೃಷ್ಟಿಯವನು. ರಸಮಯಿ, ಆದಿತ್ಯ ಪ್ರಕಾಶಕ. ಕಾಂತಿಯುತ, ಮಿತ್ರಾವರುಣರಿಗೆ ಸುಖಕಾರಕ. ಶಕ್ತಿದಾಯಕ. ಮಿತ್ರನಿಗೆ ಮಾರ್ಗದರ್ಶಕ. ಪಶುಗಳಿಗೆ ಒಡೆಯನಾಗಿದ್ದಾನೆ. ಸ್ತೋತ್ರಗಳೇ ಅವನ ಪೂಜೆ. ದ್ಯುಲೋಕ ಸ್ಥಾಪಕ. ಸ್ತುತಿಕರ್ತರಿಗೆ ತಂದೆ. ರೋಗ ಹರ, ವೈದ್ಯ ರೂಪಿನಲ್ಲಿದ್ದಾನೆ.

### ಕರ್ಮ ಮಾಡಿಸಿಯೇ ಫಲ ನೀಡುವ ರೋಗಹರ ಪವಮಾನನಿಗೆ ನಮ:

ಸೂರ್ಯನನ್ನು ಅಂತರಿಕ್ಷದಲ್ಲಿ ನಿಲ್ಲುವಂತೆ ಮಾಡಿದ್ದಾನೆ. ಮಾನವ ವ್ಯವಹಾರಗಳನ್ನು ನೋಡಬಲ್ಲನ್ನು ಸಕಲ ಲೋಕಗಳನ್ನು ಅಧೀನದಲ್ಲಿಟ್ಟುಕೊಂಡಿರುವವನು. ಸೋಮನ ಸತ್ವದಿಂದಲೇ ಪ್ರಜೆಗಳು ಉತ್ಪನ್ನರಾಗುತ್ತಾರೆ. ರಶ್ಮಿಯಂತಹ ಧ್ವಜವುಳ್ಳ ಸೋಮನು ಉದಕ ತರಂಗದಂತೆ ನದಿ ಸಮುದ್ರಗಳನ್ನು ಸೇರುತ್ತಾನೆ. ಪೃಥ್ವಿ ಲೋಕವನ್ನು ಎತ್ತಿ ಹಿಡಿದಿದ್ದಾನೆ. ವಸತೀವರಿ ಉದಕ ಆಶ್ರಯ ಪಡೆದಿದ್ದಾನೆ. ಅಂತರಿಕ್ಷದಲ್ಲಿ ಗರ್ಜಿಸುತ್ತಾನೆ. ವಾಯು ಮಿತ್ರತ್ವ ಪಡೆಯಲು ಪ್ರವಹಿಸುತ್ತಾನೆ.

### ದ್ಯಾವಾ ಪೃಥ್ವಿಗಳ ನಡುವೆ ಅಡಗಿರುವ ಸೋಮನಿಗೆ ನಮ:

ಸೋಮನು ಇಂದ್ರನಂತೆ ಲೋಕ ಸಂಚರಿಸುತ್ತಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾಧ ಎಂಬ ಐದು ಗುಂಪಿನ ಜನರನ್ನು ಸಮೀಪಿಸುತ್ತಾನೆ. ಧನಿಕರಲ್ಲಿ ಧನಿಕ. ವಸತಿ ದಾಯಕ, ಶಕ್ತಿದಾಯಕ, ಅನ್ನದಾತ, ಗುಟ್ಟಾಗಿ ಅಡಗಿರುವ ದುಷ್ಟರನ್ನು ಪ್ರಾತ:ಕಾಲ್ಲದಲ್ಲಿ ಓಡಿಸುತ್ತಾನೆ. ದ್ಯಾವಾಪೃಥ್ವಿಗಳಲ್ಲಿ ಇರುವ ಧನವನ್ನು ವೃದ್ಧಿಗೊಳಿಸುತ್ತಾನೆ. ಆದಿತ್ಯನಂತೆ ಪ್ರಕಾಶಿಸುತ್ತಾ ಗೋಚರಿಸುತ್ತಾನೆ. ಧನರಹಸ್ಯ ಅರಿತವನು. ಸ್ವರ್ಗಪ್ರಾಪಕ.

### ದ್ಯಾವಾ ಪೃಥ್ವಿಗಳಿಗೆ ಸೇರಿದ ಸಕಲ ಸಂಪತ್ತನ್ನು ವೃದ್ಧಿಗೊಳಿಸುವ ಸೋಮನಿಗೆ ನಮ:

ಹವಿಸ್ಸಿನೊಂದಿಗಿರುವ ಯಜಮಾನನನ್ನು ರಕ್ಷಿಸುತ್ತಾನೆ. ಕರ್ಮವೀಕ್ಷಕ, ದೇವತೆಗಳಲ್ಲಿಗೆ ಹೋಗಿ ಬರುವವನು. ಕರ್ಮಜ್ಞಾನವನ್ನು ನೀಡುತ್ತಾನೆ. ಸ್ತೋತ್ರದಿಂದ ಪ್ರೀತನಾಗಿ ಉತ್ತಮ ಜ್ಞಾನ ಕೊಡುತ್ತಾನೆ.

## ಪವಮಾನ ಸೋಮದೇವರು

ಸೋಮನ ಮೂಲ ಸ್ಥಾನವು ದ್ಯುಲೋಕದ ನಾಭಿ ಪ್ರದೇಶದಲ್ಲಿದೆ. ಸೋಮದೇವನು ಪರ್ಜನ್ಯನ ಮಗ. ಸೂರ್ಯಪುತ್ರಿ ಶ್ರದ್ಧಾದೇವಿ ಹಾಗೂ ಶ್ಯೇನ ಪಕ್ಷಿಯಿಂದ ಸೋಮನು ದ್ಯುಲೋಕದಿಂದ ಭೂಲೋಕಕ್ಕೆ ತರಲ್ಪಟ್ಟನು. ಆರ್ಜಿಕ ಪ್ರದೇಶ ಶರಣ್ಯಾವರ್ತ ಎಂಬ ಸರಸ್ಸಿನಲ್ಲಿ ಸೋಮನು ಯಥೇಚ್ಛವಾಗಿ ಬೆಳೆದಿದ್ದಾನೆ. ಅರಣ್ಯದಲ್ಲಿ ಸೋಮನು ನಲಿಯುತ್ತಾನೆ. ಪರ್ವತ ಪ್ರದೇಶದಲ್ಲಿ ಯಥೇಚ್ಛವಾಗಿ ಬೆಳೆಯುತ್ತಾನೆ. ಇಂದ್ರ ಪಾನಾರ್ಥವಾಗಿ ಸೋಮನನ್ನು ಬೆಳೆಸುತ್ತಾರೆ. ಗಂಧರ್ವರಿಂದ ಸೋಮನು ರಸಭರಿತನಾದನು. ಸೋಮನು ಸ್ವರ್ಗಲೋಕದ ಶಿಷ್ಯ. ದೇವತೆಗಳೆಲ್ಲರೂ ಸೋಮನನ್ನು ಭಯಸುತ್ತಾರೆ. ಸೋಮನು ಇಂದ್ರಾದಿ ದೇವತೆಗಳೆಲ್ಲರ ಮಿತ್ರತ್ವ ಬಯಸುತ್ತಾನೆ. ಸೂರ್ಯ ತೇಜಸ್ಸಿನಿಂದ ಶುದ್ಧಿಗೊಳ್ಳುತ್ತಾನೆ. ಶ್ಯೇನ ಪಕ್ಷಿಯಂತೆ ವೇಗ ಸಂಚಾರಿಯಾಗಿದ್ದಾನೆ.

### ಸೋಮಲತೆಯಿಂದ ಸೋಮರಸ ತೆಗೆಯುವ ನಾನಾ ವಿಧಾನಗಳು

ಸೋಮರಸವನ್ನು ತಯಾರಿಸುವ ನಾನಾ ಕ್ರಮಗಳನ್ನು ಬೇರೆ ಬೇರೆ ಋಷಿಗಳು ಈ ಕೆಳಗೆ ಕಂಡಂತೆ ತಿಳಿಸಿದ್ದಾರೆ. ಋಷಿಗಳು 21 ಜನ ಋತ್ವಿಕರು ಸೇರಿ ಸವನ ತ್ರಯಗಳಲ್ಲೂ ಪರ್ವತಗಳಿಂದ ತರಲ್ಪಟ್ಟ ಸೋಮಲತೆಯಿಂದ ರಸ ತೆಗೆಯುತ್ತಾರೆ.

ಹಲಗೆಗಳ ಮಧ್ಯದಲ್ಲಿ ಕಲ್ಲಿನ ಗ್ರಾವಣಗಳ ಮೂಲಕ ತೋಳುಗಳ ಬಲದಿಂದ ರಸವನ್ನು ತೆಗೆಯುತ್ತಾರೆ. ಪ್ರಾಜ್ಞರ 10 ಬೆರಳುಗಳಿಂದ ಅನೇಕ ಧಾರೆಗಳಲ್ಲಿ ಹಿಂಡಲ್ಪಟ್ಟು ಉದಕ ಕ್ಷೀರದೊಂದಿಗೆ ಸಂಸ್ಕರಿಸಲ್ಪಟ್ಟು ಉಣ್ಣೆಯ, ನಾರಿನ ದಶಾಪವಿತ್ರದಲ್ಲಿ ಹಾದು ಶುದ್ಧಿ ಹೊಂದಿ ಶ್ಯೇನ ಪಕ್ಷಿಯಂತೆ ಸದ್ದು ಮಾಡುತ್ತಾ ದ್ರೋಣ ಕಳಸ ಸೇರುತ್ತದೆ. ಹೀಗೆ ಸಂಸ್ಕರಿಸಲ್ಪಟ್ಟ ಸೋಮನನ್ನು ಯಜಮಾನರು ಹರ್ಷದಿಂದ ಪೂಜಾದಿಗಳನ್ನು ಮಾಡುತ್ತಾರೆ. ಯಜ್ಞಾರ್ಥವಾಗಿ ಹಲಗೆಗಳ ನಡುವೆ ಹಿಂಡಲ್ಪಟ್ಟು 7 ಜನ ಹೋತೃಗಳು ತಮ್ಮ ತಮ್ಮ ಹತ್ತು ಬೆರಳುಗಳಿಂದ ಸೇವಿಸುತ್ತಾರೆ.

ದೇವತೆಗಳ ಸಂತೃಪ್ತಿಗಾಗಿಯೇ ಈ ಕರ್ಮಗಳನ್ನು ಸ್ತುತಿ ಪೂರ್ವಕವಾಗಿ ಋತ್ವಿಜರು ಮಾಡುತ್ತಾರೆ. ಮೇಧಾವಿ ಋತ್ವಿಜರು ಸೋಮಲತೆಗಳನ್ನು ಜಜ್ಜಿ ಬೆರಳುಗಳಿಂದ ಹಿಂಡಿದಾಗ ಬೆರಳುಗಳ ಸಂದುಗಳಿಂದ ಹರಿದ ರಸವನ್ನು ದಶಾಪವಿತ್ರದಲ್ಲಿ ಶೋಧಿಸಿ ವಸತೀವರಿ ಉದಕದೊಂದಿಗೆ ಮಿಶ್ರಮಾಡಿ ಸೋಮಪಾತ್ರೆಗೆ ಹಾಲು, ಮೊಸರುಗಳೊಂದಿಗೆ ಬೆರಸಿ ಪಾನಯೋಗ್ಯವಾಗುವಂತೆ ಮಾಡುತ್ತಾರೆ.

ಜಳಜಳ ಶಬ್ದಮಾಡುತ್ತಾ ಧಾರೆಧಾರೆಯಾಗಿ ಹರಿದು ಬಂದು ಅಲೆಗಳಂತೆ ಪ್ರವಹಿಸುತ್ತದೆ. ಸ್ವಚ್ಛ ಹನಿಹನಿಗಳಾಗಿ ಹರಿವ ಸೋಮವು ನೀರುಗಳಲೆಲ್ಲಾ ಶ್ರೇಷ್ಠವಾದುದು. ಪರಿಶುದ್ಧ ಸೋಮನನ್ನು ಉತ್ತಮ ಮಾರ್ಗದಲ್ಲಿ ಉತ್ತಮ ವೇದಿಕೆಗೆ ದೇವಾರ್ಪಣೆಗಾಗಿ ಋತ್ವಿಜರು ಒಯ್ಯುತ್ತಾರೆ. ಹೋಮ ಮಾಡುವ ಸಲುವಾಗಿ ದ್ರೋಣ ಕಳಸಕ್ಕೆ ವೇಗವಾಗಿ ಹರಿಯುತ್ತದೆ. ಹಾಲು, ಮೊಸರು, ಉದಕ, ಸೇರಿದಾಗ ಶುದ್ಧ ಸೋಮರಸವಾಗುತ್ತದೆ.

ವಿಧ್ಯುಕ್ತ ಕರ್ಮಗಳಿಂದ ಸ್ತುತಿ ಪೂರ್ವಕವಾಗಿ ರಸ ತೆಗೆದು ದಶಾಪವಿತ್ರದ ಮೇಲಿಟ್ಟು ಶೋಧಿಸುತ್ತಾರೆ. ಮರದ ಪಾತ್ರೆಗಳಿಗೂ ತುಂಬುತ್ತಾರೆ. ಮರುತ್ ದೇವತೆ ಅಧ್ವರ್ಯುವೂ ಸೇರಿ "ಸೋಮಾಭಿಷವಣ" ವಿಧಾನದಿಂದ ಹಾಲು ಕರೆಯುವಂತೆ ರಸ ತೆಗೆದು ದಶಾಪವಿತ್ರದಲ್ಲಿ ಸಂಗ್ರಹಿಸುತ್ತಾರೆ.

ಹಲಗೆಗಳ ಮಧ್ಯೆ ಹಿಂಡಲ್ಪಟ್ಟು ಅಧ್ವರ್ಯುಗಳ ಕೈಬೆರಳುಗಳ ಮಧ್ಯದಿಂದ ತೂರಿ 'ಕುರಿ ತುಪ್ಪಟದ' ದಶಾಪವಿತ್ರದ ಮೂಲಕ ಶೋಧಿತವಾಗಿ ಹೊರಸೂಸುತ್ತಾ ಮಧುರ ಸೋಮರಸವು ಯಜ್ಞ ಕರ್ಮದಲ್ಲಿ ವೇಗವಾಗಿ ದ್ರೋಣಕಳಸ ಸೇರುತ್ತದೆ. ಅನಂತರ ಯಜ್ಞಾ ಆಹುತಿಗಳ ಮೂಲಕ ಸ್ವರ್ಗ ಲೋಕದ ದೇವತೆಗಳನ್ನು ತಲುಪುತ್ತದೆ.

ಸೋಮರಸವು ಇಂದ್ರಪಾನಾರ್ಥವಾಗಿಯೇ ಹಿಂಡಲ್ಪಡುತ್ತದೆ. ರಸವಂತ ಸೋಮನು ಕ್ಷೀರದೊಂದಿಗೆ ಸ್ರುಕ್ ಪಾತ್ರೆಯಲ್ಲಿ ಸೋಮರಸವಾಗಿ ಸಿದ್ಧನಾಗುತ್ತಾನೆ. ಗ್ರಾವಣಜನಿತ ಹಿಂಡಲ್ಪಟ್ಟ ಸೋಮನು ಸಹಸ್ರ ಧಾರೆಗಳಲ್ಲಿ ದಶಾಪವಿತ್ರದಲ್ಲಿ ಹಾದು ಶುದ್ಧಿ ಹೊಂದಿ ವಿಸ್ತಾರವಾಗಿ ಪ್ರವಹಿಸುತ್ತಾನೆ. ಅನೇಕರಿಂದ ಆಹ್ವಾನಿತನಾಗುತ್ತಾನೆ. ಅಂತರಿಕ್ಷ ವೃಷ್ಟಿಯಂತೆ ಹಿಂಡುತ್ತಾರೆ. ಉಣ್ಣೆಯ ದಶಾಪವಿತ್ರದಲ್ಲಿ ಹರಿಸಿ ಒಳ್ಳೆಯ ಪಾತ್ರೆಗಳಲ್ಲಿ ಶೇಖರಿಸುತ್ತಾರೆ.

ಋತ್ವಿಜರು ಗಾಯತ್ರಿ ಮಂತ್ರ ಸ್ತೋತ್ರಗಳಿಂದ ಸಪ್ತ ಛಂದಸ್ಸುಗಳ ಸ್ತೋತ್ರದಿಂದ ಸಾಮಗಾನಗಳಿಂದ ಸ್ತೋತ್ರಮಾಡುತ್ತಾ ಈ ಕಾರ್ಯಗಳನ್ನು ಮಾಡುತ್ತಾರೆ. ಉತ್ತಮ ಹಸ್ತದ 10 ಬೆರಳುಗಳಿಂದ ಋತ್ವಿಜರು ಸೋಮ ರಸವನ್ನು ಶೋಧಿಸುತ್ತಾರೆ. ಉಣ್ಣೆಯ ನಾರಿನ ದಶಾಪವಿತ್ರದಲ್ಲಿ ಶುದ್ಧಿಯಾಗುತ್ತದೆ. 7 ನದಿಗಳ ವಸತೀವರಿ ಉದಕದೊಂದಿಗೆ ಹಸುವಿನ ಹಾಲು, ಮೊಸರು ಬೆರೆತು ಶುಕ್ಲವರ್ಣದ ಪುಷ್ಟಿಕರವಾದ ಸೋಮರಸವಾಗಿ ಬೆಳಗುತ್ತಾನೆ.

ಗೋಚರ್ಮದ ಮೇಲೆ ಹರಡಿದ ಲತಾರೂಪಿ ಸೋಮನನ್ನು ಕರ್ಮನಿರತ ಯಜಮಾನರು ದಶ ಅಂಗುಲಿಗಳಿಂದ ಹಿಂಡಿ ಶಬ್ದ ಮಾಡುತ್ತಾ ನಾರು ಉಣ್ಣೆಯ ದಶಾಪವಿತ್ರದಲ್ಲಿ ಅಭಿಷವಣದಿಂದ ಶುದ್ಧಿಗೊಂಡು ವಸತೀವರಿ ಉದಕದೊಂದಿಗೆ ಸೇವಿ ಯಜ್ಞಾರ್ಥವಾಗಿ ಪ್ರವಹಿಸಿ ಸೋಮನು ದ್ರೋಣ ಕಲಶ ಸೇರುತ್ತಾನೆ. ಉತ್ಪನ್ನನಾದನೊಡನೆಯೇ ಉಣ್ಣೆಯ ನಾರಿನ ಮೂಲಕ ಹರಿದು ಶುದ್ಧನಾಗುತ್ತಾನೆ. ಅಭಿಷವಣ ಕಾಲದಲ್ಲಿ ಎಲ್ಲರೂ ಕೇಳುವಂತೆ ಶಬ್ದದಿಂದ ರಮಿಸುತ್ತಾ ಎಲ್ಲರಿಗೂ ಗೋಚರನಾಗುತ್ತಾನೆ.

ನಿಷಾದಾದಿ ಪಂಚಜನರೂ ಒಂದಾಗಿ ಈ ಸೋಮಾಭಿಷವಣ ಕಾರ್ಯನಿರತರಾಗಿರುತ್ತಾರೆ. ಬಾಹುಬಲದಿಂದ ನಾನಾ ಸ್ತೋತ್ರಗಳಿಂದ ಹಿಂಡಿ ಶುದ್ಧಿಗೊಂಡು ದಶಾಪವಿತ್ರದಲ್ಲಿ ರಸರೂಪಿ ಸೋಮನು ಹರಿಯುತ್ತಾನೆ. ಆಶಿರ ದ್ರವ್ಯಗಳೊಂದಿಗೆ ಶುದ್ಧಿ ಹೊಂದಿ ಶ್ವೇನ ಪಕ್ಷಿಯಂತೆ ಶಬ್ದಮಾಡುತ್ತಾ ಸ್ತೋತ್ರಯುಕ್ತನಾಗಿ ದ್ರೋಣ ಕಲಶ ಮತ್ತು ಚಮೂ ಪಾತ್ರ ಸೇರುತ್ತಾನೆ.

ಸೋಮ ಪ್ರವಾಹವು ಶಬ್ದವು ಸಮುದ್ರದ ಅಲೆಯಂತೆ, ವೇಗದ ಬಾಣದಂತೆ, ವಾದ್ಯ ವಿಶೇಷದಂತೆ ಇರುತ್ತದೆ. ಹಿಂಡಿದೊಡನೆಯೇ ಇಂದ್ರನಿಗೂ, ಯಜಮಾನನಿಗೂ ಹರ್ಷ ಉಂಟುಮಾಡುತ್ತಾನೆ. ಸೋಮರಸ ಹಿಂಡುವ ಸಮಯದಲ್ಲಿ ರಾಕ್ಷಸರು ಅವನಿಂದ ನಾಶವಾಗುತ್ತಾರೆ. ದೇವತೆಗಳನ್ನು ತೃಪ್ತಿಪಡಿಸುತ್ತಾನೆ. ಯಜ್ಞ ಕರ್ಮಗಳನ್ನು ಅಪೇಕ್ಷಿಸುತ್ತಾನೆ. ಇಂದ್ರ ಮಿತ್ರತ್ವವನ್ನು ಅಪೇಕ್ಷಿಸುತ್ತಾನೆ. ವೇಗವಾಗಿ ಹರಿಯುತ್ತಾ ಮಾನವರಿಗೆ ರಕ್ಷಣೆ ಮಾಡುತ್ತಾ ಅವರನ್ನು ಪಾಪಗಳಿಂದ ದಾಟಿಸುತ್ತಾನೆ.

ಅಧ್ವರ್ಯು ಋತ್ವಿಜರು ವೇದಮಂತ್ರ ಪಠಿಸುತ್ತಾ ಮಹಾಸ್ತುತಿಗಳೊಂದಿಗೆ ಇಂದ್ರ, ವಾಯು, ವರುಣ, ಮರುತ್ ದೇವತೆಗಳ ಪಾನಾರ್ಥವಾಗಿ ಹಿಂಡುತ್ತಾರೆ. ಉದಕಪುತ್ರ ಅಪ್ಸು ಋಷಿಯು ದೇವತೆಗಳ ಪಾನಾರ್ಥ ಸೋಮರಸವನ್ನು ಸಿದ್ಧ ಪಡಿಸಿದ್ದಾನೆ. ಸುವರ್ಣದಿಂದ ಶುದ್ಧಿಹೊಂದಿ ಋತ್ವಿಜರಿಂದ ವಸತೀವರಿ ಉದಕದೊಂದಿಗೆ ಸೇರಿ ಮಧು ಕ್ಷೀರಾಧಿಗಳೊಂದಿಗೆ ಸುಸಂಸ್ಕೃತನಾಗಿ ಶಕ್ತಿಯುತ ಸೋಮನು ದೇವತೆಗಳ ಪಾನಾರ್ಥ ಸಿದ್ಧನಾಗುತ್ತಾನೆ. ಹಿಂಡಿ ಶೋಧಿತನಾದ ಸೋಮನು ಶಬ್ದ ಮಾಡುತ್ತಾ ತಗ್ಗು ಪ್ರದೇಶದಲ್ಲಿ ನೀರು ಹರಿಯುವಂತೆ ದಶಾಪವಿತ್ರ ಹಾದು ದ್ರೋಣ ಕಳಸ ಸೇರುತ್ತಾನೆ. ಸೋಮನು ಇಂದ್ರ ಪಾನಾರ್ಥವಾಗಿಯೇ ಹಿಂಡಲ್ಪಡುತ್ತಾನೆ.

ಪವಮಾನ ಸೋಮನು ಸಕಲವನ್ನು ನೋಡಬಲ್ಲನು. ಎಚ್ಚರನಾಗಿಯೇ ಇರುವವನು. ಹಿರಣ್ಯದಿಂದ ಶುದ್ಧಿ ಹೊಂದಿ ದೇವತೆಗಳೊಳಗೂಡಿರುವವನು. ಉನ್ನತ ಪ್ರದೇಶದಲ್ಲಿ ಇರುವ ದಶಾಪವಿತ್ರದಲ್ಲಿ ಉಷ:ಕಾಲದಲ್ಲಿ ಪ್ರವೇಶಿಸುತ್ತಾನೆ. ಮೇಧಾವಿ ದೇವತೆಗಳಿಗಾಗಿ ಹಿಂಡಲ್ಪಟ್ಟು ಶಕ್ತಿಯುತನಾಗಿ ಅವರುಗಳ ಪ್ರಥಮ ಪೂಜೆಗೆ ಸಿದ್ಧನಾಗುತ್ತಾನೆ.

ಪ್ರಕಾಶಮಾನ ದೇವತೆಗಳಿಗಾಗಿ ಪ್ರವಹಿಸುತ್ತಾನೆ. ದೇವತೆಗಳಿಗೆ ಪಾನಯೋಗ್ಯನಾಗಿದ್ದಾನೆ. ಇಂದ್ರನು ಸೋಮಪಾನ ನಂತರ ಹರ್ಷಿತನಾಗುತ್ತಾನೆ. ದ್ಯುಲೋಕದಲ್ಲಿ ಸೂರ್ಯನನ್ನು ಸ್ಥಾಪಿಸಿ ಮಿತ್ರ, ವರುಣರ ಧಾರಣಾರ್ಥ ಪ್ರವಹಿಸುತ್ತಾನೆ. ಭಕ್ತರ ಸ್ತುತಿಗೆ ಅಭಿಮುಖನಾಗುತ್ತಾನೆ. ಯಜ್ಞಾರ್ಥ ದೇವತೆಗಳಿಗಾಗಿ ಶೋಧಿತನಾಗುತ್ತಾನೆ. ಸ್ವರ್ಗದ ಮೇಲಿರುವ ದೇವತೆಗಳ ಬಳಿಗೆ ಹೋಗಿ ತುಂತುರು ತುಂತುರಾಗಿ ಬೀಳುತ್ತಾ ಶುದ್ಧಿ ಮಾಡುತ್ತಾ ದಶಾಪವಿತ್ರದ ಕಡೆಗೆ ಪ್ರವಹಿಸುತ್ತಾನೆ.

ಹಸುಗಳು ಆಶಿರ ದ್ರವ್ಯಗಳನ್ನು ಒದಗಿಸುತ್ತವೆ. ಕರೆಯುವ ಹಸುವಿನ ಕೆಚ್ಚಲಿನ ಹಾಲು ಸೋಮಭರಿತವಾಗಿದೆ. ಗೋಚರ್ಮದ ಮೇಲೆ ಹಾದು ಉಣ್ಣೆಯ ದಾರಗಳಲ್ಲಿ ಶುದ್ಧಿಹೊಂದಿ ದ್ರೋಣ ಕಲಶ ಸೇರುತ್ತಾನೆ. ವಸತೀವರಿ ಉದಕಗಳನ್ನು ಪಡೆದಿದ್ದಾನೆ. ಆದಿತ್ಯನ ಸ್ವತಂತ್ರ ಸಂಚಾರ ಇರುವ ಲೋಕದಲ್ಲಿ ಆದಿತ್ಯನ ತೇಜಸ್ಸು ಶಾಶ್ವತವಾಗಿದೆ. ಅಭಿಲಾಷೆ ಧೈರ್ಯಗಳಿಂದ ಕರ್ಮಪ್ರೇರಿತರಾಗಿರುವ ಅನ್ನ ತೃಪ್ತಿಗಳಿರುವ ಆದಿತ್ಯನ ಲೋಕದಲ್ಲಿ ಅತಿಶಯ ಬ್ರಹ್ಮಾನಂದವಿರುತ್ತದೆ. ಅತಿಶಯ ಹರ್ಷವಿರುತ್ತದೆ. ಸುಖಸಾಧನ ಸೌಖ್ಯಾನುಭವ ಇರುತ್ತದೆ. ಅಪೇಕ್ಷೆಗಳು, ಇಷ್ಟಾರ್ಥಗಳು ಪೂರೈಸಲ್ಪಡುತ್ತದೆ. ಗಂಗಾಧಿ ನದಿಗಳು ಹರಿಯುವ ಲೋಕದಲ್ಲಿ ಉತ್ತಮ ದ್ಯುಲೋಕದಲ್ಲಿ ಮಧ್ಯಮ ಆದಿತ್ಯ ಲೋಕದಲ್ಲಿ, ಅಧರದ ಉತ್ತಮ ಲೋಕದಲ್ಲಿ ಸೋಮನು ನಮ್ಮನ್ನು ಮರಣ ರಹಿತರನ್ನಾಗಿ ಸ್ಥಾಪಿಸಲಿ.

ಋತ್ವಿಜರು ಕಲ್ಲುಗಳಿಂದ ಸೋಮರಸ ಹಿಂಡುತ್ತಾರೆ. ಸೋಮನು ವೇಗವಾಗಿ ಪ್ರವಹಿಸುತ್ತಾನೆ. ಇಂದ್ರನಿಗಾಗಿಯೇ ದಶಾಪವಿತ್ರದಲ್ಲಿ ಆಚ್ಛಾದಿತನಾಗುತ್ತಾನೆ. ಅಥರ್ವ ಋಷಿಗಳು ತಮ್ಮ ಕೈಯಿಂದಲೇ ಸೋಮರಸ ತೆಗೆದು ಸಂಸ್ಕರಿಸಿ ಶೇಖರಿಸುತ್ತಾರೆ. ಸಪ್ತ ಸಂಖ್ಯಾತ ಮುಖವುಳ್ಳವನು. ಪ್ರಭೆಯಿಂದ ಪೂರ್ವ ದಿಕ್ಕಿನಲ್ಲಿ ಸೂರ್ಯ ರಶ್ಮಿಯೊಡನೆ ಸೇರುತ್ತಾನೆ. ಇಂದ್ರನ ಜತೆ ಸೇರಿ ಶತ್ರುಗಳನ್ನು ಹೊಡೆದೋಡಿಸಿ ಪರಾಜಿತಗೊಳಿಸುತ್ತಾನೆ.

## ಸೋಮನು ಸೋಮಯಾಜಿಯೂ ಬ್ರಹ್ಮ ಸಂಜ್ಞಕನಾಗಿದ್ದಾನೆ

ಸೂರ್ಯದೇವನು ಯಜಮಾನನನ್ನು ಉತ್ತಮ ಕರ್ಮಗಳಿಂದ ಸೋಮನೊಂದಿಗೆ ಸೇರಿಸುತ್ತಾನೆ. ಲೋಕದ ಜನರ ಪಾನಕ್ಕಾಗಿ ಯೋಗ್ಯ ಅನ್ನಕ್ಕಾಗಿ ಬೇರೆ ಬೇರೆಯಾಗಿ ಹರಿಯುತ್ತಾನೆ. ಕರ್ಮಗಳನ್ನು ಮಾಡಿಯೇ ಫಲ ಅಪೇಕ್ಷಿಸಬೇಕೆಂದು ಹೇಳುತ್ತಾರೆ.

## ಸ್ತೋತ್ರ ವಿಭಾಗ

ತ್ವಷ್ಟದೇವನು ಎಲ್ಲರಿಗೂ ಮೊದಲು ಉತ್ಪನ್ನನಾದನು. ಇಳಾ, ಭಾರತಿ, ಸರಸ್ವತಿಯರು ಉತ್ತಮ ದೇವತಾತ್ಮ ರೂಪಿನವರುಗಳು. ವನಸ್ಪತಿ ದೇವನು ಪ್ರವಾಹ ರೂಪಿನಲ್ಲಿದ್ದಾನೆ. ವಾಯು ಅಶ್ವಿನಿ ದೇವತೆಗಳನ್ನು ಒಂದುಗೂಡಿಸುತ್ತಾನೆ. ತನ್ನ ದಿವ್ಯ ಚಕ್ಷುಸ್ಸಿನಿಂದ ಸೂರ್ಯನನ್ನು ಸೇರಿ ಎಲ್ಲವನ್ನೂ ಪೂರ್ಣವಾಗಿ ನೋಡುತ್ತಾನೆ. ದೇವತೆಗಳ ಇಷ್ಟಾರ್ಥ ನೆರವೇರಿಸುತ್ತಾನೆ. ಇಂದ್ರಾದಿಗಳೊಡನೆ ಸೇರಿ ಅವರೊಂದಿಗೆ ತಾನೂ ಪೂಜಿತನಾಗುತ್ತಾನೆ. ಸೋಮಪಾನ ಮಾಡುವ ಸಮಸ್ತ ದೇವತೆಗಳು ಒಂದೇ ವಿಧವಾದ ಹರ್ಷ ಹೊಂದುತ್ತಾರೆ.

ಸ್ವಶಕ್ತಿಯಿಂದ, ಉದಕ ಪ್ರವಾಹದೊಂದಿಗೆ ಸೇರಿ ಪ್ರಕಾಶಿಸುತ್ತಾ ದೇವತೆಗಳನ್ನು ತೃಪ್ತಿಪಡಿಸುತ್ತಾನೆ. ರಸರೂಪಿ ಸೋಮನು ಪ್ರೀತಿಯಿಂದ ಕಳಸದ ಒಳಗೆ ಸಪ್ತನದಿಗಳು ಕ್ಷಯಿಸದಂತೆ ತೃಪ್ತಿಗೊಳಿಸುತ್ತಾನೆ. ತಾನು ಹಿಂಸಿತನಾದರೂ ಯಾಜ್ಞಿಕರಿಗೆ ಧನದಾತ. ಸ್ವರ್ಗ ಶಿಷ್ಯರೂಪಿನಲ್ಲಿದ್ದಾನೆ. ಸ್ವಶಕ್ತಿಯಿಂದಲೇ ಸ್ವರ್ಗದ ನಕ್ಷತ್ರಗಳನ್ನು ಅಂತರಿಕ್ಷದ ಸೂರ್ಯನನ್ನು ಬೆಳಗಿಸುತ್ತಾನೆ.

ಭೂಮಿಯನ್ನು, ನಿಧಿಗಳಿಂದ ಆವೃತ್ತವಾಗುವಂತೆ ಮಾಡಿದ್ದಾನೆ. ಸೋಮನು ದೇವತೆಗಳ ಬಳಿಗೆ ಹೋಗಲು ತಾನು ಇಚ್ಛಿಸಿದಾಗ ಅವರನ್ನು ಸೋಮಪಾನದಿಂದ ಹರ್ಷಗೊಳಿಸುತ್ತಾನೆ. ಯಜ್ಞಾರ್ಥ ಅಲಂಕೃತಗೊಂಡು ಇಂದ್ರ, ವಾಯುಗಳಿಗಾಗಿ ಪ್ರಸವಿಸುತ್ತಾನೆ. ಮಂತ್ರ ಪಠನವು ಇಂದ್ರನ ವಜ್ರಾಯುಧಕ್ಕಿಂತಲೂ ಶಕ್ತಿಯುತವಾದುದು. ಉತ್ತಮ ಕರ್ಮದ ಶ್ಯೇನ ಪಕ್ಷಿಯು ಸೋಮದೇವನಲ್ಲಿಗೆ ದಾನಾರ್ಥವಾಗಿ ಬಂದಿತು. ಸೋಮನು ತನ್ನನ್ನು ಉದ್ದೇಶಿಸಿ ಸ್ತೋತ್ರ ಮಾಡಿದವರಿಗೆ ಆವಿರ್ಭೂತನಾಗುತ್ತಾನೆ.

ಆಜ್ಯ, ಉದಕ, ಕ್ಷೀರಗಳಲ್ಲಿ ಸೋಮನು ಗೋಚರಿಸುತ್ತಾನೆ. ಸೋಮನಿಂದಲೇ ಗೋವುಗಳ ಕ್ಷೀರ ರುಚಿಕರವಾಗಿರುತ್ತದೆ. ಸ್ವರ್ಗಕ್ಕೆ ಪ್ರಭು, ಪಚ್ಚೆವರ್ಣದವನು, ಶೀಘ್ರ ಅಶ್ವಗಳಂತೆ ಇಂದ್ರಾದಿ ದೇವತೆಗಳಲ್ಲಿಗೆ ಅತಿಶಯ ರಥದಲ್ಲಿ ಆಹ್ಲಾದಕರ ವೇಗದಲ್ಲಿ ಪ್ರವಹಿಸುತ್ತಾನೆ. ಸೋಮನು ಪೃಥ್ವಿಯ ಮೂಲಕ ಔಷದಿ, ಫಲ ಸಿಕ್ಕುವಂತೆ ಮಾಡಿದ್ದಾನೆ. ಔಷಧಿ ಗಿಡ ಮೂಲಿಕೆಗಳಲ್ಲಿರುವ ಪವಮಾನ ಸೋಮನಿಗೆ ನಮ:

ಉತ್ತಮ ಪ್ರಜೆಗಳನ್ನು ಉತ್ತಮ ರೀತಿಯಲ್ಲಿ ನೋಡುತ್ತಾನೆ. ಸ್ತುತಿ ಕರ್ತರನ್ನು ಪಾಲಿಸುತ್ತಾನೆ. ಗಿಡಮೂಲಿಕೆಗಳಲ್ಲಿ ಸೋಮನಿದ್ದಾನೆ. ಸೋಮನ ಬಹು ಭಾಗ ದ್ಯುಲೋಕ, ನಾಭಿಸ್ಥಾನದಲ್ಲಿದೆ. ಉಳಿದದ್ದು ಪರ್ವತ ಪ್ರದೇಶದಲ್ಲಿ ಎಸೆಯಲ್ಪಟ್ಟು ಬೆಳೆಯುತ್ತಿದೆ. ಉಷ: ಕಾಲದಲ್ಲಿ ಗೋಕ್ಷೀರದೊಂದಿಗೆ ಪ್ರವಹಿಸುತ್ತಾನೆ. ಸೂರ್ಯ ರಶ್ಮಿಗಳಿಂದ ನಿರ್ಮಿತನಾಗಿದ್ದಾನೆ. ಎತ್ತರದ ಗುಪ್ತ ಪ್ರದೇಶದಲ್ಲಿ ಅಡಗಿದ್ದಾನೆ. ಉದಕದಲ್ಲಿ ವೃದ್ಧಿ ಹೊಂದುವನು. ದ್ಯುಲೋಕ ಸಾರ ಅಮೃತ.

ಓಡುವ ಅಶ್ವನಂತೆ, ಶೂರನಂತೆ, ತೀಕ್ಷ್ಣ ಕೊಂಬಿನ ಮಹಿಷದಂತೆ ಸೋಮನು ಗೋಸಮೂಹವನ್ನು ಹುಡುಕುತ್ತಾ ಹೊರಡುತ್ತಾನೆ. ಮಾನವರ ಹಿತಕ್ಕಾಗಿ ಸಕಲ ಧನವನ್ನು ಹಂಚುತ್ತಾನೆ. ದೇವತೆಗಳ ಮಿತ್ರತ್ವ ಅಪೇಕ್ಷಿಸಿ ಅವರ ಹರ್ಷಾರ್ಥವಾಗಿ ದ್ಯುಲೋಕದಲ್ಲಿ ಪ್ರವಹಿಸುತ್ತಾ ಇಂದ್ರನನ್ನು ಸೇರುತ್ತಾನೆ. ಇಂದ್ರನಲ್ಲಿ ಶಕ್ತಿ ಮೂಡಿಸುವುದಕ್ಕಾಗಿ ಸೂರ್ಯನಲ್ಲಿ ತೇಜಸ್ಸಿನ ರೂಪಿನಿಂದ ಪ್ರವಹಿಸುತ್ತಾನೆ. ಪ್ರಜಾಪತಿ ಸೋಮನನ್ನು ಸ್ತುತಿಸುತ್ತಾನೆ. ದೇವತೆಗಳಿಗೆ ಮರಣರಾಹಿತ್ಯ ಪ್ರಕಟಿಸಿದವನು ಸೋಮನೇ. ದೇವತೆಗಳ ಪುಷ್ಟಿಪಾನಾರ್ಥ ಹರಿಯುತ್ತಾನೆ. ಋಕ್, ಯಜಸ್, ಸಾಮಗಳಿಂದ ಸ್ತುತಿಸುತ್ತಾರೆ. ಪಣಿಗಳಿಂದ ಗೋವುಗಳನ್ನು ಬಿಡಿಸಿ ತಂದಾಗ ಅವು ಹಾಲು ಕರೆದಾಗ ಋಷಿಗಳು ಸೋಮನನ್ನು ಸ್ತುತಿಸಿದರು.

# ಯಜ್ಞ ವಿಭಾಗ

ಸೋಮನ ಸ್ವಾಹಾಕಾರ ಯಜ್ಞ ದ್ವಾರಗಳು ಸುವರ್ಣ ನಿರ್ಮಿತವಾಗಿದೆ. ಉತ್ತರ ವೇದಿಕೆಯಲ್ಲಿ 3 ಕಳಸಗಳಿವೆ. (1) ದ್ರೋಣ ಕಳಸ , (2) ಆಧವನೀಯ, (3) ಪೂತಭತ್ ಮತ್ತು ಚಮೂಪಾತ್ರಗಳು. ಸೋಮರಸವು ಶಬ್ದ ಮಾಡುತ್ತಾ ಇಂದ್ರ ಪಾನಾರ್ಥ ವೇಗವಾಗಿ ಹರಿದು ಬರುತ್ತದೆ. ಕಳಸಗಳನ್ನು ಪ್ರವೇಶಿಸುತ್ತದೆ. ಯಾಜ್ಞಿಕರು ಇಂದ್ರನನ್ನು ಸೋಮಪಾನಕ್ಕೆ ಕರೆಯುತ್ತಾರೆ. ವೇದಿಕೆಯಲ್ಲಿ ಬಂದು ಕೂಡಲು ಪ್ರಾರ್ಥಿಸುತ್ತಾರೆ.

ದೇವತೆಗಳಿಗಾಗಿ ಉತ್ತಮ ಯಜ್ಞ ನಿರ್ವಹಿಸುತ್ತಾರೆ. ಯಜ್ಞದಿಂದ ಶತ್ರುಗಳು ನಾಶವಾಗಿ ಯಜಮಾನನಿಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ತನೊನಪಾತ್ ಎಂಬ ಹೆಸರಿನಿಂದ ಸೋಮನು ಉನ್ನತ ಪ್ರದೇಶದಿಂದ ಯಜ್ಞಕ್ಕೆ ಬರುತ್ತಾನೆ. ಪೂರ್ವ ದಿಕ್ಕಿನಲ್ಲಿ ಅಗ್ರ ಆಸನ ದಾಟ ಮುನ್ನುಗ್ಗುತ್ತಾನೆ. ಯಜ್ಞ ರಹಸ್ಯ ಪ್ರದೇಶದಲ್ಲಿ ಶಬ್ದ ಮಾಡುತ್ತಾ ಸೋಮನು ತನ್ನ ಶಕ್ತಿಯನ್ನು ರಕ್ಷಿಸಿಕೊಳ್ಳುತ್ತಾನೆ. ಯಜಮಾನರ ಸ್ತೋತ್ರಗಳಿಂದ ಇಂದ್ರ ಯಜ್ಞಕ್ಕೆ ಬರಲು ಇಚ್ಛಿಸುತ್ತಾನೆ. ದೇವತೆಗಳು ಸೇರುವ ಯಜ್ಞಕ್ಕೆ ಸೋಮನು ಬರಲು ಇಚ್ಛಿಸುತ್ತಾನೆ. ಯಜ್ಞದ ಬಾಗಿಲು ತೆರೆದಿದೆ. ಸೋಮನು ಪ್ರವಹಿಸುತ್ತಾನೆ. ಯಜ್ಞ ಕರ್ಮ ಅಪೇಕ್ಷಿತರಿಗೆ ಜ್ಞಾನ ತುಂಬಿ ಅವರನ್ನು ಸತ್ಕರ್ಮದ ಕಡೆಗೆ ತಿರುಗಿಸುತ್ತಾನೆ. ದ್ಯಾವಾ ಪೃಥ್ವಿಗಳ ಗಡಿದಾಟಿ ದೇವತೆಗಳಿಗೆ ಅರ್ಪಿಸುವ ಆಹುತಿಗಳ ಮೂಲಕ ಸ್ವರ್ಗ ಲೋಕ ತಲುಪುತ್ತಾನೆ. ಯಾಜ್ಞಿಕರಿಗೆ ಹರ್ಷದಾಯಕ. ಆಹ್ಲಾದನೀಡುವವನು. ಅಧ್ವರ್ಯುಗಳಿಂದ ವಿಶೇಷ ರೀತಿಯಲ್ಲಿ ಉತ್ತರ ವೇದಿಕೆಗೆ ಒಯ್ಯಲ್ಪಡುತ್ತಾನೆ.

ಸೋಮನು ವಸ್ತ್ರಗಳಿಂದ ಅಲಂಕೃತನಾಗಿದ್ದಾನೆ. ಆಹೂತಿಗಳ ಮೂಲಕ ಇಂದ್ರನನ್ನು ಸೇರುತ್ತಾನೆ. ಸೋಮನೊಂದಿಗೆ ದ್ರೋಣ ಕಲಶವು ದರ್ಭಾಸನದ ಮೇಲಿದೆ. ಋತ್ವಿಜರ ಹಸ್ತದಿಂದ ಶೋಧಿತವಾಗಿ ಚಮೂಪಾತ್ರೆಯಲ್ಲಿ ಶೋಧಿತವಾಗುತ್ತದೆ. ಆಹವನೀಯಾಗ್ನಿಯ ಮೂಲಕ ಶತ್ರು ಸಂಹಾರಕನಾಗುತ್ತಾನೆ. ಋತ್ವಿಜರು ಸ್ತುತಿಸುವಂತೆ ಪ್ರೇರಿಸುತ್ತಾನೆ. ಸೋಮನು ಯಜ್ಞ ಕರ್ಮಧಾರಕ. ದೇವತೆಗಳು ಸೋಮಪಾನ ಅಪೇಕ್ಷಿಸುತ್ತಾರೆ. ಸೋಮನು ದೇವತಾ ಸಾನಿಧ್ಯ ಬಯಸುತ್ತಾನೆ. ಸೋಮನನ್ನು ಯಾಗ ಗೃಹ ಸೇರಿಸುತ್ತಾರೆ. ಇಂದ್ರನು ಸೋಮನೊಂದಿಗೆ ಯಾಗ ಪ್ರವೇಶಿಸುತ್ತಾನೆ. ಆದರದಿಂದ ಹವಿಸ್ಸು ಸಿದ್ಧಪಡಿಸಲಾಗಿದೆ.

ದೇವತೆಗಳಿಗಾಗಿ ಆಹುತಿ ರೂಪದಲ್ಲಿ ಸ್ವರ್ಗ ಸೇರುತ್ತದೆ. ವಾಯು, ಬೃಹಸ್ಪತಿ, ಸೂರ್ಯ, ಅಗ್ನಿ, ಇಂದ್ರ, ವಿಶ್ವೇ ದೇವತೆಗಳನ್ನು ಸ್ವಾಹಾಕಾರ ಯಜ್ಞಕ್ಕೆ ಆಹ್ವಾನಿಸುತ್ತಾರೆ. ಮಾನವರ ವ್ಯವಹಾರಗಳನ್ನು ನೋಡತಕ್ಕ ದೇವತಾತ್ಮರು. ದೇವ ಸಂಬಂಧಿಗನ್ನೆಲ್ಲಾ ಯಜ್ಞಕ್ಕೆ ಆಹ್ವಾನಿಸುತ್ತಾರೆ. ಇಂದ್ರನ ಸಮ್ಮುಖದಲ್ಲಿ ಹೋಮ ಅರ್ಪಿತವಾಗಿ ಹೋಗಿ ಇಂದ್ರನನ್ನು ಸೇರುತ್ತದೆ. ಇಂದ್ರನು ತೃಪ್ತನಾಗಿ ಯಜಮಾನನಿಗೆ ಅಧಿಕ ಧನ, ಸಂಪತ್ತು ಕೊಡುತ್ತಾನೆ. ಯಜಮಾನರು ಕರ್ಮನಿರತರಾಗಿದ್ದಾರೆ. ಹವಿಸ್ಸು ಅರ್ಪಿಸುವವರಾಗಿದ್ದಾರೆ. ಅಂತರಿಕ್ಷದಲ್ಲಿ ಸೋಮನು ಸ್ಥಾಪಿತನಾಗುತ್ತಾನೆ. ಯಜಮಾನರಿಗೆ ಹಿತ ಉಂಟು ಮಾಡಲು ಬಯಸುತ್ತಾನೆ. ಆದಿತ್ಯನು ದ್ಯಾವಾ ಪೃಥ್ವಿಗಳಿಗೆ ಹೊದಿಕೆಯಂತಿದ್ದಾನೆ. ಉದಕ ನಿರ್ಮಾತೃ, ಇಷ್ಟಾರ್ಥಪ್ರದ. ಯಜ್ಞದಲ್ಲಿ ಆದಿತ್ಯನನ್ನು ಪೂಜಿಸುತ್ತಾರೆ.

ಆಚರಿತ ಕರ್ಮಗಳು ತೃಪ್ತಿಕರವಾಗಿರುತ್ತದೆ. ಹವಿಸ್ಸು ಸಿದ್ಧಮಾಡುವವರನ್ನು ಪ್ರೀತಿಯಿಂದ ಧನಯುಕ್ತರನ್ನಾಗಿ ಮಾಡುತ್ತಾನೆ. ಯಾಜ್ಞಿಕರಿಗೆ ದಕ್ಷಿಣೆ ಕೊಡುವವರನ್ನು ರಕ್ಷಿಸುತ್ತಾನೆ. ಉತ್ತಮ ಸ್ತೋತ್ರಗಳು, ಉತ್ತಮ ಕರ್ಮಗಳು ಆಗುತ್ತಿರುವಲ್ಲಿ ಸೋಮನು ಇಂದ್ರಾದಿಗಳ ಜೊತೆ ಬರುತ್ತಾನೆ. ಯಜ್ಞ ಉತ್ಪತ್ತಿ ಸ್ಥಾನದಲ್ಲಿ ಸ್ತುತಿಗಳಿಂದ ಪ್ರಜ್ವಲಿಸುತ್ತಾ ಯಜ್ಞ ಕರ್ಮ ರಕ್ಷಿಸುತ್ತಾನೆ. ಪೂಜ್ಯ ಋತ್ವಿಜರ ಜೊತೆಯಲ್ಲಿರುತ್ತಾನೆ. ಸಮುದ್ರದಂತಹ ತನ್ನ ರಸವನ್ನು ಹೊರಸೂಸುತ್ತಾ ದ್ರೋಣ ಕಳಸ ಪ್ರವೇಶಿಸಿ ನರಲೋಕ ಆವರಿಸಿ ಯಜ್ಞ ಸಾಧಿಸುತ್ತಾನೆ. ಹಸುವಿನ ಹಾಲು ಮಿಶ್ರಿತನಾಗಿ ಯಜ್ಞ ಸ್ಥಾನದಲ್ಲಿ ಕುಳಿತುಕೊಳ್ಳುತ್ತಾನೆ. ಅನೇಕರಿಂದ ಆಹ್ವಾನಿತನಾಗುತ್ತಾನೆ. ಯಜ್ಞ ಕರ್ತರ ಯಜ್ಞಕ್ಕೆ ಸೋಮನು ಬರುತ್ತಾನೆ.

ಪರಾಶರರು ವೇಣುಗಾನ ಮಾಡುತ್ತಾ ಯಾಗ ಪ್ರವೇಶ ಮಾಡಿದರು. ಮರಣರಾಹಿತ್ಯಕ್ಕಾಗಿ ಸೋಮಪಾನ ಮಾಡುತ್ತಾರೆ. ದೇವತೆಗಳಿಗಾಗಿ ಹವಿಸ್ಸು ಸೋಮ ಸಿದ್ಧವಿದೆ. ಹೋಮದ ಮೂಲಕ ಇಂದ್ರಪ್ರೀತ್ಯರ್ಥವಾಗಿ ಸ್ವರ್ಗ ಸೇರುತ್ತದೆ. ದೇವತೆಗಳಿಂದ ಲಭ್ಯವಾದ ಸಮಸ್ತ ಧನವನ್ನು ಒಳಗೊಂಡು ಅಂತರಿಕ್ಷ ಮಾರ್ಗದಲ್ಲಿ ಸಂಚರಿಸುತ್ತಾ ಯಜ್ಞ ಕಾಲದಲ್ಲಿ ಯಜಮಾನರಿಗೆ ಧನ ಸೇರಿಸುತ್ತಾನೆ. ಮಾನವರಿಂದ ಶುದ್ಧಿ ಹೊಂದಿ ಸ್ತೋತ್ರದಿಂದ ಎಚ್ಚರನಾಗಿ ಧಾರಾರೂಪಿಯಾಗಿ ಪ್ರವಹಿಸುತ್ತಾನೆ.

ಕರ್ಮರಹಿತರಾದವರನ್ನು ಸ್ತುತಿಕರ್ತರು ಓಡಿಸಲಿ. ದೇವತೆಗಳ ಹರ್ಷಕ್ಕಾಗಿ ಗಾನದಿಂದ, ಹವಿಸ್ಸಿನಿಂದ ಪೂಜಿಸಿ ಅಲಂಕರಿಸಿ, ಸ್ತುತಿಸಿ ಸಖ್ಯ ಬೆಳೆಸುತ್ತಾರೆ. ಯಜ್ಞವರ್ಧಕ ದೇವತೆಗಳ ಬಳಿಗೆ ಹೋಗಿ ಯಜಮಾನನಿಗೆ ಸಮಸ್ತ ಧನ ಕೊಡಲು ಹೇಳುತ್ತಾರೆ. ಸೋಮನು ಯಜ್ಞ ನಿರ್ವಾಹಕ, ಆಶ್ರಯ ದಾಯಕ, ಕರ್ಮ ಶುದ್ಧಿಕಾರಕ, ಕ್ರೀಡಾಶೀಲ, ಅಂತರಿಕ್ಷಸ್ಥ, ಸೋಮನನ್ನು ಪೂಜಿಸಿರಿ, ಸ್ತುತಿಸಿರಿ ಎಂದು ಯಾಜ್ಞಿಕರು ಹೇಳುತ್ತಾರೆ. ಸೋಮನು ಅನ್ನದಾತ, ಧನದಾತ, ಆರ್ಯುದಾತ, ಪುತ್ರದಾತ, ಅವನನ್ನು ಸ್ತುತಿಸಿ, ಪೂಜಿಸಿ ನಿಮ್ಮ ಇಷ್ಟಾರ್ಥಗಳನ್ನು ಪಡೆಯಿರಿ ಎಂದು ಅತ್ರಿ ಋಷಿಗಳು ಹೇಳಿದ್ದಾರೆ.

## ವಿಶೇಷ ಪ್ರಾರ್ಥನೆಗಳು

ಸ್ವಪ್ರೇರಣೆಯಿಂದ ಇಷ್ಟಾರ್ಥ ಪ್ರದನಾಗಿ ಪ್ರಭೂತ ಸಹಸ್ರ ಧನವನ್ನು ಇಂದ್ರನಿಂದ ಜಯಶೀಲ ಕರ್ಮ ಕರ್ತೃತಿಗೆ ಕೊಡಿಸಿ ಅವರ ಋಣ ತೀರಿಸಲು ಇಚ್ಛಿಸುತ್ತಾನೆ. ಇಂದ್ರ / ಆದಿತ್ಯ / ವಾಯು ಇವರೊಡನೆ ಸೇರಿ ವೈಶ್ವಾನರ ಎಂಬ ಹೆಸರಿನಿಂದ ಅಂತರಿಕ್ಷದಲ್ಲಿ ತೇಜಸ್ಸು ಉತ್ಪನ್ನ ಮಾಡುತ್ತಾನೆ. ಇಂದ್ರ ನಾಮ ಉಚ್ಚರಿಸುತ್ತಾ 10 ದಿಕ್ಕುಗಳಲ್ಲಿ ಸೂರ್ಯನ ಅಶ್ವಗಳನ್ನು ಯೋಜಿಸುತ್ತಾನೆ.

ಸೂರ್ಯ ಪ್ರಕಾಶ ಧಾರೆಯಿಂದಲೇ ಸೋಮನು ಪ್ರಸರಿಸುತ್ತಾನೆ. ಅಂತರಿಕ್ಷದಿಂದಲೇ ಲೋಕಗಳನ್ನು ಪ್ರೇರಿಸುತ್ತಾನೆ. ಸೋಮನು ಸೂರ್ಯ ರಶ್ಮಿಗಳಿಂದ ನಿರ್ಮಿತನಾಗಿದ್ದಾನೆ. ಸರ್ವವ್ಯಾಪಿ, ಸೋಮನು ಪೂರ್ವ ಪರ ಪಕ್ಷಗಳೆರಡು ಅಭಿಮುಖನಾಗಿ ಹರಿಯುತ್ತಾನೆ. ಆದಿತ್ಯನಂತೆ ಋತು ರೂಪಿನಲ್ಲಿ ಸಕಲರಿಗೂ ಗೋಚರನಾಗುತ್ತಾನೆ. ಗಂಗಾದಿ ಸಪ್ತನದಿಗಳು ಸೋಮನಿಂದ ಪುಷ್ಟಿಗೊಂಡು ಸೋಮನ ಆಜ್ಞಾವರ್ತಿಗಳಾಗಿ ನದಿ ರೂಪದಲ್ಲಿ ಹರಿಯುತ್ತವೆ.

ನಿತ್ಯ ಯೌವನರಾದ ಸೂರ್ಯಚಂದ್ರರ ಜನ್ಮರಹಸ್ಯ ಅರ್ಧ ಭಾಗ ರಹಸ್ಯವಾಗಿಯೇ ಇದೆ.

ಅಗ್ನಿ / ಆದಿತ್ಯ / ವಾಯು / ಇವರುಗಳನ್ನು ಸೋಮನು ಹೃದಯದಲ್ಲಿ ಧರಿಸಿದ್ದಾನೆ. ವರುಣನ ನಾಲಿಗೆಯಲ್ಲಿ ಉತ್ತಮ ಸ್ಥಾನ ಹೊಂದಿದ್ದಾನೆ. ಮರುತ್‌ಗಳು ಸೋಮನ ಅಧೀನ. ಸೋಮನ ಮಹಿಮೆಯಿಂದಲೇ ಫಣಿಗಳಿಂದ ಬಚ್ಚಿಟ್ಟಿದ್ದ ಗೋವುಗಳು ರಹಸ್ಯಸ್ಥಾನದಿಂದ ಹೊರಬಂದು ಅವನ್ನು ಋಷಿಗಳು ಪಡೆದರು.

ಅಂತರಿಕ್ಷದಲ್ಲಿ ಪ್ರಕಾಶಗೊಂಡು ಸೋಮನು ಪವಮಾನನ ಮೂಲಕ ಸಮಸ್ತ ದೇವತೆಗಳ ಶರೀರ ಪ್ರವೇಶಿಸಿ ಪ್ರಕಾಶಿಸುತ್ತಾನೆ. ಸೋಮನ ಗಾಳಿ ಹಿತಕರವಾಗಿ ಬೀಸುತ್ತದೆ. ನದಿಗಳು ಪ್ರವಹಿಸುತ್ತವೆ. ದೇವತೆಗಳೊಂದಿಗೆ ಯಜ್ಞ ಪ್ರವೇಶಿಸುತ್ತಾನೆ. ದೇವತೆಗಳಿಂದ ಲಭ್ಯವಾದ ಸಮಸ್ತ ಧನವನ್ನೂ ಒಳಗೊಂಡು ಅಂತರಿಕ್ಷ ಮಾರ್ಗದಲ್ಲಿ ಸಂಚರಿಸುತ್ತಾ ಯಜ್ಞ ಕಾಲದಲ್ಲಿ ಯಜಮಾನನಿಗೆ ಧನ ಸೇರಿಸುತ್ತಾನೆ. ಯಜ್ಞಪಾಲಕ, ಪೂರ್ಣ ಪ್ರಯೋಗ ತಿಳಿದವನು. ಆಯುಧ ಪ್ರಯೋಗ ತಿಳಿದವನು. ಯಜ್ಞಾರ್ಥ ಹಣ, ಬಲ ಕೊಡುವವನು. ಯಜ್ಞ ಸ್ವೀಕರಿಸುವವನು ಸೋಮನೇ.

ಸ್ವರ್ಗ ಸಂಪಾದಿಸಿ ಕೊಡುವ ಪವಮಾನ ಸೋಮನಿಗೆ ನಮೋ ನಮಃ

## ಪವಮಾನ ಸೋಮ ದೇವನಲ್ಲಿ ಋಷಿಗಳು, ಯಾಜ್ಞಿಕರು, ಯಜಮಾನರು, ಅವರ ಪರಿವಾರದವರು ಆ ಕಾಲದಲ್ಲಿ ಬೇಡಿಕೊಂಡ ಬೇಡಿಕೆಗಳು

1) ಧನಕ್ಕಾಗಿ
2) ಆನಂದಕ್ಕಾಗಿ
3) ಉತ್ತಮ ಗೃಹಕ್ಕಾಗಿ
4) ರಥ, ಅಶ್ವ ಗೋವುಗಳಿಗಾಗಿ
5) ಋಣ ಪರಿಹಾರಕ್ಕಾಗಿ
6) ಆಯಸ್ಸು ಆರೋಗ್ಯಗಳಿಗಾಗಿ
7) ಅನ್ನ ಮಳೆಗಾಗಿ, ನೀರಿಗಾಗಿ
8) ಪುತ್ರ, ಪೌತ್ರರಿಗಾಗಿ
9) ಶತ್ರುಗಳಿಂದ ರಕ್ಷಿಸುವುದಕ್ಕಾಗಿ
10) ಸೋಮಪಾನಕ್ಕೆ ಇತರ ದೇವತೆಗಳೊಂದಿಗೆ ಬರುವಂತೆ
11) ಆಪತ್ತು, ದುಃಖ: ಪರಿಹರಿಸಲು
12) ಶುದ್ಧಿಗೊಳಿಸಲು
13) ಇವುಗಳು ನಮಗೆ ಬೇಡ
14) ದ್ರವರೂಪಿ ಸೋಮನಲ್ಲಿ ಬೇಡಿಕೆ
15) ಫಲಶ್ರುತಿ

1) ಪೃಥ್ವಿ, ದೇವಲೋಕ ಧನವನ್ನು ಯಜಮಾನನಿಗೆ ಬೆಳಿಗ್ಗೆ ತೆಗೆದುಕೊಂಡು ಬರಲು ಪ್ರಾರ್ಥಿಸುತ್ತಾರೆ. ಶತ್ರು ಧನವನ್ನು ಗೆದ್ದು ಯಜಮಾನನಿಗೆ ಕೊಡಲಿ. ಸುವರ್ಣ ಮತ್ತು ಸಮುದ್ರದ ಅಪರಿಮಿತ ಧನಕ್ಕಾಗಿ ಬೇಡುತ್ತಾರೆ. ಉತ್ತಮ ಧನ ದಾತನಾಗಲಿ ಮತ್ತು ಧನ ಪಡೆಯುವ ಮಾರ್ಗ ತೋರಿಸಲಿ. ದಾನರೂಪದಲ್ಲಿ ಸುವರ್ಣ, ಧನ ಕೊಡಲಿ. ಸಹಸ್ರ ಸಂಖ್ಯಾತ ದಾನಗಳಿಂದ ನಮ್ಮನ್ನು ಧನಕ್ಕೆ ಒಡೆಯರಾಗುವಂತೆ ಮಾಡಲಿ. ಶತ್ರುಗಳಿಂದ ಗಳಿಸಿದ ಸಂಪತ್ತನ್ನು ಬೇಡುತ್ತಾರೆ. ಹವಿಸ್ಸು ಅರ್ಪಿಸದ ಶತ್ರುಗಳ ಗೃಹ, ಧನ, ಅವುಗಳನ್ನು ಅಪಹರಿಸಿ ತಂದು ಋತ್ವಿಜರಿಗೆ ಕೊಡಲಿ.

2) ಶಕ್ತಿದಾಯಕನಾಗಿರುವಂತೆ ಅನುಗ್ರಹಿಸಲಿ. ಶ್ರೇಯಸ್ಸು ಉಂಟು ಮಾಡಲಿ. ಯಜಮಾನರನ್ನು ಸಂತೋಷ ಗೊಳಿಸಲಿ. ಸಕಲ ಸುಖ ಹಾಗೂ ಸ್ವರ್ಗ ಸುಖ ಕೊಡಲಿ. ಯಾವಾಗಲೂ ಹರ್ಷ ಕೊಡಲಿ. ಕಲ್ಯಾಣಗಳಿಂದ ರಕ್ಷಿಸಲಿ. ನಮ್ಮ ಪಾಪಗಳನ್ನು ನಾಶಮಾಡಿ ಸುಖಪಡಿಸಲಿ.

3) ಮಹತ್ತರ ನಿವಾಸ ಸ್ಥಾನಕ್ಕಾಗಿ ಬೇಡುತ್ತಾರೆ. ಗೃಹಗಳನ್ನು ಪುಷ್ಟಿಗೊಳಿಸಲಿ. ಉತ್ತಮ ವಾಸಯೋಗ್ಯ ಗೃಹನೀಡಲಿ. ನಮ್ಮ ಗೃಹಗಳಿಗೆ ಅಭಿಮುಖನಾಗಿ ಸೋಮನು ಬರಲಿ.

4) ಅಶ್ವ ಮತ್ತು ಗೋವುಗಳನ್ನು ಕೊಡಲಿ. ಪುತ್ರರಿಗೆ ಧನ, ಅಶ್ವ, ಗೋವುಗಳನ್ನು ಕೊಡಲಿ. ಸಹಸ್ರಾರು ಅಶ್ವಶಕ್ತಿಗಾಗಿ, ಗೋಧನಕ್ಕಾಗಿ ಪ್ರಾರ್ಥಿಸುತ್ತಾರೆ. ಗೋವುಗಳನ್ನು ರಥ ಸಹಿತ ಅಶ್ವಗಳನ್ನು ಬೇಡುತ್ತಾರೆ. ಕ್ಷೀರ ನೀಡುತ್ತಿರುವ ಗೋಧನಕ್ಕಾಗಿ ಪ್ರಾರ್ಥಿಸುತ್ತಾರೆ. ಸಹಸ್ರಾರು ಸಂಖ್ಯೆಯಲ್ಲಿ ಕ್ಷೀರ ನೀಡುವ ಗೋವುಗಳು ನಮ್ಮ ದನದ ಕೊಟ್ಟಿಗೆಗೆ ಸೇರಲಿ. ರಥಸಹಿತ ಅಶ್ವವನ್ನು ಬೇಡುತ್ತಾರೆ. ದಾನ ಯೋಗ್ಯ ಅಶ್ವ ಗೋವುಗಳನ್ನು ಕೊಡಲು ಬೇಡುತ್ತಾರೆ.

5) ಬಹುಷ: ಸಾಲಗಾರರೂ ಇದ್ದರೆಂಬುದು ತೋರುತ್ತದೆ. ನಾವು ಋಣ ತೀರಿಸಲು ಅನುಗ್ರಹಿಸಲಿ.

6) ಚಿರಕಾಲ ಸೂರ್ಯನನ್ನು ನೋಡುವಂತಾಗಲಿ. ಆಯುಸ್ಸ ವೃದ್ಧಿ ಮಾಡಲಿ. ಯಜಮಾನನ ರೋಗಗಳು ದೂರವಾಗಲಿ. ಉತ್ತಮ ಶಕ್ತಿ, ಸಾಮರ್ಥ್ಯ ನೀಡಲಿ, ಮರಣರಾಹಿತ್ಯರನ್ನಾಗಿ ಮಾಡಲಿ.

7) ಮಳೆ ಸುರಿಸಿ ಅನ್ನವನ್ನು ವೃದ್ಧಿಸಲಿ. ಯುದ್ಧದಲ್ಲಿ ಅನ್ನ ಸಂಪಾದಿಸಿ ಕೊಡಲಿ. ಅನ್ನಕ್ಕಾಗಿ ಮಳೆ ಸುರಿಸಲಿ. ಕುಡಿಯುವ ನೀರಿಗಾಗಿ ಯಜಮಾನನಿಗೆ ಅನುಗ್ರಹಿಸಲಿ. ಅನ್ನ, ನೀರು ಕೊಟ್ಟು ಜೀವನವನ್ನು ಅಭಿವೃದ್ಧಿಗೊಳಿಸಲು ಬೇಡುತ್ತಾರೆ. ಉತ್ತಮ ಕರ್ಮ ಮಾಡಿಯೇ ಅನ್ನ ಬೇಡುತ್ತಾರೆ. ಉತ್ತಮ ಸ್ಥಿತಿಗೆ ಪ್ರತಿಫಲ ರೂಪವಾಗಿ ಅನ್ನ ಕೊಡಲಿ. ಅನ್ನಸಮೇತ ಭೂಮಿಗೆ ಬರಲಿ. ಮೇಘವನ್ನು ಸೀಳಿ ವೃಷ್ಟಿ ಸುರಿಸಲಿ. ಯಾವ ಪೃಥ್ವಿಗಳಿಂದ ಸಾರಪಡೆದು ಅನೇಕ ತರಹ ಅನ್ನವನ್ನು ಸೋಮನು ಕೊಡಲೆಂದು ಪ್ರಾರ್ಥಿಸುತ್ತಾರೆ.

8) ಪುತ್ರ, ಪೌತ್ರರು ನಾವು ಪುತ್ರಾದಿಗಳನ್ನು ಪಡೆಯುವಂತಾಗಲಿ. ಶತ್ರುಗಳನ್ನು ಜಯಿಸುವಂತಹ ಪುತ್ರರಿಗಾಗಿ ಪ್ರಾರ್ಥಿಸುತ್ತಾರೆ. ವೀರಪುತ್ರರನ್ನು ಕರುಣಿಸಲಿ.

9) ಹಿಂಸಕ ಶತ್ರುಗಳನ್ನು ನಾಶಮಾಡಲಿ, ರಾಕ್ಷಸ ಭಾದೆಗಳಿಂದ ರಕ್ಷಿಸಲಿ. ಶತ್ರುಗಳನ್ನು ದೂರ ಪ್ರದೇಶಕ್ಕೆ ಹೊಡೆದು ಓಡಿಸಲಿ. ನಾಶಮಾಡಲಿ. ನಮ್ಮ ವಿರುದ್ಧ ಯುದ್ಧ ಮಾಡಲು ಇಚ್ಛಿಸುವವರ ದುರ್ಬುದ್ಧಿಯನ್ನು ಆ ಶತ್ರುಗಳನ್ನು ನಾಶಮಾಡಲಿ. ಶತ್ರುಗಳನ್ನು ದೂರದಲ್ಲೆ ನಾಶಮಾಡಲಿ. ಯಜಮಾನನನ್ನು ಹಿಂಸಿಸುವ ಮೊದಲೇ ರಾಕ್ಷಸರನ್ನು ನಾಶಮಾಡಲಿ. ನಮ್ಮ ಶತ್ರುಗಳ ಬಗ್ಗೆ ಸೋಮನು ಯಾವಾಗಲೂ ಎಚ್ಚರನಾಗಿರಲಿ. ಸರ್ವಭಕ್ಷಕ ರಾಕ್ಷಸರನ್ನು ನಾಶ ಮಾಡಲಿ. ಯುದ್ಧದಲ್ಲಿ ಸೋಮನು ಯಜಮಾನನ ಜೊತೆಗೆ ಇದ್ದು ರಕ್ಷಿಸಲಿ. ಯಜಮಾನನನ್ನು ಹಿಂಸಿಸಲು ಯಾರೂ ಶಕ್ತರಾಗದಿರಲಿ. ಇಂದ್ರನ ಸಹಾಯದಿಂದ ರಕ್ಷಣೆ ನೀಡಲಿ. ಅಜವಾಹಕ / ಕಾಂತಿಯುತ ಪೂಷನನಿಂದಲೂ ರಕ್ಷಣೆ ಕೊಡಿಸಲಿ.

10) ಸೋಮನು ಇಂದ್ರಾಭಿಮುಖ ಪ್ರವಹಿಸಲಿ. ಅವನ ಶರೀರ ವ್ಯಾಪಿಸಲಿ. ನಾವು ಸೋಮಪಾನ ಮಾಡುವಂತಾಗಲಿ. ಅಗ್ನಿಯಿಂದ ನಮಗೆ ತೇಜಸ್ಸನ್ನು ಕೊಡಲಿ. ಪ್ರಭೂತ ಧನ, ದಾನ ಮಾಡುವ ಸೋಮನು ಯಜಮಾನನಿಗೆ ಅಭಿಮುಖನಾಗಲಿ.

11) ಲೋಭಿಗಳಿಂದ, ನಿಂದಕರಿಂದ, ದೂಷಕರಿಂದ ನಮ್ಮನ್ನು ಮುಕ್ತರನ್ನಾಗಿ ಮಾಡಲಿ. ನಮಗೆ ಬಂದಿರುವ ಆಪತ್ತುಗಳನ್ನು ದೂರ ಮಾಡಲಿ. ನಮ್ಮ ಗೃಹಗಳನ್ನು ರಕ್ಷಿಸಲಿ. ಸಮೀಪದ, ದೂರದ ಭಯಗಳನ್ನು ನಾಶಮಾಡಲಿ.

12) ಅಗ್ನಿ, ವಾಯು, ಸೂರ್ಯ. ಅಗ್ನಿಯು ಶುದ್ಧಿಕಾರಕ, ತೇಜಸ್ಸಿನಿಂದ ನಮ್ಮ ಶರೀರವನ್ನು ಶುದ್ಧಿಗೊಳಿಸಲಿ. ವಾಯು ಸೂರ್ಯರು ಯಜಮಾನರುಗಳನ್ನು ಶುದ್ಧಿಗೊಳಿಸಲಿ. ಇಂದ್ರಾದಿ ದೇವಗಣಗಳು, ದೇವತೆಗಳು, ಸಕಲ ದೇವತೆಗಳು ಯಜಮಾನನ್ನು, ಯಾಜ್ಞಿಕರನ್ನು ಶುದ್ಧಿಗೊಳಿಸಲಿ. ದ್ಯಾವಾ, ಪೃಥ್ವಿಗಳು ಮಂಗಳಕರವಾದುವು. ಧನದೊಂದಿಗೆ ಸ್ತುತಿಕರ್ತರನ್ನು ರಕ್ಷಿಸಲಿ. ಸೋಮದೇವನು ಯಜಮಾನನಿಗೆ ಅನ್ನ, ಧನ, ಗೃಹ, ಪಶು, ಪುತ್ರಾದಿಗಳನ್ನು ಅನುಗ್ರಹಿಸಲಿ.

13) ಸೋಮದೇವನ ಜೊತೆಯಲ್ಲಿ ಬರುವ ಇತರೇ ದೇವತೆಗಳು :

ಆದಿತ್ಯ, ಸೂರ್ಯ, ವಾಯು, ಅಗ್ನಿ, ಸಿಂಧು ದೇವತೆ, ದ್ಯಾವಾ ಪೃಥ್ವಿ, ಅದಿತಿ, ಬ್ರಹಸ್ಪತಿ, ಇಂದ್ರ, ವಿಶ್ವೇ ದೇವತೆಗಳು, ಮಿತ್ರಾವರುಣರು, ಅಶ್ವಿನೀ ದೇವತೆಗಳು, ಸರಸ್ವತಿ ದೇವೀಯರು, ಮರುತ್ ದೇವತೆಗಳು, ಪೂಷಣ್, ತ್ವಷ್ಟ, ಸವಿತೃ, ಶ್ರದ್ಧಾ ದೇವೀ, ದ್ಯುಲೋಕದ ದೇವತೆಗಳು.

ಮಹಿಷಿಯರು ಸ್ವಾಹಾಕಾರ ಯಜ್ಞಕ್ಕೆ ಆಹ್ವಾನಿಸುತ್ತಾರೆ. ಎಲ್ಲರೂ ಒಟ್ಟಾಗಿ ಉತ್ತಮ ದಾನ ಮಾಡಲು ಬರಲಿ. ಸಕಲರು

ಯಜಮಾನನನ್ನು ಕಲ್ಯಾಣಗಳಿಂದ ರಕ್ಷಿಸಲಿ, ಮಿತ್ರನಂತೆ ಉತ್ತಮ ಮಾರ್ಗದರ್ಶಕರಾಗಲಿ, ನಾವು ಸೋಮಪಾನ ಮಾಡುವಂತಾಗಲಿ. ಅಗ್ನಿಯಿಂದ ತೇಜಸ್ಸು ಬರಲಿ, ಸೋಮನು ಅಭಿಮುಖನಾಗಲಿ. ದೇವತೆಗಳ ಬಳಿಗೆ ಹೋಗಿ ಅವರನ್ನು ಯಜ್ಞಕ್ಕೆ ಬರಲು ಆಹ್ವಾನಿಸಲಿ.

14) ದೇವತೆಗಳ ಪಾನಾರ್ಥ / ಧಾರಾರೂಪಿಯಾಗಿ ದೋಣ ಕಳಸ ಸೇರಿ ಇಂದ್ರನನ್ನು ಹರ್ಷಿಸಿ. ಮೂರು ಲೋಕಗಳಿಂದಲೂ ಸೋಮಧಾರೆ ಹರಿದು ಬರಲಿ. ಇಂದ್ರ ಸಮಾನ ರಥದಲ್ಲಿ ದೇವ ಸಮೂಹ ಅಭಿಮುಖವಾಗಿ ಹರಿಯಲಿ. ನಿಶಾದಾದಿ ಪಂಚಜನರಿಗೆ ವೀರ್ಯವತ್ತಾದ ರಸವನ್ನು ಒದಗಿಸಲಿ.

15) ಹವಿರರ್ಪಿಸುವವರನ್ನು ಹಿಂಸಿಸದಿರಲಿ. ಕರ್ಮರಹಿತರನ್ನು ದಹಿಸಿ ನಾಶಮಾಡಲಿ. ಅಗ್ನಿಕಾರ್ಯ ಮಾಡದವರನ್ನು ಓಡಿಸಲಿ. ಕರ್ಮಭ್ರಷ್ಟರು, ಸೋಮಸ್ತೋತ್ರವನ್ನು ಪಠಿಸದಿರಲಿ. ಕರ್ಮರಹಿತರು ನಾಯಿಯಂತೆ ಅಪರನ್ನು ಓಡಿಸಲಿ. ದೈವ ಭಕ್ತಿ ಇಲ್ಲದವರು ವಂಚಕರು ನಾಶವಾಗಲಿ. ನಮ್ಮ ಪಾಪಗಳು ನಾಶವಾಗಲಿ. ದೈವ ಪೂಜಕರಲ್ಲದವರು ನಾಶವಾಗಲಿ. ಸೋಮಪಾನದಿಂದಾಗುವ ಹರ್ಷ, ಲಾಭಗಳನ್ನು ಪಾಪಿಗಳು ಹಾಳುಮಾಡದಿರಲಿ. ನಮ್ಮ ಧನವನ್ನು ಯಾರೂ ಅಪಹರಿಸಿದಿರಲಿ.

## ವಿಶೇಷ ಬೇಡಿಕೆಗಳು

ಅಂತರಿಕ್ಷದಿಂದ ಬರುವಾಗ ಸೋಮನು ಯಜಮಾನನ ಅವನ ಪುತ್ರ ಪೌತ್ರಾದಿಗಳಿಗೂ ಆಯುಸ್ಸು ಕರುಣಿಸಲಿ. ತಾನು ಜಯಿಸಿದ ಧನವನ್ನು ಯಜಮಾನನ ಇಷ್ಟಾರ್ಥವನ್ನು ಯಜ್ಞ ಫಲವನ್ನು ಕರುಣಿಸಲಿ. ನಕ್ಷತ್ರಗಳು ಪ್ರಕಾಶಿಸುತ್ತಾ ಯಜಮಾನನಿಗೆ ಮಾರ್ಗದರ್ಶನ ಮಾಡುತ್ತಾ ಸೋಮನ ಸತ್ವಗಳನ್ನು ಅವನು ಕಂಡುಕೊಳ್ಳುವಂತೆ ಮಾಡಲಿ. ಯಾಜಮಾನನಿಂದ ಪ್ರೇರಿತನಾಗಿ ವೈದಿಕ ಮಾರ್ಗದಲ್ಲಿ ಧನಯುಕ್ತನಾಗಿ ಸಂಚಾರ ಮಾರ್ಗವನ್ನು ಹೊಂದಿರುವ ಸೋಮನು ನಮಗೆ ನೇರ ಮಾರ್ಗ ತೋರಿಸಲಿ. ಜಮದಗ್ನಿ ಋಷಿಗಳಿಗೆ ಅನುಗ್ರಹಿಸಿದಂತೆ ನಮಗೂ ಸಕಲ ಸಂಪತ್ತನ್ನು ಅನುಗ್ರಹಿಸಲಿ. ನಾವು ಸೋಮಪಾನವನ್ನು ಮಾಡಿ ತೃಪ್ತರಾಗುವಂತೆ ಮಾಡಲಿ. ದೇವತೆಗಳು ಸೋಮನನ್ನು ತಮ್ಮ ಪಾನಾರ್ಥವಾಗಿಯೇ ಕಲ್ಪಿಸಿಕೊಂಡರು.

ಫಲಶ್ರುತಿ ಹೀಗಿದೆ

ಇದು ವೇದಸಾರ ಭೂತವಾದುದು. ಪವಮಾನ ಸೋಮದೇವನನ್ನು ಉದ್ದೇಶಿಸಿ ಯಾರು ಪಠಿಸುವರೋ ಅಂತಹವರು ಪರಿಶುದ್ಧ ವಾಯುವಿನಿಂದ ರುಚಿಕರವಾದ ಸಕಲ ಭೋಗ ವಸ್ತುಗಳನ್ನು ಅನುಭವಿಸುತ್ತಾರೆ. ಸರಸ್ವತಿ ದೇವಿಯರು ಕ್ಷೀರವನ್ನು, ಘೃತವನ್ನು, ಮಧುವನ್ನು ಮಳೆಗರೆಯುತ್ತಾರೆ. ಯಾಜ್ಞಿಕರು ಅಂತರಿಕ್ಷದ ದೂರದೇಶದಿಂದ ಶ್ಯೇನ ಪಕ್ಷಿಯು ಅನ್ನತಂದಿದ್ದನ್ನು ನೋಡಿದ್ದಾರೆ.

॥ ಹರ ನಮಃ ಪಾರ್ವತಿ ಪತಯೇ ಹರಹರ ಮಹಾದೇವ ॥

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಸೋಮದೇವರು

★ ಯಜ್ಞಗಳ ನಡುವೆ ಉತ್ಪನ್ನರಾದವರು, ಎಲ್ಲವನ್ನೂ ಶುದ್ಧಿ ಮಾಡುವ ಔಷಧಗಳ ಪತಿ, ತನ್ನ ಪ್ರಭು ವರುಣನಂತೆ ಲೋಕ ಹಿತಕರ. ಸೋಮನು ಅಗ್ನಿಷ್ಟೋಮ ಯಾಗವನ್ನು ಅಪೇಕ್ಷಿಸುತ್ತಾನೆ. ಯಜ್ಞ ಮಾಡುವ ಸಜ್ಜನರ ಒಡೆಯನಾಗಿದ್ದಾನೆ. ಮಾರ್ಗದರ್ಶನದಿಂದಲೇ ಇಂದ್ರಾದಿಗಳು ದೇವತೆಗಳ ನಡುವೆ ಇರಲು ಸಾಧ್ಯವಾಯಿತು. ಸೋಮನು ಯಾಜ್ಞಿಕರಿಗಾಗಿ ಅನ್ನ ಸಂಪಾದಿಸುತ್ತಾನೆ.

★ ಅಗ್ನಿ ಸೋಮ ಇಬ್ಬರೂ ದೇವತೆಗಳಲ್ಲೆಲ್ಲ ಅತ್ಯಂತ ಪೂಜ್ಯರು. ಸೋಮವು ಸುಸಂಸ್ಕೃತ ಯಜ್ಞವೇದಿಕೆ ಸೇರಿ ಹವಿರೂಪದಿಂದ ದೇವಾರ್ಪಿತವಾಗುತ್ತದೆ. ಸೋಮ ಇಂದ್ರರು ಸ್ನೇಹಿತರು, ಶಕ್ತಿ ಪಾಲಕರು, ವೀರ್ಯವಂತರು, ನೇತೃಗಳು, ಒಂದೇ ರಥದಲ್ಲಿ ಬರುವವರು.

★ ಸಿದ್ಧಪಡಿಸಿದ ಸೋಮಪಾನ ಮಾಡಲು ಯೋಗ್ಯರು, ಸೋಮರಸವು ಕಾಮವರ್ಷಕ, ಇಷ್ಟಾರ್ಥಪ್ರದ, ಅಪೇಕ್ಷಿತ ವಸ್ತುಗಳನ್ನು ಕೊಡತಕ್ಕದ್ದು. ಓಷಧಿಗಳಲ್ಲಿ, ಉದಕಗಳಲ್ಲಿ, ಗೋವುಗಳಲ್ಲಿ, ಸೂರ್ಯ ಜ್ಯೋತಿಯನ್ನು ಸೋಮನು ಪ್ರಶಂಸಿಸುತ್ತಾನೆ.

★ ಇಂದ್ರ ಸೋಮರು ಎಲ್ಲ ಭೂತ ಜಾತಗಳ ನಿರ್ಮಾಪಕರು, ಉದಕ ನಿರ್ಮಾಪಕರು. ಸೂರ್ಯನ ಪ್ರಭೆಯೊಡನೆ ಉಷಸ್ಸಿನ ಕಾಂತಿಯನ್ನು ಸೇರುವಂತೆ ಮಾಡಿದರು, ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿ ಎಲ್ಲರಿಗೂ ಗೋಚರಿಸುವಂತೆ ಮಾಡಿದರು. ಗೋವುಗಳ ಕೆಚ್ಚಲಿನಲ್ಲಿ ಮಧ್ಯ ಪ್ರದೇಶದಲ್ಲಿ ಕ್ಷೀರ ತುಂಬಿದರು. ನಾನಾ ವರ್ಣದ ಗೋವುಗಳಲ್ಲಿ ಶುಕ್ಲ ವರ್ಣದ ಕ್ಷೀರ ಬರುವಂತೆ ಮಾಡಿದರು. ಪಾಪ ಕಾರಿ ಅಸುರರನ್ನು ಅಸತ್ಯ ಹೇಳುವವರನ್ನು ಅವರು ಎಷ್ಟೇ ಶಕ್ತಿಯುತರಾದರೂ ಹಿಂಸಿಸದೇ ಬಿಡುವುದಿಲ್ಲ, ಇಂದ್ರ ಬಂಧನಕ್ಕೆ ಸಿಕ್ಕಿ ಕೊಲ್ಲಲ್ಪಡುತ್ತಾರೆ.

★ ಪೂಜಾರ್ಹರು, ದೇವತಾತ್ಮರು, ಅನ್ನರೂಪ ಧನವಂತರು, ಮರಣ ರಹಿತರು, ಸ್ವರ್ಗ ವೀಕ್ಷಕರು, ದ್ಯಾವಾ ಪೃಥ್ವಿ ಗಳನ್ನು ವಿಸ್ತೃತ ಮಾಡಿದವರು, ಸೋಮ ಅತ್ಯಂತ ರುಚಿಕರ, ಪ್ರವಾಹ ರೂಪಿ. ದೇವತೆಗಳ ಹೃದಯ ಪ್ರವೇಶಿಸಿ ಅವರ ಕೋಪ ದೂರ ಮಾಡುತ್ತದೆ. ಉದರ ಪೂರ್ಣ ಪಾನ ಮಾಡಿದರೂ ಹಿಂಸೆ ಆಗದಿರಲಿ ಸೋಮನು ಮಿತ್ರನಾಗಿರಲಿ ಎಂದು ಇಂದ್ರನನ್ನು ಪ್ರಾರ್ಥಿಸುತ್ತಾರೆ.

★ ಸೋಮನು ಯಜಮಾನನ ರಕ್ಷಕ. ದೇಹದ ಪ್ರತಿ ಅಂಗದಲ್ಲೂ ಆಕ್ರಮಿಸಿ ಯಜಮಾನನ ವ್ಯವಹಾರಗಳನ್ನು ವೀಕ್ಷಿಸುತ್ತಾನೆ. ಮಾನವರು ಮೃತರಾಗಿ ಸ್ವರ್ಗ ಸೇರಿ ದೇವತೆಗಳನ್ನು ಅರಿಯುತ್ತಾರೆ. ಆಯುಸ್ಸು ವೃದ್ಧಿಸುತ್ತದೆ. ಸೋಮನು ಸಖನಾಗಿರುತ್ತಾನೆ.

★ ಸೋಮ ಹಿಂಡುವಲ್ಲೆಲ್ಲ ಹೋಗಿ ಏಕಕಾಲದಲ್ಲಿ ಸೋಮಪಾನ ಮಾಡುತ್ತಾನೆ. ಗೋ ರಕ್ಷಕ, ವೇಗವಂತ, ಪುತ್ರಪ್ರದ, ಹರ್ಷಕಾರಕ, ಇಂದ್ರನ ಮಿತ್ರ ಇಂತಹ ಮಹಾಮಹಿಮನಾದ ಎಲ್ಲರಿಂದಲೂ ಅಪೇಕ್ಷಿತನಾದ ಸೋಮನನ್ನು ಸ್ತುತಿಸುತ್ತಾರೆ.

### ಆಶ್ರಮದಲ್ಲಿ

★ ಸೋಮನನ್ನು ಸ್ತುತಿಸುವ ಕ್ರಮ ಯಜ್ಞಕರ್ತರಿಗೆ ತಿಳಿದಿದೆ. ಅವರು ಸ್ತುತಿಸುತ್ತಾರೆ. ಯಾಗಕರ್ತನು ಇಬ್ಬರಿಗೂ ಒಂದೇ ವಿಧವಾದ ಪೂಜೆ, ಆಜ್ಯ ಆಹುತಿ ಅರ್ಪಿಸುತ್ತಾನೆ. ಅಗ್ನಿ ಸೋಮರಿಬ್ಬರನ್ನೂ ಆಹ್ವಾನಿಸುತ್ತಾರೆ. ಸೋಮನು ಯಜ್ಞ ವೇದಿಕೆಗೆ ಬಂದು ಕೂಡಲಿ.

★ ಕಲ್ಲುಗಳಿಂದ ಜಜ್ಜಿ ಹಿಂಡಿ ಪರಿಷ್ಕರಿಸಿದ ಸೋಮರಸವನ್ನು ಸೇವಿಸಲಿ, ಎಲ್ಲಿ ಸಂತೋಷದಿಂದ ಸೋಮನನ್ನು ಪುತ್ರರೊಂದಿಗೆ ಪ್ರಾರ್ಥಿಸುತ್ತಾರೆ, ಹವಿಸ್ಸು ಅರ್ಪಿಸುತ್ತಾರೆ ಅಲ್ಲಿ ಸೋಮನು ಬರುತ್ತಾನೆ. ಸೋಮಕ್ಕೆ ಸಂಬಂಧಿಸಿದ ಕರ್ಮಗಳು ಕುಂಠಿತವಾದರೂ ಉತ್ತಮ ಮಿತ್ರನಾಗಿರುತ್ತಾನೆ.

★ ಕೊನೆಯ ದಿನ ಅವಭೃತ ನಂತರ ಒಟ್ಟಾಗಿ ಎಲ್ಲ ದೇವತೆಗಳು ಅವರವರ ಸ್ಥಾನಗಳಿಗೆ ಹೋಗುತ್ತಾರೆ. ವೇದಾರ್ಥಗಳು ಹೃದಯದಿಂದ ಮಾನಸಿಕ ಶಕ್ತಿಯಿಂದ ನಿಷ್ಕರ್ಷಿತ. **ಬ್ರಹ್ಮ ಜ್ಞಾನಿಗಳಿಗೆ ಏಕಾಭಿಪ್ರಾಯವಿದೆ.** ಜ್ಞಾನ ರಹಿತರನ್ನು ದೂರಮಾಡುತ್ತಾರೆ.

★ ಯಜ್ಞದಲ್ಲಿ (1) ಹೋತೃ = ಕರ್ಮ ಉಪಯುಕ್ತ ಮಂತ್ರಗಳನ್ನು ಪಠಿಸುತ್ತಾನೆ. (2) ಉದ್ಗಾತೃ = ಶಕ್ವರೀ ಸಂಜ್ಞಕ ಋಕ್ಕುಗಳನ್ನು ಸಾಮಗಾನದೊಂದಿಗೆ ಪಠಿಸುತ್ತಾನೆ. (3)ಬ್ರಹ್ಮನು ಪ್ರಾಯಶ್ಚಿತ್ತ ಕರ್ಮ ಬೋಧಕ ವಾಕ್ಯಗಳನ್ನು ಪಠಿಸುತ್ತಾನೆ. (4) ಅಧ್ವರ್ಯು = ಯಾಗಕ್ಕೆ ಒಂದು ರೂಪ ಕೊಟ್ಟು ಅದನ್ನು ನಿರ್ವಹಿಸುತ್ತಾನೆ.

★ ಚಂದ್ರನು ಋತುಗಳ ನಿಯಾಮಕ, ಉಷಸ್ಸಿನ ಮುಂಭಾಗದಲ್ಲಿ ಆವಿರ್ಭವಿಸಿ ದೇವತೆಗಳ ಯಜ್ಞಭಾಗ ನಿಯಮಿಸುತ್ತಾನೆ. ನಕ್ಷತ್ರಗಳ ಸಮೀಪದಲ್ಲಿ ಸೋಮನು ಸ್ಥಿತನಾಗಿದ್ದಾನೆ. ಏಳು ಸೋಮ ಪಾಲಕರಿಂದ ಹಾಗು ಹೊದ್ದಿಕೆಯಿಂದ ರಕ್ಷಿಸಲ್ಪಟ್ಟಿದ್ದಾನೆ. ದೇವತೆಗಳು ರಹಸ್ಯಾತ್ಮಕ ಸೋಮನ ಪ್ರಭಾವ ಅರಿತಿದ್ದಾರೆ.

★ ಯಾಜ್ಞಿಕರು ಯಾಗ ಯೋಗ್ಯ ಸ್ವರೂಪ ತಿಳಿದಿದ್ದಾರೆ. ವಾಯುವು ಸೋಮನ ರಕ್ಷಣೆಗೆ ಇದ್ದಾನೆ. ಸೋಮನು ಸಂವತ್ಸರಗಳಿಗೆ ಕಾಲ ವ್ಯವಸ್ಥೆ ಮಾಡುತ್ತಾನೆ.

ಪ್ರಾರ್ಥನೆಗಳು

★ ಯಜ್ಞಗೃಹವನ್ನು ತೇಜಸ್ಸಿನಿಂದ ತುಂಬಲಿ, ಯಾಜ್ಞಿಕರಿಗೆ ಶಕ್ತಿ, ಧನ ಸುಖ ಸಾಧನಗಳನ್ನು ನೀಡಲಿ, ಹಿಂದೆ ಅವರ ಪಿತೃಗಳಿಗೆ ಕೊಟ್ಟಂತೆಯೇ ತಮಗೂ ಎಲ್ಲ ಸೌಖ್ಯಗಳನ್ನು ಕೊಡಲಿ, ಶತ್ರುಗಳನ್ನು ನಾಶಮಾಡಿ ಕಳಂಕಗಳಿಂದ ಪಾರುಮಾಡಲಿ.

★ ಮುಂದೆ ಮಾಡಬಹುದಾದ ಪಾಪಗಳಿಂದಲೂ ಯಜಮಾನನನ್ನು ರಕ್ಷಿಸಲಿ, ಆಯಸ್ಸನ್ನು ಹೆಚ್ಚಿಸಲಿ, ಶತ್ರುಗಳನ್ನು ಹೊಡೆದೋಡಿಸಲಿ, ಯಜಮಾನನಿಗೆ, ಪುತ್ರರಿಗೆ, ಪ್ರಾಣಿಗಳಿಗೆ ರೋಗರುಜಿನಗಳು ಬರದಂತೆ ಕಾಪಾಡಲಿ. ಇಂದ್ರ, ಅಗ್ನಿ, ಸೋಮರು ಶತ್ರುಗಳನ್ನು ನಾಶಮಾಡಲಿ.

★ ಮರುತ್‌ಗಳೊಡನೆ ಇಂದ್ರನು ಬಂದು ಸೋಮಪಾನ ಮಾಡಲಿ. ಸೋಮನು ಧನದಾತ, ಧನಕ್ಕಾಗಿ ಬೇಡಿದ್ದಾರೆ. ಸೋಮರುದ್ರರು ಪ್ರತಿ ಯಜ್ಞದಲ್ಲೂ ಸಮೀಪಿಸಿ ವ್ಯಾಪಿಸಲಿ, ಅನ್ನ, ಯಶಸ್ಸು, ಸಂಪತ್ತು, ಮಂಗಳಗಳನ್ನು ಅನುಗ್ರಹಿಸಲಿ. **ದೌರ್ಭಾಗ್ಯ ದೇವತೆಯನ್ನು ದೂರ ಓಡಿಸಲಿ.**

★ ರೋಗ ನಾಶಮಾಡಿ ರೋಗ ನಿರೋಧಕ ತುಂಬಲಿ. ಪಾಪಗಳಿಂದ ಬಿಡುಗಡೆ ಮಾಡಲಿ. ಸೋಮನು ಧನಯುಕ್ತನನ್ನಾಗಿ ಮಾಡಲಿ, ಪ್ರಕಾಶಯುಕ್ತ ಕಣ್ಣುಗಳುಳ್ಳವನನ್ನಾಗಿ ಮಾಡಲಿ, ಕ್ರೋಧ ಪ್ರಕಟಿಸುವ ಶತ್ರುವಿಗೆ ಬಿಟ್ಟುಕೊಡದಿರಲಿ, ದುಃಸ್ವಪ್ನ ಉಂಟಾಗದಿರಲಿ. ನಿಂದಕರು ನಿಂದಿಸದಿರಸಲಿ.

★ ವ್ಯಾದಿಗಳನ್ನು ದೂರಮಾಡಿ ಗುಣಪಡಿಸಲಿ, ಪ್ರಬಲ ರೋಗಗಳು ಸೋಮನಿಗೆ ಹೆದರಿ ಹೋಗಲಿ. ಯಜಮಾನನು ಸೋಮನನ್ನು ಭಜಿಸುವಂತಾಗಲಿ. ಪ್ರೀತಿಯಿಂದ ಹಿಂದಿನಂತೆ ಮುಂದೆಯೂ ರಕ್ಷಿಸಲಿ. ಯಜಮಾನರು ತಮಗಾಗಿ, ಋತ್ವಿಕರಿಗಾಗಿ ಬಹು ಧನ ಯಾಚಿಸುತ್ತಾರೆ.

★ ಜಜ್ಜಿದ ಲತೆಗಳಿಂದ ತೊಟ್ಟಿಕ್ಕುತ್ತಿರುವ ಹವಿರ್ಲಕ್ಷಣ ರೂಪ ಮದಕರ ಸೋಮವನ್ನು ನೀರು ಕುಡಿದಂತೆ ಪಾನಮಾಡಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ವಾಯುದೇವರು

★ ಸಮಸ್ತ ಜಗತ್ತಿನಲ್ಲಿ ಮೊದಲು ಉತ್ಪನ್ನರಾದವರು ವಾಯುದೇವರು, ಜೀವರೂಪಿನಿಂದ ದೇವತೆಗಳಲ್ಲಿ ಇದ್ದಾರೆ. ಪ್ರಾಣರೂಪಿನಿಂದ ಸಮಸ್ತ ಪ್ರಾಣಿಗಳಲ್ಲಿದ್ದಾರೆ. ಶಬ್ದದಿಂದ ಮಾತ್ರ ಗುರುತಿಸಬಹುದು. ರೂಪಿನಿಂದ ನೋಡಲಾಗುವುದಿಲ್ಲ. ವನ, ಪರ್ವತಗಳಲ್ಲಿ ಘರ್ಜಿಸುತ್ತಾ ಚಲಿಸುತ್ತಾರೆ.

★ ವೃಕ್ಷಗಳು ಕಂಪಿಸುತ್ತವೆ. ಅಮಂಗಳಗಳನ್ನು ತಡೆಹಿಡಿಯುತ್ತಾರೆ. ಸಂಪತ್ ಪೋಷಕರು, ದ್ಯಾವಾ ಪೃಥ್ವಿಗಳ ಪೋಷಕರು, ಮನೋವೇಗದ ಅಶ್ವಗಳು ಇವರನ್ನು ವಹಿಸುತ್ತವೆ. ನೂರು ಸಾವಿರ ಅಶ್ವಗಳ ರಥದಲ್ಲಿ ವಾಯು ಬರುತ್ತಾನೆ. ರೋಗನಾಶಕರು, ಮನಸಂತೋಷದಾಯಕರು.

★ **ವಾಯುವು ಗೋವುಗಳಲ್ಲಿ ಕ್ಷೀರ ಸುರಿಸುತ್ತಾನೆ.** ''ನಿಯುತ್ಸು'' ವಾಯುವಿನ ಕುದುರೆಯ ಹೆಸರು. ಮರುತ್‌ಗಳನ್ನು ಉಂಟುಮಾಡುತ್ತಾನೆ. ಉಷಸ್‌ಗಳನ್ನು ಪ್ರಕಾಶಿಸುತ್ತಾನೆ. ಜ್ಞಾನಿಯಾದ ಯಜಮಾನನ ಅಜಾಗರೂಕತೆಯನ್ನು ನಾಶಮಾಡಿ ಜಾಗೃತಿ ಉಂಟುಮಾಡುತ್ತಾನೆ. ಭಯನಾಶಕನೂ ವಾಯುವೇ.

★ ವಾಯು ಸರ್ವೇಶ್ವರ, ಶುಭ್ರವರ್ಣ, ಧನದಾತ, ಯಜಮಾನನನ್ನು ದಾರಿದ್ರ್ಯದಿಂದ ಪಾರುಮಾಡಿ ಉತ್ಕೃಷ್ಟ ಪ್ರದೇಶಕ್ಕೆ ಕರೆದೊಯ್ಯುತ್ತಾನೆ. ಅನ್ನವಂತ, ಧನ ಸಂಪತ್ತು ನೀಡುತ್ತಾನೆ.

★ ಇಂದ್ರ ವಾಯುಗಳು ಪೂಜಾ ಅಪೇಕ್ಷಿಗಳು, ಸಂಪತ್ಪ್ರದರು, ಜಗತ್ ರಕ್ಷಕರು, ಶುದ್ಧ ಸೋಮಪಾನಿಗಳು, ಸಹಸ್ರಾರು ಸಂಖ್ಯಾತ ಮಾನವ ಸಂರಕ್ಷಕರು, ದೇವತಾತ್ಮರು, ದೇವತೆಗಳೆಲ್ಲರಿಗಿಂತ ಮುಂಚೆಯೇ ಸೋಮಪಾನ ಮಾಡುವವರು. ಅಶ್ವ ಒಂಟೆ, ನಾಯಿಗಳಿಂದ ಎಳೆಯುವ ಆಹಾರವನ್ನು ದಾನ ಮಾಡುವವರು, ಅಧಿಕ ಧನ ನೀಡುತ್ತಾರೆ.

★ ಘೃತದಂತೆ ಪರಿಶುದ್ಧ ಸೋಮಪಾನಿಗಳು, ಸ್ವಯಂ ಪ್ರಕಾಶಿತರು, ಸರ್ವದಾ ಸಂಚಾರಿ, ಉದಕ ಮಿತ್ರ, ಮೊದಲೇ ಉತ್ಪನ್ನನಾದವನು, ಪರ್ವತ ಗುಹೆಗಳಲ್ಲಿ ಘರ್ಜಿಸುತ್ತಾ ಎದುರಾದ ಶತ್ರುಗಳನ್ನು ನಾಶಮಾಡುತ್ತಾ ಆಕಾಶವೆಲ್ಲ ಕೆಂಪಿನ ಧೂಳಿನಿಂದ ತುಂಬುತ್ತಾ ಚಲಿಸುತ್ತಾನೆ.

★ ಸ್ವಂತ ಅಶ್ವರಥದಲ್ಲಿ ಬರುವಾಗ ವೃಕ್ಷಗಳು ಕಂಪಿಸುತ್ತವೆ. ತರು, ಲತಾದಿಗಳು ಬಳಕುತ್ತವೆ. ಸ್ವಾಗತಿಸುತ್ತವೆ.

## ವಾಯುದೇವರಿಗಾಗಿ ಆಶ್ರಮದಲ್ಲಿ

★ ಸೋಮಾರ್ಪಣೆ ಮಾಡುತ್ತಾರೆ, ಚರು, ಪುರೋಡಾಶಗಳಿಂದ ಸೇವಿಸುತ್ತಾರೆ. ಯಜಮಾನರು ತಮ್ಮ ತಮ್ಮ ಕರ್ತವ್ಯಗಳನ್ನು ತಿಳಿದಿದ್ದಾರೆ. ಸ್ತೋತ್ರಗಳು, ಸೋಮಾರ್ಪಣೆಗಳನ್ನು ಮಾಡುತ್ತಾರೆ. ಯಜ್ಞದಲ್ಲಿ ಇಂದ್ರ, ವಾಯುಗಳಿಗೆ ಆಹ್ವಾನಿಸುತ್ತಾರೆ.

★ ರಾಜ ವಂಶೀಯರು ತಮ್ಮ ಕೊಳ್ಳೆಯಲ್ಲಿ ಕಾಲು ಭಾಗ ಯಾಗಕ್ಕಾಗಿ ಕೊಡುತ್ತಿದ್ದರು. **ವಾಯುವು ಸೋಮಪಾನಕ್ಕೆ ಪ್ರಥಮಾರ್ಹನೆಂದು ದೇವತಗಳು ನಿಯಮಿಸಿದ್ದಾರೆ.** ವಾಯುವಿನ ರಥ ದ್ಯಾವಾ, ಪೃಥ್ವಿಗಳ ಮಧ್ಯೆ ನಿರಾತಂಕವಾಗಿ ಆಕಾಶದಲ್ಲಿ ಸೂರ್ಯರಶ್ಮಿಗಳಂತೆ ಸ್ವತಂತ್ರವಾಗಿವೆ.

★ ವಾಯು ತೃಪ್ತಿಗಾಗಿ ಯಜ್ಞವು ನಡೆಯುತ್ತದೆ. ದರ್ಭಾಸನಕ್ಕೆ ವಾಯುವನ್ನು ಬರಲು ಆಹ್ವಾನಿಸುತ್ತಾರೆ. ತೃಪ್ತಿಯಾಗುವಷ್ಟು ಸೋಮ ನೀಡುತ್ತಾರೆ. ಸೋಮಾಹುತಿಗಳನ್ನು ಭಕ್ಷಿಸಲಿ. ಯಜ್ಞ ಸತ್ವ ಉಳಿದಿರುವುದು ವಾಯುವಿನಿಂದಲೇ, ವಾಯುವಿಗಾಗಿ ಶುದ್ಧ, ಮಧುರ ಹಿಂಡಿ ಸಿದ್ಧ ಮಾಡಿದ ಸೋಮರಸ ಅಧ್ವರ್ಯುವಿನಿಂದ ಅರ್ಪಿತವಾಗುತ್ತದೆ.

## ವಾಯುದೇವರು

★ ವಾಯು ತೃಪ್ತಿಗಾಗಿ ಯಜ್ಞವು ನಡೆಯುತ್ತದೆ. ದರ್ಭಾಸನಕ್ಕೆ ವಾಯುವನ್ನು ಬರಲು ಆಹ್ವಾನಿಸುತ್ತಾರೆ. ತೃಪ್ತಿಯಾಗುವಷ್ಟು ಸೋಮ ನೀಡುತ್ತಾರೆ. ಸೋಮಾಹುತಿಗಳನ್ನು ಭಕ್ಷಿಸಲಿ. ಯಜ್ಞ ಸತ್ವ ಉಳಿದಿರುವುದು ವಾಯುವಿನಿಂದಲೇ, ವಾಯುವಿಗಾಗಿ ಶುದ್ಧ, ಮಧುರ ಹಿಂಡಿ ಸಿದ್ಧ ಮಾಡಿದ ಸೋಮರಸ ಅಧ್ವರ್ಯುವಿನಿಂದ ಅರ್ಪಿತವಾಗುತ್ತದೆ.

★ ಪುರೋಡಾಶ, ಆಹುತಿ, ಶುದ್ಧ ಸೋಮ ಅರ್ಪಿಸುವ ಯಜಮಾನನನ್ನು ಪ್ರಸಿದ್ಧನನ್ನಾಗಿ ಮಾಡುತ್ತಾನೆ. ವಾಯುವು ತನ್ನ ಭಾಗ ಹವಿಸ್ಸನ್ನು ಸ್ವೀಕರಿಸಲಿ, ಧ್ಯಾನಾತ್ಮಕ ಸ್ತುತಿಗಳಿಂದ ವಿಹಿತ ಕರ್ಮಗಳಿಂದ ಸ್ತುತಿಸಿದ್ದಾರೆ. ಹವಿರರ್ಪಿಸುತ್ತಾರೆ. ಏಕ ಮನಸ್ಸಿನಿಂದ ಕರ್ಮನೇತೃಗಳು ಕರ್ಮ ನೆರವೇರಿಸುತ್ತಾರೆ.

★ ಇಂದ್ರ, ವಾಯುಗಳಿಬ್ಬರೂ ಒಂದೇ ರಥದಲ್ಲಿ ಯಜಮಾನಾಭಿಮುಖವಾಗಿ ಬರುವಂತೆ ವಸಿಷ್ಟವಂಶಜರು ಪ್ರಾರ್ಥಿಸಿದ್ದಾರೆ. ಇಂದ್ರ, ವಾಯುಗಳು ದರ್ಭಾಸೀನರಾಗಲಿ, ಸೋಮಪಾನ ಮಾಡಲಿ, ಮೊದಲರ್ಪಿತ ಸೋಮದಿಂದ ತೃಪ್ತರಾಗಿ ಪಾಪಗಳಿಂದ ನಮ್ಮನ್ನು ಬಿಡುಗಡೆ ಮಾಡಲಿ, ಮದಕಾರಕ ಸೋಮವನ್ನು ವಾಯು ಸಮೀಪಕ್ಕೆ ತಂದು ಅರ್ಪಿಸುತ್ತಾರೆ. ಯಜಮಾನನ ಸಮೀಪದಲ್ಲಿ ಕುಳಿತುಕೊಳ್ಳಲಿ.

★ ಪ್ರಾತ: ಸವನ ಸೋಮದಿಂದ ಹರ್ಷಿತರಾಗಲಿ, ವಾಯುವು ಅತ್ಯಂತ ಮನೋಹರ ರೂಪಿ, ದೇವತೆಗಳಲ್ಲಿ ಪ್ರಸಿದ್ಧ, ಸ್ವಮಹಾತ್ಮ್ಯದಿಂದ ಸರ್ವವ್ಯಾಪಿ.

### ಪ್ರಾರ್ಥನೆಗಳು

★ ಧನ ಬೇಡಿದ್ದಾರೆ, ಓಷದಿಗಳನ್ನು ನಮ್ಮ ಕಡೆಗೆ ತರಲಿ, ವಾಯುವು ಅಮೃತದ ಸ್ವಲ್ಪ ಭಾಗ ನಮಗೆ ಕೊಟ್ಟು ಆರೋಗ್ಯ, ಆಯುಸ್ಸು ಕರುಣಿಸಲಿ, ಇಷ್ಟಾರ್ಥಗಳನ್ನು ಈಡೇರಿಸಲಿ, ಅನ್ನ, ಗೋವು, ಸುವರ್ಣಗಳಿಗಾಗಿ ಕೇಳಿದ್ದಾರೆ. ಉಣ್ಣೆಯ ಮೂಲಕ ಶೋಧಿತವಾಗಿ ಹರಿವ ಸೋಮವು ಇಂದ್ರ, ವಾಯುಗಳಿಗಾಗಿ ಹರಿಯಲಿ. ಅನ್ನ, ಧನ, ಶಕ್ತಿಗಳಿಗಾಗಿ ಇಂದ್ರ, ವಾಯುಗಳನ್ನು ಪ್ರಾರ್ಥಿಸಿದ್ದಾರೆ.

★ ಉತ್ತಮ ಜೀವನಕ್ಕಾಗಿ, ಶತ್ರುಗಳಿಂದ ರಕ್ಷಣೆಗಾಗಿ ಬೇಡಿದ್ದಾರೆ. ಅಶ್ವ ಗೋವುಗಳನ್ನು ಪುತ್ರರಿಗೆ ರಕ್ಷಣೆಯನ್ನು ನೀಡಲಿ. ವಾಯುವಿನ ಸ್ಥಾನ ಸ್ವರ್ಗ. ಸ್ವರ್ಗದಿಂದ ಸೋಮ ತರುವವನು ಪೂಷದೇವ, ಅತಿ ರಹಸ್ಯ ಪ್ರದೇಶದಲ್ಲಿ ಇರುವವನು. **ಉದಕ ದೇವತೆಗಳು ಸೂರ್ಯನ ಸಮೀಪದಲ್ಲಿರುವವರು. ವಿಶ್ವೇ ದೇವತೆಗಳು ಮಿಂಚಿನ ಮೇಲ್ಭಾಗದಲ್ಲಿರುವವರು.**

★ ಅಗ್ನಿ ದೇವ ಉದಕದಲ್ಲೇ ಅಡಗಿದ್ದಾನೆ. ವಾಯುವಿನ ಜೊತೆಗೆ ಇಂದ್ರ, ಮಿತ್ರ ವರುಣರನ್ನು ಆಹ್ವಾನಿಸಿದ್ದಾರೆ. ★ **ಪ್ರಾಣ ವಾಯುವು ವೇದದ ಉಚ್ಚಾರಣೆಗೆ ಪ್ರೇರೇಪಿಸುತ್ತದೆ. ಪ್ರಾಣಿಗಳ ಶರೀರದಲ್ಲಿ ಜೀವಾತ್ಮನೂ, ಪ್ರಣವ ರೂಪಿನಲ್ಲಿ ಆತ್ಮನೂ ಇರುವುದನ್ನು ಋಷಿಗಳು ತಿಳಿದಿದ್ದಾರೆ.**

॥ ಓಂ ಶ್ರೀ ಮಹಾಗಣಪತಯೇ ನಮಃ ॥

ಯೋ ವೇದಾದೌಸ್ವರಃಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸಮಹೇಶ್ವರಃ ॥

ವೇದಃ ಶಿವಃ ಶಿವೋವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ ಸರಸ್ವತಿ ಭಾರತಿ, ಉಮಾ ಗಾಯತ್ರಿ,
ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮಃ

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು
ಅವರ ಪರಿವಾರದವರಿಗೆ ನಮೋ ನಮಃ ।

ಋಗ್ವೇದ ಪುರಸ್ಕಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

# ವಿಶ್ವೇದೇವತೆಗಳು

ಋಗ್ವೇದದಲ್ಲಿ ಇದ್ದಂತೆ ಹತ್ತು ಮಂಡಲಗಳಿಂದ ಎಪ್ಪತ್ತೈದು ಸೂಕ್ತಗಳಲ್ಲಿ
ಇವರ ವಿಚಾರಗಳು ಬಂದಿವೆ. ಅವನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

ಭಾಗ - 1 : ಸಾಮೂಹಿಕ
- ಎ) 1 ಮತ್ತು 10ನೇ ಮಂಡಲಗಳಿಂದ ಸಾಮೂಹಿಕ ಸ್ತೋತ್ರಗಳು
- ಬಿ) ಬೇರೆ ಬೇರೆ ಋಷಿಗಳಿಂದ ಬಂದ ಸ್ತೋತ್ರಗಳು

ಭಾಗ - 2 : ಆಶ್ರಮಗಳಲ್ಲಿ ಸಾಮೂಹಿಕ ವಿಚಾರಗಳು
- ಎ) 1 ಮತ್ತು 10ನೇ ಮಂಡಲಗಳಿಂದ ದೊರೆತಂತೆ
- ಬಿ) ಬೇರೆ ಬೇರೆ ಋಷಿಗಳಿಂದ ಆಶ್ರಮಗಳಲ್ಲಿ
- ಸಿ) ಈ ಭಾಗದಲ್ಲಿ ಬಂದ ವಿಶೇಷ ವಿಚಾರಗಳು

ಭಾಗ - 3 : ಪ್ರಾರ್ಥನೆಗಳು
- ಎ) 1 ಮತ್ತು 10ನೇ ಮಂಡಲಗಳಿಂದ ಸಾಮೂಹಿಕ
- ಬಿ) ಬೇರೆ ಬೇರೆ ಋಷಿಗಳಿಂದ ಪ್ರಾರ್ಥನೆಗಳು
- ಸಿ) ವಿಶೇಷ ಪ್ರಾರ್ಥನೆಗಳು

ಭಾಗ - 4 : ಒಂದೊಂದೇ ದೇವತೆಗಳ ಸ್ತೋತ್ರಗಳು ಕಡೆಯಲ್ಲಿ ಅವರಿಂದ ಪಡೆದುಕೊಂಡ ಅಭೀಷ್ಟಗಳು

## ವಿಶ್ವೇದೇವತೆಗಳು

ಶ್ರೀಮನ್ ನಾರಾಯಣ, ಪ್ರಜಾಪತಿ, ವಾಗ್ದೇವಿ, ಸರಸ್ವತಿ, ರುದ್ರರು, ಅರ್ಯಮ, ಸೋಮ, ಅಶ್ವಿನಿ, ಮರುತ್, ಪೂಷನ್, ಸವಿತೃ, ಮಿತ್ರಾ, ವರುಣ, ತ್ವಷ್ಟ, ಭಗ, ನಿರ್ಋತಿ, ದ್ಯಾವಾಪೃಥ್ವಿ, ಚಂದ್ರ, ಬೃಹಸ್ಪತಿ, ಋಭು, ಸುಪರ್ಣ, ಪರ್ಜನ್ಯ, ಅಹೋರಾತ್ರ, ಸಿಂಧು ಮತ್ತು ನದೀ ದೇವತೆಗಳು, ಪರ್ವತ, ಮಾಧ್ಯಮಿಕ ಮೃತ್ಯು ದೇವತೆ
ಇವರಡಿಯಲ್ಲಿ ಬಂದ ಬಹಳ ಮುಖ್ಯ ವಿಷಯಗಳು 1 ರಿಂದ 25ರ ವರೆಗೆ (ಪುಟ - 9ರಲ್ಲಿ) ಇದೆ.


## ಕೃತಜ್ಞತೆ :

ಎಸ್. ಸೂರ್ಯನಾರಾಯಣ ಕಲ್ಲಳ್ಳಿ, ಬೆಂಗಳೂರು - 560042
ಇವರಿಂದ ರಚಿತವಾದ ಋಗ್ವೇದ ಪರಿಚಯ ಎಂಬ ಗ್ರಂಥದಿಂದ, ಅವರ ಅನುಮತಿಯ ಮೇರೆಗೆ,
ಈ ಕಿರುಹೊತ್ತಿಗೆಯನ್ನು ತಯಾರಿಸಲಾಗಿದೆ.

ರಾಜಾಜಿನಗರ (ಎನ್.ಆರ್.ನಂಜುಂಡಯ್ಯ)

|| ಓಂ ಶ್ರೀ ಮಹಾಗಣಪತಯೇ ನಮ: ||

ಛಂದೋಭಿಮಾನಿ ದೇವತೆಗಳಿಗೆ ಮತ್ತು ಋಷಿಗಳು, ಮುನಿಗಳು, ಯಾಜ್ಞಿಕರು ಎಲ್ಲರಿಗೂ ನಮಸ್ಕಾರಗಳು.

# ವಿಶ್ವೇ ದೇವತೆಗಳು

## ಸಾಮಾನ್ಯ ಸ್ತೋತ್ರಗಳು

(ಒಂದು ಮತ್ತು ಹತ್ತನೇ ಮಂಡಲಗಳಿಂದ)

ಇವರು ಮಹಾಪರಾಕ್ರಮಿಗಳು, ಭೂಮಿಪುತ್ರರು, ಗಂಭೀರ ಧ್ವನಿಯವರು, ಭೂಸ್ಥಾನದ ಅಭಿಮಾನಿ ದೇವತೆಗಳು, ತರುಣರು, ಶತ್ರು ಹರರು, ಅನ್ನವೃದ್ಧಿಕಾರಕರು, ಚೈತನ್ಯ ದಾಯಕರು, ದೇವತೆಗಳು ಇಷ್ಟಾರ್ಥಪ್ರದರು, ಪಾಪನಾಶಕರು, ರಕ್ಷಕರು, ಅಭಯದಾತರು, ಯಜ್ಞ ಕಾರ್ಯಗಳಲ್ಲಿ ಇವರೆಲ್ಲರ ಅವಶ್ಯಕತೆ ಇದೆ. ಋತ್ವಿಜರು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಆದಿತ್ಯ, ಮರುತ್‌ಗಳು ಸುಖದಾತರು, ಧನದಾತರು, ಪುತ್ರ, ಪೌತ್ರದಾತರು, ಕರ್ಮಶಕ್ತಿ ನೀಡುವವರು. ಬೃಹಸ್ಪತಿಯು ಸಾಮಗಾನದಿಂದ ತೃಪ್ತರಾಗುತ್ತಾರೆ. ವರುಣನು ಗೋಕ್ಷೀರ ಮಾರ್ಗದಲ್ಲಿ ಯಜ್ಞಕ್ಕೆ ಬರಲು ಯಾಜ್ಞಿಕರು ಆಹ್ವಾನಿಸುತ್ತಾರೆ. ಋಷಿಗಳು ದೇವತೆಗಳನ್ನು ಉಷಕಾಲದಲ್ಲಿ ಯಜ್ಞಕ್ಕೆ ಆಹ್ವಾನಿಸುತ್ತಾರೆ. ಹವಿಸ್ಸು ಅರ್ಪಿಸಿ ಅನುಗ್ರಹಿಸಲು ಪ್ರಾರ್ಥಿಸುತ್ತಾರೆ. ಇವರು ಅದಿತಿ ಪುತ್ರರು. ಸ್ತುತ್ಯರು, ಮೂರು ಲೋಕಗಳಲ್ಲೂ ಉತ್ಪನ್ನರಾದವರು. ಕಣ್ಣಿಮೆಯಿಕ್ಕದೆ ಮಾನವರ ವ್ಯವಹಾರಗಳನ್ನು ಹಗಲೂ ಇರುಳೂ ನೋಡುತ್ತಿರುತ್ತಾರೆ. ಪೃಥ್ವಿಯನ್ನು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಯಜ್ಞ ಕಾಲದಲ್ಲಿ ಪರಸ್ಪರ ಸ್ವರೂಪ ಜ್ಞಾನವುಳ್ಳ ದೇವತೆಗಳು ಭಾಗವಹಿಸುತ್ತಾರೆ. ದೇವತಾ ಅಶ್ವಗಳು ಯಜ್ಞಕ್ಕೆ ಬೇಕಾದ ಧನವನ್ನು ಸ್ವಪ್ರೇರಣೆಯಿಂದಲೇ ಶತ್ರುಗಳಿಂದ ತರುವವರು.

ದೇವತೆಗಳು ತಮ್ಮ ಶಕ್ತಿಯಿಂದ ಆದಿತ್ಯ, ದ್ಯಾವಾ, ಪೃಥ್ವಿಗಳ ನಡುವೆ ತೇಜಸ್ಸು ತುಂಬಿದ್ದಾರೆ. ಮಾಧ್ಯಮಿಕ-ವಾಗ್ದೇವಿಯರು ಆಯುಧಧಾರಿಣಿಯಾದ ಸರಸ್ವತಿಯೇ. ಅಂತರಿಕ್ಷದಲ್ಲಿ ಉದಕಯುಕ್ತರು. ಜ್ಞಾನಯುಕ್ತರು, ಕರ್ಮ ಮಾಡುತ್ತಿರುವವರು, ಸರ್ವಜ್ಞರು, ಪೂಜಾರ್ಹರು, ಯಜ್ಞಕ್ಕೆ ಬರುವವರು, ಮರಣ ಧರ್ಮ ರಹಿತರು, ಹವಿಸ್ಸು ಸೇವಿಸುವವರು. ಅಗ್ನಿಯನ್ನು ಆಹ್ವಾನಿಸುತ್ತಾರೆ ಮತ್ತು ಆಶ್ರಯಿಸಿದ್ದಾರೆ. ಸೂರ್ಯನು ಅನುಗ್ರಹ ಮನಸ್ಸಿನವರು. ಚಂದ್ರನು ರಾತ್ರಿಯ ಪ್ರಭು. ದ್ಯುಲೋಕದ ದೇವತೆ. ಅಶ್ವಿನಿ ದೇವತೆಗಳು ಸ್ತೋತ್ರಗಳನ್ನು ಕೇಳಲಿ. ಸಮಸ್ತ ಜಗತ್ತನ್ನೂ ರಕ್ಷಿಸುವವರು. ಉತ್ತಮ ಮಾರ್ಗದರ್ಶಕರು, ವಸತಿ ದಾಯಕರು.

# ಭರದ್ವಾಜರು

ವೃತ್ರಾದಿ ರಾಕ್ಷಸರ ಸಂಹಾರದ ನಂತರ ದೇವತೆಗಳು ಮರಣರಾಹಿತ್ಯವನ್ನು ಸ್ಥಿರವಾಗಿಸಿಕೊಂಡರು. ಜನತೆಯು ಸ್ತೋತ್ರಾದಿಗಳನ್ನು ಅರ್ಪಿಸುತ್ತಾರೆ. ತೃಪ್ತರಾದ ದೇವತೆಗಳು ವೃಷ್ಟಿ, ಸುಖ, ಸಂಪತ್ತು ಅನುಗ್ರಹಿಸುತ್ತಾರೆ. ಎಲ್ಲಾ ದೇವತೆಗಳು ಓಷಧಿ, ವನಸ್ಪತಿ, ಅನ್ನಗಳಿಂದ ಕೂಡಿದವರು ಮತ್ತು ಧಾನ ಶೀಲರು. ಶಾಂತಿಯುತರು. ಧನ ದಾತೃಗಳು. ಇಷ್ಟಾರ್ಥಪ್ರದರು. ಅಗ್ನಿಯು ಅನ್ನ ತುಂಬಿ ಕೊಡುವವರು. ಸವಿತೃ, ಭಗ, ತ್ವಷ್ಟ, ದ್ಯಾವಾ / ಪೃಥ್ವಿ, ಸಮುದ್ರಗಳು ನಮ್ಮ ರಕ್ಷಕರು. ನಮ್ಮ ಸ್ತೋತ್ರಗಳು ಪ್ರಭಾವಯುತವಾಗಿರುತ್ತವೆ. ದೇವತೆಗಳು ದ್ಯುಲೋಕ ನೇತೃಗಳು. ಯಜ್ಞಾರ್ಹರು ನಿತ್ಯ ತರುಣರು. ಮಹತ್‌ರೂಪಿಗಳು, ಸರ್ವ ವ್ಯಾಪಿಗಳು, ಸಜ್ಜನ ಪಾಲಕರು, ಅಹಿಂಸಕರು. ಇಂದ್ರನನ್ನು ಮುಖಂಡರನ್ನಾಗಿ ಮಾಡಿಕೊಂಡಿದ್ದಾರೆ. ಅದಿತಿ, ಮಿತ್ರಾವರುಣರು, ಆರ್ಯಮ, ಭಗ, ಇವರೆಲ್ಲರು ಯಜ್ಞ ರಕ್ಷಕರು, ಶುದ್ಧಿಕಾರಕರು, ಇಂದ್ರ, ಪೂಷ, ಪೃಥ್ವಿ ದೇವತೆಗಳು ಗಂಧರ್ವರು ಅನ್ನಯುಕ್ತರು. ರಕ್ಷಕರು, ಮಾರ್ಗದರ್ಶಕರು, ಆಶ್ರಯದಾತರು, ವಸತಿದಾಯಕರು. ಅಗ್ನಿಯು ಸಜ್ಜನ ಪಾಲಕ. ಶತ್ರುಗಳನ್ನು ದೂರ ಓಡಿಸುವವನು. ಸುಖದಾತ. ಅಗ್ನಿಗೆ ಋಷಿಗಳು ಸಹಿತ ನಮಸ್ಕರಿಸುತ್ತಾರೆ. ದೇವತೆಗಳು ಪ್ರಜಾಪತಿಯ ಪುತ್ರರು.

ಉತ್ತಮ ಪ್ರಶಂಸೆ, ಆಹ್ವಾನಕ್ಕೆ ಪಾತ್ರರು. ಅನ್ನ ಉತ್ಪತ್ತಿ ಮಾಡುವವರು. ಯಜ್ಞ ರಕ್ಷಕರು. ಪರ್ವತ, ಸಮುದ್ರ, ಓಷಧಿ, ವೃಕ್ಷ, ಅಶ್ವ, ಗೋವುಗಳು, ಶಾಂತಿ ಸ್ಥಾಪಕರು, ಸುಖದಾತರು. ಅನ್ನದಾತರು.

## ಅತ್ರಿ ಋಷಿಗಳು

ವಿಶ್ವೇ ದೇವತೆಗಳು ಮರಣ ಧರ್ಮ ರಹಿತರು. ಯಜಮಾನರುಗಳ ರಕ್ಷಕರು, ಧನದಾತರು, ಋಷಿಗಳು, ದೇವತೆಗಳು ಗೋಚರವಾಗುವ ರೀತಿಯಲ್ಲೇ ನಿರ್ದೇಶಿಸಲ್ಪಡುತ್ತಾರೆ. ಉತ್ತಮ ಕರ್ಮರತರಾಗುವಂತೆ ಮಾಡುತ್ತಾರೆ. ದ್ವೇಷಿಗಳನ್ನು ಹಿಂಸಿಸಿ ನಾಶ ಮಾಡುತ್ತಾರೆ. ಅಶ್ವಿನಿ, ಮಿತ್ರಾವರುಣರು, ಸೋಮ, ಆದಿತ್ಯ, ವಿಷ್ಣು, ಅದಿತಿ, ಪೂಷ, ದ್ಯಾವಾ ಪೃಥ್ವಿಗಳು, ಇತರ ದೇವತೆಗಳು ಪ್ರೀತಿಯಿಂದ ಯಜ್ಞಕ್ಕೆ ಆಗಮಿಸಲಿ. ಮಂಗಳ ಕಲ್ಯಾಣ ಕಾರಕರಾಗಿರಲಿ.

## ವಸಿಷ್ಠರು

ವಿಷ್ಣುವು ಯಾವಾಗಲೂ ನಾವು ಕರ್ಮನಿರತರಾಗಿರುವಂತೆ ಮಾಡಿ ನಮ್ಮನ್ನು ರಕ್ಷಿಸುತ್ತಾನೆ. ಸರಸ್ವತಿ, ಮರುತ್ ದೇವತೆಗಳು ಹವಿಸ್ಸಿನಿಂದ ತೃಪ್ತರಾಗಲಿ. ಉಷೆಯು ಪ್ರಜೆಗಳ ಕ್ಷೇಮ ಕಾರಕಳು. ಇವರು ಯಜಮಾನ ದಂಪತಿಗಳಿಗಾಗಿ ಯಜ್ಞಾಭಿಮುಖಿರಾಗಲಿ. ದ್ಯಾವಾ / ಪೃಥ್ವಿ ಪೂಜಾರ್ಹರು, ರಕ್ಷಕರು, ಸಕಲ ದೇವತೆಗಳು ಯಜ್ಞದಲ್ಲಿ ಕ್ರೀಡಿಸಲಿ. ಯಾಗ ಕಾಲದಲ್ಲಿ ಯಜ್ಞ ಸ್ಥಾನ ಆಕ್ರಮಿಸಲಿ. ಮಿತ್ರಾ - ವರುಣ, ಆರ್ಯಮ, ಅಗ್ನಿ ಇವರು ಸ್ತುತಿತರಾಗಿ ಯಜ್ಞ ನಿರ್ವಹಿಸುತ್ತಾರೆ. ವಾಯುವು ಉದಕ ಸುರಿಸುತ್ತಾನೆ. ರುದ್ರ ಸಂಬಂಧಿಗಳು ಮಹತ್ವಗಳನ್ನು ಒದಗಿಸುತ್ತಾರೆ. ಅಗ್ನಿ, ಸರಸ್ವತಿಯರು ಉತ್ತೇಜಿತರಾಗಿ ಯಜ್ಞಕ್ಕೆ ಬರುತ್ತಾರೆ. ಹವಿಸ್ಸಿನಿಂದ ಕೂಡಿರುವ ಯಜ್ಞಕ್ಕೆ ದೇವತೆಗಳೆಲ್ಲ ಬಂದು ಯಜಮಾನನನ್ನು ವೀರ್ಯಯುತನನ್ನಾಗಿ ಮಾಡುತ್ತಾರೆ. ವಸಿಷ್ಠರು ಧನಾಪೇಕ್ಷಿಗಳಾಗಿ ಅನೇಕ ರೂಪ ಧನ ಲಾಭಕ್ಕಾಗಿ ಅಗ್ನಿಯನ್ನು ಪ್ರಶಂಸಿಸುತ್ತಾರೆ. ಪರ್ಜನ್ಯನನ್ನು ಸ್ತುತಿಸಲು ಹೇಳುತ್ತಾರೆ. ವಸಿಷ್ಠರ ಪತ್ನಿಯು ಯಜಮಾನರ ಜೊತೆ ಸೇವಿಸುತ್ತಾರೆ.

## ಕಾಣ್ವರು

ವರುಣನು ಕ್ಷೇತ್ರಪತಿ. ಪರ್ಜನ್ಯ ಮಳೆ ದೇವತೆಗಳು. ಪೂಷನನು ಸುಖದಾತ. ವಾಯುವು ಗಮನಶೀಲ. ಋಭುಗಳು ಉತ್ತಮ ಹಸ್ತವುಳ್ಳವರು. ಸರಸ್ವತಿ ಕರ್ಮದೊಡಗೂಡಿದವಳು. ಮರುತ್ ಉತ್ತಮ ಸ್ತುತಿಪಾತ್ರರು. ಸವಿತೃವು ಸಂರಕ್ಷಿಸುವ ದೇವತಾತ್ಮ. ಅಪಾಂನಪಾತ್ ಉಪದ್ರವದಿಂದ ರಕ್ಷಿಸುವವನು. ಉಷಸ್ ಪ್ರಭಾವಯುತಳು. ಇವರೆಲ್ಲರೂ ಯಜಮಾನನಿಗೆ ಶಾಂತಿ, ಸುಖಗಳನ್ನು ಅನುಗ್ರಹಿಸಲಿ. ಪರ್ವತ, ಸಮುದ್ರ, ಓಷಧಿ, ವೃಕ್ಷ, ಅಶ್ವ, ಗೋವುಗಳು ಇವರು ಶಾಂತಿ ಸ್ಥಾಪಕರು, ಸುಖದಾತರು, ಮಿತ್ರ, ಆರ್ಯಮ, ವರುಣ ಇವರುಗಳು ಅಪೇಕ್ಷಿತ ಧನವನ್ನು ರಕ್ಷಿಸಿಟ್ಟಿದ್ದಾರೆ. ಸರ್ವಜ್ಞರು ಧನ ದಾತರು. ಈ ಧನವನ್ನು ಯಜಮಾನನು ಪಡೆಯುವಂತಾಗಲಿ. ಅದಿತಿಯು ಧನ ದಾತಳು. ದೇವತೆಗಳು ಅದಿತಿ ಪುತ್ರರು, ಪ್ರಕಾಶ ಮಾನರು. ಶಕ್ತಿಯುತರು, ಶತ್ರು ಹಿಂಸಕರು, ಸಮಸ್ತ ಧನವನ್ನು ಹೊಂದಿರುವವರು. ಸ್ವಾತ್ಮಕವಾದ ಒಂದೇ ತತ್ವವು ಜಗತ್ತಿಗೆ ಸಕಲ ರೂಪಗಳಲ್ಲಿಯೂ ಪರಿಣಮಿತವಾಗಿವೆ. ಇವರು ಒಂದೇ ಬಲದವರು. ಯಜ್ಞಾರ್ಹರು. ಪೂಜ್ಯರು, ಶಕ್ತರು, ರಕ್ಷಣೆ ಒದಗಿಸುವವರು. ಕಾಣ್ವರು ಪುನಃ ಪುನಃ ಸ್ತುತಿಸುತ್ತಾರೆ. ರಕ್ಷಣೆಗೆ ಪ್ರಾರ್ಥಿಸಿ ಯಾಚಿಸುತ್ತಾರೆ.

ಆದಿತ್ಯ, ಮರುತ್‌ಗಳು, ಬೃಹಸ್ಪತಿ, ವರುಣ, ದ್ಯಾವಾಪೃಥ್ವಿ, ಮಾಧ್ಯಮಿಕ, ವಾಗ್ದೇವಿ, ಅಗ್ನಿ, ಸೂರ್ಯ, ಚಂದ್ರ, ಅಶ್ವಿನಿ, ಸವಿತೃ, ಭಗ, ತ್ವಷ್ಟ, ಅದಿತಿ, ಮಿತ್ರಾವರುಣರು, ಆರ್ಯಮಾ, ಇಂದ್ರ, ಪೂಷ, ಸೋಮ, ವಿಷ್ಣು, ಪರ್ವತ, ಸಮುದ್ರ, ಓಷಧಿ, ವೃಕ್ಷ, ಅಶ್ವ, ಗೋವು, ಸರಸ್ವತಿ, ಉಷಾ, ವಾಯು, ಋಭುಗಳು, ಇವರೆಲ್ಲ ವಿಶ್ವೇದೇವತೆಗಳ ಗುಂಪಿನಲ್ಲಿದ್ದಾರೆ.

# ಋಷಿಗಳ ಆಶ್ರಮಗಳಲ್ಲಿ

( 1 ಮತ್ತು 10ನೇ ಮಂಡಲಗಳಲ್ಲಿ ಬಂದ ಸಾಮಾನ್ಯ ವಿಷಯಗಳು)

ಯಜ್ಞ ಮಾಡುವವನು ಸಪತ್ನೀಕರಾಗಿರಬೇಕು.

ಬೃಹಸ್ಪತಿಯು ಪತ್ನಿ ರಹಿತನಾಗಿ ಸಂಚರಿಸುತ್ತಿದ್ದನು. ಅವರು ಯಜ್ಞ ಮಾಡಲು ಅರ್ಪಿಸಿದ ಆಹುತಿಯನ್ನು ದೇವತೆಗಳು ಸ್ವೀಕರಿಸಲಿಲ್ಲ. ಆಗ ಆದಿತ್ಯ, ವರುಣ, ಮರುತ್, ವಾಯು, ಅಗ್ನಿ, ಸೋಮರು, ಬೃಹಸ್ಪತಿಯ ಪಾಪವನ್ನು ವಿವರಿಸಿದರು. ಸಪ್ತ ಋಷಿಗಳಿಂದ ಪ್ರಕಾಶಿತಳಾದ "ಜುಹೂದೇವಿ" ಬೃಹಸ್ಪತಿಯ ಬಳಿಗೆ ಸೇರಿಸಲ್ಪಟ್ಟಳು. ದೇವತೆಗಳು "ಜುಹೂಳನ್ನು" ಪಾಪ ರಹಿತಳನ್ನಾಗಿ ಮಾಡಿದರು. ಅಗ್ನಿಯು ಕೈ ಹಿಡಿದು ತಂದನು. ಬೃಹಸ್ಪತಿಯು ಜುಹೂಳನ್ನು ಸ್ವೀಕರಿಸಿದರು. ನಂತರ ಯಾಗದಲ್ಲಿ ಬೃಹಸ್ಪತಿಯು ಅರ್ಪಿಸಿದ ಆಹುತಿಗಳನ್ನು ಹೋಮಾದಿಗಳನ್ನು ದೇವತೆಗಳು ಸ್ವೀಕರಿಸಿದರು.

ವಿಶ್ವೇ ದೇವತೆಗಳನ್ನು ಯಜ್ಞಕ್ಕೆ ಸಪತ್ನೀಕರಾಗಿ ಬಂದು ಯಜ್ಞ ನೆರವೇರಿಸಲು ಪ್ರಾರ್ಥಿಸುತ್ತಾರೆ. ಪರ್ವತದ ಸೋಮ ಲತಾರಸ, ದೇವತೆಗಳ ಸುಖಕ್ಕಾಗಿ ಸಿದ್ಧಪಡಿಸಿಟ್ಟಿದ್ದಾರೆ. ಆರ್ಯಮನ ಧೇನು ಸಹಾಯಕವಾಗಿದೆ. ಸದಾ ಹವಿಸ್ಸು ಅರ್ಪಿಸಲಾಗುತ್ತಿದೆ. ಇಂದ್ರನು ಹವಿಸ್ಸು ಕೊಟ್ಟಾಗ ಕ್ಷಿಪ್ರವಾಗಿ ಕೆಲಸ ಮಾಡುತ್ತಾನೆ. ಇಂದ್ರನನ್ನು ಆಹ್ವಾನಿಸಿ ಸೋಮಪಾನ ಮಾಡುವಂತೆ ಹಾಗೂ ಅವನ ಕುದುರೆಗೂ ಕೊಡುವಂತ ಪ್ರಾರ್ಥಿಸುತ್ತಾರೆ. ಎಲ್ಲಾ ದೇವತೆಗಳನ್ನು ಸ್ತೋತ್ರ ಪೂರ್ವಕವಾಗಿ ಯಜ್ಞಕ್ಕೆ, ಸೋಮಪಾನಕ್ಕೆ ಆಹ್ವಾನಿಸುತ್ತಾರೆ. ವಿಶೇಷವಾಗಿ ಐಶ್ವರ್ಯ, ಅನ್ನ, ಅಶ್ವ ರಥಯುಕ್ತ ಎಲ್ಲರನ್ನು ಸಪತ್ನೀಕರಾಗಿ ಆಹ್ವಾನಿಸುತ್ತಾರೆ.

ವಿಶ್ವೇದೇವತೆಗಳು ಸಕಲ ಧನ ಸ್ವಾಮಿಗಳು. ಸ್ವರ್ಗದ ಹಾದಿಯಲ್ಲಿ ಶತ್ರುಗಳನ್ನು ನಾಶ ಮಾಡುವವರು. ಮಳೆ ತರುವವರು, ಹನ್ನೊಂದರ ಸಂಖ್ಯೆಯಲ್ಲಿ ಭೂಲೋಕ, ಅಂತರಿಕ್ಷ, ದ್ಯುಲೋಕದಲ್ಲಿ ಪ್ರಸಿದ್ಧ ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಹವಿಸ್ಸು, ಸೋಮ ಸ್ವೀಕರಿಸಲು ಯಾಚಿಸುತ್ತಾರೆ. ಯಾಜ್ಞಕರು, ಯಾಜಮಾನರು ದೇವತೆಗಳೆಲ್ಲರನ್ನು ತೃಪ್ತಿ ಪಡಿಸಲು ಆತುರರಾಗಿದ್ದಾರೆ. ಧ್ಯಾನದಿಂದ, ಸ್ತೋತ್ರಗಳಿಂದ, ಪೂಜೆಗಳಿಂದ ಯಜ್ಞದಲ್ಲಿ ಹವಿಸ್ಸು ಅರ್ಪಿಸುವುದರಿಂದ ದೇವತೆಗಳನ್ನು ಒಲಿಸಿಕೊಳ್ಳುತ್ತಾರೆ. ಸೋಮಯಾಗ ಮಾಡುವ ಯಾಜಮಾನನು ಯಜ್ಞ ಕಾಲದಲ್ಲಿ ತಾನೇ ಸ್ವತ: ಮಥಿಸಿ ಅಗ್ನಿಯನ್ನು ಪಡೆಯುತ್ತಾನೆ.

ಧನಲಾಭ ಕೊಡುವ ಇಂದ್ರ, ಅಗ್ನಿ, ಮಿತ್ರ ವರುಣರು, ಭಗ, ಇವರುಗಳನ್ನು ಯಜ್ಞ ಸ್ಥಾನದಲ್ಲಿ ಕೂಡಿಸುತ್ತಾರೆ. ಬೃಹಸ್ಪತಿ, ಪೂಷ, ಅಶ್ವಿನಿ ಇವರು ಶ್ರೇಯಸ್ಸು ಕೊಡುವವರು. ದೇವತೆಗಳಿಗೆಲ್ಲ ದರ್ಭಾಸನ ಸಿದ್ಧವಾಗಿರುತ್ತದೆ. ದೇವತೆಗಳು ಅದಿತಿ ಪುತ್ರರು. ಅವರುಗಳನ್ನು ಹವಿಸ್ಸಿನಿಂದ ತೃಪ್ತಿ ಪಡಿಸುತ್ತಾರೆ. ಉತ್ತಮ ವೈದಿಕ ಮಾರ್ಗ ಒದಗಿಸಲು ಪ್ರಾರ್ಥಿಸುತ್ತಾರೆ. ಜ್ಞಾನಿಗಳಾದ ಯಾಜ್ಞಿಕರು ದೇವತೆಗಳನ್ನು ಉಪಚರಿಸುತ್ತಾರೆ. ಸಕಲ ದೇವತೆಗಳನ್ನು ಸಪತ್ನೀಕರನ್ನಾಗಿ ಪೂಜಿಸುತ್ತಾರೆ. ಬಲವಾದ ಎತ್ತುಗಳನ್ನು ಕಟ್ಟಿರುವ ಗಾಡಿಯಲ್ಲಿ ಸೋಮ, ಹವಿಸ್ಸು, ಯಜ್ಞ ವೇದಿಕೆಗೆ ತಂದು ರಸ ಹಿಂಡಿ ಸ್ರುಕ್ ಪಾತ್ರೆಯಲ್ಲಿ ಸುರಿಯುತ್ತಾರೆ. ದನದ ಕೊಟ್ಟಿಗೆ ಇವರ ಕ್ಷೀರಪಾನ ಪ್ರದೇಶ. ಭಗವಂತನನ್ನು, ಪ್ರಜಾಪತಿಯನ್ನು ನಾನಾ ರೂಪಗಳಿಂದ ವರ್ಣಿಸುತ್ತಾರೆ. ದೇವತೆಗಳೆಲ್ಲರೂ ಇವರ ಪ್ರತಿರೂಪವೇ.

## ಭರಧ್ವಾಜರು

ಅಗ್ನಿಯು ಪ್ರಜ್ವಲಿಸಿದಾಗ ಸ್ತೋತ್ರಗಳಿಂದ, ನಮಸ್ಕಾರಗಳಿಂದ ಪೂಜಿಸುತ್ತಾರೆ. ವಿಶ್ವೇದೇವತೆಗಳು ದರ್ಭಾಸೀನರಾಗಿರುತ್ತಾರೆ.

## ವಿಶ್ವಾಮಿತ್ರರು

ಯಜಮಾನರು ಸ್ತುತಿಗಳನ್ನು ಅರ್ಪಿಸಲಿ. ದೇವತೆಗಳು ಸ್ತೋತ್ರಗಳನ್ನು ಹಾಲುಕೊಡುವ ಧೇನುವೆಂದು ತಿಳಿಯಲಿ. ಸೋಮಪಾನಕ್ಕೆ ಬರಲಿ. ಯಾಜ್ಞಿಕರು ಯಜಮಾನರುಗಳನ್ನು ರಕ್ಷಿಸಲಿ. ಸವನತ್ರಯಗಳಲ್ಲೂ ದೇವತೆಗಳು ಬಂದು ಕುಳಿತು ಪೂಜೆ ಸ್ವೀಕರಿಸಿ ಹವಿಸ್ಸು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಮರುತ್‌ಗಳನ್ನು ಅಶ್ವಿನಿ ದೇವತೆಗಳನ್ನು ಸ್ತುತಿಸಿ ಪೂಜಿಸುತ್ತಾರೆ. ನಮ್ಮನ್ನು ಶೋಭಾಯಮಾನರನ್ನಾಗಿ ಮಾಡಿ ಎಂದು ಕೇಳಿಕೊಳ್ಳುತ್ತಾರೆ.

## ಅತ್ರಿ ಋಷಿಗಳು

ಯಜ್ಞ ಕರ್ಮ ಎಲ್ಲವನ್ನು ತಿಳಿದ ಯಾಜಮಾನನೇ ಹವಿಸ್ಸು ಅರ್ಪಿಸುತ್ತಾನೆ. ದೇವತೆಗಳು ಪತ್ನಿಯರೊಂದಿಗೆ ಬರಲು ಆಹ್ವಾನಿಸುತ್ತಾರೆ. ನಮ್ಮ ಸ್ತುತಿ ಕೇಳಲಿ. ಹವಿಸ್ಸು ಸ್ವೀಕರಿಸಲಿ. ಯಜ್ಞ ಅಭಿಮುಖರಾಗಲಿ. ಆದಿತ್ಯ, ಅಶ್ವಿನಿ ಹಿತಕರರಾಗಿರಲಿ. ಧಾನ್ಯಯುಕ್ತಳಾದ ದೇವಿಯು ಯಾಜಮಾನನಿಗೆ ಎದುರಾಗಿ ಬರಲಿ. ಯಜಮಾನರು ದೇವತೆಗಳ ಪ್ರೀತ್ಯರ್ಥವಾಗಿ ಸ್ತುತಿಸಲಿ, ಪೂಜಿಸಲಿ, ಯಜ್ಞ ಮಾಡಲಿ. ದೇವತೆಗಳ ಅನುಗ್ರಹ ಯಾಜ್ಞಿಕರ ಮೇಲಿರಲಿ. ಪೃಥ್ವಿ ದೇವತೆ, ಅಂತರಿಕ್ಷ ದೇವತೆ, ವನಸ್ಪತಿ, ಓಷಧಿ, ಇಂದ್ರ, ಪರ್ಜನ್ಯ, ಸವಿತೃ ದೇವತೆಗಳನ್ನು ಪ್ರಾರ್ಥಿಸಿ ಸಹಾಯಕ್ಕೆ ಬೇಡುತ್ತಾರೆ. ಅಧ್ವರ್ಯುಗಳು ಸ್ವಹಸ್ತದಿಂದ ಸೋಮನನ್ನು ಹಿಂಡಿ ಎಲ್ಲರಿಗಿಂತ ಮೊದಲು ವಾಯುವಿಗೆ ಹರ್ಷಕ್ಕಾಗಿ ಸೋಮವನ್ನು ಅರ್ಪಿಸುತ್ತಾರೆ.

ಸೋಮವು ರಮಣೀಯ, ಮಧುರ. ಜಾತವೇದೋ ಅಗ್ನಿಯು ಮರುತ್‌ಗಳನ್ನು ಇಂದ್ರನನ್ನು ಕರೆತರಲಿ. ಅವರು ಯಾಜಮಾನರಿಗೆ ಅಭಿಮುಖರಾಗಲಿ. ಅಶ್ವಿನಿ ದೇವತೆಗಳು ಯಜ್ಞ ಮುಖ್ಯರು. ಸುಖದಾತರು. ವಿಶೇಷವಾಗಿ ಸ್ತುತಿಸಲ್ಪಡುತ್ತಾರೆ. ದೇವತೆಗಳನ್ನು ಸ್ತುತಿ, ಪೂಜೆ, ಹವಿಸ್ಸುಗಳಿಂದ ತೃಪ್ತಿಗೊಳಿಸಿ ಇಹಪರಗಳೆರಡರಲ್ಲೂ ಇಷ್ಟಾರ್ಥ ಪಡೆಯುತ್ತಾರೆ. ಅತ್ರಿ ಋಷಿಗಳ ಮಾರ್ಗದರ್ಶನದಲ್ಲಿ ಕಾರ್ಯಗಳು ನಡೆಯುತ್ತದೆ. ಯಾಗ ನಡೆಯುತ್ತದೆ. ದೇವತೆಗಳು ಬಂದು ದರ್ಭಾಸೀನರಾಗಿರುತ್ತಾರೆ. ಎರಡು ಹಲಗೆಗಳ ನಡುವೆ ಹಿಂಡಲ್ಪಟ್ಟ, ಶೇಖರಿಸಲ್ಪಟ್ಟ ಹಾಲು ಮೊಸರು ಮಿಶ್ರಿತ ಸೋಮವು ಇಂದ್ರ, ವಾಯುಗಳಿಗೆ ಅರ್ಪಿತವಾಗುತ್ತದೆ. ಅಗ್ನಿ ಜ್ವಾಲೆಯ ಮೂಲಕ ದೇವತೆಗಳಿಗೆ ಸೋಮವನ್ನು ಅರ್ಪಿಸಲಾಗುತ್ತದೆ. ಯಜ್ಞ ಹೋತೃವಾದ ಋಷಿಯು ದೇವತೆಗಳನ್ನು ಸಮೀಪಿಸಿ ಅಪೇಕ್ಷೆಗಳನ್ನು ಪೂರೈಸಿಕೊಳ್ಳುತ್ತಾನೆ.

## ವಸಿಷ್ಠರು

ಕರ್ಮನಿರತರಾಗಿ ಯಜ್ಞಸ್ಥಾನದಲ್ಲಿ ಹವಿಸ್ಸು ಹೊಂದಿರುವ ಯಜಮಾನರು ಎಲ್ಲಾ ದೇವತೆಗಳನ್ನು ಪ್ರಾರ್ಥಿಸಿ ಆಹ್ವಾನಿಸುತ್ತಾರೆ. ಮಿತ್ರಾ ವರುಣರಿಗೆ ನೂತನ ಸ್ತುತಿಗಳಿಂದ ಸ್ತುತಿಸುತ್ತಾರೆ. ಯಜ್ಞಕ್ಕೆ ಬರಬೇಕಾದ ದೇವತೆಗಳನ್ನು ಕರೆತರುವಂತೆ ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ದೇವತೆಗಳಿಗೆ ದರ್ಭಾಸನ ಹಾಕಿದ್ದಾರೆ. ಸ್ತುತಿ ಕರ್ತರು ದೇವತೆಗಳನ್ನು ಸ್ತುತಿಸಿರುತ್ತಾರೆ. ಹವಿರ್ಯುಕ್ತ ಯಜ್ಞವು ನಡೆಯುತ್ತಿದೆ. ದ್ಯಾವಾ, ಪೃಥ್ವಿ ಅದಿತಿ, ಅಶ್ವಿನಿ, ಇಂದ್ರ, ಮಿತ್ರಾ ವರುಣರು, ರಾತ್ರಿ, ಹಗಲಿನ ದೇವತೆಗಳು. ಎಲ್ಲರನ್ನು ನಮಸ್ಕಾರ ಪೂರ್ವಕವಾಗಿ ಆಹ್ವಾನಿಸುತ್ತಾರೆ. ಅತಿಶಯವಾಗಿ ಪೂಜಿಸುತ್ತಾರೆ. ದೇವತೆಗಳು ಒಂದೇ ಮನಸ್ಸಿನಿಂದ ಯಜಮಾನನನ್ನು ಬಂದು ಸೇರಲಿ. ಉನ್ನತ ಯಜ್ಞ ವೇದಿಕೆಯಲ್ಲಿ ತಾಯಿಯ ತೊಡೆಯ ಮೇಲೆ ಕೂಡುವ ಶಿಶುವಿನಂತೆ ದರ್ಭಾಸನದಲ್ಲಿ ಕೂಡಲಿ. ಋತ್ವಿಕರು ಏಕ ಮನಸ್ಕರಾಗಿ ಸ್ರುಕ್ ಪಾತ್ರೆಯನ್ನು ಎತ್ತಿ ಹಿಡಿಯಲಿ. ಪೂಜಾ ಯೋಗ್ಯ ಜ್ವಾಲೆಗಳಲ್ಲಿ ಸಕಲ ಹವಿಸ್ಸನ್ನು ಜುಹೂ ಪಾತ್ರೆಯಲ್ಲಿ ಸುರಿಯಲಿ. ಅಗ್ನಿಯು ತೇಜಸ್ಸು ಮೇಲ್ಮುಖವಾಗಿ ಎದ್ದು ನಿಲ್ಲಲಿ. ಯಜ್ಞವು ಶೀಘ್ರವಾಗಿ ದೇವತೆಗಳನ್ನು ತಲುಪಲಿ.

## ಕಣ್ವರು

ವಿಷ್ಣುವು ಯಜಮಾನನು ಕರ್ಮ ಆರಂಭಿಸಿದ್ದನ್ನು ಪ್ರಶಂಸಿಸಿದ್ದನ್ನು ಕೇಳಲಿ. ಮಿತ್ರನು ಗೋಯುಕ್ತ ಅನ್ನಕ್ಕೆ ದೆಯ. ಋಷಿಗಳು ಹಗಲೂ ರಾತ್ರಿ, ಈ ದೇವತೆಗಳನ್ನು ಪ್ರಶಂಶಿಸುತಾರೆ, ಪೂಜಿಸುತಾರೆ, ಆರಾಧಿಸುತಾರೆ.

## ಕಣ್ವರು

ದೇವತೆಗಳು ಯಜಮಾನನ ಜೊತೆಗೆ ಇರಲಿ. ದೇವತೆಗಳು ಹಗಲೂ ರಾತ್ರಿ ಯಜಮಾನನನ್ನು ರಕ್ಷಿಸಲಿ. ದರ್ಭಾಸನದ ಮೇಲೆ 3 3 ದೇವತೆಗಳು ಕುಳಿತುಕೊಳ್ಳಲಿ. ಮರುತ್, ಬ್ರಹ್ಮಣಸ್ಪತಿ, ಇಂದ್ರ, ಪೂಷ, ವಿಷ್ಣು ಅಶ್ವಿನಿ, ವರುಣ, ಅಗ್ನಿ, ಆದಿತ್ಯಾ ಇವರುಗಳನ್ನು ಸ್ತುತಿಸುತ್ತಾರೆ. ಸಮಾನ ಪ್ರಜ್ಞೆಯುಳ್ಳ ಋತ್ವಿಜರು ಅನೇಕ ಪ್ರಕಾರಗಳಲ್ಲಿ ಪರಮಾತ್ಮ ರೂಪಿ ದೇವತೆಗಳನ್ನು ಸ್ತುತಿಸುತ್ತಾ ಸೋಮಪಾನಕ್ಕೆ ಆಹ್ವಾನಿಸುತ್ತಾರೆ. ಯಾಜ್ಞಿಕರು ವೇದಾಧ್ಯಯನ ಸಂಪನ್ನರಾಗಿರುತ್ತಾರೆ. ಕರ್ಮದಲ್ಲಿ ಆಸಕ್ತರಾದ ಉತ್ತಮ ಋತ್ವಿಜರು ಇರುತ್ತಾರೆ. ಯಜಮಾನನು ಯಜ್ಞ ವಿಚಾರಗಳಲ್ಲಿ ಜ್ಞಾನಿಯಾಗಿರುತ್ತಾನೆ. ವಿಶ್ವೇ ದೇವತೆಗಳು ಯಜ್ಞಾಭಿಮುಖ ಬರಲಿ. ಸ್ತುತಿ, ಪೂಜೆ ಸ್ವೀಕರಿಸಲಿ. ಹವಿಸ್ಸು ಸ್ವೀಕರಿಸಲಿ. ಸೋಮದಿಂದ ತೃಪ್ತರಾಗಲಿ. ವಿಶ್ವೇ ದೇವತೆಗಳು ಅನ್ನ, ಧನ ಕೊಡಲಿ. ಪಾಪ ಪರಿಹರಿಸಲಿ. ರಕ್ಷಣೆ ನೀಡಲಿ. ದಾನಯುಕ್ತರು ಉಪದ್ರವ ತಡೆಗಟ್ಟುವವರು ನಮ್ಮ ಸ್ತುತಿ ಕೇಳಿ ನಮ್ಮನ್ನು ರಕ್ಷಿಸಲಿ. ಪರ್ವತಗಳು ದ್ಯುಲೋಕ ದೇವಿಯರು ಮೂರು ಲೋಕಗಳು ಯಜಮಾನನಿಗೆ ಅಪೇಕ್ಷಿತ ಧನವನ್ನು ಕೊಡಲಿ. ಇಂದ್ರಾದಿಗಳು ದುಷ್ಟರನ್ನು ದೂರವೇ ತಡೆಗಟ್ಟಿ ಯಜಮಾನನ ಇಷ್ಟಾರ್ಥಗಳನ್ನು ಅನುಗ್ರಹಿಸಲಿ. ಅನ್ನ ಅಪಹರಿಸುವವರನ್ನು ದೂರ ಓಡಿಸಿ ದಹಿಸಲಿ.

## ವಿಶೇಷ ವಿಚಾರಗಳು

ದೇವತೆಗಳಿಗೆ ಸ್ತೋತ್ರಮಾಡಿ ಪೂಜಿಸಿ ಹವಿಸ್ಸು ಅರ್ಪಿಸಿ ಸೋಮ ಪಾನಾನಂತರ ಆ ಕರ್ಮಗಳ ಬಲದ ಮೇಲೆಯೇ ಬೇಕು ಬೇಕಾದದ್ದನ್ನು ಬೇಡಬೇಕು. ದೇವತೆಗಳು, ಮಾನವರು ಸೇರಿ ಅಗ್ನಿಯನ್ನು ಯಜ್ಞ ನಿರ್ವಾಹಕನನ್ನಾಗಿ ಮಾಡಿದ್ದಾರೆ. ಪ್ರತಿ ಯಜ್ಞದಲ್ಲೂ ಪ್ರತಿ ದೇವತೆಯನ್ನು ಪೂಜಿಸಿ ತೃಪ್ತಿ ಪಡಿಸಬೇಕು. ಋತ್ವಿಜರೆಲ್ಲ [illegible] [illegible] ಒಂದೇ ಮನಸ್ಸಿನಿಂದ ಉತ್ಕೃಷ್ಟ ಕರ್ತವ್ಯನೆಂದು ಅರಿತು ನಿಯಮಿತ ಕರ್ಮಗಳನ್ನು ಮಾಡುತ್ತಿರಬೇಕೆಂದು ವಸಿಷ್ಠ ಋಷಿಗಳು ಎಚ್ಚರಿಸುತ್ತಾರೆ. ವನದ ಕೊಟ್ಟಿಗೆಯು ಯಜ್ಞ ಗ್ರಹದ ಭಾಗವೇ. ತೃಪ್ತಿಗೊಂಡ ಗೋವುಗಳು ನೀರು ಕುಡಿದು ಕ್ಷೀರ ಒದಗಿಸುತ್ತವೆ. ದ್ರೋಣ ಕಲಶವನ್ನು ಪೂರ್ಣವಾಗಿ ಸೋಮದಿಂದ ತುಂಬುವ ಯಜಮಾನನನ್ನು ಇಂದ್ರನು ಕಲ್ಯಾಣಗಳಿಂದ ರಕ್ಷಣೆಗಳಿಂದ ಅನುಗ್ರಹಿಸುತ್ತಾನೆ.

ಯಜ್ಞ ಮಾಡಲು ಯಜಮಾನ ಅವನ ಪತ್ನಿ ಇಬ್ಬರೂ ಅವಶ್ಯಕವಾಗಿ ಇರಲೇ ಬೇಕು. ಪುರಾತನ ಪಿತೃ ಪಿತಾಮಹರು ಇಂದ್ರನನ್ನು ಸ್ತುತಿಸಿ ಇಷ್ಟಾರ್ಥ ಪಡೆದರು. ಯಾಜ್ಞಿಕರು ಆಯಾಯ ದೇವತೆಗಳಿಗೆ ಅನುಗುಣವಾಗಿ ಯಾಗ ಮಾಡುವರು. ಸೂರ್ಯ ಚಂದ್ರರು ತಮ್ಮ ಮಾರ್ಗವನ್ನು ಶಾಶ್ವತವಾಗಿ ಅನುಸರಿಸುವಂತೆ ಯಜ್ಞ ಯಜಮಾನರು ಯಜ್ಞ ನಿರ್ವಹಣಾ ಕರ್ಮವನ್ನು ಲೋಪವಿಲ್ಲದೆ ನಿರ್ವಹಿಸಬೇಕು.

ಉಪಕಾರಕ್ಕೆ ಪ್ರತ್ಯುಪಕಾರ ಮಾಡುವವರಾಗಿ ನಮ್ಮ ಬಂಧುತ್ವ ಚೆನ್ನಾಗಿ ಅರಿತ ಬಂಧುಗಳೊಡನೆ ನಾವು ಸೇರಬೇಕು. ದೇವತೆಗಳನ್ನು ಸ್ತುತಿಸುವುದರಿಂದ ಅವರು ಮಾನವರ ಪಾಪಗಳನ್ನು ನಾಶ ಮಾಡುತ್ತಾರೆ. ವಸಿಷ್ಠರು ಇಂದ್ರನನ್ನು ದ್ಯುಲೋಕದಲ್ಲಿ ನಿಲ್ಲದೆ ಯಜ್ಞಕ್ಕೆ ಬರುವಂತೆ ಮಾಡುತ್ತಿದ್ದರು. ಮೇಧಾವಿ ಸ್ತುತಿಕರ್ತರು ಅನುಗ್ರಹಾಪೇಕ್ಷಿಗಳಿಂದ ದೇವತೆಗಳನ್ನು ಹವಿಸ್ಸು ಸ್ತೋತ್ರಗಳಿಂದ ತೃಪ್ತಿ ಪಡಿಸುತ್ತಾರೆ. ಋತ್ವಿಜರು ಯಜಮಾನರ ಪರವಾಗಿ ಯಜ್ಞ ಕರ್ಮಗಳನ್ನು ಶ್ರದ್ಧೆಯಿಂದ ನಿರ್ವಹಿಸುತ್ತಾರೆ. ಸಿದ್ಧಿ ಪಡೆಯುವುದೆಂದರೆ ಉತ್ತಮ ಮಾರ್ಗ ತಿಳಿದವರಿಂದ ಮಾರ್ಗದರ್ಶನ ಪಡೆದು ಅದರಂತೆ ನಡೆದು ಗುರಿ ಮುಟ್ಟುವುದು. ದೇವತಾ ಸಂಘವನ್ನು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಯಜ್ಞವು ಲೋಕದ ಭಾರವನ್ನು ಹೊರುತ್ತದೆ.

ಹೃದಯದಲ್ಲೇ ಪರಮಾತ್ಮನಿದ್ದಾನೆ. ಮನಸ್ಸಿನಿಂದ ಅವನನ್ನು ಕಾಣಬಹುದು.

ಆದಿತ್ಯನು ದ್ಯುಲೋಕದ ಉನ್ನತ ಸ್ಥಾನದಲ್ಲಿ ಇರುವವನು. ಅಗ್ನ್ಯಾತ್ಮಕ, ಪಿತೃರೂಪಿ. ಆದಿತ್ಯನ ಕರ್ಮಗಳು ಮಿತ್ರಾವರ್ಣರ ಕರ್ಮಗಳೇ. ರಶ್ಮಿಗಳು ಕರ್ತವ್ಯವಾಗಿ ಉದಕವನ್ನು ಸುರಿಯುವಂತೆ ಮಾಡಿ ಮತ್ತೆ ಅದೇ ಮಾರ್ಗದಲ್ಲಿ ಹೀರುತ್ತದೆ.

## ಋಷಿಗಳು, ಯಾಜಮಾನರು, ಯಾಜ್ಞಿಕರು ಆ ಕಾಲದಲ್ಲಿ ತಮಗೆ ಬೇಕಾಗಿದ್ದುದನ್ನು ಈ ಕೆಳಕಂಡಂತೆ ದೇವತೆಗಳಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

(ಸಾಮಾನ್ಯವಾದುವು 1 ಮತ್ತು 10ನೆಯ ಮಂಡಲಗಳಲ್ಲಿ ಅನೇಕ ಋಷಿಗಳಿಂದ)

ಭೂಲೋಕದ, ಅಂತರಿಕ್ಷದ, ದ್ಯುಲೋಕದ ಅನ್ನ ಮತ್ತು ಐಶ್ವರ್ಯಗಳಿಗಾಗಿ ಪ್ರಾರ್ಥಿಸುತ್ತಾರೆ. ದೇವತೆಗಳ ಸ್ನೇಹ ಬೆಳೆಸಿಕೊಳ್ಳಲು ಹಂಬಲಿಸುತ್ತಾರೆ. ಪೂರ್ಣ ಆಯುಸ್ಸಿಗಾಗಿ, ಧನ ಧಾನ್ಯಗಳಿಗಾಗಿ ಮಂಗಳಕರವಾದುದನ್ನು ನೋಡುವ, ಕೇಳುವ ದೃಢಕಾಯ ಶರೀರದಿಂದಿರಲು ಪ್ರಾರ್ಥಿಸುತ್ತಾರೆ. ವಿಷ್ಣು, ಪೂಷ, ಮರುತ್‌ಗಳು, ನಷ್ಟ ಧನ ಪುನ: ಲಭಿಸುವಂತೆ ಅನುಗ್ರಹಿಸಲು ಬೇಡುತ್ತಾರೆ. ರೋಗ ನಾಶಕ್ಕಾಗಿ, ಭಯ ನಿವಾರಣೆಗಾಗಿ, ಅಧಿಕ ಶಕ್ತಿಗಾಗಿ ಪ್ರಾರ್ಥಿಸುತ್ತಾರೆ. ಯಾಜ್ಞಿಕರಿಗೆ ಸಂತೋಷ, ಅಶ್ವ, ರಥ, ಐಶ್ವರ್ಯ, ಆಹಾರ, ಗೋವು, ಪುತ್ರ - ಪೌತ್ರರು, ಸಂಪತ್ತುಗಳಿಗಾಗಿ ಬೇಡುತ್ತಾರೆ. ದಾರಿದ್ರ್ಯದಿಂದ ಅಪಮಾನಗಳಿಂದ ರಕ್ಷಿಸಲು ಮತ್ತು ಈ ಹಿಂದೆ ಹಿಂದಿನವರು ದೇವತ್ವ ಪಡೆದು ಸ್ವರ್ಗವನ್ನು ಸೇರಿದಂತೆ ನಾವು ಸ್ವರ್ಗ ಸುಖ ಅನುಭವಿಸುವಂತಾಗಲಿ. ನಾವು ಸ್ವರ್ಗಾಭಿಮುಖಿರಾಗುವಂತೆ, ಜ್ಞಾನಕ್ಕಾಗಿ, ಧನಕ್ಕಾಗಿ, ವೀರಪುತ್ರರಿಗಾಗಿ, ರಕ್ಷಣೆಗಾಗಿ ಬೇಡುತ್ತಾರೆ. ನಮ್ಮ ಸ್ತೋತ್ರಗಳು ಇಂದ್ರನನ್ನು ಸೇರಲಿ.

ಅವನು ನಮ್ಮನ್ನು ಪಾಪ ರಹಿತನನ್ನಾಗಿ ಮಾಡಲಿ. ಪೂಜೆ ಸ್ವೀಕರಿಸಲು ದೇವತೆಗಳು ಬರಲಿ. ಗೋ ರೂಪದ ಧನವನ್ನು ಬೇಡುತ್ತಾರೆ. ದೇವತೆಗಳು, ಗಂಧರ್ವರು ಅವರ ಅನುಚರರು ನಮಗೆ ರಕ್ಷಣೆ ನೀಡಲಿ. ಗೋ ಕ್ಷೀರ ಅನ್ನಕ್ಕಾಗಿ ಬೇಡುತ್ತಾರೆ. ಯಜ್ಞ ಕಾರ್ಯಗಳನ್ನು ನಿರ್ವಿಘ್ನವಾಗಿ ನಡೆಸಿಕೊಡಲಿ. ಅವರ ಇಷ್ಟಾರ್ಥಗಳನ್ನು ನೀಡಲಿ. ಇಂದ್ರನು ಯಾಜ್ಞಿಕರಿಗೆ ಯಜ್ಞ ಫಲ ನೀಡಲಿ. ಹಿಂಸಿಸುವುದು ಬೇಡ. ಅಷ್ಟ ವಸುಗಳು ಏಕಾದಶ ರುದ್ರರು, ದ್ವಾದಶ ಆದಿತ್ಯರು ಯಾಜ್ಞಿಕರನ್ನು ರಕ್ಷಿಸಲಿ. ಯಜ್ಞ, ಯುದ್ಧ ಎರಡರಲ್ಲೂ ನಮಗೆ ಸಹಾಯಕರಾಗಿರಲಿ. ವಾಯು ದೇವರು ಬಲ ಒದಗಿಸಲಿ ಮತ್ತು ಪಾಪವನ್ನು ನಾಶ ಮಾಡಲಿ. ಓಷಧಿಗಳನ್ನು ಬಳಿಗೆ ತರಲಿ. ಸರಸ್ವತಿ, ಆರ್ಯಮ, ಭಗ, ಬೃಹಸ್ಪತಿಯರು ಸಮಸ್ತ ಧನವನ್ನು ನಮಗೆ ಕರುಣಿಸಲಿ. ಅಗ್ನಿಯು ಯಾಜ್ಞಿಕರಿಗೆ ಧನ ಸಹಾಯ ಮಾಡುವವರಿಗೆ ಸಹಾಯ ಮಾಡುವಂತೆ ಪ್ರೇರೇಪಿಸಲಿ.

ಹವಿಸ್ಸನ್ನು ಸ್ವೀಕರಿಸಲು ದೇವತೆಗಳು ಬರಲಿ, ಯಜಮಾನನಿಗೂ, ಪಶುಗಳಿಗೂ ಸುಖವಾಗಿ ಇರುವಂತೆ ಅನುಗ್ರಹಿಸಲಿ. ನಾವು ಮನುವಿನ ಮಾರ್ಗದರ್ಶನದಂತೆಯೇ ನಡೆಯುವಂತಾಗಲಿ. ಆಳವಾದ ನೀರಿನಲ್ಲಿ ನಾವಿಕನು ದೋಣಿಯಲ್ಲಿ ನಮ್ಮನ್ನು ದಾಟಿಸುವಂತೆ, ದುಷ್ಕರ್ಮಿಗಳು ಮತ್ತು ಶತ್ರುಗಳಿಂದ ಯಜಮಾನರುಗಳನ್ನು ದೇವತೆಗಳು ರಕ್ಷಿಸಲಿ ಅಥವಾ ದಾಟಿಸಲಿ. ಆರ್ಯಮ ಮಿತ್ರಾವರುಣರು ಧನ ದಾತರು. ಅವರು ಯಜಮಾನರಿಗೆ ಸಹಾಯಕರಾಗಿರಬೇಕೆಂದು ಪ್ರಾರ್ಥಿಸುತ್ತಾರೆ. ವಾಯುವು ಮನೆಗೆ ಬರಲಿ. ಸರಸ್ವತಿ ತಮ್ಮ ಪುತ್ರರನ್ನು ರಕ್ಷಿಸಲಿ. ಬೃಹಸ್ಪತಿಯು ಹಿಂಸಕರನ್ನು ಹೊಡೆದೋಡಿಸಲಿ. ಆದಿತ್ಯನು ಪಾಪ ಪರಿಹರಿಸಲಿ ಸನ್ಮಾರ್ಗ ತೋರಿಸಲಿ. ಪ್ರವಾಸದಲ್ಲಿರುವಾಗ ರಕ್ಷಿಸಲಿ. ಇಂದು ಮುಂದೆಯೂ ಸುಖವಾಗಿ ಇಟ್ಟಿರಲಿ. ಸಂತತಿ ಬೆಳೆಸುವ ಸ್ತ್ರೀಯರುಗಳ ಗರ್ಭ ರಕ್ಷಣೆ ಮಾಡುವಂತೆ ಕೇಳಿಕೊಳ್ಳುತ್ತಾರೆ. ಪಾಪ ಸಂಬಂಧದ ಅಥವಾ ಅನ್ಯಾಯದ ಧನ ಬೇಡ. ಅವ್ಯಕ್ತ ಅಗ್ನಿಯು ಯಜಮಾನನ ಸ್ತುತಿ, ಕರ್ಮಗಳು, ಶ್ರದ್ಧೆ, ಮನಸ್ಸಿನ ಅಭಿಲಾಷೆಗಳನ್ನು ಆಯಾಯ ದೇವತೆಗಳಿಗೆ ತಲುಪಿಸಲಿ. ಅದಿತಿ, ಇಂದ್ರ, ಮಿತ್ರಾ ವರುಣರು ಇವರುಗಳು ಸಮಸ್ತ ಭೂತ ಜಾತಗಳನ್ನು ಸುಖಿ, ಸಂತೋಷ ಗೊಳಿಸಲಿ.

## ಭರದ್ವಾಜರು

ಸರಸ್ವತಿ ದೇವಿಯರು ಕರ್ಮ ಮಾಡುವ ಬುದ್ಧಿ ಅನುಗ್ರಹಿಸಲಿ. ಗೃಹ ಸುಖ ನೀಡಲಿ. ಧೇನು ಕೊಡಲಿ. ಪಶು ಮತ್ತು ವಂಶಾಭಿವೃದ್ಧಿಗಾಗಿ ಬೇಡುತ್ತಾರೆ. ಪಶುಗಳಿಗಾಗಿ ಸಕಲ ಪ್ರದೇಶದಲ್ಲೂ ವೃಷ್ಟಿ ಸುರಿಸಲಿ. ಸೋಮನು ಬ್ರಾಹ್ಮಣರರನ್ನು ದ್ವೇಷಿಸುವವರ ಮೇಲೆ ಆಯುಧ ಪ್ರಯೋಗಿಸಲಿ. ಸವಿತೃವು ಯಜಮಾನಾಭಿಮುಖನಾಗಲಿ. ಧನ, ಸುವರ್ಣ, ರಕ್ಷಣೆಗಳೊಂದಿಗೆ ಅಭಿಮುಖನಾಗಲಿ. ಶತ್ರುಗಳು ಪಾಪ ಫಲ ಅನುಭವಿಸುವಂತಾಗಲಿ. ಪೃಥ್ವಿಯು ದ್ರೋಹ ಮಾಡದ ಮಾತೃಭೂಮಿ. ದ್ಯುಲೋಕವು ಪಿತೃರೂಪಿ. ಅಗ್ನಿಯು ಸಹೋದರ ರೂಪಿ. ಇತರೇ ದೇವತೆಗಳೊಂದಿಗೆ ಇವರು ನಮ್ಮನ್ನು ರಕ್ಷಿಸಲಿ. ದ್ಯುಲೋಕ ಧನ ಮತ್ತು ಉತ್ತಮ ರಕ್ಷಣೆಗಳಿಗೆ ಹಗಲೂ ರಾತ್ರಿ ನಮ್ಮ ಸ್ತುತಿ ಕೇಳಲಿ, ಹವಿಸ್ಸು ಸ್ವೀಕರಿಸಲಿ, ಹರ್ಷ ಗೊಳಿಸಲಿ, ತೃಪ್ತರಾಗಲಿ. ಸೋಮದೇವನ ಬಗೆಗೆ ಹೆಚ್ಚು ತಿಳಿಯಲು ಬಯಸುತ್ತಾರೆ.

## ವಿಶ್ವಾಮಿತ್ರರು

ಮಿತ್ರಾವರುಣ, ದ್ಯಾವಾ...ಪೃಥ್ವಿ, ಸೂರ್ಯ, ಅಬ್‌ದೇವತೆ, ಆದಿತ್ಯ, ನಕ್ಷತ್ರ, ಅದಿತಿ, ಅಗ್ನಿ, ವಾಗ್ದೇವಿ, ಎಲ್ಲಾ ದೇವತೆಗಳು ಅನುಗ್ರಹಿಸಲಿ. ಧನ ಲಾಭ, ಶತ್ರುನಾಶ ಮತ್ತು ಪಶುಗಳ ರಕ್ಷಣೆ ಮಾಡಲು ಪ್ರಾರ್ಥಿಸುತ್ತಾರೆ. ಮೂರು ಸವನಗಳಲ್ಲಿಯೂ ರಥ, ಪಶು, ಕನಕ, ರತ್ನ ಸಕಲ ಸಂಪತ್ತುಗಳನ್ನು ಕೊಡಲಿ. ರೋಗ ರಹಿತರನ್ನಾಗಿ ಮಾಡಲಿ. ಅನ್ನವಂತರನ್ನಾಗಿ ಇಡಲಿ. ಧನ ನೀಡಲಿ, ಯಜ್ಞವನ್ನು ಸಾಂಗಗೊಳಿಸಲಿ. ವೀರ ಪುತ್ರರು ಧನ, ಸುಖ ಅನುಗ್ರಹಿಸಲಿ.

## ಅತ್ರಿ-ಋಷಿಗಳು

ಪೃಥ್ವಿಯು ಸ್ತುತಿಕೇಳಲಿ ಅನುಕೂಲ ಹಸ್ತದಿಂದ ದಾನ ಮಾಡಲಿ. ಮಿತ್ರಾವರುಣರು, ಎಲ್ಲಿದ್ದರೂ ನಮ್ಮನ್ನು ರಕ್ಷಿಸಲಿ. ಅಬ್ ದೇವತೆಗಳು ಓಷಧಿ, ವನಸ್ಪತಿ, ವೃಕ್ಷ, ವನ, ಪರ್ವತಗಳು ನಮ್ಮನ್ನು ರಕ್ಷಿಸಲಿ. ಮರುತ್‌ಗಳು ಹೊಸ ಧನ ಪಡೆದಂತೆ ಇರುವ ಧನವನ್ನು ರಕ್ಷಿಸಲಿ. ಶತ್ರುಗಳ ಆಯುಧದಿಂದ ನಮ್ಮನ್ನು ರಕ್ಷಿಸಲಿ. ನಿಋತಿಯು ಸಂಪತ್ತನ್ನು ಕೊಡಲಿ. ಪಶುಗಳು ಗೋಕ್ಷೀರವನ್ನು ಕೊಡಲಿ. ಕರ್ಮಭ್ರಷ್ಟರನ್ನು ಕತ್ತಲಲ್ಲಿಡಲಿ. ಪೃಥ್ವಿಯು ನಮ್ಮ ದುರ್ಬುದಿಯನ್ನು ಓಡಿಸಲಿ ಉತ್ತಮ ಮಾರ್ಗದರ್ಶನ ಮಾಡಲಿ. ಅಗ್ನಿಯು ಪ್ರಾರ್ಥಿಸಿದೊಡನೆಯೇ ಸಮಸ್ತ ರಕ್ಷಣೆಗಳೊಂದಿಗೆ ಯಜಮಾನನ ಯಜ್ಞಕ್ಕೆ ದಯಮಾಡಿಸಲಿ. ವೀರ ಪುತ್ರರು, ಕಲ್ಯಾಣದಿಂದ ಹಿಂದೆಂದೂ ಅನುಭವಿಸದ ನೂತನ ಸುಖ, ರಕ್ಷಣೆ, ಉತ್ತಮ ಮಾರ್ಗದರ್ಶನ ನೀಡಲಿ.

ಯಜಮಾನನ ಅಂತರಾತ್ಮವು ಇಂದ್ರನನ್ನು ಆರಾಧಿಸಿ ಅವನಿಂದ ಇಷ್ಟಾರ್ಥ ವರ್ಷಿತವಾಗುವಂತೆ ಮಾಡಲಿ. ಮಹತ್ತಾದ ಅಧಿಕ ಧನ , ಉತ್ತಮ ಪುತ್ರರನ್ನು ನೀಡಲಿ. ದೇವತಾ ಸ್ತ್ರೀಯರು ಯಜಮಾನನ ಸ್ತುತಿ, ಪ್ರಾರ್ಥನೆ ಕೇಳಲಿ, ರಕ್ಷಿಸಲಿ, ಹವಿಸ್ಸನ್ನು ಸ್ವೀಕರಿಸಲಿ. ಪುತ್ರ, ಪೌತ್ರರನ್ನು ಕೊಡಲಿ, ಅನ್ನ ನೀಡಲಿ. ಕಾಲ ನಿಯಾಮಕ ದೇವನು ನಮ್ಮ ಸ್ತುತಿ ಕೇಳಲಿ. ಆದಿತ್ಯನನ್ನು ಆರಾಧಿಸಿ ನಮಸ್ಕರಿಸುತ್ತಾರೆ. ದೇವತೆಗಳು ಧನ, ಅನ್ನ ಸುಖ ಅನುಗ್ರಹಿಸಲಿ. ನದಿ ದೇವತೆಗಳು ಅಪೇಕ್ಷೆಗಳೊಂದಿಗೆ ಅಭಿಮುಖರಾಗಿ ಹರಸಲಿ. ಲೋಕ ಪಾಲಕ ಸೋಮ, ಅದಿತಿ ಪುತ್ರ, ಆದಿತ್ಯ, ಋಭು, ರುದ್ರ, ವಾಯು, ಬೃಹಸ್ಪತಿ ಇವರು ರಕ್ಷಣೆ ನೀಡಲಿ. ಅಗ್ನಿಯು ಪ್ರಾತ: ಕಾಲದಲ್ಲಿ ಸಕಲ ದೇವತೆಗಳೊಂದಿಗೆ ಯಜಮಾನನಲ್ಲಿಗೆ ಹವಿಸ್ಸು ಸ್ವೀಕರಿಸಲು, ಸೋಮಪಾನ ಮಾಡಲು ಬರಲಿ.

## ವಸಿಷ್ಠರು

ಮಿತ್ರಾ-ವರುಣರು, ಉದಕದಿಂದ ಅನ್ನಯುಕ್ತವಾಗುವಂತೆ ನದಿಗಳು ಪ್ರವಹಿಸಲಿ. ಜಗತ್ ಕಲ್ಯಾಣವಾಗಲಿ. ಆಹ್ವಾನಿತ ದೇವತೆಗಳೆಲ್ಲರೂ ಸ್ತುತಿಸುವವರಿಗೆ ಅನ್ನ ಪುತ್ರಾದಿಗಳನ್ನು ಕೊಡಲಿ. ಕ್ಷೀರಾ ದ್ರಾಶ್ರಯಣ ದ್ರವ್ಯಗಳು ಯಾಜ್ಞಿಕರಿಗೆ ದೊರೆತು ಕಲ್ಯಾಣ ಹೊಂದುವಂತೆ ದೇವತೆಗಳು ಹರಸಲಿ. ಸರಸ್ವತಿ, ಉಷಾ, ಮರುತ್‌ಗಳು ಹವಿಸ್ಸು ಸೇವಿಸಲಿ. ತೃಪ್ತಿ ಹೊಂದಲಿ. ನಾಶವಾಗದ ಧನ, ಅನ್ನ, ರಕ್ಷಣೆ ನೀಡಲಿ. ಸವಿತೃವು ಯೋಗ್ಯರನ್ನಾಗಿ ಮಾಡಲಿ, ರಕ್ಷಿಸಲಿ.

## ವಸಿಷ್ಠರು

ನಮ್ಮ ಸ್ತುತಿಗಳು ದೇವತೆಗಳನ್ನು ಸೇರಲಿ. ಧನ ಅಪಹರಿಸುವವರು ಯಾರೂ ಇಲ್ಲದಿರಲಿ. ಸರಸ್ವತಿ ಮೊದಲಾದ ದೇವ ಪತ್ನಿಯರು ಕೊಡುವ ದಾನವನ್ನು ಪೂಷನನ್ನು ತಡೆಯದಿರಲಿ. ಅಗ್ನಿಯು ಅನ್ನ, ಬಲ, ಕರುಣಿಸಲಿ. ನದಿಗಳು ಪೂರ್ಣ ಪ್ರವಾಹದಿಂದ ಪ್ರವಹಿಸಲಿ. ಧನಗಳಲ್ಲಿ ಶ್ರೇಷ್ಠ ಧನವು ಯಜಮಾನನ್ನು ಬಂದು ಸೇರಲಿ. ಯಾಜ್ಞಿಕರು ಹರ್ಷ ಚಿತ್ತರಾಗಿರಲಿ. ಅಹಿಂಸಿತರಾಗಿರಲಿ. ಶತ್ರುಗಳು ತೊಂದರೆ ಮಾಡದಿರಲಿ. ಅಗ್ನಿಯು ಯಜಮಾನನ್ನು ತ್ಯಜಿಸದೆ ಕಲ್ಯಾಣಗಳಿಂದ ರಕ್ಷಿಸಲಿ.

## ಕಾಣ್ವರು

ಯಾಜಮಾನನ ಸ್ತುತಿಗಳು ದೇವತೆಗಳನ್ನು ಸೇರಲಿ. ಸ್ತುತಿತನಾದ ಅಗ್ನಿಯು ಮಂಗಳಕರನಾಗಿರಲಿ. ಯಜ್ಞ ಪ್ರಭಾವ ಕಮ್ಮಿಯಾಗದಿರಲಿ. ಧನ ಮತ್ತು ವೀರ ಪುತ್ರರನ್ನು ಕೊಡಲಿ.. ದೇವತೆಗಳು ಸತ್ಯ ಪಾಲಕರು, ಅನುಗ್ರಹಕಾರಕರು, ದೇವತೆಗಳನ್ನು ರಕ್ಷಿಸುವ ಪ್ರಶ್ನಿಯು ಸುಖದಾಯಕಳು. ಪುತ್ರ - ಪೌತ್ರರು ಮತ್ತು ಶಾಂತಿಯನ್ನು ಬೇಡುತ್ತಾರೆ. ಯಜಮಾನರುಗಳನ್ನು ಉದಾರ ದಾತೃಗಳ ಅಭಿಮುಖವಾಗಿ ಯಾವಾಗಲೂ ಕಳುಹಿಸಲಿ. ಎಲ್ಲಾ ದೇವತೆಗಳು ಯಜಮಾನರುಗಳನ್ನು ಅವರ ಧನವನ್ನು ರಕ್ಷಿಸಲಿ. ನದಿ ಪ್ರವಾಹವು ಎದುರಾದ ವೃಕ್ಷಗಳನ್ನು ಉರುಳಿಸುವಂತೆ ಹಿಂಸಕ ಬುದ್ಧಿಯವರ ಮೇಲೆ ಎರಗಿ ನಾಶ ಮಾಡಲಿ. ಪೃಥ್ವಿದ್ಯುಲೋಕ ಉತ್ಪನ್ನ ಅನ್ನ ಧನ ನೀಡಲಿ. ಉದಕಕ್ಕಾಗಿ ವೃಷ್ಟಿ ಸುರಿಸಲಿ. ಋಷಿಗಳು, ರಥ, ಅಶ್ವ, ಚಾವಟಿ ಹೊಂದಿರುವವರು. ದೇವತೆಗಳಿಂದಾಗಿ ಅಶ್ವಗಳೊಡನೆ ಸಂಚರಿಸುತ್ತಾರೆ. ಮಾರ್ಗಗಳು ಉತ್ತಮವಾಗಿರಲಿ. ದೇವತೆಗಳಿಗೆ ಸ್ತೋತ್ರ ಮಾಡಿ ಹವಿಸ್ಸು ಅರ್ಪಿಸಿ ಅತಿಶಯ ಭಕ್ತಿಯುಕ್ತರಾಗಿ ಇರಲು ಇವುಗಳ ಬಲದಿಂದ ಗೃಹವು ಶಾಂತವಾಗಿರುವಂತೆ ಅಧಿಕ ಸಂಪದ್ಯುಕ್ತವಾಗಿರುವಂತೆ ಎಲ್ಲಾ ದೇವತೆಗಳು ನಮ್ಮನ್ನು ಅನುಗ್ರಹಿಸಲಿ ಎಮದು ಪ್ರಾರ್ಥಿಸುತ್ತಾರೆ.

## ವಿಶೇಷ ಪ್ರಾರ್ಥನೆಗಳು

ಜೀವಿತದಲ್ಲಿ ಮುಪ್ಪು, ದೌರ್ಬಲ್ಯ, ಬಲಹೀನತೆ, ಮಕ್ಕಳಿಂದ ರಕ್ಷಣೆಯಾಗುವುದು ಬೇಡ. ಈಶ್ವರ ಸಂಕಲ್ಪದಂತೆ ಬ್ರಹ್ಮಾದಿಗಳ ನಿಯಮದಂತೆ ಕರ್ಮಗಳನ್ನು ಉಲ್ಲಂಘಿಸಿ 100 ವರ್ಷ ಕಾಲವಾದರೂ ಬದುಕಲಾದರು / ಒಡನಾಡಿಗಳನ್ನು ಬೇರೆ ಆಗಲೇ ಬೇಕು.

''ಸಾವು ನಿಶ್ಚಿತವಾದುದು''. ದಾರಿದ್ರ, ದುರ್ಬುದ್ಧಿ, ಹಸಿವು, ವ್ಯಾಧಿ, ಶತ್ರುಭಯ, ಇವುಗಳಿಂದ ಹಿಂಸಿತನಾಗುತ್ತಲೇ ಇರುತ್ತಾನೆ. ಕೃಷಿ ನಿರತರು ಉಳುಮೆಯಿಂದ ಕ್ಷೇತ್ರ ವೃದ್ಧಿ ಪಡಿಸಿ ಬೀಜವನ್ನು ಬಿತ್ತಿ ಯಥೇಚ್ಛವಾಗಿ ಅನ್ನ ಬೆಳೆದು ಕೃಷಿ ಉತ್ಪನ್ನ ವೃದ್ಧಿಪಡಿಸಲಿ. ಭಾವಿಗಳನ್ನು ನಿರ್ಮಿಸಲಿ, ನೀರಿನ ತೊಟ್ಟಿಗಳನ್ನು ಕಟ್ಟಲಿ, ಎತ್ತುಗಳನ್ನು ತೃಣಾದಿಗಳಿಂದ ಉಪಚರಿಸಲಿ.

ನೊಗ ಕಟ್ಟಿ ಹೊಲ ಉತ್ತು ಬಿತ್ತಿ ನೀರು ಹಾಯಿಸಲು ಕೃಷಿಯಿಂದ ಸಂಪತ್ ಅಭಿವೃದ್ಧಿವಾಗಲಿ. ಕೃಷಿಕರಿಗೆ ಕಲ್ಯಾಣವಾಗಲಿ. ಯುದ್ಧ ಪರಿಣತರು ಶತ್ರುಗಳನ್ನು ಸೋಲಿಸಿ ಅವರ ಧನ ದೋಚಿ ರಥದಲ್ಲಿ ತುಂಬಿ ತರಲಿ. ಯಜ್ಞ ಭೂಮಿಯ ಉಕ್ಕಿನ ಕೋಟೆಯ ಮಧ್ಯದಲ್ಲಿ ಇದ್ದಂತೆ ಇರಬೇಕು. ಇಂದ್ರ, ಆದಿತ್ಯ ರುದ್ರ, ತ್ವಷ್ಟ ಇವರ ಪತ್ನಿಯರು ನಮ್ಮ ಸ್ತುತಿಗಳನ್ನು ಕೇಳಲಿ.

ಸೂರ್ಯನು ತೇಜಸ್ಸಿನಿಂದ ಉದಿಸಲಿ. ನದಿಗಳು ಶಾಂತವಾಗಿ ಹರಿಯಲಿ. ಬ್ರಹ್ಮವಾದಿಗಳಾದ ಅಂಗೀರಸರು ಸರ್ವತ್ರ ವ್ಯಾಪಿಸಲಿ. ಹವಿಸ್ಸು ಅರ್ಪಿಸುವವರು ಸುಖ, ಶಾಂತಿ ಹೊಂದಲಿ, ದುಃಖಗಳು ನಿವಾರಣೆಯಾಗಿ ಮಂಗಳವಾಗಲಿ. ಧನಾಢ್ಯ ಬಂಧುಗಳ ಮುಂದೆ ದಾರಿದ್ರ್ಯದಿಂದ, ಕಷ್ಟದಿಂದ ಧನಯಾಚನೆ ಮಾಡದಂತಾಗಲಿ.

ಸಕಲ ದೇವತೆಗಳೂ ಯಜಮಾನನಿಗೆ ಧನ ಕೊಡಲಿ, ಪಾಪಗಳಿಂದ ಬಿಡಿಸಲಿ, ಕಲ್ಯಾಣಗಳಿಂದ ರಕ್ಷಿಸಲಿ, ಸಮಿತ್ತು, ಹವಿಸ್ಸು, ಸ್ತೋತ್ರ, ಸ್ತುತಿಗಳನ್ನು ಅರ್ಪಿಸಿದ ನಂತರವೇ ಬೇಕು ಬೇಕಾದ್ದನ್ನು ಬೇಡುತ್ತಾರೆ. ಭರದ್ವಾಜರು, ಕಶ್ಯಪರು, ಗೋತಮರು, ಅತ್ರಿ, ವಿಶ್ವಾಮಿತ್ರ, ಜಮದಗ್ನಿಗಳು, ವಸಿಷ್ಠರು ಎಲ್ಲರೂ ಒಟ್ಟಿಗೆ ಆರೋಗ್ಯಕ್ಕಾಗಿ ಪ್ರಾರ್ಥಿಸುತ್ತಾರೆ.

ಶ್ರೇಷ್ಠ ವೃದ್ಧರುಗಳಿಗೆ ಅತ್ಯಧಿಕ ರಕ್ಷಣೆ ಕೊಡಬೇಕೆಂದಿದ್ದಾರೆ.

## ವಿಶ್ವೇದೇವತೆಗಳಡಿಯಲ್ಲಿ ಬಂದ ಬಹಳ ಮುಖ್ಯ ವಿಷಯಗಳು

1) ನಿದ್ರೆಯಲ್ಲಿ ಪ್ರಾಣ ಮಾತ್ರ ಇರುತ್ತದೆ. ವಾಕ್ ಇರುವುದಿಲ್ಲ. ವಾಕ್ ಶಕ್ತಿಯು ಪ್ರಾಣಶಕ್ತಿ ಇರುವವರೆಗೆ ಸಹಕರಿಸುತ್ತದೆ.

2) ಪೂಜ್ಯ ದೇವತೆಗಳು ಅವರ ಪತ್ನಿಯರು ಅತಿಥಿಗಳಂತೆ ಪೂಜಿತರಾಗಿ ಯಜಮಾನನ ಇಷ್ಟಾರ್ಥ ಸಿದ್ಧಿಸುತ್ತಾರೆ.

3) ಯಜಮಾನಾರ್ಪಿತ ಸ್ತೋತ್ರಗಳನ್ನು ದ್ಯುಲೋಕ ಉತ್ಪನ್ನ ಆದಿತ್ಯ, ಅಂತರಿಕ್ಷಸ್ಥ ರುದ್ರ, ಪಶ್ನಿ, ಪೃಥ್ವಿಯಲ್ಲಿ ವಸುಗಳು ಸೇವಿಸುತ್ತಾರೆ.

4) ಇಂದ್ರಾದಿಗಳಿಗೆ ಯಜಮಾನರು ಪುತ್ರರಂತೆ, ಪೂಜಿಸುವವರಿಗೆ ಶತ್ರು ಭಯವಿಲ್ಲ, ಅಭಿವೃದ್ಧಿ ಹೊಂದುತ್ತಾರೆ.

5) ಪ್ರಕಾಶಮಾನ, ಸಮಸ್ತ ದೇವತೆಗಳ ಇಚ್ಛೆಯಂತೆಯೇ ಸಮಸ್ತವೂ ನಡೆಯುತ್ತದೆ. ಯಾರೂ ತಡೆಯಲಾರರು.

6) ದೇವತೆಗಳೇ ಇಚ್ಛಿಸಿದರೆ ಕಡು ಲೋಭಿಯು ಅವರಿಗೆ ಹವಿಸ್ಸನ್ನು ಅರ್ಪಿಸುತ್ತಾರೆ.

7) ದೇವತೆಗಳಲ್ಲಿ ಎಳೆಯ ವಯಸ್ಸಿನವರಾಗಲಿ, ಕುಮಾರ ವಯಸ್ಸಿನವರಾಗಲಿ ಯಾರೂ ಇಲ್ಲ.

8) ಪೃಥ್ವಿ, ಆದಿ ಲೋಕಗಳಿಗಿಂತ ಅಧಿಕ ವಯಸ್ಸಿನವರು. ಮಹತ್ವವುಳ್ಳವರು, ಶತ್ರು ಹಿಂಸಕರು, ಈ 33 ದೇವತೆಗಳು ಯಜ್ಞಾರ್ಹರು, ಪೂಜ್ಯರು, ಸ್ತುತಿತರು ಆಗಿದ್ದಾರೆ.

9) ದೇವತೆಗಳ ಸ್ಥಾನ 3 ಲೋಕಗಳು ಆಗಿವೆ. ಇದನ್ನು ತಿಳಿದವನು ಆದಿತ್ಯ ಮತ್ತು ಸಂವತ್ಸರ

10) ಯಜ್ಞ ಪ್ರಭಾವದಿಂದಲೇ ಸೂರ್ಯನು ಉದಯಿಸುತ್ತಾನೆ.

11) ವಿಷ್ಣುವಿಗೆ ಇತರ ದೇವತೆಗಳೆಲ್ಲಾ ಶಾಖಾ ರೂಪರಾಗಿದ್ದಾರೆ.

12) ದೇವತೆಗಳು ಅದಿತಿ - ಕಶ್ಯಪರ ಪುತ್ರರು. ಉತ್ತಮ ಜ್ಞಾನಿಗಳು, ಇಷ್ಟಕಾಮಾರ್ಥ ಪ್ರದರು. ಯಜ್ಞ ಮಾರ್ಗದರ್ಶಕರು, ಸ್ತುತಿತರ, ದಾನಿಗಳು, ಶತ್ರು ಹಿಂಸಕರು, ಧನದ ಒಡೆಯರು, ದಾನಿಗಳಿಗೂ ವರದಾತರು. ದೇವತೆಗಳೆಲ್ಲ ಒಂದೇ ಕುಲೋತ್ಪನ್ನರು ಮತ್ತು ಬಾಂಧವರು.

13) ದೇವತೆಗಳು ವಿಶ್ರಾಂತಿ ಹೊಂದದೆ ತಮ್ಮ ಪಾಲಿನ ಕೆಲಸಗಳನ್ನು ಮಾಡುತ್ತಲೇ ಇರುತ್ತಾರೆ.

14) ನದಿಗಳು ದಾರಿ ಸವೆಸಿ ಸಮುದ್ರ ಸೇರುತ್ತವೆ. ಸರ್ವಶಕ್ತರು, ರಕ್ಷಕರು, ಧನದಾತರು.

15) ಇಂದ್ರ, ಅಗ್ನಿ ಸಮಬಲರು. ಸಜ್ಜನ ಪಾಲಕರು, ಪರಸ್ಪರರು, ಶತ್ರುಗಳನ್ನು, ರಾಕ್ಷಸರನ್ನು ಓಡಿಸುತ್ತಾರೆ.

16) ವಾಯು, ಪರ್ಜನ್ಯರು ದ್ಯುಲೋಕದಾರಕರು.

17) ವಾಯು, ಅಗ್ನಿ, ಆದಿತ್ಯರು ಯಜ್ಞ ಪ್ರದಾನರು.

18) ಧೇನುವು ಕರ್ಮಸಾಧಕ, ಸ್ವಪ್ರೇರಣೆಯಿಂದ ಹಾಲು ಕೊಡುತ್ತದೆ. ಇಂದ್ರ, ವರುಣರನ್ನು ಸ್ತುತಿಸುವವರಿಗೆ ಈ ಹಾಲು ದೊರೆಯುತ್ತದೆ.

19) ಸಿದ್ಧಿ ಪಡೆಯುವುದೆಂದರೆ ಉತ್ತಮ ಮಾರ್ಗ ತಿಳಿದವರಿಂದ ತಿಳಿದು ಸಾಧನೆಯಿಂದ ಗುರಿಮುಟ್ಟುವುದು.

20) ವರುಣ, ಮಿತ್ರ, ಅಗ್ನಿ, ಸವಿತೃ, ಭಗ, ಅದಿತಿ, ಆರ್ಯಮ ಇವರು ದಕ್ಷ ಪುತ್ರರು. ಧನವಂತರು, ಪೂಜ್ಯರು.

21) ಸೂರ್ಯನು ವಸು, ರುದ್ರ, ಆದಿತ್ಯ ರೂಪಗಳಲ್ಲಿ ದೇವತೆಗಳಲ್ಲಿದ್ದು 3 ಲೋಕಗಳನ್ನು ತಿಳಿಯುತ್ತಾನೆ.

22) ಅಗ್ನಿ: ವಿಶ್ವೇ ದೇವತೆಗಳಿಗೆ ನಾಲಿಗೆಯಿದ್ದಂತೆ. ದೇವತೆಗಳನ್ನು ಯಜ್ಞಕ್ಕೆ ಕರೆತರುವವನು. ಆಯಾಯ ದೇವತೆಗಳಿಗೆ ಅನುಗುಣವಾಗಿ ಯಾಗ ಮಾಡುತ್ತಾರೆ.

23) ಪೃಥ್ವಿಯ ಅಗ್ನಿ, ಅಂತರಿಕ್ಷದ ವಾಯು, ದ್ಯುಲೋಕ ಆದಿತ್ಯ ಇವರು ಸ್ಥಾಪಿಸಿದ ಸತ್ಯವನ್ನು ತಿಳಿದ ಜ್ಞಾನಿಯು ಮರಣರಾಹಿತ್ಯವನ್ನು ಪಡೆಯುತ್ತಾರೆ.

24) ಆದಿತ್ಯ ಸತ್ಯಸ್ವರೂಪ ಸ್ಥಾನ ಗೂಢವಾಗಿದೆ.

25) ದೇವತೆಗಳು ಪ್ರಜಾಪತಿಯ ಪುತ್ರರು. ಮರಣ ಧರ್ಮ ರಹಿತರು, ಸುಖದಾತರು, ಯಜ್ಞ ವೃದ್ಧಿಕಾರಕರು, ಯಜಮಾನನ ಸ್ತುತಿಯನ್ನು ಕೇಳಿ ಅನುಗ್ರಹಿಸುವವರು. ಸಂಘಾತ್ಮಕರು, ಪ್ರಭಾವಯುಕ್ತರು, ಒಟ್ಟಾಗಿ ಸೇರಿ ರೂಪ ಧರಿಸುತ್ತಾರೆ. ಸತ್ಯವಾದ ಒಂದೇ ತತ್ವವು ಜಗತ್ತಿನ ಸಕಲ ರೂಪಗಳಲ್ಲಿಯೂ ಪರಿಣಮಿತವಾಗಿದೆ.

## ವಿಶ್ವಾಮಿತ್ರರು :

ದ್ಯುಲೋಕವು ದೋಷರಹಿತವಾದುದು. ಮರುತ್ ಗಳಿಂದ ರಕ್ಷಿತವಾಗಿದೆ. ಮರುತ್ ಗಳು ಪ್ರಾಣ, ಅಪಾನ ರೂಪದಲ್ಲಿ ಇರುತ್ತಾರೆ. ಯುದ್ಧದಲ್ಲಿ ಇಂದ್ರನ ಜೊತೆಜೊತೆಗೆ ಇರುತ್ತಾರೆ.

ಸಮಸ್ತ ಭೂತ ಜಾತಗಳನ್ನು ಪ್ರತ್ಯೇಕ ಮಾಡಿ ಅದರದರ ಸ್ಥಾನಗಳಲ್ಲಿ ಬೇಧವಿಲ್ಲದೆ ಧರಿಸಿರುವವರು ಮರುತ್ ಗಳು. ಇವರು ಪೃಥ್ವಿಯಲ್ಲಿ ಸಂಚರಿಸುತ್ತಾರೆ. ಇಷ್ಟಾರ್ಥಪ್ರದರು.

## ಅತ್ರಿ ಋಷಿಗಳು :

ಸೂರ್ಯ ವೇದತ್ರಯಿ ರೂಪಿ. ಕಿರಣಗಳು ಪ್ರಕಾಶಯುತವಾಗಿ ಲೋಕಧಾರಣ ಶಕ್ತಿ ಹೊಂದಿದೆ. ಇದರ ಪರಿಣಾಮವೇ ದೃಷ್ಟಿ. ಸ್ತುತಿಗಳು ಸೂರ್ಯನನ್ನು ಸೇರುತ್ತವೆ. ಸ್ತುತಿಗಳಿರುವ ಭಾಗದಲ್ಲಿ ಎಂದೂ ತೊಂದರೆಗಳಾಗುವುದಿಲ್ಲ. ಭಕ್ತಿಯಿಂದ ಸ್ತುತಿಸಿ ಕರ್ಮ ಮಾಡಿದವರಿಗೆ ಸೂರ್ಯದೇವನು ತದನುಸಾರ ಫಲ ನೀಡುತ್ತಾನೆ.

## ಜೀವಿ ಮತ್ತು ಆತ್ಮ

ಪರಮಾತ್ಮನಲ್ಲಿ ಸಕಲ ದೇವತೆಗಳು ಆಶ್ರಯ ಪಡೆದಿದ್ದಾರೆ ಎಂದು ಋಗ್ವೇದ ತಿಳಿಸುತ್ತದೆ. ಒಬ್ಬನೇ ಆದಿತ್ಯ, ಇಂದ್ರ, ಮಿತ್ರ, ಅಗ್ನಿ, ಮಾತರಿಷ್ವ, ಯಮ ಎಂದೆಲ್ಲ ಕರೆಯುತ್ತಾರೆ. ದೇಹದೊಳಗೆ 2 ಪಕ್ಷಿಗಳಿವೆ. (1) ಜೀವ (2) ಆತ್ಮ. ಜೀವಿ: ವಿಷಯ ಸುಖ ದುಃಖಗಳಿಂದ ಲೋಕಾಂತರ ಸಂಚಾರ ಮಾಡುತ್ತಾ ಇರುತ್ತದೆ. ಸೀಮಿತಶಕ್ತಿ ಅಣು ಮಾತ್ರ ಒಳಗೆ ಇದೆ.

(2) ಆತ್ಮ : ಒಳಗೂ ಇದ್ದಾನೆ, ಹೊರಗೂ ಇದ್ದಾನೆ, ಎಲ್ಲೆಲ್ಲೂ ಇದ್ದಾನೆ. ಅಣುವೂ ಹೌದು, ಮಹತ್ವವೂ ಹೌದು, ಎಲ್ಲಕ್ಕಿಂತಲೂ ಬಹು ಎತ್ತರದಲ್ಲಿದೆ. ಎಲ್ಲವನ್ನು ಯಾವಾಗಲೂ ನೋಡುತ್ತಿರುತ್ತಾನೆ.

ಪಿತೃರೂಪಿನಲ್ಲಿ ಅಂತರಿಕ್ಷದಲ್ಲಿ ಆದಿತ್ಯನಿದ್ದಾನೆ. ಮಾತೃ ರೂಪಿನಲ್ಲಿ ಪೃಥ್ವಿ ಇದೆ. ಈ ಇಬ್ಬರ ನಡುವೆ ಸಕಲ ಭೂತ ಜಾತಗಳೂ ಉತ್ಪನ್ನವಾಗುತ್ತವೆ. ಮನಸ್ಸು ದೇವತೆಗಳ ವಿಷಯದಲ್ಲಿ ವಿಶೇಷ ಪ್ರಜ್ಞೆವುಳ್ಳದ್ದು ಮತ್ತು ಪ್ರತಿಭೆವುಳ್ಳದ್ದು.

ಸಂತಾನರೂಪದ ಗರ್ಭದ ಮರ್ಮ ಬಾಹ್ಯ ಉದರ ವೃದ್ಧಿಯಿಂದ ತಿಳಿಯುತ್ತದೆ. ಇದರ ಅಂತರ್ಯ ಮರ್ಮ ತಿಳಿಯದೇ ಪುನಃ ಪುನಃ ದುಃಖ ಭಾಗಿಗಳಾಗುತ್ತಾರೆ. ವಿಶ್ವೇ ದೇವತೆಗಳು ಪಶುಗಳನ್ನು ಕಂಡುಹಿಡಿದವರು.

## ಅಂಗೀರಸರ ಬಗೆಗೆ :

ಎಲ್ಲರಿಗಿಂತಲೂ ಮೊದಲು ಉತ್ಪನ್ನರಾದವರು. ವಿಶ್ವೇ ದೇವತೆಗಳು ಪಿತೃ ದೇವತೆಗಳಿಂದಲೂ ಪೂಜ್ಯರು. ಯಜ್ಞಾರ್ಥವಾಗಿ ಹವಿಸ್ಸು, ದಕ್ಷಿಣೆ ಹೊಂದಿರುವವರು. ಇವರು ಯಜ್ಞ ಅನುಷ್ಠಾನ ನಿರತರು. ಒಂದು ವರ್ಷ ನಡೆಯಬೇಕಿದ್ದ ಸತ್ರ ಯಾಗವನ್ನು 10 ತಿಂಗಳಲ್ಲಿಯೇ ಮುಗಿಸಿದರು. ಇವರು ಅಗ್ನಿ ಪುತ್ರರು. ಸತ್ ಕರ್ಮಗಳಿಂದ ಯಜ್ಞ ಭೂಮಿಯನ್ನು ಪ್ರಸಿದ್ಧವನ್ನಾಗಿ ಮಾಡುತ್ತಾರೆ. ಆದಿತ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದವರು. ಬೇರಾರು ಮಾಡಲಾಗದಂತಹ ಸಾವಿರಾರು ಗೋವುಗಳನ್ನು ದಾನ ಮಾಡಿದ್ದಾರೆ. ಉಷೆಯು ಸ್ತುತಿಸಲ್ಪಟ್ಟಾಗ ದನದ ಕೊಟ್ಟಿಗೆಯ ಬಾಗಿಲುಗಳು ತೆರೆದವು. ಅಂಗೀರಸರು ಆ ಗೋವುಗಳನ್ನು ಪಡೆದರು. ಇವರು ಯಜ್ಞ ನಿರ್ವಾಹಕರು. ಯಜ್ಞಕಾಲದಲ್ಲಿ ಇವರನ್ನು ಸ್ತುತಿಸುತ್ತಾರೆ. ಅತೀಂದ್ರಿಯ ಜ್ಞಾನಿಗಳಾದ ಇವರ ಸ್ನೇಹ ಪಡೆದವರು ಮರಣರಾಹಿತ್ಯರು. ದೇವತ್ವವನ್ನು ಪಡೆಯುವವರು ಮತ್ತು ಪಿತೃಗಳಿಂದ ಪೂಜಿತರು ಆಗುತ್ತಾರೆ.

## ವಿಶ್ವೇದೇವತೆಗಳಡಿಯಲ್ಲಿ ಬರುವ ನಾನಾ ದೇವತೆಗಳು

## ಶ್ರೀಮನ್ ನಾರಾಯಣ

ಸೃಷ್ಟಿಕರ್ತ, ಹಿರಣ್ಯಗರ್ಭರೂಪಿ, ದ್ಯಾವಾಪೃಥ್ವಿಗಳನ್ನು ಧರಿಸಿದವನು. ಸೃಷ್ಟಿ ಕಾರ್ಯಗಳನ್ನು ದೇವತೆಗಳು ಮಾಡುವ ಮುಂಚೆಯೇ ಹಿರಣ್ಯ ಗರ್ಭನು ತನ್ನ ಶಕ್ತಿಯಿಂದ ನಿರ್ಮಿಸುತ್ತಾನೆ. ಇವನ ದೇಹ ದ್ಯಾವಾ ಪೃಥ್ವಿಗಳಷ್ಟೆ ಪರಿಮಾಣವುಳ್ಳದ್ದು.

**ಭರದ್ವಾಜರು :** ವಿಷ್ಣುವು ಸರ್ವವ್ಯಾಪಕ, ಮನುವಿಗಾಗಿ ಮೂರು ಭಾಗ ಮಾಡಿದನು.

**ಅತ್ರಿ, ಋಷಿಗಳು :** ವಿಷ್ಣುವು ದೇವತೆಗಳಿಗೆಲ್ಲಾ ಶಕ್ತಿ ಒದಗಿಸುವವನು.

**ವಸಿಷ್ಠರು :** ನಾರಾಯಣನು ಗರ್ಭರಕ್ಷಕ ರಕ್ಷಣೆಗಳಿಂದ ಕೂಡಿದವರು.

**ಕಾಣ್ವರು :** ವಿಷ್ಣುವು ಉತ್ತಮ ಜ್ಞಾನಿ, ಧನವನ್ನು ನದಿಯಂತೆ ಪ್ರವಹಿಸುವವನು. ಸ್ತುತಿ ಕರ್ತರಿಗೆ ಹಿಂಸಕನು ಅಲ್ಲ. ವಿಷ್ಣುವಿನ ರಕ್ಷಣೆಯಲ್ಲಿರುವವರು ಯಾರೂ ಹಿಂಸಿತರಾಗಲಾರರು. ಅನೇಕ ಸ್ತುತಿಗಳಿಂದ ಪಾತ್ರನಾದವನು. ಮೂರು ಲೋಕಗಳನ್ನು ವಿಶೇಷ ರೀತಿಯಿಂದ ವ್ಯಾಪಿಸಿದ್ದಾನೆ. ಅತಿಶಯ ವೈಭವವುಳ್ಳವನು. ಸೂರ್ಯಾದಿಗಳಿಗೆ ಪ್ರಕಾಶ ನೀಡುವವನು. ನಿರತಿಶಯ ಆತ್ಮ ಸುಖದಾತೃ, ಸಂಚಾರಶೀಲ. ಧನ ದೇವತೆಯು ಪರಮಾತ್ಮನ ಸಂಬಂಧದಿಂದಾಗಿ ಉತ್ಪನ್ನಳಾದವಳು. ಎಲ್ಲವೂ ಪರಮಾತ್ಮನಿಂದ ದೊರೆಯುತ್ತದೆ.

## ಪ್ರಜಾಪತಿ

ಧನಪತಿ, ಉದಾರದಾನಿ, ಅಪೇಕ್ಷಿತ ವಸ್ತು ಕೊಡುತ್ತಾನೆ. ಮಿತ್ರಾವರುಣರು ಪ್ರಜಾಪತಿಯನ್ನು ಸ್ತುತಿಸುತ್ತಾರೆ. ಬ್ರಹ್ಮ ವರ್ಚಸ್ಸು, ದೀರ್ಘಾಯುಸ್ಸು, ಉತ್ತಮ ಸಂತತಿ ದಯಪಾಲಿಸುವವರು.

**ಭರದ್ವಾಜರು** : ಪ್ರಜಾಪತಿಯು ದೇವತೆಗಳ ಹಿತರಕ್ಷಕರು.

## ವಾಗ್ದೇವಿ

ಧನ ನಿರ್ಮಾಪಕಳು, ಸತ್ಯಸ್ವರೂಪಳು, ಬ್ರಹ್ಮನಿಂದ ಉತ್ಪನ್ನಳಾದವಳು. ಅನಂತರ ಸಕಲ ವಿಶ್ವವು ಉತ್ಪನ್ನವಾಯಿತು. ವಾಗ್ದೇವಿಗೆ ಆದಿತ್ಯ ಮಂಡಳದಲ್ಲಿ ಸ್ಥಾನವಿದೆ. ವಾಕ್ ಶಕ್ತಿ ಶರೀರದಲ್ಲಿ ಪ್ರಾಣ ಶಕ್ತಿ ಇರುವವರೆಗೂ ಸಹಕರಿಸುತ್ತದೆ. ಈ ವಾಕ್ ತತ್ವವು ಜಗತ್‌ಕಾರಣ ಬ್ರಹ್ಮನಷ್ಟೆ ಪ್ರಮಾಣದಾಗಿದೆ. ದೇವ ಪತ್ನಿಯರೊಡಗೂಡಿದವಳು. ಅನೇಕ ವಿಧ ಅನ್ನವಂತಳು.

**ಅತ್ರಿ, ಋಷಿಗಳು :** ವಾಗ್ದೇವಿ ಧನಪ್ರದಳು, ಮಹಾತ್ಮಳು, ಸರ್ವ ವ್ಯಾಪಕಳು, ಸ್ತುತಿ ಹವಿಸ್ಸು ಪಡೆಯುವವಳು. ಅಗ್ನಿದೇವನು ಜ್ಞಾನಾರ್ಮಿಳಾ ದೇವಿಯನ್ನು ಅಭಿಮಾನದಿಂದ ಸೋಮಪಾನಕ್ಕೆ ಕರೆತರುತ್ತಾನೆ. ವಾಗ್ದೇವಿಯು ನಾಶ ರಹಿತಳು.

## ಸರಸ್ವತಿ ದೇವಿ

ಸರಸ್ವತ್ಯಾದಿ ನದಿಗಳು ಜಗತ್ತಿಗೆ ಮಾತೃಪ್ರಾಯರು, ಚೈತನ್ಯ ದಾಯಕರು, ಘೃತಯುಕ್ತ ಮಧುರ ಉದಕಗಳು, ಸರಸ್ವತ್ಯಾದಿ 21 ನದಿಗಳು ಪವಿತ್ರವಾದವು.

**ವಸಿಷ್ಠರು :** ಸರಸ್ವತಿಯು ಗಂಗಾದಿ ನದಿಗಳಲ್ಲಿ ಮಾತೃಪ್ರಾಯಳು, ಇಷ್ಟಾರ್ಥಪ್ರದಳು, ಉತ್ತಮ ಪ್ರವಾಹವುಳ್ಳವಳು. ಸರಸ್ವತಿಯು ಋತ್ವಿಜರಿಗೆ, ಯಾಜ್ಞಿಕರಿಗೆ ಸುಖದಾಯಿಯಾಗಿರಲಿ. ವಾಗ್ದೇವಿ ಮರುತ್‌ಗಳಿಂದ ಒಳಗೊಂಡವಳು. ಉದಕ ವೃದ್ಧಿಯೊಂದಿಗೆ ಬರಲಿ. ಎಲ್ಲಿದ್ದರೂ ಉದಕ ಸೇಚನ ಮಾಡಲಿ. ಗಂಗಾದಿ ಸಪ್ತನದಿಗಳು ಸುಖದಾಯಕರಾಗಿ ಮಧುರ ನೀರಿನಿಂದ ಯಾರಿಗೂ ಹಿಂಸೆ ಮಾಡದೆ ಮಾನವರಿಗೆ ತೃಪ್ತಿವುಂಟುಮಾಡುತ್ತಾ ವೇಗವಾಗಿ ಹರಿಯಲಿ.

ನಮ್ಮಸ್ತೋತ್ರ ಸ್ವೀಕರಿಸಲಿ. ರಕ್ಷಿಸಲಿ. ಯಜಮಾನನಿಗೆ ಧನ ಲಭಿಸುವಂತೆ ಮಾಡಲಿ. ಕರ್ಮ ಬುದ್ಧಿ ನೀಡಲಿ. ಧನ ಒದಗಿಸಲಿ. ಯಜಮಾನನ್ನು ತಿರಸ್ಕರಿಸದೆ ಸುಖವಾಗಿ ಇರುವಂತೆ ಅನುಗ್ರಹಿಸಲಿ. ಸಸ್ಯಾದಿ ಮೂಲಿಕೆಗಳು ಮಧುರವಾಗಿರಲಿ. ಹಗಲೂ ರಾತ್ರಿ, ಸಕಲ ಲೋಕಗಳು ಮಧುರವಾಗಿರಲಿ.

## ರುದ್ರರು

ರುದ್ರರು ಶತ್ರುಗಳನ್ನು ಓಡಿಸುತ್ತಾರೆ. ಸೃಷ್ಟಿ ಸಾಧಕ ಯಜ್ಞ ರಕ್ಷಕ, ಯಜ್ಞ ಧಾರಕ, ಅನ್ನದಾತ, ಅಗ್ನಿಯನ್ನು ರಕ್ಷಿಸಿದ್ದಾರೆ. ಇವರಿರುವಲ್ಲಿ ಯಾವ ರಾಕ್ಷಸರು ಬರಲಾರರು. ಬಂದರೆ ಹೊರದೂಡಲ್ಪಡುವರು. ಪ್ರಕಾಶಮಾನಿ, ಬಲಯುತರು, ಸಾರ್ಥಕ ಬಿಲ್ಲು ಹಿಡಿದವರು, ಸಮಸ್ತ ಓಷಧಿಗಳಿಗೆ ಪ್ರಭುಗಳು, ಉತ್ತಮ ಮನಸ್ಥಿತಿಯ ಲಾಭಕ್ಕೆ ಯಜಮಾನರುಗಳು, ಸ್ತೋತ್ರಗಳಿಂದ ಅಭಿಷೇಕ ಪೂಜೆ, ಯಾಗಗಳಿಂದ ಸಂತೋಷ ಗೊಳಿಸಿ ತಾವು ಸಂತೋಷ ಪಡುತ್ತಾರೆ. ಪಾಲಕರು, ಶ್ರೇಷ್ಠ ಗುಣಗಳು, ಇವರನ್ನು ಅನ್ನಕ್ಕಾಗಿ, ಸುಖಕ್ಕಾಗಿ, ಪವಿತ್ರಕ್ಕಾಗಿ ಸ್ತುತಿಸುತ್ತಾರೆ. ಇವರು ಪಾಪಗಳನ್ನು ಪರಿಹರಿಸುತ್ತಾರೆ. ಅತ್ಯಧಿಕ ಬಲದವರು, ಹರಿತವಾದ ಅಲಗುಳ್ಳ ಪಿನಾಕವನ್ನು ಕೈಯಲ್ಲಿ ಹಿಡಿದವರು. ಮಂಗಳಪ್ರದರು.

## ಆರ್ಯಮ

<u>ವಿಶ್ವಾಮಿತ್ರರು :</u> ಆರ್ಯಮ, ಆದಿತಿ, ವರುಣರು ಅಹಿಂಸಕ ಕರ್ಮಿಗಳು. ಬಂಧು ರೂಪರು. ನಮ್ಮ ಅಪೇಕ್ಷೆಗಳನ್ನು ತಿಳಿದು ಈಡೇರಿಸುವವರು.

<u>ವಸಿಷ್ಠರು :</u> ಆರ್ಯಮರು ಹಿಂಸೆ ಮಾಡುವ ಶತ್ರುಗಳನ್ನು ಅವರ ಕ್ರೋಧಗಳನ್ನು ಪೂರ್ಣವಾಗಿ ನಾಶ ಮಾಡುವವರು.

<u>ಕಾಣ್ವರು :</u> ಆರ್ಯಮರು ಸ್ನೇಹಿತ ಸರ್ವಾಪೇಕ್ಷಿತ ಧನಿ. ಸದಾ ಗಮನವುಳ್ಳವನು. ಜ್ಞಾನಿ, ಅಭಿವೃದ್ಧಿಕಾರಕನು. ಇವರಿಂದ ಧನ ಸಂಪತ್ತು ಬೇಡುತ್ತಾರೆ.

## ಆದಿತಿ

<u>ಕಾಣ್ವರು :</u> ಆದಿತಿಯು ಸಕಲ ಪಾಪಗಳಿಂದಲೂ ರಕ್ಷಿಸುತ್ತಾರೆ. ತೇಜಸ್ಸು ಕೊಡುವವಳು, ಸರ್ವವ್ಯಾಪಕಳು, ಮಿತ್ರಾ, ವರುಣರು ಇವರ ಪುತ್ರರು ಮತ್ತು ಅಸುರ ನಾಶಕರು. ಇವರ ಅನುಗ್ರಹದಿಂದ ಧನ, ಸಂಪತ್ತು, ರಕ್ಷಣೆ, ಸಂತೋಷ ಸುಖಗಳು ಲಭಿಸುತ್ತವೆ.

## ವಾಯು

ವಾಯುವು ಚಲನಾಧಿ ಕರ್ಮಗಳನ್ನು ವಿಶೇಷ ರೀತಿಯಿಂದ ನಡೆಸುತ್ತಾರೆ. ಅನುಭವ ಪಡೆಯಬಹುದು, ರೂಪ ಕಾಣುವುದಿಲ್ಲ. ಮಿತಿ ಮೀರಿ ವೃಷ್ಟಿ ಸುರಿಸುವುದಿಲ್ಲ. ಸೋಮಾಪೇಕ್ಷಿ. ವಾಯುವಿನ ಪ್ರೀತಿಯ ಬೇಸುಗೆಯಿಂದ ಅಗ್ನಿ ಆದಿತ್ಯರು ಮೂರು ಲೋಕದಲ್ಲೂ ದಿಗಂತದಲ್ಲಿ ವ್ಯಾಪಿಸಿದ್ದಾರೆ. ಇವರ ಕೀರ್ತಿಯಿಂದ ಉತ್ಕೃಷ್ಟ ರಹಸ್ಯ ಕರ್ಮ ನಿರತರಾಗಿ ಜಗತ್ತನ್ನು ವಹಿಸುತ್ತಾರೆ.

<u>ಅತ್ರಿ ಋಷಿಗಳು :</u> ವಾಯುವು ಶಕ್ತಿಗೆ ಒಡೆಯ, ಸರ್ವದಾ ಅಂತರಿಕ್ಷ ಸಂಚಾರಿ; ಅಪ್ರತಿಹತ ಗಮನಿ. ಪ್ರಾಣದಾತ, ಪಂಚವಿಧ ಹೋಮ ಸಂಪಾದಕ, ಅನುಗ್ರಹ ಬುದ್ಧಿಯವನು, ಸೋಮಪಾನ ಯೋಗ್ಯ, ಕ್ರೀಡಾತ್ಮಕ ಸಂಚಾರ ಶೀಲರು.

<u>ಭರಧ್ವಾಜರು :</u> ವಾಯುವು ಮಹದ್ಗುಣ, ಅಧಿಕ ಧನಿ, ಪೂಜಾಯೋಗ್ಯ. ಇವರಲ್ಲಿ ಧನ, ಸಂಪತ್ತು, ಸೋಮರಸ, ಓಷದಿಗಳನ್ನು ಬೇಡುತ್ತಾರೆ. ಹಿತಕರರಾಗಿರಲಿ ಎಂದು ಪ್ರಾರ್ಥನೆ.

## ಸವಿತೃ

ಜಾಗ್ರತೆಯಿಂದ ರಕ್ಷಿಸುವವನು. ಈ ವರ್ಗಕ್ಕೆ ಹಸು ಕರುಗಳು ಸೇರಿವೆ. ಮಾನವರಿಗಿಂತ ಉತ್ಕೃಷ್ಟ ವಾತ್ಸಲ್ಯ, ಜ್ಞಾನ ಪ್ರಕಟಿಸುತ್ತವೆ. ತೃಣ ಭಕ್ಷಿಸಿ ಉದಕ ಕುಡಿದು ಹಾಲನ್ನು ಕೊಡುತ್ತಾ ಯಾಜ್ಞಿಕರನ್ನು ಧನವಂತರನ್ನಾಗಿ ಮಾಡುತ್ತದೆ. ಕಲ್ಯಾಣಾತ್ಮಕ, 4 ದಿಕ್ಕಿನಿಂದಲೂ ಧನ ಅನುಗ್ರಹಿಸುವವಳು, ದೀರ್ಘಾಯುಸ್ಸು ಕೊಡುವವಳು. ನಮ್ಮ ಸಕಲ ರೋಗಗಳನ್ನು ನಾಶ ಮಾಡುವ ದೇವತಾತ್ಮಳು.

## ಸವಿತೃ

**ಅತ್ರಿ ಋಷಿಗಳು :** ಅತ್ಯುತ್ತಮ ಕರ್ಮಿ, ಹಿತಕರಸೋಮದಿಂದ ಹರ್ಷಗೊಳ್ಳುವವನು, ಅಪೇಕ್ಷಿತ ಧನ ಕೊಡುವವನು, ಧ್ಯಾನ ಹರುಡುವವನು, ದೇವತಾತ್ಮ, ಪುನರಾಗಮನ ತಿಳಿದವನು, ಮಾನವರ ಧನ ವಿಭಾಗ ಮಾಡಿಕೊಡುವವನು.

**ಶ್ಯಾವ್ಯರು :** ಜಗತ್ ಪ್ರೇರಕ, ಪೂಜ್ಯ, ಎಲ್ಲರ ಮಧ್ಯೆ ಉರ್ಧ್ವ ಮುಖವಾಗಿ ಸಂಚರಿಸುವವನು. ತನ್ನ ತೇಜಸ್ಸಿನೊಂದಿಗೆ ಆರ್ಭಟಿಸುವವನು. ಮಿತ್ರಾ, ವರುಣ, ಆರ್ಯಮರು ಒಟ್ಟಾಗಿ ರಕ್ಷಿಸುವವರು, ದಾನ ಮಾಡುವವರು, ಯಜಮಾನನಿಗೆ ಧನಾದಿಗಳನ್ನು ಒದಗಿಸುವವರು. ಇವರಲ್ಲಿ ಯೋಗ್ಯ ಧನ, ಜ್ಞಾನ, ಶೀಲ, ರಕ್ಷಣೆ, ರೋಗ ಪರಿಹಾರ, ಅವಮಾನ ಮಾಡುವವರಿಂದ ರಕ್ಷಣೆಗಳಿಗಾಗಿ ಪ್ರಾರ್ಥಿಸುತ್ತಾರೆ.

## ಮಿತ್ರ

ಅಹರಭಿಮಾನಿ, ಜಗತ್ತಿನ ನಿರ್ವಹಣಾ ಕರ್ತರು.

**ವಸಿಷ್ಠರು :** ಸಕಲ ಪ್ರಾಣಿಗಳನ್ನು ಯಜ್ಞದತ್ತವಾಗುವಂತೆ ಮಾಡುತ್ತಾರೆ.

**ಶ್ಯಾವ್ಯರು :** ಮಿತ್ರನು ದ್ಯುಲೋಕ, ಅಂತರಿಕ್ಷ ಪ್ರದೇಶವನ್ನೆಲ್ಲ ತನ್ನ ತೇಜಸ್ಸಿನಿಂದ ಆಳಿಯುವಂತೆ ಬೆಳೆದಿದ್ದಾನೆ. ದ್ಯಾವಾ ಪೃಥ್ವಿಗಳನ್ನು ಪೂರ್ಣವಾಗಿ ವ್ಯಾಪಿಸಿದ್ದಾನೆ. ಸರ್ವ ಪ್ರೇರಕನಾಗಿದ್ದಾನೆ. ಆದಿತ್ಯಸ್ಥಾನ ಅಂತರಿಕ್ಷದಲ್ಲಿ ಎಲ್ಲೆಡೆಯಲ್ಲಿಯೂ ವಿಸ್ತರಿಸುತ್ತಾನೆ. ಆಹ್ವಾನ ಪೂಜೆಗಳಿಗೆ ಪಾತ್ರನಾಗಿ ಅಗ್ನಿಯಂತೆ ಪ್ರಭಾವಯುತನಾಗಿದ್ದಾನೆ. ಇವರಿಂದ ಧನ, ಸಂಪತ್ತನ್ನು ಬೇಡುತ್ತಾರೆ.

## ವರುಣ

ರಾತ್ರಿಯ ಅಭಿಮಾನಿ. ಉಪಕಾರ ಬುದ್ಧಿಯವನು. ಮಾರ್ಗದರ್ಶಕ, ಅನಿಷ್ಟ ಮತ್ತು ದುಃಖ ನಿವಾರಕ. ಪ್ರಪಂಚದ ಧನಕ್ಕೆ ನಿರ್ವಹಣಕಾರ. ಅದಾತೃಗಳನ್ನು ಪ್ರತಿಭಟಿಸುವವನು. ನಾಶಮಾಡುವವನು. ಮಿತ್ರ ಆರ್ಯಮರೊಂದಿಗೆ ಬರುವವನು. ಶೀಘ್ರ ಸಂಚಾರಿ, ಯಾಜ್ಞಿಕರಿಗೆ ಅನ್ನದಾನ ಮಾಡುವವನು, ಸಕಲ ಜಲ ದೇವತೆಗಳೊಂದಿಗೆ ಉತ್ತಮ ಸಂಬಂಧ ಬಂಧುತ್ವ ಹೊಂದಿದ್ದಾನೆ.

**ವಸಿಷ್ಠರು :** ವರುಣನು ಯಜ್ಞಧಾರಕ, ಜಗತ್ ಪ್ರಭು

**ಶ್ಯಾವ್ಯರು :** ಅಧಿಕ ಬಲದವನು, ಸಹಸ್ರಾರು ಕಣ್ಣುಗಳುಳ್ಳವನು, ಸರ್ವವ್ಯಾಪಿ, ನದಿಗಳಿಗೆ ರೂಪದಾತೃ, ಯಜ್ಞಧಾರಕ, ಜಗತ್‌ಪ್ರಭು. ಈ ವರುಣಾದಿ ದೇವತೆಗಳು ಸಕಲ ಅನುಚರರೊಡನೆ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಊರ್ಧ್ವ, ಅಧೋಮುಖ, ಉದಾರ ದಾನಿ ಯಜಮಾನರುಗಳನ್ನು ಅನುಗ್ರಹಿಸುತ್ತಾ ರಕ್ಷಿಸುತ್ತಾರೆ. ವರುಣ ದೇವರಲ್ಲಿ ಅನ್ನ, ಧನ, ಸಂಪತ್ತು, ರಕ್ಷಣೆಗಳನ್ನು ಬೇಡುತ್ತಾರೆ. ದುಃಖ ನಿವಾರಣೆಗಾಗಿಯೂ ಬೇಡುತ್ತಾರೆ.

## ವಸುಗಳು

ದೇವತಾತ್ಮರು, ಗೋಕ್ಷೀರ ವೃದ್ಧಿಕಾರಕರು, ಮನಸ್ಸಿಗೆ ಸಾಧಕವಾದ ದೇಹ ಪುಷ್ಟಿಗೆ ಕ್ಷೀರಕೊಡುವವರು. ಇವರನ್ನು ಗೋಕ್ಷೀರಕ್ಕಾಗಿ ಪ್ರಾರ್ಥಿಸುತ್ತಾರೆ.

## ತ್ವಷ್ಟ

ಪ್ರೀತಿಯಿಂದ ಮಾನವರ ಇಷ್ಟಾರ್ಥ ಪೂರ್ಣ ಮಾಡುವವನು.

**ವಿಶ್ವಾಮಿತ್ರರು :** ಶ್ರೇಷ್ಠ ಕರ್ಮಕರ್ತರು, ಧನವಂತರು, ಸತ್ಯ ಸಂಕಲ್ಪರು, ಸರ್ವ ಪ್ರೇರಕರು, ನಾನಾ ರೂಪಿ, ದೇವಾತ್ಮರು, ಪ್ರಜೆಗಳನ್ನು ಸೃಷ್ಟಿಸಿ ಪೋಷಿಸುವವರು, ಅನ್ನದಾತರು, ಸಕಲವನ್ನು ವಿಭಾಗಿಸುವವರು, ಮಂಗಳಕರರು, ಜ್ಞಾನಿ, ದೇವಪತ್ನಿಯರೊಡನೆ ಯಜ್ಞಕ್ಕೆ ಬರುತ್ತಾರೆ. ಪ್ರಕಾಶಮಾನಿ, ಉಕ್ಕಿನ ಕೊಡಲಿ, ಕುಠಾರಗಳನ್ನು ಕೈಯಲ್ಲಿ ಹಿಡಿದು ನಿಶ್ಚಲನಾಗಿ ದೇವತೆಗಳ ಮಧ್ಯೆ ಕುಳಿತಿರುತ್ತಾರೆ.

## ಸೂರ್ಯದೇವ

ಸೂರ್ಯದೇವನು ಮನೋಹರ ಕಿರಣಗಳಿಂದ ಮೂರು ಲೋಕಗಳಲ್ಲೂ ಇದ್ದಾನೆ. ಮಿತಿಮೀರಿದ ತನ್ನ ತೇಜಸ್ಸನ್ನು ಪೃಥ್ವಿಗೆ ಹರಡುವುದಿಲ್ಲ. ಅದಿತಿಯು ಪೂಜಿಸುವ ಕಾಲದಲ್ಲಿ ಸೂರ್ಯನು ಉತ್ಪನ್ನನಾದನು. ಒಂದೇ ಸಮನಾದ ವೇಗವುಳ್ಳವನು. ಕರ್ಮಾನುಸಾರ ಅನೇಕ ರೂಪಗಳಿಂದ ಏಳು ವಿಧ ರಶ್ಮಿಗಳಿಂದ ಇರುವವನು. ತೇಜೋರೂಪಿ, ಪೂಜನೀಯ. ಸೂರ್ಯನ ಸಪ್ತಾಶ್ವಗಳು ದ್ಯಾವಾ ಪೃಥ್ವಿಗಳು ಇರುವವರೆಗೂ ಸಂಚರಿಸುತ್ತಾ ಇರುತ್ತವೆ. ಯಜ್ಞ ವೇದಿಕೆಯಲ್ಲಿ ನಾಲ್ಕು ಮೂಲೆಗಳಲ್ಲಿ ಅಗ್ನ್ಯಾದಿ ದೇವತೆಗಳು ತಮ್ಮ ಭಾಗದ, ಪೂಜೆ, ಹವಿಸ್ಸು, ಪೂಜೆ ಪಡೆಯುತ್ತಾರೆ.

<u>ಅತ್ರಿ, ಋಷಿಗಳು :</u> ಸೂರ್ಯನು ಇಷ್ಟಾರ್ಥಪ್ರದ. ಕಾಂತಿದರ್ಶಿ, ದೇವಶ್ರೇಷ್ಠ, ಸಂಚಾರಶೀಲ. ಸಕಲರಿಂದ ಸ್ತುತಿತನಾದವನು. ಸೂರ್ಯ ಅಥವಾ ಅಗ್ನಿ ರಶ್ಮಿಗಳು ಪರಸ್ಪರ ನಿಯಮಿತರಾಗಿ ಉತ್ತಮ ಪ್ರಸರಣದಿಂದ ಹೊಂದಿಕೊಂಡು ಯಜ್ಞ ಬೆಳೆಸಲು ಅಧೋಮುಖಿ ಪ್ರಸರಿಸುತ್ತಾರೆ. ಅಂತರಿಕ್ಷಸೀಮಾ ಪ್ರದೇಶದಿಂದ ಸಂಚರಿಸುತ್ತಾರೆ. 10 ದಿಕ್ಕುಗಳೂ ಸೂರ್ಯನನ್ನು ಪ್ರಚೋದಿಸುತ್ತವೆ. ರಥವು ಹೊಂಬಣ್ಣದ್ದು. ಪೂರ್ವದಿಂದ ಅಂತರಿಕ್ಷ ಪ್ರವೇಶಿಸಿ, ಸ್ಥಾಪಿತವಾಗಿ ಪಶ್ಚಿಮ ಭಾಗ ಆಕ್ರಮಿಸಿ ಸರ್ವವ್ಯಾಪಕವಾಗಿದೆ. ದಿಕ್ಕುಗಳು ಮಾತೃರೂಪಿ, ಅಂತರಿಕ್ಷವು ಪಿತೃರೂಪಿ. ಮಧ್ಯ ಸೂರ್ಯನು ತೇಜೋರೂಪದಿಂದ ಹರಡಿದ್ದಾನೆ. ಸ್ವಯಂ ಸಂಪಾದಿಸಿದ ತೇಜಸ್ಸು ಅಂತರಿಕ್ಷದಲ್ಲಿ ಮೇಘದ ಮೇಲ್ಭಾಗದಲ್ಲಿ ಉದಕವನ್ನು ಹರಡುತ್ತಾನೆ.

<u>ಭರದ್ವಾಜರು :</u> ಸೂರ್ಯದೇವನು ರಹಸ್ಯಾತ್ಮಕ ಉತ್ಪತ್ತಿಸ್ಥಾನ. ಜಗತ್ ಪ್ರಕಾಶಿಸುವವನು. ಸಕಲ ಮಾನವರ ಅವಸ್ಥೆಗಳನ್ನು ಪ್ರಕಾಶಿಸುವವನು. ಎಲ್ಲವನ್ನು ನೋಡುವ ಸ್ವಾಮಿ.

<u>ವಸಿಷ್ಠರು :</u> ಸೂರ್ಯದೇವನು ಪ್ರೇರಕ ಕಿರಣಗಳಿಂದ ಉದಕ ಸುರಿಯುವಂತೆ ಸೂರ್ಯನು ಮಾಡುತ್ತಾನೆ.

<u>ಕಾಣ್ವರು :</u> ಒಬ್ಬನೇ ಸೂರ್ಯನು. ವಿಶ್ವವನ್ನು ಪ್ರವೇಶಿಸಿ ಬೇರೆ ಬೇರೆ ರೂಪದಲ್ಲಿ ಉತ್ಪನ್ನನಾಗುತ್ತಾನೆ. ಸೂರ್ಯ ಚಂದ್ರರು ಅಹೋರಾತ್ರಿಗಳಿಗೆ ಅಧಿಪತಿಗಳು. ಅಂತರಿಕ್ಷಸ್ಥರು. ಜಗತ್ ಶ್ರೇಯಸ್ಸಿಗಾಗಿ ಪ್ರಜ್ವಲಿಸಲಿ.

<u>ವಿಭುಗಳು :</u> ಸೂರ್ಯದೇವನು ಇವರು ನದಿ ನಿರ್ಮಾತೃಗಳು.

## ಸೋಮದೇವ

ಉದಕಪಾಲಕ, ಸಾರ್ಥಕ ಜೀವಿ, ದೇವ ತೃಪ್ತಿಕಾರಕ, ಯಜ್ಞ ಸಂಪತ್ತುಳ್ಳವನು. ಉತ್ತಮ ರಶ್ಮಿಯವನು. ಯಜಮಾನನ ರಕ್ಷಕ. ಪ್ರಶಂಸನೀಯ, ಅಂತರಿಕ್ಷವನ್ನು ತಾನೇ ರಚಿಸಿದವನು ಮತ್ತು ದಾಟುವನು. ಅಗ್ನಿಯನ್ನು ನೀರಿನಲ್ಲಿ ನಡುಗುವಂತೆ ಮಾಡಿದವನು. ಇಂದ್ರ, ತ್ವಷ್ಟ, ವಾಯು; ಅಶ್ವಿನಿ, ಬೃಹಸ್ಪತಿ, ಉಷಾ, ಇವರನ್ನು ಯಜ್ಞಕ್ಕೆ ಕರೆತರುವವನು. ವಸತೀವರಿ ಉದಕ ಧರಿಸಿರುವವನು. ಅಂತರಿಕ್ಷ ವ್ಯಾಪಿ. ಉತ್ತಮ ವ್ಯವಹಾರಿ, ಯಜಮಾನನಿಗೆ ಧನ, ರಸ ನೀಡುತ್ತಾನೆ.

<u>ಅತ್ರಿ :</u> ಸೋಮದೇವನು ಸರ್ವದಾ ಎಚ್ಚರವಾಗಿರುವವನು. ಸಖಿತ್ವದೊಂದಿಗೆ ನಿಯೋಜಿತ ಸ್ಥಾನದಲ್ಲಿದ್ದು ಅಗ್ನಿಯ ಸಖಿತ್ವ ಹೊಂದಿದ್ದಾನೆ.

<u>ಕಾಣ್ವರು :</u> ಸೋಮದೇವನು ಸರ್ವವ್ಯಾಪಿ. ಹೊಂಬಣ್ಣದ ನಿತ್ಯ ತರುಣ. ರಾತ್ರಿಯ ನೇತೃ, ಸುವರ್ಣ ಆಯುಧಧಾರಿ.

## ಭಗ

<u>ಅತ್ರಿ, ಋಷಿಗಳು :</u> ಭಗನು ಸರ್ವಜ್ಞ, ಕರ್ಮ ರಕ್ಷಕ. <u>ಭರದ್ವಾಜರು :</u> ಭಗನು ಅಸುರರನ್ನು ಸೋಲಿಸಲು ಸಮರ್ಥನು. ಇವರಿಂದ ಅನ್ನ, ಧನ, ಸಂಪತ್ತು, ರಕ್ಷಣೆಯನ್ನು ಬೇಡುತ್ತಾರೆ.

## ನಿರ್ಋತಿ

ಅತ್ರಿ : ನಿರ್ಋತಿಯು ದೇಹವನ್ನು ಮುಪ್ಪಿನಿಂದ ರಕ್ಷಣೆ ಮಾಡಿ ದೇಹವನ್ನು ಪೋಷಣೆ ಮಾಡಿ ಉತ್ತಮ ಅನ್ನವನ್ನು ವೃದ್ಧಿ ಮಾಡುತ್ತಾನೆ.

## ದ್ಯಾವಾ ಪೃಥ್ವಿ

ದ್ಯಾವಾ ಪೃಥ್ವಿಗಳು ಮಿತ್ರರು ಮಳೆಗರೆದು ಯಜ್ಞ ಸುಗಮವಾಗಿಸುವವರು. ಹಿಂಸೆ ಪಾಪಗಳಿಂದ ರಕ್ಷಿಸುವವರು. ಇಂದ್ರನಿಂದ ರಕ್ಷಿತರಾಗಿದ್ದಾರೆ. ಅನೇಕ ಸಾಮಗ್ರಿಗಳಿಂದ ದೇವ ಮಾನವ ಪೋಷಕರು, ಉದಕ ಪ್ರವಹಿಸುವಂತೆ ಮಾಡುವವರು. ಸರ್ವವ್ಯಾಪಿಗಳು, ಜಗತ್ತಿಗೆ ಮಾತಾಪಿತೃಗಳು, ಯಜ್ಞಸ್ಥಾನದಲ್ಲಿರುವವರು. ವರುಣನನ್ನು ಪೂಜಿಸಿದರೆ ಉದಕ ಸುರಿಸುವವನು.

ಅತ್ರಿ : ಪೃಥ್ವಿಯು ಸಾರವತ್ತಳು, ಸಕಲ ನಿರ್ಮಾಪಕಳು, ಶಕ್ತಿಯುತಳು, ಆಪತ್ ನಿವಾರಕಳು, ಲೋಕಪಾಲಕರು, ಪ್ರಿಯವಾಕುಳ್ಳವಳು, ಉದಾರ ಹಸ್ತವುಳ್ಳವಳು, ಅಂತರಿಕ್ಷವು ಸ್ತಂಭದಂತೆ ದೃಢವಾಗಿ ನಿಂತಿದೆ.

ಭರದ್ವಾಜರು : ದ್ಯಾವಾ ಪೃಥ್ವಿಯು ಯಜಮಾನನಿಗೆ ಅಧಿಕ ಬೆಂಬಲ ನೀಡಲಿ.

ವಸಿಷ್ಠರು : ಪೃಥ್ವಿಯು ಹಿಂಸ ವರ್ಜಿತಳು, ಮಹಾತ್ಮಳು, ಪ್ರಾರ್ಥಿಸಿ ಕರೆಯಲ್ಪಡುವವಳು, ಎತ್ತರದ ಪರ್ವತದಲ್ಲಿ ವ್ಯಾಪಿಸಿದ್ದಾಳೆ, ಸಕಲ ಭೂತ ಜಾತಗಳನ್ನು ವಹಿಸುತ್ತಾಳೆ. ಗೋ ಸಮುಹಕ್ಕೆ ಮಾತೆ, ಕರ್ಮ ಪ್ರಶಂಸಿಸುತ್ತಾಳೆ. ಇವರಿಗೆ ಪೂಜೆ, ಹವಿಸ್ಸು, ಪ್ರಾರ್ಥನೆಗಳನ್ನು ಅರ್ಪಿಸಿ ಇವರಿಂದ ಅನ್ನ, ರಕ್ಷಣೆ, ಧನ, ಸಂಪತ್ತು, ಪುತ್ರ, ಪೌತ್ರರು, ಅಶ್ವ ಗೋವು, ಸುಖ ಸಂತೋಷಗಳನ್ನು ಬೇಡುತ್ತಾರೆ.

## ಚಂದ್ರ

ಚಂದ್ರನು ದ್ಯುಲೋಕ ಸಂಚಾರಿ, ಚಂದ್ರನ ಕಿರಣಗಳ ಮೂಲ ಸ್ಥಾನ ತಿಳಿಯದು. ಚಂದ್ರನಿಂದ ಮನಶ್ಶಾಂತಿ ಸಂತೋಷಗಳನ್ನು ಅಪೇಕ್ಷಿಸುತ್ತಾರೆ.

## ಬೃಹಸ್ಪತಿ

ಬೃಹಸ್ಪತಿಯು ಸುಖದಾತರು. ಮನುವಿನಂತೆ ವೃದ್ಧಿಕಾರಕರು.

ಅತ್ರಿ : ಬೃಹಸ್ಪತಿಯು ಯಜಮಾನನಿಗೆ ಸುಖದಾತರು. ಅನ್ನ - ಧನ ದಾತರು, ಅಶ್ವ, ಗೋವುಗಳನ್ನು ಕೊಡುತ್ತಾರೆ. ಸೃಷ್ಟಿಕರ್ತರು, ನೀಲ ರೂಪವುಳ್ಳವರು, ಮಹತ್ ರೂಪಿಗಳು, ಯಾಗಗೃಹದಲ್ಲಿ ಸ್ಥಾಪಿತರಾಗಿ ಪೂಜಿತರಾಗುತ್ತಾರೆ. ಇವರು ಹಿಂಸಕರನ್ನು ಓಡಿಸಲಿ, ಸ್ತ್ರೀಯರ ಗರ್ಭ ರಕ್ಷಿಸಲಿ, ಗೃಹದಲ್ಲಿ ಸುಖ, ಶಾಂತಿ ನೀಡಲಿ.

## ಋಭುಗಳು

ಅತ್ರಿ : ಋಭುಗಳು ಚಮಸಪಾತ್ರೆ ನಿರ್ಮಾಣದಿಂದ ಕರ್ಮವಂತರು, ದಾನಮನಸ್ಕರು, ನದಿ ನಿರ್ಮಾಪಕರು, ಕುಶಲ ಕರ್ಮಕ್ಕೆ ಸಿದ್ಧಹಸ್ತರು.

ವಸಿಷ್ಠರು : ಋಭುಗಳು ತೇಜಸ್ಸಿಗೆ ನಿವಾಸ ಭೂತರು, ಶಕ್ತಿಯುತರು, ಸ್ವರ್ಗ ನೋಡತಕ್ಕವರು, ಉತ್ತಮ ಕೆನ್ನೆಯವರು, ರಥವುಳ್ಳವರು, ಇವರಿಂದ ರಕ್ಷಣೆ, ಧನ, ಸಂಪತ್, ಸುಖ ಸಂತೋಷ, ವಸತಿಗಳನ್ನು ಬೇಡುತ್ತಾರೆ.

## ಸುಪರ್ಣ

ಸುಪರ್ಣಾಕ್ಷ ದೇವನು ಸರ್ವತ್ರ ಸಂಚಾರಿ, ಯಾರ ಸಹಾಯವೂ ಇಲ್ಲದೆ ಕಾರ್ಯನಿರ್ವಹಿಸುವವನು, ಪ್ರಾಣಿ ವರ್ಗವನ್ನು ಅನುಗ್ರಹ ಬುದ್ಧಿಯಿಂದ ನೋಡುವವನು. ವಾಗ್ದೇವತೆ ಸುಪರ್ಣರು ಪರಸ್ಪರ ಅವಲಂಬಿಗಳು, ಅಂತರಿಕ್ಷ ವ್ಯಾಪಿಗಳು, ಪ್ರಾಣಿ ವರ್ಗವನ್ನು ಪರಮಾತ್ಮನು ವಾಯು ರೂಪದಿಂದ ಪ್ರವೇಶಿಸಿ ಚೇತನಯುಕ್ತವನ್ನಾಗಿ ಮಾಡಿದ್ದಾನೆ.

# ಇಂದ್ರರು

ಇಂದ್ರರು ಮಾನಸಿಕ ವ್ಯಥೆಯಿಂದ ಪಾರು ಮಾಡುವವರು. ಸ್ತೋತ್ರ ಪ್ರಿಯರು, ನದಿ ಪ್ರವಹಿಸುವವರು, ಸೂರ್ಯನ ತೇಜಸ್ಸನ್ನು ಬೆಳಗಿಸುವವರು, ವಾಸಸ್ಥಾನ ದಯಪಾಲಿಸುವವರು, ಸಮಸ್ತ ಪಾಪಗಳನ್ನು ಕಳೆಯುವವರು, ಅದಿತಿ ಪುತ್ರರು, ಸಕಲ ದೇವತೆಗಳೊಳಗೂಡಿ ಸಹಾಯಕ್ಕೆ ಬರುವವರು, ಸೂರ್ಯ ರೂಪಿನಿಂದ ರಾತ್ರಿ ಉಷೆಯನ್ನು ಅನುಸರಿಸುತ್ತಾರೆ. ಇಂದ್ರನು ಉಷೆಗೆ ಪ್ರಕಾಶ ಕೊಡುವ ಸೂರ್ಯನೇ ಆಗಿದ್ದಾನೆ. ದ್ವಿಪಾದ / ಚತುಷ್ಪಾದಗಳ ಹಿತರಕ್ಷಣೆಗಾಗಿ ಅಂತರಿಕ್ಷ ಬೀಳದಂತೆ ಹಿಡಿದಿದ್ದಾನೆ. ಋಭುವು ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟನು. ಕುತ್ಸ ಋಷಿಯ ಹಿಂಸಕರನ್ನು ವಧಿಸಿದನು. ಮೇಘ ರೂಪಿ ಶುಷ್ಣಾಸುರನನ್ನು ಸಂಹರಿಸಿದನು. ವೃತ್ರಾಸುರನನ್ನು ಕೊಂದು ಭೂಮಿ ಆಕಾಶಗಳಿಗೆ ಸಂತಸ ತಂದನು. ಫಣಿಯು ಅಪಹರಿಸಿದ್ದ ಗೋವುಗಳನ್ನು ಬಿಡಿಸಿ ಹಿಂಸಕ ರಾಕ್ಷಸರನ್ನು ಕೊಂದು ನದಿಗೆ ಎಸೆದನು. ಹವಿಸ್ಸು ಕೊಟ್ಟಾಗ ತೃಪ್ತನಾಗಿ ಕೆಲಸ ಮಾಡುತ್ತಾನೆ.

ಇಂದ್ರನು ಸ್ತೋತ್ರಪ್ರಿಯ, ಧನಾಧಿಪತಿ, ಮಾನವರಿಗೆ ಇಷ್ಟಾರ್ಥ ಪೂರ್ತಿ ಮಾಡುವವನು, ಇಂದ್ರ ಸೋಮರು ಭ್ರಮಣಾತ್ಮಕ ಲೋಕವನ್ನು ನಿರ್ಮಿಸಿದ್ದಾರೆ. ಹವಿಸ್ಸಿನ ರುಚಿ ನೋಡಿ ಸೇವಿಸುತ್ತಾರೆ. ಆಹವನೀಯಾಗ್ನಿಯು ಉದಕದಲ್ಲಿರುವುದನ್ನು ತಿಳಿದಿದ್ದಾರೆ. ಇಂದ್ರನು ಯಜ್ಞ ಸ್ಥಾನಕ್ಕೆ ಬರುವಾಗ ಆಕರ್ಷಕ ಪ್ರಕಾಶವಾಗುತ್ತದೆ. ಅತ್ಯುತ್ತಮ ಯಜ್ಞವನ್ನು ಬಯಸುತ್ತಾನೆ. ಅಂತಹ ಯಜ್ಞ ಶಾಲೆಯು ಧನವಂತವಾಗಿರುವಂತೆ ಅನುಗ್ರಹಿಸುತ್ತಾನೆ. ಸ್ತುತಿಸಿದವರು ಹವಿಸ್ಸು ನೀಡಿದವರು ಯಜ್ಞಕರ್ತರು ಧನಕ್ಕೆ ಪಾತ್ರರೆಂದು ತಿಳಿದಿದ್ದಾನೆ. ಅವರ ಪಾಪಗಳನ್ನು ಬಿಡುಗಡೆ ಮಾಡುತ್ತಾನೆ. ಮರುತ್‌ಗಳಿಗಿಂತ ವೇಗವುಳ್ಳವನು. ಸೂರ್ಯನನ್ನು ಸ್ತುತಿಸುವವರು ಇಂದ್ರನ ರಕ್ಷಣೆ ಪಡೆಯುತ್ತಾರೆ. ಶಕ್ತಿಯುತನಾದ ಇಂದ್ರನಿಗೆ ದೇವತೆಗಳು ಹೆದರುತ್ತಾರೆ. ಇಂದ್ರನು ಸರ್ವವ್ಯಾಪಕ. ಯಜಮಾನರ ಎಲ್ಲಾ ಅವಯವಗಳಿಗೂ ಶಕ್ತಿ ನೀಡುತ್ತಾನೆ. ಶತ್ರು ನಾಶ ಮಾಡುತ್ತಾನೆ. ಹರಿ ಎಂಬ ಅಶ್ವದೊಡನೆ ಇರುವವನು. ಮಹಾಮಹಿಮ, ಭಯನಾಶಕ, ಶತ್ರುಗಳಿಂದ ರಕ್ಷಿಸುವವನು, ಅನ್ನದಾತ.

**ವಿಶ್ವಾಮಿತ್ರರು :** ಇಂದ್ರರು ದ್ಯಾವಾ ಪೃಥ್ವಿಗಳನ್ನು ತನ್ನ ಮಹಿಮೆಯಿಂದ ತುಂಬಿದ್ದಾನೆ. ಋಭುಗಳೊಂದಿಗೆ ಸುಖವಾಗಿದ್ದಾನೆ. ವೃಷ್ಟಿಕಾರಕ, ಸಕಲ ಜನೋದ್ಧಾರಕ, ಮಳೆ ಸುರಿಸುವವನು, ಇವರಿಂದ ಸಕಲ ಓಷಧಿಗಳು ರಸಪೂರ್ಣವಾಗಿವೆ. ಮಸತಿದಾಯಕರು.

**ಅತ್ರಿ ಋಷಿಗಳು :** ಇಂದ್ರನು ಆಶ್ರಯದಾತ, ಅನುಗ್ರಹಾತ್ಮಕ ಮನಸ್ಸಿನವನು, ಧನವಂತ, ವೃತ್ರ ಹಂತಕ, ಪೃಥ್ವಿಯ ಹಿತಕ್ಕಾಗಿ ಮಳೆ ಸುರಿಸಿ ನದಿ ಪ್ರವಾಹ ಉಂಟುಮಾಡುವವನು, ಸರ್ವಜ್ಞ, ಬಲಶಾಲಿ, ಶ್ರೇಷ್ಠ ಗಮನಿ, ಸ್ವರ್ಗ ಪ್ರಕಾಶಕ, ಪ್ರಾಣಿಗಳ ರಕ್ಷಕ, ಸಕಲ ದಿಕ್ಕುಗಳ ಅಂತರಾಳದಲ್ಲಿ ಉದಕಗಳು ವ್ಯಾಪಿಸುವಂತೆ ಮಾಡುತ್ತಾನೆ. ಆಸುರೀ ಶಕ್ತಿ ನಾಶಕನು. ಅವನ ದಿವ್ಯ ನಾಮವು ಸತ್ಯ ಲೋಕದಲ್ಲೂ ಇದೆ. ಅಂಗೀರಸರು ಸ್ತುತಿಸಿದರು. ಗೂಢವಾಗಿದ್ದ ಗೋವುಗಳನ್ನು ಕಂಡುಹಿಡಿದನು. ಸ್ತೋತ್ರಗಳು ಇಂದ್ರಾಗ್ನಿಗಳನ್ನು ರಕ್ಷಣಾರ್ಥವಾಗಿ ಕರೆಯುತ್ತವೆ. ಇಂದ್ರನು ಸೋಮದಿಂದ ಉತ್ತೇಜಿತನಾಗಿ ರಾಕ್ಷಸರು ಮತ್ತು ವಂಚಕರ ಮೇಲೆ ವಜ್ರಾಯುಧ ಪ್ರಯೋಗಿಸುತ್ತಾನೆ.

**ಭರದ್ವಾಜರು :** ಇಂದ್ರನು ಭಕ್ತರ ಸ್ತುತಿಯನ್ನು ಆಲಿಸುತ್ತಾನೆ, ಅನ್ನದಾತ, ಧನದಾತ, ಸುಖದಾತರು ಮತ್ತು ರಕ್ಷಕರು

**ವಸಿಷ್ಠರು :** ವಸಿಷ್ಠರು ಪ್ರೀತಿ ಪಾತ್ರ, ಅಶ್ವರಥದಲ್ಲಿ ಯಜ್ಞಕ್ಕೆ ಬರುತ್ತಾರೆ. ಕೀರ್ತಿವಂತ, ಬಲಶಾಲಿ, ಹರಿ ಎಂಬ ಹೆಸರಿನ ಅಶ್ವವುಳ್ಳವನು, ಮೂರು ಲೋಕಕ್ಕೂ ಆಪ್ತ, ದ್ಯುಲೋಕಸ್ಥ, ಮಹತ್ತಾದ ಧನವುಳ್ಳವನು, ಎರಡು ಬಾಹುಗಳಿಂದಲೂ ಧನ ಹಂಚುವನು, ವೃಷ್ಟಿಧಾರೆ ಸುರಿಸುವವನು.

# ಇಂದ್ರರು

**ಕಾಣ್ವರು :** ಇಂದ್ರನು ದ್ಯುಲೋಕ, ಪೃಥ್ವಿ, ಉದಕಗಳ ಉತ್ಪತ್ತಿ ಕ್ರಮ ವನ್ನು ಅರಿತಿದಿದ್ದಾನೆ. ಯಜಮಾನರ ಸ್ತುತಿಗಳನ್ನು ಕೇಳುತ್ತಾರೆ. ಪಾಪ ಪುಣ್ಯಗಳ ವಿಭಾಜಕ, ಉತ್ತಮ ಸ್ತುತಿ ಪಾತ್ರ, ಅದ್ವಿತೀಯ, ಕೈಯಲ್ಲಿ ವಜ್ರಾಯುಧ ಹಿಡಿದು ಅದರಿಂದ ಶತ್ರುಗಳನ್ನು, ರಾಕ್ಷಸರನ್ನು ಕೊಲ್ಲುತ್ತಾನೆ. ಇಂದ್ರನ ಮುಖಂಡತ್ವದಲ್ಲಿ ದೇವತೆಗಳೆಲ್ಲ ಯಜ್ಞ ಭೂಮಿಯಲ್ಲಿರುತ್ತಾರೆ.

ಇವರಿಂದ ಆಯುಸ್ಸು, ರೋಗನಾಶ, ರಕ್ಷಣೆ, ಧನ ಮತ್ತು ಸಂಪತ್ತು, ಪುತ್ರ ಪೌತ್ರರು, ಸುಖ ಸಂತೋಷ, ಅಶ್ವಗೋವು, ಕೀರ್ತಿ, ವಸತಿ, ಪಾಪನಾಶ, ಶತ್ರುನಾಶ, ಮತ್ತು ಸ್ವರ್ಗಕ್ಕಾಗಿ ಬೇಡುತ್ತಾರೆ.

# ಅಗ್ನಿ ದೇವರು

ಉಪಕಾರ ಬುದ್ಧಿಯುವರು, ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವವರು, ದೇವತೆಗಳಿಗೆ ಹವಿಸ್ಸು ತಲುಪಿಸುವವರು, ಸುಖದಾತರು, ನರರಿಂದ ಪೂಜೆ ಸ್ವೀಕರಿಸುವವರು, ಅನ್ನದಾತರು, ಇಷ್ಟದಾತರು, ಅಗ್ನಿಯು ಉದಕಪುತ್ರ. ದೇವತೆಗಳಿಗೆ ಸಮಾನ ಪ್ರೀತಿಪಾತ್ರ, ಅತಿಥಿಪ್ರಾಯ, ಓಷಧಿಯನ್ನು ಭೂಮಿಯ ಮೇಲೆ ವಿಶೇಷ ರೀತಿಯಿಂದ ಸೃಷ್ಟಿಸಿದ್ದಾರೆ. ಅನುಭವಿಸಬಹುದು. ಆಹವನೀಯಾಗ್ನಿ, ಮಳೆಗಾಲದಲ್ಲಿ ಕೆಳಮುಖನಾಗಿ ಸುರಿದು ಗ್ರೀಷ್ಮ ಋತುವಿನಲ್ಲಿ ಮೇಲ್ಮುಖನಾಗಿ ಹರಿದು ದೇವತೆಗಳಿಗೆ ತೃಪ್ತಿ ಉಂಟು ಮಾಡುತ್ತಾರೆ. ಕಪ್ಪು ಮೋಡಗಳಿಂದ ಇಳಿದ ನೀರು ಪುನಃ ಆದಿತ್ಯನನ್ನೇ ಸೇರುತ್ತದೆ. ಅಗ್ನಿಯು ಐಶ್ವರ್ಯದಾಯಕ. ಇವನು ಉದಕದಲ್ಲಿ ಅಡಗಿರುವುದು ಇಂದ್ರನಿಗೂ ಗೊತ್ತು. ಉತ್ತಮ ಯಜ್ಞವನ್ನು ಅಪೇಕ್ಷಿಸುತ್ತಾರೆ. ಯಜ್ಞ ಸ್ಥಾನದಲ್ಲಿ ಇಂದ್ರನಿಂದ ಪ್ರಕಾಶಿಸುತ್ತಾನೆ.

ಅಗ್ನಿಯು ಇತರ ಸಕಲ ಅಗ್ನಿಗಳೊಂದಿಗೆ, ಮರುತ್‌ಗಳೊಂದಿಗೆ ರಕ್ಷಣಾರ್ಥವಾಗಿ ಬರುತ್ತಾನೆ. ಅರ್ಘ್ಯ ಆಹುತಿಗಳಿಂದ ಪ್ರಜ್ವಲಿಸುತ್ತಾನೆ. ಪಾಪ ಪರಿಹರಿಸುತ್ತಾನೆ. ಸಂಪತ್ ಪ್ರದಾಯಕ. ಯಜ್ಞಕ್ಕೆ ಅಲಂಕಾರ ಪ್ರಾಯ. ಯಾಜ್ಞಕರು ಸಮೀಪಕ್ಕೆ ಬರಲು ಆಹ್ವಾನಿಸುತ್ತಾರೆ. ಅರಣಿ ಪುತ್ರ, ಮೇಲ್ಮುಖದವನು, ಅಗ್ನಿಯನ್ನು ತೇಜಸ್ವಿ, ಭರ್ಗ, ಜಾತವೇದ ಎಂದೂ ಕರೆಯುತ್ತಾರೆ. ಬಂಜೆ ಹಸುವಿನಲ್ಲಿ ಅಮೃತ ಸಮಾನ ಹಾಲು ಕರೆಯುವಂತೆ ಮಾಡಿದನು. ಪೂಜಾರ್ಹ, ಪ್ರಾಜ್ಞ, ಮೇಧಾವಿ, ಗೃಹ ಮತ್ತು ಯಜ್ಞಗಳೆರಡಲ್ಲೂ ಸ್ಥಾಪಿತನಾಗಿರುತ್ತಾನೆ. ಪಚ್ಚೆ ವರ್ಣದ ಪೈರುಗಳಲ್ಲಿ ಸಂಚರಿಸುವವನು, ಮೂರು ಲೋಕದ ದೇವತೆಗಳು ಅಗ್ನಿಯನ್ನು ನಮಸ್ಕರಿಸುತ್ತಾರೆ. ಇಂದ್ರ, ಮಿತ್ರ, ವರುಣ, ಭಗ, ಸವಿತೃಗಳು ಅಗ್ನಿಯ ಆದಿಪತ್ಯವನ್ನು ಒಪ್ಪಿಕೊಂಡಿದ್ದಾರೆ.

**ಅತ್ರಿ ಋಷಿಗಳು :** ಅಗ್ನಿಯು ನಿಷ್ಕಲ್ಮಷನಾದವನು. ಚಿತ್ತಾಕರ್ಷಕ ಸ್ತುತಿಗಳಿಂದ ಪೂಜಿತನಾಗತಕ್ಕವನು. ಸೋಮವನ್ನು ಸೇವಿಸುತ್ತಾ ಯಜ್ಞದಲ್ಲಿ ಜೀವದಾತನಾಗಿ ಋತ್ವಿಜರೊಡನೆ ಜ್ವಾಲೆಯಿಂದ ವೃದ್ಧಿಹೊಂದುತ್ತಾನೆ. ಅಗ್ನಿಯು ಸದ್ಯೋಜಾತ, ಕ್ಷಯ ರಹಿತ, ಓಷಧಿ ಮಧ್ಯೆ ಸ್ಥಾಪಿತನಾದವನು. ರಮಣೀಯ ತೇಜಸ್ವಿ, ತಮೋ ನಾಶಕ, ಶತ್ರು ನಾಶಕ. ದಿಕ್ಕುಗಳಿಗೆ ಹರಡಿದ ಜ್ವಾಲಾರೂಪಿ. ಧನಯುಕ್ತ, ಮಾರ್ಗದರ್ಶಕ, ವಸತಿದಾಯಕ.

**ಭರದ್ವಾಜರು :** ಅಗ್ನಿಯು ತರುಣ, ದ್ಯುಲೋಕ ಪುತ್ರ, ಹೊಂಬಣ್ಣದವನು, ಯಾಗಕ್ಕೆ ದೇವತೆಗಳನ್ನು ಬರ ಮಾಡುವವನು, ಯಜ್ಞ ಪ್ರದೇಶದಲ್ಲಿ ಪ್ರಕಾಶಿಸುವವನು, ದೇವದೂತ.

**ವಸಿಷ್ಠರು :** ಅಗ್ನಿಯು ಯಜ್ಞ ಪ್ರದೇಶದಲ್ಲಿ ಪ್ರಕಾಶಿಸುತ್ತಾನೆ. ಯಜಮಾನನ ಪರವಾಗಿ ದೇವತೆಗಳ ಕಡೆಗೆ ಬರುವ ದೂತ. ಊರ್ಧ್ವ ಮುಖ ಆವಿರ್ಭವಿಸುತ್ತಾನೆ. ಸ್ತುತಿ ಸೇವಿಸುತ್ತಾನೆ. ದ್ಯುಲೋಕದಿಂದ ಮಿತ್ರ, ವರುಣ, ಇಂದ್ರ, ಆರ್ಯಮ, ಆದಿ ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತಾನೆ. ಹವಿಸ್ಸುಳ್ಳ ಯಜಮಾನನ ಗೃಹದಲ್ಲಿ ಇರುವ ತನ್ನನ್ನು ಸಮೀಪಿಸುವವರಿಗೆ ಧನ ಕೊಡುತ್ತಾನೆ.

**ಕಾಣ್ವರು :** ಅಗ್ನಿಯು ಮೇಧಾವಿ, ದೇವತೆಗಳೊಡನೆ ಪ್ರಕಾಶಿಸುತ್ತಾ ಆಹವನೀಯ ಸ್ಥಾನಲಿದಲ್ಲಿ ಕುಳಿತಿರುತ್ತಾನೆ. ಸತ್ಯಸ್ವರೂಪಿ, ವಿದ್ಯುತಾದಿ ನಾನಾ ರೂಪಗಳಲ್ಲಿ ಪ್ರಜ್ವಲಿಸುತ್ತಾನೆ. ವೃಷ್ಟಿದಾಯಕ, ಭಕ್ತಿಯಿಂದ ಸಮೀಪಿಸಿದವರನ್ನು ಕೋಪವಿಲ್ಲದೆ ಸುಖಕರ ರಶ್ಮಿಗಳಿಂದ ನೋಡುತ್ತಾನೆ. ಅಗ್ನಿಯಿಂದ ರಕ್ಷಣೆ, ಧನ, ಸಂಪತ್ತು, ಅನ್ನ, ಬಲ, ಕೀರ್ತಿ, ವಸತಿಗಳನ್ನು ಬೇಡುತ್ತಾರೆ. 18

# ಆದಿತ್ಯ

ಆದಿತ್ಯನು ಬ್ರಹ್ಮಲೋಕ ಮಾರ್ಗದರ್ಶಕ. ಯುಗಾದಿಗಳಲ್ಲಿ ಅಗತ್ಯ ಆದರಣೀಯ, ದಾರಿದ್ರ ನಾಶಕ, ಸರ್ವತ್ರ ಸಂಚಾರಿ. ದ್ವಾದಶರಾಶಿಗಳು, ಮಂಡಲಾತ್ಮಕವಾಗಿ ಅಹೋ ರಾತ್ರಿಗಳೂ, ಪ್ರತಿ ಸಂವತ್ಸರದಲ್ಲಿ 2 ಅಯನಗಳು, 6 ಋತುಗಳು, 12 ತಿಂಗಳುಗಳು ಹಾಗೂ ಕಾಲಕಾಲಕ್ಕೆ ವಿವಿಧ ದೃಶ್ಯಗಳನ್ನು ಆದಿತ್ಯನು ಹೊಂದಿದ್ದಾನೆ. ನಾಭಿತ್ರಯದ ಏಕ ಚಕ್ರದ ಸೂರ್ಯನ ರಥವನ್ನು ಏಳು ಅಶ್ವಗಳು, ಏಕ ಪ್ರಕಾರವಾಗಿ ವಹಿಸುತ್ತವೆ. ಎಷ್ಟೇ ಕಾಲ ಕಳೆದರೂ ಚಕ್ರ, ಇರಚಗಳು ಸವೆಯುವುದಿಲ್ಲ, ನಿಯಮಿತವಾಗಿ, ಪ್ರತ್ಯೇಕವಾಗಿ, ಸ್ಥಿರವಾಗಿ, ಋತುಗಳು, ಜಗತ್ತಿನ ಶ್ರೇಯಸ್ಸಿಗಾಗಿ ಚಲಿಸುತ್ತವೆ. ಏಳು ರಶ್ಮಿಗಳು, ಏಳು ಸ್ವರಗಳಂತೆ ತಾದಾತ್ಮಭಾವದಿಂದ ಸೇರುತ್ತವೆ. ರಥವು ಅಧೋಮುಖವಾಗಿ ಹಾಗೂ ಊರ್ಧ್ವ ಮುಖವಾಗಿ ಚಲಿಸುತ್ತದೆ. ಆದಿತ್ಯ ರೂಪಿ ಪರಮೇಶ್ವನು ಅನುಗ್ರಹಾತ್ಮಕ ಬುದ್ಧಿಯಿಂದ ಪರಿಪಕ್ವ ಜ್ಞಾನಿಗಳಾದ ಯಾಜ್ಞಿಕರನ್ನು ತನ್ನ ಮಂಡಲದೊಳಗೆ ಪ್ರವೇಶಿಸುವಂತೆಯೂ ಮಾಡುತ್ತಾನೆ. ಆದಿತ್ಯನಿಂದ ಪ್ರಕಾಶ ಕರ್ಮವು ನಡೆಯುತ್ತದೆ. ಅನುಭವ ಪಡೆಯಬಹುದು, ರೂಪ ಕಾಣಿಸುವುದಿಲ್ಲ. ಸ್ತುತಿಕರ, ಉತ್ತಮ ಕಾರ್ಯ ಮಾಡುವವನು, ಪಾಪ ರಹಿತ, ಪ್ರಭೂತ ರಥದವನು, ಪೃಥ್ವಿಯ ಕ್ಷೀರವನ್ನು ದೇವಲೋಕ ಅಮೃತವನ್ನಾಗಿಸುವವನು.

<u>ವಿಶ್ವಾಮಿತ್ರರು :</u> ಆದಿತ್ಯನು ಸುವರ್ಣ ಹಸ್ತದವನು. ದ್ಯಾವಾ ಪೃಥ್ವಿಗಳ ಪುತ್ರ, ಆದಿತ್ಯನೇ ಸಂವತ್ಸರ, ಮೂರು ನದೀ ರೂಪ ಸ್ತ್ರೀಯರು ಸವನ ತ್ರಯಗಳಲ್ಲೂ ಇಳಿದುಬರುತ್ತಾರೆ. ಮಿತ್ರಾ ವರುಣ ಅಂತರಿಕ್ಷ, ದ್ಯಾವಾ ಪೃಥ್ವಿಗಳಿಗೆ ನಿಶ್ಚಿತ ಧನವನ್ನು ಆದಿತ್ಯನು ನೀಡುತ್ತಾನೆ.

<u>ಅತ್ರಿ, ಋಷಿಗಳು :</u> ಆದಿತ್ಯನು ಉದಯಿಸಿ ಕತ್ತಲೆ ನಿವಾರಣೆಯಾಗಿ ಮಾನವನ ವ್ಯವಹಾರಕ್ಕೆ ಆಗತ್ಯ ಅವಕಾಶ ಕಲ್ಪಿಸುತ್ತಾನೆ. ಲಘು ಗಮನಿ, ನಿತ್ಯ ತರುಣ, ಸಪ್ತ ಅಶ್ವಗಳೊಡನೆ, ರಶ್ಮಿಗಳೊಡನೆ ಸಂಚರಿಸುತ್ತಾ ಪ್ರಕಾಶಿಸುತ್ತಾನೆ. ಪ್ರಭಾವಯುತ, ಅಶ್ವರಥ ಯೋಜಿತವಾದಾಗ ಸೂರ್ಯನು ಉದಕ ಸ್ಥಾನದಲ್ಲಿ ಪ್ರಾದುರ್ಭವಿಸುತ್ತಾನೆ. ಆದಿತ್ಯ ಸೂರ್ಯರ ಅನುಗ್ರಹದಿಂದ ಉದಕಗಳು ಅಧೋಮುಖ ಹರಿದವು. ನದಿಯು ಪ್ರವಾಹದಿಂದ ಹರಿದವು. ಆದಿತ್ಯ ಮಂಡಲ ಆಶ್ರಯದಿಂದಲೇ ಉದಕ ಸ್ಥಿರವಾಗಿರುವುದು, ನದಿ ಪ್ರವಾಹ ಉಂಟಾಗಿರುವುದು, ಅಹೋ ರಾತ್ರಿಗಳು ಸಮಾನ ಬಂಧುಗಳಾಗಿರುವುದು, ಯಜ್ಞ ಸ್ಥಾನದಲ್ಲಿದ್ದು ಅನ್ನ, ಗೃಹ, ಧನ ಕೊಡುತ್ತಾನೆ. ಇವರಿಂದ ರಕ್ಷಣೆ, ಧನ, ಸಂಪತ್ತು, ಪುತ್ರ ಪೌತ್ರರು, ಗೋವು, ವಸತಿ ಸೌಕರ್ಯಗಳು, ಐಶ್ವರ್ಯ ಎಲ್ಲಾ ದೊರೆಯುತ್ತವೆ.

# ಉಷಾ ದೇವಿ

ಉಷಾದೇವಿಯು ಸುಖದಾತರು, ಅನ್ನವಂತರು, ಧನವಂತರು, ಕತ್ತಲು ನಾಶ ಮಾಡುವವರು, ಪಾಪಗಳಿಂದ ರಕ್ಷಣೆ ಮಾಡುವವರು, ಧನ ಯುಕ್ತಳು, ಯಾಗ ಮುಕ್ತಳು, ಪಾಪ ನಾಶಕಳು, ದೇವ ಪೂಜಾ ಸಮಯದಲ್ಲಿ ಕತ್ತಲು ನಾಶ ಮಾಡುತ್ತಾಳೆ. ಸೂರ್ಯ ಕಿರಣಗಳೊಂದಿಗೆ ಸೇರಿ ಪ್ರಕಾಶಿಸುತ್ತಾ ಅನ್ನ, ಧನ ಕೊಡುತ್ತಾ ಕ್ರೋಧವನ್ನು ನಾಶ ಮಾಡುತ್ತಾ ಆವಿರ್ಭವಿಸುತ್ತಾಳೆ. ಉಷಸ್ ಸೃಷ್ಟಿಸುವ ಸೂರ್ಯನು ಶ್ರೇಯಸ್ಸಿಗಾಗಿ ಪ್ರಜ್ವಲಿಸಲಿ. ಯಜ್ಞಕ್ಕೆ ಬರಲಿ, ಅನ್ನ ಅನುಗ್ರಹಿಸಲಿ.

<u>ಅತ್ರಿ, ಋಷಿಗಳು :</u> ಉಷೆಯು ರಶ್ಮಿಗಳಿಗೆ ಜನನಿ. ಸೂರ್ಯೋದಯ ಕಾಲದಲ್ಲಿ ಆವಿರ್ಭವಿಸುತ್ತಾಳೆ. ಸರ್ವತ್ರ ಪ್ರಸರಿಸುತ್ತಾಳೆ, ಜಗನ್ಮಾತೆ, ನಿತ್ಯ ಕರ್ಮಿ, ಸ್ತುತಿಯುಕ್ತಳು, ಜಗತ್ತನ್ನು ಸೇವಿಸುತ್ತಾ ಪಿತೃಗಳೊಡನೆ, ಯಾಗ ಗೃಹದಲ್ಲಿ ಪ್ರಾರ್ಥಿತಳಾಗಿದ್ದಾಳೆ. ಎಲ್ಲಾ ಪ್ರಾಣಿಗಳನ್ನು ಆಯಾಯ ಕರ್ಮಗಳಿಗೆ ನಿಯೋಜಿಸುತ್ತಾಳೆ, ರಶ್ಮಿಗಳು ಸಂಚಾರ ಸ್ವಭಾವದವು, ಸೂರ್ಯ ಮಂಡಲ ಆಶ್ರಯಿಗಳು, ಅಹಸ್ಸು, ಪ್ರಕಾಶಿಸುವುದು ಇದರ ಕರ್ಮ, ಸೂರ್ಯ ಪತ್ನಿ ರೂಪದವು ರಶ್ಮಿಗಳು. ಯಜಮಾನನಿಗೆ ಅಭಿಮುಖವಾಗಿ ಪ್ರಸರಿಸುತ್ತವೆ. ಇವು ಒಂದೇ ರೂಪದವು, ಮಾನವನು ಹಿಂದಿನವುಗಳನ್ನು ವಿಸರ್ಜಿಸುತ್ತಾ ಮುಂದಿನವುಗಳೊಂದಿಗೆ ಅಭಿವೃದ್ಧಿ ಹೊಂದುತ್ತಾನೆ.

<u>ವಸಿಷ್ಠರು :</u> ಉಷೆಯು ಸೇವಿಸುವ ಪ್ರಜೆಗಳಿಗೆ ಕ್ಷೇಮಕಾರಕಳು, ಯಜಮಾನ ದಂಪತಿಗಳಿಗಾಗಿ ಯಜ್ಞಾಭಿಮುಖಳಾಗುತ್ತಾಳೆ. ಅವರವರ ಕರ್ಮಗಳಿಗೆ ಅವರವರುಗಳನ್ನು ನಿಯೋಜಿಸಲಿ.

## ಅಶ್ವಿನಿ ದೇವತೆ

ಅಶ್ವಿನಿ ದೇವತೆಯು ಸಕಲ ಧನ ಸ್ವಾಮಿಗಳು, ಶತ್ರು ನಾಶಕರು, ರೋಗ ನಾಶಕರು, ಸ್ವರ್ಗದ ಹಾದಿಯಲ್ಲಿ ವೃಷ್ಟಿ ತರುವವರು, ಯಜ್ಞ ರಕ್ಷಣೆ ಮಾಡುವವರು, ಯಜ್ಞವನ್ನು ಹಿಂಸಾ ರಹಿತವನ್ನಾಗಿ ಮಾಡುವವರು, ಇಷ್ಟಾರ್ಥ ಪ್ರದರು, ಸುಖವನ್ನು ಕೊಡುವವರು, ಇವರು ರುದ್ರ ಪುತ್ರರು, ಕಾಂತಿಯುತರು, ಸ್ತೋತ್ರಗಳಿಂದ, ಯಾಗಗಳಿಂದ ತೃಪ್ತಿಗೊಂಡು ಭಕ್ತರನ್ನು ಸಂತೋಷಗೊಳಿಸುತ್ತಾರೆ. ಅನುಗ್ರಹ ಬುದ್ಧಿಯವರು, ಇವರು ಧನ, ಉದಕಗಳಿಗೆ ಒಡೆಯರು.

<u>ವಿಶ್ವಾಮಿತ್ರರು :</u> ಅಶ್ವಿನಿ ದೇವತೆಗಳು ಇತರರಿಂದ ಹಿಂಸಿತರಾಗದವರು, ದೇವ ಸಂಚಾರ ಮಾರ್ಗದಲ್ಲಿ ಯಜ್ಞ ಕರ್ಮಗಳಲ್ಲಿ ಭಾಗವಹಿಸುತ್ತಾರೆ.

<u>ಅತ್ರಿ ಋಷಿಗಳು :</u> ಅಶ್ವಿನಿ ದೇವತೆಗಳು ವಾಯು ವೇಗದ ರಥವುಳ್ಳವರು, ಮರಣ ಧರ್ಮ ರಹಿತರು, ಯಜಮಾನನಿಗೆ ಸಮಸ್ತ ಕಲ್ಯಾಣಗಳನ್ನು ಒದಗಿಸುವವರು, ಅನ್ನ, ಭೋಗ ಯೋಗ್ಯ ವಸ್ತುಗಳನ್ನು ಕೊಡುವವರು.

<u>ಭರದ್ವಾಜರು :</u> ಅಶ್ವಿನಿ ದೇವತೆಗಳು ರಥದಲ್ಲಿ ಯಜಮಾನರ ಇಷ್ಟಾರ್ಥ ಸಲ್ಲಿಸಲು ಬರುವವರು, ನೇತೃಗಳು, ದುಃಖ: ಅಂಧಕಾರವನ್ನು ನಾಶ ಮಾಡುವವರು.

<u>ಕಾಣ್ವರು :</u> ಅಶ್ವಿನಿ ದೇವತೆಗಳು ತಮ್ಮ ಅಶ್ವಗಳೊಡನೆ ಸರ್ವತ್ರ ಸಂಚರಿಸುತ್ತಾರೆ, ಹೊರ ಸಂಚಾರ ಕಾಲದಲ್ಲಿ ಇಬ್ಬರು ಪುರುಷರು ಒಂದೇ ಸ್ತ್ರೀಯೊಂದಿಗೆ ಸಂಚರಿಸುವಂತೆ ಒಟ್ಟಿಗೆ ಸಂಚರಿಸುತ್ತಾರೆ.

ಇವರಿಂದ ರೋಗನಿವಾರಣೆಗಾಗಿ, ದಾನ ಯೋಗ್ಯತೆಗಾಗಿ, ಸುಖಕ್ಕಾಗಿ, ರಕ್ಷಣೆಗಾಗಿ ಬೇಡುತ್ತಾರೆ ಮತ್ತು ದುಷ್ಟರ ಕ್ರೋಧವನ್ನು ನಾಶ ಮಾಡುವುದಕ್ಕಾಗಿ ಪ್ರಾರ್ಥಿಸುತ್ತಾರೆ.

## ಮರುತ್ ದೇವತೆಗಳು

ಮರುತ್‌ಗಳು ಪ್ರಶ್ನಿ ಪುತ್ರರು, ಜಿಂಕೆ ವಾಹನದವರು, ಯಜ್ಞ ಸಂಚಾರಿಗಳು, ನಾಲಿಗೆಯಲ್ಲಿ ಅಗ್ನಿ ಹೊಂದಿರುವವರು, ಎಲ್ಲವನ್ನು ಗಮನಿಸುವ ಸೂರ್ಯ ಕಾಂತಿಯುತರು, ಬಲಶಾಲಿಗಳು, ಶತ್ರು ಭಕ್ಷಕರು, ಯಜಮಾನನ ರಕ್ಷಣೆ ಮಾಡುತ್ತಾರೆ. ಪಾಪ ಪರಿಹರಿಸುತ್ತಾರೆ. ರಾಕ್ಷಸರನ್ನು ಓಡಿಸುತ್ತಾರೆ. ಉತ್ತಮ ಆಹ್ವಾನಕ್ಕೆ ಪಾತ್ರರು, ಧನ ಪೋಷಕರು, ಅನ್ನ ನೀಡುವವರು. ಇಷ್ಟಾರ್ಥ ಪ್ರದರು,-ಮೇಘಕ್ಕೆ ಆಶ್ರಯರು, ಆಕಾಶ ಗಮನವುಳ್ಳವರು, ಇಂದ್ರಾದಿಗಳೂ ಅವರ ಕರ್ತವ್ಯವನ್ನು ಇವರಿಂದ ತಿಳಿಯುತ್ತಾರೆ.

<u>ವಿಶ್ವಾಮಿತ್ರರು :</u> ಮರುತ್‌ಗಳು ಉದಕ ಉತ್ಪನ್ನರು, ಯಜ್ಞಾರ್ಹರು.

<u>ಭರದ್ವಾಜರು :</u> ಮರುತ್‌ಗಳು ನಿತ್ಯ ತರುಣರು, ಸ್ತುತಿಗೆ ಅಭಿಮುಖರು, ರುದ್ರ ಪುತ್ರರು, ವಸತಿ ದಾಯಕರು, ಮರುತ್‌ಗಳು ಬರುವಾಗ ಸಕಲ ಭೂತ ಜಾತಗಳು ಕಂಪಿಸುತ್ತವೆ.

ಇವರಿಂದ ಉತ್ತಮ ವಾಸಗೃಹ ಹೊಸದನ, ಇರುವ ದನದ ರಕ್ಷಣೆ, ಪುತ್ರ ಪೌತ್ರರ ರಕ್ಷಣೆಗಳನ್ನು ಬೇಡುತ್ತಾರೆ.

## ಪೂಷನ್

ಯಜ್ಞ ರಕ್ಷಣೆ ಮಾಡುವವರು, ಮಾರ್ಗದರ್ಶಕರು, ಅನ್ನ, ಔಷಧಿ, ಉದಕ, ವೃಕ್ಷ, ಪೃಥ್ವಿ, ಪರ್ವತಗಳನ್ನು ಉತ್ಪತ್ತಿ ಮಾಡುವವರು. ಸೂರ್ಯನನ್ನು ಉನ್ನತ ಸ್ಥಾನದಲ್ಲಿ ನಿಲ್ಲಿಸಿದವರು, ಪೃಥ್ವಿಯಲ್ಲಿ ಯಾಗವು ವಿಸ್ತಾರವಾಗುವಂತೆ ಮಾಡುವವರು.

<u>ಭರದ್ವಾಜರು :</u> ಪೂಷನ್‌ನು ಉತ್ತಮ ಪಾಲಕರು, ಸುಖಕಾರಕರು.

<u>ವಸಿಷ್ಠರು :</u> ಪೂಷನ್‌ನನ್ನು ಸೇವಿಸುವವರು ಯಜ್ಞಾರ್ಹನಾಗುತ್ತಾರೆ.

<u>ಕಾಣ್ವರು :</u> ಪೂಷನ್‌ನು ಯಜಮಾನನಿಗಾಗಿ ಸನ್ಮಾರ್ಗಗಳನ್ನು ರಕ್ಷಿಸುತ್ತಾನೆ. ದ್ಯಾವಾ ಪೃಥ್ವಿಗಳ ನಡುವೆ ಸಕಲ ಧನವನ್ನು ಅರಿತಿದ್ದಾನೆ. ಯಾರೂ ತೊಂದರೆ ಮಾಡದಿರಲಿ, ನಷ್ಟ, ಧನ ಸಿಗುವಂತೆ ಮಾಡಲಿ, ಧನ ಸಂಪತ್ ರಕ್ಷಿಸಲಿ.

## ಪರ್ಜನ್ಯ

ಇಂದ್ರನು ಪರ್ಜನ್ಯ ರೂಪದಲ್ಲಿ ಸಕಲ ಲೋಕಗಳನ್ನು ವೃಷ್ಟಿಯಿಂದ ತೋಯಿಸುತ್ತಾನೆ.

ಭರದ್ವಾಜರು: ಪರ್ಜನ್ಯನು ವೃಷ್ಟಿದಾಯಕ. ಓಷಧಿಗಳ ಮೂಲಕ ಸುಖದಾಯಕ. ಮೇಘಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನು. ಅನ್ನವಂತ.

ವಸಿಷ್ಠರು: ಪರ್ಜನ್ಯನು ದ್ಯಾವಾಪೃಥ್ವಿಗಳನ್ನು ಪ್ರಕಾಶಿಸುತ್ತಾನೆ. ವಿದ್ಯುತ್‌ನಿಂದ ಘರ್ಜಿಸುತ್ತಾನೆ. ಆದಿತ್ಯಸ್ಥಾನಿ. ಓಷಧಿಗಳ ಮೂಲಕ ಸುಖದಾತನಾಗಿರಲಿ.

## ಮಿತ್ರಾವರುಣರು

ಮಿತ್ರಾವರುಣರು ಉದಕದಾತರು, ಹವಿಸ್ಸು, ನಮಸ್ಕಾರಗಳಿಂದ ಪ್ರಾರ್ಥಿಸುತ್ತಾರೆ. ಲೋಪವಿಲ್ಲದೆ ಶ್ರದ್ಧೆಯಿಂದ ಜಗತ್ತಿನ ನಿರ್ವಹಣಾ ಕಾರ್ಯ ಪ್ರಪಂಚಕ್ಕೆ ಧನ ನಿರ್ವಹಿಸುವ ಕಾರ್ಯ ತತ್ಪರರಾಗಿದ್ದಾರೆ. ಧನವಂತರು ಮತ್ತು ಧನದಾತರು. ಯಾಜ್ಞಿಕರಿಗೆ ಪ್ರಿಯರಾದವರು, ಕರ್ಮಗಳು ನಿರ್ವಿಘ್ನವಾಗುವಂತೆ ಮಾಡುತ್ತಾ ಜೊತೆಯಲ್ಲೇ ಇರುತ್ತಾರೆ. ಲೋಕಪ್ರಭುಗಳು, ಕರ್ತವ್ಯವನ್ನು ಮರೆಯುವವರಲ್ಲ, ಅಗ್ನಿ ತತ್ವವನ್ನು ಯಾಜ್ಞಕರು ಅರಿತಿದ್ದಾರೆ. ಇವರು ಅದಿತಿ ಪುತ್ರರು, ರಕ್ಷಕರು, ಮಾರ್ಗದರ್ಶಕರು, ಮಾನವರನ್ನು ಒಳ್ಳೆಯ ಮಾರ್ಗದಲ್ಲಿ ಕೊಂಡೊಯ್ಯುವವರು, ವಸತಿ ದಾಯಕರು, ಸರ್ವ ವ್ಯಾಪಕರು, ಶತ್ರುಗಳಿಂದ ಕಾಪಾಡುವವರು, ಅಪೇಕ್ಷಿತ ಸ್ಥಳಕ್ಕೆ ಕರೆದೊಯ್ಯುವವರು.

ಭರದ್ವಾಜರು: ಮಿತ್ರಾ ವರುಣರು ದೇವ ಧನವುಳ್ಳವರು, ಉತ್ತಮ ಕರ್ಮ ಬಲವುಳ್ಳವರು, ಅನ್ನರೂಪ ದೇವತೆಗಳು, ಸತ್ಯಾತ್ಮಕರು, ಸ್ತುತಿಗೆ ಒಡೆಯರು, ಪಾಪನಾಶಕರು.

ಕಾಣ್ವರು: ಮಿತ್ರಾವರುಣರು ಅದಿತಿ ಪುತ್ರರು, ಸಕಲ ಲೋಕ ರಕ್ಷಕರು, ಸ್ಥಾವರ, ಜಂಗಮ ಜಗತ್ತನ್ನು ತಿಳಿದವರು, ಕರ್ಮ ನಿಯಾಮಕರು, ಕುಳಿತಲ್ಲೇ ತಮ್ಮ ಸಾರ್ವಭೌಮತ್ವವನ್ನು ಪ್ರಕಟಿಸುವವರು, ಕಣ್ಣನ್ನು ಪ್ರೇರೇಪಿಸುವವರು.

## ಅಹೋರಾತ್ರಿ, ದೇವತೆಗಳು

ಭರದ್ವಾಜರು: ಅಹೋರಾತ್ರ ದೇವತೆಗಳು ಬೇರೆ ಬೇರೆ ಸಂಚರಿಸುತ್ತಾರೆ. ಹೊಂಬಣ್ಣದ ಸೂರ್ಯ ಪುತ್ರಿಯರು, ಹಗಲಲ್ಲಿ ಸೂರ್ಯನೊಂದಿಗೆ, ರಾತ್ರಿಯಲ್ಲಿ ನಕ್ಷತ್ರಗಳಿಂದ ಶೋಭಿಸುತ್ತಾರೆ.

## ಸಿಂಧು ದೇವತೆ

ಸಿಂಧು ದೇವತೆಯು ಜಲಾಭಿಮಾನಿ ದೇವತೆ.

ಭರದ್ವಾಜರು: ನದಿ ಉದಕಾಭಿಮಾನಿಗಳು, ಆರೋಗ್ಯದಾತರು, ಮಾನವ ಹಿತಕಾರಿಗಳು, ಪುತ್ರ, ಪೌತ್ರರನ್ನು ರಕ್ಷಿಸುವವರು, ದುಃಖ ನಿವಾರಣೆ ಮಾಡುವವರು, ಸುಖ ಕರುಣಿಸುವವರು. ಇವರು ರಕ್ಷಿಸಲಿ, ಓಷಧಿ ಅನ್ನ, ಧನ ನೀಡಲಿ. ಸ್ನಾನ ಪಾನಗಳಿಗೆ ಹಿತಕರರಾಗಿರಲಿ.

## ಮಾಧ್ಯಮಿಕ

ಇವಳು ಅಂತರಿಕ್ಷಸ್ಥಳು. ಅಪರಿಮಿತ ವ್ಯಾಪ್ತಿ ಹೊಂದಿದ್ದಾಳೆ. ಮೇಘ ಉತ್ಪತ್ತಿ, ಪುಷ್ಟಿ, ಸಸ್ಯಗಳಿಗೆ ಉದಕ ಪ್ರಸರಣವಾಗುತ್ತಿದೆ. ಇವರು ಧನಪ್ರದರು.

## ಪರ್ವತಾಭಿಮಾನಿ ದೇವತೆಗಳು

ಇವರು ನಿಶ್ಚಲ ಸ್ಥಾನಿಗಳು, ಸ್ತೋತ್ರಪ್ರಿಯರು, ಪರ್ವತ ದೇವನು ಸ್ತುತಿಯೋಗ್ಯ, ಸಂಪತ್ತನ್ನು ಯಜಮಾನನಿಗೆ ಕೊಡುವವನು, ನಮ್ಮ ಪಾಪಗಳನ್ನು ನಾಶಮಾಡುತ್ತಾರೆ. ಶತ್ರುಗಳನ್ನು ನಾಶ ಮಾಡುತ್ತಾರೆ. ಇವರಿಂದ ಶತ್ರುನಾಶ, ಪಾಪನಾಶ ಮಾಡಲು ಮತ್ತು ಸಂಪತ್ತುಗಳಿಗಾಗಿ ಪ್ರಾರ್ಥಿಸುತ್ತಾರೆ.

## ಮೃತ್ಯುದೇವತೆ

ಯಜಮಾನನಿಗೆ ಕೆಡಕು ಮಾಡದವಳು, ಸರ್ವಭಕ್ಷಕ, ಪಿಶಾಚಗಳನ್ನು ಓಡಿಸುವವಳು, ಕೆಟ್ಟ ಕನಸಿನ ಫಲ ತಗಲದಂತೆ ಮಾಡುವವಳು.

॥ ಓಂ ಶ್ರೀ ಮಹಾಗಣಪತಯೇ ನಮ: ॥

ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।
ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥

ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।
ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ ಸರಸ್ವತಿ ಭಾರತಿ, ಉಮಾ ಗಾಯತ್ರಿ,
ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು
ಅವರ ಪರಿವಾರದವರಿಗೆ ನಮೋ ನಮ: ।

ಋಗ್ವೇದ ದಂಸ್ಕಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ
ಇವರುಗಳಿಗೆ ನಮಸ್ಕಾರಗಳು

# ''ಅಶ್ವಿನೀ ದೇವತೆಗಳು''

ಋಗ್ವೇದದಲ್ಲಿ ಒಂಭತ್ತನೆಯ ಮಂಡಲ ಬಿಟ್ಟುಉಳಿದ ಮಂಡಲಗಳಿಂದ
ಸುಮಾರು 57 ಸೂಕ್ತಗಳನ್ನು ಆಧರಿಸಿ ಆರಿಸಿ ತೆಗೆಯಲಾಗಿದೆ

1. ಅಶ್ವಿನೀ ದೇವತೆಗಳ ಸ್ತೋತ್ರಗಳು
2. ಅಶ್ವಿನೀ ದೇವತೆಗಳ ರಥದ ವರ್ಣನೆಗಳು
3. ಆಶ್ರಮಗಳಲ್ಲಿ ಅಶ್ವಿನಿ ದೇವತೆಗಳಿಗಾಗಿ ಕಾರ್ಯಕ್ರಮಗಳು
4. ಅಶ್ವಿನೀ ದೇವತೆಗಳಲ್ಲಿ ಋಷಿಗಳ ಪ್ರಾರ್ಥನೆಗಳು

ಒಂದೊಂದು ವಿಭಾಗದಲ್ಲೂ ಬೇರೆ ಬೇರೆ ಋಷಿಗಳು ಹೇಳಿರುವುದನ್ನು
ಬೇರೆ ಬೇರೆಯಾಗಿಯೇ ಬರೆಯಲಾಗಿದೆ.

**ಋಷಿಗಳು :** ಅಗಸ್ತ್ಯರು, ವಸಿಷ್ಠರು, ವಾಮನರು, ವಿಶ್ವಾಮಿತ್ರರು, ಗೃತ್ಸಮದರು,
ಆಂಗೀರಸರು, ಅತ್ರಿ ಋಷಿಗಳು, ಭರಧ್ವಾಜರು ಮತ್ತು ಕಾಣ್ವರು.

ಕೃತಜ್ಞತೆ :
ಎಸ್. ಸೂರ್ಯನಾರಾಯಣ ಕಲ್ಲಳ್ಳಿ, ಬೆಂಗಳೂರು - 560042
ಇವರಿಂದ ರಚಿತವಾದ ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಅವರ ಅನುಮತಿಯ
ಮೇರೆಗೆ ಈ ಕಿರುಹೊತ್ತಿಗೆಯನ್ನು ತಯಾರಿಸಲಾಗಿದೆ.

(ಎನ್.ಆರ್.ನಂಜುಂಡಯ್ಯ)

ದಿನಾಂಕ : 01.01.2001

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# " ಅಶ್ವಿನೀ ದೇವತೆಗಳು "

## ಸ್ತೋತ್ರ ವಿಭಾಗ

### ಅಗಸ್ತ್ಯ ಋಷಿಗಳಿಂದ

ದ್ಯಾವಾ ಪೃಥ್ವಿಗಳನ್ನು ಸಮರ್ಥವಾಗುವಂತೆ ಮಾಡಿದ್ದಾರೆ. ಅಂತರಿಕ್ಷ, ಸ್ವರ್ಗ ಜನ್ಯರು, ಅಗ್ನಿಯನ್ನು ಉದಕದಂತೆ ತಣ್ಣಗೆ ಮಾಡಿದ್ದಾರೆ. ಗೋವು, ಕಡಸುಗಳಲ್ಲಿ ಕ್ಷೀರಾಭಿವೃದ್ಧಿ ಮಾಡಿದ್ದಾರೆ. ಒಬ್ಬರು ಸೂರ್ಯನಂತೆ ಮತ್ತೊಬ್ಬರು ಚಂದ್ರನಂತೆ, ಇವರು ಆದಿತ್ಯನ ಮೊಮ್ಮಕ್ಕಳು. ದೇವಮಾರ್ಗದಲ್ಲಿ ಯಜ್ಞಕ್ಕೆ ಬರುತ್ತಾರೆ. ಇವರ ಅನುಗ್ರಹದಿಂದ ಯಜಮಾನರು ನಾನಾ ತೊಂದರೆಗಳಿಂದ ಪಾರಾಗಿದ್ದಾರೆ.

ಋಷಿಗಳು ನಾನಾ ಪ್ರಯೋಜನಗಳನ್ನು ಪಡೆದಿದ್ದಾರೆ, ಇವರು ಪುನಃ ಪುನಃ ಸ್ತುತಿತರಾಗಿ ಪ್ರಪಂಚದ ರಕ್ಷಣೆ ಮಾಡುತ್ತಾರೆ. ಇದು ವೇದವಾಕ್ಯ , ಪಾಪನಾಶಕ , ಸ್ತುತಿಗಳಿಂದ ತೃಪ್ತರಾಗಿ ಅನುಗ್ರಹಿಸುತ್ತಾರೆ.

### ವಸಿಷ್ಠ ಋಷಿಗಳಿಂದ

ಶ್ರೇಷ್ಠ ದೇವತಾತ್ಮರು, ಸುಂದರ ರೂಪರು, ನಿತ್ಯ ತರುಣರು, ಕರ್ಮ ವೀಕ್ಷಕರು, ಮಧು ವಿದ್ಯೆ ಅರಿತವರು, ಸತ್ಯಸ್ವರೂಪರು, ಸ್ತುತಿ ಪಾತ್ರರು, ಶತ್ರು ನಾಶಕರು, ಇಷ್ಟಾರ್ಥ ಪ್ರದರು, ಸೋಮಪಾನಾರ್ಹರು, ಸೋಮ ಹಿಂಡುವ ಕಾಲದಲ್ಲಿ ರಕ್ಷಣೆ ನೀಡುವವರು, ಯಜ್ಞ ಕರ್ಮ ಪಾಲಕರು, ಋತ್ವಿಕ ಮಾನವಾದಿ ಸಕಲರಿಗೂ ಪ್ರಭುಗಳು, ಉತ್ತಮ ಅಶ್ವವುಳ್ಳವರು, ಉನ್ನತ ಅಂತರಿಕ್ಷ ಪ್ರದೇಶದಲ್ಲಿ ಕುಳಿತಿರುತ್ತಾರೆ. ಸಮುದ್ರ ನದಿಗಳನ್ನು ನೀರಿನಿಂದ ತುಂಬುತ್ತಾರೆ. ಉಷಸ್ ಆವಿರ್ಭವಿಸಿ ಕತ್ತಲು ನಾಶವಾಗಿ ಅಶ್ವಿನಿಗಳನ್ನು ಪ್ರೇರೇಪಿಸುತ್ತಾರೆ. ಒಡನೆಯೇ ದೇವತಾತ್ಮ ಸವಿತೃವು ಉತ್ಪನ್ನವಾಗಿ ತನ್ನ ತೇಜಸ್ಸನ್ನು ಪ್ರಸರಿಸುತ್ತಾರೆ. ಇವರು ಅನೇಕ ಕರ್ಮ ಕರ್ತರು, ಎಲ್ಲರಿಗಿಂತಲೂ ಮೊದಲು ಉತ್ಪನ್ನರಾದವರು, ಮರಣ ಧರ್ಮ ರಹಿತರು, ಧನವಂತರು, ತೇಜೋವಂತರು, ಮಾನವ ಋಷಿಗಳ ರಕ್ಷಕರು ಮತ್ತು ಧನದಾತರು.

### ವಾಮನ ಋಷಿಗಳಿಂದ

ಮಧುರ ರಸ ಉತ್ಪಾದಕರು, ಯಜ್ಞಾರ್ಹರು, ದ್ಯುಲೋಕದಿಂದ ಬಂದವರು, ಆದಿತ್ಯ ರೂಪಕರು, ಸೂರ್ಯ ಪುತ್ರಿಯ ಪಾಲಕರು, ಅಂತರಿಕ್ಷಕ್ಕೆ ಮೀರಿದ ಪ್ರದೇಶದಲ್ಲಿರುವವರು, ದ್ಯುಲೋಕದ ಸುತ್ತಲೂ ಸಂಚರಿಸುವವರು, ಯಜಮಾನನ ಅಭೀಷ್ಟಗಳು, ಅಶ್ವಿನಿಗಳನ್ನು ತಲುಪಿದ ಕೂಡಲೇ ಸಿದ್ದಿಸುತ್ತವೆ. ಇವರು ಪ್ರಥಮಾರ್ಪಿತ ಸೋಮದಿಂದ ತೃಪ್ತರಾಗುತ್ತಾರೆ. ಇವರು ಪ್ರಥಮಾರ್ಪಿತ ಸೋಮದಿಂದ ತೃಪ್ತರಾಗಿರುತ್ತಾರೆ. ಇವರು ಪ್ರಸರಿಸುವ ರಶ್ಮಿಗಳು ಲೋಕ ಪ್ರಸಿದ್ಧವಾದವು, ಇವರಿಗೆ ಸೋಮವು ಉತ್ತೇಜಿತವಾದದು. ಗಾರ್ಹಪತ್ಯಾಗ್ನಿಯು ಶ್ರೇಷ್ಠ ಸೋಮ ಹೊಂದಿರುತ್ತದೆ. ಇವರು ನದೀ ಪ್ರವಾಹ ಪ್ರೇರಕರು, ಮಧು ವಿದ್ಯಾ ಪಾರಂಗತರು.

### ವಿಶ್ವಾಮಿತ್ರ ಋಷಿಗಳಿಂದ

ಇವರು ಅಜಾನುಬಾಹುಗಳು ಸತ್ಯಾವಾದಿಗಳು, ಅತಿ ಭೋಜನಾಪೇಕ್ಷಿಗಳು, ರಕ್ಷಕರು, ಬುದ್ಧಿವಂತರು, ವಿಘ್ನನಾಶಕರು, ಧೈರ್ಯಶಾಲಿಗಳು, ಶತ್ರುನಾಶಕರು, ದೇವವೈದ್ಯರು, ರೋಗನಾಶಕರು, ಸರ್ವಶ್ರೇಷ್ಠರು, ನಿತ್ಯ ತರುಣರು, ಧನವಂತರು ಮತ್ತು ಧನದಾತರು, ಆರೋಗ್ಯದಾತರು, ಇವರಲ್ಲಿ ಅಪಾರ ಧನವಿದೆಯೆಂದು ಋಷಿಗಳು ತಿಳಿದಿದ್ದಾರೆ.

## ಅಶ್ವಿನೀ ದೇವತೆಗಳು

**ಗೃತ್ಸಮದರು ಋಷಿಗಳಿಂದ**

ಧನ ವೃದ್ಧಿಸುವವರು, ಯಾರೂ ಅಪಹರಿಸಲಾಗದ ಧನವುಳ್ಳವರು, ಆಕರ್ಷಕ ನೇತ್ರದವರು, ದಂಪತಿಗಳಂತೆ ವೃಷಭದ ಕೊಂಬುಗಳಂತೆ ಕಾಣುತ್ತಾರೆ. ಯಮಳರು, ಕಾರ್ಯಸಮರ್ಥರು, ಯಜ್ಞ ಸ್ವರೂಪ ತಿಳಿದವರು, ನದಿಯಂತೆ, ಬಿರುಗಾಳಿಯಂತೆ ಸಂಚರಿಸುತ್ತಾರೆ. ದೋಣಿಯು ನದಿಯನ್ನು ದಾಟಿಸುವಂತೆ ರಥವು ಭೂಮಿಯಲ್ಲಿ ನಮ್ಮನ್ನು ಕರೆದೊಯ್ಯುವಂತೆ ಯಜಮಾನನನ್ನು ದುಃಖದಿಂದ ಪಾರುಮಾಡುತ್ತಾರೆ. ನಮ್ಮ ಪೋಷಕರಾಗಿ ಶರೀರ ರಕ್ಷಣೆ ಮಾಡುತ್ತಾರೆ.

**ಆಂಗೀರಸರು ಋಷಿಗಳಿಂದ**

ಒಳ್ಳೆಯದನ್ನು ಮಾಡುವವರು ಮನೆಗೆ ಮೂರು ಮೂರು ಸಲ ಭೇಟಿ ಮಾಡಿ ಐಶ್ವರ್ಯ, ಅನ್ನ 3 ಲೋಕಗಳ ಉತ್ಕೃಷ್ಟ ಔಷಧಿಗಳನ್ನು ಕೊಟ್ಟು ಆರೋಗ್ಯ ಅನುಗ್ರಹಿಸುತ್ತಾರೆ. ನಮ್ಮ ತಪ್ಪುಗಳನ್ನು ಮೂರು ಮೂರು ಸಲ ಕ್ಷಮಿಸುತ್ತಾರೆ. ಸೂರ್ಯನನ್ನು ಕಾಪಾಡುವವರು. ಚಂದ್ರನ ಮೇನೆಯಲ್ಲಿ ಮಧುರ ಭಕ್ಷ್ಯತಂದವರು.

**ಅತ್ರಿ ಋಷಿಗಳಿಂದ**

ಅಶ್ವಿನಿಗಳು ರುದ್ರ ಪುತ್ರರು, ಪಾಪರಹಿತರು, ವಿಶ್ವವ್ಯಾಪಕರು, ಯಜ್ಞಭಾಗಿಗಳು, ಅಪ್ರತಿಹತಗಮನಿಗಳೂ, ಅನೇಕ ಯಜಮಾನರನ್ನು ಗೌರವದಿಂದ ಅನುಗ್ರಹಿಸುವವರು, ಸಂಪತ್ ವರ್ಧಕರು, ಋಷಿಗಳಿಂದ ಪುನಃ ಪುನಃ ಸ್ತುತಿತರಾಗುತ್ತಾರೆ. ಧನ ಒದಗಿಸುವ ಧನವಂತರು, ಪ್ರಾಚೀನ ಋಷಿಗಳು ಪ್ರಾತಃ ಕಾಲದಲ್ಲಿ ಪೂರ್ವಭಾವಿಯಾಗಿ ಸ್ತುತಿಸಿ ಪೂಜಿಸಿ ಯಾಗ ಆರಂಭಿಸುತ್ತಾರೆ. ಅನ್ನ ಸಂಪತ್ ಯುಕ್ತರು, ಯಜ್ಞ ಅಪೇಕ್ಷಿಗಳು.

**ಭರದ್ವಾಜ ಋಷಿಗಳಿಂದ**

ಅಶ್ವಿನಿಗಳು ಸುಂದರರು, ಮನೋಹರ ರೂಪಿಗಳು, ನಿತ್ಯ ತರುಣರು, ಪರಲೋಕ ಈಶ್ವರರು, ಉಷಕಾಲದಲ್ಲಿ ಎಲ್ಲಾ ಕಡೆಯಲ್ಲೂ ಕತ್ತಲೂ ನಾಶಮಾಡುವವರು, ಸಂಕಲ್ಪ ಮಾತ್ರದಿಂದಲೇ ಶತ್ರು ನಾಶ ಮಾಡುವವರು, ಗೋವಿನ ಕೆಚ್ಚಲಲ್ಲಿ ಹಾಲು ತುಂಬಿದವರು, ಧನವಂತರು, ಪುತ್ರರನ್ನು ಈಯುವವರು.

**ಕಣ್ವ ಋಷಿಗಳಿಂದ**

ಪ್ರಭಾತ ಸಮಯದಲ್ಲಿ ಗೋಚರಿಸುತ್ತಾ ಸ್ತುತ್ಯರಾಗಿರುತ್ತಾರೆ. ಅಪೇಕ್ಷಿತ ಧನವನ್ನು ಕೊಡುವವರು, ದ್ಯುಲೋಕ ಉತ್ಪನ್ನ ಉದಕವನ್ನು ಅಂತರಿಕ್ಷ ದ್ವಾರಗಳಂತಿರುವ ಮೇಘಗಳ ಮೂಲಕ ವೃಷ್ಟಿ ಸುರಿಸುತ್ತಾರೆ. ಈ ಹಿಂದೆ ಕರೆದಾಗಲೆಲ್ಲಾ ಬಂದು ಋಷಿಗಳನ್ನು ರಕ್ಷಿಸಿ ಸಂಪತ್ ಕರುಣಿಸಿದ್ದಾರೆ. ತಮ್ಮ ಪ್ರಭೆ ಜೊತೆಗೆ ಸೂರ್ಯನೊಂದಿಗೆ ಸೇರಿ ಅಧಿಕ ಪ್ರಕಾಶಿಸುತ್ತಾರೆ. ದೇವತಾತ್ಮಳಾದ ಉಷೆಯು ಕತ್ತಲನ್ನು ಚದುರಿಸಿ ಅಶ್ವಿನೀ ದೇವತೆಗಳನ್ನು ಎಚ್ಚರಗೊಳಿಸುತ್ತಾಳೆ. ಅಶ್ವಿನಿಗಳಲ್ಲಿ ಜಗತ್ತಿನ ರೋಗಗಳನ್ನೆಲ್ಲಾ ಗುಣಪಡಿಸುವ ಔಷಧಿಗಳಿವೆ. ಇವರು ಗಾರ್ಧಭ ರಥದವರು, ಸಮುದ್ರ ಪುತ್ರರು, ಸಂಚಾರ ಸ್ವಭಾವದವರು, ಇವರು ಆಗಮನದಿಂದ ಉಷಕಾಂತಿಯಾಗುತ್ತದೆ. ನಂತರ ಸೂರ್ಯ ತೇಜಸ್ಸಾಗುತ್ತದೆ. ಸ್ತೋತ್ರ ಪ್ರಿಯರು, ಸುವರ್ಣ ಮನೋಹರ ರಥದಲ್ಲಿ ಸಂಚರಿಸುವವರು, ಸಕಲ ಲೋಕಗಳಲ್ಲೂ ಕಣ್ಣು ರೆಪ್ಪೆ ಹೊಡೆಯುವಷ್ಟು ವೇಗವಾಗಿ ಸಂಚರಿಸುತ್ತಾರೆ. ಋಷಿಗಳ ಪ್ರಾರ್ಥನೆಗೆ ಮೆಚ್ಚಿ ಧನ ಪಡೆಯುವ ಮಾರ್ಗ ತೋರಿಸಿಕೊಟ್ಟಿದ್ದಾರೆ. ಸೋಮ ತಯಾರಕರಿಗೆ ಧನ ಸಂಪದನಾ ಮಾರ್ಗ ತೋರಿಸಿದ್ದಾರೆ. ಇವರು ಜ್ಯೋತಿಷ್ಟೋಮ ಯಾಗಾಪೇಕ್ಷಿಗಳು. ಮಧುರ ಸೋಮಪಾನಾಸಕ್ತರು, ಸಂಗ್ರಾಮದಲ್ಲಿ ರೋಚಕ ಮಾರ್ಗಸಂಚಾರಿಗಳು, ಭಕ್ತ ರಕ್ಷಕರು, ಮಂಗಳಕರ ಅನ್ನರೂಪ ಧನದಿಂದ ಎಲ್ಲರಿಗೂ ಪ್ರೀತಿ ಪಾತ್ರರು, ಪ್ರಜ್ವಲಿತ ಜಠರಾಗ್ನಿಯುಳ್ಳ ಸತ್ಯ ಸ್ವರೂಪರು, ಋಷಿಗಳಿಗೆ ಅವರ ಸ್ತುತಿಗಳಿಗೆ ಮೆಚ್ಚಿ ಧನ ಸಂಪಾದನಾ ಮಾರ್ಗದರ್ಶನ ಮಾಡಿದವರು, ಮೇಧಾವಿಗಳು, ಇಬ್ಬರೂ ಒಂದೇ ಯಜಮಾನರನ್ನು ಅನುಗ್ರಹಿಸಿ ಅವರ ಬಂಧುಗಳಂತೆ ಇರುತ್ತಾರೆ,

## ಅಶ್ವಿನಿ ದೇವತೆಗಳ ರಥದ ವರ್ಣನೆಗಳು

**ವಶಿಷ್ಠ ಋಷಿಗಳು**

ಇವರ ರಥಾಶ್ವಗಳು ಅನಾಯಾಸವಾಗಿ ಧನಯುಕ್ತ, ಪುಷ್ಟಿಪ್ರದ ರಥದಲ್ಲಿ ಪುರಾತನ ಮಾರ್ಗದಲ್ಲಿ ಯಜ್ಞ ಭೂಮಿಗೆ ಅಭಿಮುಖವಾದ ಸಪ್ತ ನದಿಗಳನ್ನೂ ದಾಟಿಸುತ್ತಾ ಕರೆತರುತ್ತದೆ. ರಥವು ಅನೇಕ ರಕ್ಷಣೆಯುಳ್ಳದ್ದು, ಸೂರ್ಯನೊಂದಿಗೆ ಮನೋವೇಗದಲ್ಲಿ ಲೋಕಗಳನ್ನು ದಾಟಿಕೊಂಡು ಹೋಗುವಂತಹುದು. ರಥವು ಸುವರ್ಣ ನಿರ್ಮಿತವಾದದು. ನೇಮಿಗಳಿಂದ ಪ್ರಕಾಶಿತವಾದದು. ಸಂಚಾಕರಕ್ಕೆ ಸರಿ ಹೊಂದುವತಹುದು. ಅನ್ನ ಉದಕಯುಕ್ತವಾಗಿ ದ್ಯಾವಾ ಪೃಥ್ವಿಗಳನ್ನು ಆವರಿಸಿ ಯಜಮಾನನಿಗೆ ಪ್ರಭುವಿನಂತೆ ಇದೆ. ತರುಣ ಅಶ್ವಗಳು ರಥವನ್ನು ವಹಿಸುತ್ತವೆ. ಯಜ್ಞ ಪ್ರದೇಶಕ್ಕೆ ಕರೆತರುತ್ತವೆ. ಇಚ್ಛಿಸಿ ಕರೆಯುವ ಹವಿರರ್ಪಿಸುವ ಯಜಮಾನನ ಬಳಿಗೆ ರಥವು ಹೋಗುತ್ತದೆ. ರಥಾಶ್ವಗಳು ಅನಾಯಾಸವಾಗಿ ಧನಯುಕ್ತವಾಗಿ ಪುರಾತನ ಮಾರ್ಗದಲ್ಲಿ ಯಜ್ಞ ಭೂಮಿಗೆ ಆಗಮಿಸುತ್ತವೆ.

**ಭರದ್ವಾಜರು**

ರಥದ ಸಹಾಯದಿಂದ ಮಾರ್ಗ ಮಧ್ಯದಲ್ಲಿ ಪರ್ವತ ಕೊರೆದುಕೊಂಡು ಮುನ್ನುಗುವುದು ಅಶ್ವಿನಿಗಳಿಗೆ ಮಾತ್ರ ಸಾಧ್ಯ.

**ಅಗಸ್ತ್ಯರು**

ಇವರ ರಥವು ವಿಶಾಲವಾದದು. ಒಬ್ಬರ ರಥ ಪೀತವರ್ಣದ್ದು ಮತ್ತೊಬ್ಬರದ್ದು ಅಶ್ವಗಳು, ರಜತ ಮತ್ತು ತಾಮ್ರಗಳಿಂದ ರಥ ತಯಾರಾಗಿದೆ. ರಥದ ಹೆಸರು ''ಪ್ಲವ''. ಭೂಮಿಯ ಮೇಲೆ ಚಲಿಸುವ ರಥವನ್ನು ಸಮುದ್ರದ ಮೇಲೂ ತೆರಳುವಂತೆ ಮಾಡಿ ಬಿರುಗಾಳಿಯಲ್ಲಿ ಸಿಕ್ಕಿಬಿದ್ದಿದ್ದ ಬುಜ್ಯನನ್ನು ರಕ್ಷಿಸಿದರು.

**ವಿಶ್ವಾಮಿತ್ರರು**

ರಥವು ದ್ಯಾವ ಪೃಥ್ವಿ ವ್ಯಾಪ್ತಿಯದು, ವೃಷ್ಟಿ ಉದಕ ಸುರಿಸುತ್ತವೆ. ದೇವ ಮಾರ್ಗದಲ್ಲಿ ಯಜಮಾನನಲ್ಲಿಗೆ ಬರುತ್ತದೆ. ಇವರ ಶ್ರೇಷ್ಠ ರಥವು ಇವರನ್ನು ಯಜಮಾನನ ಅಭಿಮುಖ ಕರೆತರಲಿ.

**ವಾಮನದೇವರು**

ಸುವರ್ಣ ನಿರ್ಮಿತವಾದದು, ಸೂರ್ಯನನ್ನು ವಹಿಸಿ ರಶ್ಮಿಗಳನ್ನು ಒಟ್ಟುಗೂಡಿಸುತ್ತದೆ. ಸಂಕಲ್ಪಿಸಿದೊಡನೆಯೇ ಲೋಕ ಸಂಚಾರ ಮಾಡುತ್ತದೆ. ಉಷ ಕಾಲದಲ್ಲಿ ರಥವು ಅಶ್ವಿನಿಗಳೊಂದಿಗೆ ಮೂರು ವಿಧ ಅನ್ನಗಳಿಂದ ಊರ್ಧ್ವ ಮುಖ ಸಂಚರಿಸುತ್ತದೆ. ಅಶ್ವಗಳು ಶ್ರೇಷ್ಠವಾದವು, ಮಧುರವಾದವು, ಎದುರು ಬೀಳದವರು, ಭಾರ ಹೊರಲು ಸಮರ್ಥವಾದವುಗಳು, ಸೂರ್ಯ ಸಂಚಾರ ಮಾರ್ಗದಲ್ಲಿ ಅಶ್ವಿನಿಗಳು ಸಂಚರಿಸುತ್ತಾರೆ. ಆದಿತ್ಯ ಶಿಖರ ಪ್ರದೇಶದಲ್ಲಿ ಸೂರ್ಯ ಬಿಂಬದೊಡನೆ ಅಶ್ವಿನಿಗಳ ರಥ ಸೇರುತ್ತದೆ.

**ಅತ್ರಿ ಋಷಿಗಳು**

ಸರ್ವ ಕಾಲದಲ್ಲಿಯೂ ಸಂಚರಿಸುವುದು, ಭಯಂಕರ ಶಕ್ತಿಯುತವಾದದು, ರಥವನ್ನು ಸೂರ್ಯಪುತ್ರಿ ಏರಿದಾಗ ಆಕರ್ಷಕ ಪ್ರಭೆಯಿಂದ ಕಂಪಿಸುವ ರಶ್ಮಿಗಳು ಸುತ್ತಲೂ ಹರಡುತ್ತವೆ. ಮಾನವರು ಸ್ತುತಿಸಿದಾಗ ಅವರಲ್ಲಿಗೆ ಬರಲು ಅಪೇಕ್ಷಿಸುತ್ತದೆ. ಸೂರ್ಯ ತೇಜೋವೃದ್ಧಿಗಾಗಿ ಅವರ ರಥದ ಒಂದು ಚಕ್ರವನ್ನು ಹಿಡಿದು ನಿಲ್ಲಿಸಿ ಇನ್ನೊಂದು ಚಕ್ರದಿಂದ ಮಾನವರ ಅಹೋ ರಾತ್ರಿ ಕಾಲ ನಿಯಮಕ್ಕೆ ಲೋಕ ಸಂಚಾರ ಮಾಡುತ್ತವೆ. ಇವರು ಮನೋವೇಗದಲ್ಲಿ ಯಜ್ಞಾಭಿಮುಖರಾಗಿ ಬರಲಿ.

ರಥವು ಪ್ರಾತಃ ಕಾಲದಲ್ಲಿ ಯಾಗ ಭೂಮಿಗೆ ಹೋಗುವಾಗ ಯಜಮಾನನಿಗೆ ಧನ ಒದಗಿಸಿ ಶ್ರೇಯಸ್ಸನ್ನು ಉಂಟುಮಾಡುತ್ತದೆ. ಆದಿತ್ಯ / ಉಷಾ / ಅಹೋ ರಾತ್ರಿಗಳ ವೇಗಕ್ಕಿಂತ ವೇಗವಾದದು ಇವರ ರಥ.

## ಅಶ್ವಿನೀ ದೇವತೆಗಳು

## ರಥ ವರ್ಣನಾವಿಭಾಗ

ಕಾಣ್ವ ಋಷಿಗಳು :

ರಥವು ಸೂರ್ಯಸಮಾನ ತೇಜಸ್ಸುಳ್ಳದ್ದು, 3 ಚಕ್ರಗಳ ಸುವರ್ಣ ರಥ, ಸೂರ್ಯಪುತ್ರಿ ಊರ್ಜಾನಿ ಕುಳಿತಾಗ ಅಶ್ವಿನಿಗಳ ಸಕಲ ಆಕಾಂಕ್ಷೆಗಳು ಪೂರ್ಣವಾದವು. ಸೂರ್ಯೆಯು ಅಶ್ವಿನಿಗಳನ್ನು ಆಶ್ರಯಿಸಿದ್ದಾಳೆ. ರಥದ ಒಂದು ಚಕ್ರ ಅಶ್ವಿನಿಗಳನ್ನು ಹಿಂಬಾಲಿಸುತ್ತದೆ. ಮತ್ತೊಂದು ಸರ್ವತ್ರ ಸಂಚರಿಸುತ್ತದೆ. ಜಗತ್ತನ್ನು ಕಾಂತಿಯಿಂದ ಬೆಳಗುವ ಉಷೆಯು ಅಶ್ವಿನಿಗಳನ್ನು ಸೇರುತ್ತಾಳೆ. 3 ಅಹಸ್ಸು, 3 ರಾತ್ರಿಗಳಲ್ಲಿ ಸಕಲ ಲೋಕವನ್ನು ಸಂಚರಿಸುವ ರಥವು ಸುವರ್ಣ ನಿರ್ಮಿತವಾದುವು. ಅಶ್ವಗಳು, ಕಡಿವಾಣ, ಮೂಕಿ, ಚಕ್ರಗಳುಳ್ಳ ಈ ರಥವನ್ನು ಎಳೆಯುತ್ತವೆ / ವಹಿಸುತ್ತದೆ. ಮನೋವೇಗದಲ್ಲಿ ಶತ್ರುಗಳು ಹಿಂಸಿಸಲಾರರು. ಹವಿರರ್ಪಿಸುವವರ ಗೃಹಕ್ಕೆ ಮನೋವೇಗದಲ್ಲಿ ಹೋಗಬಲ್ಲದ್ದು, ಅಸುರರ ಮೇಲೆ ನಿಂದಕರ ಮೇಲೆ, ದ್ರೋಹಿಗಳ ಮೇಲೆ ಆಯುಧ ಪ್ರಯೋಗಿಸಿ ಭಕ್ತರನ್ನು ರಕ್ಷಿಸುತ್ತಾರೆ, ತ್ರಿಕೋಣಾಕಾರದ 3 ಹಲಗೆಗಳ ರಥವು 3 ರಕ್ಷಣೆಗಳಿಂದ ಕೂಡಿದೆ. ಇವರ ರಥಕ್ಕೆ ರಾಭಸವು ಕಟ್ಟಲ್ಪಟ್ಟಿದೆ.

ಎಲ್ಲೆಲ್ಲೂ ಸಂಚರಿಸಬಲ್ಲ ಉತ್ತಮ ಸ್ಥಿತಿಯ ಅಶ್ವಿನಿಗಳ ರಥವು ಋಭುಗಳಿಂದ ನಿರ್ಮಿತವಾದದು. ಉಷಸ್ ಆವಿರ್ಭವಿಸುವ ಕಾಲದಲ್ಲಿ ಈ ರಥಕ್ಕೆ ಉತ್ತಮ ಸ್ತುತಿ ಅರ್ಪಿಸಲಾತ್ತುದೆ. ಪ್ರಾತಃ ಕಾಲದಲ್ಲಿ ಯಜ್ಞಕ್ಕೆ ಅಶ್ವಿನಿಗಳು ಈ ರಥದಲ್ಲಿ ಬರುತ್ತಾರೆ.

## ಆಶ್ರಮ ವಿಭಾಗ

ವಸಿಷ್ಠ ಋಷಿಗಳು

ವಸಿಷ್ಠರು ಮಾನವರು, ದೇವಕರ್ಮ ನಿರತರು, ನಿಷ್ಠಾವಂತರು, ಅಜ್ಞಾನರೂಪಿ ಕತ್ತಲಿನಿಂದ ಕೂಡಿದ ಸಂಸಾರ, ದಡ, ದಾಡಿರುವವರು, ಮೇದಾವಿ, ಸ್ತುತಿಕರ್ತರು, ಪ್ರಾತಃ ಕಾಲದಲ್ಲಿ ಆಶ್ರಮದಲ್ಲಿ ಅಗ್ನಿಯು ಜ್ವಾಜ್ವಲ್ಯಮಾನನಾಗಿ ಬೆಳಗುತ್ತಾನೆ. ಋಷಿಗಳು ನಿಯಮನದಿಂದ ಕೂಡಿದವರು, ದ್ಯಾವಾ / ಪೃಥ್ವಿಗಳನ್ನು ಸ್ತುತಿಸುತ್ತಾರೆ. ಪೂಜಿಸುತ್ತಾರೆ. ಅಶ್ವಿನಿ ದೇವತೆಗಳನ್ನು ಉದ್ದೇಶಿಸಿ ಸ್ತುತಿಸುತ್ತಾರೆ. ಯಜ್ಞಮಾಡುತ್ತಾರೆ. ಅಶ್ವಿನಿ ದೇವತೆಗಳು ಯಜ್ಞಕ್ಕೆ ಬರಲಿ ಬೇರಾರೂ ತಡೆಯದಿರಲಿ, ವಸಿಷ್ಠರು ಹವಿರರ್ಪಿಸುವ ಹೋತೃವೂ ಆಗಿದ್ದಾರೆ. ದೇವದೂತರಂತಿದ್ದಾರೆ. ದೇವಮಾರ್ಗದಲ್ಲಿ ಬರುವ ದೇವತೆಗಳಿಗಾಗಿ ಅಧಿಕ ಸ್ತುತಿ ನಿರ್ಮಿಸಿ ಹವಿಸ್ಸು ಅರ್ಪಿಸುತ್ತಾರೆ. ಅಶ್ವಿನಿಗಳನ್ನು ಅವರ ರಥವನ್ನು ಸ್ತುತಿಸುತ್ತಾರೆ. ಸೋಮ ಹಿಂಡುವ ಕಲ್ಲುಗಳಿಂದಾಗುವ ಶಬ್ದವು ಅಶ್ವಿನಿಗಳನ್ನು ಆಶ್ರಮಕ್ಕೆ ಬರುವಂತೆ ಮಾಡುತ್ತದೆ. ಪ್ರಾತಃ ಕಾಲದಲ್ಲಿ ಒಟ್ಟಾಗಿ ಸೇರಿ ಅಶ್ವಿನಿ ದೇವತೆಗಳನ್ನು ಆಹ್ವಾನಿಸುತ್ತಾರೆ. ಹವಿಸ್ಸು, ಸೋಮವನ್ನು ಸ್ವೀಕರಿಸಲಲಿ ಪ್ರಾರ್ಥಿಸುತ್ತಾರೆ ವಸಿಷ್ಠರು ಸ್ವಶಕ್ತಿಯಿಂದ ತಮ್ಮ ಸ್ತೋತ್ರಗಳಿಂದಲೂ ಇವರನ್ನು ಬರಮಾಡಿಕೊಳ್ಳುತ್ತಾರೆ.

ಭರದ್ವಾಜ ಋಷಿಗಳು : ಅಭಿಷವಣ ಕರ್ಮದಲ್ಲಿ ಗ್ರಾವಣಗಳು ಸೋಮವನ್ನು ಹಿಂಡುತ್ತವೆ. ಉತ್ತಮ ಸ್ಥಿತಿಯಿಂದ ಧ್ಯಾನದಿಂದ ಸೋಮವನ್ನು ಸಿದ್ಧಪಡಿಸಿದ್ದಾರೆ. ಅಗ್ನಿಯು ಉನ್ನತ ಪ್ರದೇಶದಲ್ಲಿ ಪ್ರಜ್ವಲಿತನಾಗಿ ಹವಿಸ್ಸು, ಘೃತ ಸ್ವೀಕರಿಸುತ್ತಾರೆ. ಸ್ತೋತೃವು ದರ್ಭಾಸನಾ ಹರಡಿ ನಿಂತು ಕೈಮುಗಿದು ಅಶ್ವಿನಿಗಳನ್ನು ಆಹ್ವಾನಿಸುತ್ತಾನೆ. ಹೋತೃವು ಶ್ರದ್ಧೆಯಿಂದ ಪೂಜಾ ನಿರತನಾಗಿದ್ದಾನೆ. ತೃಪ್ತಿಯಾಗುವಷ್ಟು ಸೋಮಪಾನ ಮಾಡಲು ಅಶ್ವಿನಿಗಳನ್ನು ಭರದ್ವಾಜರು ಪ್ರಾರ್ಥಿಸುತ್ತಾರೆ.

ಅಗಸ್ತ್ಯರು : ಉಷೋದಯದಲ್ಲಿ ದೇವತೆಗಳನ್ನು ಆಹ್ವಾನಿಸುತ್ತಾರೆ. ಪೂಜೆಗಳಿಂದ ತೃಪ್ತಿಗೊಳಿಸುತ್ತಾರೆ. ಹಿಂದಿನವರು ಅರ್ಪಿಸಿದಂತೆಯೇ ಸೋಮವನ್ನು ಅರ್ಪಿಸುತ್ತಾರೆ. ಸ್ತುತಿ ರೂಪ ಮಂತ್ರಗಳನ್ನು ಆದರದಿಂದ ಪಠಿಸುತ್ತಾರೆ. ಯಾಗಕ್ಕೆ ಬಂದು ಹವಿಸ್ಸು, ಸೋಮ ಸ್ವೀಕರಿಸಲು ಪ್ರಾರ್ಥಿಸುತ್ತಾರೆ.

ವಿಶ್ವಾಮಿತ್ರ ಋಷಿಗಳು : ಅಶ್ವಿನಿ ದೇವತೆಗಳು ಇಂದ್ರ, ವಿಶ್ವೇದೇವತೆಗಳು, ಸರಸ್ವತಿ ಇವರುಗಳು ನಮ್ಮ ಆಹ್ವಾನವನ್ನು ಮನ್ನಿಸಿ ಯಾಗ ಭೂಮಿಗೆ ಬರಲಿ, ನಮ್ಮ ಸ್ತೋತ್ರಗಳನ್ನು ಸ್ವೀಕರಿಸಿ ಅನುಗ್ರಹಿಸಲಿ, ಸೋಮಯುಕ್ತ ಹವಿಸ್ಸು ಅನ್ನ ಸ್ವೀಕರಿಸಲಿ, ತೃಪ್ತರಾಗಲಿ, ಯಜ್ಞ ಸಾಂಗಗೊಳಿಸಲಿ, ಆಶ್ರಮದಲ್ಲಿ ಯಾಜ್ಞಿಕರು ಸ್ತುತಿಸುತ್ತಾರೆ. ಸೂರ್ಯ, ಉಷಸ್ಸುಗಳನ್ನು ಸ್ತೋತ್ರ ಮಾಡುತ್ತಾರೆ. ನಂತರ ಯಜ್ಞಕರ್ಮ ಪ್ರವರ್ತರಾಗುತ್ತಾರೆ. ಸೋಮ ಹಿಂಡುತ್ತಾರೆ. ಹಾಲು ಮಿಶ್ರ

ಮಾಡುತ್ತಾರೆ. ಹವ್ಯರೂಪ ಅನ್ನ ಅರ್ಪಿಸುತ್ತಾರೆ. ಸ್ತೋತ್ರಗಳನ್ನು ಸ್ವೀಕರಿಸಲಿ, ಯಜ್ಞಕ್ಕೆ ಬರಲಿ ಎಂದು ಪ್ರಾರ್ಥಿಸುತ್ತಾರೆ.
ವಾಮನ ಋಷಿಗಳು : ಉತ್ತರ ವೇದಿಕೆಯಲ್ಲಿ ಅಗ್ನಿ ಪ್ರಜ್ವಲಿಸುತ್ತಾನೆ. ಪ್ರತಿದಿನವೂ ಇಂದ್ರಾಗ್ನಿಗಳನ್ನು ಸ್ತುತಿಸುತ್ತಾರೆ ಹವಿಸ್ಸು ಅರ್ಪಿಸುತ್ತಾರೆ. 2 ಗುಂಪಿನ ಋತ್ವಿಜರು ಹೊಂದಿಕೆಯಾಗುವಂತಹ ಸ್ತೋತ್ರಗಳಿಂದ ಉಷ ಕಾಲದಲ್ಲಿ ಸ್ತುತಿಸುತ್ತಾರೆ. ಹಾಲು ಮಿಶ್ರಿತ ಸೋಮ ಅರ್ಪಿಸುತ್ತಾರೆ. ಕರ್ಮವನ್ನು ಸಾಂಗವಾಗಿ ನೆರವೇರಿಸುತ್ತಾರೆ. ಅಶ್ವಿನಿ ದೇವತೆಗಳು ಎಲ್ಲಿದ್ದರೂ ನಮ್ಮ ಯಾಗಕ್ಕೆ ಬರಲಿ, ಯಾರೂ ಹಿಡಿದು ನಿಲ್ಲಿಸದಿರಲಿ, ಚಮಸ ಪಾತ್ರೆಯ ಪೂರ್ಣ ಸೋಮವನ್ನು ಪಾನ ಮಾಡಲಿ.
ಅತ್ರಿ ಋಷಿಗಳು : ಅಂತರಿಕ್ಷ ಗಡಿ ದಾಟಿ ಭೂಮಿಗೆ ಬಂದಾಗ ಋಷಿಗಳು ಸ್ತುತಿಸುತ್ತಾರೆ. ಸೋಮರಸ ಪಕ್ವವಾದ ಅನ್ನ ಅಶ್ವಿನಿಗಳನ್ನು ತೃಪ್ತಿಗೊಳಿಸುತ್ತದೆ. ಋಷಿಗಳು ಪಿತೃಗಳಿಂದಲೂ, ಅಶ್ವಿನಿಗಳಿಂದಲೂ ರಕ್ಷಿತರಾಗಿದ್ದಾರೆ. ಸ್ತೋತ್ರಗಳಿಂದ ದರ್ಶನಕ್ಕಾಗಿ ಪ್ರಾರ್ಥಿಸುತ್ತಾರೆ. ಬೇರೆಲ್ಲೂ ಹೋಗದೆ ತಮ್ಮ ಯಾಗಾಭಿಮುಖಿವಾಗಿ ಬರಲು ಅತ್ರಿ ಋಷಿಗಳು ಪ್ರಾರ್ಥಿಸುತ್ತಾರೆ. ಇವರು ರುದ್ರ ಪುತ್ರರು, ಉದಕ ಸ್ವಾಮಿಗಳು, ರಥ ಸ್ವಾಮಿಗಳು, ರಥವನ್ನು ಸ್ತುತಿಸುತ್ತಾರೆ. ಸೂರ್ಯ ಉದಯ ಕಾಲದಲ್ಲಿ ಮಧ್ಯಾಹ್ನ ಸಾಯಂಕಾಲ, ಹಗಲು ರಾತ್ರಿ, ಗೋವುಗಳ ಹಾಲು ಕರೆಯುವ ಕಾಲ, ಯಾವ ಕಾಲವಾದರೂ ಸರಿ ಅಶ್ವಿನಿಗಳು ಯಜಮಾನನಿಗೆ ಅಭಿಮುಖಿವಾಗಿ ಬರಲಿ, ಯಜ್ಞಾರಂಭದಿಂದಲೇ ರಕ್ಷಣೆಗಾಗಿ ಬರಲಿ, ಹವಿಸ್ಸನ್ನು ಸ್ವೀಕರಿಸಲಿ, ಮಕ್ಕಳನ್ನು ಕಾಪಾಡಲಿ.
ಆಂಗೀರಸ ಋಷಿಗಳು : ದ್ರೋಣ ದಮನೀಯ, ಪೂತ್‌ಭೃತ್ ಈ ಮೂರು ಕಳಸಗಳಲ್ಲಿ ಗಂಗಾದಿ ಸಪ್ತ ನದೀ ತೀರ್ಥಗಳಿಂದ ಸೋಮವು ಸಿದ್ಧವಾಗಿದೆ. 33 ದೇವತೆಗಳೂ ಅಶ್ವಿನಿಗಳೊಂದಿಗೆ ಬರಲಿ, 8 ವಸುಗಳು. 11 ರುದ್ರರು, 12 ಆದಿತ್ಯರು, 2 ದ್ಯಾವಾ ಪೃಥ್ವಿಗಳು ಒಟ್ಟು 33 ದೇವತೆಗಳು ಯಾಗಕ್ಕೆ ಬರಲಿ.
ಕಾಣ್ವ ಋಷಿಗಳು : ಅಧ್ವರ್ಯುವು ಅಶ್ವಿನಿಗಳನ್ನು ಯಜ್ಞಕ್ಕೆ ಕರೆತರಲಿ, ಋತ್ವಿಜರು ಸವಿತೃವನ್ನು ಸ್ತೋತ್ರ ಮಾಡಲಿ, ಅಗ್ನಿಯು ಭಾರತಿ, ವಾಗ್ದೇವಿ ಮುಂತಾದ ದೇವತಾ ಸ್ತ್ರೀಯರನ್ನು , ತ್ವಷ್ಟನನ್ನು ಕರೆತರಲಿ, ದೇವತೆಗಳು ಸೋಮಪಾನ ಮಾಡಿ ತೃಪ್ತರಾಗಲಿ, ಯಜ್ಞಕ್ಕೆ ಬಂದು ಪೂಜಿಸಲ್ಪಡುವ ದೇವತೆಗಳನ್ನು ಮಿತ್ರಾವರುಣರು ಆರಿತಿಸುತ್ತಾರೆ. ಅಗ್ನಿಯು ಅಶ್ವಿನಿಗಳನ್ನು ಪೂಜಿಸುತ್ತಾನೆ. ಅಶ್ವ ರಥದಲ್ಲಿ ಶತ್ರು ನಾಶಕ್ಕಾಗಿ ಯಾಗಾಭಿಮುಖಿವಾಗಿ ಅಶ್ವಿನಿಗಳು ಬರಲಿ. ತೃಪ್ತಿಯಾಗುವಷ್ಟು ಸೋಮಪಾನ ಮಾಡಲಿ, ಎಲ್ಲೆ ಇರಲಿ ಬೇರೆ ಎಲ್ಲಿಗೂ ಹೋಗದೆ ತಮ್ಮಲ್ಲಿಗೆ ಬರಲು ಕಣ್ವರು ಪ್ರಾರ್ಥಿಸುತ್ತಾರೆ. ಕಣ್ವ ವಂಶೋತ್ಪನ್ನರು ಅಶ್ವಿನಿಗಳಿಗೆ ಸಮೀಪಿಸುತ್ತಾರೆ. ಕೇವಲ ಸ್ತುತಿಗಳಿಂದ ಅಶ್ವಿನಿಗಳನ್ನು ಪಡೆಯಲಾಗದು. ಹವಿಸ್ಸು ಸೋಮವನ್ನು ಸಿದ್ಧಪಡಿಸಿ ಕರೆಯಬೇಕು. ಅಶ್ವಿನಿಗಳ ಜೊತೆಗೆ ಬೃಹಸ್ಪತಿ. ಇಂದ್ರ, ವಿಷ್ಣು , ಮಿತ್ರಾದಿ ದೇವತೆಗಳನ್ನು ಕರೆಯುತ್ತಾರೆ. ಸೋಮವು ಅತ್ಯಂತ ರುಚಿಕರ. ಅಶ್ವಿನಿಗಳಿಗಾಗಿ ವಿಶೇಷವಾಗಿ ತಯಾರಿಸಲಾಗಿದೆ. ಗೋವುಗಳ ಅವಶ್ಯಕತೆಗಾಗಿಯೇ ಯಾಗವನ್ನು ನಡೆಸಲಾಗುತ್ತಿದೆ. ಇಲ್ಲಿಗೇ ಬರಲಿ ಎಂದು ಕಣ್ವರು ಕರೆಯುತ್ತಾರೆ. ಸಮಸ್ತ ರಕ್ಷಣೆಗಳೊಂದಿಗೆ ಬರಲಿ. ಅಶ್ವ ರಥದಲ್ಲಿ ಈಗಲೇ ಯಜ್ಞಾಭಿಮುಖಿವಾಗಿ ಬರಲಿ, ಕುಡಿದಂತೆ ದರ್ಭಾಸೀನರಾಗಲಿ, ರುಚಿಕರ, ಮಧುರ ಸೋಮವನ್ನು ನೀರು ಕುಡಿದಂತೆ ಯಜ್ಞಭೂಮಿಯಲ್ಲೇ ಪಾನ ಮಾಡಲಿ.

ದೇವತೆಗಳು ಇಚ್ಛಿಸುವ ಯಜಮಾನನ್ನು ಅಶ್ವಿನಿಗಳು ಸಾಹಸದಿಂದ ರಕ್ಷಿಸುತ್ತಾರೆ. ಹವಿಸ್ಸು ಸೋಮಾರ್ಪಣೆಗಳಿಂದ ಇವರ ಅನುಗ್ರಹ ಸಂಪಾದಿಸಬಹುದು. ಹವಿಸ್ಸು ಸ್ವೀಕರಿಸಿದ ನಂತರ ಕೋಪ ರಹಿತ ಮನಸ್ಸಿನಿಂದ ಯಜ್ಞಾಭಿಮುಖರಾಗಿರುತ್ತಾರೆ.
ವಾಮ ದೇವರು : ಇವರ ಕೋಪಕ್ಕೆ ಪಾತ್ರರಾದ ಯಾರೂ ಇವರ ಮುಂದೆ ನಿಲ್ಲಲಾರರು. ಅಶ್ವಿನಿಗಳು ಸೂರ್ಯ ಸಂಚಾರ ಮಾರ್ಗದಲ್ಲೇ ಸಂಚರಿಸುತ್ತಾರೆ. ಆದಿತ್ಯ ಶಿಖರ ಪ್ರದೇಶದಲ್ಲಿ ಸೂರ್ಯಬಿಂಬದೊಡನೇ ಅಶ್ವಿನಿಗಳ ರಥ ಸೇರುತ್ತದೆ.
ಆತ್ರೇಯ ಋಷಿಗಳು : ಅಗ್ನಿಯು ಆವಿರ್ಭೂತನಾಗಿ ಉಷಸ್ಸಿನ ದಿವ್ಯ ಮುಖವನ್ನು ಪ್ರಕಾಶಿಸುವಂತೆ ಮಾಡಿದ್ದಾನೆ.

## ಅಶ್ವಿನಿ ದೇವತೆಗಳು

### ಆಶ್ರಮ ವಿಭಾಗ

ಸಾಯಂಕಾಲ ಅರ್ಪಿಸುವ ಹವಿಸ್ಸು ದೇವತೆಗಳಿಗೆ ಪ್ರಿಯಕರವಲ್ಲ ಸೇವನೆಗೂ ಯೋಗ್ಯವಲ್ಲ. ಅಶ್ವಿನಿಗಳ ಕೃಪೆ ಪಡೆದ ಯಜಮಾನನು ಕರ್ಮ ಭ್ರಷ್ಟರನ್ನು ಶಿಕ್ಷಿಸಲು ಶಕ್ತನಾಗುತ್ತಾನೆ.

ಕಾಣ್ವರು : ಉಷೆಯು ಶುಭ್ರ ವರ್ಣದವಳಾಗಿ ಪ್ರಧಾನಳಾಗಿ ಎಲ್ಲೆಲ್ಲೂ ಪ್ರಭೆ ಬೀರುತ್ತಾ ಆವಿರ್ಭಾವಿಸುತ್ತಾಳೆ. ಸೂರ್ಯ ಮತ್ತು ಅಗ್ನಿ ತಮಸ್ಸನ್ನು ಚದುರಿಸುತ್ತಾರೆ. ಸೂರ್ಯ ದೇವನು ಅಸ್ತಮಾನ ಕಾಲದಲ್ಲಿ ಕಿರಣಗಳನ್ನು ಉಪಶಮನ ಮಾಡುವುದು, ಪುನಃ ಪ್ರಾತಃ ಕಾಲದಲ್ಲಿ ವಿಸ್ತಾರವಾಗಿ ಹರುಡುವುದು ಸತ್ಯದ ಮಹಾತ್ಮೆಯಿಂದಲೇ, ಸೂರ್ಯೆಯು ರಾತ್ರಿಯ ವೇಳೆ ಅಶ್ವಿನಿಗಳ ರಥವನ್ನು ಆಶ್ರಯಿಸುತ್ತಾರೆ. ಅಂತರಿಕ್ಷಾದಿ ಎಲ್ಲಾ ಪ್ರದೇಶದಲ್ಲಿ ಗೋಚರಿಸುತ್ತಾಳೆ. ಸ್ವಾರ್ಥಿಯ ಧನ ಕನಸಿನ ಹಣ ಎರಡೂ ನಾಶವಾಗುತ್ತದೆ.

ಅಗಸ್ತ್ಯರು : ಇವರ ಮಹಿಮೆ ತಿಳಿಯದವರು ಇವರನ್ನು ಸ್ತುತಿಸಲು ಸಾಧ್ಯವಿಲ್ಲ. ನಿಂದಿಸುವವರನ್ನು ವಧಿಸಬೇಕೆಂದಿರುವವರನ್ನು, ಜಿಪುಣರನ್ನು, ಯಜ್ಞ ಮಾಡದವರನ್ನು, ಸ್ವಯಂ ಪೂಜಿತರಾಗುವವರನ್ನು ಅಶ್ವಿನಿಗಳು ಪರಾಭವಗೊಳಿಸಿ ನಾಶಮಾಡಲಿ.

ಆಂಗೀರಸರು : ವಾತ, ಪಿತ್ತ, ಕಫಗಳು ನಮ್ಮ ಶರೀರದಲ್ಲಿ ನಿಯಮಿತವಾಗಿದ್ದು ಆರೋಗ್ಯ ರಕ್ಷಣೆ ಮಾಡಲಿ.

ಅಶ್ವಿನಿ ದೇವತೆಗಳಲಿ ಪ್ರಾರ್ಥನಾ ವಿಭಾಗ ,

ವಸಿಷ್ಠರು : ಅಶ್ವಿನಿಗಳು ಯಾಗಗೃಹ ಪ್ರವೇಶಿಸಲಿ, ಸ್ತುತಿ ಕೇಳಲಿ, ಸೋಮಪಾನ ಮಾಡಲಿ, ಸ್ತುತಿಗಳಿಂದ ಸಂತುಷ್ಟರಾಗಿ ಧನಾದಿಗಳನ್ನು ಕೊಡಲಿ. ಪುತ್ರ ಪೌತ್ರರು ಮತ್ತು ರಕ್ಷಣೆಗಳನ್ನು ಬೇಡುತ್ತಾರೆ. ಯುದ್ಧ ಕಾಲದಲ್ಲಿ ಯಜಮಾನನನ್ನು ರಕ್ಷಿಸಲಿ. ಬಂಧುಗಳೊಡನೆ ಉತ್ತಮ ರೀತಿಯಿಂದ ಯಾರು ಇರುವನೋ ಅಂತವನಿಗೆ ಆಶ್ರಯ ಕೊಡಲಿ, ರಕ್ಷಿಸಲಿ ಭೋಗ ಯೋಗ್ಯಧನ, ಅನ್ನ ವೃಷ್ಟಿ, ಗೋವು ಕಲ್ಯಾಣಗಳಿಂದ ರಕ್ಷಿಸಲಿ, ಈ ಹಿಂದೆ ಯಜ್ಞಕರ್ತರನ್ನು ಅನುಗ್ರಹಿಸಿದಂತೆ ಈಗಲೂ ಅನ್ನ, ಧನ ಕಲ್ಯಾಣಗಳಿಂದ ರಕ್ಷಿಸಲಿ, ದಾರಿದ್ರ ನಾಶಮಾಡಲಿ, ರೋಗ ರಹಿತರನ್ನಾಗಿ ಮಾಡಲಿ, ಅಶ್ವಿನಿ ದೇವತೆಗಳು ದಕ್ಷಿಣ, ಉತ್ತರ, ಪೂರ್ವ ಪಶ್ಚಿಮ, ಎಲ್ಲಾ ದಿಕ್ಕುಗಳಿಂದಲೂ ಯಜಮಾನನಲ್ಲಿಗೆ ಅಶ್ವ ಗೋವು, ಅಧಿಕ ಸಂಪತ್ತುಗಳುಳ್ಳ ರಥದೊಂದಿಗೆ ಬರಲಿ. ಪಂಚಜನರಿಗೂ ಧನದಿಂದ ಹಿತಮಾಡಲಿ, ಯಜಮಾನನಲ್ಲಿ ಪ್ರೀತಿವುಳ್ಳವರಾಗಿ ಅಂತರಿಕ್ಷದಿಂದ ವೃಷ್ಟಿ ಸುರಿಸಲಿ. ಯಜಮಾನನಿಗೆ ಯಶಸ್ಸು, ಧನ, ಗೃಹಗಳನ್ನು ಕರುಣಿಸಲಿ.

ವಾಮ ದೇವರು : ಪೂರ್ಣ ಆಯುಸ್ಸು ಕೊಡಲಿ, ಪುತ್ರ, ಪೌತ್ರರಿಗೂ ಪೂರ್ಣ ಆಯುಸ್ಸು ಕೊಡಲಿ, ಒಂದೇ ಮನಸ್ಸಿನಿಂದ, ವಿಶಿಷ್ಟ ರೀತಿಯಿಂದ ಸ್ತುತಿಸುವ ಯಜಮಾನನನ್ನು ರಮಣೀಯ ಅನ್ನದಿಂದ ರಕ್ಷಿಸಲಿ, ಯಜಮಾನನ ಸ್ತುತಿಗಳು ಫಲಪ್ರದವಾಗಲಿ.

ಭರದ್ವಾಜರು : ಆಕರ್ಷಕ ಸ್ತುತಿಕರ್ತರಿಗೆ ಅನೇಕ ವಿಧ ದಾನ ಅನುಗ್ರಹಿಸಲಿ, ಗೋಯುಕ್ತ ಕೊಟ್ಟಿಗೆ ಧ್ವಾರ ತೆರೆಯಲಿ, ಹಿಂಸಕ ಶತ್ರುಗಳನ್ನು ನಾಶಮಾಡಲಿ, ಪೂಜಿಸುವ ಭಕ್ತರ ದ್ವೇಷಿಗಳನ್ನು ಅಶ್ವಿನಿಗಳನ್ನು ಕ್ರೋಧದಿಂದ ನಾಶಮಾಡಲಿ.

ಅತ್ರಿ ಋಷಿಗಳು : ಅತಿಶಯವಾದ ಸ್ತುತಿಗಳಿಂದ ಸ್ತುತಿಸುತ್ತಾರೆ. ಯಜ್ಞ ಸಮೀಪಿಸಲು ಪ್ರಾರ್ಥಿಸುತ್ತಾರೆ. ಸುಖ ಪ್ರದರಾಗಿರಲು ಬೇಡುತ್ತಾರೆ. ದೂರ, ಹತ್ತಿರ, ಅಂತರಿಕ್ಷ ಅಥವಾ ಎಲ್ಲೆ ಇರಲಿ ಯಜಮಾನನಲ್ಲಿಗೆ ದಯಮಾಡಿಸಲಿ ಅನ್ನ ಒದಗಿಸಲಿ.

# ಅಶ್ವಿನಿ ದೇವತೆಗಳಲ್ಲಿ ಋಷಿಗಳ ಪ್ರಾರ್ಥನೆಗಳು

33 ದೇವತೆಗಳು ಬರಲಿ, ಜ್ಞಾನ ಉಪದೇಶಿಸಲಿ, ಆಯಸ್ಸು, ಅನ್ನ ಐಶ್ವರ್ಯ ವೃದ್ಧಿಸಲಿ, ವಾತ, ಪಿತ್ತ, ಕಫಗಳು ನಮ್ಮ ಶರೀರದಲ್ಲಿ ನಿಯಮನುಕ್ಕನುಸಾರವಾಗಿ ಇದ್ದು ನಮ್ಮ ಆರೋಗ್ಯ ರಕ್ಷಣೆ ಮಾಡಲಿ.

ಬಹುಕಾಲ ಜೀವಿಸಿದ ನಂತರ ವಾರ್ಧಿಕ್ಯ ಪಡೆಯುವಂತೆ ಅನುಗ್ರಹಿಸಲಿ. ದರ್ಭಾಸನವು ಸಿದ್ಧವಿದೆ. ಸೋಮವೂ ಇದೆ. ಶೇನ ಪಕ್ಷಿಯಂತೆ ವೇಗವಾಗಿ ಬರಲಿ, ಹವಿಸ್ಸು ಸ್ವೀಕರಿಸಲಿ, ಅಶ್ವ ಗೋವು, ಧನ, ಸುಖ ಪುತ್ರರನ್ನು ಕೊಡಲಿ.

ಕಾಣ್ವರು : ಸುವರ್ಣಾಲಂಕಾರರು, ಸುವರ್ಣಾರಥದಲ್ಲಿ ಸಂಚರಿಸುವವರು ವಿವಿಧ ರೂಪಿಗಳು , ದ್ಯುಲೋಕ ಆಶ್ರಯಿಗಳು, ಸ್ತುತಿಕರ್ತರ ಪಾಲನೆಗೆ ರಕ್ಷಣೆಗೆ ಕಾರಣಕರ್ತರು. ರಾಕ್ಷಸರನ್ನು ನಾಶ ಮಾಡಲಿ. ಉಷಸ್ / ಸೂರ್ಯರೊಂದಿಗೆ ರಕ್ಷಣಾರ್ಥ ಕರೆಯುವವರನ್ನು ಅನುಗ್ರಹಿಸಲಿ, ಮೂರು ಮಾರ್ಗಗಳಿಂದ ಬಂದು ಬಲ, ಅನ್ನ, ಧನ, ನೀಡಲಿ. ಮಳೆ ಸುರಿಸಲಿ, ಗೃಹ ಕೊಡಲಿ, ಅಶ್ವಗೋವುಗಳನ್ನು ಕೊಡಲಿ, ಪುತ್ರ ಪೌತ್ರರನ್ನು ಕೊಡಲಿ, ಶತ್ರುಗಳನ್ನು ನಾಶಮಾಡಲಿ, ಭೋಗ ಯೋಗ್ಯ ಧನವನ್ನು ಕೊಡಲಿ, ಹಿಂದಿನವರನ್ನು ರಕ್ಷಿಸಿದಂತೆ ನಮ್ಮನ್ನು ರಕ್ಷಿಸಲಿ, ಅಂತರಿಕ್ಷ, ದ್ಯುಲೋಕ, ಮನುಷ್ಯಲೋಕ ದೂರದಲ್ಲಿ ಎಲ್ಲಿದ್ದರೂ ಸರಿ, ಯಾಗಾಭಿಮುಖವಾಗಿ ಬರಲಿ, ಯಾರೂ ತಡೆಯದಿರಲಿ. ಧನ ಅನ್ನ ಸಂತಸ ನೀಡಲಿ, ಪೂರ್ವಾಪಶ್ಚಿಮ ದಕ್ಷಿಣಾ ಉತ್ತರ ಎಲ್ಲಿದ್ದರೂ ಯಜ್ಞಾಭಿಮುಖವಾಗಿ ಬರಲಿ, ಕರುಗಳನ್ನು ಹುಡುಕಿಕೊಂಡು ಹಸುಗಳು ಬರುವಂತೆ ಭಕ್ತರ ಅಭಿಮುಖ ಯಾಗ ಭೂಮಿಗೆ ಬರಲಿ, ಹವಿಸ್ಸನ್ನು ಸೇವಿಸಲಿ, ಅನೇಕ ಬಗೆಯ ರಕ್ಷಣೆಗಳನ್ನು ಕೊಡಲಿ , ರೋಗ ನಾಶಮಾಡಲಿ, ಶತ್ರುಗಳನ್ನು ವಧಿಸಲಿ, ಯಜ್ಞ ಕಾರ್ಯಗಳನ್ನು ರಕ್ಷಿಸಲಿ, ಯಾವ ಸಮಯದಲ್ಲಿ ಪ್ರಾರ್ಥಿಸಿದರೂ ಅಸಂಖ್ಯಾತ ಗೋವು ಅಶ್ವಗಳೊಡನೆ ಬರಲಿ, ನಮ್ಮ ಸಮೀಪದಲ್ಲಿಯೇ ಇದ್ದು ನಮ್ಮನ್ನು ರಕ್ಷಿಸಲಿ. ಸತ್ವದ ಬಲ ತಿಳಿದು, ಆ ಬಲದ ಮೇಲೆ ಗೃಹಕ್ಕಾಗಿ ರಕ್ಷಣೆಗಾಗಿ ಧನ ಅನ್ನಗಳಿಗಾಗಿ ಪುತ್ರಪೌತ್ರರಿಗಾಗಿ ಪ್ರಾರ್ಥಿಸುತ್ತಾರೆ.

ಆಂಗೀರಸರು : ನಮ್ಮ ಕರ್ಮಗಳಲ್ಲಿ ನಮಗಾಗಿ, ನೀವು 3 ಸಾರಿ ಬರಬೇಕು. 3 ಸಲ ನಮ್ಮ ತಪ್ಪುಗಳನ್ನು ನೀವು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತಾರೆ.

ಹಗಲು ರಾತ್ರಿ ಶಕ್ತಿದಾಯಕ ಅನ್ನ ಕೊಡಿ, ಮೂರು ಪ್ರಕಾರ ತಿಳುವಳಿಕೆ ಕೊಡಿ - 3 - 3 ಸಲ ಸಂತೋಷ ಐಶ್ವರ್ಯ ಕೊಡಿ.

ರಥದ ಬಗೆಗೆ : ಅಶ್ವಿನಿಗಳ ರಥವು ವಿಶಾಲವಾಗಿದೆ, ದಾನವನ್ನು ಹೇರಳವಾಗಿ ಮಾಡುತ್ತಾರೆ. ರಥದಲ್ಲಿ ಮಧುರ ಪದಾರ್ಥಗಳು ಹೇರಳವಾಗಿದೆ ರಥಕ್ಕೆ ವಜ್ರದಷ್ಟು ಬಲವಾದ ಚಕ್ರಗಳಿವೆ, ಮೂರು ಕಂಬಗಳಿವೆ, ದೇವತೆಗಳು ಈ ಅಶ್ವಿನಿಗಳ ರಥವನ್ನು ನೋಡಿದ್ದಾರೆ. ಇವರು ಹಗಲು ಮೂರು ಸಲ ರಾತ್ರಿ ಮೂರು ಸಲ ತಿರುಗುತ್ತಾರೆ. ಹಗಲು ರಾತ್ರಿಗಳಿಗಿರುವ ಸಂಬಂಧದಂತೆ ನೀವು ಬಂದು ನಮ್ಮನ್ನು ಯಾವಾಗಲೂ ಅನುಗ್ರಹಿಸಿರಿ.

## ಅಶ್ವಿನಿ ದೇವತೆಗಳಲ್ಲಿ ಋಷಿಗಳ ಪ್ರಾರ್ಥನೆಗಳು

ಹವಿರ್ದಾತ ಯಜಮಾನನ ಸ್ತುತಿ ಆಲಿಸಿ ರಕ್ಷಿಸಲು 3ನೆಯ ಸವನದಲ್ಲಿ ಯಜ್ಞಕ್ಕೆ ಬರಲಿ ಎಂದು ಪ್ರಾರ್ಥಿಸುತ್ತಾರೆ.

ವಿಶ್ವಾಮಿತ್ರರು : ಯಜ್ಞಕಾರ್ಯದಲ್ಲಿ ಭಾಗವಹಿಸಲು ದೇವ ಸಂಚಾರಿ ಮಾರ್ಗದಲ್ಲಿ ಬರಲಿ, ಯಜ್ಞಕಾರ್ಯಗಳನ್ನು ನಿರ್ವಿಘ್ನವಾಗಿ ಪೂರ್ಣಗೊಳಿಸಲಿ, ಸ್ತೋತ್ರಗಳನ್ನು ಕೇಳಲಿ. ಇರಬಹುದಾದ ದುಷ್ಟ ಬುದ್ಧಿಯನ್ನು ನಾಶಮಾಡಲಿ, ರೋಗಗಳನ್ನು ಪರಿಹಾರ ಮಾಡಲಿ, ಅನ್ನವಂತರಾಗುವಂತೆ ಅನುಗ್ರಹಿಸಲಿ, ನಾವು ದುಃಖಿಗಳಾದ್ದರಿಂದ ನಮ್ಮ ನೆರವಿಗೆ ಬರಲು ಪ್ರಾರ್ಥಿಸುತ್ತಾರೆ.

ಭರದ್ವಾಜರು : ವೇಗದಾಮಿ ಅಶ್ವಗಳಿಗಾಗಿ ಬೇಡುತ್ತಾರೆ. ಸುವರ್ಣ ನಿರ್ಮಿತ ರಥಗಳು , ಪ್ರಭೂತ ಅನ್ನ ರಾಕ್ಷಸ ನಾಶಕ್ಕಾಗಿ ಪ್ರಾರ್ಥಿಸುತ್ತಾರೆ.

ಗೃತ್ಸಮದರು : ನಮ್ಮ ಸ್ತೋತ್ರಗಳನ್ನು ಕೇಳಲಿ, ಆಶ್ರಮ ಅಭಿಮುಖವಾಗಿ ಶೀಘ್ರವಾಗಿ ಬರಲಿ, ಯಜಮಾನನನ್ನು ಧನಾಭಿಮುಖ ಕರೆದೊಯ್ಯಲಿ, ಶರೀರ ಸುಖನೀಡಲಿ, ಶತ್ರುಗಳನ್ನು ಹಿಂಸಿಸಲಿ, ನಮಗೆ ಶಕ್ತಿ ಸಾಮರ್ಥ್ಯ ಕೊಡಲಿ.

ಅತ್ರಿ ಋಷಿಗಳು : ಅಶ್ವಿನಿಗಳನ್ನು ಯಾಗಕ್ಕೆ ಆಹ್ವಾನಿಸುತ್ತಾರೆ. ರಮಣೀಯ ಧನದೊಂದಿಗೆ ಬರಲಿ, ಅಶ್ವಿನಿಗಳನ್ನು ಬಿಟ್ಟು ಬೇರಾರನ್ನು ಆಹ್ವಾನಿಸಿಲ್ಲ, ರಕ್ಷಣೆ ಮಾಡಲಿ, ಧನ, ವೀರ ಪುತ್ರರನ್ನು ನೀಡಲಿ, ಹಂಸ ಪಕ್ಷಿಯಂತೆ ಜಿಂಕೆಯಂತೆ ವೇಗವಾಗಿ ಬರಲಿ, ತಾಯಿಯ ಗರ್ಭದಿಂದ ಶಿಶುವು ಕ್ಷೇಮವಾಗಿ ಹೊರ ಬರಲಿ, ತಾಯಿಗೂ ತೊಂದರೆ ಆಗದಿರಲಿ.

ಅಗಸ್ತ್ಯರು : ಉಷೋದಯದಲ್ಲಿ ದೇವತೆಗಳನ್ನು ಆಹ್ವಾನಿಸುತ್ತಾರೆ. ದೀರ್ಘಾಯುಸ್ಸು ಮತ್ತು ಜರಾ ವಿಮೋಚನೆಗೆ ಬೇಡುತ್ತಾರೆ. ದುಃಖ ನಾಶ ಮಾಡಲು ಮಳೆ ಸುರಿಸಲು ಅಶ್ವ ಗೋವು ಧನ ಧಾನ್ಯ ಆಹಾರ ಬಲಗಳನ್ನು ಬೇಡುತ್ತಾರೆ. ಸಂಚಾರ ವಿಶ್ರಾಂತಿಗಳೆರಡರಲ್ಲೂ ನಮ್ಮ ಪ್ರಾರ್ಥನೆ ಮನ್ನಿಸಿ ನಮ್ಮನ್ನು ರಕ್ಷಿಸಿರಿ, ದುಃಖಿಗಳನ್ನು ನಾಶ ಮಾಡಿರಿ.

## ಅಶ್ವಿನಿಗಳಿಂದ ಈ ಹಿಂದೆ ಋಷಿಗಳು ಪಡೆದ ನಾನಾ ಪ್ರಯೋಜನಗಳು

ಅತ್ರಿ ಋಷಿಗಳನ್ನು ನಾನಾ ರೀತಿ ರಕ್ಷಿಸಿದ್ದಾರೆ, ಯಜ್ಞಕುಂಡದಲ್ಲಿ ತಳ್ಳಲ್ಪಟ್ಟಾಗ ಅಗ್ನಿಯು ತಣ್ಣಗಾಗುವಂತೆ ಮಾಡಿದರು. ಬಂಧನ ದಿಂದ ರಾಕ್ಷಸರಿಂದ ಬಿಡುಗಡೆ ಮಾಡಿದ್ದಾರೆ, ಚ್ಯವನ ಋಷಿಯನ್ನು ಮೃತ್ಯುವಿನಿಂದ ಪಾರುಮಾಡಿ ಸುಂದರ ಯುವಕನನ್ನಾಗಿ ಮಾಡಿದರು.

## ಅಶ್ವಿನಿಗಳಿಂದ ಈ ಹಿಂದೆ ಋಷಿಗಳು ಪಡೆದ ನಾನಾ ಪ್ರಯೋಜನಗಳು

ಭುಜ್ಯನನ್ನು ಶತ್ರುಗಳು ಸಮುದ್ರಕ್ಕೆ ಎಸೆದಾಗ, ಅವನನ್ನು ರಕ್ಷಿಸಿದರು. ಬಂಜೆ ಹಸು ಹಾಲು ಕೊಡುವಂತೆ ಮಾಡಿದರು. ನೀರಿಲ್ಲದೆ ನದಿ ಬತ್ತಿದಾಗ "ಶಂಯು" ಅವರ ಪ್ರಾರ್ಥನೆಯಂತೆ ಮಳೆ ಸುರಿಸಿ ನೀರು ಒದಗಿಸಿದರು. ಮುದಿ ಗೋವಿಗೆ ಹಾಲು ಕೊಡುವ ಶಕ್ತಿ ಬರುವಂತೆ ಮಾಡಿದರು. ರಾಜಾ "ಪೇದು" ವಿಗೆ ಯುದ್ಧ ಸಮಯದಲ್ಲಿ ಶೀಘ್ರಗಾಮಿ ಅಶ್ವಗಳನ್ನು ಒದಗಿಸಿದರು. ಅವನು ಗೆಲ್ಲುವಂತೆ ಮಾಡಿದರು. ಜುಹು ರಾಜನನ್ನು ಆಪತ್ತಿನಿಂದ ರಕ್ಷಿಸಿದರು. ಕಣ್ವ ಋಷಿಗಳನ್ನು ಕಣ್ಣು ಕೀಳಲ್ಪಟ್ಟಿದ್ದಾಗ ಅವರನ್ನು ರಕ್ಷಿಸಿ ದೃಷ್ಟಿ ನೀಡಿದರು. ವಧ್ರಿ ಮತಿಗೆ ಪುತ್ರಸಂತಾನ ಆಗುವಂತೆ ಮಾಡಿದರು. ಕುಂಟ ಯಾಗಿದ್ದ ವಿಶ್ಪಲೆಗೆ ಕಾಲು ಬರುವಂತೆ ಮಾಡಿದರು. ರೇಭಾ ಋಷಿಗಳು ಗುಹೆಯಲ್ಲಿ ಸಾಯುವಂತಿದ್ದರು ಆಗ ಅವರನ್ನು ರಕ್ಷಿಸಿ ಮಾರ್ಗದರ್ಶನ ಮಾಡಿದರು. ಮಂದ ಬುದ್ಧಿಯ ಕಕ್ಷೀವಂತನನ್ನು ಪ್ರಾಜ್ಞನಾಗುವಂತೆ ಮಾಡಿದರು. ಓರ್ವ ಋಷಿಗೆ ಪ್ರತಿ ದಿನವೂ ಸಾವಿರ ಹೊನ್ನು ಸಿಗುವಂತೆ ಮಾಡಿದರು. ದುರ್ಗಮ ಪರ್ವತದಲ್ಲಿ ರಾತ್ರಿಯ ವೇಳೆ ಜುಹು ರಾಜನು ತೊಂದರೆಯಲ್ಲಿದ್ದಾಗ ಅವನನ್ನು ರಕ್ಷಿಸಿದರು. ದಧೀಚ ಋಷಿಗೆ ಅಶ್ವದ ತಲೆ ಜೋಡಿಸಿ ಅವರಿಂದ ಅಶ್ವಿನಿಗಳು ಮಧು ವಿದ್ಯೆ ಕಲಿತರು, ಇಂತಹ ಪರಾಕ್ರಮಿಗಳಾದ ಅಶ್ವಿನಿಗಳ ರಥವನ್ನು ಸೂರ್ಯ ಪುತ್ರಿ ಊರ್ಜಾನಿ ಏರಿದಳು. ರಾತ್ರಿ ವೇಳೆ ಅಂತರಿಕ್ಷದ ಎಲ್ಲಾ ಪ್ರದೇಶದಲ್ಲೂ ಸಂಚರಿಸುತ್ತಾರೆ.

### ಪ್ರಾರ್ಥನಾ ವಿಭಾಗ

ಇವರು ಕರ್ಮ ನೇತೃಗಳು, ಉದಕ ಪಾಲಕರು, ಆಕರ್ಷಕ ರೂಪಿಗಳು, ಅನ್ನವಂತರು, ವೃಷ್ಟಿಗೆ ಒಡೆಯರು ಅಶ್ವದಂತೆ ಕ್ಷಿಪ್ರಗಾಮಿಗಳು ಬಗ್ಗಿದ ಶರೀರದವರು. ಪಕ್ಷಿಗಳಂತೆ ಸಂಚಾರಾತ್ಮಕರು. ಬಲಯುತರು, ಹಣವಂತರು, ಆಯುಧ ದಾರಿಗಳು, ಶತ್ರುನಾಶಕರು, ಉದರದಲ್ಲಿ ಮಧು ತುಂಬಿಕೊಂಡಿರುವವರು. ಭಕ್ತರ ಸ್ಥಿತಿಯನ್ನು ಅರಿಯ ಬಲ್ಲವರು, ಯಜಮಾನನ ಎರಡು ತೋಳುಗಳಂತೆ ಇರುವವರು, ಆಳವಾದ ಪ್ರದೇಶಗಳನ್ನು ಅರಿತಿರುವವರು, ಹವಿಸ್ಸು ಸ್ವೀಕರಿಸದೇ ಹಿಂದಿರುಗುವುದೇ ಇಲ್ಲ, ಯಜ್ಞಕರ್ಮಗಳಲ್ಲಿ ತೊಂದರೆ ಆಗದಂತೆ ರಕ್ಷಿಸುತ್ತಾರೆ.

ಸದಾ ನಮ್ಮ ಜೊತೆಯಲ್ಲಿರಲಿ, ರಕ್ಷಿಸಲಿ, ಶತ್ರು ನಾಶ ಮಾಡಲಿ, ದುಸ್ವಪ್ನ ನಾಶ ಮಾಡಲಿ, ಬಹು ಕಾಲ ಜೀವಿಸಿದ ನಂತರ ವಾರ್ಧಿಕ್ಯ ಬರಲಿ. ದೇವತೆಗಳು ನಮ್ಮ ಕೈಬಿಡದಿರಲಿ, ಮನೋವೇಗದಲ್ಲಿ ಬಂದು ನಮ್ಮನ್ನು ರಕ್ಷಿಸಲಿ, ನಮ್ಮ ಎಲ್ಲಾ ತರಹದ ದ್ವೇಷಿಗಳನ್ನು ಶತ್ರುಗಳನ್ನು ನಾಶ ಮಾಡಲಿ, ವಿಷ ಜಂತುಗಳು ಆದ ವೃಕ ವೃಕಿಯರು ನಮ್ಮನ್ನು ಹಿಂಸಿಸದಿರಲಿ, ಪಾಪ ನಾಶ ಮಾಡಲಿ, ಆರೋಗ್ಯ ಅನುಗ್ರಹಿಸಲಿ, ನಮಗೆ ಗೋವು ಧನ ರಕ್ಷಣೆ ನೀಡಲಿ. ಸೋಮ ಅರ್ಪಿಸುವ ಯಾಗಕ್ಕೆ ಬಂದು ಯಾಜ್ಞಿಕರನ್ನು , ಯಜಮಾನರನ್ನು , ಭಕ್ತರನ್ನು ಎಲ್ಲಾ ರೀತಿಯಿಂದಲೂ ಅನುಗ್ರಹಿಸಿ ಕಾಪಾಡಲಿ.

॥ ಓಂ ಶಾಂತಿ ಶಾಂತಿ ಶಾಂತಿಃ ॥

॥ ಓಂ ಶ್ರೀ ಮಹಾಗಣಪತಯೇ ನಮ: ॥

ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।
ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥
ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।
ತಸ್ಮಾತ್ ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ,
ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:
ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರು
ಅವರ ಪರಿವಾರದವರಿಗೆ ನಮೋ ನಮ: ।
ಋಗ್ವೇದ ದಂಸ್ಕಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ
ಇವರುಗಳಿಗೆ ನಮಸ್ಕಾರಗಳು

# ದೇವತೆಗಳು

| | | | | | |
|---|---|---|---|---|---|
| **ಆದಿತ್ಯದೇವ** | : | ಅ) | ಸ್ತೋತ್ರ | ಆ) | ಆಶ್ರಮದಲ್ಲಿ |
| | | ಇ) | ಪ್ರಾರ್ಥನೆ | ಈ) | ವಿಶೇಷತೆಗಳು |
| **ಸೂರ್ಯದೇವ** | : | ಅ) | ಸ್ತೋತ್ರ | ಆ) | ಆಶ್ರಮದಲ್ಲಿ |
| | | ಇ) | ಪ್ರಾರ್ಥನೆ | ಈ) | ವಿಶೇಷತೆಗಳು |
| **ಸವಿತೃದೇವ** | : | ಅ) | ಸ್ತೋತ್ರ | ಆ) | ಆಶ್ರಮದಲ್ಲಿ |
| | | ಇ) | ಪ್ರಾರ್ಥನೆ | | |
| **ವರುಣದೇವ** | : | ಅ) | ಸ್ತೋತ್ರ | ಆ) | ಆಶ್ರಮದಲ್ಲಿ |
| | | ಇ) | ಪ್ರಾರ್ಥನೆ | ಈ) | ವಿಶೇಷತೆಗಳು |
| **ಮಿತ್ರಾವರುಣದೇವ** | : | ಅ) | ಸ್ತೋತ್ರ | ಆ) | ಆಶ್ರಮದಲ್ಲಿ |
| | | ಇ) | ಪ್ರಾರ್ಥನೆ | ಈ) | ವಿಶೇಷತೆಗಳು |
| **ಉಷೋದೇವಿ** | : | ಅ) | ಸ್ತೋತ್ರ | ಆ) | ಮಹಿಮೆಗಳು |
| | | ಇ) | ಪ್ರಾರ್ಥನೆ | | |

ಈ ವಿಭಾಗದಲ್ಲಿ ಎಲ್ಲಾ ಋಷಿಗಳ ಅಭಿಪ್ರಾಯಗಳನ್ನು ಒಟ್ಟುಗೂಡಿಸಿ,
ಪುನ: ಪುನ: ಬಂದವುಗಳನ್ನು ತೆಗೆದುಹಾಕಿ ಸಂಕುಚಿತಗೊಳಿಸಿ ಬರೆಯಲಾಗಿದೆ.

ಕೃತಜ್ಞತೆ :

**ಎಸ್. ಸೂರ್ಯನಾರಾಯಣ,** ವಿಜಯನಗರ, ಬೆಂಗಳೂರು - 560 040
ಇವರಿಂದ ರಚಿತವಾದ ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಅವರ ಅನುಮತಿಯ
ಮೇರೆಗೆ ಈ ಕಿರುಹೊತ್ತಿಗೆಯನ್ನು ತಯಾರಿಸಲಾಗಿದೆ.

ದಿನಾಂಕ : 15.03.2002

(ಎನ್.ಆರ್.ನಂಜುಂಡಯ್ಯ)

॥ ಓಂ ಶ್ರೀ ಮಹಾಗಣಪತಯೇ ನಮ: ॥

# ಸೂರ್ಯದೇವರು

ಸೂರ್ಯನ ತಲೆ ಕೂದಲಿನಂತಹ ಕಿರಣಗಳು ಯಾರೂ ಹೋಗಲಾಗದಂತಹ ಮಾರ್ಗಗಳಲ್ಲಿ ಸಂಚರಿಸುತ್ತವೆ. ತೊನ್ನು, ಕಾಮಾಲೆಗಳಂತಹ ಬಾಹ್ಯರೋಗಗಳು ಹೃದಯ ರೋಗಗಳಂತಹ ಒಳರೋಗಗಳನ್ನು ಸೂರ್ಯದೇವನು ನಾಶಮಾಡುತ್ತಾನೆ. ಶರೀರದ ಮೇಲಿನ ಪಚ್ಚೆ ಹಳದಿ ಬಣ್ಣವನ್ನು ಗಿಳಿಗಳಿಗೂ, ಮೈನಾಗಳಿಗೂ ಹರಿತಾಳ ವೃಕ್ಷಕ್ಕೂ ಹರಿಸುತ್ತಾನೆ. ಪ್ರಪಂಚಕ್ಕೆ ಕಣ್ಣಿನಂತಿದ್ದಾನೆ. ಸ್ವರ್ಗ, ಆಕಾಶ, ಭೂಮಿಗಳನ್ನೆಲ್ಲ ವ್ಯಾಪಿಸಿದ್ದಾನೆ. ಉಷೆಯನ್ನು ಹಿಂಬಾಲಿಸುತ್ತಾನೆ. ನಮ್ಮ ಪಾಪಗಳನ್ನು ನಾಶಮಾಡುತ್ತಾನೆ. ಸೂರ್ಯನು ಅಸ್ತನಾಗುವುದರೊಂದಿಗೆ ಎಲ್ಲರ ಕೆಲಸ ಕಾರ್ಯಗಳನ್ನು ಸ್ಥಗಿತಗೊಳಿಸುತ್ತಾನೆ. ಒಂದೇ ದಿನದಲ್ಲಿ ಸೂರ್ಯ ವಿಚಿತ್ರ ಅವಯವದ ಕುದುರೆಗಳು, ಭೂಮಿ, ಆಕಾಶವನ್ನೆಲ್ಲಾ ಸುತ್ತಿ ತಮಸ್ಸನ್ನು ನಿವಾರಿಸಿ ಪ್ರಭೆ ಉಂಟುಮಾಡುತ್ತವೆ. ಪುಣ್ಯಾತ್ಮರಾದ ಆರ್ಯಮ ವರುಣರು ಸಮಾನ ಪ್ರೀತಿಯಿಂದ ಸಿದ್ಧಪಡಿಸಿದ ಮಾರ್ಗದಲ್ಲಿ ಸೂರ್ಯನು ಅಂತರಿಕ್ಷ ಹತ್ತುತ್ತಾನೆ. ದ್ಯಾವಾ ಪೃಥ್ವಿಗಳ ಎದುರು ಉದಯಿಸಿ ಅಂತರಿಕ್ಷದಲ್ಲಿ ಸಂಚರಿಸುತ್ತಾ ಜಗತ್ತಿಗೆ ಗೋಚರನಾಗುತ್ತಾನೆ.

ಸೂರ್ಯನ ಕೆಲಸಗಳಲ್ಲಿ ಮಿತ್ರ, ವರುಣ, ಅಧಿತಿ, ಪೃಥ್ವಿ ಸಿಂಧು, ಅಂತರಿಕ್ಷದ ದೇವತೆಗಳು ಭಾಗಿಗಳು. ಅಹಸ್ಸುಗಳಲ್ಲಿ ಪ್ರಕಾಶಿಸುವ ಸೂರ್ಯನು ತನ್ನ ಅನೇಕ ವಿಧವಾದ ತೇಜಸ್ಸನ್ನು ಎಲ್ಲೆಡೆ ಹರಡುತ್ತಾನೆ. ಸ್ತುತಿ ಕರ್ತರಿಂದ ಸ್ತುತಿತನಾಗಿ ಪ್ರಭಾವಿ ಅಶ್ವಗಳೊಂದಿಗೆ ಉದಯಿಸುತ್ತಾನೆ. ಆಕರ್ಷಕ ರೂಪಿ, ಉದಯಿಸಿ ಸಕಲ ಭೂತ ಜಾತಗಳನ್ನು ನೋಡುತ್ತಾನೆ. ಮಾನವರ ಸ್ತೋತ್ರಗಳನ್ನು ಮಂತ್ರ ಪಠಣಗಳನ್ನು ಅರಿಯುತ್ತಾನೆ. ಚರಾಚರ ಜಗತ್ತಿಗೇ ಒಡೆಯ. ರಥದಲ್ಲಿ ಕುಳಿತು ಸಮಸ್ತರಿಗೂ ಕಾಣಿಸಿಕೊಳ್ಳುತ್ತಾನೆ. ಜಗತ್ತಿಗೆಲ್ಲ ಜ್ಞಾನೋತ್ಪಾದಕ. ಸಕಲ ಕರ್ಮ ರಕ್ಷಕ. ಸಾಗರದ ಮೇಲ್ಭಾಗದಲ್ಲಿ ಇರುವವನು. ದೇವತಾತ್ಮ, ದ್ಯುಲೋಕ ಉತ್ಪನ್ನ, ಮಹಾತೇಜಸ್ವಿ, ಹೊಂಬಣ್ಣದ ಕೇಶರಾಶಿಯವನು, ಅಂಧಕಾರ ನಾಶಮಾಡುವವನು, ಕೋಪಗೊಳ್ಳದವನು, ಮಿತ್ರಾವರುಣರನ್ನು ದೂರದಿಂದಲೇ ನೋಡುತ್ತಾನೆ. ಸೂರ್ಯನು ಇಚ್ಛಿಸಿದಾಗ ವೇಗಗಾಮಿ ಅಶ್ವಗಳು ರಥಕ್ಕೆ ನಿಯೋಜಿತವಾಗುತ್ತವೆ. ಸ್ವಧಾ ಆಹುತಿಯ ನಂತರ ಉದಯಿಸುತ್ತಾನೆ.

ರಾತ್ರಿ ವಿಶ್ರಾಂತಿಗಾಗಿ ಸಕಲ ಭೂತ ಜಾತಗಳು ನಿದ್ದೆ ಮಾಡುತ್ತವೆ. ಸರ್ವವನ್ನು ತಿಳಿದವನು, ಪೋಷಿಸುವವನು, ಧನಾಧಿಪತಿ. ಆಯುಸ್ಸು ಅನುಗ್ರಹಿಸುವವನು, ವಾಯುಪ್ರೇರಿತ, ನಕ್ಷತ್ರ ಗ್ರಹಾದಿ ತೇಜಸ್ಸಿಗಿಂತಲೂ ಅಧಿಕ ತೇಜಸ್ವಿ, ಅಸುರರನ್ನು ನಾಶ ಮಾಡುವವನು, ಯಾಗ ಪೋಷಕ, ಭೂಮಿಯಲ್ಲಿನ ಉದಕವನ್ನು ಆಕರ್ಷಿಸುವವನು. ಪ್ರತಿದಿನವೂ ಉಷ: ಕಾಲಾ ನಂತರ ಉದಯಿಸಿ ಆಕಾಶ, ದ್ಯಾವ, ಪೃಥ್ವಿಗಳ ನಡುವೆ ಸಂಚರಿಸುತ್ತಾ ಸಮಸ್ತ ಪ್ರಾಣವರ್ಗವನ್ನೂ ಸಲಹುತ್ತಾ ನೋಡುತ್ತಿರುತ್ತಾನೆ. ದಶ ದಿಕ್ಕುಗಳನ್ನೂ ಪ್ರಕಾಶಿಸುತ್ತಾ ಧರ್ಮ ದೇವನಂತೆ, ಇಂದ್ರ ದೇವನಂತೆ ಸ್ಥಿರನಾಗಿದ್ದಾನೆ. ಸೂರ್ಯ ತೇಜಸ್ಸು ಜಗತ್ತನ್ನು ವೃಷ್ಟಿ ಪ್ರಧಾನಗಳಿಂದ ಬಲಯುತ ಅನ್ನ, ದಾನ್ಯಗಳನ್ನು ನೀಡುತ್ತದೆ. ಸೂರ್ಯನು ಅದಿತಿಪುತ್ರ. ವಸತಿದಾಯಕ, ಮರಣ, ಧರ್ಮ ರಹಿತ. ಮೂರು ಲೋಕಕ್ಕೂ ಒಬ್ಬನೇ ನೇತ್ರ್ಯ ತಮೋ ನಿವಾರಣೆಗಾಗಿ ದೇವತೆಗಳಿಂದ ಕಳುಹಿಸಲ್ಪಟ್ಟ ದೇವತಾತ್ಮ.

ವಿಷ ಜಂತುಗಳನ್ನು, ಸ್ತ್ರೀಜಂತುಗಳನ್ನು ಹಿಂಸಿಸಿ ನಾಶಮಾಡುತ್ತಾನೆ. ಪ್ರಾಣಗಳ ಉಪಕಾರಕ್ಕಾಗಿ ವಿಷೋದಕವನ್ನು ಹೀರಿ ವಿಷವನ್ನು ಪೂರ್ಣವಾಗಿ ನಾಶಮಾಡುತ್ತಾನೆ. ವಿಷವನ್ನು ಸೆಳೆದುಕೊಂಡು ಪ್ರಸರಿಸದಂತೆ ಮಾಡುತ್ತಾನೆ. ಎಲ್ಲರನ್ನೂ ಅವರವರ ಕೆಲಸಗಳಲ್ಲಿ ನಿರತರಾಗಿರುವಂತೆ ಮಾಡುತ್ತಾನೆ.

# ಸೂರ್ಯದೇವರು
## ವಿಶೇಷಣಗಳು

ಸೂರ್ಯಮಂಡಲ ಮಧ್ಯವರ್ತಿ, ಅಂತರ್ಯಾಮಿ, ಪರಬ್ರಹ್ಮನೆಂದು ತಿಳಿಯುತ್ತಾರೆ. ಸೂರ್ಯ ಉಪಾಸನೆ ಮಾಡುವವರು, ಸೂರ್ಯಲೋಕವನ್ನು ಅಂದರೆ ಪರಮ ಪದವನ್ನು ಪಡೆಯುತ್ತಾರೆ. ಸೂರ್ಯದೇವನು ಮೂರು ವೇದಗಳ ಮಹಿಮೆಯಿಂದ ತನ್ನ ಗತಿಯನ್ನು ನಿರ್ವಹಿಸುತ್ತಾನೆ. ಶರೀರದಲ್ಲಿಯ ಪ್ರಾಣವಾಯು, ವೇದದ ಉಚ್ಚಾರಣೆಗೆ ಪ್ರೇರಿಸುತ್ತದೆ. ವೇದ ಸ್ವರ್ಗ ಪ್ರಾಪ್ತಿಗೆ ಸಾಧನ. ಋಷಿಗಳು ವೇದವು ನಾಶವಾಗದಂತೆ ರಕ್ಷಿಸುತ್ತಾರೆ. ಆದಿತ್ಯನು ಅತಿ ಎತ್ತರದಲ್ಲಿ ಅಂತರಿಕ್ಷದಲ್ಲಿ ಎಲ್ಲಾ ದಿಕ್ಕುಗಳನ್ನು ಬೆಳಗುತ್ತಾ ಲೋಕಗಳ ಮಧ್ಯೆ ಪುನ: ಪುನ: ಸುತ್ತುತ್ತಲೇ ಸಕಲ ಪ್ರಾಣಿಗಳನ್ನು ಕಾಪಾಡುತ್ತಾ ಇದ್ದಾನೆ. ಸೂರ್ಯನ ಸಮೀಪ ಯಾವ ರಾಕ್ಷಸರು ಸುಳಿಯಲಾರರು. ಸತ್ಯಾತ್ಮಕ ದಿಕ್ಕುಗಳು ದ್ವಾರಾ ಪೃಥ್ವಿಗಳು ಹೊಂದುವಂತೆ ಸಕಲ ಲೋಕಗಳು ಕಂಪಿಸುವಂತೆ ಸೂರ್ಯನು ಉದಯಿಸುವಂತೆಯೂ ಮಾಡುತ್ತವೆ. ಅಂತರಿಕ್ಷ ದೇವತೆಗಳಾದ ಮಿತ್ರ, ವರುಣ, ಅಧಿತಿ, ಪೃಥ್ವಿ ಸಿಂಧು, ಸಾಗರ, ಸೂರ್ಯನ ಮಹತ್ವಶಕ್ತಿಯನ್ನು ಮಹತ್ವವನ್ನಾಗಿ ಮಾಡಿವೆ ಎಂದು ಆಂಗೀರಸರು ಹೇಳಿದ್ದಾರೆ.

ಕೆಲವು ಚೂರ್ಣಗಳು ಔಷಧ ರೂಪ ಗಂಧದಿಂದ ಬರುವಾಗಲೇ ದೇಹ ತೊಳೆಯುವಾಗಲೇ ವಿಷವು ನಾಶವಾಗುತ್ತದೆ. ಹಗಲು ರಾತ್ರಿಗಳು ಸೂರ್ಯನ ಅಧೀನ. ಹರಿತ್ಸು ಎಂಬ 7 ಹೆಣ್ಣು ಕುದುರೆಗಳು ಸೂರ್ಯನನ್ನು ಸುರಕ್ಷಿತವಾಗಿ ಕರೆದೊಯ್ಯುತ್ತವೆ. ಗೋಚರಿಸುವ ಗೋಚರವಾಗದಿರುವ ಅಲ್ಪ ಅಧಿಕ ವಿಷಧರಗಳು ಮನುಷ್ಯನನ್ನು ಕಚ್ಚಿ ವಿಷಪೂರಿತವನ್ನಾಗಿ ಮಾಡುತ್ತವೆ. ಈ ವಿಷದರಗಳ ಕಣ್ಣಿಗೆ ಮನುಷ್ಯನು ಕಾಣುತ್ತಾನೆ. ಮನುಷ್ಯನ ಕಣ್ಣಿಗೆ ಅವು ಕಾಣುವುದಿಲ್ಲ. ಶರ, ಕುಶ, ಮಂಜ, ವೀರಣ, ತೃಣಗಳಲ್ಲಿ ಅಡಗಿರುವ ಈ ವಿಷದರಗಳು ರಾತ್ರಿಯ ವೇಳೆ ಮಾನವರ ಶರೀರ ಕಚ್ಚಿ ವಿಷದರವನ್ನಾಗಿ ಮಾಡುತ್ತವೆ. ಸರ್ಪಗಳಿಗೆ ದ್ಯುಲೋಕವು ತಂದೆ, ಪೃಥ್ವಿಯು ತಾಯಿ, ಅಂತರಿಕ್ಷವು ಸೋದರ ಅದಿತಿಯು ಸೋದರಿ, ಸೋಮವು ಆಧಾರ. ಇವರನ್ನು ಯಾರೂ ನೋಡಲಾಗುವುದಿಲ್ಲ.

ಸೂರ್ಯನು ಅಂತರಂಗದ ಬಾಹ್ಯದ ರೋಗಗಳನ್ನು ಅನಿಷ್ಟಗಳನ್ನು ನಿವಾರಿಸುತ್ತಾನೆ. ರೋಗ ರೂಪಿ ಶತ್ರುಗಳನ್ನು ನಾಶಮಾಡಿ ನಮ್ಮನ್ನು ರಕ್ಷಿಸುತ್ತಾನೆ. ಸೂರ್ಯನು ಸಮಸ್ತ ಪ್ರಾಣಿಗಳ ಆತ್ಮ. ತನ್ನ ಕಾಂತಿಯಿಂದ ಮೂರು ಲೋಕಗಳನ್ನು ತುಂಬುತ್ತಾನೆ. ಸೂರ್ಯನು ಬೆಳಕು ಕಂಡಾಗ ಹಗಲು, ಸಂಜೆ ಮರೆಯಾದಾಗ ರಾತ್ರಿ. ಮಾನವರ ಸತ್ಯಾಸತ್ಯ ಜೀವನವನ್ನು ವ್ಯವಹಾರಗಳನ್ನು ಕಣ್ಣಿಟ್ಟು ನೋಡುತ್ತಿರುತ್ತಾನೆ. ಅಂತಹವರಲ್ಲಿ ಪಾಪ ರಹಿತ ಆದವರನ್ನು ಮಾತ್ರ ಪಾಪ ರಹಿತರು ಎಂದು ಮಿತ್ರಾವರುಣರಿಗೆ ತಿಳಿಸುತ್ತಾನೆ. ಆಗ ಮಾತ್ರ ಅಂತಹವನು ದೇವತೆಗಳ ಸನ್ನಿಧಿಯಲ್ಲಿ ಸತ್ಯಾತ್ಮಕ ವ್ಯವಹಾರವುಳ್ಳವನು ಎಂದು ಪರಿಗಣಿತ ಆಗುತ್ತಾನೆ. ಸೂರ್ಯನು ಪ್ರಜಾಪತಿಯಿಂದ ನಿರ್ಮಿತನಾದವನು. ಮಂತ್ರಾರ್ಥ ತಿಳಿಯದಿದ್ದರೂ ಕೇವಲ ಪಠಣ ಮಾಡುವುದರಿಂದ ಇವರು ನಮ್ಮವರೆಂದು ಅಭಿಮಾನದಿಂದ ಇಂದ್ರನು ರಕ್ಷಿಸುತ್ತಾನೆ.

### ಆಶ್ರಮಗಳಲ್ಲಿ

ಋತ್ವಿಜರು ಉತ್ತಮ ಮನಸ್ಸಿನವರು, ಪಾಪರಹಿತರು, ರೋಗ ರುಜಿನ ರಹಿತರು, ಸೂರ್ಯನಿಗೆ ಪ್ರಥಮ ವಂದನೆ ಅರ್ಪಿಸುತ್ತಾರೆ, ಅನಂತರ ವಿಹಿತ ಕರ್ಮಗಳನ್ನು ಮಾಡುತ್ತಾರೆ, ಆ ಕರ್ಮಗಳನ್ನು ಇಂದ್ರನು ಅನುಮೋದಿಸಲಿ ಎಂದು ಪ್ರಾರ್ಥಿಸುತ್ತಾರೆ. ಯಜ್ಞಗಳನ್ನು ಸ್ತುತಿಗಳನ್ನು ಮಾಡುತ್ತಾರೆ. ಸೂರ್ಯನು ಉದಯಿಸುತ್ತಲೇ ಯಾಜ್ಞಿಕರು ಕರ್ಮಗಳನ್ನು ಆರಂಭಿಸುತ್ತಾರೆ. ಜನರು ಸೂರ್ಯಾಭಿಮುಖವಾಗಿ ನಾನಾ ಸ್ತೋತ್ರ, ನಮಸ್ಕಾರಗಳನ್ನು ಮಾಡುತ್ತಾರೆ.

### ಪ್ರಾರ್ಥನೆಗಳು

ರೋಗ ಶತ್ರುಗಳನ್ನು ನಾಶಮಾಡಿ ಆರೋಗ್ಯ ಕರುಣಿಸಲಿ. ನದಿಗಳು ನಮ್ಮೆಲ್ಲರ ವಿಷವನ್ನು ಪೂರ್ಣವಾಗಿ ಅಪಹರಿಸಲಿ. ವಿಷ ಜಂತುಗಳು ನಮ್ಮ ಸಮೀಪ ಬಾರದಿರಲಿ. ನಮಗೆ ತೊಂದರೆ ಮಾಡದೇ ಅವು ಎಲ್ಲಿಯಾದರೂ ಸುಖವಾಗಿ ಇರಲಿ. ನಾವು ಅರ್ಪಿಸುವ ಸ್ತೋತ್ರಗಳು ಯಜ್ಞಯಾಗಾದಿಗಳು ಸೂರ್ಯಮಂಡಲ ಸೇರಲಿ.

# ಸೂರ್ಯದೇವರು

## ಪ್ರಾರ್ಥನೆಗಳು

ಯಾಜಮಾನನು ನೂರು ವರ್ಷಗಳ ಕಾಲ ಬಾಳುವಂತಾಗಲಿ. ನದಿಗಳು ಎಲ್ಲೆಲ್ಲ ಹರಿಯಲಿ ಅವು ಮಾನವರಿಗೆ ರೋಗಕಾರಕವಾಗದಿರಲಿ. ಸರ್ಪವು ಯಜಮಾನನ ಪಾದಚಲನೆ ತಿಳಿಯದಿರಲಿ. ಅಗ್ನಿಯು ನದಿಯ ಹಾಗೂ ವೃಕ್ಷಗಳ ವಿಷವನ್ನು ನಾಶಮಾಡಲಿ. ನಮ್ಮ ಸ್ತುತಿಯನ್ನು ಸೂರ್ಯದೇವನು ಕೇಳಲಿ. ಕೆಡಕು ಸಂಭವಿಸದಂತೆ ಸೂರ್ಯನು ರಕ್ಷಿಸಲಿ. ಅಂತರಿಕ್ಷ ವಾಸಿಗಳಿಗೆ ಶತ್ರುಗಳಿಂದ ವಾಯುವು ರಕ್ಷಣೆ ನೀಡಲಿ. ಪೃಥ್ವಿಯಲ್ಲಿ ಶತ್ರುಗಳಿಂದ ರಕ್ಷಣೆಯನ್ನು ಅಗ್ನಿಯು ನೀಡಲಿ. ಸೂರ್ಯನು ನಮ್ಮ ಚಕ್ಷುರಿಂದ್ರಿಯಗಳನ್ನು ನೋಡಲು ಸಹಾಯವಾಗುವಂತೆ ಪ್ರಕಾಶಿಸಲಿ. ಇಂದ್ರನ ಸಹಚರ ಪರ್ವತಾಖ್ಯ ದೇವನು ನೋಡುವ ಸಾಮರ್ಥ್ಯ ಕೊಡಲಿ. ಮಂತ್ರ ದಂಸ್ಕಾರರಿಗೆ ತೇಜಸ್ಸಿನ ದೃಷ್ಟಿ ಕೊಡಲಿ. ಪಶು ಪುತ್ರಾದಿಗಳಿಗೆ ಸುಖ ಕೊಡಲಿ. ತಿನ್ನುವಾಗ, ಕುಡಿಯುವಾಗ ಶಕ್ತಿ, ಆರೋಗ್ಯ ಹೊಂದುವಂತಾಗಲಿ. ಸೂರ್ಯನನ್ನು ಬಹುಕಾಲ ನೋಡುವಂತಾಗಲಿ. ಮುಪ್ಪಿನ ವರೆಗೆ ಕಲ್ಯಾಣ ಹೊಂದುವಂತಾಗಲಿ. ತೇಜಸ್ಸನ್ನು ನೋಡುವ ಕಣ್ಣಿಗೆ ಸುಖವಾಗಿರಲಿ. ಪಾಪ ರೋಗರಾಹಿತ್ಯಾದಿಗಳು ಇಲ್ಲದಂತಾಗಲಿ. ಗೃಹವು ಆಕರ್ಷಕ ಧನ ಹೊಂದಲಿ. ಕೆಟ್ಟ ಕನಸ್ಸಿನ ಫಲವು ಹೋಗಲಿ. ಅಧಿಕ ದು:ಖಪ್ರಾಪ್ತವಾಗದಿರಲಿ. ಪ್ರತಿದಿನವೂ ಶ್ರೇಯಸ್ಕರ ಧನ ಸಂಪಾದನೆಗೆ ಸೂರ್ಯನು ಉದಯಿಸಲಿ. ಶತ್ರುಗಳನ್ನು ನಾಶಮಾಡಲಿ. ವಿಶೇಷ ಜ್ಞಾನವಂತರಾಗುವಂತೆ ಅನುಗ್ರಹಿಸಲಿ. ಸತ್ಯಾತ್ಮಕ ವಾಕ್ಕುಗಳು ಎಲ್ಲ ಕಡೆಯಿಂದಲೂ ಯಜಮಾನನನ್ನು ರಕ್ಷಿಸಲಿ.

## ಆದಿತ್ಯ

ಅತ್ಯುತ್ತಮ ದಾನಿ, ತೇಜೋಯುಕ್ತ, ವಸತಿದಾಯಕ, ಸ್ತೋತೃಗಳು ತನ್ನ ಆಶ್ರಿತರಾಗುವಂತೆ ಮಾಡುತ್ತಾನೆ. ಶತ್ರುಗಳನ್ನು ಸೋಲಿಸುತ್ತಾನೆ. ಅತ್ಯಂತ ಉಪಕಾರಿಗಳು, ಶೀಘ್ರಗಾಮಿಗಳು. ನಂಬಿದವರಿಗೆ ಕೇಡು ಬಯಸದವರು, ಭಕ್ತ ವರ್ಗಕ್ಕೆ ತೃಪ್ತಿಯಾಗುವಷ್ಟು ಧನ ಆದಿತ್ಯನಲ್ಲಿದೆ. ಆದಿತ್ಯ ಸಂಚಾರ ಮಾರ್ಗವು ಅಪ್ರತಿಹತ, ಅಹಿಂಸಕ, ಭಕ್ತರ ಅಭೀಷ್ಟಪೂರೈಸಿ ಅಭಿವೃದ್ಧಿ ಪಡಿಸುತ್ತಾರೆ. ಆದಿತ್ಯನು ಅನ್ನದಾತ, ಲೋಕ ರಕ್ಷಕ, ಹಿರಣ್ಮಯ ಪ್ರಕಾಶಕ. ಉದಕ ಶೇಖರಿಸಿ ರಕ್ಷಿಸುವವನಾಗಿದ್ದಾನೆ. ಪ್ರಾಣಿಗಳನ್ನು ಸ್ಥಾಪಿಸಿ ಧರಿಸುವವನಾಗಿದ್ದಾನೆ. ಸಸ್ಯಾದಿ ಬೆಳೆಗೆ ಅನುಕೂಲ ಮಾಡಿಕೊಡಲು ಉದಕ ಸಮೀಪವೇ ಇರುತ್ತಾನೆ. ತೇಜಸ್ಸಿನಿಂದ ಅಂಧಕಾರ ನಿವಾರಣೆ ಮಾಡುತ್ತಾನೆ. ಇತರರಿಂದ ಬೇಡದಂತೆ ಮಾಡುತ್ತಾನೆ. ಸೋಮ ಅರ್ಪಿಸುವವರಿಗೆ ಧೈರ್ಯ ಹೇಳಿ ಅವರಿಗೆ ಧನ, ಸುಖ ಕೊಡುತ್ತಾನೆ. ದೇವತಾತ್ಮರು, ಉತ್ಕೃಷ್ಟಜ್ಞಾನಿಗಳು, ಮಂಗಳ ಕಾರಕರು, ಸಕಲ ಸಂಪತ್ತನ್ನು ಹೊಂದಿರುವವರು, ಅತಿಶಯ ಸುಖದಾತರು, ರಕ್ಷಕರು, ಆದಿತ್ಯನ ಆಶ್ರಯಿಗಳು ದೇವತೆಗಳಿಂದ ಅತ್ಯುತ್ತಮ ರಕ್ಷಣೆ ಪಡೆಯುತ್ತಾರೆ. ಋತುಗಳು ಜಗತ್ತಿನ ಶ್ರೇಯಸ್ಸಿಗಾಗಿ ಚಲಿಸುತ್ತವೆ. ರಥವು ಊರ್ಧ್ವಮುಖ ಅಧೋಮುಖ ಚಲಿಸುತ್ತದೆ. ಆದಿತ್ಯನು ಸುವರ್ಣ ಹಸ್ತದವನು. ಆದಿತ್ಯನೇ ಸಂವತ್ಸರ, ಮಿತ್ರಾ, ವರುಣ, ಅಂತರಿಕ್ಷ, ದ್ಯಾವಾ, ಪೃಥ್ವಿಗಳಿಗೆ ನಿಶ್ಚಿತ ಧನವನ್ನು ಆದಿತ್ಯನು ನೀಡುತ್ತಾನೆ.

### ಆಶ್ರಮ

ಸುಗಮ ಮಾರ್ಗದಲ್ಲಿ ಯಜ್ಞಕ್ಕೆ ಬರಲಿ, ತೃಪ್ತಿಯಾಗುವಷ್ಟು ಹವಿಸ್ಸು, ಸೋಮ ಸ್ವೀಕರಿಸಲಿ. ಯಾರ ವಿಷಯದಲ್ಲೂ ದುರ್ಭಾಷೆ ಆಡಬಾರದು, ಆಡಲು ಇಷ್ಟಪಡಲೂಬಾರದು. ದುಷ್ಟರ ವಿಷಯದಲ್ಲಿ ಭಯದಿಂದ ಇರಬೇಕು. ಆಟದ ದಾಳಗಳು ಕೆಳಗೆ ಬೀಳುವವರೆಗೆ ಅನುಕೂಲವೋ ಅನಾನುಕೂಲವೋ ತಿಳಿಯದು. ಬೇರೆಯವರನ್ನು ದೂರುವ ಬದಲು ದೇವತೆಗಳಾದ ಆರ್ಯಮಾ, ಮಿತ್ರ, ವರುಣರನ್ನು ಸೇವಿಸಲು ಹೇಳುತ್ತಾರೆ. ಚರು, ಪುರೋಡಾಶ ಅರ್ಪಿಸುವವರ ಯಜ್ಞಗೃಹಕ್ಕೆ ಆದಿತ್ಯನು ಬರುತ್ತಾನೆ(ಯಜ್ಞ ಗೃಹ). ಆದಿತ್ಯನಿಗಾಗಿ ಆಶ್ರಮಗಳಲ್ಲಿ ಉತ್ತಮ ಯಾಗಗಳನ್ನು ನಿರ್ವಹಿಸಲಾಗುತ್ತದೆ.

# ಆದಿತ್ಯ

## ಪ್ರಾರ್ಥನೆಗಳು

ಯಾರೂ ಹಿಂಸಿಸಲಾಗದ ಮಹತ್ತಾದ ರಕ್ಷಣೆ ಕೊಡಲಿ. ಸ್ತುತಿಸುವವರ ಮನೆಗೆ ಶತ್ರುಗಳಿಂದ ಹಿಂಸೆ ಆಗದಿರಲಿ. ಇಕ್ಕಟ್ಟಾದ ಮಾರ್ಗಗಳಲ್ಲಿ ಯಾರೂ ಹಿಂಸಿಸದಿರಲಿ. ಧನವನ್ನೂ, ಸಂತತಿಯನ್ನೂ ಅನುಗ್ರಹಿಸಲಿ, ದೇವಮಾತೆ ಅದಿತಿಯ ಪುತ್ರರಾದ ಆರ್ಯಮಾ, ಮಿತ್ರ, ವರುಣರು ದ್ವೇಷಿಗಳ ಮಧ್ಯದಿಂದ ಸುರಕ್ಷಿತ ಸ್ಥಾನಕ್ಕೆ ಕರೆದೊಯ್ಯಲಿ. ಸ್ತೋತ್ರಗಳನ್ನು ಮಾಡಿದವರ ಪಾಪಗಳನ್ನು ಪರಿಹರಿಸಲಿ. ಈ ಹಿಂದೆ ಋಷಿಗಳು ಅನುಭವಿಸಿದಂತೆ ನೂರು ವರ್ಷ ಆಯಸ್ಸು ಹೊಂದುವಂತಾಗಲಿ. ಅಪರಾಧಗಳು ಏನೇ ಆಗಿದ್ದರೂ ಅದಿತಿ ಮಿತ್ರಾ ವರುಣರು ಕ್ಷಮಿಸಿ ರಕ್ಷಿಸಲಿ. ಸನ್ಮಾರ್ಗದಲ್ಲಿ ಕರೆದೊಯ್ಯಲಿ. ನಮ್ಮ ಪುತ್ರರು ಗೋವುಗಳಿಗೂ ಒಳ್ಳೆಯದನ್ನು ಮಾಡಲಿ.

ಪೃಥ್ವಿಯ ಮೇಲಿರುವ ನಮ್ಮನ್ನು ಬಗ್ಗಿ ನೋಡಿ ರೋಗ ರಹಿತರನ್ನಾಗಿ ಮಾಡಲಿ. ಶತ್ರುಗಳಿಂದ ಆಪತ್ತುಗಳಿಂದ ರಕ್ಷಿಸಲಿ. ಅದಿತಿಯಿಂದ ದಕ್ಷ ಪುನಃ ದಕ್ಷನಿಂದ ಅದಿತಿ. ಈ ಅದಿತಿಯಿಂದ ಮಿತ್ರ, ಆರ್ಯಮ, ವರುಣರೂ ಆದಿತ್ಯಾದಿ ಅಷ್ಟ ಪುತ್ರರು, ದೇವತೆಗಳು ಉತ್ಪನ್ನರಾದರು. ಇವರು ಮಂಗಳಪ್ರದರು, ಮರಣ ಧರ್ಮ ರಹಿತರು, ಬಂಧನ ರಹಿತರು, ದೇವತೆಗಳು ತೇಜಸ್ಸಿನಿಂದ ಸರಸ್ಸಿನಲ್ಲಿ ಸ್ಥಿತರಾದರು. ಆಗ ತೀಕ್ಷ್ಣವಾದ ತೇಜಸ್ಸು ಉದ್ಭೂತವಾಯಿತು. ಲೋಕವೆಲ್ಲ ತೇಜಸ್ಸಿನಿಂದ ತುಂಬಿಹೋಯಿತು. ಉಪಯುಕ್ತ ಮೇಘವು ತುಂಬಿತು. ಅದಿತಿಯು ಸೂರ್ಯನನ್ನು ಮೇಲಕ್ಕೆ ಕಳುಹಿಸಿ ಉಳಿದ 7 ಜನರೊಂದಿಗೆ ಹಿಂದಿನ ಯುಗಕ್ಕೆ ಹೋಗಿ ದೇವತೆಗಳನ್ನು ಸೇರಿದಳು. ದ್ಯುಲೋಕದಿಂದ ಮೇಘ ಮಧ್ಯದಿಂದ ಆದಿತ್ಯನು ಹೊರಬಂದನು. ಆದಿತ್ಯನು ಹೊರಬಂದ ನಂತರ ಪ್ರಾಣಿಗಳ ಉತ್ಪತ್ತಿ ಹಾಗೂ ಕ್ಷಯಕ್ಕಾಗಿ ದ್ಯುಲೋಕವು ಸ್ಥಾಪಿತವಾಯಿತು. ಅಮೃತತ್ವ ತತ್ವದಿಂದ ಪೂರ್ವಭಾವಿಯಾಗಿ ದೇವಾದಿಗಳು ಉತ್ಪನ್ನರಾದರು. ಸೃಷ್ಟಿ ಪೂರ್ವದಲ್ಲಿ ಇದ್ದದ್ದು ಪ್ರಾರಂಭದಲ್ಲಿ ನಾಮ ರೂಪರಹಿತ ತತ್ವದಿಂದ ನಾಮರೂಪದಿಂದ ಕೂಡಿದ ಜಗತ್ ಉತ್ಪತ್ತಿಯಾಯಿತು. ಅನಂತರ ನಾಮರೂಪ ದೇವತೆಗಳು. ಬ್ರಹ್ಮಣಸ್ಪತಿಯು ದೇವತೆಗಳಲ್ಲಿ ಚೈತನ್ಯ ಮೂಡಿಸಿದನು. ತದನಂತರ ಊರ್ಧ್ವಮುಖ ಬೆಳೆದ ವೃಕ್ಷಗಳು ಉತ್ಪನ್ನವಾದವು. ಭೂಲೋಕವಾಯಿತು. ಭೂಲೋಕ ಪೃಥ್ವಿಯಿಂದ ದಿಕ್ಕುಗಳಾದವು.

## ವಿಶೇಷಣಗಳು

ಇವರು ಪ್ರಸಿದ್ಧ ಕ್ಷತ್ರಿಯ ವಂಶಜರು. ದೇವತೆಗಳಿಗಿಂತ ಮೇಲ್ಭಾಗದಲ್ಲಿರುವವರು. ಮಾನವರ ಹೃದಯದಲ್ಲಿನ ಪಾಪ ಪುಣ್ಯ ತಿಳಿಯುತ್ತಾ ಋಣ ಪರಿಹರಿಸುತ್ತಾರೆ. ತ್ರಿಲೋಕ ಮಧ್ಯದಲ್ಲಿ ಇದ್ದಾರೆ. ಆದಿತ್ಯನ ಭಕ್ತರಿಗೆ ಅತೀ ಕ್ರೋಧ ಅಥವಾ ಅತೀವ ದುಃಖ ಬರುವುದಿಲ್ಲ. ಸತ್ಕರ್ಮಗಳನ್ನು ಮಾಡಿಯೇ ಆದಿತ್ಯನಿಂದ ಫಲ ಪಡೆಯಲು ಸಾಧ್ಯ. ಆದಿತ್ಯ ಸೂರ್ಯರ ಅನುಗ್ರಹದಿಂದ ಉದಕಗಳು ಅಧೋಮುಖಿ ಹರಿದವು. ಅಹೋರಾತ್ರಿಗಳು ಸಮಾನ ಬಂಧುಗಳು, ಮೂರು ನದಿರೂಪ ಸ್ತ್ರೀಯರು ಸವನ ತ್ರಯಗಳಲ್ಲಿಯೂ ಇಳಿದು ಬರುತ್ತಾರೆ.

# ಸವಿತೃ ದೇವರು

ಪ್ರಕಾಶಮಾನ, ಪ್ರಸಿದ್ಧ, ಸರ್ವಜ್ಞ, ದ್ಯುಲೋಕೋತ್ಪನ್ನ, ಸಂಚಾರ ಕರ್ಮಿ, ಜಗತ್ ಸೃಷ್ಟಿ ಕರ್ಮವುಳ್ಳವನಾಗಿ ಲೋಕತೃಪ್ತಿಗಾಗಿ ಪ್ರತಿದಿನವೂ ಉದಿಸಿ ಮೇಲೇರುವ ಸವಿತೃವು ದೇವ ಪತ್ನಿಯರ ಪಾಲಕ. ಧನದಾತ, ಸ್ತೋತ್ರಗಳಿಂದ ಸ್ತುತಿತನಾದವನು. ತನ್ನ ಕಿರಣಗಳಿಂದ ಜಗತ್ತಿನ ಕಲ್ಯಾಣ ಮಾಡುವವನಾಗಿದ್ದಾನೆ. ಸಂಚಾರಿ ಜನರನ್ನು ಅವರ ಸಂಚಾರ ಕರ್ಮಗಳನ್ನು ನಿಯಂತ್ರಿಸುತ್ತಾನೆ. ಸವಿತೃ ಸೂರ್ಯನ ಆವಿರ್ಭವಿಸಿ ಕಾಲವಿಭಾಗ ಮಾಡುತ್ತಾನೆ. ಸೂರ್ಯಾಸ್ತವಾಗಿ ರಾತ್ರಿ ಆವಿರ್ಭವಿಸಿದಾಗ ಪ್ರಾಣಿಗಳು ಕರ್ಮನಿರತರುಕೆಲಸವನ್ನು ನಿಲ್ಲಿಸಿ ಮನೆಗೆ ಹಿಂತಿರುಗುತ್ತಾರೆ. ಸವಿತೃವಿನ ಈ ಕರ್ಮವನ್ನು ಇಂದ್ರ, ವರುಣ, ಮಿತ್ರ, ಆರ್ಯಮ, ರುದ್ರ, ಯಾರೂ ತಡೆಯಲಾರರು.

# ಸವಿತೃ ದೇವರು

ವರುಣನು ಸೂರ್ಯಾಸ್ತಾ ನಂತರ ಜಂಗಮ ಪ್ರಾಣಿಗಳಿಗೆ ವಿಶ್ರಾಂತಿಗಾಗಿ ಅಗತ್ಯವಾದ ಸುಖಕರ ಸ್ಥಾನವನ್ನು ಕಲ್ಪಿಸಿದ್ದಾನೆ. ಸಮಸ್ತ ಪಕ್ಷಿಗಳು, ಪ್ರಾಣಿಗಳು ಬೇರೆ ಬೇರೆ ದಿಕ್ಕಿನಲ್ಲಿ ಹೋಗಿ ತಮ್ಮ ತಮ್ಮ ನಿವಾಸ ಸೇರುತ್ತವೆ. ಜಗತ್ತನ್ನು ಶುದ್ಧಿಗೊಳಿಸಲು ಗಂಗಾದಿ ನದಿಗಳು ಕರ್ಮ ನಿಮಿತ್ತ ಹರಿಯುತ್ತವೆ. ವಾಯುವು ಕ್ರೀಡಿಸುತ್ತದೆ. ಮೃಗ ಪಕ್ಷಿಗಳು ಅರಣ್ಯದಲ್ಲಿ ಉದಕ ಹುಡುಕುವುವು. ಅಂತರಿಕ್ಷದಲ್ಲಿ ಸವಿತೃ ವ್ಯಾಪಿಸುತ್ತಾನೆ. ಅಗ್ನಿಯು ಅನ್ನಕ್ಕೆ ಅಧಿಪತಿ. ಸವಿತೃವು ಪ್ರಕಾಶಮಾನಿ.

ಜಗತ್ ಪಾಲಕ, ಯಜ್ಞರಕ್ಷಕ, ಸತ್‌ಕರ್ಮ ಪ್ರೇರಕ. ದೇವತಾತ್ಮ, ಬಲಶಾಲಿ, ನಾನಾ ಸುಖಕ್ಕೆ ಆಧಾರಿ. ಸರ್ವರಿಗೂ ಆಶ್ರಯಿ. ಸವಿತೃವು ತನ್ನ ತೇಜಸ್ ಪ್ರಕಾಶದಿಂದ ಲೋಕ ಪ್ರಕಾಶಕ ಆಗಿದ್ದಾನೆ. ಯಜ್ಞ ರಕ್ಷಕ. ಹೊಂಬಣ್ಣದ ಕವಚಧಾರಿ, ಸರ್ವವ್ಯಾಪಿ, ಸ್ವರ್ಗ ಪೃಥ್ವಿಗಳನ್ನು ತೇಜಸ್ಸಿನಿಂದ ವ್ಯಾಪಿಸಿ ಸುಖ ಉಂಟುಮಾಡುತ್ತಾನೆ. ಸೃಷ್ಟಿ ಕಾರ್ಯಕ್ಕೆ ಸಹಾಯಕನಾಗಿದ್ದಾನೆ. ಪ್ರಜಾಪಾಲನೆಗೆ ಸಹಾಯಕನಾಗಿದ್ದಾನೆ. ಸವಿತೃವು ಮೂರು ಲೋಕಗಳನ್ನು ಅಗ್ನಿ, ವಾಯು, ಆದಿತ್ಯ ತತ್ವಗಳಿಂದ ಇಂದ್ರ, ಪ್ರಜಾಪತಿ, ಸತ್ಯ ಮೂರು ದಿವ್ಯ ಲೋಕಗಳನ್ನು ಅಂತರಿಕ್ಷ ಪೃಥ್ವಿಗಳನ್ನು ಮಹಾತ್ಮ್ಯದಿಂದ ವ್ಯಾಪಿಸುತ್ತಾನೆ. ಸ್ವಸಂತೋಷದಿಂದ ರಕ್ಷಿಸುತ್ತಾನೆ. ತೃತೀಯ ಸವನದಲ್ಲಿ ಸ್ತುತ್ಯನಾಗಿ ಉದಯಿಸಿ ಗೋಚರಿಸುತ್ತಾನೆ. ದ್ಯುಲೋಕದಿಂದ ಆದಿತ್ಯನು ಪ್ರೇರೇಪಿಸುವನು. ಸಕಲ ಲೋಕಗಳನ್ನು ಧರಿಸಿ ಮಾನವ ಯಜಮಾನರಿಗೆ ಪುತ್ರ, ಪೌತ್ರರನ್ನು ಜೀವಿಸಲು ಅನುಕೂಲಗಳನ್ನು ಅನುಗ್ರಹಿಸುತ್ತಾನೆ. ಯಜಮಾನನನ್ನು ಎತ್ತರಕ್ಕೆ ಏರಿಸಿ ವಸತಿ ನಿರ್ಮಿಸಿದ್ದಾನೆ. ಮಹತ್ವರೂಪಿ, ಪೂರ್ಣಪ್ರಜ್ಞ, ಸಮಸ್ತ ರೂಪಗಳನ್ನು ತನ್ನಲ್ಲೇ ಧರಿಸುತ್ತಾ ಸ್ವರ್ಗವು ಪ್ರಕಾಶಿಸುವಂತೆ ಮಾಡಿ ಉಷೋದೇವಿಯ ಉದಯ ಮಾರ್ಗದಲ್ಲೇ ತಾನೂ ಪ್ರಕಾಶಿಸುತ್ತಾನೆ.

ಮೂರು ಲೋಕಗಳನ್ನು ನಿರ್ಮಿಸಿ ವಿಭಾಗ ಮಾಡಿ ಶುಭ್ರ ವರ್ಣವಾಗಿ ಪ್ರಕಾಶಿಸುತ್ತಾ ಸಂಚರಿಸುತ್ತಾನೆ. ಸವಿತೃವಿನ ಮಾರ್ಗವನ್ನೇ ಇತರ ದೇವತೆಗಳು ಅನುಸರಿಸಿ ಮಹತ್ವ ಪಡೆಯುತ್ತಾರೆ. ಸೂರ್ಯ ಕಿರಣಗಳಿಂದ ಎರಡೂ ಪಾರ್ಶ್ವಗಳಲ್ಲಿ ಸುತ್ತುವರಿದು ರಾತ್ರಿಯು ಐಕ್ಯವಾಗುತ್ತದೆ. ಸವಿತೃವು ಜಗದಾಧಾರಕ. ತನ್ನ ಕರ್ಮಗಳಿಂದ ಮಿತ್ರ ರೂಪನಾಗಿ ಸಂಚಾರ ಕಾರ್ಯಗಳಿಂದ ಪೂಷಣನಾಗಿ ಇರುತ್ತಾನೆ. ಸಕಲ ಉತ್ಪನ್ನ ಪ್ರಾಣಿಗಳಿಗೂ ಒಬ್ಬನೇ ಪ್ರಭು. ಸಕಲ ಜಗತ್ತನ್ನು ಆಳುವ ಸಾರ್ವಭೌಮ. ಚೈತನ್ಯ ಕಾರಕ, ನಿಯಮನವುಳ್ಳವನು, ಸಕಲ ದೇವತೆಗಳಿಗೂ ಅಂತರ್ಯಾಮಿ. ಅಹೋರಾತ್ರಿಗಳೆರಡಕ್ಕೂ ಮಾರ್ಗದರ್ಶಕ, ಅಸಾಧಾರಣ ಮಹಿಮೆಯಿಂದ ಕೂಡಿದವನು, ಅಪೇಕ್ಷಿತ ಧನವನ್ನು, ಐಶ್ವರ್ಯವನ್ನು ನೀಡುತ್ತಾನೆ. ಪಾಪನಾಶಕ. ನಿತ್ಯತರುಣ, ಪ್ರಕಾಶಮಾನಿ, ಧಾನ ಮನಸ್ಕ, ಅಹಿಂಸಕ, ರಕ್ಷಕ, ಹಿರಣ್ಮಯ ಕಿನ್ನೆಯವನು, ಲೋಕಗಳ ನಾನಾ ಕರ್ಮನಿರತ, ಸುವರ್ಣಮಯ ಪಾಣಿ, ಸುವರ್ಣಮಯ ತೋಳುಳ್ಳವನು. ಆಹ್ಲಾದಕರ ವಾಕ್ಕುಳ್ಳವನು, ಉದಕಪೂರ್ಣ ಬಾಹುಗಳು. ದ್ವಿಪಾದ ಮಾನವರು, ಚತುಷ್ಪಾದ ಪ್ರಾಣಿಗಳು ಇವರ ಉತ್ಪತ್ತಿ, ಸ್ಥಿತಿ ಸ್ವಾತಂತ್ರಕ್ಕೆ ಸವಿತೃವೇ ಕಾರಣ.

ಸವಿತೃ ವರ್ಗಕ್ಕೆ ಹಸು ಕರುಗಳು ಸೇರಿವೆ. ಅವು ಮಾನವರಿಗಿಂತ ಉತ್ಕೃಷ್ಟವಾತ್ಸಲ್ಯ, ಜ್ಞಾನ ಪ್ರಕಟಿಸುತ್ತವೆ. ತೃಣ ಭಕ್ಷಿಸಿ ಉದಕ ಕುಡಿದು ಹಾಲನ್ನು ಕೊಡುತ್ತಾ ಯಾಜ್ಞಿಕರನ್ನು ಧನವಂತರನ್ನಾಗಿ ಮಾಡುತ್ತವೆ. ಸಕಲ ರೋಗಗಳನ್ನು ನಾಶ ಮಾಡುತ್ತಾನೆ. ಪುನರಾಗಮನವನ್ನು ತಿಳಿದವನು, ಪೃಥ್ವಿ ಅಂತರಿಕ್ಷ ಉನ್ನತ ಪ್ರದೇಶ ಹತ್ತುವಾಗ ಸಕಲ ಭೂತ ಜಾತಗಳನ್ನು ಸಂತೋಷಗೊಳಿಸುತ್ತಾನೆ. ಸಮಸ್ತ ದೇವತೆಗಳಿಂದ ಮಾನವರಿಂದ ಸ್ತುತಿತನಾದವನು. ದ್ಯುಲೋಕ ಪೃಥ್ವಿಗಳಿಗೆ ಮಿತ್ರ. ವರುಣ, ಮಿತ್ರ, ಆರ್ಯಮರು ಸವಿತೃವನ್ನು ಪ್ರಶಂಸಿಸುತ್ತಾರೆ. ದೇವತೆಗಳು ನಿಯಮಿತ ಮಾರ್ಗವುಳ್ಳವರು. ಸ್ವಪ್ರಭೆಯಿಂದ ಅಂತರಿಕ್ಷ ವ್ಯಾಪಿ, ಅಶ್ವಗಳಿಂದ ವಹಿಸಲ್ಪಡುವವನು. ಸುವರ್ಣಮಯ ಹಸ್ತದವನು, ಸಕಲ ಭೂತಗಳನ್ನು ಹಗಲಿನಲ್ಲಿ ಕಾರ್ಯ ತತ್ಪರರನ್ನಾಗಿಯೂ, ರಾತ್ರಿಯಲ್ಲಿ ಅವುಗಳನ್ನು ಸ್ವಸ್ಥಾನದಲ್ಲಿ ಸ್ಥಾಪಿಸುವವನು ಆಗಿದ್ದಾನೆ ಸವಿತೃದೇವ.

# ಸವಿತೃ ದೇವರು

ಸವಿತೃವು ಹೊಂಬಣ್ಣದ ತೇಜಸ್ವಿ ಕಿರಣಗಳಿಂದ ಬೆಳಗುವವನು. ದಿನವೂ ಉಷ ಕಾಲಾ ನಂತರ ಉದಿಸಿ ಆಕಾಶ, ದ್ಯಾವಾ ಪೃಥ್ವಿಗಳ ನಡುವೆ ಸಂಚರಿಸುತ್ತಾ ಸಮಸ್ತ ಪ್ರಾಣಿವರ್ಗವನ್ನು ಬೆಳಗುತ್ತಾ ನೋಡುತ್ತಾನೆ. ದಶ ದಿಕ್ಕುಗಳನ್ನು ಪ್ರಕಾಶಿಸುತ್ತಾ ಧರ್ಮ ದೇವನಂತೆ ಇಂದ್ರನಂತೆ ಸ್ಥಿರನಾಗಿದ್ದಾನೆ. ಅಂತರಿಕ್ಷ ಸ್ವರೂಪ ತಿಳಿದವನು, ವಾಯುವು ವೃಷ್ಟಿ ಪ್ರಧಾನ ಸಾಧಕ. ಈ ವಾಯುವು ವಿಸ್ತಾರ ಭೂಮಿಯನ್ನು ಅಲುಗಾಡದಂತೆ ಬಲವಾಗಿ ಹಿಡಿದಿದ್ದಾನೆ. ದ್ಯುಲೋಕವನ್ನು ಕೆಳಗೆ ಬೀಳದಂತೆ ಬಲವಾಗಿ ಹಿಡಿದಿದ್ದಾನೆ. ಮೇಘವು ವೃಷ್ಟಿ ಸುರಿಯುವಂತೆ ಮಾಡುತ್ತಾನೆ.

## ಆಶ್ರಮ

ಸವಿತೃ ದೇವನನ್ನು ಸ್ತುತಿಸುತ್ತಾರೆ, ಆಹ್ವಾನಿಸುತ್ತಾರೆ. ಪ್ರೀತಿ ಪಡಿಸುತ್ತಾರೆ. ಋಭುಗಳೊಂದಿಗೆ ಸವಿತೃವು ಯಜ್ಞಕ್ಕೆ ಬರಲಿ. ಆಶ್ರಮ ವಾಸಿಗಳು ಪ್ರಾರ್ಥನೆ ಮತ್ತು ಹವಿಸ್ಸನ್ನು ಅರ್ಪಿಸುತ್ತಾರೆ. ಉತ್ಕೃಷ್ಟ ಸೋಮವು ಅರ್ಪಿತವಾಗುತ್ತದೆ. ಸವಿತೃವಿನ ಆಜ್ಞೆಯನ್ನು ಪಾಲಿಸುತ್ತಾರೆ. ಮೇಧಾವಿ ಯಜಮಾನರುಗಳು ತಮ್ಮ ಮನಸ್ಸನ್ನು ಸವಿತೃವಿನ ಕರ್ಮಗಳಲ್ಲಿ ಲೀನಗೊಳಿಸುತ್ತಾರೆ. ಆಶ್ರಮ ವಾಸಿಗಳೆಲ್ಲರೂ ಅವರವರ ಕರ್ಮ ನಿರ್ವಹಿಸುತ್ತಾರೆ. ಉತ್ತಮ ಧ್ಯಾನ ಮಾಡುತ್ತಾರೆ. ಪ್ರತಿ ದಿನವೂ ಸವಿತೃವು ಉದಯಿಸುತ್ತಲೇ ಹವಿಸ್ಸು ಅರ್ಪಿಸುತ್ತಾರೆ. ಯಾಗಗಳನ್ನು ಮಾಡುತ್ತಾರೆ. ಸೋಮವನ್ನು ಅರ್ಪಿಸುತ್ತಾರೆ. ಸೂರ್ಯನು ಸವಿತೃವಿನ ಕರ್ಮೋಚ್ಛೆ ಅನುಗ್ರಹಿಸಲಿ. ವೃಷ್ಟಿಗಾಗಿ ಯಾಗಗಳನ್ನು ಮಾಡುತ್ತಾರೆ. ಶ್ಯೇನ ಪಕ್ಷಿ(ತಾರ್ಕ್ಷನು) ಸವಿತೃವಿನ ಅಧೀನ. ಸವಿತೃವಿನ ಪ್ರೇರಣೆಯಿಂದ ಸ್ವರ್ಗದಿಂದ ಸೋಮವನ್ನು ತಂದು ಯಜ್ಞ ಮಾಡಿತು.

## ಪ್ರಾರ್ಥನೆಗಳು

ಎಲ್ಲರಿಗೂ ಕ್ಷೇಮವುಂಟಾಗಲಿ. ತೇಜೋರೂಪ, ಸಂಪತ್ತು ಕರುಣಿಸಲಿ. ಶ್ರೇಷ್ಟ ಸತ್ಪುತ್ರರಾಗಲಿ. ಅನ್ನ ಧನ ಅಪೇಕ್ಷಿತ ಇಷ್ಟಾರ್ಥ ಕರುಣಿಸಲಿ. ಪಾಪಗಳನ್ನು ನಾಶ ಮಾಡಲಿ. ಸುಖ ಸಂತೋಷಗಳನ್ನು ಅಹೋರಾತ್ರಿ ಕೊಡಲಿ. ಸವನ ತ್ರಯಗಳಲ್ಲೂ ಸೋಮ ಹಿಂಡುವ ಶಕ್ತಿ ಭಾಗ್ಯ ಕರುಣಿಸಲಿ. ರಮಣೀಯ ಧನ ಹಂಚಿ ಯಜ್ಞ ಕರ್ಮವು ಉತ್ತಮವಾಗಿ ನಡೆಯುವಂತೆ ಅನುಗ್ರಹಿಸಲಿ. ಇಂದ್ರ, ದ್ಯಾವ, ಪೃಥ್ವಿನದಿಅಭಿಮಾನಿ ದೇವತೆ ಆದಿತ್ಯ, ಅದಿತಿಗಳು ಸುಖವಾಗಿ ಇರಿಸಿರಲಿ. ಗವಾದಿಗಳನ್ನು ಕೊಟ್ಟು ಕಲ್ಯಾಣ ಉಂಟುಮಾಡಲಿ. ದಾರಿದ್ರಾದಿ ಉಪದ್ರವ ಸಮಸ್ತ ಪಾಪಗಳನ್ನು ದೌರ್ಭಾಗ್ಯವನ್ನು ದೂರ ಓಡಿಸಿ ನಾಶ ಮಾಡಲಿ. ಮಂಗಳಕರವಾದುದನ್ನೇ ಒದಗಿಸಲಿ. ಯೋಗ್ಯ ಧನಕ್ಕಾಗಿ, ಜ್ಞಾನಕ್ಕಾಗಿ, ರಕ್ಷಣೆಗಾಗಿ ರೋಗ ಪರಿಹಾರಕ್ಕಾಗಿ ಪ್ರಾರ್ಥಿಸುತ್ತಾರೆ. ನಮ್ಮ ಗೃಹಗಳನ್ನು ರಕ್ಷಿಸಲಿ. ಕೇಡು ಬಯಸುವ ಶಕ್ತಿಯನ್ನು ಶತ್ರುಗಳು ಹೊಂದದಿರಲಿ. ಭೋಗ ಯೋಗ್ಯ ಧನ ಒದಗಿಸಲಿ. ದೇವ ಮಾರ್ಗದಲ್ಲಿ ಸಂಚರಿಸಲಿ. ಮಾರ್ಗ ನಿರೋಧಕರು, ಚೋರರು, ಲೋಭಿಗಳು ಮತ್ತು ರೋಗಗಳನ್ನು ದೂರ ಮಾಡಲಿ. ಮೇಘರೂಪದಲ್ಲಿರುವ ತಡೆಹಿಡಿಯಲ್ಪಟ್ಟಿರುವ ಉದಕಕ್ಕಾಗಿ ಪ್ರಾರ್ಥಿಸುತ್ತಾರೆ. ಅನುಗ್ರಹಿಸಲು ಶೀಘ್ರವಾಗಿ ಬರಲಿ. ಅನ್ನ ಆಹಾರ, ರಕ್ಷಣೆಗಳಿಗೆ ಪ್ರಾರ್ಥಿಸುತಾರೆ.

# ವರುಣ ದೇವರು

ವರುಣನು ಮಹಾ ಪರಾಕ್ರಮಿ, ಹಾರುವ ಹಕ್ಕಿ, ಬೀಸುವ ಗಾಳಿ, ಹರಿಯುವ ನೀರು ಯಾವುದೂ ವರುಣನಿಗೆ ಎದುರಿಲ್ಲ. ಮಾನವರ ಪಾಪಗಳನ್ನು ಅನಿಷ್ಟಗಳನ್ನು ನಿವಾರಿಸುತ್ತಾನೆ. ಪಾಪದೇವತೆಗಳನ್ನೇ ದೂರ ಓಡಿಸುತ್ತಾನೆ. ಸ್ವಯಂ ಪ್ರಕಾಶ ಪ್ರಭು. ಬಹು ಪ್ರದೇಶ ಉತ್ಪನ್ನ, ಬಹು ಜನ ಸ್ತುತಿತ, ಅಸುರರಿಂದ ಅಹಿಂಸಿತ. ಅದಿತಿ ಪುತ್ರ. ವರುಣನ ಕೃಪೆ ಪಡೆದಿರುವ ವ್ಯಕ್ತಿಗೆ ಯಾವುದೇ ಭಯ ಇರುವುದಿಲ್ಲ. ಧ್ಯಾನಿಸುವ ಯಜಮಾನನು ವರುಣನ ಸಖ್ಯ ಬೆಳೆಸುತ್ತಾನೆ. ವರುಣನು ದೇವತಾತ್ಮ, ಅಸುರ ಹಂತಕ. ಸಮಸ್ತ ಪ್ರಪಂಚಕ್ಕೂ ಪ್ರಭು. ಸೂರ್ಯ ಸಂಚಾರಕ್ಕಾಗಿ ಅಂತರಿಕ್ಷ ವಿಸ್ತರಿಸಿ ಸಾರ್ವಭೌಮನಾಗಿದ್ದಾನೆ. ವೃಕ್ಷಗಳು ಮೇಲ್ಮುಖ ಬೆಳೆದುದು ಅಶ್ವಕ್ಕೆ ಬಲ ಇರುವುದು, ಗೋವುಗಳಿಂದ ಕ್ಷೀರ ಸಿಗುವುದು, ಮಾನವರ ಹೃದಯದಲ್ಲಿ ಸಂಕಲ್ಪ ಮೂಡುವುದು ವರುಣನ ಕೃಪೆಯಿಂದಲೇ.

# ವರುಣ ದೇವರು

ದ್ಯಾವಾ ಪೃಥ್ವಿಗಳಿಗಾಗಿ ಮೇಘವು ಅಧೋಮುಖವಾಗಿ ನೀರು ಸುರಿಯುವಂತೆ ಭೂಮಿ ವೃಷ್ಟಿಯಿಂದ ತೋಯ್ಯುವಂತೆ ಮಾಡುತ್ತಾನೆ. ಅಂತರಿಕ್ಷ ಆಳೆಯುವ ಅಲೌಖಿಕ ಶಕ್ತಿ ಸೂರ್ಯನಂತೆ ವರುಣನು ಶಕ್ತಿವಂತನಾಗಿದ್ದಾನೆ. ಅನೇಕ ಪ್ರವಾಹ ಭರಿತ ನದಿಗಳು ಆಳವಾದ ಸಮುದ್ರ ಇರುವುದು ವರುಣನ ಮಹಿಮೆಯಿಂದಲೇ . ವರುಣನನ್ನು ಯಾರು ಪ್ರತಿಭಟಿಸಲಾರರು. ಅನ್ನವಂತ, ಕಾಮವರ್ಷಕ, ದೇವತಾತ್ಮ ಸುಖಕಾರಕ, ಕ್ರೋಧರಹಿತ, ಭೂಮಿಯನ್ನು ವಿಸ್ತಾರ ಮಾಡಿದವನು, ಆಕಾಶದಲ್ಲಿ ನಕ್ಷತ್ರ, ಆದಿತ್ಯನನ್ನು ಆಕರ್ಷಕ ರೂಪವುಳ್ಳವರನ್ನಾಗಿ ಮಾಡಿದವನು ವರುಣನೇ.

ಇವನು ಅದಿತಿ ಪುತ್ರ, ಉದಕ ನಿರ್ಮಾತೃ ಶುಭ್ರ ವರ್ಣ. ದುಖದಿಂದ ದಾಟಿಸುವವನು, ಸೂರ್ಯ ಪ್ರಕಾಶಯುತ, ಹವಿಸ್ಸು ಸ್ವೀಕರಿಸುವ ವಾಯುವು ಜಗತ್ ಧಾರಕನಾಗಿದ್ದಾನೆ. ದ್ಯಾವ ಪೃಥ್ವಿಗಳ ಮಧ್ಯೆ ವರುಣ ತೇಜಸ್ಸುಗಳಿವೆ. ಸಮುದ್ರವು ದಡ ಮೀರದಂತೆ ನಿಯಮಿಸಿದವನು ವರುಣನೇ. ಬ್ರಹ್ಮ ಲೋಕದ ರಹಸ್ಯ ತಿಳಿದವನು. ಕಾಮ ವರ್ಷಕ, ಮೇಧಾವಿ, ಅನ್ನವಂತ, ಸೋಮಪಾನಾಭಿಮಾನಿ. ಸಕಲ ಲೋಕ ಧಾರಕ. ಸಮುದ್ರ ರೂಪಿ. ಅಚಲವಾದ ಅಂತರಿಕ್ಷ ಸ್ಥಾನ ವಾಸಿ. ಪ್ರವಹಿಸುವ ನದಿಗಳ ಸಮೀಪದಲ್ಲಿ ಇರುವವನು. ಸಪ್ತ ಸಂಖ್ಯಾತ ಸಹೋದರರೊಳಗೆ ಮಾಧ್ಯಮಿಕ. ಲೋಕದವನೆಂದು ವರುಣನು ವರ್ಣಿತನಾಗಿದ್ದಾನೆ. ರಥದ ಮುಂಭಾಗದಲ್ಲಿ ಸಕಲ ದೇವತೆಗಳು ಕರ್ಮ ನಿರ್ವಹಿಸುತ್ತಾರೆ. ಪೃಥ್ವಿಯ ಮೇಲೆ ನಿಂತು ಸಕಲ ದಿಕ್ಕಿನಲ್ಲೂ ಸಂಚರಿಸುತ್ತಾ ಯಜ್ಞಕರ್ಮ ಸ್ಥಾಪಿಸುತ್ತಾನೆ. ಆಕರ್ಷಕ ರೂಪಿ. ವರುಣನು ರಾತ್ರಿಗಳನ್ನು ಆಲಂಗಿಸಿಕೊಳ್ಳುತ್ತಾನೆ. ಸಕಲ ಲೋಕಗಳನ್ನು ಸ್ಪರ್ಷ ಮಾಡುತ್ತಾ ಸುತುತ್ತಾನೆ. ಸಕಲ ರಹಸ್ಯ ನಾಮಗಳನ್ನು ಅರಿತಿದ್ದಾನೆ. ಮಿತ್ರನು ಹಗಲಿಗೆ ಅಭಿಮಾನಿ. ವರುಣನು ರಾತ್ರಿಗೆ ಅಭಿಮಾನಿ. ಆದಿತ್ಯ ಅಂತರಿಕ್ಷ ಹತ್ತುವಂತೆ ವರುಣನು ದ್ಯುಲೋಕ, ಸ್ವರ್ಗ ಲೋಕ ಹತ್ತುತ್ತಾನೆ.

## ಆಶ್ರಮದಲ್ಲಿ

ವರುಣನಿಗೆ ಪ್ರಿಯವಾದ ಸ್ತೋತ್ರಗಳನ್ನು ಮಾಡುತ್ತಾರೆ. ಹೋಮ ಪೂಜಾದಿಗಳನ್ನು ಮಾಡುತ್ತಾರೆ. ಹಗಲು ರಾತ್ರಿ ನಮಸ್ಕರಿಸುತ್ತಾರೆ. ಪುತ್ರರೊಂದಿಗೆ ಸೇರಿ ಯಜಮಾನರು ಸ್ತೋತ್ರಗಳನ್ನು ನಮಸ್ಕಾರಗಳನ್ನು ಮುಂದುವರಿಸುತ್ತಾರೆ. ವರುಣನನ್ನು ಹೇಗೆ ನೋಡುವುದು, ಯಾವ ರೀತಿ ಸೇವಿಸುವುದು, ಸ್ತೋತ್ರ ಮಾಡುವುದು, ಏನೇನು ಮಾಡಿದರೆ ವರುಣನು ಪ್ರೀತನಾಗುತ್ತಾನೆ ಎಂದು ಚಿಂತಿಸುತ್ತಾರೆ, ತಿಳಿಯದಾಗಿದೆ?. ಯಜಮಾನನು ಕರ್ಮವಂತ, ಬುದ್ಧಿವಂತ, ಕರ್ಮನಿರತ ಇಂತಹ ಯಜಮಾನನ ಕರ್ಮಗಳನ್ನು ವರುಣ ದೇವನ ಚಾರರು ವೀಕ್ಷಿಸಿ ವರುಣನಿಗೆ ವರದಿ ಮಾಡುತ್ತಾರೆ. ಪಾಪರಹಿತರಾಗಿಯೂ ಇರುತ್ತಾರೆ. ವಸಿಷ್ಟರು ವರುಣನ ಬಂಧುಗಳು ಹಾಗೂ ವರುಣ ಲೋಕಕ್ಕೆ ಬಹಳ ಸಲ ಹೋಗಿದ್ದರೆಂದು ತಿಳಿದುಬರುತ್ತದೆ. ಅವರನ್ನು ಉತ್ಕೃಷ್ಟ ಕರ್ಮವಂತರನ್ನಾಗಿ ಮಾಡಿದವನು ವರುಣನೇ. ವಸಿಷ್ಟರು ಪಾಪ ಮಾಡಿದ್ದರೆ ಅದರ ಫಲವನ್ನು ಅನುಭವಿಸುತ್ತಾರೆ. ವರುಣನ ಸಖಿತ್ವವನ್ನು ಬಯಸುತ್ತಾರೆ. ಸ್ತೋತ್ರ ಮಾಡಲು ಕಾತುರರಾಗಿದ್ದಾರೆ. ಮೂರು ಸವನಗಳಲ್ಲಿಯೂ ಪೂಜಿಸಿ ಸ್ತುತಿಸುತ್ತಾರೆ. ಕಾಣ್ವರು ವರುಣನನ್ನು ಮರುತ್‌ಗಳನ್ನು ಸ್ತುತಿಸಿರಿ ಎಂದು ಹೇಳುತ್ತಾರೆ. ಪಾಪನಾಶಗಳಿಗಾಗಿ ವರುಣನನ್ನು ಸೇವಿಸಿರಿ. ಕ್ರೋಧ, ದ್ಯೂತ, ಅಜ್ಞಾನ ಬುದ್ಧಿ ಮಾಂದ್ಯ, ದುಸ್ವಪ್ನಗಳು ಪಾಪಗಳೇ ಎಂದು ವಸಿಷ್ಟರು ತಿಳಿಸಿದ್ದಾರೆ.

## ಪ್ರಾರ್ಥನೆಗಳು

ಪಾಪಗಳನ್ನು ಪರಿಹರಿಸಲು ಬೇಡುತ್ತಾರೆ. ಆಯುಸ್ಸಿಗಾಗಿ, ಧನಕ್ಕಾಗಿ, ರಕ್ಷಣೆಗಾಗಿ ಪ್ರಾರ್ಥಿಸುತ್ತಾರೆ. ಉದಕ ತುಂಬಿದ ನದಿ ಹರಿಯುವಂತಾಗಲಿ. ಕರ್ತವ್ಯ ಲೋಪ ಅನುಷ್ಠಾನ ಲೋಪ ಮಾಡಿದವರ ಪಾಪಗಳನ್ನು ವರುಣನು ಕ್ಷಮಿಸಲಿ. ಹಿಂಸಿಸುವುದು ಬೇಡ.

# ವರುಣ ದೇವರು - ಪ್ರಾರ್ಥನೆಗಳು

ಧನವಂತ ಅನುಕೂಲಸ್ಥನ ಮುಂದೆ ಸಮೀಪ ಬಂಧುಗಳೊಂದಿಗೆ ಧನ ಯಾಚನೆ ಮಾಡದಂತಾಗಲಿ. ಋಣಭಾಧೆಯಲ್ಲಿರುವವನನ್ನು ಋಣಮುಕ್ತನನ್ನಾಗಿ ಮಾಡಲಿ. ಪಿತೃಋಣ ತೀರಿಸುವಂತಾಗಲಿ. ಇತರರ ಸಂಪಾದನೆಯಿಂದ ಜೀವಿಸುವಂತಾಗದಿರಲಿ. ಯಜಮಾನನು ಕೀರ್ತಿವಂತನಾಗಲಿ, ಸುಖಜೀವನ ನಡೆಸುವಂತಾಗಲಿ. ನಮ್ಮ ಸ್ತೋತ್ರ ಪೂಜಾದಿಗಳು ವರುಣನನ್ನು ಸೇರಲಿ. ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಲಿ. ಶರೀರವನ್ನು ಆಕರ್ಷಕಯುತವಾಗಿ ಇರಿಸಿರಲಿ. ವರುಣನ ಬಂಧುತ್ವವನ್ನು ಬಯಸುತ್ತಾರೆ. ಅನಿಷ್ಟನಾಶಕ ಉತ್ತಮ ಮೂರು ವಿಧ ರಕ್ಷಣೆಗಳಿರುವ ಗೃಹಕ್ಕೆ ಕಳುಹಿಸಲಿ. ಅಶಕ್ತಿ, ಅಜ್ಞಾನ, ಶ್ರೌತಸ್ಮಾರ್ತ, ನಿತ್ಯ ಕರ್ಮಗಳಿಗೆ ವಿರುದ್ಧ ಆಚರಿಸಿದ್ದರೂ ದೇವತಾ ಜನರ ವಿಷಯದಲ್ಲಿ ಯಾವುದೇ ನಿರ್ದಿಷ್ಟ ಅಪಕಾರ ಕರ್ಮ ಮಾಡಿದ್ದರೂ ವರುಣನು ಯಜಮಾನನನ್ನು ಹಿಂಸಿಸುವುದು ಬೇಡ. ವಂಚಕರನ್ನು ತಾನು ಇದ್ದಲ್ಲಿಂದಲೇ ನಾಶಮಾಡಲಿ. ಶತ್ರುಗಳನ್ನು ಒಂದೇ ಸಲ ನಾಶಮಾಡಲಿ. ಜ್ಞಾನ ಕರುಣಿಸಲಿ, ದು:ಖ ಕ್ಲೇಶಗಳನ್ನು ಪರಿಹರಿಸಿ ದಡ ಸೇರಿಸಲಿ. ನಮ್ಮ ಅಪರಾಧಗಳನ್ನು ಕ್ಷಮಿಸುವಂತೆ ಪ್ರಾರ್ಥಿಸುತ್ತಾರೆ. ಬಂಧನದಿಂದ ಬಿಡಿಸಲು ಪಾಪರಹಿತರನ್ನಾಗಿ ಮಾಡಲು ಬೇಡುತ್ತಾರೆ. ಪಾಪ ಮಾಡದಂತೆ ಎಚ್ಚರಿಕೆಯ ಜ್ಞಾನವನ್ನು ಕೊಡಲಿ.

## ವಿಶೇಷಣಗಳು

ವರುಣನು ರಾತ್ರಿ ಅಭಿಮಾನಿ ದೇವತೆ. ಗೋಪಾಲನು ಗೋವುಗಳನ್ನು ಕಾಯುವಂತೆ ವರುಣನು ನಮ್ಮನ್ನು ರಕ್ಷಿಸುತ್ತಾನೆ. ವರುಣನ ರಶ್ಮಿಗಳು ಹಗಲಲ್ಲಿ ''ಶ್ವೇತವರ್ಣ'' ರಾತ್ರಿಯಲ್ಲಿ ''ಕೃಷ್ಣವರ್ಣ''ವಾಗಿರುತ್ತವೆ. ಶ್ವೇತವರ್ಣದ್ದು ಮೇಲಿನ 3 ಲೋಕಗಳನ್ನು ಕೆಳಗಿನ 3 ಲೋಕಗಳನ್ನು ವ್ಯಾಪಿಸಿದೆ. ಸಮಸ್ತ ಕರ್ಮಗಳು ವರುಣನನ್ನೇ ಆಶ್ರಯಿಸಿವೆ. ಅವು ಅವನ ಮಹಿಮೆಯೇ ಆಗಿವೆ. ಅಂತರಿಕ್ಷವನ್ನು ಸ್ಥಿರವಾಗಿ ನಿಲ್ಲಿಸಿ ಸಕಲ ಲೋಕಗಳನ್ನು ಆಕ್ರಮಿಸಿ ನಿಂತಿರುವ ವರುಣ ದೇವರು (ಅಮೃತ)ದ ರಕ್ಷಕರು. ನಿರಾಧಾರ ಆಕಾಶದಲ್ಲಿ ತೇಜಸ್ವಿ ಸೂರ್ಯನ ಚಲನೆಗೆ (ಉತ್ತರಾಯಣ) (ದಕ್ಷಿಣಾಯನ) ಮಾರ್ಗ ಕಲ್ಪಿಸಿದವನು ವರುಣನೇ. ಚಂದ್ರನು ರಾತ್ರಿ ಪ್ರಕಾಶಿಸುವಂತೆ ಹಾಗೂ ಹಗಲಲ್ಲಿ ಮರೆಯಾಗುವಂತೆ ಮಾಡಿದವನು ಅವನೇ. ವರುಣನು ಅದಿತಿ ಪುತ್ರ. ಪರ್ವತ, ಉದಕ ಸೃಷ್ಟಿಸಿದವನು, ನದಿ ಪ್ರವಾಹ ಹರಿಯುವಂತೆ ಮಾಡುವವನು ವರುಣನೇ. ಉದಕಗಳಲ್ಲಿ ''ಅಗ್ನಿ'' ದ್ಯುಲೋಕದಲ್ಲಿ ''ಸೂರ್ಯ'' ಪರ್ವತಗಳಲ್ಲಿ ''ಸೋಮ'' ಇವರನ್ನು ಸ್ಥಾಪಿಸಿದವನು ವರುಣನೇ. ವರುಣ ಪ್ರೇರಿತ ವಾಯುವು ಸಕಲ ಜಗತ್ತಿಗೂ ಪ್ರಾಣರೂಪಿ. ವೃಷ್ಟಿ ಸುರಿಸುವವನು. ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದವನು ವರುಣ. ಅಂತರಿಕ್ಷ ಉದಕಗಳು ವೇಗವಾಗಿ ಪ್ರವಹಿಸಿ ನದಿ ಸೇರುವಂತೆ ಮಾಡಿದವನು ವರುಣ. ಮೂರು ಲೋಕಗಳು, ಆರು ಋತುಗಳು ವರುಣನಲ್ಲಿಯೇ ಅಂತರ್ಗತವಾಗಿವೆ.

# ಮಿತ್ರಾವರುಣರು

ಇವರು ಆದಿತ್ಯ ಪುತ್ರರು, ಇವರು ಅದಿತಿ ಪುತ್ರರು, ಉತ್ತಮ ದಾನಿಗಳು, ಕರ್ಮನಿರತು, ಪ್ರೀತಿ ಪಾತ್ರರು, ಗೃಹ ರಕ್ಷಕರು, ವಿಶ್ವಾಸ ಪಾತ್ರರು, ಸ್ತುತಿ ಪಾತ್ರರು, ಅಶ್ವದಂತೆ ಬಲಶಾಲಿಗಳು, ಇವರ ರಶ್ಮಿಗಳು ಅಹಿಂಸಕ. ಪ್ರತಿದಿನ ಅಧಿಕ ಬಲ ಹೊಂದುವವರು, ಮರುತ್‌ಗಳನ್ನು ವೃದ್ಧಿ ಹೊಂದುವಂತೆ ಮಾಡುವವರು, ಮಹಾತ್ಮರಿಗಿಂತ ಮಹಾತ್ಮರು. ಪ್ರಕಾಶಮಾನರು, ಅನ್ನವಂತರು, ವಿಶ್ವವೀಕ್ಷಕರು, ಕ್ರೋಧರಹಿತರು, ಲೋಕಗಳನ್ನು ತೇಜಸ್ಸಿನಿಂದ ತುಂಬಿದ್ದಾರೆ. ಯಜಮಾನ ಪಾಲಕರು, ಯಜ್ಞವೃದ್ಧಿ ಕಾರಕರು, ಧನವಂತರು, ಕಾಮವರ್ಷಕರು, ಸುಖದಾತರು, ಅಹಿಂಸಕರು, ರಕ್ಷಕರು, ಶತ್ರುಗಳನ್ನು ನಡುಗಿಸುವವರು, ಪಾಪನಾಶಕರು, ಅಜ್ಞಾನಿಗಳನ್ನು ಎಚ್ಚರಗೊಳಿಸುತ್ತಾರೆ. ವಿವೇಕಿಗಳು, ಉತ್ತಮ ಕರ್ಮವುಳ್ಳವರು ಇವರ ತೇಜಸ್ಸು ಸೂರ್ಯನಿಂದಾದುದು. ರಹಸ್ಯವಾದುದು ಮಿತ್ರಾವರುಣರಿಗೆ ತಿಳಿಯುತ್ತದೆ. ಯಜ್ಞಾರ್ಥವಾಗಿಯೇ ಇರುವವರು, ಪ್ರಕಾಶಕ್ಕೆ ಒಡೆಯರು, ಅತ್ಯಂತ ತೇಜಸ್ವಿಗಳು, ಯಜ್ಞ ನಿರ್ವಾಹಕರು ಮತ್ತು ಪ್ರವರ್ತಕರು, ಸೋಮ ಅಪೇಕ್ಷಿಗಳು, ಅನುಗ್ರಹ ಮಾಡುವವರು, ಉದಕ ಹಂಚುವವರು.

## ಮಿತ್ರಾವರುಣರು

ವೃಷ್ಟಿ ಸುರಿಸುವವರು, ಸುಂದರ ರೂಪ ತುಂಬುವವರು, ಅಧಿಕ ಗುಣಭರಿತರು, ದು:ಖನಾಶಕರು, ಧನಪ್ರದರು, ಸತ್ಯ ಪಾಲಕರು, ಆಹ್ಲಾದ ನೀಡುವವರು, ಮಾನವ ಹಿತಕಾರಿಗಳು, ದ್ರೋಹಮಾಡದವರು, ಸತ್ಯ ಮಾರ್ಗದಲ್ಲಿ ವ್ಯವಹರಿಸುವ ಜನರನ್ನು ರಕ್ಷಿಸುವವರು, ಕರ್ಮಫಲ ವೃದ್ಧಿಸುವವರು, ಇವರು ಆರ್ಯಮ ಅದಿತಿ ಪುತ್ರರು. ಪ್ರಭಾವಯುತರು, ಕ್ಷಯ ರಹಿತರು, ಕರ್ಮ ರಕ್ಷಕರು, ಮೂರು ಲೋಕಗಳನ್ನು ಧರಿಸಿರುವ ಇಂದ್ರ ಸ್ವರೂಪರು. ಇವರ ಆಜ್ಞೆಯಂತೆಯೇ ಧೇನುಗಳು ಕ್ಷೀರ ಭರಿತವಾದವು. ನದಿಗಳು ನೀರಿನಿಂದ ಮಧುರವಾಗಿ ಹರಿಯುವವು. ಉದಕದಾತರು, ಅದ್ಬುತ ಕರ್ಮಿಗಳು, ಉಪಕಾರ ಮಾಡುವವರು, ದು:ಖನಾಶಕರು, ರುದ್ರರೂಪಕರು, ಯಜಮಾನರಿಗೆ ಕೇಡು ಬಯಸದವರು, ಇವರ ಅನುಗ್ರಹದಿಂದ ಯಜಮಾನನು ಅಧಿಕವಾಗಿಯೇ ಇರುತ್ತಾನೆ. ಶತ್ರುಗಳನ್ನು ಚದುರಿಸಿ ನಾಶ ಮಾಡುವವರು, ಉತ್ತಮ ಜ್ಞಾನಿಗಳು, ಋಷಿಗಳಿಗೂ ಸ್ವಾಮಿಗಳು, ಪರಲೋಕಕ್ಕೂ ಪ್ರಭುಗಳು, ಅಚಲರಾಗಿದ್ದಾರೆ. ಅವರ ಕರ್ಮಗಳಿಂದ ಜಗತ್ತನ್ನು ಉದ್ಧಾರಮಾಡಿ ರಕ್ಷಿಸುತ್ತಿದ್ದಾರೆ. ವಸತಿ ದಾಯಕರು, ಸರ್ವ ವ್ಯಾಪಕರು, ಪೃಥ್ವಿ ಪಾಲಕರು, ವೃಷ್ಟಿ ಸೇಚಕರು, (ಸತ್ಯಾತ್ಮಕ ಧರ್ಮವುಳ್ಳವರು), ಸ್ವರ್ಗ ವೀಕ್ಷಕರು, ದ್ಯುಲೋಕ ಪ್ರಭುಗಳು, ಇವರ ಶಕ್ತಿಯಿಂದ ಅಂತರಿಕ್ಷವು ಸ್ಥಿರವಾಗಿದೆ.

ಪ್ರರ್ಜನ್ಯನು ಅತಿಶಯ ಅನ್ನಸಾಧಕ. ದ್ಯುಲೋಕವು ಹೊಂಬಣ್ಣದ್ದು, ಕಲ್ಮಶ ರಹಿತವಾದುದು. ರಸಭರಿತ ವೃಷ್ಟಿ ಸುರಿಸುವುದು. ಮರುತ್‌ಗಳು ಇವರ ರಕ್ಷಣೆಯಲ್ಲಿದ್ದಾರೆ. ಪ್ರಜೆಗಳನ್ನು ನಿಯಮನದಲ್ಲಿ ಇಟ್ಟುಕೊಳ್ಳುವವರು, ದ್ಯಾವ, ಪೃಥ್ವಿ ಆಕ್ರಮಿಸಿ ಉನ್ನತ ಪ್ರದೇಶವನ್ನು ಶಕ್ತಿಯುತವನ್ನಾಗಿ ಮಾಡುವವರು. ಮಾನವರಿಂದ ಕೊಡಲ್ಪಡುವ ಹವಿಸ್ಸಿನಿಂದ ತೃಪ್ತರಾಗಿ ಭೂಲೋಕ, ದ್ಯುಲೋಕ, ಪುಷ್ಕಳವಾಗುವಂತೆ ಮಾಡಿದ್ದಾರೆ. ಸ್ತುತಿಸಿ ಸೋಮ ಅರ್ಪಿಸಿದರೆ ಗೃಹ ರಕ್ಷಣೆ ಮಾಡುತ್ತಾರೆ. ಸಮಾನ ರಥದಲ್ಲಿ ಇಬ್ಬರೂ ಸಂಚರಿಸುತ್ತಾರೆ. ಸಾವಿರ ಕಂಬಗಳ ಸುವರ್ಣ ರಥ ಅಂತರಿಕ್ಷದಲ್ಲಿ ವಿದ್ಯುತ್‌ನಂತೆ ಪ್ರಕಾಶಿತರಾಗಿದ್ದಾರೆ. ಸೂರ್ಯೋದಯದಲ್ಲಿ ಅಖಂಡ ಪೃಥ್ವಿಯನ್ನು ನೋಡುತ್ತಾರೆ. ಮಾನವರ ಹಿತಕ್ಕಾಗಿ ಸಂಚರಿಸುತ್ತಾರೆ. ದೇವತೆಗಳ ನಡುವೆ ಸ್ಥಿರವಾಗಿದ್ದಾರೆ. ಪೂಜಾಕ್ರಮ ಅರಿತು ಪೂಜಿಸುವ ವರ ಶತ್ರುಗಳನ್ನು ಹಿಂಸಿಸುತ್ತಾರೆ. ಉತ್ತಮ ಮಾರ್ಗದಲ್ಲಿ ಕರೆದೊಯ್ಯುತ್ತಾರೆ. ಮೂರು ಲೋಕಗಳ ಸಹಚರ್ಯವುಳ್ಳವರು, ಜಗತ್ತನ್ನು ಚೆನ್ನಾಗಿ ರಕ್ಷಿಸುವವರು, ಪೂಜಿಸಿದವರು ಸ್ತುತಿಸಿದವರು, ಕಷ್ಟಗಳನ್ನು ದಾಟಿ ಆಪತ್ತುಗಳಿಂದ ಪಾರಾಗಿ ರಕ್ಷಿತರಾಗುತ್ತಾರೆ. ಯಜ್ಞಶಾಲೆಗೆ ಬರುವಾಗ ಎಲ್ಲರಿಗೂ ಒಳ್ಳೆಯದನ್ನೇ ಮಾಡುತ್ತಾರೆ. ಯಜ್ಞಗಳನ್ನು ಸಾರ್ಥಕಗೊಳಿಸುತ್ತಾರೆ. ಉದಕ ಸೇಚನಕ್ಕಾಗಿ ಮೇಘಗಳು ಲೋಕವನ್ನೆಲ್ಲಾ ಸಂಚರಿಸುತ್ತವೆ.

## ಆಶ್ರಮಗಳಲ್ಲಿ

ಸ್ತುತಿಗಳೊಂದಿಗೆ ಹವಿಸ್ಸು ಅರ್ಪಿಸುತ್ತಾರೆ. ಸೋಮವನ್ನು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ದೇವತೆಗಳು ಮಿತ್ರಾವರುಣರು, ಯಜಮಾನನ ಯಜ್ಞ ಭೂಮಿಯಲ್ಲಿ ಮಧ್ಯದಲ್ಲಿ ಕುಳಿತುಕೊಳ್ಳಲಿ. ಮಿತ್ರಾವರುಣರ ಕರ್ಮಗಳಿಂದ ಯಜ್ಞಗಳು ನಡೆಯುತ್ತವೆ. ಸ್ತುತಿ ಕೇಳಲು ಬರಲು ಯಾಜ್ಞಕರು ಪ್ರಾರ್ಥಿಸುತ್ತಾರೆ. ಮಂತ್ರಗಳಿಂದ ಪ್ರಾರ್ಥಿಸಿ ಕರೆಯುತ್ತಾರೆ. ಸೋಮವನ್ನು ಅರ್ಪಿಸುತ್ತಾರೆ. ಹವಿಸ್ಸು ಸ್ವೀಕರಿಸಲು ಪೂಜೆ ಸ್ತುತಿಗಳನ್ನು ಅರ್ಪಿಸುತ್ತಾರೆ, ಆಹ್ವಾನಿಸುತ್ತಾರೆ. ಸಕಲ ದೇವತೆಗಳು ಅವರವರ ಜಾಗದಲ್ಲಿರುವಂತೆ ಭಾವಿಸಿ ಯಜ್ಞ ಸ್ಥಾನದಲ್ಲಿ ಒಟ್ಟಾಗಿ ಸೇವಿಸುತ್ತಾರೆ. ಯಜ್ಞ ಯಜಮಾನರು ಕರ್ಮ ಕುಶಲರು, ಯಜ್ಞಕ್ಕೆ ಆಹ್ವಾನಿಸುತ್ತಾರೆ. ಸ್ತೋತ್ರ, ಪ್ರಶಂಸೆ ಮಾಡುತ್ತಾರೆ. ಸೂರ್ಯನು ಮೇಲೆ ಏರಿದಾಗ ದೇವತೆಗಳನ್ನು ಕರೆಯುತ್ತಾರೆ. ಯಜ್ಞಭೂಮಿಗೆ ದಯಮಾಡಿಸಲು ಪ್ರಾರ್ಥಿಸಿ ಅವರಿಗೆ ಸ್ತೋತ್ರಗಳನ್ನು ಪೂಜಾದಿಗಳನ್ನು ಸೋಮವನ್ನು ಹವಿಸ್ಸನ್ನು ಅರ್ಪಿಸಿ ನಮಸ್ಕರಿಸುತ್ತಾರೆ. ಇವರು ಬಂದು ಹೋದ ನಂತರ ಯಾಜ್ಞಕರು ಯಜಮಾನರು ಯಾವ ಭಯವೂ ಇಲ್ಲದೆ ಸುರಕ್ಷಿತರಾಗಿರುತ್ತಾರೆ. ಕ್ಷೇಮಾರ್ಥವಾಗಿ ಇವರೊಂದಿಗೆ ಇಂದ್ರ, ಅಗ್ನಿ, ರುದ್ರ, ಮರುತ್‌ಗಳನ್ನು ಪ್ರಾರ್ಥಿಸುತ್ತಾರೆ. ಕರ್ಮ ಮಾಡಿಯೇ ಫಲ ಅಪೇಕ್ಷಿಸುತ್ತಾರೆ. ಶ್ರದ್ಧಾ ಭಕ್ತಿ ಇಲ್ಲದ ಸ್ತೋತ್ರಗಳು, ಪೂಜೆಗಳು ಕಾರ್ಯಗಳು ಕ್ರೋಧ ಭರಿಸುತ್ತವೆ.

# ಮಿತ್ರಾವರುಣರು

## ಪ್ರಾರ್ಥನೆಗಳು

ಮಿತ್ರಾವರುಣರು ಮಾನವ ಯಜಮಾನವರುಗಳಿಗೆ ಕರ್ಮಗಳಲ್ಲಿ ಶ್ರದ್ಧಾ ಭಕ್ತಿ ಇತ್ತು ಅನುಗ್ರಹಿಸಲಿ. ಆಪತ್ತು ನಾಶವಾಗಲಿ, ಕಷ್ಟಗಳಿಂದ ಬಿಡಿಸಲಿ, ನಮ್ಮ ಕರ್ಮರೂಪ ನದಿಯನ್ನು ದಾಟುವ ಸಾಮರ್ಥ್ಯ ನೀಡಲಿ. ಯಜಮಾನನ ಶತ್ರುಗಳನ್ನು ಹಿಂಸಿಸಲಿ, ಹವಿಸ್ಸು ಅರ್ಪಿಸುವವರಿಗೆ ಉತ್ತಮ ಸ್ಥಾನ ದೊರಕಲಿ, ಯಜಮಾನನು ಪಾಪರಹಿತನು ಎಂದು ರಕ್ಷಿಸಲಿ, ಪೂಜಿಸಿದವರು, ಸ್ತುತಿಸಿದವರು, ಕಷ್ಟಗಳನ್ನು ದಾಟಿ ಆಪತ್ತುಗಳು ನಾಶವಾಗಿ ಅವರು ಮಿತ್ರಾವರುಣರಿಂದ ರಕ್ಷಿತರಾಗಲಿ. ಯಜಮಾನನನ್ನು ಸ್ವರ್ಗಕ್ಕೆ ಕರೆದೊಯ್ಯಲಿ. ಸ್ತುತಿಸುವವರ ವಿಶೇಷ ಅಭೀಷ್ಟಗಳನ್ನು ನೆರವೇರಿಸಲಿ. ಅತ್ಯಧಿಕ ಧನಕ್ಕಾಗಿ ಬೇಡುತ್ತಾರೆ. ಕರ್ಮಹೀನರನ್ನು ಪ್ರಶಂಸಿಸದೆ ಇರುವವರನ್ನು ಪೂಜಿಸದವರನ್ನು ಯಜ್ಞ ಮಾಡದವರನ್ನು ಹಿಂಸಿಸಲಿ. ಸೀತಾ, ವಾತಗಳಿಂದ ರಕ್ಷಣೆ ಬೇಡುತ್ತಾರೆ. ಪಾಪ ನಾಶಕ್ಕಾಗಿ ಬೇಡುತ್ತಾರೆ. ಗೃಹಗಳಿಗಾಗಿ ಬೇಡಿಕೆ ಇದೆ. ಔಷಧಿಗಳನ್ನು ಬೆಳೆಸಲಿ. ಗೋವುಗಳನ್ನು ಪೋಷಿಸಲಿ, ಧನ, ಶತ್ರುಜಯ ಪಡೆಯುವ ಶಕ್ತಿ ಅನುಗ್ರಹಿಸಲಿ. ಮರಣ ರಾಹಿತ್ಯವನ್ನು ಧನವನ್ನು ಬೇಡುತ್ತಾರೆ. ಯಜಮಾನನ್ನು ಪರಿತ್ಯಜಿಸದೆ ಅನ್ನ ಒದಗಿಸಲಿ, ಉತ್ತಮ ಮಾರ್ಗದರ್ಶನ ನೀಡಲಿ. ಇಷ್ಟಾರ್ಥ ರಕ್ಷಣೆ ಕೊಡಲಿ. ವರುಣನ ಕೃಪೆ ಪಡೆದವರು ಮಿತ್ರನ ರಕ್ಷಣೆಗೂ ಒಳಪಟ್ಟಿರುತ್ತಾರೆ. ಪಾಪರಹಿತ ಪ್ರಜೆಗಳಾಗಿರುವಂತೆ ನಮ್ಮನ್ನು ಅನುಗ್ರಹಿಸಲಿ. ಪುತ್ರ ಪೌತ್ರರನ್ನು ರಕ್ಷಿಸಲಿ. ಅನ್ನ ಉದಕಗಳನ್ನು ಕೊಡಲಿ. ನಮ್ಮ ಸ್ತೋತ್ರಗಳನ್ನು ಕೇಳಲಿ, ಪಾಪಿಗಳಾದ ನಮ್ಮನ್ನು ಉದ್ಧರಿಸಿ ಕಾಪಾಡಲಿ. ಯಜಮಾನನು ಇವರ ಕೋಪಕ್ಕೆ ಪಾತ್ರನಾಗದಿರಲಿ. ಆಪತ್ತುಗಳನು ನಾಶವಾಗಲಿ. ಕಷ್ಟಗಳು ಬಿಡುಗಡೆಯಾಗಲಿ, ಕರ್ಮರೂಪ ನದಿ ದಾಟಸಲಿ, ವರುಣನು ಶತ್ರುಗಳನ್ನು ಹಿಂಸಿಸಲಿ, ಯಾಜ್ಞಿಕರು ಪಾಪ ಅಥವಾ ದು:ಖ ಇರದ ಸ್ಥಳಕ್ಕೆ ಅವರನ್ನು ಕರೆದೊಯ್ಯಲು ಪ್ರಾರ್ಥಿಸುತ್ತಾರೆ. ಸಂಚಾರ ಮಾರ್ಗಗಳು ಯೋಗ್ಯವಾಗಿರಲಿ, ಯಜಮಾನನ ಮೇಲೆ ಕೋಪ ಮಾಡದಿರಲಿ. ಸೂರ್ಯೋದಯದಲ್ಲಿ ಭಕ್ತರಿಗೆ ಧನ ಕೊಡಲು ತರುತ್ತಿರುವವರ ಧನವನ್ನು ಯಜಮಾನನಿಗೆ ಕೊಡಲಿ. (ಋತ್ವಿಜರು ಸಮೃದ್ಧವಾಗಲಿ) ಬಹುಕಾಲ ಜೀವಿಸುವಂತೆ ಆಯಸ್ಸು ಹೆಚ್ಚಿಸುವಂತೆ ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ಯಾಜ್ಞಿಕರು ಸರ್ವ ಕಾಲದಲ್ಲಿಯೂ ಧನಕ್ಕಾಗಿ ಸುಖಕ್ಕಾಗಿ ಪುತ್ರ ಪೌತ್ರರಿಗಾಗಿ ಶತ್ರು ನಾಶಕ್ಕಾಗಿ ರಕ್ಷಣೆಗಳಿಗಾಗಿ ಬೇಡುತ್ತಾರೆ.

## ವಿಶೇಷತೆಗಳು

ಮಿತ್ರಾವರುಣರಿಂದ ''ಲಬ್ಧ''ವಾದ ಧನದಿಂದ ಯಜಮಾನನು ಸ್ವಶರೀರ ಪುತ್ರ, ಪೌತ್ರರ ಭರಣ ಅನುಭವಿಸಲು ಇಚ್ಛಿಸುತ್ತಾನೆ. ಬೇರೆ ಧನದಿಂದಲ್ಲ, ಅಗ್ನಿ ಮಿತ್ರಾವರುಣ ಆರ್ಯಮ, ಇವರುಗಳ ಮುಂದೆ ಯಜಮಾನನು ಪಾಪರಹಿತನೆಂದು ಘೋಷಿಸಲಿ. ಹಿಂದೆ ದೇವತೆಗಳು ಎಲ್ಲರಿಗೂ ಶಕ್ತಿ ನೀಡಲು ಮಿತ್ರಾವರುಣರನ್ನು ಸ್ಥಾಪಿಸಿದರು, ಅಗ್ನಿ ಜಿಹ್ವೆಯ ಮೂಲಕ ಹವಿಸ್ಸು ಸ್ವೀಕರಿಸುವವರು ತಮ್ಮ ಪ್ರಭಾಯುತ ಕರ್ಮಗಳಿಂದ ಮೂರು ಸ್ಥಾನಗಳನ್ನು ಕೂಡಿಸುವವರು. ಸಂವತ್ಸರ, ಮಾಸ, ಯಜ್ಞಕರ್ಮ ಆವಶ್ಯಕ ಮಂತ್ರಗಳನ್ನು ನಿರ್ಮಿಸಿದ್ದಾರೆ. ಯಜ್ಞಾನುಷ್ಠಾನ ರಹಿತರು, ಪುತ್ರ ಸಂತತಿ ಇಲ್ಲದೇ ಆಯುಸ್ಸು ಕಳೆಯಲಿ. ಅದಿತಿಯು ಮಿತ್ರಾ - ವರುಣರನ್ನು ಮಾನವರ ಹಿತಕ್ಕಾಗಿ ಪುತ್ರರನ್ನಾಗಿ ಪಡೆದರು, ಇವರ ವಾಸಸ್ಥಾನ ಆದಿತ್ಯ ಮಂಡಲದಲ್ಲಿದೆ ಎಂದು ಋಷಿಗಳು ತಿಳಿದಿದ್ದಾರೆ. ಆದಿತ್ಯ ಮಂಡಲವು ''ಸತ್ಯಾತ್ಮಕ'' ಉದಕದಿಂದ ಮುಚ್ಚಲ್ಪಟ್ಟಿದೆ. ಇಲ್ಲಿ ಸಹಸ್ರಾರು ಸಂಖ್ಯೆ ರಶ್ಮಿಗಳು ಒಟ್ಟಿಗೆ ಆಶ್ರಯ ಪಡೆಯುವುವು. ವರುಣನು ಮಿತ್ರರು, ಯಜಮಾನನನ್ನು ಸ್ವರ್ಗಕ್ಕೆ ಒಯ್ಯುವವರು. ಅಗ್ನಿ, ವಾಯು, ಆದಿತ್ಯ, ಇವರುಗಳು ಕ್ರಮವಾಗಿ ಪೃಥ್ವಿ, ಆಕಾಶ, ದ್ಯುಲೋಕಗಳಿಗೆ ಪ್ರತ್ಯೇಕ ಪ್ರಭುಗಳು.

# ಉಷಾದೇವಿಯರು

ಉಷಾದೇವಿ ಅಂತರಿಕ್ಷಪುತ್ರಿ, ಸೂರ್ಯಪತ್ನಿ, ಆಕರ್ಷಕ ತೇಜೋ ರೂಪಳು, ನಾಶ ರಹಿತಳು, ಅನ್ನವಂತಳು, ಧನವಂತಳು, ಸಂಪತ್‌ಯುಕ್ತಳು, ಪ್ರಕಾಶಕಳು, ಸುಂದರ ರೂಪಳು, ಮಾನವ ಹಿತಕಾರಿಣಿ, ಸಕಲ ಲೋಕ ಪಾಲಕಳು, ಕತ್ತಲನ್ನು ನಾಶಪಡಿಸುತ್ತಾಳೆ. ನಿಷಾದಾದಿ ಪಂಚ ಜನರನ್ನು ರಕ್ಷಿಸುತ್ತಾಳೆ.

# ಉಷಾದೇವಿಯರು

ದೇವತೆಗಳಲ್ಲೇ ಮಹತ್ತಾದವಳು. ಯಜ್ಞಾರ್ಹರಲ್ಲಿ ಪೂಜ್ಯಳು. ಸತ್ಯ ಸ್ವರೂಪಳು. ರಶ್ಮಿಗಳಿಗೆ ಒಡೆಯಳು. ಸರ್ವತ್ರ ಸಂಚರಿಸುತ್ತಾಳೆ. ಅನ್ನ ಪಾಲಕಳು, ಕಲ್ಯಾಣ ಕಾರಕಳು, ಸಕಲ ಲೋಕಗಳು ಗೋಚರಿಸುವಂತೆ ಮಾಡುತ್ತಾಳೆ. ಕತ್ತಲನ್ನು ಓಡಿಸಿ ಯಜಮಾನನಿಗೆ ಧನವನ್ನು ತುಂಬಿ ಕೊಡುತ್ತಾಳೆ. ಧ್ವಜ ರೂಪಿ, ಉಷಸ್ಸಿನ ತೇಜಸ್ಸು ಪೂರ್ವದಲ್ಲಿ ಗೋಚರಿಸಿ ಉನ್ನತ ಪ್ರದೇಶದಲ್ಲಿ ಹಾದು ಪಶ್ಚಿಮ ದಿಕ್ಕಿನಲ್ಲಿ ಬರುತ್ತದೆ. ಉತ್ತಮ ತೇಜಸ್ಸಿನೊಂದಿಗೆ ಉಷೆಯು ಉತ್ಪನ್ನಳಾಗಿದ್ದಾಳೆ. ಸುಂದರ ರೂಪಿಣಿ. ಸುವರ್ಣ ತೇಜಸ್ವಿನಿ, ದ್ಯುಲೋಕ ಪುತ್ರಿ, ವಾಕ್ ನಿರ್ಮಾತೃ, ಎಲ್ಲರ ಆದರಕ್ಕೆ ಪಾತ್ರಳು, ಸೂರ್ಯನ ಸಮೀಪ ಇದ್ದು ಸಕಲ ಜೀವಿಗಳನ್ನು ಸಂಚಾರಕ್ಕೆ ಪ್ರಚೋದಿಸುತ್ತಾಳೆ. ಉಷಸ್ ಬಂದಾಗ ಅಪ್ರಿಯ ಕತ್ತಲೆಯು ದೂರ ಸರಿಯುತ್ತದೆ. ಕಾಂತಿಯಿಂದ ಸಕಲ ಪಾಪಗಳನ್ನು ನಾಶಪಡಿಸುತ್ತಾ ಬರುತ್ತಾಳೆ. ಪ್ರಕಾಶದಿಂದ ಜನರು ಉಷೆಯನ್ನು ಗುರುತಿಸುತ್ತಾರೆ. ಗೋವುಗಳಿಂದ ಒಡಗೂಡಿದವಳು. ಸೂರ್ಯನನ್ನು ಆಶ್ರಯಿಸಿದವಳು. ನಿಶಾದಾದಿ ಪಂಚಜನರಿಗೂ ಹಿತ ಉಂಟುಮಾಡಲು ಎಚ್ಚರಗೊಳಿಸಿ ಆವಿರ್ಭೂತಳಾಗುತ್ತಾಳೆ. ಅನ್ನ ಉತ್ಪಾದಕಳು, ಉತ್ತಮ ಯಜಮಾನನಿಗೆ ಧನ ಒದಗಿಸುತ್ತಾಳೆ. ಉದಕ ಸುರಿಸುತ್ತಾಳೆ. ಸಕಲ ದಿಕ್ಕುಗಳಲ್ಲೂ ಸಮಸ್ತ ಭೂತ ಜಾತಗಳನ್ನು ರಕ್ಷಿಸುತ್ತಾಳೆ. ಕತ್ತಲನ್ನು ನಾಶಮಾಡುತ್ತಾಳೆ. ಸಂಚಾರಕ್ಕೆ ಮಾರ್ಗವನ್ನು ಸುಗಮ ಮಾಡುತ್ತಾಳೆ. ಪಕ್ಷಿಗಳು ತಮ್ಮ ಗೂಡಿನಿಂದ ಹಾರಿ ಹೋಗುತ್ತವೆ. ಮಾನವರು ಅನ್ನ ಸಂಪಾದನೆಗಾಗಿ ಅತ್ತಿತ್ತ ಓಡಾಡುತ್ತಾರೆ. ಹವಿಸ್ಸು ಅರ್ಪಿಸುವವರಿಗೆ ಕೀರ್ತಿ, ಬಲ, ಅನ್ನ, ರಸ ಕೊಡುತ್ತಾಳೆ. ಅಹಿಂಸಕಳು, ಸೂರ್ಯ ಪ್ರಕಾಶ ಮಾನಿ, ಸ್ಥಿರ ಧನ ನಿರ್ಮಾತೃ, ಏಕ ಕಾಲದಲ್ಲಿ ಅಂತರಿಕ್ಷದ ಎಲ್ಲಾ ದೂರ ಪ್ರದೇಶ ವ್ಯಾಪಿಸಿ ಶುಭ್ರ ವರ್ಣ ಸೂರ್ಯನೊಡನೆ ಒಂದಾಗುತ್ತಾಳೆ. ಮರಣ ಧರ್ಮವುಳ್ಳ ಪ್ರಾಣಿಗಳಿಗೆ ಮುಪ್ಪು ಕೊಟ್ಟು ಆಯಸ್ಸು ಕ್ಷೀಣವಾಗುವಂತೆ ಮಾಡಿ ಕೃತ ಯುಗ, ತ್ರೇತಾ ಯುಗಗಳು, ರಾತ್ರಿಗಳು ಸವೆಯುವಂತೆ ಮಾಡುತ್ತಾಳೆ. ಆದಿತ್ಯನ ಪತ್ನಿ, ದೇವತಾತ್ಮಳು, ಸೌಭಾಗ್ಯಯುಕ್ತಳು, ಪ್ರಿಯ ವಾಕ್ಕುವುಳ್ಳವಳು, ರಮಣೀಯ ದರ್ಶನವುಳ್ಳವಳು, ಸಮಸ್ತ ಪ್ರಪಂಚಕ್ಕೂ ಜ್ಞಾನಿ, ಸುವರ್ಣ ರಥದವಳು, ಮರಣ ಧರ್ಮ ರಹಿತಳು, ನಿತ್ಯ ತರುಣಿ, ಅನ್ನಸಂಪತ್ತ ಯುಕ್ತಳು, ಧನ ಯುಕ್ತಳು, ಕಾಂತಿಯುಕ್ತಳು, ಸತ್ಯವತೆ, ಊರ್ಧ್ವ ಮುಖ ತೇಜಸ್ವಿನಿ, ಅನೇಕರ ಸ್ತೋತ್ರಗಳಿಗೆ ಪಾತ್ರಳು, ಪ್ರತಿದಿನವೂ ನೂತನವಾಗಿ ಉದಯಿಸುತ್ತಾ ವಸ್ತ್ರದಂತೆ ಹರಡಿರುವ ಅಂಧಕಾರವನ್ನು ನಾಶಮಾಡುತ್ತಾಳೆ. ಒಂದೇ ಮಾರ್ಗದಲ್ಲಿ ಚಕ್ರದಂತೆ ಸುತ್ತುತ್ತಾ ಪುನರಾವರ್ತ್ತ ಸಂಚಾರವುಳ್ಳವಳಾಗಿದ್ದಾಳೆ. ದ್ಯುಲೋಕ ಅಂತ್ಯದಿಂದ ಪೃಥ್ವಿಯ ಅಂತ್ಯದವರೆಗೆ ಪ್ರಸಿದ್ಧಳಾಗಿದ್ದಾಳೆ. ಆದಿತ್ಯನು ಹಗಲಿಗೆ ಮೊದಲು ಉಷಸ್‌ನ್ನು ಪ್ರೇರಿಸುತ್ತಾನೆ. ಕತ್ತಲಲ್ಲಿ ಬಂದ ಶತ್ರುಗಳನ್ನು ಹೊಡೆದು ಓಡಿಸುತ್ತಾ ಅಂಧಕಾರವನ್ನು ಓಡಿಸಿ ಹವಿರೂಪ ಅನ್ನವನ್ನು ರಕ್ಷಿಸುತ್ತಾಳೆ. ಅಶ್ವಿನಿ ದೇವತೆಗಳಿಗೆ ಸಮಾನ ಪೂಜ್ಯಳು, ಯಜ್ಞಭಾಗಿ.

## ಪ್ರಾರ್ಥನೆಗಳು

ಅನ್ನ, ಅಶ್ವ ಪುತ್ರಾದಿಗಳನ್ನು ಉಷೆಯು ಯಜಮಾನನಲ್ಲಿ ಸ್ಥಾಪಿಸಲಿ. ನಿಂದನೆಗೆ ಪಾತ್ರರಾಗದಂತೆ ಕಾಪಾಡಲಿ. ದೇವತೆಗಳು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಲಿ, ಗೋಧನವನ್ನು ಕೊಡಲಿ, ಶತ್ರುಗಳನ್ನು ದೂರ ಓಡಿಸಲಿ, ದ್ವೇಷಿಸುವವರನ್ನು ಬೇರೆ ಮಾಡಲಿ, ಪೃಥ್ವಿಯನ್ನು ಭಯ ರಹಿತವನ್ನಾಗಿ ಮಾಡಲಿ, ಶತ್ರು ಧನವನ್ನು ಯಜಮಾನನಿಗೆ ಕೊಡಲಿ, ಜಗತ್ತನ್ನು ವೃಷ್ಟಿಯಿಂದ ತೋಯಿಸಲಿ. ಈ ಹಿಂದೆ ಸ್ತುತಿಸಿದವರಿಗೆ ಕೊಟ್ಟಷ್ಟೆ ಪ್ರಮಾಣದಲ್ಲಿ ಧನವನ್ನು ಈಗಲೂ ಸ್ತುತಿಸುತ್ತಿರುವವರಿಗೆ ಕೊಡಲಿ. ಉತ್ತಮ ಧನ ಸಂಪಾದನೆಗೆ ಸ್ತುತಿ ಕರ್ತರನ್ನು ಪ್ರೇರಿಸಲಿ. ಭೋಗಯೋಗ್ಯ ಧನ ದೊರೆಯಲಿ. ದೀರ್ಘಕಾಲ ಆ ಧನವನ್ನು ಅನುಭವಿಸುವಂತಾಗಲಿ. ವೀರ ಪುತ್ರರನ್ನು ಕರುಣಿಸಲಿ, ಸೂರ್ಯನ ತೇಜಸ್ಸು ನಮ್ಮನ್ನು ಹಿಂಸಿಸದಿರಲಿ, ಮಕ್ಕಳು ಮೊಮ್ಮಕ್ಕಳನ್ನು ಸಲಹಲು ಧನ ಬೇಡುತ್ತಾರೆ, ಸಂಪತ್ತಿಗೆ ಒಡೆಯರಾಗುವಂತೆ ಅನುಗ್ರಹಿಸಲಿ, ಯಜ್ಞ ಕರ್ತರನ್ನು ಅವರವರ ಕರ್ಮಗಳನ್ನು ಮಾಡಲು ಎಚ್ಚರಗೊಳಿಸಲಿ, ಋತ್ವಿಜರನ್ನು ಅವರವರ ಕರ್ತವ್ಯ ನಿರ್ವಹಿಸಲು ದೇವತೆಗಳಿಗೆ ಸೋಮ, ಹವಿಸ್ಸು ಅರ್ಪಿಸಲು ಉಷೆಯು ಎಚ್ಚರಿಸುತ್ತಾಳೆ. ಎರಡು ಕಾಲು, ನಾಲ್ಕು ಕಾಲು ಪ್ರಾಣಿಗಳನ್ನು ನಿದ್ರೆಯಿಂದ ಎಚ್ಚರಿಸಿ ಅವರವರ ವ್ಯಾಪಾರಗಳಿಗೆ ಹೋಗುವಂತೆ ಮಾಡುತ್ತಾಳೆ.

॥ ಓಂ ಶ್ರೀ ಮಹಾಗಣಪತಯೇ ನಮ: ॥







ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: । ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ: ॥

ಋಗ್ವೇದ ದಂಸ್ಟ್ರಾರರಾದ ಇಂದ್ರ, ಅಗ್ನಿ ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

## ಋಷಿಗಳ ಅಮೃತವಾಣಿ ದೇವತೆಗಳು ಋಗ್ವೇದ ದಿಂದ ಪರಿಚಯ

### ಅಗ್ನಿದೇವರು - ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ

ಸ್ತೋತ್ರವಿಭಾಗ : ಮೊದಲಿನ 1 ರಿಂದ 13 ಪುಟ ; ಆಶ್ರಮ ವಿಭಾಗ : 14-17 ಪುಟ ; ಪ್ರಾರ್ಥನಾ ವಿಭಾಗ : 18 - 20 ಪುಟ (ಕ್ರ.ಸಂ. 101 ರಿಂದ 120)

### ಇಂದ್ರದೇವರು - ಕನ್ನಡ ಅಕ್ಷರಮಾಲಿಕೆಯಡಿಯಲ್ಲಿ

ಸ್ತೋತ್ರವಿಭಾಗ : ಮೊದಲಿನ 14 ಪುಟ ; ಆಶ್ರಮ ವಿಭಾಗ : ಮುಂದಿನ 5 ಪುಟ ; ಪ್ರಾರ್ಥನಾ ವಿಭಾಗ : ಮುಂದಿನ 10 ಪುಟ (ಕ್ರ.ಸಂ. 121 ರಿಂದ 149)

ಆಶ್ವಲಾಯನ ಸೂತ್ರ - ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಈ ವಿಚಾರಗಳನ್ನು ಗ್ರಂಥಕರ್ತರು, ಸಂಸ್ಕೃತ ವಿದ್ವಾಂಸರಾದ ಮ॥ರಾ॥ ಸೂರ್ಯನಾರಾಯಣರವರ ಅನುಮತಿ, ಸಲಹೆ, ಪ್ರೋತ್ಸಾಹಗಳೊಂದಿಗೆ

ವಿದ್ವಾಂಸರಾದ ವೇ॥ಬ್ರ॥ ಎಸ್.ವಿ. ಶ್ಯಾಮಭಟ್ಟರು, 1ನೇ ಬ್ಲಾಕ್, ರಾಜಾಜಿನಗರ, ರವರ ಪರಿಶೀಲನೆ ಹಾಗೂ ಮುನ್ನುಡಿಯೊಂದಿಗೆ ಮತ್ತು

ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠ, ಕೃಷ್ಣರಾಜನಗರ, ಮೈಸೂರು ಜಿಲ್ಲೆ, ಇಲ್ಲಿಯ ಶ್ರೀ ಶ್ರೀ ಶಂಕರಭಾರತೀ ಮಹಾಸ್ವಾಮಿಗಳ ಆಶೀರ್ವಾದೊಂದಿಗೆ ಈ ರೂಪ ಕೊಡಲು ಸಾಧ್ಯವಾಗಿದೆ. ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರವನ್ನು ಈ ಸಂದರ್ಭದಲ್ಲಿ ತಿಳಿಸಬಯಸುತ್ತೇನೆ.

ಈ ಕೆಲಸವನ್ನು ಮಾಡಲು ನನಗೆ ಕೃಪೆ ಮಾಡಿದ ದಿವಂಗತ ಮಾತಾ-ಪಿತೃಗಳಿಗೂ ಮತ್ತು ಎಲ್ಲ ಗುರುವರ್ಯರುಗಳಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಹೆಬ್ಬೂರು ಕೋದಂಡಾಶ್ರಮ ಮಠದ ಹಿರಿಯ ಸ್ವಾಮಿಗಳವರು ಮೊದಲಿನಿಂದಲೂ ನನಗೆ ಪ್ರೋತ್ಸಾಹ, ಸಲಹೆ, ಆಶೀರ್ವಾದವನ್ನು ನೀಡುತ್ತಾ ಬಂದಿರುತ್ತಾರೆ. ಅವರಿಗೂ ನನ್ನ ಹೃತ್ಪೂರ್ವಕವಾದ ನಮಸ್ಕಾರವನ್ನು ತಿಳಿಸುತ್ತೇನೆ.

ಬೆಂಗಳೂರಿನಲ್ಲಿ ಆವನಿ ಶೃಂಗೇರಿ ಮಠದ ಶ್ರೀ ಶ್ರೀ ಗಳವರಿಗೆ ಕಳೆದ ವರ್ಷದ ದತ್ತಾತ್ರೇಯ ಜಯಂತಿಯ ದಿನ ನಾನು ಬರೆದ ಪುಸ್ತಕಗಳನ್ನು ತಲುಪಿಸಿದೆ. ಅವರು ನೋಡಿ ಸಂತೋಷದಿಂದ ಆಶೀರ್ವದಿಸಿದರು. ಈ ನಿಟ್ಟಿನಲ್ಲಿ ನನಗೆ ಸಹಕಾರ ನೀಡಿದ ಎಲ್ಲರಿಗೂ ನನ್ನ ಅಭಿನಂದನೆಗಳು.

ಎಸ್. ಆರ್. ನಂಜುಂಡಯ್ಯ,
ರಾಜಾಜಿನಗರ, ಬೆಂಗಳೂರು - 10

ದಿನಾಂಕ : 17.10.2005

॥ ಹರ ನಮಃ ಪಾರ್ವತಿ ಪತಯೇ ಹರಹರ ಮಹಾದೇವ ॥

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಅಗ್ನಿ ದೇವರು (ಕನ್ನಡ ಅಕ್ಷರ ಮಾಲಿಕೆ ಅಡಿಯಲ್ಲಿ)-ಸ್ತೋತ್ರ ವಿಭಾಗ

❖ ಅಗ್ನಿಯು ಅಗ್ರ ಆಸನಿ, ಅಗ್ನಿ ಹುಟ್ಟಿದ್ದು ಆರಣಿಯಲ್ಲಿ, ಅರ್ಚನೆಗಳಿಂದ ಬಲಿಷ್ಠನಾಗಿದ್ದಾನೆ. ಅಸಾರಯುತ ಮಳೆ ನೀರನ್ನು ಸಾರಯುತವನ್ನಾಗಿ ಮಾಡಿ ಮಾನವರು ಅದನ್ನು ಸ್ನಾನಪಾನಗಳಿಗೆ ಉಪಯೋಗಿಸುವಂತೆ ಮಾಡುತ್ತಾನೆ. ಅಗ್ನಿ ಸೋಮರಿಬ್ಬರೂ ದೇವತೆಗಳಲ್ಲೆಲ್ಲಾ ಅತ್ಯಂತ ಪೂಜ್ಯರು, ಸಮಾನ ಶಕ್ತಿಯುತರು, ಇಷ್ಟಾರ್ಥಪ್ರದರು.

❖ ಅಗ್ನಿಯು ಮಧುರ ಆಜ್ಯಾದಿ ದ್ರವ್ಯಗಳ ಹವಿಸ್ಸನ್ನು ಯಜ್ಞದಲ್ಲಿ ಸೇವಿಸುತ್ತಾನೆ. ಅಗ್ನಿಯು ಯಜ್ಞ ಮಾಡದವರನ್ನು ಅಪೇಕ್ಷಿಸುವುದಿಲ್ಲ. ಅಗ್ನಿ, ವರುಣ ಇವರು ಧರ್ಮ ದೇವತೆಗಳು. ಇತರೇ ಆಹ್ವಾನಿತ ದೇವತೆಗಳು ಬರುತ್ತಾರೆ.

❖ ಅಗ್ನಿಯು ಚೋರರು, ನಿಂದಕರು, ವಂಚಕರು, ಶತ್ರುಗಳು, ಕಚ್ಚತಕ್ಕ, ಹಿಂಸೆಮಾಡತಕ್ಕ ಪ್ರಾಣಿಗಳು, ಹೊಟ್ಟೆಬಾಕಗಳು ಇವರೆಲ್ಲರಿಂದಲೂ ಪಾರು ಮಾಡುತ್ತಾನೆ. ಆಂಗೀರಸು ನಾಮಕ ಋಷಿಗಳಿಗಿಂತ ಮೊದಲಿನವನು.

❖ ಅಸನ್ಮಾರ್ಗಿಗಳನ್ನು ಸನ್ಮಾರ್ಗಿಗಳನ್ನಾಗಿ ಮಾಡುತ್ತಾನೆ. ಅಗ್ನಿಯು ಕ್ಷೇಮಪಾಲಕ, ನಮ್ಮೆಲ್ಲರ ರಕ್ಷಕ, ಅಗ್ನಿಯ ಮೂರು ಸ್ಥಾನಗಳು (1) ಸಮುದ್ರದಲ್ಲಿ ಒಡವಾನಲ (2) ದ್ಯುಲೋಕದಲ್ಲಿ ಆದಿತ್ಯ (3) ಅಂತರಿಕ್ಷದಲ್ಲಿ ವಿದ್ಯುತ್ ಅಹೋರಾತ್ರಿಗಳು ಅಗ್ನಿಯನ್ನು ಎರಡು ಪಕ್ಕಗಳಿಂದ ಸೇವಿಸುತ್ತವೆ.

❖ ಅಹೋರಾತ್ರಿಗಳು ಹುಟ್ಟಿದ ಕೂಡಲೇ ಪುತ್ರರೂಪದ ಅಗ್ನಿಗೆ ಹವಿಸ್ಸನ್ನು ಒದಗಿಸುತ್ತಾರೆ. ಅಗ್ನಿ ಸಕಲ ಮಾನವ ಪ್ರಜೆಗಳನ್ನು ಸೃಷ್ಟಿಸಿದವನು. ಅನ್ನಕ್ಕೂ ಕಾರಣನು ಅವನೇ. ಅಗ್ನಿಯ ರೂಪಗಳು ಒಂದು ಅಹವನೀಯಾಗ್ನಿ (2) ಮಾರ್ಜಾಲೀಯ (3)ಗಾರ್ಹಪಥ್ಯ (4) ಅಗ್ನಿದ್ರಯ

❖ ಅಗ್ನಿಯು ಭೂತಕಾಲದಲ್ಲಿ, ವರ್ತಮಾನ ಕಾಲದಲ್ಲಿ ಎಲ್ಲಾ ಋಷಿಗಳಿಂದಲೂ ಸ್ತುತಿಸಲ್ಪಟ್ಟವನು. ಈಗಲೂ ಸಹ ಸ್ತೋತ್ರಗಳನ್ನು ಪಡೆಯುತ್ತಲೇ ಇದ್ದಾನೆ. ಅಗ್ನಿಯು ಕೊಟ್ಟದ್ದನ್ನು ಅಗ್ನಿಗೆ ಅರ್ಪಿಸುವುದರಿಂದ ಅವುಗಳು ವೃದ್ಧಿಯಾಗುತ್ತವೆ.

❖ ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾಗಿದ್ದಾನೆ. ಅಗ್ನಿಯನ್ನು ಈ ಕೆಳಗಿನಂತೆ ಬೇರೆ ಬೇರೆ ಹೆಸರುಗಳಿಂದಲೂ ಕರೆಯುತ್ತಾರೆ.(1) ಸುಸಮಿದ್ಧ (2)ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರಾ (8) ವನಸ್ಪತಿ (9) ಸ್ವಾಹಾ

❖ ಅಗ್ನಿ ಅತಿ ಶ್ರೇಷ್ಟ ಗುಣಗಳಿಂದ ಪ್ರಶಂಸಿತನಾಗಿದ್ದಾನೆ. ಶುನಃಶ್ಶೇಪನನ್ನು ಅಶ್ವಿನೀ ದೇವತೆಗಳ ಪ್ರಾರ್ಥನೆಗಳಿಂದ ಪಾರುಮಾಡಿದ್ದಾನೆ. ಅಗ್ನಿಯು ಎಲ್ಲಾ ಪ್ರಾಣಿಗಳ ಶರೀರಕ್ಕೆ ಆದಿತ್ಯ ತೇಜಸ್ಸು ಕೊಡುತ್ತಾನೆ. ಅಪ್ರತಿಹತಶಕ್ತ, ಸೌಮ್ಯ, ಸಾರ್ವಭೌಮ, ಅಹಂಕಾರ ರಹಿತರು ಮಾತ್ರ ಅಗ್ನಿಯ ಕೃಪೆಗೆ ಪಾತ್ರರಾಗುತ್ತಾರೆ. ಅಂತಹವರನ್ನು ಅನುಗ್ರಹಿಸುತ್ತಾನೆ.

❖ ಅಜ್ಞಾನಿಗಳು, ಅವಿದ್ವಾಂಸರು ಅಗ್ನಿಯನ್ನು ಅವನ ಮಹತ್ವವನ್ನು ತಿಳಿಯಲಾರರು. ಅಗ್ನಿಯನ್ನು ಪೂಜಿಸುವವರು ಚಂದ್ರಸ್ಥಾನ ಪಡೆಯುತ್ತಾರೆ. ದೇವತೆಗಳಿಂದಲೂ ಮಾನ್ಯರಾಗುತ್ತಾರೆ. ಅಗ್ನಿಯ ಅನುಗ್ರಹದಿಂದ ದನ ಕರುಗಳು ಸುರಕ್ಷಿತವಾಗಿ ಕೊಟ್ಟಿಗೆ ಸೇರುತ್ತವೆ.

- ಅಗ್ನಿಯು ಮರುತ್‌ಗಳಂತೆ 49 ಶಾಖೆಗಳನ್ನು ಉಳ್ಳವನು. ಅಗ್ನಿ ಸಹಾಯದಿಂದಲೇ ಮಾನವರು ರಸ ರೂಪಿ ಆಹಾರವನ್ನು ಪಡೆಯುವುದು.

- ಅಗ್ನಿಯು ಸ್ವೀಕರಿಸಿದ ನಂತರವೇ ದ್ಯಾವಾ ಪೃಥ್ವಿಗಳು ಹವಿಸ್ಸನ್ನು ಇತರ ದೇವತೆಗಳಿಗೂ ಹಂಚುತ್ತಾರೆ. ಅಗ್ನಿ ಅತಿಥಿಯಂತೆ ಪೂಜ್ಯ. ಅತ್ಯಂತ ಸ್ತುತ್ಯ. ಅಗ್ನಿ ಪೂಜೆ ನಮಸ್ಕಾರಗಳಿಂದ ಪ್ರಕಾಶಿಸುತ್ತಾನೆ. ಅನ್ನ, ಆಜ್ಯಗಳಿಂದ (ಆಹುತಿ) ಪ್ರಕಾಶಮಾನನಾಗುತ್ತಾನೆ. ಆಜ್ಯಪೋಷಕ.ಅಂತರಿಕ್ಷದಲ್ಲಿ ಗೂಢವಾದ ದೂಮದಲ್ಲಿ ಶಿರ, ಪಾದಗಳನ್ನು ಐಕ್ಯ ಮಾಡಿದ್ದಾನೆ.

- ಅಗ್ನಿ ಮಹಿಮೆಯಿಂದಲೇ ಸೂರ್ಯನು ಆವಿರ್ಭೂತನಾಗುತ್ತಾನೆ. ಅಗ್ನಿ ಮಹಿಮೆಯಿಂದಲೇ ಕಾಮಧೇನುಗಳು ಶ್ವೇತವರ್ಣದ ಕ್ಷೀರವನ್ನು ನೀಡುತ್ತವೆ. ಅಗ್ನಿ ಮನುಸಂಬಂಧಿ. ಹೊಂಬಣ್ಣದವನು. ಅಶ್ವಗಳು ಅಗ್ನಿಯನ್ನು ಯಜ್ಞಕ್ಕೆ ಕರೆತರುತ್ತವೆ. ಅಗ್ನಿಗೆ ಸಮಸ್ತ ಭೂತ ಜಾತಗಳು ನಡುಗುತ್ತವೆ. ಅಗ್ನಿ ಜ್ವಾಲೆ ಶುದ್ಧಿ ಕಾರಕ, ಶಬ್ದಕಾರಕ, ಕಾಮವರುಷಕ.

- ಅಗ್ನಿ ಉತ್ತರ ವೇದಿಕೆಯಲ್ಲಿ ಪ್ರಜ್ವಲಿಸುತ್ತಾನೆ. ಅಲಂಕೃತ ರೋಹಿತ ವರ್ಣದ ಅಶ್ವ ಹೂಡಿದ ರಥದಲ್ಲಿ ಹವಿಸ್ಸು ಸ್ವೀಕರಿಸಲು ಬರುತ್ತಾನೆ. ಅಧ್ವರ್ಯುಗಳು ಉಷಃಕಾಲದಲ್ಲಿ ಸ್ತ್ರೀರೂಪದಂತಿರುವ ಅಂಗುಲಿಗಳಿಂದ ಉತ್ಪನ್ನ ಮಾಡುತ್ತಾರೆ. ಅಗ್ನಿಯು ಯಜಮಾನನಿಗಾಗಿ ಹವಿಸ್ಸನ್ನು ಕಾಷ್ಠಾದಿಗಳನು ದಹಿಸುತ್ತಾನೆ.

1) ಅಗ್ನಿರ್ದ್ವ : ದೇವತಾ ಗುಣಗಳನ್ನು ಸ್ತುತಿಸುವವರು.

2) ಅಧ್ವರ್ಯು : ನೇರವಾಗಿ ಹೋಮ ಮಾಡುವವನು.

3) ಬ್ರಹ್ಮ (ವೀಕ್ಷಕ) : ನಾಲ್ಕು ವೇದಗಳನ್ನು ತಿಳಿದವನು.

- ಅಗ್ನಿಯ ಸಖ್ಯ ದೊರೆತಾಗ ಅಗ್ನಿಯು ತೇಜಸ್ಸಿನಿಂದ ಅಭಿಮುಖನಾಗುತ್ತಾನೆ. ಅಗ್ನಿಯು ವೃಕ್ಷಗಳಲ್ಲಿ ದಾವಾಗ್ನಿ ರೂಪದಲ್ಲಿ ಇದ್ದಾನೆ. ಅಗ್ನಿಯನ್ನು ಪ್ರತಿಭಟಿಸಲು ಅಸುರರಿಗೂ ಅಸಾಧ್ಯ. ಅಂತರಿಕ್ಷದಲ್ಲಿ ಧೂಮ ಮೇಲ್ಮುಖ ಪ್ರಕಾಶ ಹೊಂದಿದ್ದಾನೆ. ಅಂತರಿಕ್ಷ ದ್ಯಾವಾ ಪೃಥ್ವಿಗಳನ್ನೆಲ್ಲಾ ಅರಿತಿದ್ದಾನೆ. ಅಗ್ನಿಯು ವೃಷ್ಟಿದಾತ. ಆಹ್ಲಾದಕರ. ಆದಿತ್ಯ ಪ್ರಭಾವ ತಿಳಿದು ಸೂರ್ಯರೂಪಿನಲ್ಲಿ ಬೆಳಗುತ್ತಾನೆ.

- ಅಚಲ ಚಿತ್ತದ ಅಗ್ನಿಯು ಅರಣ್ಯ ಮತ್ತು ಓಷಧಿಗಳನ್ನು ದಹಿಸುವಾಗ ಸೂರ್ಯನಿಗಿಂತ ಪ್ರಕಾಶಮಾನನಾಗುತ್ತಾನೆ. ಅಗ್ನಿಯೊಡನೆ ದ್ಯಾವಾ ಪೃಥ್ವಿಗಳು ಸಹಕರಿಸುತ್ತವೆ. ಅಗ್ನಿಯು ಗೃಹ ಯಜ್ಞ ಗೃಹವೇ ಆಗಿರುತ್ತದೆ. ಅಗ್ನಿ ಸಪ್ತ ಹೋತ್ರಗಳಿಂದ ಆಜ್ಯ, ಆಹುತಿ, ಸ್ವೀಕರಿಸಿ ಯಾಗ ರಕ್ಷಕನಾಗಿದ್ದು (ಅಗ್ನಿಷ್ಟೋಮ) ಯಾಗದಲ್ಲಿ ಹೋತೃವಾಗಿರುತ್ತಾನೆ.

- ಅಗ್ನಿಯು ದೇವತೆಗಳನ್ನು ಜ್ಞಾನಿಗಳನ್ನು ಯಜ್ಞಕ್ಕೆ ಕರೆತರುತ್ತಾನೆ. ಆಜ್ಯ ಸೋಮಗಳಿಂದ ಪ್ರಜ್ವಲಿತನಾಗುತ್ತಾನೆ. ಅನೇಕ ದೇವತೆಗಳ ತೇಜಸ್ಸು ಅಗ್ನಿಯಲ್ಲಿದೆ. ಅಸುರ ಶಕ್ತಿಯನ್ನು ನಾಶ ಮಾಡಿ ಯಜ್ಞವನ್ನು ರಕ್ಷಿಸುತ್ತಾನೆ. ಅಡೆತಡೆಯಿಲ್ಲದೆ ಪ್ರಸರಿಸುವವನು ಅಗ್ನಿ.

- ಅಗ್ನಿ ಉತ್ತಮ ಕರ್ಮಗಳಿಗೆ ಫಲದಾಯಕ. ಅಗ್ನಿ ಅರಣಿಯಲ್ಲಿ ಗರ್ಭಸ್ಥನಾಗಿದ್ದಾಗ ತನೂನಪಾತ್ ಎಂದೂ ಪ್ರತ್ಯಕ್ಷನಾದಾಗ ನರಾಂಶ ಎಂದೂ ಅಂತರಿಕ್ಷದಲ್ಲಿ ಪ್ರಜ್ವಲಿತನಾದಾಗ ಮಾತರಿಶ್ವ ಎಂದೂ ಪ್ರಸಿದ್ಧನಾಗಿದ್ದಾನೆ.

❖ ಅಗ್ನಿ ಸಂಚಾರ ಕಾಲದಲ್ಲಿ ವಾಯುವು ಉತ್ಪನ್ನವಾಯಿತು. ಅಗ್ನಿ ಸಪ್ತ ಜಿಹ್ವೆಯವನು. ಅರಣಿಗಳಿಂದ ಕಡೆಯಲ್ಪಟ್ಟು ಗಾರ್ಹಪತ್ಯ ಕುಂಡಗಳಲ್ಲಿ ಇಡಲ್ಪಟ್ಟವನು. ಆಹವನೀಯ ಸ್ಥಾನದಲ್ಲಿ ಇದ್ದಾನೆ. ಅಂತರಿಕ್ಷ ವ್ಯಾಪಿ, ಅಂಧಕಾರ ಮುಕ್ತನಾಗಿ ಸರ್ವರಿಗೂ ಗೋಚರಿತನಾಗುತ್ತಾನೆ.

❖ ಅಸುರರು ಬಾಧೆ ಉಂಟುಮಾಡುವ ಶತ್ರುಗಳು ಅಗ್ನಿ ರಶ್ಮಿಯನ್ನು ತಡೆಯಲಾರರು. ಅಗ್ನಿ ಯಜಮಾನನ ಕಷ್ಟಗಳನ್ನು ಅರಿತವನು. ಅತ್ರಿ ವಂಶದವನು. ಅಗ್ನಿಯು ಸಹಸ್ರ ಕಂಬಗಳಿಂದ ಬಂಧಿತನಾಗಿದ್ದ ಶುನಃಶ್ಶೇಪನನ್ನು ಬಂಧನದಿಂದ ಬಿಡಿಸಿದವನು.

❖ ಅಗ್ನಿಯಲ್ಲಿ ದೇವತೆಗಳು ಅಂತರ್ಗತರಾಗಿರುತ್ತಾರೆ. ಅನ್ನಕ್ಕೆ ರುಚಿ ಕೊಡುವವನು ಅಗ್ನಿಯೇ. ಅಗ್ನಿಗೆ ಅರ್ಪಿಸಿದ ಧ್ಯಾನಾತ್ಮಕ ಸ್ತುತಿಗಳು ಇತರ ದೇವತೆಗಳಿಂದ ಅಪಹರಿಸಲಾಗುವುದಿಲ್ಲ. **ಅಗ್ನಿಯನ್ನು ಪುರಾತನ ಯಜ್ಞಕಾಮಿಗಳಾದ ಋಷಿಗಳು ಸ್ತೋತ್ರಗಳಿಂದ, ನಮಸ್ಕಾರಗಳಿಂದ ಸಮೀಪಿಸಿ, ಸ್ವಾಗತಿಸಿ ಯಜ್ಞಗಳನ್ನು, ಯಾಗಗಳನ್ನು ಮಾಡಿದ್ದಾರೆ.**

❖ ಅಗ್ನಿಯು ದೇವತೆಗಳಿಗೆ ಹವಿಸ್ಸು ಒಯ್ಯುವವನಾಗಿ ಆಹುತಿ ಅರಿತವನಾಗಿ ಯಜ್ಞಗೃಹ ಪಾಲಕನಾಗಿದ್ದಾನೆ. ಅಗ್ನಿ ಪ್ರಭೆಯಿಂದಲೇ ಆದಿತ್ಯನು ಪ್ರಭಾಯುಕ್ತನಾಗಿದ್ದಾನೆ. ಅಂಧಕಾರ ಮುಕ್ತನಾಗಿ ಉದಯಕಾಲದಲ್ಲಿ ಉತ್ಕೃಷ್ಟ ವರ್ಣದಿಂದ ಗೋಚರಿಸುತ್ತಾನೆ. ಅಗ್ನಿಯು ಚಂದ್ರನಂತೆ ನರಶ್ರೇಷ್ಟ, ಅಶ್ವಮುಖದಂತೆ ಕಾಂತಿಯುತ. ಅತಿಥಿ ರೂಪಿ. ಅಂಧಕಾರ ಕಳೆಯುವವನು.

❖ ಅನ್ನದಾತ, ಅನ್ನ ಭಕ್ಷಕ, ಅರಣ್ಯದಲ್ಲಿ, ತರು, ಗುಲ್ಮಾಧಿಗಳು, ವೃಕ್ಷಗಳನ್ನು ದಹಿಸಿ ಕಪ್ಪಾಗಿಸುತ್ತಾನೆ. ಅಗ್ನಿ ಅನುಗ್ರಹದಿಂದ ಹವಿಸ್ಸು ಹೊಂದಿರುವವರು ಉತ್ಪನ್ನರಾಗುತ್ತಾರೆ. ಅಂತರಿಕ್ಷದಲ್ಲಿ ತೇಜೋಮಂಡಲ ನಿರ್ಮಿಸಿದವನು ಅಗ್ನಿಯೇ. ಅನ್ನವಂತರನ್ನಾಗಿ ಮಾಡುತ್ತಾನೆ.

❖ ಅರಣ್ಯದಲ್ಲಿ ದಾವಾನಲ ರೂಪಿನಲ್ಲಿದ್ದಾನೆ. ಅಂತರಿಕ್ಷದಲ್ಲಿ ಸೂರ್ಯನಂತೆ ತೇಜಸ್ಸು ಹರಡಿದ್ದಾನೆ. ಅಂತರಿಕ್ಷದಿಂದ ವೃಷ್ಟಿ ಸುರಿಸುತ್ತಾನೆ. ಅಗ್ನಿಯು ದೇವತೆಗಳಿಗೆ ಮಿಂಚಿನಂತೆ ಹವಿಸ್ಸು ಅರ್ಪಿಸುತ್ತಾನೆ.

❖ ಅಗ್ನಿಯು ದೇವತಾ ಗುಣಗಳನ್ನು ಹೊಗಳುವವರಲ್ಲಿ ಶಕ್ತಿರೂಪದಲ್ಲಿರುತ್ತಾನೆ.

❖ ಅಂತರಿಕ್ಷದಲ್ಲಿ ವೈಶ್ವಾನರಾಗ್ನಿಯು ಸೂರ್ಯನಂತೆ ಉತ್ಪನ್ನನಾಗಿ ವಾಯುವಿನಂತೆ ಜಲಹೀರಿ ವೃಷ್ಟಿರೂಪದಲ್ಲಿ ಉದಕ ಉತ್ಪಾದಿಸಿ, ವಿದ್ಯುತ್ ರೂಪಿನಲ್ಲಿ ಘರ್ಜಿಸುತ್ತಾನೆ.

❖ ಅಗ್ನಿ ಹಂಚಿದ ಹವಿಸ್ಸಿನಿಂದ ದ್ಯುಲೋಕ ದೇವತೆಗಳು ತೃಪ್ತರಾಗುತ್ತಾರೆ. ಅಗ್ನಿಯು ಜಲರೂಪಿ. ತೇಜಸ್ವಿ ಅಶ್ವವಂತ, ಅತ್ಯಂತ ಯುವಕ, ಆಕರ್ಷಕ ರೂಪಿ, ಅನೇಕ ಪ್ರದೇಶದಲ್ಲಿದ್ದು ಎಲ್ಲವನ್ನೂ ಸಮಾಧಾನದಿಂದಲೇ ನೋಡುತ್ತಾನೆ. ಯಜ್ಞಕರ್ತರ ನಿರ್ವಾಹಕ, ಅಪೇಕ್ಷಿತ ವಸ್ತುಗಳೊಡನೆ ಕಾಣಿಸಿಕೊಳ್ಳುತ್ತಾನೆ. ಅನ್ನ, ಸ್ತೋತ್ರ, ಹವಿಸ್ಸು ಹೊಂದಿರುವ ಯಜಮಾನರುಗಳ ಅಭೀಷ್ಟವನ್ನು ಈಡೇರಿಸುತ್ತಾನೆ. ಸಕಲ ದೇವತೆಗಳಿಂದಲೂ ಒಡಗೂಡಿದ್ದಾನೆ.

❖ ಅಗ್ನಿದತ್ತ ಸಂಪತ್ತನ್ನು ಯಾರೂ ಅಪಹರಿಸಲಾರರು. ಅಶ್ವಶಕ್ತಿಯುಳ್ಳವನು, ಅಶ್ವದಂತೆ ಸಂಚರಿಸುವವನು, ಪೂಜಿಸಿ ಶತ್ರುಗಳಿಂದ ಬಿಡುಗಡೆ ಹೊಂದಿ ಪ್ರವೃದ್ಧಮಾನರಾಗುತ್ತಾರೆ ಮಾನವರುಗಳಿಗೆ ಅಗ್ನಿಯು ಯಜ್ಞ ಪ್ರಧಾನ.ಅಗ್ನಿಯು ಶಕ್ತಿ ಪ್ರಯೋಗದಿಂದ ಜನಿಸಿದವನು. ಅತಿಥಿಯಂತೆ ಗೌರವಾನ್ವಿತನು. ಅಗ್ನಿ ಕರ್ಮಮಾಡುವವರಿಗೆ ಕಾಣಿಸಿಕೊಳ್ಳುತ್ತಾನೆ.

- ಅನ್ನನಿಮಿತ್ತ ಓಷಧಿಗಳಿಂದಲೇ ಉಪಚರಿತನಾಗುವನು. ದಹಿಸುವ ಜ್ವಾಲಾರೂಪಿ ಅಂಧಕಾರರೂಪ ಶತ್ರುವನ್ನು ನಾಶಮಾಡುತ್ತಾ ಬರುತ್ತಾನೆ. ಅಗ್ನಿ ರಶ್ಮಿಗಳು ಸ್ತುತಿಕರ್ತರನ್ನು ಹಿಂಸಿಸುವುದಿಲ್ಲ. ಅಗ್ನಿಯನ್ನು ಸ್ತುತಿಸಿ ಉತ್ಪಾದಿಸಿದಾಗಲೇ ಉಷೆಯು ಆದಿತ್ಯನೊಡನೆ ಉದಯಿಸುತ್ತಾಳೆ. ಅಗ್ನಿಯ ಸುವರ್ಣಮಯ ರಥವು ಪ್ರಜಾಪತಿಯಿಂದ ನಿರ್ಮಿತವಾದದ್ದು.
- ಅಗ್ನಿ ಊರ್ಧ್ವಮುಖ ಹೊರಟು ದ್ಯುಲೋಕದ ಕೊನೆಯವರೆಗೆ ಅಂತರಿಕ್ಷವನ್ನು ಪೂರ್ಣ ವ್ಯಾಪಿಸುತ್ತಾನೆ. ಅಂತರಿಕ್ಷದಲ್ಲಿ ವಿದ್ಯುತ್ ರೂಪಿನಲ್ಲಿದ್ದಾನೆ. ಅಯರ್ವ ಋಷಿಯಿಂದ ಪ್ರಜ್ವಲಿತ ಅಗ್ನಿ ಓಷಧಿಗಳಲ್ಲಿ ಅಡಗಿದ್ದಾನೆ. ಅಗ್ನಿ ಇರುವ ಯಜ್ಞಕ್ಕೆ ರಾಕ್ಷಸರು ಬರಲಾರರು.
- ಅಶ್ವ, ಗೋವು, ಧನವನ್ನು ಯಾಜ್ಞಿಕರಿಗೆ ಕೊಡುತ್ತಾನೆ. ಅಗ್ನಿ ಅಹೋರಾತ್ರಿಯ ಪುತ್ರ. ತನ್ನ ಮಹಿಮೆಯಿಂದಲೇ ಸಕಲ ದೇವತೆಗಳಿಂತಲೂ ಮೀರಿದ ಶಕ್ತಿ ಹೊಂದಿದ್ದಾನೆ. ಅಗ್ನಿ ಅನೇಕ ಪ್ರದೇಶಗಳಲ್ಲಿ ಪ್ರಾದುರ್ಭವಿಸುತ್ತಾನೆ. ಹರ್ಷಗೊಂಡಾಗ ತನ್ನ ಬಂಧು, ಓಷಧಿಗಳಲ್ಲಿ ಗರ್ಭ ಸ್ಥಾಪಿಸುತ್ತಾನೆ. ಯಜಮಾನನ ಮಿತ್ರ. ಅನುಗ್ರಹಕಾರಕ, ಧನವೇ ತೇಜಸ್ಸು.
- ಅರ್ಥವೇ ತಿಳಿಯದೆ ಅಗ್ನಿಯ ವಿಚಾರಗಳನ್ನು ಪಠಿಸಿದರೂ ಅವರು ತನ್ನವರೆಂದು ತಿಳಿದು ಅಗ್ನಿ ಅವರುಗಳಿಗೆ ಅಪೇಕ್ಷಿತ ಧನಗಳನ್ನು ನೀಡುತ್ತಾನ.
- ಅಂಗೀರಾಗ್ನಿಯು ಬಲದ ಪುತ್ರ, ಆರಣಿ ದೇವತೆಗಳು ತಾಯಿಯರು. ಆಂಗೀರಸರು ಅಗ್ನಿ ಸ್ಥಾಪನೆ ಮಾಡಿದರು. ಆದಿತ್ಯನು ದೇವತೆಗಳಿಗಿದ್ದಂತೆ ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆತರುವ ದೇವಪ್ರತಿನಿಧಿ, ಆರಾಧಕರು, ಪುತ್ರ, ಪೌತ್ರರನ್ನು ಅಶ್ವ, ಗೋವುಗಳನ್ನು ಪಡೆಯುತ್ತಾರೆ.
- ಆದಿತ್ಯ ರೂಪಿನಲ್ಲಿ ''ಪವಿತ್ರಾಗ್ನಿ''ಯಾಗಿದ್ದಾನೆ. ಆಂಗೀರಸ್ಸು ಉಷಸ್ಸುಗಳ ತೇಜಸ್ಸಿನಿಂದ ಕತ್ತಲು ನಾಶವಾಗುತ್ತದೆ. ಆದಿತ್ಯ ಪುತ್ರ ಆಂಗೀರಸರು ಉಷಸ್ಸಿನಿಂದ ಅಗ್ನಿ ರಶ್ಮಿ ಉತ್ಪನ್ನ ಮಾಡಿದರು. ಆಂಗೀರಸ್ಸು ರೂಪಿ ರಶ್ಮಿಗಳು ಜನನೀ ರೂಪರು. ಆಹವನೀಯ ಸ್ಥಾನದಲ್ಲಿ ಇದ್ದಾನೆ.
- ಆಹುತಿಗಳಿಂದ ಪ್ರಜ್ವಲಿತನಾಗುತ್ತಾನೆ. ಆಹಾರಗಳಿಗೆ ಪ್ರಭು, ಆಹ್ಲಾದಕಾರಕ, ಆಕರ್ಷಕ ಕಾಂತಿಯುತ, ಆರಣಿಯಿಂದ ಯುವಕ, ಆಚರಿತ ಕರ್ಮಗಳನ್ನು ಸ್ವೀಕರಿಸುತ್ತಾನೆ. ಆಸುರಿ ಶಕ್ತಿಗಳು ನಾಶವಾಗುವಂತೆ ಮಾಡುತ್ತಾನೆ. ಆಗ ತಾನೆ ಉತ್ಪನ್ನವಾದ ಓಷಧಿಗಳನ್ನು ಪ್ರವೇಶಿಸುತ್ತಾನೆ. ಆಹವನೀಯ ಸ್ಥಾನದಲ್ಲಿ ದ್ಯಾವಾ ಪೃಥ್ವಿಗಳ ಮಧ್ಯೆ ಕಾಷ್ಟಗಳಿಂದಾಗಿ ನಾನಾ ರೂಪಿನಿಂದ ಪ್ರಕಾಶಿಸುವ ಅಗ್ನಿ ಯುವಕನಾಗಿದ್ದಾನೆ.
- ಆಜ್ಯಾಹುತಿ ಅರ್ಪಿಸುವವರಿಗೆ ಧನದಾತ. ಆಂಗೀರಾ ಎಂದೇ ಹೆಸರಾದವನು. ಪ್ರತಿ ಮಾನವರಿಂದ ಪೂಜಿತನಾದವನು. ಆಕರ್ಷಕ ರೂಪುಳ್ಳವನು. ಆದಿತ್ಯನಂತೆ ಅಗ್ನಿ ತನ್ನ ಪ್ರಜ್ಞೆಯಿಂದ ಸಕಲವನ್ನು ಅರಿಯುತ್ತಾನೆ. ಆಹುತಿ ಸೇವಿಸುವುದರಲ್ಲಿ ಸಂಗ್ರಾಮದಲ್ಲಿ ಅಪ್ರತಿಹತ. ಆದಿತ್ಯ ಮಂಡಲದಲ್ಲಿ ಆದಿತ್ಯ ದ್ಯುಲೋಕ ಮಧ್ಯೆ ಪ್ರಕಾಶಿಸುವಂತೆ ಮಾಡಿದವನು ಅಗ್ನಿ.
- ಅಗ್ನಿ ಮತ್ತು ಸೋಮ ಇಬ್ಬರನ್ನೂ ಒಟ್ಟಾಗಿ ಯಜ್ಞಕ್ಕೆ ಆಹ್ವಾನಿಸುತ್ತಾರೆ. ಇಂದ್ರಾದಿ ದೇವತೆಗಳ, ಮಾನವರ ಉನ್ನತಿಗಾಗಿ ಉತ್ತಮ ವೇದಿಕೆಯಲ್ಲಿ ಸ್ಥಾಪಿತನಾಗಿರುತ್ತಾನೆ. ಇಂದ್ರನನ್ನು ಪ್ರವೃದ್ಧಿಗೊಳಿಸಿ ಅಪಹೃತ ಗೋವುಗಳನ್ನು ಆಂಗೀರಸರು ಪಡೆಯುವಂತೆ ಮಾಡಿದನು.

❖ ಇಂದ್ರಾದಿ ದೇವತೆಗಳಿಗಾಗಿ ಅಗ್ನಿ ತನ್ನ ಮುಖದಿಂದ ಭಕ್ಷಿಸುತ್ತಾನೆ. ಇಂದ್ರಾದಿಗಳಿಗೆ ಹರ್ವಿದೂತ. ಒಂದೇ ರಥದಲ್ಲಿ ಬರುವವನು, ಇಷ್ಟಾರ್ಥಪ್ರದ, ಇವರನ್ನು ಯಾರೂ ತಡೆಯಲಾರರು.

❖ ಇತರರ ಸಹಾಯವಿಲ್ಲದೆ ಶರೀರ ವೃದ್ಧಿಗೊಳ್ಳುತ್ತಾನೆ. ಇಂದ್ರನು ಸೂರ್ಯನಲ್ಲಿ ತೇಜಸ್ಸು ಸ್ಥಾಪಿಸುತ್ತಾನೆ. ಚಂದ್ರನಲ್ಲಿ ಕಾಂತಿಯನ್ನು ಸ್ಥಾಪಿಸಿದ್ದಾನೆ.

❖ ಉದಕಕ್ಕೆ ಸಹೋದರ ಅಗ್ನಿ, ಉತ್ತಮ ಧನಿ, ಪ್ರೀತಿ ಪಾತ್ರ, ಪುತ್ರರನ್ನು ಕೊಡುತ್ತಾನೆ. ಉತ್ಪನ್ನನಾದೊಡನೆಯೇ ವಾಯುವಿನ ಎದುರು ಪ್ರತ್ಯಕ್ಷನಾಗುತ್ತಾನೆ. ಉದಕಯುಕ್ತ ಯಾಗ ಪ್ರದೇಶ ಧನ ಹೊಂದಿರುವವನು, ಉಷಃಕಾಲದಲ್ಲಿ ಹಗಲೂ-ರಾತ್ರಿಗಳಲ್ಲಿ ಯಜಮಾನನಿಂದ ಸ್ತುತಿ, ಪೂಜೆ ಯಜ್ಞ ಮಂತ್ರಗಳಿಂದ ಪ್ರಕಾಶಿತನಾಗುತ್ತಾನೆ.

❖ ಉಷಃಕಾಲವು ಬೆಳಗುತ್ತದೆ. ಉನ್ನತ ಸ್ಥಾನದಲ್ಲಿ ಅಗ್ನಿ ಕ್ರಮಿಸುತ್ತಾನೆ. ಉತ್ತರ ವೇದಿಕೆಯಲ್ಲಿ ಇರುವವನು, ಉದಕವಾಹಕ ನದಿಗಳನ್ನು ಆಶ್ರಯಿಸಿದ್ದಾನೆ. ಉತ್ಪನ್ನವಾದ ಸಕಲ ವಸ್ತುಗಳ ಜ್ಞಾನವುಳ್ಳವನು. ಉಷಃಕಾಲದಲ್ಲಿ ಪ್ರವೃದ್ಧನಾಗುವವನು.

❖ ಉಗ್ರವಾಗಿ ದಹಿಸುವವನು, ಉದಕವು ದೊರೆಯುವುದು ಇವನ ಅನುಗ್ರಹದಿಂದಲೇ. ಉತ್ಪನ್ನನಾದೊಡನೆಯೇ ತನ್ನ ಪ್ರಭೆಯಿಂದ ದ್ಯಾವಾ ಪೃಥ್ವಿಗಳನ್ನು ನೋಡಲು ಅನುವು ಮಾಡಿಕೊಡುತ್ತಾನೆ. ಉತ್ತಮ ಜ್ಞಾನಿ, ಉದಕ ಪ್ರೇರಕ, ಉದಕ ಪಾಲಕ.

❖ ಊರ್ಧ್ವ ಭಾಗದಲ್ಲಿ, ಮೇಘ ರೂಪದಲ್ಲಿ, ಧೂಮದಲ್ಲಿ ಸಕಲ ಉದಕಗಳೂ ನೆಲೆಸಿವೆ. ಉಷಸ್ಸುಗಳ ಮಧ್ಯಭಾಗದಿಂದ ಉತ್ಪನ್ನನಾಗುತ್ತಾನೆ. ಉತ್ತಮ ಕರ್ಮಕರ್ತರಿಗೆ ಧನದಾತನಾಗಿದ್ದಾನೆ. ಉದಯ ಕಾಲದಲ್ಲಿ ಪ್ರತಿ ಸೂರ್ಯನಂತೆ ತೇಜಸ್ವಿಯಾಗಿ ಪ್ರಕಾಶಿಸುತ್ತಾನೆ.

❖ ಉದಕ ಸುರಿಸುತ್ತಾನೆ. ಉತ್ತಮ ಸ್ತುತಿಗಳಿಂದ ಪ್ರಶಂಸಿತನಾದವನು, ಉಷಸ್ಸುಗಳಲ್ಲೆಲ್ಲಾ ಪ್ರಿಯಕರ, ಉತ್ತಮ ಕರ್ಮಕರ್ತ. ಉದಕದಲ್ಲಿ ಬೀಜರೂಪಿನಲ್ಲಿರುತ್ತಾನೆ. ಉಷಃಕಾಲದಲ್ಲಿ ಪ್ರಕಾಶಿಸುತ್ತಾ ಪೂರ್ವ ಸ್ಥಾನ ಪಡೆಯುತ್ತಾನೆ. ಉದಕಗಳು, ದೇವತೆಗಳು ವಿಶ್ವ ಸುಖ ಅಗ್ನಿಯ ಮಧ್ಯವರ್ತಿಗಳು ಎಂದು ಸೋಮದೇವನಿಂದ ಮಾನವರು ತಿಳಿದಿದ್ದಾರೆ.

❖ ಉದಕ ದೇವತೆಗಳು ಸಕಲ ರೋಗ ನಾಶಮಾಡಿ ಪುತ್ರ ಪೌತ್ರರಾಗುವಂತೆ ಅನುಗ್ರಹಿಸುತ್ತಾರೆ. ಉಷಃಕಾಲದಲ್ಲಿ ಉತ್ಪನ್ನನಾಗುವಾಗಲೇ ಪ್ರಜ್ವಲಿಸಿ ದ್ಯಾವಾ ಪೃಥ್ವಿ ವ್ಯಾಪಿಸಿ ಮೇಘವನ್ನು ಸೀಳಿ ವೃಷ್ಟಿಯನ್ನು ಉಂಟುಮಾಡುತ್ತಾನೆ. ಉದಕ ಸ್ಥಾನದಲ್ಲಿ ಅಂತರಿಕ್ಷದಲ್ಲಿ "ವಿದ್ಯುತ್" ರೂಪಿನಲ್ಲಿ ಅಗ್ನಿಯು ದೇವತೆಗಳನ್ನು ತೃಪ್ತಿಪಡಿಸುತ್ತಾನೆ.

❖ ಋಷಿಗಳಿಂದ ಪ್ರಶಂಸಿತನಾದವನು, ಋಷಿಗಳು ಸ್ತೋತ್ರಗಳಿಂದ, ನಮಸ್ಕಾರಗಳಿಂದ ಸಮೀಪಿಸಿ ಸ್ಥಾಪಿಸಿದ್ದಾರೆ. ಋಷಿಗಳಿಗೆ ಧ್ಯಾನ ಪ್ರಚೋದಕ, ಋತ್ವಿಜರೊಡನೆ ಸಮಾನ ಭಕ್ತಿಯಿಂದ, ಪ್ರೀತಿಯಿಂದ ಧರ್ಭಾಸನ ನೀಡುತ್ತಾರೆ. ಋತ್ವಿಜರಿಗೆ ಹಿತಕಾರಿ.ಅವರಿಂದ ಪದೇ ಪದೇ ಕರೆಯಲ್ಪಡುತ್ತಾನೆ.

❖ ಋತ್ವಿಜರು ಅಗ್ನಿಯನ್ನು ಪ್ರಾರ್ಥಿಸಿ ಯಜ್ಞಕ್ಕೆ ಆಹ್ವಾನಿಸಿ ಪ್ರಜ್ವಲಿಸಿ ಆಜ್ಯ ಆಹುತಿಗಳಿಂದ ಸಮಿತ್ತುಗಳಿಂದ ಹವಿಸ್ಸನ್ನು ಅರ್ಪಿಸಿ ಜ್ವಾಲೆಗಳು ಮೇಲೇಳುವಂತೆ ಮಾಡಿ ಸ್ತುತಿಸಿ ಇಷ್ಟಾರ್ಥಗಳನ್ನು ಬೇಡುತ್ತಾರೆ.

❖ ಎಲ್ಲರಿಂದಲೂ ಸೇವಿತ. ವೃಕ್ಷದಲ್ಲಿ ವೈಶ್ವಾನರಾಗ್ನಿರೂಪಿನಲ್ಲಿ ಇದ್ದಾನೆ. ಎಲ್ಲರಿಂದಲೂ ನೋಡಲ್ಪಡುತ್ತಾನೆ. ಪೂಜಿಸಲ್ಪಡುತ್ತಾನೆ. ಎಚ್ಚರನಾಗಿಯೇ ಇರುವವನು. ಎಲ್ಲರಿಂದಲೂ ಪ್ರೀತಿಪಾತ್ರ. ಎಲ್ಲರ ಮನಸ್ಸನ್ನು ಆಕರ್ಷಿಸುವವನು. ಎಲ್ಲ ದೇವತೆಗಳಿಗೂ ಪ್ರಧಾನ.

❖ ಎಲ್ಲರನ್ನು ದಹಿಸುವ ಸೂರ್ಯನಂತೆ ಜ್ವಾಲೆಯ ಮೂಲಕ ತೀವ್ರ ಪ್ರಸರಿಸುತ್ತಾನೆ. ಎಲ್ಲಾ ಭೂತ ಜಾತಗಳಿಗೂ ಸಂಬಂಧ ಕಲ್ಪಿಸುತ್ತಾನೆ. ಎಲ್ಲಾ ನದಿಗಳನ್ನು ಆಶ್ರಯ ಹೊಂದಿದ್ದಾನೆ. ಎಲ್ಲವನ್ನು ಬಲ್ಲವನು. ಎಲ್ಲರ ಪ್ರೀತಿ ಆದರಗಳಿಗೆ ಪಾತ್ರನಾಗಿದ್ದಾನೆ. ಎಲ್ಲಕ್ಕೂ ವೈಶ್ವಾನರಾಗ್ನಿಯೇ ಅಧಿಪತಿ.

❖ ಓಷಧಿ ವೃಷ್ಟಿ ಪ್ರದಾತ, ಓಷಧಿಯಲ್ಲಿ ಶೀಘ್ರ ಪ್ರಸರಣವುಳ್ಳವನು. ಓಷಧಿ (ಲತೆಗಳ) ಪುತ್ರ ರೂಪನಾಗಿ ಬೇರೆಬೇರೆ ಓಷಧಿಗಳನ್ನು ಸೇರಿದ್ದಾನೆ.

❖ ಕೆಳಗೆ ಭೂಲೋಕಕ್ಕೆ ನಾಭಿಯಂತಿದ್ದಾನೆ. ಕ್ಷೇಮಪಾಲಕ, ಕೋಪಬಂದರೆ ಅಗ್ನಿ ಓಷಧಿಗಳ ಸಹಿತ ಕಾಡನ್ನು ಸುಡುತ್ತಾನೆ. ಕನ್ಯೆಯು ಸ್ತುತಿಸಿದರೆ ಕನ್ಯಾತ್ವವನ್ನು ಹೋಗಲಾಡಿಸುತ್ತಾನೆ. ಕರ್ಮಗಳ ವಿಷಯಗಳಲ್ಲಿ ಜ್ಞಾನಿ. ಕರ್ಮನಿರತರ ದೂತನಾಗಿರುತ್ತಾನೆ. ಕಟ್ಟಿಗೆಯನ್ನು ಒಂದರ ಮೇಲೊಂದು ಆರಣಿ ಸೇರಿಸಿದಾಗ ತಮಸ್ಸು ನಾಶಮಾಡಿ ತೇಜೋಮಯನಾಗುತ್ತಾನೆ.

❖ ಕಾಂತಿಯುತ ಅಗ್ನಿಯು ಯಾಗಫಲದಾಯಕ. ಕೇಡು ಬಯಸುವವರು, ಚೋರರು ಶತ್ರುಗಳನ್ನು ನಾಶ ಮಾಡುತ್ತಾರೆ. ಕೊಟ್ಟಿಗೆಯ ಗೋವುಗಳು ವಿಸ್ತಾರಗೊಳ್ಳುವವು. **ಕೃಷಿಕ ವಂಶಜರು ಲೋಕೋದ್ಧಾರಕ ಯಜ್ಞದಲ್ಲಿ ಜನ್ಮರಹಿತರಾದ ದೇವತೆಗಳನ್ನು ಮಾನವರೊಂದಿಗೆ ಸೇರಿಸಿದರು.** ಕಾಷ್ಟಾಧಿಗಳನ್ನು ಭರಿಸುತ್ತಾ ತನ್ನಲ್ಲಿ ವನವನ್ನು ಐಕ್ಯಮಾಡಿಕೊಳ್ಳುತ್ತಾ ಓಷಧಿ, ವೃಕ್ಷ ಪೃಥ್ವಿಗಳ ಗರ್ಭರೂಪದಲ್ಲಿರುತ್ತಾನೆ.

❖ ಕಾಷ್ಟಗಳಿಂದ ಉತ್ಪನ್ನನಾಗಿ ಓಷಧಿಗಳನ್ನು ವೃದ್ಧಿಸಿ ಪೂಜೆ, ಸ್ತುತಿ, ಹವಿಸ್ಸುಗಳಿಂದ ಪ್ರಜ್ವಲಿಸುತ್ತಾನೆ. ಕೃಷ್ಣಮಾರ್ಗ ಹಿಡಿದು ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತಾನೆ. ಕರ್ಮವನ್ನು ಪ್ರೇರಿಸುತ್ತಾ ಎಚ್ಚರಗೊಳಿಸುತ್ತಾನೆ. ಕ್ಷೀರಕೊಡುವ ಕಾಮಧೇನುವಿನಂತೆ ಧನದಾತ.

❖ ಕರ್ಮ ಮಾಡಿದವರು ಸತ್ಫಲ ಹೊಂದುತ್ತಾರೆ. ಕರ್ಮ ಪೂರ್ಣ ಮಾಡಿಸುವವನು ಕತ್ತಲು ನಾಶ ಮಾಡುವವನು. ಕೃಷ್ಣವರ್ಣಮಾರ್ಗ ಹೊಂದಿರುವವನು ಆಗಿದ್ದಾನೆ.

❖ ಗೌತಮ ವಂಶಸ್ಥರು ಅಗ್ನಿಯನ್ನು ಸ್ತುತಿಸುತ್ತಾರೆ. ಗಾರ್ಹಪತ್ಯ ಸ್ಥಾನದಲ್ಲಿ ಶಾಶ್ವತನಾಗಿ ಜಾಗರೂಕತೆಯಿಂದ ರಕ್ಷಿತನಾಗಿ ಹಿಡಿಯಲ್ಪಟ್ಟಿದ್ದಾನೆ. ಗೋಧನ ಸಂಪತ್‌ಯುಕ್ತನಾಗಿ ಗೋವುಗಳು ಹಾಲು, ತುಪ್ಪ ಒದಗಿಸುವಂತೆ ಮಾಡುತ್ತಾನೆ. ಗೋವುಗಳಿಂದ ಕೂಡಿದ ಅನ್ನಕ್ಕೆ ದಾತೃ ಅಗ್ನಿ ದೇವತೆಗಳೊಡಗೂಡಿ ಸಮೀಪದ ಯಜ್ಞಕ್ಕೆ ಬರುತ್ತಾನೆ.

❖ ಗೋವು ಸಂಪತ್ತನ್ನು ರಕ್ಷಿಸುತ್ತಾನೆ. **ಗಾರ್ಹಪತ್ಯ ಆಹವನೀಯ ಎರಡೂ ರೂಪಗಳಿಂದ ಅಗ್ನಿಯನ್ನು ದೇವತೆಗಳು ಮಾನವರಲ್ಲಿ ಸ್ಥಾಪಿಸಿದ್ದಾರೆ.** ಗಾರ್ಹಪತ್ಯದಲ್ಲಿ ಸ್ಥಿರನಾಗಿದ್ದಾನೆ. ಗೃಹದಲ್ಲೇ ಅಲಂಕರಿಸಿ ಪೂಜಿಸುತ್ತಾರೆ.

❖ ಘೃತವು ದೇವತೆಗಳಿಗೆ ಪ್ರಿಯವಾದುದು. ಘೃತವು ಕ್ಷೀರ, ದಧಿ, ಆಜ್ಯ - ತ್ರಿ ರೂಪಗಳಲ್ಲಿ ಗೋವುಗಳಲ್ಲಿ ಇಡಲ್ಪಟ್ಟಿದೆ. ದೇವ ಮಾನವರು ಇದರ ಪ್ರಯೋಜನವನ್ನು ಪಡೆಯುತ್ತಾರೆ.

❖ ಜಯ, ಅಪಜಯ, ಮಾನ ಅಪಮಾನಗಳಿಂದ ಕುಟಿಲ ಮಾರ್ಗಗಳಿಂದ ದೂರಮಾಡಿ ಪಾಪನಾಶಮಾಡಿ ಕಾಪಾಡುತ್ತಾನೆ. ಜಲದ ಮಧ್ಯೆ ಇದ್ದಾನೆ.

❖ ಜಠರದಲ್ಲಿದ್ದು ಆಹಾರ ಪಚನ ಮಾಡುತ್ತಾನೆ (ಜಠರಾಗ್ನಿ). ಜ್ವಲನದಿಂದ ದ್ಯುಲೋಕ, ಪೃಥ್ವಿಯನ್ನು ಬೆಳಗುತ್ತಾನೆ. ಜ್ವಾಲೆಗಳಿಂದ ಸರ್ವತ್ರ ಸಂಚರಿಸುತ್ತಾ ಎತ್ತರ ವೇದಿಕೆಯಲ್ಲಿ ಪಾದವಿಧಿಸಿರುತ್ತಾನೆ. ಜೀವರಾಶಿಗಳ ಸೃಷ್ಟಿದಾತ. ಜ್ವಾಲಾರೂಪಿನಿಂದ ಶತ್ರು ಸದೆಬಡಿಯುತ್ತಾನೆ.

❖ ಜಾತವೇದೋರೂಪಿ, ಜ್ವಾಲೆಗಳು ಕೆಂಪು, ಬಿಳುಪು, ಕಪ್ಪು ವರ್ಣದವು ಮತ್ತು ವೇಗಶಾಲಿಗಳು ಮತ್ತು ಸರ್ವವ್ಯಾಪ್ತವಾದವು. ಚಕ್ರಾಕಾರವುಳ್ಳವು. ಜಗತ್‌ಪ್ರೇರಕವಾದವು, ಜಗತ್ತಿಗೆ ಚೈತನ್ಯದಾಯಕವಾದುದು.

❖ ತೇಜಸ್ಸಿನಿಂದ ನೀರು ಯಜ್ಞಾರ್ಹವಾಯಿತು, ತನಗಾಗಿ ಇತರ ದೇವತೆಗಳಿಗಾಗಿ ಯಜ್ಞದಲ್ಲಿ ಹವಿಸ್ಸು ಸ್ವೀಕರಿಸುತ್ತಾನೆ. ತನ್ನ ಉತ್ಪನ್ನ ಕ್ರಮ ತಿಳಿದಿದ್ದಾನೆ. ತನ್ನನ್ನು ಸ್ತುತಿಸುವವರನ್ನು ಶತ್ರು ಬಾಧೆಯಿಂದ ರಕ್ಷಿಸುತ್ತಾನೆ. ತಡೆಯಲಾಗದಂತಹ ಪ್ರಸರಣವುಳ್ಳವನು ಅಗ್ನಿ.

❖ ತನ್ನ ತೇಜಸ್ಸಿನಿಂದ ಶತ್ರುಗಳನ್ನು ಓಡಿಸುತ್ತಾನೆ. ತ್ವಷ್ಟ ಪುತ್ರ, ಅಸಂಖ್ಯಾತ ಜ್ವಾಲೆಯುಳ್ಳವನು, ತನ್ನ ತೇಜಸ್ಸಿನಿಂದ ಅಗ್ನಿ ಜ್ವಾಲೆಗಳಿಂದ ರಾಕ್ಷಸರನ್ನು ನಾಶಮಾಡುತ್ತಾನೆ. ತೃಪ್ತಿ ಹೊಂದಿದ ಅಗ್ನಿ ಎಲ್ಲವನ್ನೂ ಶುದ್ಧಿಗೊಳಿಸುತ್ತಾನೆ. ತನ್ನದೇ ಆದ ಪ್ರಭೆಯಿಂದ ಶಬ್ದದಿಂದ ಶತ್ರುಗಳನ್ನು ಚೆದರಿಸುತ್ತಾನೆ. ತನ್ನ ರಶ್ಮಿಗಳಿಂದ ವನ ನಾಶಕನಾಗಿದ್ದಾನೆ. ತಾನು ಹುಟ್ಟಿದ ತಾಯಿಯಾದ ಅರಣಿಯನ್ನು ಹುಟ್ಟುತ್ತಲೇ ಭಕ್ಷಿಸುತ್ತಾನೆ.

❖ ದ್ಯಾವಾ ಪೃಥ್ವಿಗಳ ಪುತ್ರ. ದೇವತೆಗಳು, ದಾನವರು ಇಬ್ಬರಿಂದಲೂ ಸೇವಿತನಾದವನು. ದೇವತೆಗಳನ್ನು ಯಜಮಾನರ ಪರವಾಗಿ ಆಹ್ವಾನಿಸುತ್ತಾನೆ. ಧನ, ಅನ್ನ, ಪಶು, ಪುತ್ರರು, ಸ್ವರ್ಗವನ್ನು ನೀಡುತ್ತಾನೆ. ದ್ಯಾವಾಪೃಥ್ವಿಗಳು ಅಗ್ನಿಗೆ ಕಂಪಿಸುತ್ತವೆ.

❖ ದೇವತೆಗಳನ್ನು ಹವಿಸ್ಸಿನಿಂದಲೂ, ಪೃಥ್ವಿಯನ್ನು ವೃಷ್ಟಿಯಿಂದಲೂ ಅಗ್ನಿ ಪೋಷಿಸುತ್ತಾನೆ. ಅನ್ನ, ಧನ, ಜ್ಞಾನ, ನೀಡುವವನು ಅಗ್ನಿಯೇ. ಅನೇಕ ವಸುಗಳೊಡನೆ ಅಂತರಿಕ್ಷ ಸಂಚಾರಿ. ಅಗ್ನಿಯನ್ನು ಒಲಿಸಿಕೊಂಡವರು ಎಲ್ಲವನ್ನೂ ಪಡೆಯಬಲ್ಲರು. ಅವರ ಎಲ್ಲ ಕಷ್ಟಗಳನ್ನು ದುಃಖವನ್ನು, ರೋಗ ದಾರಿದ್ರ್ಯಗಳನ್ನು ದೂರಮಾಡಿ ರಕ್ಷಿಸುತ್ತಾನೆ.

❖ ದೇವತೆಗಳು ಅಗ್ನಿಯನ್ನು ಹುಡುಕಿಕೊಂಡು ಭೂಮಿಗೆ ಬರುತ್ತಾರೆ. ದೇವತೆಗಳ ಜನನಾದಿ ವಿಷಯಗಳನ್ನು ತಿಳಿದ ಸರ್ವಜ್ಞಮೂರ್ತಿ ಅಗ್ನಿದೇವ. ದೇವತೆಗಳು ಅವರವರ ಕರ್ತವ್ಯ ನಿರತರಾಗಿರುವಂತೆ ಮಾಡಿ ಹವಿಸ್ಸನ್ನು ಹಂಚುತ್ತಾನೆ. ದ್ಯಾವಾ ಪೃಥ್ವಿಗಳನ್ನು ವ್ಯಾಪಿಸುತ್ತಾ ನೂತನ ಸ್ತೋತ್ರಗಳನ್ನು ಸ್ವೀಕರಿಸುತ್ತಾ ಮನೋಹರನಾಗಿ ಎಲ್ಲರಿಗೂ ಗೋಚರಿಸುತ್ತಾನೆ.

❖ ದೇವತೆಗಳು ಆಜ್ಯ, ಧಧಿ, ಕ್ಷೀರಾಧಿಗಳನ್ನು ಪಡೆಯುತ್ತಾರೆ. ದ್ಯಾವಾಪೃಥ್ವಿಗಳು ನಮಗೆ ಅನುಕೂಲಕರವಾಗಿರುತ್ತದೆ. ದ್ಯುಲೋಕವು ಅಗ್ನಿಗೆ ಜನಕನೂ, ಪಾಲಕನೂ ಆಗಿರುತ್ತದೆ. ದೇವಮಾತೆಯಂತೆ ಇದ್ದು ಹವಿರೂಪ ಅನ್ನ ಸ್ವೀಕರಿಸುತ್ತಾನೆ. ದೇವತೆಗಳಿಗೆ ಹವಿರ್ವಾಹಕನಾಗಿ ಅವರವರ ಸನ್ನಿಧಿಯಲ್ಲಿ ಇರುತ್ತಾನೆ. ದೇವಪತ್ನಿಯರನ್ನು ಪೂಜಿಸುವವನು.

❖ ದೇವತೆಗಳ ಅಂತರಿಕ್ಷ ಆರೋಹಣ ಸ್ಥಾನವನ್ನು ತಿಳಿದವನು. ದೇವತೆಗಳನ್ನು ತೃಪ್ತಿಗೊಳಿಸುವ ಜಿಹ್ವೆಯುಳ್ಳವನು, ದ್ಯಾವಾಪೃಥ್ವಿಗಳನ್ನು ವಿನೂತನ ಮಾಡುತ್ತಾ ಅವುಗಳ ನಡುವೆ ವೃದ್ಧಿಸುತ್ತಾನೆ. ದೇವತೆಗಳ ಅನ್ನಕ್ಕೆ ಅಮೃತನಾಭಿ. ದೇವತೆಗಳು ಹವಿರ್ವಾಹನಕ್ಕಾಗಿ ಉದಕದಲ್ಲಿರುವ ಅಗ್ನಿಯನ್ನು ಸಮೀಪಿಸಿ ಆಹ್ವಾನಿಸುತ್ತಾರೆ. ದ್ಯಾವಾಪೃಥ್ವಿಗಳು ಮಾತಾಪಿತೃಗಳು.

❖ ಧರ್ಮವಿಷಯವನ್ನು ಅರಿತವರು. ಧನ ಸಂಪತ್ತುಗಳಿಗೆ ಒಡೆಯರು. ದುಃಖ ಉಂಟುಮಾಡುತ್ತಿದ್ದ ಆಸುರಿ ಸ್ವಭಾವದ ದುಷ್ಟ ಶಕ್ತಿಗಳನ್ನು ಮೆಟ್ಟಿ ತುಳಿಯುತ್ತಾನೆ. ಧನದಾತೃ, ದಹಿಸುವ ಅಗ್ನಿ ದೇವತೆಗಳಿಗೆ ಹವಿಸ್ಸು ಒಯ್ಯುತ್ತಾನೆ. ಧನವಂತ, ದೇವಪ್ರಮುಖ, ದರ್ಶನೀಯರೂಪಿ, ಧನಕ್ಕಾಗಿ ಪೂಜಿತ. ದ್ಯಾವಾಪೃಥ್ವಿವ್ಯಾಪ್ತಿ ಪ್ರಭೆಯುಳ್ಳವನು.

❖ ದೇವತೆಗಳನ್ನು ಯಜ್ಞದಿಂದ ಪೂಜಿಸುವವನು. ದ್ಯುಲೋಕಕ್ಕೆ ಶಿಖರಪ್ರಾಯ, ದೇವಲೋಕ ಉತ್ಪನ್ನ ದೋಷರಹಿತ, ದೇವತೆಗಳನ್ನು ಯಜ್ಞಕ್ಕೆ ಕರೆತರುವವನು, ಧನಪಾಲಕ, ಧನದಾತ, ದೇವ ಮಾನವರನ್ನು ಅನುಗ್ರಹಿಸುವುದಕ್ಕಾಗಿ ದ್ಯಾವಾಪೃಥ್ವಿಗಳನ್ನು ವ್ಯಾಪಿಸಿ ಸಂಚರಿಸುತ್ತಾನೆ.

❖ ದ್ಯಾವಾಪೃಥ್ವಿಗಳಿಗೆ ಆಹ್ವಾನ ಕೊಡುವವನು ಇವನೇ. ದ್ಯಾವಾಪೃಥ್ವಿಗಳನ್ನು ತೇಜೋಮಯವನ್ನಾಗಿ ಮಾಡಿದ್ದಾನೆ. ದೂರದಿಂದಲೇ ಗೋಚರಿತನಾಗುತ್ತಾನೆ. ದೇವತೆಗಳಿಂದಲೂ ಸ್ತುತ್ಯನಾಗಿದ್ದಾನೆ. ದೇವಯಜ್ಞದಲ್ಲಿ ಸಮಸ್ತ ದೇವತೆಗಳೊಡನೆ ವೃದ್ಧಿಸುವವನು.

❖ ದೇವತೆಗಳ ಸ್ನೇಹಿತ. ದ್ಯುಲೋಕ, ಪೃಥ್ವಿಲೋಕಗಳ ಸ್ಥಾಪಕ. ದೇವತೆಗಳು ಅಗ್ನಿಯನ್ನು ಹವಿರ್ವಾಹಕನನ್ನಾಗಿ ಪಡೆದಿದ್ದಾರೆ. ದೇವಮಾನವನಾಗಿ ಪಂಚಜನರಿಗೂ ಅಭಿಮುಖನಾಗಿ ಪ್ರತಿ ಗೃಹದಲ್ಲೂ ಕುಳಿತು ರಕ್ಷಕನಾಗಿರುತ್ತಾನೆ. ದೇವತೆಗಳನ್ನು ಹವಿಸ್ಸು ಸೋಮಗಳಿಂದ ತೃಪ್ತಿಗೊಳಿಸುತ್ತಾನೆ.

❖ ದೇವತೆಗಳನ್ನು ಸಮೀಪಿಸಿ ಸ್ತೋತ್ರಮಾಡಿ ಪೂಜಿಸಿ ಹವಿಸ್ಸು ಅರ್ಪಿಸಿ ಅವರುಗಳು ಉತ್ತಮ ಯಜ್ಞವುಳ್ಳವರಾಗುವಂತೆ ಮಾಡುತ್ತಾನೆ. ದ್ಯಾವಾಪೃಥ್ವಿಗಳ ನಡುವೆ ಹವಿಸ್ಸು ವಹಿಸುತ್ತಾನೆ. ದೇವತೆಗಳ ಉತ್ಪತ್ತಿ ಸ್ವರೂಪ ಮಾನವರ ರಹಸ್ಯಗಳನ್ನು ಅರಿತಿದ್ದಾನೆ.

❖ ಧೂಮರೂಪ ಧ್ವಜವುಳ್ಳವನು. ದ್ಯುಲೋಕದಲ್ಲಿ ಸ್ಥಿತಿಯಲ್ಲಿದ್ದು ಯಜ್ಞಕಾಲದಲ್ಲಿ ಹವಿಸ್ಸು ವಹಿಸುತ್ತಾ ಅತಿಥಿಯಂತೆ ಪೂಜಾರ್ಹನಾಗಿ ದೇವತೆಗಳನ್ನು ಆಹ್ವಾನಿಸುತ್ತಾನೆ. ದೇವತೆಗಳ ಜೊತೆ ಇದ್ದು ಯಜಮಾನನ ಸಖ್ಯವನ್ನು ಬಯಸುವ ಅಗ್ನಿಯನ್ನು ಇಚ್ಛಿಸುತ್ತಾರೆ. ದೇವತೆಗಳಲ್ಲೆ ಶ್ರೇಷ್ಟನಾದವನು.

❖ ದುಃನಿವಾರಕ, ದ್ಯುಲೋಕದಲ್ಲಿ ಅಗ್ನಿ ರೂಪಿನಲ್ಲಿ ಇದ್ದಾನೆ. ದ್ಯಾವಾಪೃಥ್ವಿಗಳ ಪುತ್ರ.

❖ ನಕ್ಷತ್ರ ಮಂಡಳಗಳನ್ನು ದ್ಯುಲೋಕದಲ್ಲಿ ಎತ್ತಿ ಹಿಡಿದಿರುವವರು ಅಗ್ನಿಸೋಮರೇ. ನೇರವಾಗಿ ಹೋಮ ಮಾಡುವವರಿಗೆ ಶಿಕ್ಷಣ ನೀಡುತ್ತಾನೆ. ನಮ್ಮನ್ನು ಪಾಪಗಳಿಂದ ದಾಟಿಸುತ್ತಾನೆ. ನಾನಾ ರೂಪಿನಿಂದ ಎಲ್ಲವನ್ನೂ ವ್ಯಾಪಿಸಿದ್ದಾನೆ. ನಿರ್ಮಲ ತೇಜಸ್ಸಿನವನು.

❖ ಪುರೋಹಿತ, ಮಾನವರಿಂದ ಸ್ತುತಿತನಾಗುತ್ತಾನೆ. ಪಾಪಿಗಳನ್ನು ನಾಶಮಾಡುತ್ತಾನೆ. ಪ್ರತ್ಯುತ್ತರವನ್ನು ಅಗ್ನಿ ಬಯಸುವುದಿಲ್ಲ. ಪ್ರಭುಗಳಿಗೆ ಪ್ರಭು. ಸೂರ್ಯನಂತೆ ಬೆಳಗುತ್ತಾನೆ. ಪ್ರತಿ ಯುಗದಲ್ಲೂ ದೇವತೆಗಳು ಅಗ್ನಿಯನ್ನೇ ತಮ್ಮ ಪ್ರತಿನಿಧಿಯನ್ನಾಗಿ ಮಾಡಿಕೊಂಡಿದ್ದಾರೆ. ಪ್ರಜೆಗಳ ಸ್ವಾಮಿ, ತೀಕ್ಷ್ಣ ಜ್ವಾಲೆಯುಳ್ಳವನು, ಪ್ರಾಯದವನು, ಪರಾಕ್ರಮಿ, ಪುರೋಡಾಶ ಬಯಸುತ್ತಾನೆ.

❖ ಪ್ರಜ್ವಲಿಸುತ್ತಾನೆ. ಪೃಥ್ವಿಯ ಎಲ್ಲಾ ಆಹಾರಗಳಿಗೂ ಅಗ್ನಿ ಪ್ರಭುವಾಗಿದ್ದಾನೆ. ಪ್ರತಿ ಯಜ್ಞದಲ್ಲೂ ಸ್ತುತಿತನಾಗುತ್ತಾನೆ. **ಪೂಜಾ ಸ್ಥಾನದಲ್ಲಿದ್ದು ಪೂಜೆಯಿಂದ ತೃಪ್ತನಾಗಿ ಸಂತುಷ್ಟನಾಗಿ ಸೂರ್ಯರಶ್ಮಿಯೊಂದಿಗೆ ಇಳಾದೇವಿಯೊಂದಿಗೆ ಹವಿಸ್ಸು ಮತ್ತೆ ಮತ್ತೆ ಸೇವಿಸುತ್ತಾನೆ.**

❖ ಪೂಜಾಯೋಗ್ಯ, ಪ್ರಕಾಶಮಾನಿ, ಪಶುರಕ್ಷಕ, ಪ್ರಜಾಪಾಲಕ, ಪೃಥ್ವಿವ್ಯಾಪಿ ಪ್ರಭೆಯುಳ್ಳವನು, ಪೂಜ್ಯ ರಶ್ಮಿಗಳಿಂದ ಕೂಡಿದವನು. ಪೂರ್ಣ ಪ್ರಜ್ಞೆಯುಳ್ಳವನು. ಪ್ರಯಾಸವೇ ಇಲ್ಲದೆ ವನವನ್ನು ಪೂರ್ಣವಾಗಿ ದಹಿಸುವವನು. ಪ್ರಭೆಯಿಂದ ಶತ್ರುಗಳನ್ನು ಬೆದರಿಸುತ್ತಾ ರೋಗದ ಶಕ್ತಿಯನ್ನು ಕುಂದಿಸುತ್ತಾನೆ. ಪ್ರಜೆಗಳಿಗೆ ಪತಿ, ಪುತ್ರರೂಪಿನಲ್ಲಿ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡುತ್ತಾನೆ. ಪಾಪಗಳಿಂದ ಯಜಮಾನನನ್ನು ರಕ್ಷಿಸುತ್ತಾನೆ.

❖ ಪಶುಗಳೊಡನೆ ಸುತ್ತಲೂ ಇದ್ದು ಶತ್ರುಗಳಿಂದ ಅವನ್ನು ರಕ್ಷಿಸುತ್ತಾನೆ. ಪ್ರಶಂಸನೀಯ, ಪ್ರೀತಿಯಿಂದ ಪರಿಶುದ್ಧ ಕಾಂತಿಯುತ ಪರ್ಜನ್ಯನಂತೆ ಘರ್ಜಿಸುವವನು, ಪೃಥ್ವಿಯಲ್ಲಿ "ಜಾತವೇದೋ" ರೂಪಿನಲ್ಲಿ ಇದ್ದಾನೆ. ಪರ್ವತದಲ್ಲಿ ಅಡಗಿರುವ ಧನವನ್ನು ಕಿತ್ತು ತರುತ್ತಾನೆ.

❖ ಪರ್ಜನ್ಯನು ದ್ಯುಲೋಕದಲ್ಲಿ ಗರ್ಜಿಸುವಂತೆ ಅಗ್ನಿ ಶಬ್ದ ಮಾಡುತ್ತಾ ದ್ಯಾವಾ ಪೃಥ್ವಿಗಳ ನಡುವೆ ಕಾಂತಿಯಿಂದ ಪ್ರಜ್ವಲಿಸುತ್ತಾನೆ. ಪಿತೃಗಳಿಗೂ, ದೇವತೆಗಳಿಗೂ, ಮಾನವರಿಗೂ ದೇವಯಾನ, ಪಿತೃಯಾನ ಎಂಬ ಎರಡು ಮಾರ್ಗಗಳಿವೆ. ಪೃಥ್ವಿ ದ್ಯುಲೋಕಗಳ ನಡುವೆ ಈ ವಿಶ್ವ ಎರಡೂ ಮಾರ್ಗಗಳಲ್ಲಿ ಸಂಚರಿಸುತ್ತದೆ. ಪುತ್ರ ಪೌತ್ರರೊಂದಿಗೆ ಯಜಮಾನನು ಅಗ್ನಿಯನ್ನು ಸ್ತುತಿಸಿ ಪೂಜಿಸಿ ಪ್ರಶಂಸಿಸಿ ಪುಷ್ಟಿಗೊಳಿಸುತ್ತಾನೆ.

❖ ಬಹುದೂರದಲ್ಲಿದ್ದರೂ ನಮ್ಮ ವಿಚಾರಗಳನ್ನು ಕೇಳಬಲ್ಲನು. ಭೂಮಿಯನ್ನು ನೀರು ಸಂಪೂರ್ಣ ತೋಯಿಸಿ ಅನಂತರ ಅನ್ನಾದಿಗಳನ್ನು ಸಸ್ಯದಲ್ಲಿರಿಸಿ ಅದನ್ನು ಪಕ್ವವಾಗಿರಿಸಿ ಅಲ್ಲಿ ಅಗ್ನಿ ಅಂತರ್ಗತನಾಗಿದ್ದಾನೆ. ಭೂಮಿಯು ಅಗ್ನಿಯಿಂದ ಸ್ವರ್ಗವಾಗಿದೆ. ಭೂಮಿಯ ಮೇಲಿರುವುದೆಲ್ಲವೂ ಅಗ್ನಿಗೆ ಆಹಾರವೇ. ಬಲಿಷ್ಠ ಅಗ್ನಿಯಿಂದ ''ಪಣಿಯು'' ನಾಶವಾಗಿ ಗೋವುಗಳು ರಕ್ಷಿಸಲ್ಪಟ್ಟವು.

❖ ಬಳಲಿದ್ದರೂ ಯಜಮಾನನಿಗಾಗಿ ಕರ್ಮಗಳಲ್ಲಿ ತೇಜಸ್ಸಿನಿಂದ ಸಂಯುಕ್ತನಾಗುತ್ತಾನೆ. ಭೃತ್ಯರನ್ನು, ಪಶುಗಳನ್ನು ರಕ್ಷಿಸುತ್ತಾನೆ. ಬೆಳಗುವ ಸೂರ್ಯನನ್ನು ಕೃತ್ತಿಕಾದಿ ನಕ್ಷತ್ರಗಳನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾನೆ.

❖ ಮನುವಿನ ಪುತ್ರ. ಮಾರ್ಗವನ್ನು ಕಪ್ಪಾಗಿಸುತ್ತಾನೆ. ಮಾನವರ ನಾಭಿಯಲ್ಲಿ ಜಠರ ರೂಪಿನಲ್ಲಿದ್ದು ಮಾನವರಿಗೆ ರಕ್ಷಕನಾಗಿದ್ದಾನೆ. ಮಿತ್ರಾ ವರುಣರ ಉಪಚಾರಗಳಿಂದ ಮಳೆ ಉಂಟಾಗುತ್ತದೆ. ಮೂರು ಲೋಕಗಳಲ್ಲೂ ಮಿತ್ರಾವರುಣರು ಅನ್ನ-ಧನ ಹೊಂದಿದ್ದಾರೆ.

❖ ಮರಣಧರ್ಮರಹಿತ, ಜ್ಞಾನದಾಯಕ. ಮರುತ್‌ಗಳು, ವರುಣರು ಅಗ್ನಿಯ ಜೊತೆ ಇರುತ್ತಾರೆ. ಮಾನವರ ಯಾಗ ಕರ್ಮಗಳನ್ನು ಇಚ್ಛಿಸುತ್ತಾನೆ. ಮಧುರ ಉದಕವು ಇಂದ್ರ, ಅಗ್ನಿ, ಸೂರ್ಯರಿಂದ ನೂರಾರು ಧಾರೆಗಳಲ್ಲಿ ಪ್ರವಹಿಸುತ್ತವೆ. ಮಂತ್ರ, ಕಲ್ಪ, ಬ್ರಾಹ್ಮಣ ಮೂರು ಪ್ರಾಕಾರಗಳಿಂದ ಅಗ್ನಿಯು ಮಾನವರಲ್ಲೆಲ್ಲ ವ್ಯಾಪಿಸಿದ್ದಾನೆ. ಮರುತ್‌ಗಣ, ವರುಣ, ವಾಯು, ನದಿ, ಪರ್ವತ, ಅಧ್ವರ್ಯುಗಳ ಪ್ರೇರಕ. ಮಹಾ ಅರಣ್ಯಗಳು ದಾವಾನಲಾಗ್ನಿಯಿಂದ ಸುಡುತ್ತಿದ್ದರೂ ಅಗ್ನಿಯು ಜರಾರಹಿತ.

❖ ಮನ, ವಾಕ್, ಕರ್ಮಗಳಿಂದ ಐಕ್ಯತೆ ಮೂಡಿಸುತ್ತಾನೆ. ಮಾನವ ಕುಲದಲ್ಲಿ ಪ್ರಪಂಚಲ್ಲಿ ಅತ್ಯಂತ ಪೂಜ್ಯ ಮಂಗಳ ಜ್ವಾಲೆಯವನು. ಮರುತ್‌ಗಳು ಅಂತರಿಕ್ಷವನ್ನು ಶುದ್ಧಿ ಮಾಡುತ್ತವೆ. ಮಥನದಿಂದ ಆವಿರ್ಭವಿಸಿ ಕರ್ಮಯುಕ್ತನಾಗಿ ಅನ್ನ ಗ್ರಾಹ್ಯನಾಗಿದ್ದಾನೆ. ಮಾನವರನ್ನು ಅವರವರ ಕಾರ್ಯಗಳಲ್ಲಿ ನಿರತರಾಗಿರುವಂತೆ ಪ್ರೇರೇಪಿಸುತ್ತಾನೆ. ಮಾನವರಲ್ಲಿ ಸ್ಥಾಪಿತನಾಗಿದ್ದು ಅವರನ್ನು ರಕ್ಷಿಸುತ್ತಾನೆ.

❖ ಮಾನವರ ಶತ್ರುಗಳನ್ನು ನಾಶಮಾಡಿ ಉಪಕಾರ ಮಾಡುತ್ತಾನೆ. ಮನೋಹರ ರೂಪಿ, ಮಾನವ ಯಜ್ಞದಲ್ಲಿ ಸ್ಥಾಪಿತನಾಗಿದ್ದಾನೆ. ಮಾನವರಲ್ಲಿ, ದೇವತೆಗಳಲ್ಲಿ ಕರ್ಮರಕ್ಷನಾಗಿರುವುದರಿಂದಲೇ ಯಜ್ಞಗಳಲ್ಲಿ ಸ್ತುತ್ಯನಾಗಿದ್ದಾನೆ. ಮಾನವ ವ್ಯವಹಾರಗಳನ್ನು ನೋಡಬಲ್ಲನು. ಮಿತ್ರನಂತೆ ಇರುವವನು. ಮಾನವರ ಅತಿಥಿ. ಮಾನವರ ಯಜ್ಞದಲ್ಲಿ ಹೋಮಸಂಪಾದಕ.

❖ ಮಾನವರ ಗೃಹದಲ್ಲಿ ಸ್ಥಾಪಿತನಾದಾಗ ಶತ್ರು ನಾಶ ಮಾಡುತ್ತಾನೆ. 33 ದೇವತೆಗಳನ್ನು ಪೂಜಿಸುತ್ತಾನೆ. ಮೂರು ಲೋಕಗಳಲ್ಲೂ ವ್ಯಾಪಿಸಿದ್ದಾನೆ. ಮಿತ್ರನಿಗೆ ಹರ್ಷ ಉಂಟುಮಾಡುತ್ತಾನೆ. ಭೂಮಿಯ ಮೇಲೆ ಒಣಗಿ ನಿಂತಿರುವ ಲತೆಗಳಾಗಲೀ ಮರಗಳಾಗಲೀ ಅವನ್ನು ತಕ್ಷಣ ದಹಿಸುತ್ತಾನೆ. ಮರುತ್‌ಗಳ ಒಡಗೂಡಿದವನು.

❖ ಯಾಜ್ಞಿಕರು, ಯಜಮಾನರು ಯಾರೂ ಅಗ್ನಿಯ ನಿಜರೂಪ ಮಹಿಮಾಧಿಗಳನ್ನು ತಿಳಿಯಲು ಅಸಮರ್ಥರಾಗಿದ್ದಾರೆ. ಯಜ್ಞಕರ್ತರಿಗೆ ಸಮಸ್ತ ಪದಾರ್ಥಗಳನ್ನು ಒದಗಿಸುತ್ತಾನೆ.

❖ ಯಜಮಾನರ ಪರವಾಗಿ ಅಗ್ನಿಯು ದೇವತೆಗಳನ್ನು ಹೇಗೆ ಹೇಗೆ ಹಾಗೆ ಹಾಗೆಯೇ ಸ್ತುತಿಸಿ ತೃಪ್ತಿಗೊಳಿಸುತ್ತಾನೆ. ಯಾಗಗಳಲ್ಲಿ ಅಗ್ನಿ ಸೋಮರಿಬ್ಬರಿಗೂ ಒಂದೇ ವಿಧವಾದ ಪೂಜೆ, ಆಜ್ಯ ಆಹುತಿ ಅರ್ಪಿಸುತ್ತಾರೆ. ಇಬ್ಬರನ್ನೂ ಒಟ್ಟಾಗಿ ಯಜ್ಞಕ್ಕೆ ಆಹ್ವಾನಿಸುತ್ತಾರೆ.

❖ ಯಜ್ಞ ಮಾಡದವರನ್ನು ಅಗ್ನಿ ಅಪೇಕ್ಷಿಸುವುದಿಲ್ಲ. ಯಜಮಾನನನ್ನು ಮರಣ ರಾಹಿತ್ಯನನ್ನಾಗಿ ಮಾಡುತ್ತಾನೆ. ಅವರ ಮಕ್ಕಳಿಂದಲೂ ಕರ್ಮಗಳನ್ನು ಮಾಡಿಸುತ್ತಾನೆ. ಯಾಗಗಳಿಂದ ಪ್ರೀತನಾಗಿ ಯಾಜ್ಞಿಕರನ್ನು ಪಾಪಗಳಿಂದ, ಶತ್ರುಗಳಿಂದ ರಕ್ಷಿಸುತ್ತಾನೆ. ಯಜ್ಞ ನಾಶಕರನ್ನು ಧ್ವಂಸ ಮಾಡುತ್ತಾನೆ.

❖ ಯಜಮಾನನನ್ನು ಯಾರೂ ಹಿಂಸಿಸಲಾರರು. ಏಕೆಂದರೆ ಅವರುಗಳು ಶ್ರದ್ಧಾ ಭಕ್ತಿಗಳಿಂದ ಸ್ತೋತ್ರ ಕೀರ್ತನೆಗಳಿಂದ ಅಗ್ನಿಯನ್ನು ತೃಪ್ತಿಗೊಳಿಸುತ್ತಿರುತ್ತಾರೆ. ಯಾಗಾಧಿ ದಿನಗಳಲ್ಲಿ ಯಾಗಕ್ಕೋಸ್ಕರವೇ ಉತ್ಪನ್ನನಾಗುತ್ತಾನೆ. ಯಜ್ಞಾರ್ಪಿತ ಅನ್ನವು ಮೊದಲು ಅಗ್ನಿಗೆ ಅಧೀನವಾಗಿರುತ್ತದೆ.

❖ ಯಜ್ಞಗೃಹದಲ್ಲಿ ಗೃಹಪತಿಯಾಗಿರುತ್ತಾನೆ. ಯಜಮಾನನಿಗೆ ಸುಖಕರನಾಗಿರುತ್ತಾನೆ. ಯಜಮಾನನ ಶಕ್ತಿಯನ್ನು ವೃದ್ಧಿಸುತ್ತಾನೆ. ಅವರ ರಕ್ಷಕ. ಯಜ್ಞ ಮಾಡತಕ್ಕ ಮಾನವರಲ್ಲಿ ಅಗ್ನಿ ಇದ್ದಾನೆ. ಯಜ್ಞದಲ್ಲಿ ಅಗ್ನಿಯ ಜೊತೆಗೆ ದೇವತೆಗಳಿಗೂ ಪೂಜೆ ಸಲ್ಲಿಸುತ್ತಾರೆ.

❖ ಯಜಮಾನನ ಮನೋಭಿಲಾಷೆ ತಿಳಿದವನು. ಯಜಮಾನಾಭಿಮುಖ ಸಕಾಲದಲ್ಲಿ ಬಂದು ಯಜ್ಞಕ್ಕೆ ಅನುಮತಿ ನೀಡುತ್ತಾನೆ. ಯಜ್ಞವು ಮಂಗಳಾತ್ಮಕ, ಪ್ರಸಿದ್ಧ, ಇಷ್ಟಾರ್ಥಸಾಧಕ. ಯಜ್ಞವನ್ನು ಸರ್ವ ವಿಧದಿಂದಲೂ ರಕ್ಷಿಸುವವನು ಹಾಗೂ ತೃಪ್ತನಾಗುವವನು.

❖ ಯಜಮಾನನ್ನು ಶುದ್ಧಿಗೊಳಿಸಿ ಅನ್ನ ಸಂಪತ್ತನ್ನು ಅನುಗ್ರಹಿಸುತ್ತಾನೆ. ಯಜ್ಞಕರ್ತರಿಂದ ಇಚ್ಛಿತನಾದೊಡನೆಯೇ ದ್ಯಾವಾ ಪೃಥ್ವಿ ಅಂತರಿಕ್ಷವ್ಯಾಪ್ತನಾಗುತ್ತಾನೆ. ಯಜ್ಞ ಕರ್ಮಗಳನ್ನು ತಿಳಿದವನಾಗಿದ್ದಾನೆ.ಯಜಮಾನರಿಗೆ ಮಾರ್ಗದರ್ಶನ ಮಾಡುತ್ತಾನೆ.

❖ ಯಜ್ಞಾಗ್ನಿಯನ್ನು, ಯಜ್ಞವನ್ನು ಪೋಷಿಸುತ್ತಾನೆ. ಯಜ್ಞ ಗೃಹದಲ್ಲಿ ದೇವತಾ ಗುಣಗಳನ್ನು ಹೇಳುವ ಹೋತೃ ಯಜ್ಞದಲ್ಲಿ ಜನ್ಮ ರಹಿತರಾದ ದೇವತೆಗಳನ್ನು ಮಾನವರೊಂದಿಗೆ ಸೇರಿಸುವವನು ಅಗ್ನಿ. ಯಜ್ಞ ಪ್ರಜ್ಞಾಪಕ, ಯಜ್ಞ ಹೋತೃ, ಯಜ್ಞದಲ್ಲಿ ಹವಿಸ್ಸು ಬಯಸುವವನು.

❖ ಯಜಮಾನನ್ನು ಯಜ್ಞವಂತನನ್ನಾಗಿ ಮಾಡುತ್ತಾನೆ. ಯಜ್ಞಕ್ಕೆ ದೇವತೆಗಳನ್ನು ಕರೆತರುವವನು. ಯಾಗಗೃಹ ಮಧ್ಯೆ ಸ್ಥಾಪಿತನಾಗಿರುತ್ತಾನೆ. ಯುದ್ಧಕ್ಕೂ ದೇವತೆಗಳನ್ನು ಕರೆತರಬಲ್ಲವನು ಅಗ್ನಿ. **ಯಜ್ಞಾಗ್ನಿಗಳು ಲೌಕಿಕಾಗ್ನಿಗಳಿಗಿಂತ ಕಾಂತಿಯುಳ್ಳವು.**

❖ ಯಾರ ಗೃಹದಲ್ಲಿ ಅತಿಶಯ ಆಹುತಿ ಸ್ತುತಿಗಳು ಅರ್ಪಿಸಲ್ಪಡುತ್ತವೆಯೋ ಅಲ್ಲಿ ಅಗ್ನಿಯು ಮಿತ್ರನು, ವರುಣನು ಆಗಿರುತ್ತಾನೆ. ಯಜ್ಞದಲ್ಲಿ ಅತ್ಯಂತ ಪೂಜ್ಯ. ಯಜ್ಞ ಪ್ರದೇಶದಲ್ಲೇ ಇರುವವನು. ಯಜಮಾನನ ಆಹ್ವಾನದಂತೆ ಆಯಾ ದೇವತೆಗಳನ್ನು ಯಜ್ಞ ಭೂಮಿಗೆ ಕರೆತರುವವನು ಅಗ್ನಿ.

❖ ಯಜ್ಞದಲ್ಲಿ ಆ ದೇವತೆಗಳನ್ನು ಯಜಮಾನನೊಂದಿಗೆ ಸೇರಿಸುತ್ತಾನೆ. ಯಜ್ಞ ಮಾಡುವವರಿಗೆ ಸ್ವರ್ಗವನ್ನು ಅನುಗ್ರಹಿಸುತ್ತಾನೆ. ಯಾಗಾರ್ಥವಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಅಗ್ನಿಯನ್ನು ಎಲ್ಲರೂ ಸ್ತುತಿಸುತ್ತಾರೆ, ಪೂಜಿಸಿ ಪ್ರಶಂಸಿಸಿ ಪುಷ್ಟಿಗೊಳಿಸುತ್ತಾರೆ.

❖ ಹವಿರರ್ಪಿಸುವವರನ್ನು ಅಗ್ನಿಯು ಶತ್ರುಗಳಿಂದ ಪಾಪಗಳಿಂದ ರಕ್ಷಿಸಿ ಧನವಂತರನ್ನಾಗಿ ಮಾಡುತ್ತಾನೆ.ಯಾಚಕರಿಗೆ ಸಹಾಯ ಮಾಡುವ ಯಾಜಮಾನನಿಗೆ ಅನ್ನದಾತ, ಹಿತಕಾರಿ.

❖ ರುದ್ರ, ವಸುಗಳಿಂದ ಪೂಜಿತನಾಗಿದ್ದಾನೆ. ರಥ, ಅಶ್ವಗಳ ಶಬ್ದ ನಮಗೆ ಕೇಳಿಸುವುದಿಲ್ಲ. ರಾಕ್ಷಸರ ಬಾಧೆಯಾದಾಗ ಅಗ್ನಿ ಮರುತ್‌ಗಳೊಂದಿಗೆ ಸೇರಿ ರಾಕ್ಷಸರನ್ನು ನಾಶಮಾಡಿ ಯಜ್ಞ ರಕ್ಷಣೆ ಮಾಡುತ್ತಾನೆ. ರಶ್ಮಿ ಮೂಲಕವೇ ದೇವತೆಗಳಿಗೆ ಹವಿಸ್ಸು ಒಯ್ಯುತ್ತಾನೆ.

❖ ರಾಕ್ಷಸರು ಹವಿಸ್ಸು ಪಡೆಯಲು ಬಂದವರು ಅಗ್ನಿಗೆ ಹೆದರಿ ಓಡಿ ಹೋದರು. ರಾಕ್ಷಸರು ನಿಶಾಚರರು, ಹಿಂಸಕರಿಗೆ ಭೀತಿದಾಯಕನಾಗಿದ್ದಾನೆ. ರಥ ಎಂದರೆ ಅಗ್ನಿಯ ರಶ್ಮಿಗಳು. ಮನುಷ್ಯರ ನಡುವೆ ಪ್ರಕಾಶಿಸಿ ಉದಕ ತರುತ್ತವೆ. ರಾಕ್ಷಸರನ್ನು ನಾಶಮಾಡುತ್ತವೆ.

❖ ರಾತ್ರಿಯಲ್ಲಿ ಪ್ರಕಾಶಿಸಿ ಪಾಪಿಗಳನ್ನು ನಾಶ ಮಾಡುತ್ತದೆ. ರೋಹಿತ ವರ್ಣದ ಜ್ವಾಲೆಗಳನ್ನು ವಾಹನದಂತೆ ಹೊಂದಿದ್ದಾನೆ ಅಗ್ನಿ. ರುದ್ರನಂತಿರುವ ಅಗ್ನಿ ಮನೋಹರ, ಪ್ರಕಾಶಮಾನನಾಗಿದ್ದಾನೆ. ರಾತ್ರಿಯ ಕಾಲದಲ್ಲಿ ದೂರದಲ್ಲಿರುವ ಮಾನವರಿಗೆ ಚೆನ್ನಾಗಿ ತಿಳುವಳಿಕೆ ಉಂಟುಮಾಡುತ್ತಾನೆ.

❖ ರಾತ್ರಿಯ ಅಂಧಕಾರವನ್ನು ಮಾಯವಮಾಡುತ್ತಾ ಕಪ್ಪಾದ ಮಾರ್ಗದಲ್ಲಿ ಶುದ್ಧಿಕಾರಕನಾಗಿ ಪ್ರಕಾಶಿಸುತ್ತಾನೆ. ರಾತ್ರಿಯ ಕತ್ತಲನ್ನು ಹೊರನೂಕುತ್ತಾನೆ. ರಮಣೀಯ ದರ್ಶನವುಳ್ಳವನು. ರೋಗನಾಶಕನು, ಸುಖಪ್ರದನು ಆಗಿದ್ದಾನೆ.

❖ ಲೌಕಿಕಾಗ್ನಿ ಧನವನ್ನು ಪೋಷಿಸುತ್ತದೆ. ಲೋಕ ಕಲ್ಯಾಣಕ್ಕಾಗಿ ದೇವತೆಗಳನ್ನು ಕರೆತರುತ್ತಾನೆ. ಲೋಕೋಪಕಾರಿ, ಲೋಕ ನಿರ್ಮಿಸುವ ಕರ್ಮಕರ್ತರು ಇವರೇ.

❖ ವಿಶ್ವದಲ್ಲಿರುವ ಎಲ್ಲಾ ಅಗ್ನಿಗಳು "ವೈಶ್ವಾನರಾಗ್ನಿ"ಯ ಶಾಖೆಗಳೇ ಆಗಿವೆ. ವೈಶ್ವಾನರಾಗ್ನಿಯು ಮೇಲೆ ದ್ಯುಲೋಕಕ್ಕೆ ಶಿಖರಪ್ರಾಯವಾಗಿದೆ. **ವಾಯುವು ವೈಶ್ವಾನರಾಗ್ನಿಯನ್ನು ಭೃಗು ಮಹರ್ಷಿಗಳ ಸ್ನೇಹಿತರನ್ನಾಗಿ ಮಾಡಿದರು.** ವಾಯು ಮತ್ತು ಕಿರಣಗಳು ಕಪ್ಪು ಮೋಡವನ್ನು ಕರಗಿಸಿ ಗುಡುಗು ಸಹಿತ ಮಳೆ ಸುರಿಸುತ್ತವೆ. ವೇಗವಾಗಿ ಕಡೆಯುವುದರಿಂದ ಅಗ್ನಿ ಉತ್ಪನ್ನನಾಗುತ್ತಾನೆ.

❖ ವಾಯುವಿಗೆ ಅಗ್ನಿಪ್ರಧಾನ. ಅಗ್ನಿಯಿಂದ ಮರುತ್ ದೇವತೆಗಳು ಹುಟ್ಟಿದರು. ವಾಯುವಿನ ಸ್ನೇಹಿತ ಅಗ್ನಿ. ವನಸ್ಪತಿ ಓಷಧಿ ವೃಕ್ಷಗಳಿಗೆ ಅಗ್ನಿಯೇ ಕಾರಣ. ವಸಿಷ್ಠರ ಕಾಲದಿಂದಲೂ ಅಗ್ನಿ ಮತ್ತು ಯಾಜ್ಞಿಕರ ನಡುವೆ ಸ್ನೇಹವು ಏರ್ಪಟ್ಟಿದೆ. ವಾಯುವು ಅಗ್ನಿಯನ್ನು ಶುಭ್ರವರ್ಣದವನನ್ನಾಗಿಸಿದನು.

❖ ವಾಯುವಿನ ಸಹಾಯದಿಂದ ಕಾಡನ್ನು ಸುಡುತ್ತಾನೆ. ವಾಯುವಿನಂತೆಯೇ ಆಕಾಶಸ್ಥ, ಇಷ್ಟಾರ್ಥಪ್ರದ, ಧನದಾತ. ವಾಯುವು ದ್ಯುಲೋಕದಿಂದ ಅಗ್ನಿಯನ್ನು ಭೂಮಿಗೆ ತಂದನು. ವರುಣನು ಅಗ್ನಿಯ ಭ್ರಾತೃ ಸ್ವರೂಪ, ವೇದರೂಪಿ, ಫಲದಾತ, ವ್ಯಯವಾದಷ್ಟು ಧನ ವೃದ್ಧಿಯಾಗುವಂತೆ ಮಾಡುತ್ತಾನೆ. ವಿದ್ಯುತ್ ರಥದವನು.

❖ ವಿಷಯಾಸಕ್ತನಲ್ಲದವನು, ವಿಶೇಷವಾಗಿ ಭೂಮಿಯಲ್ಲಿ ವನಕಾಷ್ಠಗಳಲ್ಲಿ ಸ್ಥಾಪಿತನಾಗಿದ್ದಾನೆ. ವಿಷ್ಣುವಿನ ಮಧ್ಯಪಾದದಿಂದ ಉದಕದ ರಹಸ್ಯ ಹೆಸರುಗಳನ್ನು ಅಗ್ನಿ ಪೋಷಿಸುತ್ತಾನೆ. ವಸತಿದಾಯಕ. ವಿಶೇಷ ರೀತಿಯಿಂದ ಆದರಿಸಲ್ಪಡುತ್ತಾನೆ. ವಾಯುವಿನಂತೆ ವೇಗ ಸಂಚಾರಿ, ಸರ್ವವ್ಯಾಪಿ.

❖ ವೃಕ್ಷದಲ್ಲಿ ಅಡಗಿರುವವನು, ವೃಷ್ಟಿ ಕಾರಕ. ವೈಶ್ವಾನರಾಗ್ನಿ ರೂಪಿ, ವೀರಯೋಧರು ಇವರ ಅನುಗ್ರಹದಿಂದಲೇ ಉತ್ಪನ್ನರಾಗುತ್ತಾರೆ. ವಾಯುವಿನಂತೆ ಅಗ್ನಿಯು ಮರಣಧರ್ಮರಹಿತನಾಗಿದ್ದಾನೆ. ವೈದ್ಯುತಾಗ್ನಿಯೊಂದಿಗೆ ಕೂಡಿ ಧನಾರ್ಥ ಪ್ರೇರಿಸುತ್ತಾನೆ. ವೈಶ್ವಾನರಾಗ್ನಿಯು ಪ್ರಜೆಗಳಿಗೆ ಒಡೆಯ.

❖ ವಿಶ್ವಪಾಲಕ, ವೃಕ್ಷಪೋಷಕ, ವೃಕ್ಷಗಳಿಗೆ ಪುತ್ರರೂಪಿ, ವಿವಸ್ವಂತನ ದೂತ. ವೇಗಗಾಮಿ. ವಾಯುಪ್ರೇರಿತ. ವಿಚಿತ್ರ ಕಾಂತಿಯುತ. ವಸಂತಾದಿ ಋತುಗಳಲ್ಲಿ ಓಷಧಿಗಳಲ್ಲಿ ಅಗ್ನಿ ಗರ್ಭರೂಪದಲ್ಲಿದ್ದು ವೃಕ್ಷಗಳಲ್ಲಿ, ಉದಕಗಳಲ್ಲಿ ಉತ್ಪನ್ನನಾಗುತ್ತಾನೆ.

❖ ಶಾಸ್ತ್ರವಿಹಿತ ಸ್ಥಳಗಳಲ್ಲಿ ಪ್ರಜ್ವಲಿತ. ಶ್ವೇನಪಕ್ಷಿ ರೂಪದಿಂದ ಗಾಯತ್ರಿಯು ಸೋಮವನ್ನು ಯಜ್ಞಕರ್ತರಿಗಾಗಿ ತಂದಿತು. ಶ್ರೇಷ್ಠಫಲದಾಯಕ.

❖ ಶತ್ರುಗಳು, ಅಸುರರು ಯಾರಿಗೂ ಅಗ್ನಿಯನ್ನು ಪ್ರತಿಭಟಿಸಲು ಅಸಾಧ್ಯ.ಶುಭಾಶುಭ ಕರ್ಮಗಳನ್ನು ವೀಕ್ಷಿಸುತ್ತಾ ಎಲ್ಲರನ್ನೂ ಅದರದರ ಸ್ಥಾನದಲ್ಲಿ ಇರುವಂತೆ ಮಾಡುತ್ತಾನೆ. ಶ್ರವಣ, ಮನನ, ಅಂತಃಕರಣಗಳಿಂದ ತನ್ನ ತೇಜಸ್ಸನ್ನು ಅರ್ಥಮಾಡಿಕೊಂಡು ತನ್ನ ಆತ್ಮ ಸ್ವರೂಪವನ್ನು **(1)** ಅಗ್ನಿ **(2)** ವಾಯು **(3)** ಸೂರ್ಯ -ತತ್ವಗಳಿಂದ ಶುದ್ಧ ಮಾಡಿಕೊಂಡಿದ್ದಾನೆ.

❖ ಶ್ರೇಷ್ಟ ಧನವನ್ನು ಅನುಗ್ರಹಿಸುತ್ತಾನೆ. ಶುಭ್ರವರ್ಣ, ಶಾಖರೂಪದ ಆಹವನೀಯ ಗಾರ್ಹಪತ್ಯ ಅಗ್ನಿ ಪ್ರಜ್ವಲಿಸುತ್ತಾನೆ. ಶತ್ರುವನ್ನು ಸ್ವಬಲದಿಂದ ಕೊಲ್ಲುವಂತೆ ಶಕ್ತರನ್ನಾಗಿ ಮಾಡುತ್ತಾನೆ. ಶತ್ರುಗಳು ಪುತ್ರರನ್ನು ನೋಡಿದೊಡನೆ ಓಡಿ ಹೋಗುವಂತಹ ಪರಾಕ್ರಮಿ ಪುತ್ರರನ್ನು ಅನುಗ್ರಹಿಸುತ್ತಾನೆ.

❖ ಶುಭ್ರವರ್ಣದ ಧೂಮವನ್ನು ಮೇಘರೂಪದಲ್ಲಿ ಅಂತರಿಕ್ಷದಲ್ಲಿ ಹರಡುತ್ತಾನೆ. ಶತ್ರುಗಳ ಯಜ್ಞದಲ್ಲಿ ಭಾಗವಹಿಸುವುದಿಲ್ಲ. ಶಬ್ದದೊಂದಿಗೆ ಎಲ್ಲೆಡೆ ಪ್ರಸರಿಸುತ್ತಾನೆ.

❖ ಸ್ಥಾವರ ಜಂಗಮಗಳು ಅಗ್ನಿಗೆ ಭಯಬೀಳುತ್ತವೆ. ಸಕಲರಿಗೂ ಅಧಿಪತಿಯಾಗಿದ್ದಾನೆ. ಸೂರ್ಯನನ್ನು ಮಾನವ ಕುಲ ಉದ್ಧಾರಕ್ಕಾಗಿ ಅಂತರಿಕ್ಷದಲ್ಲಿ ಸಂಚರಿಸುವಂತೆ ಮಾಡಿದರು. **ಸಕಲ ವಸ್ತುಗಳಲ್ಲೂ ಅಗ್ನಿಯು ಯಾವುದಾದರೊಂದು ರೀತಿಯಲ್ಲಿ ಅಂತರ್ಗತನಾಗಿ ಇರುತ್ತಾನೆ.**

❖ **ಮೇಘದ ನೀರಿನಲ್ಲಿ ಮಿಂಚಿನಂತೆ ಹವಿಸ್ಸಿನ ರೂಪದಲ್ಲಿ ಅನ್ನದಂತೆ ಸಮುದ್ರ ಮಧ್ಯದಲ್ಲಿ ಆದಿತ್ಯ, ಸಕಲ ಭೂತ ಜಾತಗಳಿಂದ ಸಾರಭೂತ ರಸ ಹೀರಿ ಅಂತರಿಕ್ಷದಲ್ಲಿ ಜಗತ್ತಿಗೆ ಹೊದಿಕೆಯಾಗುವಂತೆ ಮಾಡಿದ್ದಾನೆ.**

❖ ಸ್ತ್ರೀಯರಿಗೆ ಪತಿದಾತ. ಸಪತ್ನಿಕರಾಗಿ ಎಲ್ಲ ದೇವತೆಗಳು ಅಗ್ನಿಯಿಂದ ಸ್ವೀಕರಿಸಲ್ಪಟ್ಟ ಆಹುತಿಗಾಗಿ ಅಗ್ನಿಯನ್ನು ಹುಡುಕುತ್ತಾರೆ. ಸಕಲ ದೇವತೆಗಳಿಗೂ ಏಕ ಮಾತ್ರ ಪ್ರತಿನಿಧಿ. ಸೂರ್ಯರೂಪಿ, ಆಶಾರಹಿತ, ದಶ ದಿಕ್ಕುಗಳಲ್ಲೂ ಕಾಣಿಸಿಕೊಳ್ಳುತ್ತಾನೆ. ಸೋಮರಸ ತಯಾರಿಸುವಲ್ಲಿ ಶಬ್ದರೂಪದಿಂದಲೇ ಸಂತೋಷ ಪಡುತ್ತಾನೆ. ಸಜ್ಜನರ ಪಾಲಕ.

❖ ಸಕಲ ಭೂತ ಜಾತಗಳು ಅಗ್ನಿಯನ್ನು ಸಮೀಪಿಸುತ್ತವೆ. ಸಕಲರಿಗೂ ಆಶ್ರಯದಾತ. ಸಮಿತ್ತುಗಳಿಂದ ಪ್ರಜ್ವಲಿಸುವವನು. ಸ್ತುತಿಸುವ ಸಜ್ಜನರಿಗೆ ಯಾಗಾದಿ ಕರ್ಮಗಳ ಮೂಲಕ ಸ್ವರ್ಗಮಾರ್ಗ ತೆಗೆಸುತ್ತಾನೆ. ಸೋಮವು ಹಿಂಡಲ್ಪಟ್ಟಲ್ಲೆಲ್ಲ ಘೃತಧಾರೆಗಳು ಅಗ್ನಿಯನ್ನು ಸೇರುತ್ತವೆ.

❖ ಸವನತ್ರಯರೂಪಿ, ಸ್ತುತಿಸಿದಾಗ ಸಂತೋಷಪಡುತ್ತಾನೆ. ಸಕಲ ಪ್ರಜೆಗಳ ಅಧಿಪತಿ, ಸಕಲವನ್ನು ಜೀರ್ಣಿಸಿಕೊಳ್ಳುತ್ತಾನೆ. ಸಮಸ್ತ ಸೇನೆಯನ್ನು ಯುದ್ಧಗಳಲ್ಲಿ ತನ್ನ ಸಾಮರ್ಥ್ಯದಿಂದ ತಿರಸ್ಕರಿಸಿ ಹಿಮ್ಮೆಟ್ಟಿಸುತ್ತಾನೆ. ಸ್ವ-ತೇಜಸ್ಸಿನಿಂದ ಲೋಕ ರಕ್ಷಣಾರ್ಥವಾಗಿ ಎಚ್ಚರನಾಗಿರುತ್ತಾನೆ.

❖ ಸಕಲರ ಮನಸ್ಸನ್ನು ಸೆಳೆಯುವನಾಗಿರುತ್ತಾನೆ. ಸ್ತೋತ್ರಗಳಿಂದ ಆನಂದದಾಯಕ. ಸಕಲ ಪಾಪಗಳನ್ನು ನಾಶಮಾಡುತ್ತಾನೆ. ತನ್ನ ಮೇಲೆ ಅರ್ಪಿತವಾಗುವ ಆಜ್ಯಧಾರೆಯನ್ನು ''ಜುಹು'' ಪಾತ್ರೆಯಲ್ಲಿ ಪಾನಮಾಡುತ್ತಾ ಕಾಂತಿಯಿಂದ, ರಶ್ಮಿಗಳಿಂದ ವಿಶ್ವವನ್ನೇ ಪ್ರಕಾಶ ಮಾಡುತ್ತಾನೆ. ಸಮಸ್ತವನ್ನು ತನ್ನ ಶಕ್ತಿಯಿಂದ ಮೀರಿಸುತ್ತಾನೆ. ಸಕಲ ಯಜ್ಞಗಳು ಅಗ್ನಿಯನ್ನೇ ಸೇವಿಸುತ್ತವೆ.

❖ ಸ್ತುತಿಯು ಜಗತ್‌ರಕ್ಷಣಾ ಸಾಮರ್ಥ್ಯವುಳ್ಳದ್ದು. ಸಮಸ್ತ ಸಂಪತ್ತನ್ನು ಸೃಷ್ಟಿಸುವವನು. ಸಮಸ್ತ ತೇಜಸ್ಸುಗಳು ಅಗ್ನಿಯಲ್ಲೇ ಸ್ಥಿರವಾಗಿವೆ. ಸುಸಂಸ್ಕೃತ ಹವಿಸ್ಸಿನಿಂದ ಪ್ರಭುವಾಗಿದ್ದಾನೆ. ಅಗ್ನಿ ಸ್ತುತಿಯನ್ನು ಅರಿತವನು ಅರ್ಘ್ಯಧಾರೆಯನ್ನು ಅರ್ಪಿಸುತ್ತಾನೆ.

❖ ಸೂರ್ಯರೂಪಿನಲ್ಲಿ ಉತ್ಪನ್ನನಾಗಿ ಸಕಲವನ್ನೂ ಪ್ರೇರಿಸುತ್ತಾ ವಿಶ್ವವನ್ನು ಬೆಳಗಿಸುವ ವಿಶ್ವ ಕರ್ಮಧಾರಕ ಅಗ್ನಿ. ಸ್ತುತಿಸಲ್ಪಟ್ಟಾಗ ಧನದ್ವಾರ ತೆಗೆದುಕೊಡುತ್ತಾನೆ. ಸಕಲ ಭೂತಜಾತಗಳನ್ನು ತೃಪ್ತಿಪಡಿಸುವವನು. ಸ್ತುತಿಕರ್ತರು ಸಪ್ತಹೋತೃಗಳು ಅಗ್ನಿಯನ್ನು ಉಪಚರಿಸಿ ಸತ್ಕರಿಸಿ ಸ್ತುತಿಸಿ ಪ್ರಜ್ವಲಿಸುತ್ತಾರೆ. ಸ್ತುತಿಕರ್ತರನ್ನು ಧನಲಾಭಕ್ಕೆ ಕರೆದೊಯ್ಯುವವನು, ಸಕಲ ಸಂಪತ್ತನ್ನು ಒದಗಿಸುತ್ತಾನೆ

❖ ಸ್ನೇಹಿತನಂತೆ ಶತ್ರುಗಳಿಂದ ರಕ್ಷಿಸುತ್ತಾನೆ. ಸೂರ್ಯ, ಚಂದ್ರ,ಜ್ವಾಲಾ ರೂಪಿನಲ್ಲಿ ಉದಕದಲ್ಲಿ ಇರುತ್ತಾನೆ. ಸಕಲ ಗೃಹಗಳಲ್ಲಿ ಮಾನವರಲ್ಲಿ, ವನಗಳಲ್ಲಿ, ಬಲಶಾಲಿಗಳಲ್ಲಿ ಕರ್ಮವಂತರಲ್ಲಿ ಆಶ್ರಯ ಹೊಂದಿದ್ದಾನೆ. ಸೂರ್ಯ ಚಂದ್ರರು ಕಾಂತಿ ಹರಡುತ್ತಾರೆ. ಸಕಲ ಭೂತಜಾತಗಳು ಸೂರ್ಯೋದಯದ ನಂತರ ಚಲಿಸಿ ವ್ಯವಹರಿಸಿ ರಾತ್ರಿ ನಿದ್ದೆ ಮಾಡುತ್ತವೆ.

❖ ಸತ್ಯಾತ್ಮಕ ದಿಕ್ಕುಗಳು ದ್ಯಾವಾ ಪೃಥ್ವಿಗಳು ಹೊಂದುವಂತೆ ಮಾಡುತ್ತಾನೆ. ಸಕಲ ಭೂತ ಜಾತಗಳು ವಿಶ್ರಾಂತಿ ಹೊಂದುವಂತೆಯೂ ಸೂರ್ಯನು ಉದಯಿಸುವಂತೆಯೂ ಮಾಡುತ್ತಾನೆ ಅಗ್ನಿ. ಸ್ವಲ್ಪ ಹವಿಸ್ಸನ್ನು **ಅಧಿಕವೆಂದು ಅರಿಯುತ್ತಾ ಕೃಷ್ಣ ವರ್ಣದ ಮಾರ್ಗದಲ್ಲಿ ದೇವಲೋಕ ಹತ್ತುತ್ತಾನೆ.**

❖ ಹೃದಯದ ಪ್ರಾಣದಿಂದ ಉತ್ಪನ್ನನಾಗುವನು ಅಗ್ನಿ. ಹಗಲಾಗಲೀ ರಾತ್ರಿಯಾಗಲಿ ಯಜಮಾನರ ಮತ್ತು ಭಕ್ತರ ಶತ್ರುಗಳನ್ನು ನಾಶಮಾಡುತ್ತಾನೆ. ಹೋಮಸಂಪಾದಕ, ಹರ್ಷದಾಯಕ ಜ್ವಾಲೆಯವನು. ಹವಿರ್ದಾನದಿಂದ ತೃಪ್ತನಾಗಿ ಯಜ್ಞ ಕಾರ್ಯನಿರತನಾಗಿರುತ್ತಾನೆ. ಹವಿಸ್ಸಿನಿಂದ ದೇವತೆಗಳನ್ನು ರಕ್ಷಿಸುತ್ತಾನೆ. ಹೋಮಸಂಪಾದಕ ಹವಿರಪೇಕ್ಷಿ, ಹೋತೃರೂಪಿ.

❖ ಹವಿರೂಪಿ ಧನವಂತ. ಹವಿರ್ವಾಹಕ, ಹವಿಸ್ಸು ಅರ್ಪಿಸಿದೊಡನೆಯೇ ಅದನ್ನು ದಹಿಸುತ್ತಾನೆ. ಹವಿಸ್ಸಿನಿಂದ ವೃದ್ಧಿಸಿ ಜ್ಯೋತಿ ಉತ್ಪಾದಿಸಿ ಮಾನವರ ಅಭಿಮುಖ ಪ್ರಕಾಶಿಸುತ್ತಾನೆ. ಹವಿಸ್ಸು ಒಯ್ಯುವವನು. ಹೋತೃ ಸ್ಥಾನದಲ್ಲಿ ಕುಳಿತಿರುತ್ತಾನೆ. ಪಿತೃಗಳಿಂದ ಪೂಜಿತ, ಹವಿರೂಪಿ ಅನ್ನ ಅಪೇಕ್ಷಿ, ಹವಿಸ್ಸು ಅನ್ನ ಹೊಂದಿರುವ ಯಜಮಾನರ ಅಭೀಷ್ಟಗಳನ್ನು ಈಡೇರಿಸುತ್ತಾನೆ.

❖ ಹವಿಸ್ಸು ಅರ್ಪಿಸಿದವರು ವಂಚಿತರಾಗುವುದಿಲ್ಲ, ಅವರು ಧನವಂತರು ವೀರ ಪುತ್ರವಂತರು ಆಗಿರುತ್ತಾರೆ. ಅವರ ದುಃಖಗಳನ್ನು ನಿವಾರಿಸುತ್ತಾನೆ. ಹವಿಸ್ಸು ಅರ್ಪಿಸಿದಾಗ ಜ್ವಾಲಾರೂಪಿನಿಂದ ಅಂತರಿಕ್ಷ ವ್ಯಾಪಿಸುತ್ತಾನೆ. ಧನ ಅನುಗ್ರಹಿಸುತ್ತಾನೆ. ಹಗಲೂ ರಾತ್ರಿ ಇರುವವರೆಗೂ ಅಗ್ನಿಯು ತನ್ನ ಕರ್ಮಗಳನ್ನು ಮಾಡುತ್ತಿರುತ್ತಾನೆ.

❖ ಅಗ್ನಿ ಸೋಮರಿಬ್ಬರೂ ದೇವತೆಗಳಲ್ಲೆಲ್ಲಾ ಪ್ರಸಿದ್ಧರು. ಕರ್ಮಗಳನ್ನು ಮಾಡಿಯೇ ಇಷ್ಟಾರ್ಥಗಳನ್ನು ಕೇಳಿಕೊಳ್ಳಬೇಕು. ಸೋಮದಿಂದ ತೃಪ್ತಿಪಡಿಸಿದವರಿಗೆ ವಿಶೇಷ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ. **ಕರ್ಮಗಳನ್ನು ಆಚರಿಸುವವರು (1) ಪಾಪಿಷ್ಟ ಆಚರಣೆ (2) ಸುರಾಪಾನ (3) ದ್ಯೂತಾದಿಗಳನ್ನು** ತ್ಯಜಿಸಲು ಹೇಳಿದ್ದಾರೆ. ಅಗ್ನಿಯಲ್ಲಿ ಸಕಲವು ಇದೆ.

**ವಿಶೇಷ**

❖ ಕರ್ಮಗಳನ್ನು ಮಾಡಿರಿ, ಅರ್ಥ ಕಾಮಗಳನ್ನು ಪಡೆಯಿರಿ ಎಂದಿದ್ದಾರೆ ಋಷಿಗಳು. **ಅರ್ಥ ತಿಳಿಯದೆ ಪಠಿಸಿದರೂ ಅವರು ತಮ್ಮವರೆಂದು ತಿಳಿದು ದೇವತೆಗಳು ಅವರುಗಳನ್ನು ರಕ್ಷಿಸುತ್ತಾರೆ.** ಬಡಗಿಯು ಮರವನ್ನು ಸಂಸ್ಕರಿಸಿ ಸುಂದರ ರೂಪ ಕೊಡುವಂತೆ (ಅಂದವಾಗಿ ನಿರ್ಮಿಸುವಂತೆ) ಅಗ್ನಿಯು ಯಜಮಾನನನ್ನು ಪರಿಶುದ್ಧಗೊಳಿಸುತ್ತಾನೆ.

❖ ಅಂತರಿಕ್ಷ ಮಧ್ಯಭಾಗದಲ್ಲಿ ಆದಿತ್ಯ ರಶ್ಮಿಗಳು ಅಗ್ನಿಯ ಉತ್ಪತ್ತಿ ಸ್ಥಾನಗಳು. ಅಗ್ನಿ ಶುಭ್ರ ವರ್ಣದ ಪ್ರಭೆಯೊಂದಿಗೆ ದೇವತೆಗಳ ಬಳಿಗೆ ಹವಿಸ್ಸಿನೊಂದಿಗೆ ಹೋಗುತ್ತಾನೆ. ಸೂರ್ಯನು ಸಾಗರದ ಮೇಲ್ಭಾಗದಲ್ಲಿ ಇರುವವನು. ಸೂರ್ಯನಿಗೆ ವಂದನೆ ಸಲ್ಲಿಸಿ ನಂತರ ಯಜ್ಞ ಕರ್ಮಗಳಲ್ಲಿ ತೊಡಗುತ್ತಾರೆ. ಋಷಿಗಳು, ಯಾಜ್ಞಿಕರು ಯಾರೂ ಅಗ್ನಿಯ ನಿಜ ರೂಪ ತಿಳಿಯಲು ಅಸಮರ್ಥರು.

|| ಓಂ ಶ್ರೀ ಮಹಾಗಣಾಧಿಪತಯೇ ನಮಃ ||

## ಅಗ್ನಿ ದೇವರು -ಆಶ್ರಮ ವಿಭಾಗ (ಕನ್ನಡ ಅಕ್ಷರ ಮಾಲಿಕೆ ಅಡಿಯಲ್ಲಿ)

**ಆಶ್ವಲಾಯನ ಸೂತ್ರ, ಋಗ್ವೇದದ ಪ್ರಕಾರ ಅಗ್ನಿಯ ವಿಭಾಗದಲ್ಲಿ ಮಂಡಲ ಮಂಡಲ ಪ್ರಕಾರವಾಗಿ ಕಾರ್ಯಕ್ರಮಗಳು (1) ಸ್ತೋತ್ರಗಳು (2) ಆಶ್ರಮದಲ್ಲಿ ಕಾರ್ಯಕ್ರಮಗಳು (3) ನಾನಾ ಪ್ರಾರ್ಥನೆಗಳು - ಈ ಕ್ರಮದಲ್ಲಿ ತಿಳಿದ ನಂತರ ಎಲ್ಲಾ ಋಷಿಗಳ ಒಟ್ಟಾರೆ ಅಭಿಪ್ರಾಯ ತಿಳಿಯಬಯಸಿ ಕನ್ನಡ ಅಕ್ಷರ ಮಾಲಿಕೆಯಡಿಯಲ್ಲಿ ಈ ಕೆಳಗಿನಂತೆ ಹೊರತೆಗೆಯಲಾಗಿದೆ.**

❖ ಅಗ್ನಿಯು ಎಲ್ಲಾ ದೇವತೆಗಳೊಂದಿಗೆ ಯಜ್ಞಕ್ಕೆ ಬರಲಿ, ದರ್ಭಾಸೀನನಾಗಲಿ. ಅಗ್ನಿಯನ್ನು ಪ್ರಶಂಸಿಸಿ ವೃದ್ಧಿಪಡಿಸುತ್ತಾರೆ. ಅಗ್ನಿಯನ್ನು ಸ್ತುತಿಸಿ ದೇವತೆಗಳನ್ನು ಆಹ್ವಾನಿಸಿ ಕರೆಯಲು ಯಜಮಾನರು ಹೇಳುತ್ತಾರೆ. ಅಗ್ನಿ ಪ್ರಜ್ವಲಿತನಾದಾಗ ದ್ಯಾವಾ ಪೃಥ್ವಿಗಳನ್ನು ಕರೆಯುತ್ತಾರೆ. ಅಗ್ನಿಯನ್ನು ತೃಪ್ತಿಪಡಿಸಿದಂತೆಯೇ ಇತರೆ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಅವರನ್ನು ಆಹ್ವಾನಿಸಿ ಸ್ತೋತ್ರಗಳಿಂದಲೂ ಪ್ರಶಂಸಿಸುತ್ತಾರೆ.

❖ ಅಗ್ನಿಯನ್ನು ತಾವು ಅರ್ಪಿಸಿದ ಕರ್ಮಗಳು ಮತ್ತು ಹವಿಸ್ಸನ್ನು ಆಯಾಯ ದೇವತೆಗಳಿಗೆ ತಲುಪಿಸಲು ಹಾಗೂ ಆ ದೇವತೆಗಳು ಅದನ್ನು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಅಗ್ನಿಯು ಜನನಿ ಪೃಥ್ವಿಯ ಉತ್ತುಂಗದಲ್ಲಿ ಕುಳಿತು ಹವಿಸ್ಸನ್ನು ಸ್ವೀಕರಿಸುತ್ತಾನೆ. ಅಗ್ನಿಯನ್ನು ಉತ್ತರ ವೇದಿಕೆಯಲ್ಲಿ ಸ್ತುತಿಪೂರ್ವಕವಾಗಿ ಸ್ಥಾಪಿಸಿ ಪ್ರಾರ್ಥಿಸಿ ಕರೆಯುತ್ತಾರೆ. ಅಗ್ನಿಯನ್ನು ಯಜ್ಞ ಕರ್ಮಗಳಿಂದ ತೃಪ್ತಿಪಡಿಸುತ್ತಾರೆ.

❖ ಅಗ್ನಿಗೆ ಸಮಿತ್ತು, ಹವಿಸ್ಸು, ಶಸ್ತ್ರ ಮಂತ್ರ, ಪುರೋಡಾಶ ಮತ್ತು ಅಧೋಮುಖ ಆಜ್ಯ ಧಾರೆ ಅರ್ಪಿಸಿ ತೃಪ್ತಿಪಡಿಸುತ್ತಾರೆ. ಅಗ್ನಿಯು (1) ಉತ್ಪತ್ತಿಯಾದಾಗ ವರುಣನಾಗಿರುತ್ತಾನೆ. (2) ಪ್ರಜ್ವಲಿಸಿದಾಗ ಮಿತ್ರನಾಗಿರುತ್ತಾನೆ. (3) ಯಜಮಾನನಿಗೆ ಇಂದ್ರನೇ ಆಗಿರುತ್ತಾನೆ.

❖ ಅಹಸ್ಸಿನಲ್ಲಿ ಸೋಮಾಭಿಶವಣ ಮಾಡುತ್ತಾರೆ. ಗಾನ ಮಾಡುತ್ತಾರೆ. ಅಗ್ನಿ ಮತ್ತು ಆಹ್ವಾನಿತ ದೇವತೆಗಳು ಸೋಮಪಾನ ಮಾಡಲಿ ಎಂದು ಪ್ರಾರ್ಥಿಸುತ್ತಾರೆ. ಅಗ್ನಿ ಜ್ವಾಲೆಗಳು ಘೃತ ರೂಪ ಹವಿರರ್ಪಿಸುವ 'ಜುಹೂ' ಪಾತ್ರೆಯ ಅಗ್ರ ಭಾಗದಲ್ಲಿ ಕಂಗೊಳಿಸುತ್ತವೆ. ಅಗ್ನಿಯನ್ನು ಅನಿಷ್ಟ ನಿವಾರಣೆಗಾಗಿ ಇಷ್ಟಾರ್ಥಸಿದ್ಧಿಗಾಗಿ ಆಹ್ವಾನಿಸಿ, ಪೂಜಿಸಿ ಹವಿಸ್ಸು ಅರ್ಪಿಸುತ್ತಾರೆ.

❖ ಆಶ್ರಮದಲ್ಲಿಯ ಯಜಮಾನರು, ಯಾಜ್ಞಿಕರು ಯಜ್ಞಕರ್ತರು ಎಲ್ಲರೂ ದಕ್ಷರಾಗಿಯೇ ಇರುತ್ತಾರೆ. ಅಗ್ನಿಗೆ ಅರ್ಪಿಸಲು ಯೋಗ್ಯವಾದುದೆಲ್ಲವೂ ಇರುತ್ತದೆ. ಅಗ್ನಿಯನ್ನು ಯಜ್ಞ ವೇದಿಕೆಯಲ್ಲಿ ಸ್ಥಾಪಿಸುತ್ತಾರೆ ಮತ್ತು ಪ್ರಜ್ವಲಿಸುತ್ತಾರೆ. **ಅಜ ಮತ್ತು ಗೋವುಗಳ ಕ್ಷೀರವನ್ನು ಮಿಶ್ರ ಮಾಡಿ ಅಧ್ವರ್ಯುಗಳು ಅಗ್ನಿಯನ್ನು ಸ್ಥಾಪಿಸುತ್ತಾರೆ.** ಅಗ್ನಿಯ ಸ್ನೇಹಕ್ಕಾಗಿ ಶ್ಲಾಘಿಸಿ ಸ್ತುತಿಸಿ ಪೂಜಿಸಿ ಪ್ರಶಂಸಿಸಿ ಉಪಚರಿಸುತ್ತಾರೆ.

❖ ಅಗ್ನಿಯನ್ನು ಸಮಸ್ತ ದೇವತೆಗಳು ಒಂದೇ ಮನಸ್ಸಿನಿಂದ ತಮ್ಮ ಹವಿರ್ವಾಹಕನನ್ನಾಗಿ ಮಾಡಿಕೊಂಡಿದ್ದಾರೆ. ಅಗ್ನಿಯ ಮಹತ್ವ ತಿಳಿದವರು ಮಾತ್ರ ಸ್ತುತಿಸಿ ಪೂಜಿಸಿ, ಆರಾಧಿಸಿ ತೃಪ್ತಿಪಡಿಸಿ ಆನಂದ ಪಡೆಯುತ್ತಾರೆ. ಅಗ್ನಿಯನ್ನು ಮೇಲೆ ದ್ಯುಲೋಕದಲ್ಲಿ ಆದಿತ್ಯರೂಪಿನಲ್ಲಿ ಕೆಳಗೆ ಪೃಥ್ವಿಯಲ್ಲಿ ಜಾತೋವೇದೋ ರೂಪಿನಲ್ಲಿ ಮಧ್ಯದಲ್ಲಿ, ಅಂತರಿಕ್ಷದಲ್ಲಿ, ವಿದ್ಯುತ್ ರೂಪದಲ್ಲಿ, ಆಹವನೀಯ ಸ್ಥಾನದಲ್ಲಿ ಇದ್ದಾನೆಂದು ಯಜಮಾನರು ತಿಳಿದಿದ್ದಾರೆ. ಅಗ್ನಿಯು ಮಂತ್ರರೂಪ ಬಲದ ದರ್ಭಾಸನದಲ್ಲಿ ಕುಳಿತು ದೇವತೆಗಳಿಗೆ ಹವಿಸ್ಸನ್ನು ವಹಿಸಲಿ ಎಂದು ಪ್ರಾರ್ಥಿಸುತ್ತಾರೆ. ಎಲ್ಲ ಕರ್ಮಗಳನ್ನು ಮಾಡಿ ನಮಸ್ಕರಿಸಿ ಪ್ರಾರ್ಥಿಸುತ್ತಾರೆ.

❖ ಅಗ್ನಿಯು ವಾಯುಮಾರ್ಗದಲ್ಲಿ ದೇವತೆಗಳನ್ನು ಯಾಗಕ್ಕೆ ಕರೆತರಲು ಪ್ರಾರ್ಥಿಸುತ್ತಾರೆ. ಎಲ್ಲರೂ ಅವರವರ ಕರ್ಮಗಳನ್ನು ಮುಗಿಸಿ ಶುಚಿರ್ಭೂತರಾಗಿ ಯಾಗ ಶಾಲೆಯಲ್ಲಿ ಇರುತ್ತಾರೆ. ಯಜ್ಞಕ್ಕಾಗಿ ಯಾರಿಂದಲೂ ಅಪಹರಿಸಲಾಗದ ಅನ್ನವನ್ನು ಸಿದ್ಧ ಪಡಿಸಿರುತ್ತಾರೆ. ಹವಿಸ್ಸು, ಸಮಿತ್ತು, ಪುರೋಡಾಶ, ಶಸ್ತ್ರ ಮಂತ್ರಗಳು ಸಹಿತ ಘೃತಧಾರೆ ಅರ್ಪಿಸುತ್ತಾರೆ.

❖ ಆಹವನೀಯಾಗ್ನಿಯನ್ನು ಜ್ವಲಿಸುತ್ತಾರೆ. ಆಹ್ವಾನಿಸಿದ ದೇವತೆಗಳೆಲ್ಲರೂ ದರ್ಭಾಸೀನರಾಗಲಿ ಎಂದು ಪ್ರಾರ್ಥಿಸುತ್ತಾರೆ. ಆಹವನೀಯ ಗಾರ್ಹಪತ್ಯ, ದಕ್ಷಿಣಾಗ್ನಿ ಸ್ಥಾನಗಳಲ್ಲಿ ಅಗ್ನಿ ಪ್ರಜ್ವಲಿಸುತ್ತಾನೆ. ಆಹ್ವಾನಿಸಿದ ದೇವತೆಗಳೆಲ್ಲರ ಪರವಾಗಿ ರಮಣೀಯ ಸ್ತೋತ್ರಗಳನ್ನು ಅರ್ಪಿಸುತ್ತಾರೆ. ಆಜ್ಯದಿಂದ ಸಂಸ್ಕರಿಸಿ ಪೂಜಿಸುತ್ತಾರೆ. ಶಸ್ತ್ರ ಮಂತ್ರಗಳಿಂದ ಸ್ತುತಿಸಿ ಆರಾಧಿಸುತ್ತಾರೆ.

❖ ಆರಣಿಯಲ್ಲಿ ಉತ್ಪನ್ನನಾಗಿ ಅಗ್ನಿಯು ಆಹವನೀಯ ಗಾರ್ಹಪತ್ಯಗಳಲ್ಲಿ ಪ್ರಕಟನಾಗುತ್ತಾನೆ. ಯಜ್ಞ ಸ್ಥಾನದಲ್ಲಿ (1) ಬ್ರಹ್ಮ (2) ಹೋತೃ (3) ಅಧ್ವರ್ಯು (4) ಉದ್ಗಾತೃ ಎಂಬ ನಾಲ್ಕು ಜನ ಋತ್ವಿಜರು ಇರುತ್ತಾರೆ. ಆಹ್ವಾನಿತ ದೇವತೆಗಳೆಲ್ಲರ ಪರವಾಗಿ ಅಗ್ನಿಗೆ ಘೃತಧಾರೆಯೊಂದಿಗೆ ಪೂರ್ಣಾಹುತಿ ಅರ್ಪಿಸಿ ನಮಸ್ಕರಿಸುತ್ತಾರೆ.

❖ **ಇಂದ್ರನ ಸಂತೋಷಕ್ಕಾಗಿ ಅಗ್ನಿಯನ್ನು ಯಜ್ಞದಲ್ಲಿ ಹೋತೃವನ್ನಾಗಿ ಮಾಡಿದ್ದಾರೆ.**

❖ ಉಷಃಕಾಲದಿಂದಲೇ ಕರ್ಮಗಳನ್ನು ಪ್ರಾರಂಭಿಸುತ್ತಾರೆ. ಉಷಃಕಾಲದಲ್ಲೇ 33 ದೇವತೆಗಳು ಅವರವರ ಪತ್ನಿಯರ ಸಹಿತ ಬರಲು ಪ್ರಾರ್ಥಿಸುತ್ತಾರೆ. ಉತ್ತಮ ಕರ್ಮಕರ್ತರು ಇರುತ್ತಾರೆ. ಉತ್ತರ ವೇದಿಕೆಯಲ್ಲಿ ಉದ್ದೇಶಿತ ದೇವತೆಗಳನ್ನು ಸ್ಥಾಪಿಸಿ ಪೂಜಿಸಿ, ಆರಾಧಿಸುತ್ತಾರೆ. ಅಲ್ಲಿ ಸ್ತೋತ್ರಗಳು, ಭಜನೆಗಳು, ಪೂಜೆಗಳು, ಅವ್ಯಾಹತವಾಗಿ ನಡೆಯುತ್ತಾ ಇರುತ್ತದೆ.

❖ ಉತ್ತಮ ಕೆಲಸ ಮಾಡಲು ಶ್ರೇಷ್ಟ ಜ್ಞಾನಿಗಳು, ಪುರುಷರನ್ನೇ ನೇಮಿಸಿರುತ್ತಾರೆ. ಉತ್ತಮ ಕರ್ಮಗಳನ್ನು ಮಾಡಿ ಹವಿಸ್ಸನ್ನು ಅರ್ಪಿಸಿ ಪ್ರಶಂಸಿಸುತ್ತಾರೆ.

❖ ಋತ್ವಿಜರು ಏಳು ಜನರಿರುತ್ತಾರೆ ಎಂದು ಹೇಳಿದ್ದಾರೆ (1) ಬ್ರಹ್ಮ (2) ಹೋತೃ ಉಳಿದ ಐದೂ ಜನರು ಬ್ರಹ್ಮ ಮತ್ತು ಹೋತೃಗಳ ನಿರ್ದೇಶನದಂತೆ ಕೆಲಸಗಳನ್ನು ಮಾಡುತ್ತಿರುತ್ತಾರೆ. ಋಷಿಗಳು, ಯಾಜ್ಞಿಕರು, ಋತ್ವಿಜರು ಈ ಎಲ್ಲಾ ಯಜ್ಞ ಕರ್ಮಗಳನ್ನು ಶ್ರದ್ಧಾ ಭಕ್ತಿಯಿಂದ ಮಾಡುತ್ತಾರೆ. ಋತ್ವಿಜರು ತಮ್ಮ ಹತ್ತೂ ಬೆರಳುಗಳಿಂದ ಮಥನ ಮಾಡಿ ಅಗ್ನಿಯನ್ನು ಉತ್ಪಾದಿಸುತ್ತಾರೆ. ಶಸ್ತ್ರ ಮಂತ್ರಗಳನ್ನು ಪಠಿಸುತ್ತಾರೆ.

❖ ಜನನಿ ಆರಣಿಯಿಂದ ಅಬಾದಿತ ಮಥನದಿಂದ ಅಗ್ನಿಯು ಉತ್ಪನ್ನನಾಗುತ್ತಾನೆ.

❖ ಜ್ವಾಲಾರೂಪಿ, ನಾಲಿಗೆಯಿಂದ ಹವಿಸ್ಸು ಪಡೆದು ದೇವತೆಗಳಿಗೆ ತಲುಪಿಸುತ್ತಾನೆ. ದೇವತೆಗಳಿಗೆ ಅರ್ಪಿಸಿದ ಹವಿಸ್ಸನ್ನು ಅವರವರುಗಳಿಗೆ ತಲುಪಿಸಲು ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ದೇವತೆಗಳ ಅಭಿಮುಖ ಸ್ತುತಿಸಿ ಸ್ತೋತ್ರಮಾಡುತ್ತಾರೆ. ದೋಷರಹಿತ ಘೃತ, ಹವಿಸ್ಸಿನ ಪಾತ್ರೆಯನ್ನು ದರ್ಭೆಯ ಮೇಲಿಟ್ಟಾಗ ಯಜ್ಞ ವೇದಿಕೆಯಲ್ಲಿ ಯಜ್ಞ ಕಾರ್ಯಗಳು ಪ್ರಾರಂಭವಾಗುತ್ತವೆ.

❖ ದೋಷರಹಿತ ಘೃತ ಹವಿಸ್ಸು ಪಾತ್ರೆಯನ್ನು ದರ್ಭೆಯ ಮೇಲಿಟ್ಟಾಗ ಯಜ್ಞ ವೇದಿಕೆ ಸ್ಥಾಪಿತವಾದಾಗ ಯಜ್ಞ ಕಾರ್ಯಗಳು ಪ್ರಾರಂಭವಾಗುತ್ತವೆ. ದ್ವಾರ ದೇವತೆಗಳನ್ನು ಪೂಜಿಸುತ್ತಾರೆ.

❖ ದರ್ಭೆಯನ್ನು ನೀರು ತುಪ್ಪಗಳಿಂದ ಮೃದುಮಾಡಿ ರತ್ನ ಕಂಬಳಿಯಂತೆ ಹರಡಿರುತ್ತಾರೆ. ದರ್ಭಾಸೀನರಾಗಲು ದೇವತೆಗಳನ್ನು ಪ್ರಾರ್ಥಿಸುತ್ತಾರೆ. ದೇವತೆಗಳಿಗೆ ನಿಯಮಿತ ಸಂಖ್ಯೆಯಲ್ಲಿ ಹವಿಸ್ಸು, ಶಸ್ತ್ರ ಮಂತ್ರ, ಘೃತಧಾರೆ, ಸ್ವಾಹಾಕಾರದೊಂದಿಗೆ ಅರ್ಪಿತವಾಗುತ್ತದೆ.

❖ ದೇವತೆಗಳೆಲ್ಲರನ್ನೂ ಪ್ರಶಂಸಿಸಿ, ಸ್ತುತಿಸಿ ಎಲ್ಲರಿಗೂ ಒಟ್ಟಿಗೆ ನಿಯಮಿತ ಕರ್ಮಗಳನ್ನು ಮಾಡುತ್ತಾರೆ. ದೇವತೆಗಳಿಗೆ ಅರ್ಪಿಸಿದ ಹವಿಸ್ಸನ್ನು ಅವರುಗಳಿಗೆ ತಲುಪಿಸಲು ಅಗ್ನಿಯನ್ನು ಪ್ರಾರ್ಥಿಸುತ್ತಾರೆ.

❖ ನಾಲ್ಕು ದಿಕ್ಕಿನಲ್ಲಿ ನಾಲ್ಕು ಜನ ಋತ್ವಿಜರು ಇರುತ್ತಾರೆ. ದೇವತೆಗಳ ಅಭಿಮುಖ ಸ್ತುತಿಸಿ ಸ್ತೋತ್ರ ಮಾಡುತ್ತಾರೆ.

❖ ನಾನಾ ಪೂಜೆಗಳನ್ನು ಅಗ್ನಿ ಮತ್ತಿತರ ದೇವತೆಗಳಿಗೆ ನಾನಾ ಪ್ರಯೋಜನಗಳಿಗಾಗಿ ಮಾಡುತ್ತಾರೆ. ನ್ಯೂನತೆ ಇಲ್ಲದೆ ಮಂತ್ರ ತಂತ್ರಗಳಿಂದ ಕರ್ಮಗಳನ್ನು ನೆರವೇರಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

## ಅಗ್ನಿ ದೇವರು -ಆಶ್ರಮ ವಿಭಾಗ (ಕನ್ನಡ ಅಕ್ಷರ ಮಾಲಿಕೆ ಅಡಿಯಲ್ಲಿ)

❖ ಪ್ರಸಿದ್ಧ ಸ್ತೋತ್ರಗಳನ್ನು ಮಾಡುತ್ತಾರೆ. ಎಲ್ಲರೂ ಯಜ್ಞ ಕರ್ಮಗಳನ್ನು ಮುಗಿಸಿ ದೇವತೆಗಳಿಗೆ ನಮಸ್ಕರಿಸಿ ತಮಗೆ ಇರುವ ಹಿಂದಿನ ಪಾಪಗಳನ್ನು ಪರಿಹರಿಸಲು ತೊಂದರೆಗಳನ್ನು ನಿವಾರಣೆ ಮಾಡಲು ಪ್ರಾರ್ಥಿಸುತ್ತಾರೆ. ನಾನಾ ರೀತಿ ದಾನ ಮಾಡಿದವರು, ಭಕ್ತರು ಎಲ್ಲರೂ ಅವರವರ ಅಪೇಕ್ಷೆಗಳನ್ನು ಈಡೇರಿಸುವಂತೆ ಪ್ರಾರ್ಥಿಸಿಕೊಳ್ಳುತ್ತಾರೆ.

❖ ಪ್ರಜ್ವಲಿತನಾದೊಡನೆಯೇ ಹವಿಸ್ಸು ಅರ್ಪಿಸುತ್ತಾರೆ. ಪ್ರಧಾನ ಅಗ್ನಿಗೆ ಹವಿಸ್ಸಿನೊಂದಿಗೆ ಅಧೋಮುಖ ಆಜ್ಯಧಾರೆ ಅರ್ಪಿಸುತ್ತಾರೆ, ಪ್ರಜ್ವಲಿಸುತ್ತಾರೆ. ಪ್ರಯೋಗ ಸ್ವರೂಪ ಚೆನ್ನಾಗಿ ಬಲ್ಲವರು ಸುತ್ತಲೂ ಇರುತ್ತಾರೆ. ಪಿತೃ ದೇವತೆಗಳನ್ನು ಆಹ್ವಾನಿಸುತ್ತಾರೆ.

❖ ಪ್ರಶಂಸೆಗಳು, ಸ್ತೋತ್ರಗಳು, ಸೋಮರಸ ಇವು ಪ್ರವಾಹದಂತೆ ನಡೆಯುತ್ತಿರುತ್ತವೆ. ಫಲಾಶಾದಿ ಸಮಿತ್ತುಗಳಿಂದ, ಆಜ್ಯದಿಂದ, ವೇದಾಧ್ಯಯನದ ಮೂಲಕ ತೃಪ್ತಿಪಡಿಸುತ್ತಾರೆ. ಪಿತೃ, ಭ್ರಾತೃ, ಮಿತ್ರ, ಬಂಧು ಎಂದೆಲ್ಲಾ ತಿಳಿದು ಕರ್ಮಗಳನ್ನು ಮಾಡುತ್ತಾರೆ.

❖ ಪ್ರದಕ್ಷಿಣೆ, ನಮಸ್ಕಾರಗಳನ್ನು, ಪ್ರಾರ್ಥನೆಗಳನ್ನು ಮಾಡುತ್ತಾರೆ. ಪೂಜಿಸಿದ ದೇವತೆಗಳಿಂದ ಅಭೀಷ್ಟಗಳನ್ನು ಪಡೆದು ಪುನಃ ಕರ್ಮಗಳನ್ನು ಪ್ರಾರಂಭಿಸಿ ಆಹ್ವಾನಿಸಿದಾಗ ಪುನಃ ಬರಲು ಪ್ರಾರ್ಥಿಸುತ್ತಾರೆ.

❖ ಭಕ್ತಿಪೂರ್ವಕ ಅಗ್ನಿ ಮತ್ತು ಇತರ ದೇವತೆಗಳನ್ನು ಆಹುತಿಗಳಿಂದ ತೃಪ್ತಿಪಡಿಸುತ್ತಾರೆ. ಬರ್ಹಿಯನ್ನು ಪ್ರಾತಃಕಾಲದಿಂದಲೇ ಹರಡಿರುತ್ತಾರೆ. ಬಾಗಿಲು ವಿಶಾಲವಾಗಿ ತೆರೆದಿರುತ್ತದೆ. ಬಡಗಿಯು ಮರವನ್ನು ಸಂಸ್ಕರಿಸಿ ಸುಂದರ ರೂಪ ಕೊಟ್ಟು ನಿರ್ಮಿಸುವಂತೆ ಅಗ್ನಿಯು ಯಜಮಾನನನ್ನು ಶುದ್ಧಿಮಾಡುತ್ತಾನೆ.

❖ ಮನು, ಪ್ರಜಾಪತಿ ಅಗ್ನಿಯನ್ನು ಭೂಮಿಯಲ್ಲಿ ಸ್ಥಾಪಿಸಿದನು. ಮಿತ್ರಾವರುಣರು ಗೋಕ್ಷೀರವನ್ನು ಅಮೃತಮಯವನ್ನಾಗಿ ಮಾಡಿದರು.

❖ ಮಾನವರು ಮಂಗಳ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಮಂತ್ರಮಯ ವಾಕ್ಯಗಳಿಂದ ಸ್ತುತಿಸುತ್ತಿರುತ್ತಾರೆ. ಮಾಡಿದ ಸ್ತೋತ್ರಗಳು, ಪೂಜೆಗಳು, ಹೋಮಗಳು, ಸೋಮಾರ್ಪಣೆ ಎಲ್ಲವೂ (ನದಿಗಳು ಸಮುದ್ರಾಭಿಮುಖ ಹರಿಯುವಂತೆ) ಅಗ್ನಿಗೆ ಅಭಿಮುಖವಾಗಿ ಚಲಿಸುತ್ತವೆ.

❖ ಯಾಜ್ಞಿಕರು, ಯಜಮಾನರು, ಮಾನವರ, ದೇವತೆಗಳ ಹಿತ ರಕ್ಷಣೆಗಾಗಿ ಯಜ್ಞಗಳನ್ನು ಮಾಡುತ್ತಾರೆ. ಯಾಜ್ಞಿಕರು ವಿಷಯಾಸಕ್ತ ರಹಿತರು. ಅವರು ''ವಷಟ್ಕಾರ'' ಪೂರ್ವಕ ಆಹುತಿಗಳನ್ನು ಅಗ್ನಿಗೆ ಅರ್ಪಿಸುತ್ತಾರೆ. ಯಾಜ್ಞಿಕರು ತಮ್ಮ ತೋಳು ಬಲದಿಂದ ಕಡೆದು ಅಗ್ನಿಯನ್ನು ಉತ್ಪಾದಿಸುತ್ತಾರೆ.

❖ ಯಜಮಾನರಿಗೂ ಮಿತ್ರನು ಮಾರ್ಗದರ್ಶಕನು ಆಗಿದ್ದಾನೆ. ಶ್ರದ್ಧಾಭಕ್ತಿಯಿಂದಲೂ, ಶಾಂತಿಯಿಂದಲೂ ಕರ್ಮಗಳನ್ನು ನೆರವೇರಿಸುತ್ತಾರೆ. ಈ ಯಾಗಾದಿಗಳು ಮಾನವ ಜನ್ಮ ಸಂಸ್ಕಾರಕ್ಕಾಗಿಯೇ ಇವೆ. ಯಜ್ಞ ಕುಂಡದ ಸುತ್ತಲೂ ಋತ್ವಿಜರು ಇರುತ್ತಾರೆ. ಯಜ್ಞಗಳಲ್ಲಿ ಅಗ್ನಿಯು ಉತ್ತರ ವೇದಿಕೆಯಲ್ಲಿ ಇರುತ್ತಾನೆ.

❖ ಯಾಜ್ಞಿಕರಿಗೆ ಜ್ಯೋತಿರೂಪದಲ್ಲಿ ಇರುತ್ತಾನೆ. ಅಗ್ನಿ ಸೋಮರಿಬ್ಬರಿಗೂ ಒಂದೇ ತೆರನಾದ ಪೂಜಾಧಿಗಳು ಹವಿಸ್ಸು ಅರ್ಪಿತವಾಗುತ್ತವೆ. ಯಜ್ಞ ಧ್ವಾರಗಳು ಶೋಭಿತವಾಗಿರುತ್ತವೆ. ಉದಕ ಪ್ರೋಕ್ಷಿತವಾಗಿರುತ್ತದೆ. ಪ್ರಕಾಶಮಾನವಾಗಿರುತ್ತದೆ. ಯಜಮಾನನು ಅವನ ಪತ್ನಿ ಇಬ್ಬರೂ ಎಲ್ಲಾ ಕಾರ್ಯಗಳಲ್ಲೂ ಭಾಗವಹಿಸಿ ಅಗ್ನಿಯನ್ನು, ದೇವತೆಗಳನ್ನು ಸಂತೋಷಗೊಳಿಸುತ್ತಾರೆ.

❖ ಯಜ್ಞ ಭೂಮಿಯ ಪೂರ್ವದಲ್ಲಿ ಆಹವನೀಯಾಗ್ನಿ, ಪಶ್ಚಿಮದಲ್ಲಿ ಗಾರ್ಹಪಥ್ಯಾಗ್ನಿಗಳು ಇರುತ್ತವೆ. ಯಜ್ಞಕರ್ತರು ಅಗ್ನಿಗೆ ಪುರೋಹಿತ ಸ್ಥಾನ ಕೊಟ್ಟರು. ಯೂಪದಲ್ಲಿ ಅಗ್ನಿ ಇದ್ದಾನೆ. ಅಲ್ಲಿ ಮೊದಲು ಪೂಜೆ ಮಾಡಲು ಹೇಳಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಅಗ್ನಿ ದೇವರು -ಆಶ್ರಮ ವಿಭಾಗ (ಕನ್ನಡ ಅಕ್ಷರ ಮಾಲಿಕೆ ಅಡಿಯಲ್ಲಿ)

❖ ಲೋಪ ದೋಷಗಳಿಲ್ಲದೆ 3 ಸವನಗಳಲ್ಲೂ ಕರ್ಮಗಳು ನಡೆಯುತ್ತಿರುತ್ತವೆ.

❖ ವಸಿಷ್ಟರು ಜ್ಞಾನ ಕರ್ಮಗಳೆರಡಕ್ಕೂ ಆಶ್ರಯದಾತರು. ವಾಯುವು ಸಮೀಪದಲ್ಲಿದ್ದು ಅಗ್ನಿಯನ್ನು ಪ್ರಜ್ವಲಿಸುತ್ತಾನೆ. ಒಣಗಿದ ಕಟ್ಟಿಗೆಯನ್ನು ಜ್ವಲಿಸಿ ಗಂಭೀರ ಶಬ್ದ ಇರುವ ಅಗ್ನಿಯನ್ನು ಹವಿಸ್ಸಿನಿಂದ ತೃಪ್ತಿಪಡಿಸುತ್ತಾರೆ. ವಿಶೇಷ ಅನುಭವಗಳಿಂದ ಕರ್ಮಗಳನ್ನು ಆಚರಿಸುತ್ತಾರೆ.

❖ ವಾಯುವಿನ ಸಹಾಯದಿಂದ ಹವಿಸ್ಸು, ಆಜ್ಯಗಳಿಂದ ತೃಪ್ತಿಪಡಿಸುತ್ತಾರೆ. ವಾಯುವು ಅಗ್ನಿಯನ್ನು ಶುಭ್ರವರ್ಣದವನನ್ನಾಗಿ ಮಾಡಿದನು. ಶಾಂತಿಯಿಂದ ಶ್ರದ್ಧಾಭಕ್ತಿಗಳಿಂದ ಕರ್ಮ ಮಾಡುತ್ತಾರೆ. ಸೋಮದಿಂದ ಆರಾಧಿಸಿದವರಿಗೆ ವಿಶೇಷ ಇಷ್ಟಾರ್ಥಗಳನ್ನು ನೀಡುತ್ತಾನೆ.

❖ ವೇದಿಕೆಗೆ ಬರಲು ಆಹ್ವಾನಿಸುತ್ತಾರೆ. ಯಾಗಗಳಲ್ಲಿ ಮಿತ್ರರನ್ನು ಆಧರಿಸುವಂತೆ ಅಗ್ನಿಯನ್ನು ಆಧರಿಸಿ ಹೊಗಳಿ ಸ್ತುತಿಸುತ್ತಾರೆ. ಯಾಗಕ್ಕೆ ಅವಶ್ಯಕವಾದ ಸಾಮಾನುಗಳೆಲ್ಲವೂ ಸಿದ್ಧವಿರುತ್ತದೆ. ಯಜ್ಞ ಪ್ರಭಾವ ಅರಿತ ಯಾಜ್ಞಿಕರು ಯಾಗ ಮಾಡುತ್ತಾರೆ. ಅವರು ವಿವಿಧ ಯಜ್ಞ ಕರ್ಮಗಳನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ. ಯಜಮಾನರುಗಳಿಗಾಗಿ ಸ್ವರ್ಗ ಸಾಧಕ ಯಜ್ಞ ಮಾಡಬಲ್ಲರು.

❖ ಸ್ತುತಿ ವಾಕ್ಯಗಳು ಮನನಾತ್ಮಕವಾಗಿರಬೇಕೆಂದು ಹೇಳಿದ್ದಾರೆ. ಸಾಮೂಹಿಕ ಪೂಜೆ, ಪ್ರಶಂಸೆಗಳನ್ನು ಮಾಡುತ್ತಾರೆ. ಸಮಿತ್ತು, ಹವಿಸ್ಸು, ಪುರೋಡಾಶ, ಸೋಮಾರ್ಪಣೆ ಎಲ್ಲವನ್ನು ಸ್ವಾಹಾಕಾರ ಪೂರ್ವಕ ಅರ್ಪಿಸುತ್ತಾರೆ. ಸ್ವಲ್ಪ ಹವಿಸ್ಸನ್ನೆ ಅಧಿಕವೆಂದು ಅರಿಯುತ್ತಾ ಕೃಷ್ಣವರ್ಣದ ಮಾರ್ಗದಲ್ಲಿ ದೇವಲೋಕ ಸ್ಥಾನವನ್ನು ಅಗ್ನಿ ಹತ್ತುತ್ತಾನೆ. ಸುತ್ತಲೂ ಋತ್ವಿಜರು ಇರುತ್ತಾರೆ.

❖ ಸೋಮಸೇಚನ ಮಾಡಿ ಅಗ್ನಿ ಮತ್ತಿತರ ದೇವತೆಗಳನ್ನು ತೃಪ್ತಿಗೊಳಿಸುತ್ತಾರೆ. ಸಕಲ ಯಜ್ಞ ಕರ್ಮಗಳನ್ನು ಸಂತೋಷದಿಂದ ನೆರವೇರಿಸುತ್ತಾರೆ. ಸೋಮಪಾನಕ್ಕೆ ಅಗ್ನಿಯನ್ನು ಇತರ ದೇವತೆಗಳನ್ನು ಆಹ್ವಾನಿಸುತ್ತಾರೆ. ಸತ್ಕರ್ಮಗಳನ್ನು ಮಾಡಿಯೇ ರಕ್ಷಣೆ ಪಡೆಯಲು ಹೇಳಿದ್ದಾರೆ. ಸವನತ್ರಯಗಳಲ್ಲೂ 'ಸೃಕ್' ಪಾತ್ರೆ ಹಿಡಿದು ಅಗ್ನಿಯನ್ನು ಪ್ರಕಾಶಿಸುತ್ತಾರೆ. ಸಾಧಕರು ಘೃತರೂಪ ಹವಿಸ್ಸು ಅರ್ಪಿಸುತ್ತಾರೆ.

❖ ಸೋಮವು ಬ್ರಹ್ಮ ನಿರ್ಮಿತವಾದವು. ಸೋಮವು ಇಳಾ, ಭಾರತೀ, ಸರಸ್ವತಿಯರಿಂದ ಪ್ರವಹಿಸುತ್ತದೆ. ಸೋಮವು ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತದೆ. ಉದಕ ಸಾರಭೂತವಾದುದು. ದೇವತೆಗಳೆಲ್ಲರ ಪ್ರತಿನಿಧಿ ಅಗ್ನಿಯ ಮೂಲಕ ಎಲ್ಲರಿಗೂ ತಲುಪುವಂತಹದು. ಸ್ತುತಿಸಿ, ಆಹ್ವಾನಿಸಿ, ಹವಿರರ್ಪಿಸಿ ಯಜ್ಞ ಮಾಡುತ್ತಾರೆ. ಸೂರ್ಯೋದಯಕ್ಕೆ ಮೊದಲೇ ಅಗ್ನಿಯನ್ನು ಪ್ರತಿಷ್ಠಾಪನೆ ಮಾಡುತ್ತಾರೆ.

❖ ಹವಿಸ್ಸು ಹೊಂದಿರುವವರು ಅಗ್ನಿಯನ್ನು ಕರೆಯುತ್ತಾರೆ. ಹೋತೃಗಳು ಅಗ್ನಿಗೆ ಎದುರಾಗಿ ಕುಳಿತುಕೊಳ್ಳುತ್ತಾರೆ. ಹವಿಸ್ಸು ಅರ್ಪಿಸಿ ದಾನಗಳಿಂದಲೂ ಸಂತೋಷಗೊಳಿಸುತ್ತಾರೆ. ಮಧುರ ಆಜ್ಯದಿಂದ ದೇವತೆಗಳನ್ನು ತೃಪ್ತಿಗೊಳಿಸಿ ತಮ್ಮ ಪಾಪಗಳನ್ನು ನಾಶಮಾಡಿಕೊಳ್ಳುತ್ತಾರೆ.

❖ ಹಗಲು ರಾತ್ರಿ ಪೂಜೆಗಳು ನಡೆಯುತ್ತವೆ. ಹವಿರ್ವಾಹಕ ಅಗ್ನಿಯ ಮೂಲಕ ಆಹ್ವಾನಿಸಿದ ದೇವತೆಗಳಿಗೆಲ್ಲಾ ''ನಿಯಮಿತ'' ಹವಿಸ್ಸು ಅರ್ಪಿಸುತ್ತಾರೆ. ಶಸ್ತ್ರಮಂತ್ರ ಸಹಿತ ಸ್ವಾಹಾಕಾರ ಪೂರ್ವಕ ಘೃತಧಾರೆ ಅರ್ಪಿಸುತ್ತಾರೆ. ಹೋತೃಗಳು ನೂರುಜನ ಇರುತ್ತಾರೆ.

❖ ಹಿಂದಿನ ದಿನವೇ ಸಿದ್ಧಪಡಿಸಿದ ಸೋಮವನ್ನು ಅಗ್ನಿ ಮತ್ತಿತರ ದೇವತೆಗಳಿಗೆ ಅರ್ಪಿಸಿ ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಹೋಮಕುಂಡದಲ್ಲಿಯ ಅಗ್ನಿಯನ್ನು ಆಜ್ಯಧಾರೆಯಿಂದ ಪ್ರಜ್ವಲಿಸುತ್ತಾರೆ.

★★ **ಅಗ್ನಿಯು ಪೂರ್ಣ ಪ್ರಜ್ವಲಿತನಾದಾಗ ಪೂರ್ಣಾಹುತಿಯನ್ನು ಅಗ್ನಿ ಮತ್ತು ಆಹ್ವಾನಿತ ದೇವತೆಗಳಿಗೆ ಅರ್ಪಿಸಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಾರೆ. ಅಗ್ನಿಯು ಅಂದಿನ ಎಲ್ಲಾ ಕರ್ಮಗಳನ್ನು, ಹವಿಸ್ಸನ್ನು ಪುರೋಡಾಶ, ಸೋಮವನ್ನು ತಾನೂ ಸ್ವೀಕರಿಸಿ ಆಹ್ವಾನಿತ ದೇವತೆಗಳಿಗೂ ಅವರವರ ಭಾಗ ಅವರವರಿಗೆ ತಲುಪಿಸಲು ಪ್ರಾರ್ಥಿಸುತ್ತಾರೆ. ಅನ್ನ, ಧನ ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ.**

|| ಓಂ ಶ್ರೀ ಮಹಾಗಣಾಧಿಪತಯೇ ನಮಃ ||

## ಅಗ್ನಿ ದೇವರು -ಪ್ರಾರ್ಥನಾ ವಿಭಾಗ (ಕನ್ನಡ ಅಕ್ಷರ ಮಾಲಿಕೆ ಅಡಿಯಲ್ಲಿ)

❖ ಅನ್ನ ಆಹಾರಗಳಿಗಾಗಿ ಪ್ರಾರ್ಥಿಸಿದ್ದಾರೆ. ಅಸುರರಿಂದ, ಅಧಾತೃಗಳಿಂದ ರಕ್ಷಿಸಲಿ. ಅನವರತವು ಆರಾಧಿಸಿ ಯಜ್ಞ ಯಾಗಗಳನ್ನು ಮಾಡಿದವರನ್ನು ಸ್ವರ್ಗಕ್ಕೆ ಕರೆದೊಯ್ಯಲಿ. ಅಗ್ನಿಯು ತತ್ವ ವಿಷಯದಾತನಾಗಿರಲಿ. ಅರ್ಪಿಸಿದ ಆಹುತಿಗಳನ್ನು ಆಯಾ ದೇವತೆಗಳಿಗೆ ಕ್ಷಿಪ್ರವಾಗಿ ತಲುಪಿಸಲಿ.

❖ ಅಗ್ನಿಯು ನಾವು ಆಹ್ವಾನಿಸಿದ ದೇವತೆಗಳನ್ನು ಕರೆತರಲಿ. ಅಗ್ನಿದತ್ತ ಧನವನ್ನು ಒಡನೆಯೇ ಅನುಭವಿಸುವಂತಾಗಲಿ. ಅಗ್ನಿ ಮತ್ತು ಪರಿವಾರ ದೇವತೆಗಳು ಕಲ್ಯಾಣಗಳಿಂದ ರಕ್ಷಿಸಲಿ. ಅಸುರರನ್ನು ಕೇಡಿಗರನ್ನು, ವಂಚಕರನ್ನು ನಾಶಮಾಡಲಿ.

❖ ಅಗ್ನಿಯು ಯಾಜ್ಞಿಕರು, ಯಜಮಾನರು ಉಳಿದ ಎಲ್ಲರಿಗೂ ಎಲ್ಲ ರೀತಿಯಿಂದಲೂ ಅನುಗ್ರಹಿಸಲಿ. ಅಗ್ನಿಯು ನಮ್ಮ ಮಿತ್ರನಾಗಿರಲಿ. ಅನ್ನ, ಅಶ್ವಗಳನ್ನು ಅನುಗ್ರಹಿಸಲಿ. ಅಗ್ನಿಯು ನಮಗೆಲ್ಲ ಸತ್ಕರ್ಮಗಳನ್ನು ಮಾಡುವ ಸತ್‌ಬುದ್ಧಿಯನ್ನೇ ಕರುಣಿಸಲಿ.

❖ ಆಕರ್ಷಕ ಧನಕ್ಕಾಗಿ ಬೇಡಿದ್ದಾರೆ. ಆಹಾರಕ್ಕಾಗಿ ಪ್ರಾರ್ಥಿಸಿದ್ದಾರೆ. ಆಯಸ್ಸಿಗಾಗಿ ಬೇಡಿಕೊಂಡಿದ್ದಾರೆ. ಆರಾಧಿಸಿದವರನ್ನು ತಪ್ಪದೆ ಕಾಪಾಡಲು, ಆಪತ್ತುಗಳಿಂದ ಪಾರುಮಾಡಲು ಪ್ರಾರ್ಥಿಸಿದ್ದಾರೆ. ಆಹ್ವಾನಿಸಿದ ದೇವತೆಗಳು ಹವಿಸ್ಸು ಸೋಮ ಸ್ವೀಕರಿಸಿ ಅನುಗ್ರಹಿಸಲಿ ಎಂದಿದ್ದಾರೆ.

❖ ಆರೋಗ್ಯ ಭಾಗ್ಯವನ್ನು ಕೇಳಿಕೊಂಡಿದ್ದಾರೆ. ಆಪತ್ತುಗಳ ನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ.ಆಹಾರ ತಿನ್ನುವಾಗ ನೀರು ಕುಡಿಯುವಾಗ ಶಕ್ತಿಯುತರಾಗಿರುವಂತಾಗಲಿ.

❖ ಇತರರಿಂದ ಪಡೆಯಲಾರದಂತಹ ಸಂಪತ್ತಿಗಾಗಿ ಬೇಡಿದ್ದಾರೆ. ಇಷ್ಟಾರ್ಥ ಸುಖಗಳು ದೊರೆಯುವಂತಾಗಲಿ ಎಂದು ಕೇಳಿದ್ದಾರೆ. ಇಷ್ಟಾರ್ಥಗಳು ತಮಗೂ, ಪುತ್ರ ಪೌತ್ರರಿಗೂ ಸಿಗುವಂತೆ ಕರುಣಿಸಲಿ ಎಂದು ಕೇಳಿಕೊಂಡಿದ್ದಾರೆ.

❖ ಉತ್ತಮ ಜ್ಞಾನಕ್ಕಾಗಿ ಪ್ರಾರ್ಥಿಸಿದ್ದಾರೆ. ಉದಾರ ದಾನಿಗಳು, ಆಸ್ತಿಕರು ದಿನದಿನವೂ ಹೆಚ್ಚಲಿ ಎಂದು ಕೇಳಿದ್ದಾರೆ. ಉತ್ತಮ ಸಾಮರ್ಥ್ಯವುಳ್ಳ ಋತ್ವಿಜರನ್ನು ಧನವಂತರನ್ನಾಗಿ ಮಾಡಲಿ. ಉದಕಕ್ಕಾಗಿ ಪ್ರಾರ್ಥಿಸಿದ್ದಾರೆ.

❖ ಋಷಿಗಳು ನೀರಿಗಾಗಿ, ಅನ್ನಕ್ಕಾಗಿ, ಸಂಪತ್ತಿಗಾಗಿ ಪ್ರಾರ್ಥಿಸಿದ್ದಾರೆ. ಋಷಿಗಳು ಯಜ್ಞ ಯಾಗಗಳು ನಡೆಯುತ್ತಿರುವಂತೆ ಅಗ್ನಿ ದೇವನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ. ದುಃಖ ನಿವಾರಣೆಗಾಗಿ ಅಭೀಷ್ಟ ಸಿದ್ಧಿಗಾಗಿ, ಯಶಸ್ಸಿಗಾಗಿ ಕೇಳಿಕೊಂಡಿದ್ದಾರೆ. ಎದುರು ಬೀಳುವ ಶತ್ರುಗಳನ್ನು ನಾಶಮಾಡಲಿ.

❖ ಕಷ್ಟಗಳಿಂದ ಪಾರುಮಾಡಲಿ. ಕರ್ಮಗಳನ್ನು ಮಾಡಲು ದೇವತೆಗಳು ಪ್ರೇರೇಪಿಸಲಿ. ಕರ್ಮಗಳನ್ನು ತ್ಯಜಿಸದಿರುವ ಯಜಮಾನರಿಗೆ ಧನ, ಅನ್ನ ಕರುಣಿಸಲಿ. ಕರ್ಮಗಳನ್ನು ಮಾಡಲು ನಮ್ಮನ್ನು ಬಲಶಾಲಿಗಳನ್ನಾಗಿ ಇರಿಸಲಿ. ಕರ್ಮಗಳನ್ನು ವೈಶ್ವಾನರಾಗ್ನಿಯು ಆಯಾಯ ದೇವತೆಗಳಿಗೆ ತಲುಪಿಸಲಿ. ಕ್ಷೀರಕ್ಕಾಗಿ ಗೋವುಗಳನ್ನು ಬೇಡಿದ್ದಾರೆ.

❖ ಕ್ಷೀರ ಅರ್ಪಿಸಲು ಗೋವುಗಳು ಇಲ್ಲದವರ ಸ್ತೋತ್ರಗಳನ್ನೇ ಅಧಿಕ ಎಂದು ತಿಳಿದು ಅವರನ್ನು ಅನುಗ್ರಹಿಸಲು ಬೇಡಿದ್ದಾರೆ. ಕೀರ್ತಿವಂತ ಪುತ್ರರಿಗಾಗಿ ಬೇಡಿದ್ದಾರೆ.

❖ ಗೃಹಕ್ಕಾಗಿ ಪ್ರಾರ್ಥಿಸಿದ್ದಾರೆ ಮತ್ತು ಅವುಗಳ ರಕ್ಷಣೆಗಾಗಿ ಪ್ರಾರ್ಥಿಸಿದ್ದಾರೆ. ಗೋವುಗಳಿಗಾಗಿ, ಗೋವುಗಳ ರಕ್ಷಣೆಗಾಗಿ ಪ್ರಾರ್ಥಿಸಿದ್ದಾರೆ. ಜಯ-ಅಪಜಯ, ಮಾನ-ಅಪಮಾನಗಳಲ್ಲಿ ಭಕ್ತರನ್ನು ಕೈಬಿಡದೇ ರಕ್ಷಿಸಲಿ. ಜಲಾಶಯಗಳು ನೀರಿನಿಂದ ತುಂಬಿರಲಿ. ಅವು ಕಮಲಗಳಿಂದ ಕಂಗೊಳಿಸುತ್ತಿರಲಿ.

❖ ತಿಳಿಯ ಬೇಕಾದದ್ದನ್ನು ಅಗ್ನಿಯು ತಿಳಿಯುವಂತೆ ಮಾಡಲಿ. ತಡೆಯಲಾಗದಂತಹ ಕಠಿಣ ಸಮಸ್ಯೆಗಳು ಬರುವುದೇ ಬೇಡ. ದೈವತ್ವ ಪಡೆಯಲು ಮಾರ್ಗದರ್ಶನ ಮಾಡಲಿ. ದೇವತೆಗಳ ಆರಾಧನೆಯನ್ನು ಮಾಡಿಯೇ ಇಷ್ಟಾರ್ಥಗಳನ್ನು ಪಡೆಯಿರಿ ಎಂದು ಹೇಳಿದ್ದಾರೆ.

❖ ದುಷ್ಟರಿಂದ ಕೆಡಕು ಬಾರದಂತೆ ರಕ್ಷಣೆ ನೀಡಲಿ. ದುಸ್ವಪ್ನ ನಾಶಮಾಡಲಿ. ದೇವತೆಗಳು ಯಜ್ಞ ಕರ್ಮಗಳನ್ನು ಮಾಡಿಸುತ್ತಿರಲಿ ಮತ್ತು ಅವರನ್ನು ರಕ್ಷಿಸುತ್ತಿರಲಿ. ದೂರದ, ಹತ್ತಿರದ ನಿಂದಕರನ್ನು, ದ್ರೋಹಿಗಳನ್ನು, ದೂಷಕರನ್ನು ದೂರ ಓಡಿಸಿ ರಕ್ಷಣೆ ನೀಡಲಿ. ದಾರಿದ್ರ್ಯ ಹಿಂಸೆಗಳು ಇಲ್ಲದಂತಾಗಲಿ.

❖ ಧನ ನೀಡಲಿ. ದರಿದ್ರ ಯಜಮಾನನ ಸ್ತೋತ್ರವನ್ನೇ ಹವಿಸ್ಸೆಂದು ತಿಳಿದು ಅಂತಹವರನ್ನು ರಕ್ಷಿಸಲಿ. ದಾನಿಗಳು ಅಶ್ವ ಅಜ, ಗೋವುಗಳನ್ನು ದಾನ ಮಾಡಲಿ. ದಾರಾಕಾರ ಮಳೆ ಸುರಿಸಲಿ. ಧನ ಸಂಪತ್ತನ್ನು ನೀಡಲಿ. ದಾನವಾಗಿ ಪಶುಗಳು, ಅಶ್ವಗಳು ದೊರೆಯಲಿ. ದುಃಖಗಳನ್ನು ನಾಶಮಾಡಲಿ. ದಾರಿದ್ರ್ಯ ನಿವಾರಣೆ ಮಾಡಲಿ. ದಾತೃಗಳು ದಾನ ಬುದ್ಧಿ ಹೊಂದಲಿ, ಉದಾರ ದಾನ ಮಾಡಲಿ.

❖ ಧನವನ್ನು ನೀಡಲಿ. ದಂಪತಿಗಳು ಅನ್ಯೋನ್ಯ ದೇವತಾ ಕರ್ಮ ಮಾಡುತ್ತಿರುವಂತೆ ಅವರುಗಳನ್ನು ಅನುಗ್ರಹಿಸಲಿ. ಧನದ ಬಳಿಗೆ ಯಜಮಾನನನ್ನು ಕರೆದೊಯ್ಯಲಿ. ದೇವತೆಗಳೊಂದಿಗೆ ಅಗ್ನಿಯು ಸಮೀಪದ ಯಜ್ಞಕ್ಕೆ ಬರಲಿ. ದಾನಯೋಗ್ಯ ಅಪೇಕ್ಷಿತ ವಸ್ತುಗಳನ್ನು ದಾನವಾಗಿ ಸಿಗಲಿ ಎಂದು ಬೇಡಿದ್ದಾರೆ. ದಾರಿದ್ರ್ಯ ಹಸಿವುಗಳಿಂದ ಬಿಡುಗಡೆ ಮಾಡಲಿ.

❖ ದ್ವೇಷಿಗಳಿಂದ ಅಸುರರಿಂದ ರಕ್ಷಣೆ ಮಾಡಲಿ. ದುಷ್ಟಬುದ್ಧಿಯು ಸುಳಿಯದಿರಲಿ. ಪಾಪಗಳನ್ನು ಪರಿಹರಿಸಿ ರಕ್ಷಿಸಲಿ. ದೇವ ಪೂಜಾರ್ಥ ಗೋವು, ಪುತ್ರ ಸಂಪತ್ತನ್ನು ನೀಡಲಿ. ದೇವತಾ ಸ್ತೋತ್ರಗಳು, ಪೂಜೆಗಳು, ಯಜ್ಞಯಾಗಾದಿಗಳು ಮಾಡಿಯೇ ಇಷ್ಟಾರ್ಥಗಳನ್ನು ಬೇಡಿಕೊಳ್ಳುತ್ತಾರೆ.

❖ ನಾಸ್ತಿಕರು ತೊಂದರೆ ಕೊಡದಂತೆ ರಕ್ಷಿಸಲು ಬೇಡಿದ್ದಾರೆ. ನಾವು ಮಾಡಿದ ಕರ್ಮಗಳ ಬಲದ ಮೇಲೆಯೇ ನಮ್ಮ ಇಷ್ಟಾರ್ಥಗಳನ್ನು ಪಡೆಯಲು ಸಾಧ್ಯ ಹಾಗೆಯೇ ಪ್ರಾರ್ಥಿಸಿದ್ದಾರೆ. ನಮ್ಮ ವಿರೋಧಿಗಳನ್ನು ನಾಶ ಮಾಡಲಿ. ಪಾಪಗಳಿಂದ ರಕ್ಷಿಸಲಿ. ನಮ್ಮ ವಂಶಜರನ್ನು ಅನ್ನವಂತರನ್ನಾಗಿ ಮಾಡಲಿ. ನೂರು ವರುಷಗಳ ಆಯಸ್ಸು ಪ್ರತಿದಿನವೂ ಮಂಗಳವನ್ನು ಬಯಸಿದ್ದಾರೆ.

❖ ನಮ್ಮ ಕರ್ಮಗಳಿಂದ ತೃಪ್ತರಾಗಿ ವೃಷ್ಟಿ ಸುರಿಸಲಿ. ನಿಂದಕರನ್ನು ದೂರ ಓಡಿಸಲಿ. ನಾವು ಅಗ್ನಿಪೂಜಕರಾಗಿರುವಂತೆ ಅಗ್ನಿಯು ಅನುಗ್ರಹಿಸಲಿ. ನ್ಯೂನಾತಿರಿಕ್ತ ಕರ್ಮಗಳನ್ನು ಮಾಡುವವರು, ಪೂಜೆಗಳನ್ನು ಮಾಡುವವರು ದಿನದಿನವೂ ಹೆಚ್ಚಲಿ. ನೀರಿನಲ್ಲಿ ಇಳಿದಾಗ, ಸ್ನಾನ ಮಾಡುವಾಗ ನೀರಿನ ಸಾರ ಶರೀರವನ್ನು ಸೇರಿ ನಮ್ಮನ್ನು ನಿರೋಗಿಗಳನ್ನಾಗಿ ಮಾಡಲಿ.

❖ ಪುತ್ರ ಪೌತ್ರರುಗಳಿಗಾಗಿ ಬೇಡಿದ್ದಾರೆ. ಪ್ರಭೂತ ಧನಕ್ಕಾಗಿ, ಪಶುಗಳಿಗಾಗಿ ಬೇಡಿದ್ದಾರೆ. ಪ್ರಬಲ ಶತ್ರುವನ್ನು ನಾಶ ಮಾಡಲಿ ಅವರನ್ನು ಪ್ರೋತ್ಸಾಹಿಸುವವರನ್ನು ದೂರ ಮಾಡಲಿ. ಪಶುಗಳು ಅಶ್ವಗಳಿಗಾಗಿ ಬೇಡಿಕೊಂಡಿದ್ದಾರೆ. ಪ್ರಶಾಂತತೆಯಿಂದ ಇರಲು ಬಯಸುತ್ತಾರೆ. ಪುತ್ರರು ಶತ್ರುಗಳನ್ನು ಜಯಿಸಲು ಸಮರ್ಥರಾಗಿರುವಂತಾಗಲಿ. ಪಶುಗಳಿಗೂ ಪುತ್ರರಿಗೂ ಆರೋಗ್ಯಭಾಗ್ಯವನ್ನು ಬೇಡಿದ್ದಾರೆ.

❖ ಭಕ್ತರ ಪಾಲಿಗೆ ಅಗ್ನಿಯು ಅಂಗರಕ್ಷಕನಂತೆ ಇದ್ದು ರಕ್ಷಿಸಲಿ. ಬಹುಕಾಲ ಸೂರ್ಯನನ್ನು ನೋಡುವಂತಾಗಲಿ ಎಂದು ಬೇಡಿಕೊಂಡಿದ್ದಾರೆ. ಭಯ ನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ. ಭೃತ್ಯರು ದೊರೆಯಲಿ, ಅವರ ಅವಶ್ಯಕತೆಗಳನ್ನು ಅಗ್ನಿಯು ನೀಡಲಿ. ಭರದ್ವಾಜರು ಸೋಮದಿಂದ ದೇವತೆಗಳನ್ನು ತೃಪ್ತಿ ಪಡಿಸಿ ತಮ್ಮ ವಂಶಜರಿಗೆ ಗೃಹ, ಅಶ್ವ, ಧನ, ಸಂಪತ್ತುಗಳನ್ನು ಬೇಡಿ ಪಡೆದಿದ್ದಾರೆ.

❖ ಬೇರೆಯವರಿಂದ ನಾವು ಪಾಪಾಚರಣೆ ಮಾಡುವುದು ಬೇಡ ಎಂದು ಬೇಡಿಕೊಂಡಿದ್ದಾರೆ. ಬಂದ ಕಷ್ಟ ದುಃಖಗಳನ್ನು ನಿವಾರಿಸಲಿ. ಭಕ್ತರಿಗೆ ಬೇಕು ಬೇಕಾದವನ್ನು ಅಗ್ನಿಯು ಅನುಗ್ರಹಿಸಲಿ.

- ಮನೋ ಅಭೀಷ್ಟಗಳನ್ನು ಈಡೇರಿಸಲಿ. ಮರಣ ರಾಹಿತ್ಯವನ್ನು ಅನುಗ್ರಹಿಸಲಿ. ಮಾನವಾರ್ಪಿತ ಹವಿಸ್ಸನ್ನು ಅಗ್ನಿಯು ಸ್ವೀಕರಿಸಲಿ. ಮೇಧಾವಿಗಳ ಜೊತೆಯಲ್ಲಿಯೇ ಇರುವಂತಾಗಲಿ. ಮುಪ್ಪಿನವರೆಗೆ ಕಲ್ಯಾಣಗಳನ್ನು ಹೊಂದುತ್ತಿರುವಂತಾಗಲಿ.
- ಯಜ್ಞಯಾಗಗಳನ್ನು ಮಾಡುತ್ತಿರುವುದರಿಂದ ನಮ್ಮ ಇಷ್ಟಾರ್ಥಗಳನ್ನು ದೇವತೆಗಳು ಈಡೇರಿಸಲಿ ಎಂದು ಕೇಳಿದ್ದಾರೆ. ಯಜಮಾನರ ಎಲ್ಲಾ ತೊಂದರೆಗಳನ್ನು ನಿವಾರಿಸಲಿ. ಯಾಜ್ಞಿಕರಿಗೆ ದಾನಿಗಳು ದಿನದಿನವೂ ಧನ ದಾನ್ಯ ಆದಿ ಅವಶ್ಯಕತೆಗಳನ್ನು ದಾನ ಮಾಡುತ್ತಿರಲಿ.
- ಯಾಜ್ಞಿಕರಿಗೆ ಅನ್ನ, ಧನ ದೊರೆಯುವಂತಾಗಲಿ. ಯಜಮಾನರನ್ನು ಅನ್ನವಂತರು ಮತ್ತು ದನವಂತರನ್ನಾಗಿ ಮಾಡಲಿ. ಯಜ್ಞ ಕರ್ಮಗಳನ್ನು ಸದಾ ನಡೆಸುವ ಭಾಗ್ಯ ತಮ್ಮದಾಗಿರಲಿ ಎಂದು ಬೇಡಿಕೊಂಡಿದ್ದಾರೆ. ಯಜಮಾನನ ಎಲ್ಲಾ ತೊಂದರೆಗಳನ್ನೂ ನಿವಾರಿಸಲಿ ಮತ್ತು ಅವನು ಎಂದೂ ರಿಕ್ತ ಹಸ್ತದವನಾಗದಿರಲಿ ಎಂದು ಕೇಳಿದ್ದಾರೆ.
- ಯಜಮಾನನತ್ತ ಗೋವುಗಳು, ಆಡುಗಳು, ಅಶ್ವಗಳು, ಧನ, ದಾನ್ಯಗಳು ದಾನಿಗಳಿಂದ ಬಂದು ಸೇರಲಿ. ಯಜಮಾನನ ಪಾಪಗಳನ್ನು ಪರಿಹರಿಸಿ ರಕ್ಷಿಸಲಿ. ಪುತ್ರ ಪೌತ್ರರಿಗೂ ಧನ ಬೇಡಿದ್ದಾರೆ. ಯಜ್ಞ ಕರ್ಮ ಲೋಪವಾದಲ್ಲಿ ಕ್ಷಮಿಸಿ ಅಗ್ನಿಯು ಅನುಗ್ರಹಿಸಿ ಯಜ್ಞಫಲ ನೀಡುವಂತೆ ಪ್ರಾರ್ಥಿಸಿದ್ದಾರೆ.
- ರೋಗ ನಾಶಮಾಡಲಿ ಎಂದು ಪ್ರಾರ್ಥಿಸಿದ್ದಾರೆ. ರಾಕ್ಷಸರಿಂದ ಹಿಂಸೆಗಳಾಗದಂತೆ ರಕ್ಷಣೆ ಬೇಡಿದ್ದಾರೆ. ರಥ ಅಶ್ವಗಳಿಗಾಗಿ ಬೇಡಿದ್ದಾರೆ. ರಾಕ್ಷಸರು, ನಿಂಧಕರು, ಚೋರರಿಂದ ರಕ್ಷಣೆ ಬೇಡಿದ್ದಾರೆ.
- ವೀರ ಪುತ್ರರಿಗಾಗಿ ಬೇಡಿದ್ದಾರೆ. ವರುಣ ಕೃಪ ರೋಗವನ್ನು ನಾಶಮಾಡಲಿ. ವೈಶ್ವಾನರಾಗ್ನಿಯು ಪುತ್ರ ಪೌತ್ರರನ್ನು ರಕ್ಷಿಸಿ ನೆಮ್ಮದಿಯಿಂದ ಇರುವಂತೆ ಅನುಗ್ರಹಿಸಲಿ. ವಸಿಷ್ಟರು ಕರ್ಮಾನುಷ್ಠಾನಗಳನ್ನು ತ್ಯಜಿಸದಿರಲು ಹೇಳಿದ್ದಾರೆ.
- ಶರೀರ ರಕ್ಷಣೆಗಾಗಿ ಹವಿರ್ದಾನ ಯೋಗ್ಯತೆ ಇರುವಂತಾಗಲಿ. ಶತ್ರುಗಳನ್ನು ನಾಶಮಾಡಬಲ್ಲ ಪುತ್ರರಿಗಾಗಿ ಬೇಡಿದ್ದಾರೆ. ಶ್ರದ್ಧಾ ಭಕ್ತಿಗಳಿಂದ ಕರ್ಮಗಳನ್ನು ಮಾಡುವಂತೆ ಕರುಣಿಸಲಿ. ಶ್ರೇಷ್ಟ ಗೃಹಕ್ಕಾಗಿ ಮತ್ತು ಶ್ರೇಯಸ್ಸಿಗಾಗಿ ಕೋರಿದ್ದಾರೆ.
- ಸ್ನಾನಾನಂತರ ತೇಜಸ್ವಿಗಳನ್ನಾಗಿ ಮಾಡಲಿ. ಸಮಸ್ತ ರಾಕ್ಷಸ ಗಣವನ್ನು ಅಗ್ನಿಯು ದಹಿಸಿ ನಮ್ಮನ್ನು ರಕ್ಷಿಸಲಿ. ಸಸ್ಯಗಳು ಹೂವಿನಿಂದ ಕಂಗೊಳಿಸಲಿ. ಸುಖ ಶಾಂತಿ ನೀಡಲಿ. ಸಮಸ್ತ ದುಃಖಗಳನ್ನು ನಾಶ ಮಾಡಲಿ. ಸರ್ವಜ್ಞನಾದ ಅಗ್ನಿ ಆಪತ್ತುಗಳಿಂದ ನಮ್ಮನ್ನು ರಕ್ಷಿಸಲಿ.
- ಸ್ವಂತ ಸಂಪದ್ಭರಿತ ಗೃಹದಲ್ಲಿ ಇರುವಂತಾಗಲಿ, ಅಲ್ಲಿ ಅಗ್ನಿಯು ರಕ್ಷಕನಾಗಿ ಇರಲಿ. ಸರ್ವ ಋತ್ವಿಜರಿಗೂ ಅಗ್ನಿ ಗೋವು, ಧನ ದಾನ್ಯ ಅನರ್ಘ್ಯ ವಸ್ತುಗಳು ದಾನವಾಗಿ ಸಿಗುವಂತೆ ಅನುಗ್ರಹಿಸಲಿ.
- ಹವಿಸ್ಸು ಹೊಂದಿರುವವರನ್ನು, ಸ್ತುತಿಸುವವರನ್ನು ಅಗ್ನಿಯು ರಕ್ಷಿಸಲಿ. ಹವಿಸ್ಸನ್ನು ಆಯಾ ದೇವತೆಗಳಿಗೆ ತಲುಪಿಸಿ ಅವರಿಂದ ನಮಗೆ ಬೇಕಾದುದನ್ನು ಅಗ್ನಿಯು ಕೊಡಿಸಲಿ. ಶತ್ರುಗಳನ್ನು ಜಯಿಸುವಷ್ಟು ಶಕ್ತಿ ಕೊಟ್ಟು ರಕ್ಷಕನಾಗಿರಲಿ. ದುಃಸ್ವಪ್ನ ನಾಶಮಾಡಲಿ. ಪರಸ್ಪರ ದ್ವೇಷಾಸೂಯೆಗಳು ಇಲ್ಲದಂತಾಗಲಿ. ಪುತ್ರ ಪೌತ್ರರು ಕರ್ಮ ನಿರತರಾಗಿರುವಂತೆ ಕರುಣಿಸಲಿ. **ಅಗ್ನಿ ಜೊತೆಯಲ್ಲಿ ಕೆಳಗಿನ ದೇವತೆಗಳನ್ನು ಪೂಜಿಸಿದ್ದಾರೆ.** (1)ಇಂದ್ರ (2)ವಾಯು (3)ವರುಣ (4) ಮರುತ್ (5) ಸೋಮರು (6)ವಿಷ್ಣು (7)ಸರಸ್ವತಿ (8) ರುದ್ರರು (9) ಆದಿತ್ಯ (10) ಬ್ರಹಸ್ಪತಿ (11)ಬ್ರಹ್ಮಣಸ್ಪತಿ (12) ಸೂರ್ಯ (13)ಸವಿತೃ (14) ಮಿತ್ರಾವರುಣರು (15) ಉಷಾದೇವಿ (16) ಪೂಷನ್ (17) ತ್ವಷ್ಟ (18)ಅಶ್ವಿನಿ (19) ಅಬ್ ದೇವತೆ (20) ಸುಪರ್ಣ (21)ಅಹೋರಾತ್ರಿ (22)ಋತು (23) ಇಳಾ (24)ಭಾರತಿ (25)ಅದಿತಿ (26)ಆರ್ಯಮ (27)ದ್ವಾರ ದೇವತೆಗಳು (28) ಮಾಧ್ಯಮಿಕಾ ದೇವಿ (29)ದ್ಯಾವಾಪೃಥ್ವಿ (30)ಯೂಪ (31)ವಸುಗಳು (32)ವನಸ್ಪತಿ (33)ಸಾಗರದೇವತೆ

# ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

- ಇಂದ್ರನು ಅದ್ವಿತೀಯ ಪ್ರಭು, ಅಭಿವೃದ್ಧಿ ಕಾರಕರು, ಅಸುರರ ಪ್ರಾಣ ಹಿಂಡುತ್ತಾ ಸಜ್ಜನರನ್ನು ರಕ್ಷಿಸುತ್ತಾರೆ, ಅಂತರಿಕ್ಷ ದ್ಯಾವಾಪೃಥ್ವಿಗಳನ್ನು ತೇಜಸ್ಸಿನಿಂದ ತುಂಬಿದ್ದಾರೆ. ಅಧೋ ಮುಖ, ಉದಕ ಪ್ರವಹಿಸುವಂತೆ ಮಾಡಿದ್ದಾರೆ, ಅನುಗ್ರಹ ಬುದ್ಧಿವುಳ್ಳವರು, ಅಶ್ವ ಗೋವುಗಳ ಅಧಿಪತಿ. ಅಶ್ವರಥದಲ್ಲಿ ಆಗಮಿಸುತ್ತಾರೆ.
- ಇಂದ್ರನು ಆಗತ್ಯ ಮೀರಿ ಮಾನವರ ಪಾಲಕ, ಅಹೋ ರಾತ್ರಿಗಳಲ್ಲಿ ನಡೆಸುವ ಕರ್ಮಗಳನ್ನು ಅನುಮೋದಿಸುತ್ತಾನೆ, ಅಂತರಿಕ್ಷದಲ್ಲಿ ಸೂರ್ಯನನ್ನು ಪ್ರಕಾಶಿಸುವುದಕ್ಕಾಗಿ ಸ್ಥಾಪಿಸಿದನು, ಅಲಂಕಾರ ಶೋಭಿತ, ಅಹಸ್ಸಿನಲ್ಲಿ ಹಿಂಡಿದ ಸೋಮಪಾನದಿಂದ ವೃತ್ರಾಸುರನನ್ನು ಕೊಂದನು, ಅಂತರಿಕ್ಷಾ ದ್ಯುಲೋಕಗಳು ಬೀಳದಂತೆ ತಡೆದಿದ್ದಾನೆ.
- ಅನೇಕರಿಂದ ಆಹ್ವಾನಿತ, ಅಜ್ಞಾನ, ಮೋಹಗಳಿಂದ ಪಾರಾಗಿ ಆತ್ಮ ಸಾಕ್ಷಾತ್ಕಾರ ಪಡೆದಿದ್ದವರು, ಅಪಹೃತ ಗೋವುಗಳನ್ನು ಬಿಡಿಸಿದರು, ಅಗ್ನಿ ಇಂದ್ರರ ಸಖ್ಯಕ್ಕಾಗಿ, ಪುರೋಡಾಶ ಪಾಕಮಾಡಿಸಿ ಅಭಿಮುಖ ಮಾಡಿಕೊಳ್ಳುತ್ತಾರೆ.
- ಅಸುರರನ್ನು ಹಿಂಸಿಸಿ ಔಷಧಿ, ವನಸ್ಪತಿಗಳನ್ನು ನದಿ, ತೀರಗಳಲ್ಲಿ ಬೆಳೆಸಿರುವವನು ಇಂದ್ರ. ಅನ್ನವಂತ,ಅಶ್ವಗಳ ಸ್ಥಾಪಕ,ಅಹಿಂಸಕ, ಅಪ್ರತಿಹಕ, ಅನುಗ್ರಹ ಬುದ್ಧಿಯುವನು, ಅನೇಕರಿಂದ ಆಹ್ವಾನಿತ, ಅತ್ಯಧಿಕ ದಾನಿ,
- ಅವನನ್ನು ಮೀರಿಸುವವರು ಅಥವಾ ಹಿಂಸಿಸುವವರು ಯಾರು ಇಲ್ಲ, ಅನ್ನವಂತ, ಅಶ್ವಗಳ ಸ್ಥಾಪಕ ಅಶ್ವಗಳು ಇಂದ್ರನನ್ನು ಯಜ್ಞಾಭಿಮುಖ, ಹವಿರಭಿಮುಖ ಕರೆತರುತ್ತವೆ. ಅವೈದಿಕ ಪಾಪ ಕರ್ಮಗಳಿಗೆ ಇಂದ್ರನು ಹೆದರುವುದಿಲ್ಲ ಅವನ ಮನಸ್ಸು ದಾನ ಮಾಡುವ ಸಂಕಲ್ಪದ್ದಾಗಿರುತ್ತದೆ. ಅಪಾರ ಧನವನ್ನು ಅನೇಕ ವೇಳೆ ದಾನ ಮಾಡಿದ್ದಾನೆ. ಅನೇಕರನ್ನು ಹುಟ್ಟಿದಾಗಿನಿಂದಲೂ ರಕ್ಷಿಸುತ್ತಾ ಬಂದಿದ್ದಾನೆ. ಅನ್ನಕ್ಕಾಗಿ ಸ್ತುತಿಸಿದವರಿಗೆ ತೊಂದರೆ ನಿವಾರಿಸಿ ಅನ್ನ ನೀಡಿದ್ದಾನೆ.
- ಅಧಿತಿಯ ಪುತ್ರ ವರುಣನು ಶ್ರೋತೃಗಳಿಗೆ ಅಪರಿಮಿತ ಧನ ನೀಡುತ್ತಾನೆ, ಅಗ್ನಿ ಹೋಮ ಕರ್ಮಗಳಿಂದ ತೃಪ್ತಿಪಡಿಸಿದರವನ್ನು ಒಡನೆಯೇ ರಕ್ಷಿಸುತ್ತಾನೆ. ಅಪೇಕ್ಷೆಗಿಂತ ಅಧಿಕ ಧನ ನೀಡುತ್ತಾನೆ. ಅಶ್ವಗಳು ಹವಿಸ್ಸಿಗಾಗಿ ಶತ್ರುನಾಶಕ್ಕಾಗಿ ತ್ವರಿತ ಹೋಗುವುವು, ಅಸುರರನ್ನು ಶತ್ರುಗಳನ್ನು ಸಂಹರಿಸುತ್ತಾನೆ. ಅಗ್ನಿಯು ಹವಿಸ್ಸು ಭಕ್ಷಿಸಿ, ಪ್ರಜಾಪ್ರತಿಯನ್ನು ಪೂಜಿಸುತ್ತಾನೆ. ಅಸಾಧಾರಣ ಸಂಪತ್ತನ್ನು ಇಂದ್ರನು ರಹಸ್ಯವಾಗಿ ಹೊಂದಿದ್ದಾನೆ.
- ಆಕಾಶದಲ್ಲಿ ಪ್ರಕಾಶ ಮಾನ ಸೂರ್ಯನನ್ನು ಸ್ಥಾಪಿಸಿದವನು. ಆಶ್ರುತರನ್ನು ರಕ್ಷಿಸಿ ಸಹಾಯಮಾಡಿ ಕಾಪಾಡುತ್ತಾನೆ. ಆಹಾರ ಧಾನ್ಯಗಳು ಬೆಳೆಯಲು, ಧಾರಾಕಾರ ಮಳೆ ಸುರಿಸುತ್ತಾನೆ. ಆರಾಧಿಸದಿದ್ದಾ ಚಿತ್ರರಥನನ್ನು ನಾಶಮಾಡಿದನು. ಅಂಗೀರಸ್ಸುಗಳು ಇಂದ್ರನನ್ನು ಸ್ತುತಿಸುತ್ತಾ ಇಂದ್ರನನ್ನು ಪ್ರಸಿದ್ಧನನ್ನಾಗಿ ಮಾಡಿದರು. ಇಂದ್ರನಿಂದ ರಕ್ಷಿತರಾದರು.
- ಇಂದ್ರದತ್ತ ಅನ್ನ ತಿಂದವರು ಸಕಲ ಕಾರ್ಯಗಳನ್ನು ಮಾಡುತ್ತಾರೆ. ಇಂದ್ರನನ್ನೇ ಉಪಚರಿಸುವವರು ಧನಯುಕ್ತರಾಗುತ್ತಾರೆ. ಇಂದ್ರನ ಕಾರ್ಯ ಎಲ್ಲವೂ ಲೋಕ ಕಾರ್ಯವೇ ಆಗಿರುತ್ತದೆ. ಇಂದ್ರಾಗ್ನಿಗಳು ಎಲ್ಲವನ್ನು ನೋಡಬಲ್ಲರು. ಇಂದ್ರನು ಸೃಷ್ಟಿಕರ್ತನಿಂದ ಸೃಷ್ಟಿಸಲ್ಪಟ್ಟವನು. ಇಂದ್ರನು ಯಾರನ್ನು ಬಯಸುತ್ತಾನೋ ಅವನು ಅವರನ್ನು ಯಜ್ಞ ಮಾಡಲೂ ಸಮರ್ಥರಾಗುವಂತೆ ಮಾಡುತ್ತಾನೆ.
- ಇಂದ್ರನ ಬಳಿಗೆ ಏಕೆ ಅವನ ಕುದುರೆಗಳ ಬಳಿಗೂ ಯಾವ ಶತ್ರುಗಳು ಬರಲು ಸಾಧ್ಯವಿಲ್ಲ, ಇಂದ್ರನನ್ನು ಮರುತ್ತುಗಳು ಕಾರ್ಯೋನ್ಮುಖ ಮಾಡುತ್ತವೆ. ಇಂದ್ರನು ಸೂರ್ಯನ ಮೂಲಕ ಎದ್ದತಕ್ಷಣ ಅಂದರೆ ಸೂರ್ಯೋದಯ ವಾದಾಗ ವಸ್ತುಗಳನ್ನು ನೋಡಲು ಶಕ್ತರಾಗುತ್ತಾರೆ. ಇಂದ್ರನು ಹಿಂಸಕರನ್ನು ಅಗ್ನಿಜ್ವಾಲೆಯಿಂದ ದಹಿಸುತ್ತಾನೆ. ಉತ್ಕೃಷ್ಟ ಸೋತ್ರಗಳನ್ನು ಬಯಸುತ್ತಾನೆ. ಅವನ ಕೃಪೆಯಿಂದ ಧನ-ಸುಖ-ಸಂತೋಷ ರಕ್ಷಣೆಗಳನ್ನು ಪಡೆಯಬಹುದು. ಇಂದ್ರನನ್ನು ಪ್ರತಿಭಟಿಸುವವರು ಯಾರು ಇಲ್ಲ,
- ಇಂದ್ರನು ಶತ್ರುಗಳನ್ನು ಹಿಂಸಕರನ್ನು ಅಟ್ಟಿಸಿಕೊಂಡು ಹೋಗಿ ಅಗ್ನಿಜ್ವಾಲೆಯಿಂದ ದಹಿಸುತ್ತಾನೆ. ಇಂದ್ರ ಉತ್ಪತ್ತಿಕಾಲದಲ್ಲಿ ದ್ಯುಲೋಕ, ಭೂಲೋಕಗಳು ಕಂಪಿಸಿದವು, ಇಂದ್ರ ಭಯದಿಂದ ಧೇನುಗಳು ಹಾಲು ಕೊಡುತ್ತವೆ. ಇಂದ್ರನ ಸಹಾಯದಿಂದಲೇ ದೇವತೆಗಳು ಯುದ್ಧ ಮಾಡಿದರು. ಅವನ ರಥವು ಕಾಂತಿಯುತವಾದುದು ಶತ್ರುನಾಶಕವಾದುದು. ರಥದ ಕುದುರೆ ಹೆಸರು (ಹರಿ)ಯನ್ನು ಸ್ಮರಿಸಿದರೇ ದೀರ್ಘಾಯುಷ್ಯವಂತರಾಗುತ್ತಾರೆ. ಇಂದ್ರನನ್ನು ಮೊದಲು ಪೂಜಿಸಿ ನಂತರ ಸೂರ್ಯನನ್ನು ಪೂಜಿಸುತ್ತಾರೆ.

# ಇಂದ್ರ ದೇವರು

## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

- ಇಂದ್ರನು ಧನ ಕೊಡಲು ಬಯಸಿದರೆ ಯಾರೂ ತಡೆಯಲಾರರು, ಇಂದ್ರನಿಂದ ಸುಖ-ಸಂತೋಷಗಳು ಲಭಿಸುತ್ತವೆ. ಇಂದ್ರನ ಹೆದರಿಕೆಯಿಂದ ಗಂಗಾದಿ ನದಿಗಳು ಹರಿಯುವವು, ಇಂದ್ರನ ಕೃಪೆ ಪಡೆದವರು ಸಂಪತ್ ಯುಕ್ತರಾಗುತ್ತಾರೆ. ಇಂದ್ರನಿಗೆ ಮೊದಲು ಸೋಮಪಾನ ಮಾಡಲು ದೇವತೆಗಳು ಒಮ್ಮತದಿಂದ ಸಮ್ಮತಿ ನೀಡಿದ್ದಾರೆ.

- ಇಂದ್ರನು ಅನುಚರರೊಂದಿಗೆ, ಎಲ್ಲೆಲ್ಲೂ ಸಂಚರಿಸುತ್ತಾನೆ. ಇಂದ್ರನ ಪತ್ನಿ (ಶಚಿ ದೇವಿಯವರು) ಅವನನ್ನು ಅನುಸರಿಸುತ್ತಾನೆ. ಇಂದ್ರಾಗ್ನಿಗಳು ಪೂಜ್ಯರು ಪ್ರಸಿದ್ಧರು ಸರ್ವಜ್ಞರು, ಧನವಂತರು, ಅಹಿಂಸಕರು, ಆದಿತ್ಯನಂತೆ ಪ್ರಕಾಶಮಾನರು, ಜಂಗಮಾತ್ಮಕ ಧನಕ್ಕೆಲ್ಲಾ ಒಡೆಯರು. ಇಂದ್ರ ಮರುತ್ತುಗಳು ಉನ್ನತ ಸ್ಥಾನದಲ್ಲಿದ್ದು ದ್ಯಾವಾಪೃಥ್ವಿಗಳು ಪ್ರಕಾಶಗೊಳಿಸುತ್ತಾರೆ. ಇಂದ್ರನಲ್ಲಿ ಅನುಗ್ರಹ ಬುದ್ಧಿ ಎಣಿಸಲಾರದಷ್ಟಿದೆ. ಅವನನ್ನು ಆಶ್ರಯಿಸಿದವರಿಗೆ ಅನಂತ ಭೋಗ, ಭಾಗ್ಯಗಳು ಲಭಿಸುತ್ತವೆ.

- ಅವನ ಅನುಗ್ರಹದಿಂದ ಮಾನವರು ರಕ್ಷಿತ ಗೃಹಗಳಲ್ಲಿ ಇರುವಂತಾಗಿದೆ. ಅಪಾರ ಧನವನ್ನು ಅನೇಕ ವೇಳೆ ಬಹಳ ಯಜಮಾನರುಗಳಿಗೆ ದಾನ ಮಾಡಿದ್ದಾನೆ. ಇಂದ್ರನ ಅತಿಶಯ ರಕ್ಷಣೆಯಿಂದಲೇ ಲೋಕವು ರಕ್ಷಿತವಾಗಿದೆ. ಇಂದ್ರನ ತಂದೆ (ಕಶ್ಯಪರು) ತಾಯಿ (ಅದಿತಿ) ಎಂದಿದ್ದಾರೆ. ಇಂದ್ರ ಉಪಾಸಕರು, ಅವನಿಂದ ಅಧಿಕ ಧನವನ್ನು ಪಡೆದಿದ್ದಾರೆ, ಪಡೆಯುತ್ತಾರೆ.

- ಇಂದ್ರನು ಸ್ವರ್ಗ ಸೃಷ್ಟಿಸಿದ್ದಾನೆ, ಭೂಲೋಕ ಉತ್ಪತ್ತಿ ಮಾಡಿದ್ದಾನೆ, ಅಶ್ವ, ಗೋವುಗಳನ್ನು ಸೃಷ್ಟಿಸಿದ್ದಾನೆ. ಇಂದ್ರದತ್ತ ಧನವು ಸುಸಂಸ್ಕೃತನನ್ನಾಗಿ ಮಾಡುತ್ತದೆ. ಇಂದ್ರನು ತನ್ನ ಮಹತ್ವದಿಂದ ತೇಜಸ್ಸಿನಿಂದ ಅನೇಕ ಯಜಮಾನರಿಗೆ ಒಂದೇ ರೀತಿಯಲ್ಲಿ ಪೂಜ್ಯನಾಗಿದ್ದಾನೆ. ಅನೇಕ ಗೋವುಗಳನ್ನು ಸ್ತುತಿಕರ್ತರಿಗೆ ಕೊಡುತ್ತಾನೆ. ಇಂದ್ರನು ಕಣ್ವ ಪುತ್ರರು ಶತ್ರು ಬಾಧೆಯಲ್ಲಿದ್ದಾಗ, ಅವರನ್ನು ರಕ್ಷಿಸಿ ಅಸಂಖ್ಯಾತ ಗೋವುಗಳು ಅವರಿಗೆ ಸಿಗುವಂತೆ ಮಾಡಿದನು. ಇಂದ್ರ ಧನುಸ್ಸು ಬಾಣಗಳು ಎಲ್ಲವೂ ಸುವರ್ಣ ನಿರ್ಮಿತವಾದುದು.

- ಇಂದ್ರನು ಪ್ರಜಾ ಪ್ರತಿಯಿಂದ ಸೃಷ್ಟಿಸಲ್ಪಟ್ಟವನು. ಋಭುಗಳೊಡನೆ ವಾಸಿಸುವವನು. ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ. ಸಮಸ್ತ ಧನದ ಒಡೆಯ ಸರ್ವರಿಂದಲೂ ಸುತ್ಯ ಅನ್ನ-ಆಹಾರ-ಐಹಿಕ ಸುಖ ಹಾಗೂ ಸ್ವರ್ಗಸುಖಗಳನ್ನು ನೀಡುತ್ತಾನೆ. ಇಂದ್ರನ ಅಶ್ವಗಳು ಹೊಂಬಣ್ಣದವು.

- ಉತ್ತಮ ಕೇಶವುಳ್ಳವು. ಶೀಘ್ರಗಾಮಿಗಳು, ಕೆನೆಯುವವು, ಪೂಜಿತವಾದವು, ಇಂದ್ರನು ಸೋಮ ಸೇವಿಸುವುದನ್ನು ಅಶ್ವಿನಿ ದೇವತೆಗಳು ನೋಡಿದ್ದಾರೆ. ಎನ್ನುತ್ತಾರೆ ಋಷಿಗಳು, ಇಂದ್ರನನ್ನು ಸ್ತುತಿಸುವವರು ಶ್ರೇಷ್ಠ ಧನ ಇಷ್ಟಾರ್ಥಗಳನ್ನು ಪಡೆಯುತ್ತಾರೆ.

- ಇಂದ್ರನು ಯಜ್ಞಗಳ ಮಧ್ಯದಲ್ಲಿ ಇರುತ್ತಾನೆ. ಸಕಲ ಜಗತ್ತಿಗೂ ಈಶನಂತೆ ಇದ್ದಾನೆ. ಇಂದ್ರನ ನಾಯಿ ಬಿಳಿ ಮತ್ತು ಹಳದಿಯ ಬಣ್ಣವು. ಬಾಯಿ ತೆರೆದರೆ ಹಲ್ಲುಗಳು ಆಯುಧದಂತೆ ಕಾಣುತ್ತವೆ. ಇಂದ್ರ ವರುಣರು ಸಕಲ ಧನಕ್ಕೆ ..ಡೆಯರು. ದ್ಯುಲೋಕದಂತೆ ಅಂತರಿಕ್ಷದಲ್ಲೂ ಪ್ರಕಾಶಮಾನನಾಗಿದ್ದಾನೆ. ಇಂದ್ರನ ಮ..ಸ್ಸು ಎರಡು ಲೋಕಗಳಲ್ಲೂ ಹೊಂದಿಕೊಂಡಿರುತ್ತದೆ.

- ಇಂದ್ರನು ಹುಟ್ಟಿದೊಡನೆಯೇ ಸೋಮಪಾನ ಮಾಡಿದ್ದಾಗಿ ಅದಿತಿ ಹೇಳಿದ್ದಾರೆ. ಶತ್ರುಗಳನ್ನು ನಾಶಮಾಡಿದ ಕೂಡಲೇ ಸೋಮವನ್ನು ಪಾನಮಾಡಿದ್ದಾನೆ. ಎಲ್ಲಾ ರೀತಿಯಿಂದಲೂ ರಕ್ಷಕ ಅವನ ಕೃಪೆಯಿಂದ ಬಂಧನಗಳು ಅಂಟದೆ ಕಳಚಿಹೋಗುವುವು. ಇಂದ್ರಾಗ್ನಿಗಳು ಒಟ್ಟಿಗೆ ಒಂದೇ ರಥದಲ್ಲಿ ಬರುವವರು ಶತ್ರು ಹಂತಕರು, ಅಪಹರಿಸಿದ ಶತ್ರುಧನವುಳ್ಳವರು ಇಂದ್ರನು ತನ್ನನ್ನು ಗುರುತಿಸಲೆಂದೇ ಯಾಜ್ಞಿಕರಿಗೆ ಗೋವು, ಧನ, ಧಾನ್ಯ ಅಶ್ವಗಳನ್ನು ಅನುಗ್ರಹಿಸಿ ತನ್ನನ್ನು ಅವರು ಗುರುತಿಸುವಂತೆ ಮಾಡುತ್ತಾನೆ.

- ಇಂದ್ರನು *ಸಕಲವನ್ನು ನೋಡುತ್ತಾನೆ, ಕೇಳುತ್ತಾನೆ, ಅವನಿಗೆ ಅನುಕೂಲವಾದ ಯಜ್ಞಕ್ಕೆ ಬರುತ್ತಾನೆ. ಇಂದ್ರನ ನಂತರ ಅಗ್ನಿಸ್ತೋಮಯಾಗ ಅದರ ಮಂತ್ರಗಳು ಉತ್ಪನ್ನವಾದವು, ಇಂದ್ರನಿಂದ ಯಜಮಾನನ ಭಯವು ನಿವಾರಣೆಯಾಗಿ ರಕ್ಷಣೆ ಒದಗಿ ಅವನು ಇಂದ್ರನ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ. ಇಂದ್ರನು ಅತೀಯಶ ಮಹತ್ವದಿಂದ ಸ್ವರ್ಗ ತುಂಬಿರುವವನು. ಇಂದ್ರನು ವಿಶ್ವಾಮಿತ್ರ, ಜಮದಗ್ನಿಗಳು ಪ್ರಾರ್ಥಿಸಿದಾಗ ತಾನು ಅವರ ಯಜ್ಞಕ್ಕೆ ಧನ ಸಹಿತ ಬರುವುದಾಗಿ ಆಶ್ವಾಸನೆ ನೀಡಿದ್ದನು. ಭಾರ್ಗವ ಋಷಿಗಳ ರಥವನ್ನು ತೊಂದರೆಯಲ್ಲಿದ್ದಾಗ ರಕ್ಷಿಸಿದ್ದಾನೆ.*

- ಉದಕವು ಸಮುದ್ರಾಭಿಮುಖ ಹರಿಯುವಂತೆ ಮಾಡಿ ಭೂಮಿಯ ಮೇಲೆ ಆಹಾರ ಧಾನ್ಯಗಳು ಬೆಳೆಯುವಂತೆ ಮಾಡಿದ್ದಾನೆ. ಉದರದಲ್ಲಿ ಜಲಾಶಯದಂತೆ ಸೋಮರಸ ತುಂಬಿಕೊಂಡಿದ್ದಾನೆ. ಉದಕವು ಪ್ರವಹಿಸುವಂತೆ ಮಾಡಿ ..ಲ್ಲರ ಅತಿಶಯ ಪ್ರೀತಿಗೆ ಪಾತ್ರನಾಗಿದ್ದಾನೆ. -

# ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

- ಉಷಾ ದೇವಿಯ ಪುತ್ರರಿಂದ ತಮಸ್ಸು ನಾಶವಾಗುತ್ತದೆ. ಉಷಃ ಕಾಲವೆಂದರೆ ಇಂದ್ರನು ಯಜ್ಞಾಭಿಮುಖನಾಗುತ್ತಾನೆ. ಉದಕ ಗೋವುಗಳನ್ನು ಅನುಗ್ರಹಿಸುತ್ತಾನೆ. ಉದಾರ ದಾನಿ, ಉತ್ತಮ ಮಂತ್ರ ಪಠಿಸುವವರನ್ನು ವೃದ್ಧಿಪಡಿಸುತ್ತಾನೆ. ಎಲ್ಲರೂ ಇಂದ್ರನನ್ನು ಅಪೇಕ್ಷಿಸುತ್ತಾರೆ. ಉಷಸ್ ಪುನರಾವರ್ತನೆ ಗೊಳ್ಳುವಹಾಗೆ ಇಂದ್ರನ ಅನುಗ್ರಹ ಬುದ್ಧಿ ಮತ್ತು ಧನ ಏಣಿಸಲಾಗದಷ್ಟಿದೆ. ಉತ್ತಮ ಶ್ರೇಷ್ಠ ಅಧಿಕ ಮಹತ್ವದ ಪ್ರಭೂತ ಸೋಮವು ವೇಗವಾಗಿ ಇಂದ್ರನನ್ನು ಸಮೀಪಿಸುತ್ತದೆ.

- ಉತ್ಪನ್ನನಾದೊಡನೆಯೇ ದ್ಯಾವಾಪೃಥ್ವಿಗಳು ಇಂದ್ರನನ್ನು ನಮಸ್ಕರಿಸಿದವು. ಹಾಗೂ ಇಂದ್ರನು ದ್ಯಾವಾಪೃಥ್ವಿಗಳ ನಡುವಿನ ಎಲ್ಲಾ ಶತ್ರುಗಳನ್ನು ಹಿಂಸಿಸಿ ನಾಶಮಾಡಿದನು. ಉಷೆ ಮತ್ತು ಆದಿತ್ಯರ ಮೂಲಕ ತನ್ನ ಸಂಬಂಧವನ್ನು ಕೆಳಗಿನ ಲೋಕದೊಡನೆ ಇಟ್ಟುಕೊಂಡಿದ್ದಾನೆ. ಸೂರ್ಯ ರೂಪನಿಂದ ದಸ್ಯುಗಳನ್ನು ಪರಾಭವಗೊಳಿಸಿದ್ದಾನೆ.

- ಋಷಿಗಳಿಗಾಗಿ ಅಸುರರನ್ನು ನಾಶಮಾಡಿದ್ದಾನೆ. ಋಷಿಗಳ ಸ್ತುತಿ ಆಲಿಸಿ ಮಹತ್ವದ ಧನವನ್ನು ನೀಡಿದ್ದಾನೆ. ಋಷಿಗಳು ಮತ್ತು ಅನೇಕರಿಂದ ವಿಶೇಷವಾಗಿ ಪೂಜಿತನಾಗಿದ್ದಾನೆ. ಋತ್ವಿಜರೆಲ್ಲರಿಗೂ ಸಂಬಂಧಿಗಳೆಲ್ಲರಿಗೂ ಸ್ತೋತೃಗಳಿಗೂ ಉದಾರ ದನ-ದಾನಿ ಎಲ್ಲರ ಅಂತರ್ಯಾಮಿ ಸಮೀಪ ಬಂಧು, ಸ್ತುತಿ ಪ್ರಿಯ ಸತ್ಯಾತ್ಮಕ ಸಕಲ ಲೋಕ ನಿರ್ಮಾಪಕ ಸಕಲದೇವತಾಸ್ವರೂಪಿ, ಸೋಮಪಾನಿ. ಎಲ್ಲರಿಂದಲೂ ಆಹ್ವಾನಿತ ಸ್ತುತಿತ ಪೂಜಿತ ಎಂದೆಲ್ಲಾ ಹೇಳಿದ್ದಾರೆ.

- ಎಡಗೈಯಲ್ಲಿ ಶತ್ರು ಸದೆ ಬಡಿದು ಬಲಗೈಯಲ್ಲಿ ಹವಿಸ್ಸು ಸ್ವೀಕರಿಸುತ್ತಾನೆ. ಕುಬೇರನಿಗೂ ಅದಿಪತಿ ಕಪಿಂಜಲ ರೂಪಿನಲ್ಲಿ ಇಂದ್ರನನ್ನು ಸ್ತುತಿಸಿದ್ದಾರೆ. ಕಿವಿಗಳಿಂದ ಕೇಳುವ ಶಕ್ತಿ ಇಂದ್ರನದೆ, ಕಪಟ ರಾಕ್ಷಸರನ್ನು ಕಪಟರಿಂದಲೇ ಕೊಲ್ಲುತ್ತಾನೆ. ಕೋಪಕ್ಕೆ ಭೂಮಿ ಆಕಾಶಗಳು ನಡುಗುತ್ತವೆ. ಕಠಿಣ ಪರ್ವತಗಳ ನಡುವೆ ಸೋಮವು ಯತ್ಯೇಚ್ಛವಾಗಿ ಇಂದ್ರನ ಪಾನಾರ್ಥವಾಗಿ ಬೆಳೆದಿರುತ್ತವೆ.

- ಎಲ್ಲ ಕರ್ಮಗಳಿಗೂ ಅಧಿಕಾರಿ, ಕುದುರೆಗಳು ಹಳದಿ ಬಣ್ಣದವು, ಕುರುಡನು ಎಲ್ಲವನ್ನೂ ನೋಡುವಂತೆ ಮಾಡುತ್ತಾನೆ. ಧನವಂತ ಧನದೊಡೆಯ, ಧನದಾತ, ಕರ್ಮಗಳ್ಳುಳ್ಳ ಮರುತ್ತುಗಳು ಇಂದ್ರನಿಗೆ ಬಲದಾಯಕರು, ಕಾಮವರ್ಷಕ ಇಂದ್ರನು ಶತ್ರುಗಳನ್ನು ನಾಶಮಾಡುತ್ತಾನೆ. ಕ್ಷೀರಾದ್ಯಾಶ್ರಯಣ ಯುಕ್ತ ಸೋಮರಸ ಮತ್ತು ಶಸ್ತ್ರ ರೂಪ ಸ್ತುತಿಗಳು ಇಂದ್ರನಿಗೆ ಆತ್ಮ ತೃಪ್ತಿ ಕೊಟ್ಟು ಪ್ರಭಾವಯುತನನ್ನಾಗಿ ಮಾಡುತ್ತವೆ. ಕತ್ತಲೆ ಚದುರಿಸಿ ಮೇಘವನ್ನು ಸೀಳಿ ಮಳೆ ಬರಿಸುತ್ತಾನೆ.

- ಗೋವಿನ ಕೆಚ್ಚಲಿನಲ್ಲಿ ಹಾಲು ತುಂಬುವಂತೆ ಇದ್ರನು ಸೋಮರಸವನ್ನು ಉದರದಲ್ಲಿ ತುಂಬಿಕೊಂಡಿದ್ದಾನೆ. ಗುಹೆಯಲ್ಲಿ ಗೋವುಗಳು ಸೆರೆಯುಡಿಯಲ್ಪಟ್ಟದ್ದವು, ಇಂದ್ರನಿಗೆ ಹೆದರಿ ಪರ್ವತರಾಜನು ಗೋವುಗಳನ್ನು ಬಿಟ್ಟುಬಿಟ್ಟನು, ಗೋಸಂಪತ್ತನ್ನು ರಕ್ಷಿಸಿ ಯಾಜ್ಞಿಕರಿಗೆ ದಾನಮಾಡಿದನು. ಇಂದ್ರನು ಗೋ ರೂಪಿಯಾಗಿದ್ದಾನೆ.

- ಜನ್ಮ ಪಡೆದ ಸಕಲರಿಗೂ ಪ್ರಭು ಇಂದ್ರ ಜನಹಿತ ಬಯಸುವವನು ಯಜಮಾನರಿಗೆ ಗೂಢವಾಗಿ ಧನ ಇಟ್ಟಿರುವವನು ಇಂದ್ರ, ಶತ್ರು ಪಟ್ಟಣವನ್ನು ನಾಶಮಾಡಿ ಆ ಧನವನ್ನು ಅಪೇಕ್ಷಿತ ಯಜಮಾನರಿಗೆ ಕೊಡುತ್ತಾನೆ. ಜಲ ರಹಿತ ನದಿಗಳನ್ನು ಜಲ ಭರಿತವನ್ನಾಗಿ ಮಾಡಿದನು. ದೇವ ಶ್ರೇಷ್ಠ, ಧನಯುಕ್ತ ಧನಾಧಿಪತಿ, ದೈವಯಜ್ಞ ನಡೆಯುವ ಸ್ಥಳಕ್ಕೆ ಒಂದೇ ಮೊಹೂರ್ತದಲ್ಲಿ ಅಶ್ವರಥದಿಂದ ಬಂದು ಭಾಗಿಯಾಗುತ್ತಾನೆ. ದಿವೋ ದಾಸನಿಗೆ ಅನೇಕ ರಕ್ಷಣೆಗಳನ್ನು ಕೊಟ್ಟಿದ್ದಾನೆ. ದೇವಪೂಜಿತ ಯಜಮಾನನಿಗಾಗಿ ಅಪೇಕ್ಷಿತ ಧನವನ್ನು ಸಂಪಾದಿಸಿಕೊಡುತ್ತಾನೆ. ದ್ಯಾವಾಪೃಥ್ವಿಗಳು ಮತ್ತು ದೇವತೆಗಳು ಇಂದ್ರನ ಮಹಿಮೆಯನ್ನು ಪ್ರಶಂಸಿದ್ದಾರೆ.

- ಧನ ವೀರ ಪುತ್ರರನ್ನು ನೀಡುತ್ತಾನೆ.. ದೇವ ಗಂಧರ್ವಾದಿ ಪಂಚಜನರಿಗೂ ರಕ್ಷಕ, ದಾನ ರಹಿತ ಲೋಭಿಯ ಅನ್ನ ಸಂಪತ್ತನ್ನು ಅಪಹರಿಸುತ್ತಾನೆ. ದೇವತೆಗಳು ತೃಪ್ತಿಕರ ಕರ್ಮಮಾಡಿ ಹವಿಸ್ಸು ಅರ್ಪಿಸುವವರಿಗೆ ಸುಖ ನೀಡುತ್ತಾರೆ. ದೇವಮಾತ ಅಧಿತಿಯು ಇಂದ್ರನಿಂದಾಗಿ ಅನೇಕರಿಂದ ಪ್ರಶಂಶಿತಳಾಗಿದ್ದಾಳೆ. ದಾವಾಗ್ನಿಯಂತೆ ಸೂರ್ಯಕಿರಣಗಳ ಮೂಲಕ ಅಸುರರನ್ನು ನಾಶಮಾಡಿದ್ದಾನೆ.

- ದ್ಯಾವಾ ಪೃಥ್ವಿಗಳು ಇಂದ್ರನಿಂದ ನಿರ್ಮಿತವಾದವು.ದೇವ ಮಾನವರೆಲ್ಲರೂ ಧನ ಲಾಭಾರ್ಥವಾಗಿ ಧನಯುಕ್ತ ಇಂದ್ರನನ್ನೇ ಆಶ್ರಯಿಸಿದ್ದಾನೆ. ದೇವ ಶ್ರೇಷ್ಠ ಧನಯುಕ್ತ ಶತ್ರುನಾಶಕ, ಧನಕ್ಕೆ ಸ್ವರ್ಗಕ್ಕೆ ಪ್ರಭು, ದ್ಯುಲೋಕವನ್ನು ಮಾಯಾವಿ ರಾಕ್ಷಸರಿಂದ ರಕ್ಷಿಸಿದ್ದಾನೆ.

- ದೇವತೆಗಳ ನಾಯಿಯ ಹೆಸರು ಸುರಮೆ ದೃಢ ಪರ್ವತಗಳು ಇಂದ್ರನಿಗೆ ಹೆದರಿ ನಡಗುತ್ತವೆ. ದೇವತೆಗಳಿಗೆ ಅಭಯದಾತ, ನಾನಾರೂಪಿ, ದೂರದೇಶದಿಂದ ಕುದುರೆಗಳು (ಹರಿ) ಹತ್ತಿರ ಕರೆತರುತ್ತವೆ. ಸಾಮಗಾನದಿಂದ ದೇವತೆಗಳನ್ನು ತೃಪ್ತಿಗೊಳಿಸುತ್ತಾರೆ. ದ್ಯಾವಾ ಪೃಥ್ವಿಗಳನ್ನು ಸ್ಥಾಪಿಸಿ ಪರ್ವತದಂತೆ ವಿಸ್ತಾರರೂಪಿ ದ್ಯುಲೋಕದಿಂದ ಬಂದು ಸೋಮಪಾನಮಾಡಿ ವೃದ್ಧಿ ಹೊಂದುತ್ತಾನೆ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

◇ ಪ್ರಾರ್ಥಿಸಿದವರಿಗೆ ಅನುಗ್ರಹಿಸುತ್ತಾನೆ. ಪ್ರಾಣಿ ಸಮೂಹ ಸೃಷ್ಟಿಸಿದವನು ಇಂದ್ರನೆ. ಪ್ರೀತಿ ಆದರಗಳಿಂದ ಸ್ತುತಿಸುವವರೆಲ್ಲರನ್ನು ಇಂದ್ರನು ತನ್ನ ಬಂಧುಗಳೇ ಎಂದು ತಿಳಿದಿದ್ದಾನೆ. ಪಾಪಿಗಳನ್ನು ಅಹಂಕಾರಿಗಳನ್ನು ಕೊಂದು ಶತ್ರು ಕ್ಷಯಕಾರಕನಾಗಿದ್ದಾನೆ. ಪೃಥ್ವಿಯನ್ನು ಅಸುರರ ಪೀಡೆಗಳಿಂದ ರಕ್ಷಿಸುತ್ತಾನೆ. ಪ್ರತಿ ಯಜ್ಞ ಅಥವಾ ಯುದ್ಧದಲ್ಲಿ ಸ್ವತಃ ಅಗೋಚರನಾಗಿದ್ದು ರಕ್ಷಿಸುತ್ತಾನೆ. ಪೃಥ್ವಿಯು ಪೈರು ಪಚ್ಚೆಗಳಿಂದ ತುಂಬಿ ತುಳುಕಾಡುತ್ತಿರುವಂತೆ ಮಾಡಿದ್ದಾನೆ.

◇ ಪ್ರಚಂಡ ರಾಕ್ಷಸರನ್ನು ನಾಶಮಾಡುತ್ತಾನೆ. ಪರ್ವತವನ್ನು ಬೇಕಾದರು ಚಲಿಸುವಂತೆ ಮಾಡುತ್ತಾನೆ ಪ್ರಾಣಿಗಳ ಅಹಿಂಸಕ. ಪಿತೃ ಪಿತಾಮಹರಿಗೆ ಯಾವಾಗಲು ಸುಖಕಾರಕನಾಗಿರುತ್ತಾನೆ. ಪ್ರಕಾಶ ರಹಿತ ಲೋಕವನ್ನು ತೇಜಸ್ಸಿನಿಂದ ವ್ಯಾಪಿಸಿ ಪ್ರಕಾಶಗೊಳಿಸುತ್ತಾನೆ. ಪ್ರಜಾ ಹಿತಕ್ಕಾಗಿ ಭಕ್ತರ ಅಭಿಮುಖನಾಗುತ್ತಾನೆ. ಪೃಥ್ವಿಯನ್ನು ಚೈತನ್ಯ ಶೀಲವನ್ನಾಗಿ ಮಾಡಿದವನು ಇಂದ್ರ. ಪಂಚ ಜನರನ್ನು ಅವರವರ ಕರ್ಮಗಳಲ್ಲಿ ಪ್ರಚೋದಿಸುತ್ತಾನೆ.

◇ ಪ್ರಾಚೀನ ಋಷಿಗಳು ಸ್ತುತಿಗಳಿಂದ ಇಂದ್ರನನ್ನು ತೃಪ್ತಗೊಳಿಸಿದ್ದಾನೆ. ಪುರಾತನ ಅಸುರರು ತಮ್ಮ ಬಲಕ್ಕಿಂತ ಇಂದ್ರನ ಬಲವೇ ಅತ್ಯಧಿಕ ಎಂದು ನಂಬಿದ್ದರು. ಪ್ರೀತಿಯ ತಂದೆಯಂತೆ ಯಜಮಾನನ ಬಂಧುವಾಗಿರುತ್ತಾನೆ. ಪುತ್ರರು ತಂದೆಯ ಸಹಾಯ ಅಪೇಕ್ಷಿಸುವಂತೆ ಇಂದ್ರನ ಸಹಾಯಯಾವಾಗಲು ಬಯಸುತ್ತಾರೆ. ಪಶುಗಳಿಗೆ ಆಹಾರ ಒದಗಿಸಿ ಯಾಜ್ಞಿಕರಿಗೆ ಕ್ಷೀರ ದೊರೆಯುವಂತೆ ಮಾಡಿದ್ದಾನೆ.

◇ ಪಾಪ ಪರಿಹಾರಕ ಪ್ರಬಲ ಶತ್ರುಗಳನ್ನು ಇಂದ್ರ ಒಬ್ಬನೇ ನಾಶಮಾಡಬಲ್ಲನು. ಪೃಥ್ವಿಯ ಸಂಪತ್ತನ್ನು ಉತ್ಕೃಷ್ಟ ಮಾಡುತ್ತಾನೆ. ಪಣಿಗಳನ್ನು ಹುಡುಕುವುದರಲ್ಲಿ ಅಂಗೀರಸರಿಗೆ ಇಂದ್ರನ ಕೋಪವು ಸಹಾಯ ಮಾಡಿತು. ಆದರಿಂದ ಅಂಗೀರಸರಿಗೆ ಆನಂದವಾಯಿತು.

◇ ಭಕ್ತರಿಗೆ ಧನ ನೀಡುತ್ತಾನೆ. ಉದಕ, ಧನ, ಗೋವು ಹಿರಣ್ಯ ಇಷ್ಟಾರ್ಥಗಳನ್ನು ನೀಡುತ್ತಾನೆ. ಭಕ್ತರಿಂದ ಅರ್ಪಿಸಲ್ಪಟ್ಟ ಸ್ತುತಿಗಳಿಂದ ತೃಪ್ತನಾಗಿ ಅವರಿಗೆ ಅನ್ನ, ವೃಷ್ಟಿ ಅನುಗ್ರಹಿಸಿ ಪಾಪ ಪರಿಹರಿಸುತ್ತಾನೆ. ಭಯಂಕರ ಶತ್ರುಗಳು ಹೆದರಿ ನಡುಗುತ್ತಾರೆ. ಬೆಂಗಾಡು ಭೂಮಿಯಲ್ಲಿ ನದಿಗಳು ತುಂಬಿ ಹರಿದು ಅಲ್ಲಿಯ ಪ್ರಾಣಿಗಳಿಗೆ ಅನ್ನ, ಉದಕ ದೊರೆಯುವಂತೆ ಮಾಡಿದ್ದಾನೆ.

◇ ಬೃಹಸ್ಪತಿಗೆ ಪ್ರಥಮ ಸ್ಥಾನಕೊಟ್ಟು ಪೂಜಿಸುವವರನ್ನು ವಿಜಯಿಗಳನ್ನಾಗಿ ಮಾಡುತ್ತಾನೆ. ಭಕ್ತ ರಕ್ಷಣಾರ್ಥವಾಗಿ ವೇಗವಾಗಿ ಹೊಂಬಣ್ಣದ ಅಶ್ವರಥದಲ್ಲಿ ಬರುತ್ತಾನೆ. ಭಕ್ತರು ಧನ, ಅಭಾವದಿಂದ ನಶಿಸದಂತೆ ನೋಡಿಕೊಳ್ಳುತ್ತಾನೆ. ಬೃಹಸ್ಪತಿಯ ರೂಪ ಸ್ತೋತ್ರಕ್ಕೂ ಇಂದ್ರನು ಪಾತ್ರನು. ಭೂತ, ಭವಿಷ್ಯತ್, ತತ್ವಗಳನ್ನು ಉತ್ಪತ್ತಿಮಾಡಿದ್ದಾನೆ.

◇ ಮಾನವರ ಹಿತ ಕಾರ್ಯಗಳನ್ನು ಅರಿತು ಸಕಲ ರಕ್ಷಣೆಗಳಿಂದ ಕೂಡಿಕೊಂಡು ಸಂತೋಷ ಪ್ರಕಟಿಸುತ್ತಾನೆ. ಮಾನವರಲ್ಲಿ ದಯೆ ತೋರುವವನು ಇಂದ್ರನೊಬ್ಬನೆ ಮಿತ್ರಾ ವರುಣರೂ ಇಂದ್ರನನ್ನು ಸ್ತುತಿಸುತ್ತಾರೆ. ಮಾನವ ಅಪೇಕ್ಷಿತ ವಸ್ತುಗಳೆಲ್ಲವೂ ಇಂದ್ರನ ಬಳಿ ಇದೆ. ಅವರಿಗೆ ಹಿತಕರವಾದ ಕೆಲಸಗಳನ್ನೇ ಮಾಡುತ್ತಾನೆ. ಮಹತ್ ಬಲದಿಂದ ಶತ್ರುಗಳನ್ನು ಕಂಪಿಸುವಂತೆ ಮಾಡಿ ಅವರನ್ನು ದುರ್ಬಲಗೊಳಿಸುತ್ತಾನೆ. ಮಾತರಿಶ್ವನ ಪುತ್ರ ದಧೀಚಿಗಾಗಿ ವೃಷ್ಟಿಸಿದನು. ಮನುಷರಿಗೆ ಮಾರ್ಗಗಳು ಸುಗಮವಾಗಿ ಇರುವಂತೆ ಮಾಡಿದ್ದಾನೆ ಇಂದ್ರ. ಮೇಘಗಳನ್ನು ಪ್ರೇರಿಸಿ ಮಳೆ ಸುರಿಸಿ ಆಹಾರ ಧಾನ್ಯಗಳು ಲಭಿಸುವಂತೆ ಮಾಡಿದ್ದಾನೆ.

◇ ಮಾಯಾವಿ "ಶಂಬರಾಸುರ"ರನ್ನು ಅವನ ನೂರಾರು ಪಟ್ಟಣಗಳನ್ನು ನಾಶಮಾಡಿದ್ದಾನೆ. ಮಾನವರ ಹೃದಯ ಗೆದ್ದವನು ಇಂದ್ರ, ಅವರಿಗೆ ಉದಕ ನೀಡಿದವನು ಇಂದ್ರನೇ, ಮಳೆ ಸುರಿಸುವುದರಿಂದಲೇ ಇಂದ್ರನು ಇಷ್ಟಾರ್ಥಪ್ರದ ಆಗಿದ್ದಾನೆ. ಮರುತ್ತುಗಳನ್ನು ಒಳಗೂಡಿ ಶತ್ರುಗಳನ್ನು ಸದೆ ಬಡೆಯುತ್ತಾನೆ.

◇ ಮನುವನ್ನು ಮಾನವರಿಗೆ ಶತ್ರುನಾಶಕ್ಕಾಗಿ ಬಲಶಾಲಿಯನ್ನಾಗಿ ಮಾಡಿದ್ದಾನೆ. ಮಂತ್ರ ಪಠಿಸುವವರು ವೇದ ಸಾನಿಧ್ಯ ಪಡೆಯುತ್ತಾರೆ. ಮಾಯಾವಿ ವಂಚಕರನ್ನು ರಾಕ್ಷಸರನ್ನು ನಾಶಮಾಡುತ್ತಾನೆ ಮೇಧಾವಿ ಸ್ತೋತೃಗಳ ಯಜ್ಞಾಭಿಮುಖ ಹರುಷದಿಂದ ಬಂದು ರಕ್ಷಿಸುತ್ತಾನೆ. ಮಾನವರಂತೆ ಪ್ರತಿ ದಿನವು ವೃದ್ಧಿಹೊಂದುವವನು. ಇಂದ್ರಾಗ್ನಿಗಳ ಬಲದಿಂದ ಶತ್ರುಗಳ ನಾಶ ಆಗುತ್ತದೆ.

◇ ಯಾಜ್ಞಿಕರ ಬುದ್ಧಿಯನ್ನು ವೃದ್ಧಿಸುತ್ತಾನೆ. ಅವರ ಮಿತ್ರನಾಗಿರುತ್ತಾನೆ, ಯಾಜ್ಞಿಕರನ್ನು ಯಾರು ಹಿಂಸಿಸದಂತೆ ರಕ್ಷಿಸಿ ಅವರಿಗೆ ಅಶ್ವ, ಗೋವು, ಧನ ಸುವರ್ಣಗಳನ್ನು ನೀಡುತ್ತಾನೆ. ಯುದ್ಧದಲ್ಲಿ ದೊರೆತದ್ದನ್ನೆಲ್ಲಾ ಅವರಿಗೆ ಹಂಚುತ್ತಾನೆ ಯಜ್ಞಕರ್ತರ ಅಭಿಮತ ಅರಿತು ಅವರನ್ನು ಅನುಗ್ರಹಿಸುತ್ತಾನೆ. ಯಜಮಾನರನ್ನು ಐಶ್ವರ್ಯವಂತರನ್ನಾಗಿ ಮಾಡುತ್ತಾನೆ ಯಜಮಾನರಿಂದ ಪ್ರಾರ್ಥಿತನಾದಗ ಸಹಾಯಕನಾಗುತ್ತಾನೆ.

◇ ಯುದ್ಧದಲ್ಲಿ ಅಪ್ರತಿಹತ ಯಜಮಾನರಿಗೆ ಧನದಾತ ಯಾರಿಗೂ ಬಗ್ಗದ ಶತ್ರುಗಳನ್ನು ರಾಕ್ಷಸರನ್ನು ಶಿಕ್ಷಿಸಲು ತನ್ನ ಆಯುಧ ಹರಿತಮಾಡಿಕೊಳ್ಳುತ್ತಾನೆ. ಯೋಗ್ಯ ರೀತಿಯಿಂದ ಹವಿಸ್ಸು ಅರ್ಪಿಸುತ್ತಾರೆ. ಯೋಗ್ಯರೀತಿಯಿಂದ ಹವಿಸ್ಸು ಅರ್ಪಿಸಿದರೇ ತಿರಸ್ಕರಿಸದೆ ಸ್ವೀಕರಿಸುತ್ತಾನೆ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

◇ ಯಾರಿಂದ ಸ್ತುತಿತ ನಾಗುವನೋ ಅವರ ಧನ ವೃದ್ಧಿಸುತ್ತಾನೆ. ಅವರ ಪುತ್ರರನ್ನು ರಕ್ಷಿಸುತ್ತಾನೆ. ಯಾರು ಯಜ್ಞ ಮಾಡುವರೋ ಅವರು ದುಃಖಿತರಾಗುವುದಿಲ್ಲ ಅಂತಹವರಿಗೆ ಶತ್ರು ಭಯವು ಇರುವುದಿಲ್ಲ. ಯಜ್ಞ ಸ್ಥಾನದಲ್ಲಿ ಇಂದ್ರ ರೂಪಿಯಾಗಿರುತ್ತಾನೆ. ಯಾಗಗಳು ಶಸ್ತ್ರ ಮಂತ್ರ ಸೋಮಗಳು ಇಂದ್ರನನ್ನು ಹೆಚ್ಚು ಬೆಳೆಯುವಂತೆ ಮಾಡುತ್ತದೆ. ಯಜಮಾನರು ಶಕ್ತಿಯುತರಾಗಿದ್ದರೆ ಅವರುಗಳಿಗೆ ಗೋ ಸಂಪತ್ತು ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ.

◇ ಯಜಮಾನರ ಹತ್ತಿರ ದೂರದ ಸಂಬಂಧಿಗಳಿಂದ ತಯಾರಿಸಿದ ಸೋಮ ರಸ ಇಂದ್ರನಿಗೆ ಹರ್ಷಕಾರಕ. ಯಜ್ಞಗಳಿಂದ ಇಂದ್ರನು ತೃಪ್ತನಾಗುತ್ತಾನೆ. ಯಾಜ್ಞಿಕರ ಸ್ತುತಿಕರ್ತಗ ಸ್ತುತಿಗಳು ಇಂದ್ರನಿಗೆ ಪ್ರೀತಿ ಪಾತ್ರವಾಗಿ ಇರುತ್ತದೆ. ಯಜಮಾನರು ಯಜ್ಞಾನುಷ್ಠಾನ ಫಲವನ್ನು ಪಡೆಯುತ್ತಾರೆ. ಯಜ್ಞ ಪ್ರದೇಶಕ್ಕೆ ಹೋಗಿ ಗೋವುಗಳಿಗೆ ಆಹಾರ ಒದಗಿಸಿ ಸೋಮಪಾನ ಮಾಡುತ್ತಾನೆ.

◇ ರಾಕ್ಷಸರ ತೊಂದರೆಗಳಿಂದ ಭಕ್ತರನ್ನು ತಪ್ಪದೆ ರಕ್ಷಿಸುತ್ತಾನೆ. ರಥವೇರಿ ವಜ್ರಾಯುಧ ಹಿಡಿದು ವಂಚಕ ಶತ್ರುಗಳನ್ನು ಎದುರಿಸಿ ನಾಶಮಾಡುತ್ತಾನೆ.

◇ ರಾಕ್ಷಸರನ್ನು ದ್ರೋಹಿಗಳನ್ನು ತನ್ನ ಪ್ರಭೆಯಿಂದ ನಾಶಮಾಡುತ್ತಾನೆ. ರಾಜರುಗಳಿಗಾಗಿ ಭೂಮಿಯನ್ನು ಅನ್ನ, ಉದಕಗಳಿಂದ ತುಂಬಿದ್ದಾನೆ. ರಾಕ್ಷಸ ಸಂಹಾರ ನಂತರ ದೇವತೆಗಳು ಇಂದ್ರನನ್ನು ಪೂಜಿಸಿದರು. ರಾಕ್ಷಸರ ವಧೆಯನಂತರ ತಡೆ ಹಿಡಿಯಲ್ಪಟ್ಟ ಉದಕವು ಸರಾಗವಾಗಿ ಹರಿದು ಸಮುದ್ರ ಸೇರುವಂತೆ ಮಾಡುವನು.

◇ ವಜ್ರಾಯುಧ ಹಿಡಿದಾದ ಮೇಘಗಳು ಹೆದರುತ್ತವೆ. ವಿಚಿತ್ರ ಕಾಂತಿಯುತ, ವೇದರೂಪಿ, ವಿಷ್ಣುವಿನೊಂದಿಗೆ ಹವಿಸ್ಸು ಸ್ವೀಕರಿಸುತ್ತಾನೆ. ವೃಷ್ಟಿಗಾಗಿ ಪ್ರಾರ್ಥಿಸಿದರೆ ವೃಷ್ಟಿ ಸುರಿಸುತ್ತಾನೆ. ವಿಶ್ವಕ್ಕೆ ಧನಕ್ಕೆ ಸ್ವರ್ಗಕ್ಕೆ ಪ್ರಭು ಇಂದ್ರ, ವಜ್ರಾಯುಧಕ್ಕೆ ಹೆದರಿ ಮೇಘಗಳು ಮಳೆ ಸುರಿಸುತ್ತವೆ ಲೋಕವನ್ನು ಸುತ್ತುತ್ತಾ ಎಲ್ಲರನ್ನು ರಕ್ಷಿಸುತ್ತಾನೆ. ವಿವಿಧ ಬಣ್ಣದ ಗೋವುಗಳಲ್ಲಿ ಇರುವ ಕ್ಷೀರವೆಲ್ಲವೂ ಶುದ್ಧ ಬಿಳುಪು ಆಗುವಂತೆ ಮಾಡಿದವನು ಇಂದ್ರ.

◇ ವಜ್ರಾಯುಧ ಹಿಡಿದು ಶತ್ರುಗಳನ್ನು ಅವರ ಪಟ್ಟಣಗಳನ್ನು ನಾಶಮಾಡುತ್ತಾನೆ. (ವಜ್ರಾಯುಧವನ್ನು ಸಕಾಲದಲ್ಲಿ ತ್ವಷ್ಟನು ನೂರು ಹಲಗುಳ್ಳದಾದದನ್ನು ನಿರ್ಮಿಸಿಕೊಟ್ಟನು) ವಸತಿ ದಾಯಕ ವೃಷ್ಟಿ ಕರ್ಮಿ, ವನ ಗಜದಂತಿದ್ದಾನೆ. ವಜ್ರಾಯುಧದಾರಿ ವಜ್ರಾಯುಧವು ಇಂದ್ರನ ಬಾಹುಗಳಲ್ಲಿ ಪ್ರಕಾಶಿಸುತ್ತವೆ.

◇ ಶಿರದಲ್ಲಿ ದ್ಯುಲೋಕ ಎತ್ತಿಹಿಡಿದ್ದಾನೆ, ಶರೀರದಲ್ಲಿ ತೇಜಸ್ಸು, ಕೈಯಲ್ಲಿ ವಜ್ರಯುಧದಾರಿಯಾಗಿದ್ದಾನೆ. ಶತ್ರುಗಳನ್ನು ಸದೆ ಬಡಿದು ಅವರ ಧನವನ್ನು ವಶ ಪಡಿಸಿಕೊಳ್ಳುತ್ತಾನೆ. ಶ್ಯೇನಾಪಕ್ಷಿಯು ಇಂದ್ರನಿಗಾಗಿ ಸೋಮವನ್ನು ತಂದಿತು. ಶ್ರದ್ಧೆಯಿಂದ ಇಂದ್ರ ಪ್ರೀಯ ಕರ್ಮಗಳನ್ನು ಮಾಡಿದವರನ್ನು ರಕ್ಷಿಸುತ್ತಾನೆ. ಶ್ರೇಷ್ಠ ಕರ್ಮಗಳಿಗಾಗಿ ಹಾಗೂ ಬೋಗಸಾಧನೆಗಾಗಿ ಬೇಕಾಗುವ ಸಕಲವೂ ಇಂದ್ರನಲ್ಲಿದೆ.

◇ ಶತ್ರು ಧನಕ್ಕೆ ಪ್ರಭು ಇಂದ್ರ ಮಿತ್ರರನ್ನು ಹಿಂಸಿಸದವನು ಶಕ್ತಿಯ ಪುತ್ರ (ಶಚಿ) ಪತಿ ಶವಣ ಶಕ್ತಿ ಇಂದ್ರನದೇ ಶತ್ರುಗಳನ್ನು ಮುನುಗ್ಗಿ ಧ್ವಂಸಮಾಡುತ್ತಾನೆ. ಶತ್ರು ಜನರ ಮಧ್ಯೆಯು ಪಂಚ ಜನರನ್ನು ರಕ್ಷಿಸುತ್ತಾನೆ. ಶುದ್ಧ ವಸ್ತುಗಳನ್ನೇ ದಾನಮಾಡುವ ಉದಾರ ದಾನಿ ಇಂದ್ರ. ಶತ್ರು ಬಲ ಬಲ್ಲವನು ಶ್ಯೇನ ಪಕ್ಷಿಯಂತೆ ವೇಗವುಳ್ಳವನು ಶೇಖರಿತವಾದ ಸೋಮ ಪಾನಕ್ಕೆ ಯೋಗ್ಯ ಯಜ್ಞದಲ್ಲಿ ಕುದುರೆಯು ರಥವನ್ನು ವಹಿಸುತ್ತದೆ.

◇ ಅಶ್ವವನ್ನು ಮೈಸವರಿ ಪ್ರಶಂಸಿಸಿದಾಗ ಯುದ್ಧದಲ್ಲಿ ಮುನ್ನುಗ್ಗುತ್ತದೆ. ಶತ್ರುಗಳನ್ನು ಮರುತ್ತುಗಳ ಒಳಗೂಡಿ ಅಳುವಂತೆ ಮಾಡಿ ಸಂಹರಿಸುತ್ತಾನೆ.

◇ ಸೋಮದ ಗಾಡವಾದ ಸುಖ ಸ್ವರೂಪವನ್ನು ಇಂದ್ರನು ಮಾತ್ರ ಬಲ್ಲನು. ಸ್ತೋತ್ರಗಳಿಂದ ಸ್ತುತಿಸಲ್ಪಡುವವನು ಸುಂದರ ಸ್ತೋತ್ರಪ್ರಿಯ ಸಮುದ್ರದಂತೆ ಸರ್ವಯಾಪೀ, ಸ್ತುತಿ ಕೇಳಬಯಸಿದಾಗ ಇಂದ್ರನೇ ಸ್ತುತಿಸುವಂತೆ ಮಾಡುತ್ತಾನೆ. ಸೂರ್ಯ ರೂಪಿನಿಂದ ಸಕಲ ಭೂತ ಜಾತಗಳಿಗೂ ಪ್ರಭು ಸೂರ್ಯ ಪ್ರಕಾಶದಿಂದ ಪ್ರಾಣಿಗಳೂ ತಮ್ಮ ತಮ್ಮ ಕೆಲಸಗಳನ್ನು ಮಾಡುವಂತೆ ಮಾಡಿದ್ದಾನೆ.

◇ ಸೂರ್ಯ, ವರುಣ. ನದಿಗಳು ಎಲ್ಲರೂ ಇಂದ್ರನ ಆಜ್ಞಾವರ್ತಿಗಳೇ, ಸೂರ್ಯ ಚಂದ್ರರು ಇಂದ್ರನಲ್ಲಿ ಇಟ್ಟಿರುವ ಶ್ರದ್ಧೆಯಿಂದ ಶಾಶ್ವತ ಗಮನ ಹೊಂದಿದ್ದಾರೆ. ಸ್ವರ್ಗದಲ್ಲಿ ದುಷ್ಟರಿಗೆ ಪ್ರವೇಶವಿಲ್ಲ ಸ್ತೋತ್ರಮಾಡಿದವರಿಗೆ ಈ ಹಿಂದೆ ಎಷ್ಟೇ ಧನ ಕೊಟ್ಟದ್ದರು ಸಹ ಲೆಕ್ಕಿಸದೇ ಈಗಲೂ ಕೊಡುತ್ತಾನೆ. ಸೋಮದಿಂದಲೇ ಹರ್ಷಿತನಾಗುತ್ತಾನೆ. ಮಳೆಗರಿದು ಸಮುದ್ರವನ್ನು ತುಂಬುತ್ತಾನೆ.

◇ ಸೋಮವನ್ನು ಗಟಗಟ ಕುಡಿಯುತ್ತಾನೆ. ನಂತರ ವಜ್ರಾಯುಧದಾರಿಯಾಗುತ್ತಾನೆ. ಸ್ತುತಿಗಳು ಸೋಮ ಸ್ವೀಕರಿಸಿದ ನಂತರವೇ ರಾಕ್ಷಸನಿಂದ ಬಚ್ಚಿಟ್ಟಿದ್ದ ಗೋವುಗಳು ಇದ್ದ ಸ್ಥಳದ ಬಾಗಿಲು ತೆರೆಯಿತು. ಸ್ತುತಿಗಳಿಂದ ಪ್ರೀತನಾಗುತ್ತಾನೆ. ಸ್ತುತಿಕರ್ತರಿಗೆ ಸಂಪತ್‌ಭರಿತನಾಗುತ್ತಾನೆ. ಸರ್ವದಾ ಭೂಮಿಯಲ್ಲಿ ಸಸ್ಯಸಂಪತ್ತು ಒಳಗೂಡಿ ಫಲ ಪುಷ್ಪಗಳನ್ನು ನೀಡುತ್ತಾನೆ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

✧ ಸ್ತುತಿಸುವವರ ಜೊತೆಯಲ್ಲೇ ಇದ್ದು ಅವರ ಇಷ್ಟಾರ್ಥಗಳನ್ನು ನೀಡಿ ಸಂತೋಷ ಪಡಿಸುತ್ತಾನೆ. ಸೋಮವು ಕಾಮ ವರ್ಷಕ ಅಪರಿಮಿತ ಆನಂದ ದಾಯಕ ತೃಪ್ತಿದಾಯಕ, ಮದಕಾರಕ. ಸುರಮೇಯು ಇಂದ್ರನ ಮುಂದೆ ಗೋವುಗಳನ್ನು ಪ್ರದರ್ಶಿಸಿದಳು ಸಿಂಹದಂತೆ ಭಯಂಕರ.

✧ ಸಕಲ ಲೋಕಗಳನ್ನು ಸುಭದ್ರ ತಳಹದಿಯ ಮೇಲೆ ಶಾಶ್ವತವಾಗಿ ನಿಲ್ಲಿಸಿದ್ದಾನೆ. ಸೂರ್ಯನ ಮಾತಾಪಿತೃಗಳಾದ ದ್ಯಾವಪೃಥ್ವಿಗಳ ಭಾರವನ್ನು ಇಂದ್ರನೇ ವಹಿಸುತ್ತಾನೆ.

✧ ಸೂರ್ಯನ ಪ್ರಭಾವ ಕುಂದಿದರೆ ಇಂದ್ರನ ಪ್ರಭಾವ ಅಧಿಕವಾಗುತ್ತದೆ. ಸ್ತುತಿಸುವವರನ್ನು ಉದಾರವಾಗಿ ಅನುಗ್ರಹಿಸುತ್ತಾನೆ

✧ ಸೋಮ ಹಿಂಡಿದವರಿಗೆ ಅಧಿಕ ಧನ ನೀಡುತ್ತಾನೆ. ಸ್ತುತಿ ಹವಿಸ್ಸು ಯಜ್ಞಕರ್ಮಗಳಿಂದ ಉಪಚರಿಸುವವರು ಪದಚ್ಯುತರಾಗುವುದಿಲ್ಲ, ಸಕಲ ರಕ್ಷಣೆಗಳೊಡನೆ ಬಂದು ಪರಿಹರಿಸಿ ರಕ್ಷಿಸುತ್ತಾನೆ.

✧ ಸಕಲ ದೇವತೆಗಳನ್ನು ಆಕಾಶದಲ್ಲಿ ಬಲವನ್ನು, ವೀರ್ಯವನ್ನು ಶತ್ರುವಧೆಗಾಗಿ ನಿಯಮಿಸಿದ್ದಾನೆ. ಸೋಮ ಅರ್ಪಿಸಿದವರಿಗೆ ತೃಪ್ತನಾಗಿ ಅವರನ್ನು ನಾನ ಕಷ್ಟಗಳಿಂದ ಪಾರು ಮಾಡುತ್ತಾನೆ.

✧ ಸಂತೃಪ್ತನಾದಗ ಧನಿಕರು ಭೂಮಿಯಲ್ಲಿ ಹೂತಿಟ್ಟಿರ ಬಹುದಾದ ಧನವನ್ನು ತಂದು ಸುರಿಯುತ್ತಾನೆ. ಸ್ತುತಿಕರ್ತರಿಗೆ ಅನ್ನ, ಅಶ್ವ ಗೋವುಗಳನ್ನು ನೀಡುತ್ತಾನೆ. ಸೂರ್ಯನನ್ನು ದ್ಯುಲೋಕದಲ್ಲಿ ಸ್ಥಾಪಿಸಿದವನು ಸಕಲ ದೇವತೆಗಳಿಗೂ ಮೊದಲೇ ಉತ್ಪನ್ನನಾದವನು. ಸಮಸ್ತ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ. ರಕ್ಷಿಸುತ್ತಾನೆ.

✧ ಸೂರ್ಯನು ಪ್ರತಿದಿನವು ಬೆಳಿಗ್ಗೆ ನಾನಾ ದಿಕ್ಕುಗಳಲ್ಲಿ ಓಡಾಡುವ ಪಕ್ಷಿಗಳ ಚಲನ ವಲನಗಳನ್ನು ತಿಳಿದಿರುವಂತೆ ಇಂದ್ರನು ಶತ್ರುಗಳ ಚಲನ ವಲನಗಳನ್ನು ತಿಳಿದಿದ್ದಾನೆ.

✧ ಸೋಮ ಅರ್ಪಿಸಿದ ಯಜಮಾನರನ್ನು ಬ್ರಾಹ್ಮಣರನ್ನು ಸಮಸ್ತ ರಕ್ಷಣೆಗಳಿಂದ ರಕ್ಷಿಸುತ್ತಾನೆ. ಸ್ವರ್ಗದಲ್ಲಿರುವ ಪಿತೃಗಳಿಗೂ ಒಳ್ಳೆಯದನ್ನೇ ಮಾಡುತ್ತಾನೆ.

✧ ಸುವರ್ಣ ಮಯ ರೂಪಿ ಇಂದ್ರ ಭಾಗ್ಯ ದೇವತೆ ಸಮಸ್ತ ಉದಕಗಳಿಗೂ ಒಡೆಯ ಸಜ್ಜನ ಪಾಲಕ ಆಕರ್ಷಕ ಕೆನ್ನೆಯವನು, ಸ್ತೋತೃಜನಕ್ಕೆ ಧನ ನೀಡಲು ಸೂರ್ಯ ರೂಪಿನಲ್ಲಿ ಉದಯಿಸುತ್ತಾನೆ.

✧ ಸೋಮ ಅರ್ಪಿಸುವವರ ವೃದ್ಧಿಕಾರಕನಾಗಿರುತ್ತಾನೆ. ಸ್ತುತಿಕರ್ತರ ಇಚ್ಛೆಯನ್ನು ಇಂದ್ರನು ಭಂಗಗೊಳಿಸುವುದಿಲ್ಲ. ಸೋಮ ಹಿಂಡದವರ ಮಿತ್ರತ್ವ ಬಯಸುವುದಿಲ್ಲ, ಸೂರ್ಯನನ್ನು ಪ್ರಕಾಶಿಸುವವನು ಇಂದ್ರನೇ ಸ್ತುತಿ ಅಪೇಕ್ಷಿಸುತ್ತಾನೆ.

✧ ಸರ್ವ ಯಜ್ಞಗಳಲ್ಲೂ ಪೂಜಿತನಾಗುತ್ತಾನೆ. ಸಕಲ ಜಗತ್ತಿಗೂ ಪ್ರಿಯನಾದವನು, ಆದಿತ್ಯ ರೂಪಿ ಐಶ್ವರ್ಯ ರೂಪಿ ಸ್ತುತಿಸುವವರನ್ನು ತನ್ನ ಸ್ನೇಹಿತರಂತೆ ಕಾಣುತ್ತಾನೆ.

✧ ಸೂರ್ಯಾತ್ಮಕ ಇಂದ್ರನು ಪರಬ್ರಹ್ಮನಿಂದಲೇ ಉತ್ಪನ್ನ ನಾದವನು. ಸ್ಥಾವರ ಜಂಗ ಮಾತ್ಮಕವಾದ ಸಕಲ ಪ್ರಾಣಿಗಳನ್ನು ವೃಷ್ಟ್ಯಾದಿಗಳಿಂದ ಪೋಷಿಸುತ್ತಾನೆ. ಸ್ವಸಾಮರ್ಥ್ಯದಿಂದ ಸಕಲ ಲೋಕಗಳನ್ನು ವ್ಯಾಪಿಸಿದ್ದಾನೆ. ಸೂರ್ಯನನ್ನು ಅಂತರಿಕ್ಷದಲ್ಲಿ ಸ್ವರ್ಗದ ಮೇಲ್ಭಾಗದಲ್ಲಿ ಸ್ಥಾಪಿಸಿ ಪ್ರಕಾಶಿಸುವಂತೆ ಮಾಡಿದ್ದಾನೆ.

✧ ಹವಿರರ್ಪಿಸಿದವರಿಗೆ ಶತ್ರುನಾಶಕ ರಕ್ಷಕ ಈಶ್ವರ, ಹುಟ್ಟಿದನಂದಿಲೇ ಶತ್ರು ರಹಿತ. ಹಾಲು, ಸೋಮ ಯುವ ಧಾನ್ಯಗಳಿಂದ ಹರ್ಷಗೊಳಿಸುತ್ತಾನೆ. ಹೊಂಬಣ್ಣದ ಆಯುಧಧಾರಿ, ಹವಿಸ್ಸಿನಿಂದ ಇಂದ್ರನು ಪ್ರವೃದ್ಧನಾಗುತ್ತಾನೆ.

✧ ಹುಟ್ಟಿದ ಕೂಡಲೇ ಸೋಮ ಪಾನ ಮಾಡಿದವನು. ಹೊಂಬಣ್ಣದ ಅಶ್ವವುಳ್ಳವನು ಹಿತರಾದವನಿಗೆ ಧನ ತುಂಬುತ್ತಾನೆ. ಹವಿಸ್ಸು ಸ್ವೀಕರಿಸುತ್ತಾನೆ. ಅಪಾರ ಧಾನ ಸುರಿಸುತ್ತಾನೆ.

✧ ಹರಿ ನಾಮಕ ಅಶ್ವಗಳು ಇಂದ್ರನನ್ನು ವಹಿಸುತ್ತವೆ. ಹವಿರರ್ಪಿಸುವವರಿಗೆ ವೃಷ್ಟಿ ಉದಕ ನೀಡುತ್ತಾನೆ. ಹಿಂದಿನಂತೆಯೇ ಈಗಲೂ ರಕ್ಷಿಸುತ್ತಿದ್ದಾನೆ. ಪಾಪ ಎಷ್ಟೇ ಇದ್ದರು ಅದನ್ನು ನಾಶಮಾಡಿ ಅವರ ಧನವಂತರನ್ನಾಗಿಸುತ್ತಾನೆ.

ಅನ್ನ ,ರಕ್ಷಣೆ, ಪುತ್ರರು. ಕಡೆಗೆ ಸ್ವರ್ಗವನ್ನು ಕರುಣಿಸುತ್ತಾನೆ ಇಂದ್ರ, ಅತಿ ಬೆಲೆ ಬಾಳುವ ಧನವನ್ನು ಗೃಹವನ್ನು ದೊರಕುವಂತೆ ಮಾಡುತ್ತಾನೆ. ಭಕ್ತರು ಅರ್ಪಿಸಿದನ್ನು ಆದರದಿಂದ ಸ್ವೀಕರಿಸಿ ಅವರನ್ನು ರಕ್ಷಿಸುತ್ತಾನೆ. ಅವನ ಭಕ್ತರನ್ನು ಯಾರೂ ಹಿಂಸಿಸಲು ಸಾಧ್ಯವಿಲ್ಲ, ಹಿಂಸಿಸ ಬಯಸುವವರನ್ನು ಬಲಹೀನರನ್ನಾಗಿ ಮಾಡುತ್ತಾನೆ.

## ಇಂದ್ರ ದೇವರು
## ಅಕ್ಷರ ಮಾಲಿಕೆ (ಸ್ತೋತ್ರ ವಿಭಾಗ)

- ಸೋಮ ಅರ್ಪಿಸುವ ಯಜಮಾನನ ಸಹಾಯರ್ಥ ಅಶ್ವ ರಥದಲ್ಲಿ ಸಕಲ ಧನ, ಸೈನ್ಯದೊಡನೆ ಅವನ ಮನೆ ಹುಡುಕಿಕೊಂಡು ಬರುತ್ತಾನೆ.
- ಸೋಮ ಹಿಂಡುವವರನ್ನು ಕಂಡರೇ ಬಲು ಪ್ರೀತಿ ಅಂತಹವರನ್ನು ಅಧಿಕ ಬಲಯುತರನ್ನಾಗಿ ಸಂಪತ್‌ಯುಕ್ತರನ್ನಾಗಿ ಮಾಡುತ್ತಾನೆ.
- ಸಜ್ಜನ ಪಾಲಕ, ಸ್ತೋತ್ರ ಪ್ರಿಯ, ಸೋಮ ಪ್ರಿಯ ಸರ್ವತ್ರ ಸಂಚಾರಿ, ಸ್ತುತಿಕರ್ತರಿಕೆ ಸುಖದಾಯಕ ಸಕಲವನ್ನೂ ನೋಡಬಲ್ಲವನು, ಸಕಲವನ್ನೂ ಅರಿತವನು, ಸ್ವದಾ ರೂಪಿ.
- ಸ್ವಶಕ್ತಿಯಿಂದ ಹತ್ತು ದಿಕ್ಕುಗಳನ್ನು ನಿಲ್ಲಿಸಿದವನು. ಸೋಮ ಹಿಂಡುವ ಅಗ್ನಿ ಜ್ವಲಿತವಾಗುವ ಯಜ್ಞ ಪ್ರಿಯ ಇಂದ್ರ, ಸರ್ವವ್ಯಾಪಿ ಎಂದಿದ್ದಾರೆ ಋಷಿಗಳು.
- ಯಜ್ಞ ಯಾಗಗಳನ್ನು ಮಾಡುವವರು ಸೋಮ ಹಿಂಡುವವರು, ಇಂದ್ರನಿಗೆ ಬೇಕಾದವರೇ ಆಗಿರುತ್ತಾರೆ.
- ಸಹಾಯ ಅಪೇಕ್ಷಿಗಳಲ್ಲಿ ಅರ್ಹರು ಯಾರೆಂದು ತಿಳಿದು ಸರ್ವಜ್ಞನಾದ ಇಂದ್ರನು ಅವರಿಗೆ ಸಹಾಯ ಮಾಡುತ್ತಾನೆ. ಸೋಮ ಪಾನದಿಂದ ಹರ್ಷಗೊಂಡು ಇಂದ್ರ ವರುಣರು ವೃತ್ರನಿಂದ ಮುಚ್ಚಲ್ಪಟ್ಟ ಉದಕ ದ್ವಾರಗಳನ್ನು ಪೂರ್ಣವಾಗಿ ತೆರೆಯಿಸಿದರು.
- ಸಕಲ ಧನಗಳು, ಇಂದ್ರಾನುಗ್ರಹದಿಂದಲೇ ವೃದ್ಧಿಸುತ್ತವೆ. ಸಕಲ ಲೋಕಗಳು ಒಟ್ಟಾಗಿ ಸೇರಿದರು ಇಂದ್ರ ಮಹಾತ್ಮೆ ಮೀರಲು ಸಾಧ್ಯವಿಲ್ಲ. ಸ್ತುತಿಕೇಳಿ ಸ್ತುತಿಕರ್ತರಿಗೆ ಸುಖ ಉಂಟುಮಾಡಲು ವಜ್ರಾಯುಧವನ್ನು ಎತ್ತಿಹಿಡಿಯುತ್ತಾನೆ.
- ಸೋಮ ಹಿಂಡುವವರನ್ನು ಅದನ್ನು ಇಂದ್ರನಿಗೆ ನೀಡುವವರನ್ನು ಕೈ ಬಿಡುವುದಿಲ್ಲ ಅವರಿಗೆ ಪ್ರೀತಿಯಿಂದ ಸ್ವರ್ಣಾದಿ ಆಭರಣಗಳನ್ನು, ಅಶ್ವ, ಗೋವು ಧನ ದಾನ್ಯಗಳನ್ನು ಅನುಗ್ರಹಿಸುತ್ತಾನೆ.
- ಸ್ವರ್ಗ ಅಂತರಿಕ್ಷ ಭೂಮಿಯಲ್ಲಿ ಇರುವ ಎಲ್ಲರೂ ಇಂದ್ರನನ್ನು ಹವಿರಾದಿಗಳಿಂದ ಸೇವಿಸುತ್ತಾರೆ. ಆಗ ಇಂದ್ರನು ವಜ್ರಾಯುಧದಾರಿಯಾಗುತ್ತಾನೆ. ಸೂರ್ಯ, ನಕ್ಷತ್ರ, ಅಂತರಿಕ್ಷ ಉಷಸ್‌ಗಳನ್ನು ನಿರ್ಮಿಸಿದವನು ಇಂದ್ರ.
- ಸಪ್ತ ಸಂಖ್ಯಾಂತ ರಶ್ಮಿಗಳಿಂದ ಮೇಘ ಮಧ್ಯದಲ್ಲಿ ವಿದ್ಯುತ್‌ರೂಪಿನಲ್ಲಿ ಅಗ್ನಿ ಸೃಷ್ಟಿಸಿ ಮೇಘ ಹನನಮಾಡಿ. (ಅಹಿ) ಎಂಬ ರಾಕ್ಷಸನನ್ನು ಸಂಹರಿಸಿ ಸಪ್ತ ನದಿಗಳಲ್ಲೂ ಉದಕ ಪ್ರೇರಿಸಿ ಅವು ಹರಿದು ಸಮುದ್ರ ಸೇರುವಂತೆ ಮಾಡಿದನು.
- ಉಷಸ್ಸು ಪುನರಾವರ್ತನೆ ಗೊಳ್ಳುವ ಹಾಗೆ ಇಂದ್ರನ ಅನುಗ್ರಹ ಬುದ್ಧಿ ಮತ್ತು ಧನ ಏಣಿಸಲಾಗದ್ದಿಷ್ಟಿದೆ. ಸಕಲ ದೇವತೆಗಳನ್ನು ಆಕಾಶದಲ್ಲಿ ಬಲವನ್ನು ವೀರ್ಯವನ್ನು, ಶತ್ರುವಧೆಗಾಗಿ ಸಂಯೋಜಿಸಿದ್ದಾನೆ.
- ಭಕ್ತರಿಗೆ ಇಂದ್ರನೊಬ್ಬನೆ ರಕ್ಷಕ ಅವರ ಕೃಪೆಯಿಂದ ಬಂಧನಗಳು ಅಂಟದೆ ಕಳಚಿಹೋಗುವವು. ಆದಿತ್ಯ ರೂಪಿಯಾಗಿ, ಆದಿತ್ಯ ಮಂಡಲವಾಗಿ ಸ್ಥಾಪಿತನಾಗಿದ್ದಾನೆ. ಅತ್ಯುತ್ತಮ ನಾಲ್ಕನೆಯ ಸ್ಥಾನದಲ್ಲಿದ್ದಾನೆ. ದೇವಮಾತೆ ಅದಿತಿಯು ಇಂದ್ರನಿಂದಾಗಿ ಅನೇಕರಿಂದ ಪ್ರಶಂಸಿತಳಾಗಿದ್ದಾಳೆ.
- ನಾಸ್ತಿಕರು ವಂಚಕರು, ಮೋಸಗಾರರನ್ನು ನಾಶಮಾಡುತ್ತಾನೆ. ರಾಜರುಗಳು ಅಪರಿಮಿತ ಧನದಿಂದ ಯಾಜ್ಞಿಕರನ್ನು ಯಜಮಾನರನ್ನು ತೃಪ್ತಿಗೊಳಿಸಿದ್ದಾರೆ.
- ಸ್ವಾಹಾದೇವಿಯ ಪತಿ ಅಗ್ನಿಯನ್ನು ಸಚಿದೇವಿಯವರ ಪತಿ ಇಂದ್ರನನ್ನು ಸ್ತುತಿಸಿ ಪೂಜಿಸಿ ಕರ್ಮಗಳನ್ನು ಮಾಡುತ್ತಾರೆ. ವೃತ್ರಾಸುರನನ್ನು ಇಂದ್ರನು ಕೊಂದೊಡನೆಯೇ ವಿಷ್ಣುವು ಮೂರು ಪಾದಗಳಿಂದ ಮೂರು ಲೋಕಗಳನ್ನು ಆಕ್ರಮಿಸಿದನು.
- ಇಂದ್ರ ಗೃಹವು ಸ್ವರ್ಗ ಲೋಕದಲ್ಲಿದೆ. ಪಿತ್ರಾರ್ಜಿತ ಧನದಲ್ಲಿ ಭಾಗಕೇಳುವಂತೆ ಇಂದ್ರ ಧನನಲ್ಲಿ ಯಜಮಾನರು ಯಾಜ್ಞಿಕರು ಭಾಗ ನಿರೀಕ್ಷಿಸುತ್ತಾರೆ.

# ಇಂದ್ರ, ದೇವರು
## ಅಕ್ಷರ ಮಾಲಿಕೆ (ವಿಶೇಷ ಸ್ತೋತ್ರ ವಿಭಾಗ)

- ಇಂದ್ರನು ಅಸುರರನ್ನು ನೀತಿ ಬಾಹಿರರು, ವಿಷಯಲಂಪಟರು, ಅವರ ಪಟ್ಟಣಗಳನ್ನು ನಾಶಮಾಡುತ್ತಾನೆ. ಅಸುರರನ್ನು ಪಾಪಾತ್ಮರು ಮರುತ್ತುಗಳ ಒಳಗೂಡಿ ಮೂಲ, ಮಧ್ಯಮ, ಅಂತ್ಯದಲ್ಲಿ ಕತ್ತರಿಸುತ್ತಾನೆ. (ನಾಶಮಾಡುತ್ತಾನೆ) ಅತೀ ಆಳದ ಸಮುದ್ರ, ಅತೀ ಎತ್ತರದ ಪರ್ವತ ಯಾವುದು ಇಂದ್ರನನ್ನು ತಡೆಯಲಾರದು.

  ಅಪರಿಮಿತ, ಇಷ್ಟಾರ್ಥ ಈಡೇರಿಸಲು ಅಶ್ವಗಳು, ಇಂದ್ರ ವಾಯುಗಳನ್ನು ಯಜ್ಞಕ್ಕೆ ಕರೆತರುತ್ತವೆ. ಅಶ್ವಗಳು ದೂರದ ಸ್ವರ್ಗದಿಂದ ಅವರನ್ನು ಕರೆತರುತ್ತವೆ. ಅನ್ನ, ಧನ, ಸಂಪತ್ತು, ಪುತ್ರ ಪೌತ್ರರನ್ನು (ಪಂಚಜನರಿಗೂ) ಅನುಗ್ರಹಿಸುತ್ತಾನೆ. ಅಧಿಕ ಸಂಖ್ಯೆಯ ಶತ್ರುಗಳನ್ನು ಏಕಾಂಗಿಯಾಗಿ ಎದುರಿಸಿ ಅವರನ್ನು ನಾಶಮಾಡುತ್ತಾನೆ.

- ಅಚಲ ಪರ್ವತವನ್ನು ಛೇದಿಸಿ, ಗೋವುಗಳನ್ನು ಬಿಡಿಸಿ ಅವುಗಳಲ್ಲಿ ಕ್ಷೀರ ತುಂಬುವಂತೆ ಮಾಡಿದವನು ಇಂದ್ರ. ಅನೇಕರನ್ನು ಅನೇಕ ಆಪತ್ತುಗಳಿಂದ ರಕ್ಷಿಸಿದ್ದಾನೆ. ಅನುಭವ ಯೋಗ್ಯ ವಿಶೇಷ ಸ್ತೋತ್ರಗಳಿಗೆ ರಕ್ಷಣಾರ್ಥವಾಗಿ. ಅಪೇಕ್ಷಿತ ಧನ, ಧಾನ್ಯ ನೀಡಲು ಮರುತ್ತುಗಳೊಡನೆ ಇಂದ್ರನು ಕ್ಷಿಪ್ರವಾಗಿ ಬರುತ್ತಾನೆ.

- ಅಶ್ವಗಳು ಸುವರ್ಣ ರಥ ನೊಗಕ್ಕೆ ಕಟ್ಟಿದಾಗ ಇಂದ್ರನನ್ನು ಯಜಮಾನನ ಸಮೀಪ ಕರೆತರುತ್ತವೆ. ಅಗ್ನಿಯು ಇಂದ್ರನನ್ನು ಯಜ್ಞಕ್ಕೆ ಕರೆತರುತ್ತಾನೆ. ಅನ್ನದಾತ, ಅಂತರಿಕ್ಷಸ್ಥ ಅಶ್ವ ರಥದಲ್ಲಿ ವಾಯು ಬಲದ ವೇಗದಲ್ಲಿ ಸಂಚರಿಸುವ ಇಂದ್ರನನ್ನು ದೇವ ಮಾನವರು, ಯಾರೂ ತಡೆಯಲಾರರು,

- ಆದಿತ್ಯ ಅಗ್ನಿ, ವಾಯು ನಕ್ಷತ್ರ ರೂಪಿನಲ್ಲಿ ಪ್ರಕಾಶಿಸುತ್ತಾನೆ. ಆಂಗೀರಸರು ಸ್ತೋತ್ರಗಳಿಂದ "ಸತ್ರಯಾಗಗಳಿಂದ" ಇಂದ್ರನ ಅನುಗ್ರಹ ಪಡೆದಿದ್ದಾರೆ. ಆಶ್ರಯಿಸಿದ ಭಕ್ತರನ್ನು ಕೈಬಿಡದೆ ನಾನಾರೀತಿ ಸಹಾಯಮಾಡಿ ರಕ್ಷಿಸುತ್ತಾನೆ. (ಅದಿತಿ ಕಶ್ಯ ಪುತ್ರ) ಆಂಗೀರಸ್ಸುಗಳಿಗಾಗಿ ವಲನನ್ನು ಸೀಳಿಕೊಂದನು

- ಆದಿತ್ಯನ ಅಂತರಿಕ್ಷದಲ್ಲಿ ಸಪ್ತ ಛಂದಸ್ಸಿನ ಮುಖದಿಂದ ಅನೇಕ ಆಕಾರಗಳಲ್ಲಿ ಉತ್ಪನ್ನನಾಗಿ ಸಪ್ತರಶ್ಮಿಯುಕ್ತನಾಗಿ ಕತ್ತಲೆಯನ್ನು ನಾಶಮಾಡಿದನು. ಆಜ್ಯಾದಿಗಳು ಅಗ್ನಿಯನ್ನು ತೃಪ್ತಿಗೊಳಿಸುವಂತೆ, ಮೇಘಾ ವೃಷ್ಟಿಯು ಇಂದ್ರನನ್ನು, ತೃಪ್ತಿಗೊಳಿಸುತ್ತದೆ. ಆದಿತ್ಯ ಅರ್ಜನ್ಯ ವಾಯು ಇವರು ಬಿತ್ತಿದ ಬೀಜದಿಂದ ಭೂಮಿಯು ಶುದ್ಧವಾಯಿತು.

- ಇಂದ್ರನು ಭೂಮಿ,ಅಂತರಿಕ್ಷಾ, ದ್ಯುಲೋಕ, ಸಕಲ ಧನ ಸಂಪತ್ತುಗಳಿಗೂ ಪ್ರಭು, ಇಂದ್ರನು ಇಲ್ಲದ ಸ್ಥಳವೇ ಇಲ್ಲ, ಇಷ್ಟಾರ್ಥಪ್ರದ. ಇಂದ್ರನು ಕರ್ಮ ಮಾಡುವ ಮಾಡದಿರುವವರ ವ್ಯತ್ಯಾಸಗಳನ್ನು ಚೆನ್ನಾಗಿ ಅರಿತಿದ್ದಾನೆ. ಉಷಸ್, ಸೂರ್ಯಯುಕ್ತನಾಗಿ ಅಂದಕಾರವನ್ನು ನಾಶಮಾಡುತ್ತಾನೆ.

- ಇಂದ್ರ ಅಗ್ನಿಗಳು ಒಟ್ಟಾಗಿ ಇರುವವರು, ಅನೇಕ ರೂಪಧಾರಿಗಳು ಇವರುಗಳು ಇರುವ ಸ್ಥಾನಗಳು 1. ಸ್ವರ್ಗ್ಯಪ, 2. ಬ್ರಾಹ್ಮಣರ ಯಜ್ಞಭೂಮಿ, 3. ಕ್ಷತ್ರಿಯರ ಯುದ್ಧಭೂಮಿ, ಇಂದ್ರನು ದೇವರೆ ಎಂಬ ನಂಬಿಕೆ ಗೌರವವನ್ನು ಇಟ್ಟುಕೊಂಡಿದ್ದಾರೆ.

- ಇಂದ್ರನು ಸ್ವಶಕ್ತಿಯಿಂದ ಅಂತರಿಕ್ಷ, ದ್ಯುಲೋಕ, ಭೂಲೋಕಗಳ ಅಂತರದಲ್ಲೆಲ್ಲ ತುಂಬಿದ್ದಾನೆ. ಇಂದ್ರನನ್ನು ಉತ್ಕೃಷ್ಟ ಸ್ತೋತ್ರದಿಂದಲೂ ತೃಪ್ತಿ ಪಡಿಸಿ, ಧನ,. ಜಯ, ಸುಖ ರಕ್ಷಣೆಗಳನ್ನು ಪಡೆಯಬಹುದು. ಇಂದ್ರ ಸಖ್ಯವು ಎಂದಿಗೂ ವ್ಯರ್ಥವಾಗುವುದಿಲ್ಲ, ಇಂದ್ರವಾಯುಗಳು ಶಕ್ತಿ ಪಾಲಕರು, ಒಂದೇ ರಥದಲ್ಲಿ ಯಜ್ಞಕ್ಕೆ ಬರುವವರು, ಉತ್ತಮ ರೂಪರು, ಪಾಪ, ನಾಶಕರು, ಅದ್ಭುತ ಸ್ವರೂಪ ನೋಡಿ ಸಮುದ್ರ, ಪರ್ವತ, ಪೃಥ್ವಿ ದ್ಯುಲೋಕಗಳು ಹೆದರಿದವು. ಇಂದ್ರನ ತೃಪ್ತಿಗಾಗಿ ಯಾಗಮಾಡುವ, ಸ್ತುತಿಸುವ ಸೋಮ ಅರ್ಪಿಸುವವರು ಇಂದ್ರನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

- ಇಂದ್ರ ಬೃಹಸ್ಪತಿ ಶಸ್ತ್ರ ಮಂತ್ರಪ್ರಿಯರು, ಇಂದ್ರನನ್ನು ಮಿತ್ರನನ್ನಾಗಿ ಮಾಡಿಕೊಂಡವರು ಇಂದ್ರ ಕರ್ಮಗಳನ್ನು ಮಾಡಿ ತಮ್ಮ ಸಂಪತ್ತನ್ನು ರಕ್ಷಿಸಿಕೊಂಡು ಸೂರ್ಯ-ಅಗ್ನಿಗಳಿಗೆ ಪ್ರೀತಿಪಾತ್ರರಾಗುತ್ತಾರೆ. ಇಂದ್ರನು ಕೊಡುವಷ್ಟು ಪೂಜ್ಯಧನವನ್ನು ದೇವಮಾನವರಲ್ಲಿ ಯಾರು ಕೊಡಲಾರರು. ಇಂದ್ರನಲ್ಲಿ ಯಜಮಾನನಿಗೆ ಬೇಕಾದುದು ಎಲ್ಲವೂ ಇದೇ, ಇಂದ್ರನ ಮಹತ್ವವನ್ನು ಪೂರ್ಣವಾಗಿ ತಿಳಿದವರು ಋಷಿಗಳಲ್ಲೂ ಯಾರು ಇಲ್ಲ ಎಂದಿದ್ದಾರೆ.

- ಓಷಧಿಗಳು ಬೆಳೆದಾಗ ದೇವತಾ ಪ್ರೀಯವಾದ ಸ್ತುತಿಗಳು, ಸ್ತುತಿಕರ್ತನಲ್ಲಿ ಉಂಟಾಗುತ್ತವೆ. ಇಂದ್ರನನ್ನು ಕುರಿತು ಮಾಡುವ ಎಲ್ಲಾ ಸ್ತುತಿಗಳು ಬಲವನ್ನು ವೃದ್ಧಿಮಾಡುತ್ತವೆ. ಇಷ್ಟಾರ್ಥಪ್ರದವೆಂದೇ ಹೆಸರಾದವನು. ಅನಂತ ರೂಪಗಳುಳ್ಳವನು ಇಂದ್ರನ ಮಹಾತ್ಮೆಯನ್ನು ಯಾರು ಅರಿಯಲಾರರು, ಇಂದ್ರನ ಮಿತ್ರತ್ವ ಹೊಂದಿದವರು ಭಯ ಪಡಬೇಕಾದುದು ಇಲ್ಲ ಎನ್ನುತ್ತಾರೆ ಋಷಿಗಳು.

# ಇಂದ್ರ ದೇವರು
## ಅಕ್ಷರ ಮಾಲಿಕೆ (ವಿಶೇಷ ಸ್ತೋತ್ರ ವಿಭಾಗ)

- ಉದಕ ಗೋವುಗಳನ್ನು ಆಯಾಯ ಸ್ಥಳಗಳಲ್ಲಿ ಇರುವಂತೆ ಮಾಡಿದ್ದಾನೆ. ಉತ್ಕೃಷ್ಟರು, ನಿಕೃಷ್ಟರು, ಮಧ್ಯಮ ವರ್ಗದವರು ಕಾರ್ಯ ಅಪೇಕ್ಷಿತರು, ಗೃಹವಾಸಿಗಳು ಅನ್ನ ಅಪೇಕ್ಷಿಗಳು, ಎಲ್ಲರೂ ಇಂದ್ರನನ್ನು ಅಪೇಕ್ಷಿಸುತ್ತಾರೆ. ಋಷಿಗಳಿಗೆ ನೀರಿನ ಸೌಕರ್ಯಕ್ಕಾಗಿ ಪಾಪನಾಶನಕ್ಕಾಗಿ ನದಿಗಳು, ಬಹುಕಾಲ ಹರಿಯುವಂತೆ ವಿಶೇಷ ರೀತಿಯಲ್ಲಿ ಮಾರ್ಗ ನಿರ್ಮಿಸಿ ಉಪಕಾರ ಮಾಡಿದ್ದಾನೆ.

- ಋತುಕಾಲಕ್ಕೆ ಋತು ಧರ್ಮದಂತೆ ಮಂಗಳಕರವಾಗಿ ಪಕ್ಷಿಗಳು ಹಾಡುತ್ತವೆ, ಗಾನಮಾಡುತ್ತವೆ, ನರ್ತಿಸುತ್ತವೆ, ಸಂತೋಷ ಪಡಿಸುತ್ತವೆ, ಋಷಿಗಳು ಈ ಆನಂದವನ್ನು ಕರುಣಿಸಿದ ಋತುಗಾನ ಹಾಡಿದ ಪಕ್ಷಿಗಳಿಗೆ ಮಂಗಳವಾಗಲಿ, ಎನ್ನುತ್ತಾರೆ.

- ಕರ್ಮ ಸಹಿತರು ಕರ್ಮರಹಿತರು, ಎಂದು ವಿಭಾಗಿಸಿ ಯಜ್ಞಕ್ಕೆ ಪ್ರಭುವಾಗಿ ಬರುತ್ತಾನೆ. ಸೋಮಪಾನ ಮಾಡಿ ಯಜಮಾನ ನನ್ನು ಅನುಗ್ರಹಿಸುತ್ತಾನೆ, ಗೋವುಗಳಿಗೆ ಯಾವುದೇ ತೊಂದರೆ ಆಗದಿರಲಿ, ಹುಲ್ಲು ನೀರು ಸಿಗಲಿ, ದುಷ್ಟ ಪ್ರಾಣಿಗಳು, ಗೋವುಗಳಿಗೆ ಹಿಂಸಿಸದಿರಲಿ ಅವು ಭೀದಿತವಾಗದಿರಲಿ, ಎಂದು ಋಷಿಗಳು ಇಂದ್ರನಲ್ಲಿ ವಿಶೇಷವಾಗಿ ಪ್ರಾರ್ಥಿಸಿದ್ದಾರೆ.

- ಗೋವುಗಳ ನಿಮಿತ್ತವಾಗಿ ಅಂಗೀರಸರು ಪದೇ ಪದೇ ಇಂದ್ರನನ್ನು ಸ್ತೋತ್ರಮಾಡಿದ್ದರಿಂದ ಇಂದ್ರನು ಸೆರೆಹಿಡಿಯಲ್ಪಟ್ಟ ಗೋವುಗಳನ್ನು ಬಿಡಿಸಿದನು. ಅದನ್ನು ಅಂಗೀರಸರು ಪಡೆದರು. ಗೋವುಗಳಿಗೆ ಹುಲ್ಲುಗಾವಲು ಸುಖದಾಯಕವಾಗಿರುವಂತೆ ಇಂದ್ರನಿಗೆ ಸ್ತೋತ್ರಗಳು ಸುಖದಾಯಕವಾಗಿರುತ್ತದೆ. ಗರುತ್ಮಂತನು ಮನೋ ವೇಗದಲ್ಲಿ ಸುವರ್ಣ ನಿರ್ಮಿತ ಪಟ್ಟಣಕ್ಕೆ ಹೋಗಿ ಸೋಮವನ್ನು ತಂದು ಇಂದ್ರನಿಗೆ ತಲುಪಿಸಿದನು. ಇಂದ್ರನು ಒಡನೆಯೇ ಅದನ್ನು ಪಾನ ಮಾಡಿ ಆನಂದಿತನಾದನು.

- ಚಕ್ರದ ಪಟ್ಟಿಯು ಇತರ ಭಾಗಗಳನ್ನು ಒಟ್ಟಾಗಿ ಹಿಡಿದಿರುವಂತೆ ಇಂದ್ರನು ಸಕಲ ಭೂತ ಜಾತವನ್ನು ಹಿಡಿದ್ದಿದ್ದಾನೆ. ತನ್ನನ್ನು ಇತರ ದೇವತೆಗಳನ್ನು ಪೂಜಿಸುವವರಿಗೆ ಮರುತ್ತುಗಳ ಒಳಗೂಡಿ ಮನಬಂದಂತೆ ಅನುಗ್ರಹಿಸುತ್ತಾನೆ. ಕೊಟ್ಟಿಗೆಗಳನ್ನು ಗೋವುಗಳನ್ನು ಗೋವುಗಳಿಂದ ತುಂಬುತ್ತಾನೆ. ತ್ವಷ್ಟನು ತಯಾರಿಸಿದ ವಜ್ರಾಯುಧದಿಂದ ಯಾರಿಗೂ ಬಗ್ಗದ ಮದಿಸಿದ ಶತ್ರುಗಳನ್ನು ನಾಶಮಾಡಿದನು. ತೇಜಸ್ಸಿನಿಂದ ದ್ಯಾವಾಪೃಥ್ವಿಗಳು ಆವೃತವಾಗಿವೆ. ತೇಜಸ್ಸು ಸರ್ವತ್ರ ಪರಿಭ್ರಮಣವಾಗುವಂತ ಕರ್ಮ ನಿರತವಾಗುವಂತೆ ಕತ್ತಲ ನಾಶವಾಗುವಂತೆ ಮಾಡಿದ್ದಾನೆ..

- ದ್ಯುಲೋಕವು ಇಂದ್ರ ವರುಣರ ಮಹತ್‌ರಾಜ್ಯ ಸ್ಥಾನವಾಗಿದೆ. ಸೋಮದಿಂದ ಇಬ್ಬರು ತೃಪ್ತರಾಗುತ್ತಾರೆ. ದ್ಯುಲೋಕದ ಮೇಲ್ಭಾಗದಲ್ಲಿ ಸೂರ್ಯ ರೂಪದಲ್ಲಿ ಪ್ರಕಾಶಿಸುತ್ತಾನೆ. ದ್ಯಾವಾಪೃಥ್ವಿಗಳು ಇಂದ್ರನನ್ನು ದೂರಮಾಡುವುದಾಗಲೀ, ಅವನ ಪ್ರಭುತ್ವದಿಂದ ತಪ್ಪಿಸಿಕೊಳ್ಳುವುದಾಗಲೀ ಸಾಧ್ಯವಿಲ್ಲ.

- ದ್ಯಾವಾಪೃಥ್ವಿಗಳಿಗೆ ಅನ್ನಾರ್ಥವಾಗಿ ಪರ್ಜನ್ಯ ರೂಪದ ಉದಕವನ್ನು ಮೇಲೆ ದ್ಯುಲೋಕದಲ್ಲಿ ಸ್ಥಾಪಿಸಿದ್ದಾನೆ. ಮೊಳಕಾಲೂರಿ ಸ್ತುತಿಸುವವರಿಗೆ ದೇವತೆಗಳೊಡನೆ, ಇದ್ದು ಧನಾದಿಗಳನ್ನು ಅನುಗ್ರಹಿಸುತ್ತಾನೆ. ದಧೀಚ ಋಷಿಯು 810 ಮೂಳೆಗಳಿಂದ ತಯಾರಿಸಿದ ಆಯುಧದಿಂದ ಶತ್ರುಗಳನ್ನು ನಾಶಮಾಡಿದನು. ದ್ಯಾವಾಪೃಥ್ವಿಗಳು ಗಂಗಾದಿ ನದಿಗಳೂ ಇಂದ್ರನಿಗಾಗಿ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತವಾಗಿರುತ್ತವೆ.

- ದೇವತೆಗಳೆಲ್ಲರೂ ಸೇರಿ ಇಂದ್ರನಿಗೆ ಅಗ್ರಸ್ಥಾನ ಕೊಟ್ಟದ್ದಾನೆ. ದ್ರೋಹಿಗಳನ್ನು ಅವರು ಆಕ್ರಮಿಸಿದ ಭಾಗಗಳನ್ನು ಪುಡಿ ಪುಡಿ ಮಾಡುತ್ತಾನೆ. ಧ್ಯಾನದಿಂದ ಸ್ತೋತ್ರದಿಂದ ಪೂಜೆಗಳಿಂದ ಯಜ್ಞ ಯಾಗಗಳಿಂದ ದ್ಯಾವಾಪೃಥ್ವಿಗಳು ಪವಿತ್ರವಾಗಿವೆ. ದೇವತೆಗಳು ಜಗದಾದಿ ಪತ್ಯಕ್ಕಾಗಿ ಇಂದ್ರನನ್ನು ಉತ್ಪತ್ತಿ ಮಾಡಿದರು. ದಸ್ಯುಗಳನ್ನು 7 ಪ್ರಮುಖ ರಾಕ್ಷಸರನ್ನು ಸೀಳಿ ಬಚ್ಚಿಟ್ಟಿದ್ದ ಗೋವುಗಳನ್ನು ಸೆರೆಯಿಂದ ಬಿಡಿಸಿದನು, ದ್ಯಾವಾಪೃಥ್ವಿಗಳನ್ನು ಸ್ಥಿರ ಹಾಗೂ ದೃಢಪಡಿಸಿದ್ದಾನೆ. ನದಿಗಳು ಇಂದ್ರನ ಬ್ರಹ್ಮಹತ್ಯಾದಿ ದೋಷಗಳನ್ನು ನೊರೆಯರೂಪದಲ್ಲಿ ಧರಿಸುತ್ತವೆ. ನೂರಾರು ಅಲಗುಳ್ಳ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದನು.

- ನದಿಗಳು ಇಂದ್ರ ಕರ್ಮದಿಂದ ಇಂದ್ರ ರೂಪಿನಿಂದ ತುಂಬಿ ಇಂದ್ರ ಮಾರ್ಗದಲ್ಲಿ ಹರಿದು ಸಮುದ್ರ ಸೇರುತ್ತವೆ. ನದಿಗಳು ಗರ್ಜಿಸುವಂತೆ ಮಾಡದ್ದಾನೆ. ನದಿಗಳೂ ಇಂದ್ರನಿಂದಲೇ ಸ್ಥಾಪಿತವಾದವು, ನೀರಿನಿಂದ ತುಂಬಿ ಹರಿಯುವಂತೆ ಮಾಡಿದ್ದಾನೆ. ನದಿಗೆ ಅಡ್ಡ ಮಲಗಿ ತೊಂದರೆ ಕೊಟ್ಟ ರಾಕ್ಷಸನನ್ನು ಕೊಂದು ನದಿ ನಿರಾತಂಕವಾಗಿ ಹರಿಯುವಂತೆ ಮಾಡಿದ್ದಾನೆ. ನಾಸ್ತಿಕರು, ಮೋಸಗಾರರು, ವಂಚಕರುಗಳನ್ನು ನಾಶಮಾಡಿದ್ದಾನೆ. ನದಿಗಳಿಗೆ ದಾರಕನಾಗಿ ಜನರಿಗೆ ಬೇಸಿಗೆಯಲ್ಲಿ ಸಿಹಿ ನೀರನ್ನು ಒದಗಿಸುತ್ತಾನೆ. ನದಿ ಹರಿದು ಪ್ರಾಣಿಗಳ ದಾಹ ಆರಗುವಂತೆ ಪ್ರಾಣಿಗಳ ರಕ್ಷಣೆಯನ್ನು ಮಾಡಿದ್ದಾನೆ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ವಿಶೇಷ ಸ್ತೋತ್ರ ವಿಭಾಗ)

ಪಂಚ ಜನರನ್ನು ರಕ್ಷಿಸುತ್ತಾನೆ. ದೇವತೆಗಳು, ಮಾನವರು, ಪಿತೃಗಳು ಪಶುಗಳು, ಪಕ್ಷಿಗಳು, ಪೃಥ್ವಿಯು ಇನ್ನು ಹತ್ತು ಪಟ್ಟು ಬೆಳೆದರು ಮಾನವರ ಸಂಖ್ಯೆ ಎಷ್ಟೇ ಹೆಚ್ಚಿದರು ಅದು ಇಂದ್ರನ ಸಾಮರ್ಥ್ಯಕ್ಕೆ ಬಹಳ ಕಡಿಮೆಯೇ ಎಂದಿದ್ದಾರೆ. ಫಣಿಯು ಬಚ್ಚಿಟ್ಟಿದ ಗೋವುಗಳನ್ನು ಪತ್ತೆ ಹಚ್ಚಿ ರಾಕ್ಷಸ ವಲನನ್ನು ಸಂಹರಿಸಿ ಗೋವುಗಳನ್ನು ಬಿಡಿಸಿದನು. ಅದನ್ನು ಅಂಗೀರಸರು ಪಡೆದರು. ಅದರ ಫಲವಾಗಿ ಗೋ ಕ್ಷೀರ ಜಗತ್ತಿಗೆ ದೊರೆತಿದೆ.

ವೃಷ್ಟಿ ಅಂತರಿಕ್ಷ, ದ್ಯುಲೋಕ, ಸೂರ್ಯ ಉಷಸ್‌ಗಳ ಸೃಷ್ಟಿಕರ್ತ ಇಂದ್ರ, ಪಾಪನಾಶಕ ನದಿಗಳು ಬಹುಕಾಲ ಹರಿಯುವಂತೆ ವಿಶೇಷ ರೀತಿಯಲ್ಲಿ ಮಾರ್ಗ ನಿರ್ಮಿಸಿ ಋಷಿಗಳಿಗೆ ಅನುಕೂಲಮಾಡಿಕೊಟ್ಟಿದ್ದಾನೆ. ಪ್ರಶಂಸಿಸುಸುವವರು ಯಾಗಾದಿ ಕರ್ಮಗಳನ್ನು ಮಾಡುವವರು ಸುಖವಾಗಿ ಇರುತ್ತಾರೆ ಮತ್ತು ಶತ್ರು ಭಯ ರಹಿತರಾಗಿಯೂ ಇರುತ್ತಾರೆ.

ಪರ್ವತದಿಂದ ಹೊರಟ ದುರಭಿಮಾನಿ ಶಂಭರಾಸುರ ಎಂಬ ರಾಕ್ಷಸನನ್ನು ಸಂಹರಿಸಿದನು. ಪುರುಷರಿಗೆ ಎರಡು ದಾರಿಗಳಿವೆ ಒಂದು ಶ್ರೇಷ್ಠ ದೇವತೆಗಳನ್ನು ಕರೆದು ಯಜ್ಞ ಮಾಡಿ ಇತರರಿಂದ ಪಡೆಯಲಾಗದ ಕೀರ್ತಿ ಪಡೆಯುವುದು. ಎರಡು. ಯಜ್ಞ ಮಾಡದೇ ಪಾಪ-ಕರ್ಮಗಳಿಂದ ಋಣ ಪೀಡಿತರಾಗಿ ರೋಗ ಪೀಡಿತರಾಗಿ ಅದೋಗತಿಗೆ ಇಳಿಯುವುದು. ಬೆಳಗಿನ ಆದಿತ್ಯ ತೇಜಸ್ಸನ್ನು ರಾತ್ರಿಯ ಚಂದ್ರನಲ್ಲಿ ಇರಿಸಿದವನು. ಇಂದ್ರ.

ಭೂಮಿಯ ಎತ್ತರ ಪ್ರದೇಶವನ್ನು ಸಮಮಾಡಿದವನು ಇಂದ್ರ. ಭೂಮಿ-ಆಕಾಶಗಳನ್ನು ಬೇರೆ ಬೇರೆ ಮಾಡಿದವನು ಆವನೇ.ಭೂಮಿ ಆಕಾಶದಲ್ಲಿಯ ಅಸುರರನ್ನು ನಾಶಮಾಡಿದವನು ಇವನೇ. ಭೂಮಿ ಆಕಾಶಗಳ ಮಧ್ಯೆ ಅಗ್ನಿ ಸಂಚರಿಸುತ್ತಾ ಯಾಜ್ಞಿಕರು, ಋಷಿಗಳು ಅರ್ಪಿಸಿದ ಹವಿಸ್ಸನ್ನು ಇಂದ್ರನಿಗೆ ತಲುಪಿಸುತ್ತಾರೆ.

ಬೇರೆ ಬೇರೆ ರೂಪಗಳಲ್ಲಿ ತನ್ನ ರೂಪವನ್ನು ಬದಲಾಯಿಸಿಕೊಳ್ಳುತ್ತಾನೆ. ಬೃಹಸ್ಪತಿ ಇಂದ್ರರು ವಿಶ್ವ ಪಾಲಕರು, ಕಾಮವರ್ಷಕರು, ಸರ್ವ ದೇವತಾತ್ಮರು, ಅವರ ಅಶ್ವಗಳು ಅವರನ್ನು ದೂರ ಸ್ವರ್ಗದಿಂದ ಕರೆತರುತ್ತವೆ. ಬೃಹಸ್ಪತಿಯೊಂದಿಗೆ ಸೇರಿ ಎದುರು ಬಿದ್ದ ಶತ್ರು ಸೇನೆಯನ್ನು ನಾಶಮಾಡುತ್ತಾನೆ ಇಂದ್ರ.

ಮರುತ್ತುಗಳೊಗೂಡಿ ಪೂರ್ವ-ಪಶ್ಚಿಮ-ಉತ್ತರ-ದಕ್ಷಿಣ ಗಳಿಂದ ಯಜಮಾನನಿಗೆ ಬಲನೀಡುತ್ತಾನೆ. ಮೇಘವನ್ನು ಸೀಳಿ ವೃತ್ರನನ್ನು ಕೊಂದು ನದಿ ಪ್ರವಹಿಸಲು ಮಾರ್ಗವನ್ನು ನಿರ್ಮಿಸಿ ಪ್ರವಾಹ ಉಂಟು ಮಾಡಿದನು. ಮರುತ್ತುಗಳ ಧ್ವನಿಯಿಂದ ಮೇಘವು ಸೀಳಿದಾಗ ಅಂಗೀರಸುಗಳು ಗೋ ಸ್ಥಾನ ತೆರಸಿದವು. ಮೇಘ ವೃಷ್ಟಿಯು ಇಂದ್ರನಿಗೂ ಸಂತೋಷದಾಯಕವಾಗಿರುತ್ತವೆ. ಮಹಾತ್ಮಗಳಿಂದ ಯುಕ್ತ ಶಕ್ತಿಗಳಿಂದ ದ್ಯಾವಾಪೃಥ್ವಿಗಳನ್ನು ವೃಷ್ಟಿಸಿ ವ್ಯಾಪಿಸಿ ಸೋಮ ರೂಪ ಅನ್ನದೊಂದಿಗೆ ಇಂದ್ರನು ಕೂಡಿ ಕೊಳ್ಳುತ್ತಾನೆ.

ಮೇಘಗಳನ್ನು ಸೀಳಿ ವೃಷ್ಟಿ ಸುರಿಯುವಂತೆ ಮಾಡಿ ಪೃಥ್ವಿಯನ್ನು ತೋಯಿಸುತ್ತಾನೆ. ಮಾನವರ ದೇಹಗಳೊಳಗೆ ಒಂಬತ್ತು ಪ್ರಾಣಗಳೊಡನೆ ಹತ್ತನೆಯವನು ಪ್ರಾಣರೂಪಿ ಇಂದ್ರ. ಮರುತ್ತು ಗಣಗಳ ಮೂಲಕ ಇಂದ್ರನು ದಾಹಾ ನಾಶಕ ದೃಷ್ಟಿ ಪ್ರಧಾನ ಕಾರ್ಯ ಮಾಡಿದ್ದಾನೆ. ಯಜ್ಞಿಕರ, ಯಜಮಾನರ, ಭಕ್ತರ ಸುಸಂಸ್ಕೃತರ ಮೇಧಾವಿಗಳ ಪ್ರಾರ್ಥನೆಗಳಿಗೆ ಓಗೊಟ್ಟು ಅವುಗಳನ್ನು ಕರುಣಿಸುತ್ತಾನೆ. ಯಜ್ಞ ಕರ್ಮ ರಹಿತರಿಗೆ ಇಂದ್ರನು ಶತ್ರು.

ಯಜ್ಞ ಹಿಂಸಕರನ್ನು ಹಿಂಸಿಸಿ ಯಾಜ್ಞಿಕರನ್ನು ಪಾಪರಹಿತರನ್ನಾಗಿ ಮಾಡುತ್ತಾನೆ. ಯಜಮಾನನ ಋಣ ಇದ್ದರೂ. ಅವನಿಗೆ ಅದರಿಂದ ತೊಂದರೆ ಆಗದಂತೆ ಆಶ್ರಯ ಕೊಟ್ಟು ರಕ್ಷಿಸುತ್ತಾನೆ. ಯಜ್ಞ ಕರ್ಮಗಳ ಫಲವಾಗಿ ಪರ್ವತ ಪ್ರದೇಶದಲ್ಲಿ ನದಿಗಳ ಸಂಗಮ ಪ್ರದೇಶದಲ್ಲಿ ಇಂದ್ರನು ಗೋಚರಿಸುತ್ತಾನೆ.

ಯಜ್ಞ ನಿರ್ವಹಣಾರ್ಥ ವೀರ ಪುರಷರೊಳಗೂಡಿ ಶತ್ರುಗಳನ್ನು ಸೋಲಿಸಿ ಯಜ್ಞಾಭಿಮುಖ ಬರುತ್ತಾನೆ. ಯಜಮಾನರು ಯಾಜ್ಞಿಕರು, ಪಿತ್ರಾರ್ಜಿತ ಧನದಲ್ಲಿ ಭಾಗಕೇಳಿದಂತೆ ಇಂದ್ರನಲ್ಲಿ ಧನ ನಿರೀಕ್ಷಿಸುತ್ತಾರೆ. ಯಜ್ಞ ಆಚರಿಸುತ್ತಿರುವವರೆಲ್ಲರು ಇಂದ್ರನ ಬಳಿಗೆ ಬಂದರು. ಅವರ ಮನೋಭಿಲಾಶೆ ತಿಳಿದು ಮಾಧ್ಯಮಿಕಾದೇವಿಯನ್ನು ಉತ್ಪನ್ನ ಮಾಡಿದನು.

ಅವಳು ಸ್ತೋತ್ರಗಳಿಂದ ತೃಪ್ತಳಾಗಿ ನಾಲ್ಕು ದಿಕ್ಕುಗಳಿಂದ ಅನ್ನ, ನೀರು ದೊರೆಯುವಂತೆ ಮಾಡಿದಳು. ಎಲ್ಲರು ಮಾಧ್ಯಮಿಕ ದೇವಿಯನ್ನು ಪ್ರಶಂಸಿದರು. ಯುದ್ಧದಲ್ಲಿ ಶತ್ರುಗಳ ಬಗ್ಗೆ ಕಠಿಣ ಹೃದಯಿ ಇಂದ್ರ ಯಾಜ್ಞಿಕರನ್ನು ವಿರೋಧಿಸುವವರು ಯಾರೇ ಆಗಿರಲಿ ಅವರನ್ನು ಪ್ರತಿಭಟಿಸಿ ತಡೆಯುತ್ತಾನೆ.

ರಾಕ್ಷಸರಿಂದ ಪಡೆದ ಧನವನ್ನು ಭಕ್ತರೆಲ್ಲರೂ ಒಟ್ಟಾಗಿ ಅನುಭವಿಸುವಂತೆ ಮಾಡಿದ್ದಾನೆ. ರಾಕ್ಷಸರಿಂದ ಕೆಡಿಸಲ್ಪಟ್ಟ ಉದಕವು ಅಗ್ನಿ, ವಾಯು, ಸೋಮ, ಸೂರ್ಯರಿಂದ ಶುದ್ಧಿಯಾಗುತ್ತದೆ. ರಾಕ್ಷಸರಿಂದ ತಡೆಯಲ್ಪಟ್ಟಿದ್ದ ಉದಕವು, ಪ್ರವಹಿಸಿ ಸಮುದ್ರ ಸೇರಿತ್ತು, ರಾಕ್ಷಸರು. ಹವಿಸ್ಸು ಪಡೆಯುತ್ತಿದ್ದರು. ಅವರನ್ನು ಜಯಿಸಿ, ನಾಶಮಾಡಿ. ಅವರ ಸಂಪತ್ತನ್ನು ಪರ್ವತದಲ್ಲಿ ಬಚ್ಚಿಟ್ಟಿದ್ದಾನೆ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ವಿಶೇಷ ಸ್ತೋತ್ರ ವಿಭಾಗ)

ರಾಕ್ಷಸರು ಎಷ್ಟೇ ಪ್ರಬಲ ಶಾಲಿಗಳಾಗಿದ್ದರು ಸರಿ ಅವರನ್ನು ಆಯುಧಗಳಿಂದ ಹಿಂಸಿಸಿ ಸಂಹರಿಸುತ್ತಾನೆ. ಆದಿತ್ಯ ಮಂಡಲವಾಗಿ ಆದಿತ್ಯ ರೂಪಿಯಾಗಿ ಸ್ಥಾಪಿತನಾಗಿದ್ದಾನೆ ಇಂದ್ರ. ಅತ್ಯುತ್ತಮ ನಾಲ್ಕನೇಯ ಸ್ಥಾನದಲ್ಲಿದ್ದಾನೆ. ರಾಜರುಗಳು ಅಪರಿಮಿತ ಧನದಿಂದ ಯಾಜ್ಞಿಕರನ್ನು ತೃಪ್ತಿಪಡಿಸಿದ್ದಾರೆ. ಯಾಜ್ಞಿಕರಿಗೆ ಪರಿವಾರದವರಿಗೆ ಹಿಂಸೆ ಮಾಡಲು ಶಿಕ್ಷಿಸಲು ಇಂದ್ರನು ಯಾರಿಗೂ ಅವಕಾಶ ಕೊಡುವುದಿಲ್ಲ

ಯಜ್ಞಕ್ಕೆ ಇಂದ್ರಾಗ್ನಿಗಳು ಋತ್ವಿಕ್ ರೂಪರು, ಯಾರ ಸಹಾಯವು ಇಲ್ಲದೆ ಎಲ್ಲರನ್ನು ರಕ್ಷಿಸುತ್ತಾರೆ. ರುದ್ರ ಪುತ್ರ ಮರುತ್ತುಗಳು ಪರ್ವತ ಸಮಾನರು ವೃಷ್ಟಿಕಾರಕರು ಇಂದ್ರನ ಜೊತೆಯಲ್ಲಿದ್ದು ಸಕಲ ದೇವತೆಗಳೊಂದಿಗೆ ಸಹಾಯಕ್ಕೆ ಬಂದು ರಕ್ಷಿಸುತ್ತಾರೆ.

ವರ್ಷ ಋತುವಿನಲ್ಲಿ ಸೋಮ ಲತೆಯು ಇಂದ್ರನಿಗಾಗಿ ಯಥೇಚ್ಛವಾಗಿ ಬೆಳೆದು ನಿಂತಿರುತ್ತದೆ. ವಾಕ್‌ದೇವಿಯು ಸೂರ್ಯನ ಪುತ್ರಿ ಶಬ್ಧ ರೂಪಿ, ಅಜ್ಞಾನ ನಾಶಕಳು, ವಾಯು ಸೂರ್ಯರ ತಲೆಯ ಮೇಲೆ ಮಳೆ ಸುರಿಸುತ್ತಾನೆ. ವಜ್ರಾಯುಧದಿಂದ ಶತ್ರುಗಳನ್ನು ಛಿದ್ರ ಛಿದ್ರ ಮಾಡುತ್ತಾನೆ. ವೃತ್ರಾಸುರನು ಪ್ರತಿಭಟಿಸುವ ಕಾಲದಲ್ಲಿ ದೇವತೆಗಳು ಮರುತ್ತುಗಳು ಇಂದ್ರನನ್ನು ಮುಂದಿಟ್ಟುಕೊಂಡು ನಡೆದರು. ಸಂಹಾರದ ನಂತರ ದ್ಯುಲೋಕವು ಶಾಂತವಾಯಿತು.

ವಾಯುವು ಮಾನವರಂತೆ ಶಬ್ದ ಮಾಡುತ್ತಾ ಅಂತರಿಕ್ಷಾ ಸಂಚಾರಿ "ನಿಯುತ್ತು" ಎಂಬ ಅಶ್ವವುಳ್ಳವನು. ವರುಣನನ್ನು ಸ್ತುತಿಸಿ ಪಾಪ ನಾಶಮಾಡಿಕೊಳ್ಳುವಂತೆ ವಾಯುವನ್ನು ಸ್ತುತಿಸಿದರೆ ಎಲ್ಲಾ ಪಾಪಗಳನ್ನೂ ನಾಶವಾಗುತ್ತದೆ ಎಂದಿದ್ದಾರೆ. ವೃಷ್ಟಿಸುರಿಸಲು ಇಂದ್ರನ ಒಂದೇ ಬಾಣ ಸಾಕು.

ವೃಕ್ಷ ಶಾಖೆಗಳು ವೃಕ್ಷ ಅಧೀನವಾಗಿರುವಂತೆ ಸಕಲಲೋಕಗಳು ಇಂದ್ರಾಧೀನವಾಗಿವೆ. ವೃಷ್ಟಿಯನ್ನು ಸುರಿಸಿ ಗೋವುಗಳಲ್ಲಿ ಹಾಲನ್ನು ಸ್ಥಾಪಿಸಿದ್ದಾನೆ. ಇಂದ್ರನನ್ನು ಸ್ತುತಿಸಿದರೆ ಏನೂ ಕೊಡುವುದಿಲ್ಲವೆಂದು ಏನೂ ಇಲ್ಲ, ಇಷ್ಟೇ ಕೊಡಬೇಕೆಂಬ ನಿಯಮವು ಇಲ್ಲ ಅನುಗ್ರಹಿಸಿಯೇ ಅನುಗ್ರಹಿಸುತ್ತಾನೆ. ವಾಯುವಿಗೆ ಇಂದ್ರನಿಗೆ ಮೊದಲೇ ಸೋಮ ಅರ್ಪಿಸುತ್ತಾರೆ.

ಶುಭಾಶುಭ ಫಲಗಳು ಅವರವರ ಕರ್ಮ ಫಲಾನುಸಾರ ಉಂಟಾಗುತ್ತದೆ ಎನ್ನುತ್ತಾರೆ ಋಷಿಗಳು. ಶತ್ರು ಸೇನೆ ಎಷ್ಟೇ ಬಲವಾಗಿದ್ದಾರೂ, ಒಮ್ಮೆಲೆ ಎದುರಿಸುವುದು ಇಂದ್ರನಿಗೆ ಬಹಳ ಸುಲಭವಾದುದ್ದು. ಶತ್ರುಗಳ ಜೊತೆಯಲ್ಲಿ ವೃಷಭ ಗೂಳಿಯಂತೆ ಹೋರಾಡಬಲ್ಲನು. ಶತ್ರು ಸಹಾಸವನ್ನು ವ್ಯರ್ಥಗೊಳಿಸಿ ಅವರನ್ನು ಸೋಲಿಸುತ್ತಾನೆ.

ಶಂಬರಾಸುರ ಎಂಬ ರಾಕ್ಷಸನನ್ನು ಅವನ ತೊಂಭತ್ತೊಂಭತ್ತು ಪಟ್ಟಣಗಳನ್ನು ನಾಶ ಮಾಡಿ ನೂರನೇಯದು ರಾಜ ಋಷಿ ದಿವೋದಾಸನಿಗೆ ಕೊಟ್ಟನು. ಶತ್ರಗಳಿಂದ ಗೆದ್ದ ಅಪರಿಮಿತ ಧನವನ್ನು ಇತರರು ಯಾರು ಪಡೆಯಲು ಅವಕಾಶಕೊಡುವುದಿಲ್ಲ. ಶತ್ರುಗಳಿಂದ ಸಕಲ ಸಂಪತ್ತನ್ನು ವಶಪಡಿಸಿಕೊಳ್ಳುತ್ತಾ, ಧನ ಭಾರದಿಂದ ಬಗ್ಗಿ ಸಂಪತ್ತನ್ನು ಯಾಜ್ಞಿಕರು ಯಜಮಾನರುಗಳಿಗೆ ಹಂಚುತ್ತಾನೆ.

ಸೋಮ ಹಿಂಡುವವರನ್ನು ಪುರೋಡಾಶ ಪಕ್ವ ಮಾಡುವವರನ್ನು ಸ್ತುತಿಕರ್ತರನ್ನು ವಿಶೇಷವಾಗಿ ರಕ್ಷಿಸುತ್ತಾನೆ. ಸೋಮಲತೆಯು ಸಾರಭೂತವಾದುದು. ಸೋಮ ಪಾನ ಬಲದಿಂದ ಹಾರುವ ಪರ್ವತದ ರೆಕ್ಕೆಯನ್ನು ಕತ್ತರಿಸಿ ಅವು ಸ್ಥಿರವಾಗಿ ನಿಲ್ಲುವಂತೆ ಮಾಡಿದನು. ಸೂರ್ಯ ನಕ್ಷತ್ರ, ಉಷಸ್ ಅಂತರಿಕ್ಷಗಳನ್ನು ನಿರ್ಮಿಸಿದನು. ಸಪ್ತ ಸಂಖ್ಯಾತ ರಶ್ಮಿಗಳಿಂದ ಮೇಘ ಮಧ್ಯದಲ್ಲಿ ವಿದ್ಯುತ್ ರೂಪಿನಲ್ಲಿ ಅಗ್ನಿ ಸೃಷ್ಟಿಸಿ ಮೇಘ ಹನನಮಾಡಿ ಅಹಿ ಎಂಬ ರಾಕ್ಷಸನನ್ನು ಸಂಹರಿಸಿ ನದಿಗಳು ಹರಿದು ಸಮುದ್ರ ಸೇರುವಂತೆ ಮಾಡಿದನು.

ಸ್ತ್ರೀಯರಿಗೆ ಮಂತ್ರ ಹೇಳುವ ಅಧ್ಯಯನ ಮಾಡುವ ಯಾಗ ಮಾಡುವ ಸಾಮರ್ಥ್ಯ ತಿಳುವಳಿಕೆ ಇಲ್ಲದುದರಿಂದ ಪತಿಯೇ ಪತ್ನಿಯರ ಅನುಮತಿಯನ್ನು ಪಡೆದು ಆ ಕರ್ಮಗಳನ್ನು ಮಾಡುತ್ತಾರೆ. ಸಪ್ತ ನದಿಗಳು (ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದಾ, ಸಿಂಧೂ, ಕಾವೇರಿ ಹರಿಯುವ ನೀರಿಗೆ) ದಡನಿರ್ಮಿಸಿ ಸುಗಮವಾಗಿ ಹರಿದು ಸಮುದ್ರ ಸೇರುವಂತೆ ಮಾಡಿದವನು ಇಂದ್ರ ಸ್ತೋತ್ರಗಳಿಂದ, ಪೂಜೆಗಳಿಂದ, ಯಜ್ಞ ಯಾಗಗಳಿಂದ ಪಾಪ ವೃದ್ಧಿಗಳು ಪವಿತ್ರವಾಗಿವೆ.

ಇಂದ್ರನು ಸದಾ ಮದಕರ ಸೋಮ ರೂಪಿ ಅನ್ನವನ್ನು ಬಯಸುತ್ತಾನೆ. ಸೋಮ ಹಿಂಡುವವರನ್ನು ಪುರೋಡಾಶ ಪಕ್ವಮಾಡುವವರನ್ನು ಸ್ತುತಿಕರ್ತರನ್ನು ವಿಶೇಷವಾಗಿ ರಕ್ಷಿಸುತ್ತಾನೆ. ಸೋಮ ಲತೆಯು ಸಾರ ಭೂತವಾದುದು. ವರ್ಷಋತುವಿನಲ್ಲಿ ವಿಶೇಷವಾಗಿ ಬೆಳೆದು ನಿಂತಿರುತ್ತದೆ. ಸೋಮಪಾನ ಮಾಡಿ ಹವಿಸ್ಸಿನಿಂದಲೇ ಇಂದ್ರನು ವೃತ್ರಾಸುರನನ್ನು ಕೊಂದನು. ಸೋಮ ಪಾನ ಬಲದಿಂದ ಹಾರುವ ರೆಕ್ಕೆಗಳನ್ನು ಕತ್ತರಿಸಿ ಅವು ಸ್ಥಿರವಾಗಿ ನಿಲ್ಲುವಂತೆ ಮಾಡಿದನು. ಸೋಮವನ್ನು ಗಾಯಿತ್ರಿಯು ಸ್ವರ್ಗದಿಂದ ಪಕ್ಷಿರೂಪದಿಂದ ಭೂಮಿಗೆ ತಂದಳು. ನದಿರೂಪಿನಲ್ಲಿ ಯಾಜ್ಞಿಕರಿಗೆ ಒದಗಿಸಿದಳು.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಇಂದ್ರ ದೇವರು (ಸ್ತೋತ್ರ ವಿಭಾಗ) ವಿಶೇಷತೆಗಳು

ಅಹಸ್ಸಿನಲ್ಲಿ ಸೂರ್ಯನೊಂದಿಗೆ ಅಗ್ನಿಯೂ, ರಾತ್ರಿಯಲ್ಲಿ ಅಗ್ನಿಯೊಂದಿಗೆ ಸೂರ್ಯನು ಸೇರಿಕೊಳ್ಳುತ್ತಾರೆ. ಅರ್ಥ ತಿಳಿಯದೇ ಮಂತ್ರ ಪಠಿಸಿದರೂ ಅವರು ತಮ್ಮವರೆಂದು ತಿಳಿದು ಕಾಪಾಡುತ್ತಾನೆ. ಅನ್ನ ಬೆಳೆಯಲು ಕುಡಿಯಲು ಪ್ರಾಣಿಗಳಿಗೆ ನೀರು ದೊರೆಯುವಂತೆ ಮಾಡಿದ್ದಾನೆ. ಆಂಗೀರಸರು ಇಂದ್ರನನ್ನು ಸ್ತುತಿಸಿ ಸ್ತುತಿಸಿ ಪ್ರಸಿದ್ಧನಾಗುವಂತೆ ಮಾಡಿದರು. ಅಗ್ನಿಷ್ಟೋಮ ಕರ್ಮಗಳಿಂದ ತೃಪ್ತಿಪಡಿಸುವವರನ್ನು ಇಂದ್ರನು ಒಡನೆಯೇ ರಕ್ಷಿಸುತ್ತಾನೆ. ಆದಿತ್ಯರೂಪಿಯಾಗಿ ಆದಿತ್ಯ ಮಂಡಲವಾಗಿ ಸ್ಥಾಪಿತನಾಗಿದ್ದಾನೆ. ಆದಿತ್ಯ ರಶ್ಮಿ ಮೂರು ಲೋಕದಲ್ಲೂ ಪ್ರಕಾಶಿಸುತ್ತದೆ. ಇಂದ್ರನು ಅತ್ಯುತ್ತಮ ನಾಲ್ಕನೆಯ ಸ್ಥಾನದಲ್ಲಿದ್ದಾನೆ. ಆದಿತ್ಯ ಮಂಡಲದಲ್ಲಿ ಇಂದ್ರನ ವಜ್ರಾಯುಧವಿದೆ.

ಇಂದ್ರನು ಕುಬೇರನಿಗೂ ಅಧಿಪತಿ. ಇಂದ್ರನ ಕುದುರೆ ಹರಿಯನ್ನು ಸ್ಮರಿಸಿದರೆ ದೀರ್ಘ ಆಯುಷ್ಮವಂತರಾಗುತ್ತಾರೆ. ಇಂದ್ರನಿಲ್ಲದ ಜಾಗ ಸ್ಮಶಾನ ಎಂದಿದ್ದಾರೆ. ಇಂದ್ರನನ್ನು ಒಲಿಸಿಕೊಳ್ಳುವುದು ಬಲು ಕಷ್ಟಸಾಧ್ಯ ಎಂದಿದ್ದಾರೆ. ಇಂದ್ರ, ಹರಿ ಎಲ್ಲಾ ಇಷ್ಟಾರ್ಥಪ್ರದರೇ, ಕಾಮವರುಷಕರೇ ಆಗಿರುತ್ತಾರೆ. ಇಂದ್ರಾಗ್ನಿಗಳ ಆಧಾರದ ಮೇಲೆಯೇ ಈ ಜಗತ್ತು ನಿಂತಿದೆ. ಇಬ್ಬರೂ ಧನಾಧಿಪತಿಗಳು. ಇಂದ್ರ ಅನುಗ್ರಹ ಪಡೆದವರಿಗೆ ಬಯಸಿದುದೆಲ್ಲಾ ಪಡೆಯಲು ಸಾಧ್ಯವಾಗುತ್ತದೆ. ಇಂದ್ರನೊಂದಿಗೆ ಚೈತ್ರಾದಿ ಮಾಸಗಳು, ವನ, ವೃಕ್ಷ, ಪರ್ವತಗಳು, ದ್ಯಾವಾ, ಪೃಥ್ವಿಗಳು ಉತ್ಪನ್ನವಾದವು. ಎಲ್ಲವೂ ಇಂದ್ರನಿಗೆ ತಲೆಬಾಗಿ ಆಜ್ಞೆ ಪರಿಪಾಲಿಸುತ್ತವೆ.

ಈ ವಿಭಾಗದಲ್ಲಿ ನನಗೆ ಗೋಚರವಾದಂತೆ ಕೆಲವು ಮುಖ್ಯವೆನಿಸಿದ ವಿಚಾರಗಳನ್ನು ಈ ಕೆಳಗಿನಂತೆ ಬರೆದಿದ್ದೇನೆ.

(1) ಆತ ಪ್ರೇರಣೆಯಿಂದಲೇ ಕರ್ಮಗಳನ್ನು ಮಾಡುತ್ತಾರೆ. (2) ಆತುರವಿಲ್ಲದೆ ಮನೋ ವಿಕಲ್ಪವಿಲ್ಲದೆ ಶುದ್ಧ ಭಕ್ತಿಯಿಂದ, ಶಾಂತ ಮನಸ್ಸಿನಿಂದ ಸ್ತೋತ್ರ, ಪೂಜಾದಿಗಳನ್ನು ಮಾಡುತ್ತಾರೆ. (3) ಆಶ್ರಮಗಳಲ್ಲಿ ಯಜಮಾನರು ಪ್ರತಿಯೊಬ್ಬರಿಗೂ ನಿರ್ದಿಷ್ಟವಾದ ಕಾರ್ಯಗಳನ್ನು ನಿಯಮಿಸಿರುತ್ತಾರೆ. ಅವರು ಎಲ್ಲರೂ ಆಯಾಯ ಕಾರ್ಯಗಳಲ್ಲಿ ಸಮರ್ಥರಾಗಿಯೂ ಇರುತ್ತಾರೆ.

ಇಂದು - ನಾಳೆ ಏನು ಸಂಭವಿಸುವುದೋ ಎಂದು ಯಾರಿಗೂ ತಿಳಿಯುವುದಿಲ್ಲ ಎಂದಿದ್ದಾರೆ. ಇಂದ್ರನು ಇರಬಹುದಾದ ಸ್ಥಳಗಳನ್ನು ಈ ಕೆಳಕಂಡಂತೆ ತಿಳಿಸಿದ್ದಾರೆ. (ಅ) ಯಜ್ಞಯಾಗಾದಿಗಳು ನಡೆಯುವ ಸ್ಥಳಗಳಲ್ಲಿ (ಆ) ಯುದ್ಧಭೂಮಿಯಲ್ಲಿ (ಇ) ಭೂಮಿ, ಆಕಾಶ, ದ್ಯುಲೋಕಗಳಲ್ಲಿ (ಈ) ಪರ್ವತ, ಗಿಡ ಮೂಲಿಕೆಗಳಲ್ಲಿ (ಉ) ಅಹಿಂಸಕರ ಗುಂಪುಗಳಲ್ಲಿ

ಇಂದ್ರನು ಸರೋವರದಂತಹ ತನ್ನ ಉದರವನ್ನು ಸೋಮದಿಂದ ತುಂಬಿಕೊಳ್ಳಲಿ. ಇಂದ್ರ ಮಹಾತ್ಮೆ ತಿಳಿದವರು ಮಾತ್ರ ಅವನನ್ನು ಪೂಜಿಸುತ್ತಾರೆ.

ಇಂದ್ರನಿಗಾಗಿಯೇ ಉತ್ತಮ ಸ್ಥಾನ, ಹವಿರೂಪ ಅನ್ನ, ಹೊಸ ಹೊಸ ಸ್ತೋತ್ರಗಳು, ಸೋಮರಸ ಎಲ್ಲವನ್ನೂ ಸಿದ್ಧಪಡಿಸಿಕೊಂಡಿರುತ್ತಾರೆ. ಇಂದ್ರಾಗ್ನಿಗಳನ್ನು ಉದ್ದೇಶಿಸಿಯೇ ಕರ್ಮಗಳನ್ನು ಇಂದ್ರ ಪ್ರಿತ್ಯರ್ಥವಾಗಿ ಮಾಡುತ್ತಾರೆ. ಶಸ್ತ್ರ ಮಂತ್ರಗಳನ್ನು ಪಠಿಸುತ್ತಾರೆ. ಇಂದ್ರಾಗ್ನಿಗಳು ಖಂಡಿತವಾಗಿಯೂ ರಕ್ಷಿಸಿಯೇ ರಕ್ಷಿಸುತ್ತಾರೆಂದು ದೃಢವಾಗಿ ನಂಬಿದ್ದಾರೆ. ಇಂದ್ರನು ಪೂಜಕರಲ್ಲದವರನ್ನು, ನಾಸ್ತಿಕರನ್ನು, ಅಸುರರನ್ನು, ಶತ್ರುಗಳನ್ನು ಸಂಹರಿಸುತ್ತಾನೆ. ಇಂದ್ರನ ಜೊತೆಗೆ ಅಗ್ನಿ, ವರುಣ, ಬ್ರಹಸ್ಪತಿ, ವಾಯು, ಸೋಮರು ಇರುತ್ತಾರೆ.

ಉಪಾಸನೆ ಅತ್ಯಗತ್ಯ. ಪಾಪಾಚರಣೆ ಮಾಡಬಾರದು ಎಂದಿದ್ದಾರೆ. ಒಂದೇ ರೀತಿಯಲ್ಲಿ ತೊಂದರೆಗಳಲ್ಲಿ ಇರುವವರು ಇಂದ್ರಾಗ್ನಿಗಳನ್ನು ಸ್ತುತಿಸಿ ಆರಾಧಿಸಲು ಹೇಳಿದ್ದಾರೆ. ದ್ಯುಲೋಕ ದೇವತೆ, ಪೃಥ್ವಿದೇವತೆಗಳಿಗಿಂತ ಇವರು ವಿಸ್ತಾರರೂಪರು. ದಾನಗಳಿಂದ ಸ್ವರ್ಗವು ಪ್ರಾಪ್ತಿಯಾಗುತ್ತದೆ ಎಂದಿದ್ದಾರೆ. ತಪಃಶಕ್ತಿಯಿಂದ ಅಸುರ ಮೋಹಕ ಶಕ್ತಿಯನ್ನು ನಿವಾರಿಸಿ ಬೆಳಕು ಪಡೆದಿದ್ದಾರೆ. ದ್ಯುಲೋಕ, ಪೃಥ್ವಿ, ಹಗಲು, ರಾತ್ರಿ, ನೀರು, ಓಷಧಿಗಳಲ್ಲಿ ಸೋಮರಾಜನು ಇರುತ್ತಾನೆ. ಮೃತ್ಯುರಹಿತ ಸೋಮವು ಇಂದ್ರನಿಗಾಗಿಯೇ ಹೋಮರೂಪದಿಂದ ಅರ್ಪಿತವಾಗುತ್ತದೆ. ಮಾನವರಲ್ಲಿ ತಮ್ಮ ಜೀವಿತದ ಪರಿಣಾಮವನ್ನು ಖಂಡಿತ ಯಾರೂಅರಿಯಲಾಗುವುದಿಲ್ಲ.

ಯಾಜ್ಞಿಕರು ಯರ್ಜುವೇದ ಯಜ್ಞ ಸಾಧಕ ಮಂತ್ರ, ಹವಿಸ್ಸುಗಳಿಂದ ಮಹತ್ವಪಡೆದಿರುತ್ತಾರೆ. ಯಜ್ಞವು ಯಾಜ್ಞಿಕರ, ಇಂದ್ರನ ಸೌಹಾರ್ದದ ಒಂದು ಪ್ರಮುಖ ಪ್ರತೀಕ ಹಾಗು ಪ್ರಮುಖ ಕರ್ಮ. ಯಾಜ್ಞಿಕರು ತಡೆಯಿಲ್ಲದೆ ನಿರಂತರವಾಗಿ ಸ್ತೋತ್ರ, ಪ್ರಾರ್ಥನೆಗಳನ್ನುಮಾಡುತ್ತಿರುತ್ತಾರೆ. ಯಜ್ಞ ಯಾಗಾದಿ ಕರ್ಮಗಳನ್ನು ಮಾಡಿ ಮಾಡಿ ಆ ಬಲದ ಮೇಲೆಯೇ ತಮ್ಮ ಅಪೇಕ್ಷೆಗಳನ್ನು ಪಡೆದುಕೊಳ್ಳುತ್ತಾರೆ. ಮಹಾತ್ಮ್ಯ ತಿಳಿದವರೇ ಪೂಜಿಸುವವರು, ಮರುತ್ ಗಣವು ಯಜ್ಞ ರಕ್ಷಕರು, ಪ್ರಾಣಿಗಳಿಗೆ ಸಂಚಾರ ಮಾರ್ಗ ದರ್ಶಕರು ಹಾಗು ಮಳೆ ಸುರಿಸುವವರು. ಶಸ್ತ್ರ ಮಂತ್ರ ಪಠಿಸುವವರು ದೇವ ಸಾನ್ನಿಧ್ಯವನ್ನು ಪಡೆಯುತ್ತಾರೆ.

ಸೋಮವನ್ನು ಹಿಂಡಿ, ಶೋಧಿಸಿ, ಸಿದ್ಧಪಡಿಸಿ ಮೂರು ಸವನಗಳಲ್ಲಿಯೂ ಇಂದ್ರಾಗ್ನಿಗಳಿಗೆ ಅರ್ಪಿಸುತ್ತಾರೆ. ವಾಯು ಇಂದ್ರರನ್ನು ವಿಶೇಷವಾಗಿ ಪೂಜಿಸುತ್ತಾರೆ. ಸಮುದ್ರದ ಅಲೆಗಳಂತೆ ಒಂದಾದ ಮೇಲೆ ಒಂದು ಯಾಗಗಳನ್ನು ಮಾಡುತ್ತಲೇ ಇರುತ್ತಾರೆ. ಸೋಮನು ಇಂದ್ರನಿಗೂ, ಋತ್ವಿಜರಿಗೂ ಸಂಬಂಧವನ್ನು ಕಲ್ಪಿಸುವವನು. ಇಂದ್ರನು ಶ್ರದ್ಧಾಭಕ್ತಿಗಳು ಇಲ್ಲದವರ ಸ್ತೋತ್ರ, ಹವಿಸ್ಸುಗಳನ್ನು ಸ್ವೀಕರಿಸುವುದಿಲ್ಲ. ಕಾರ್ಯಕ್ಕೆ ತಕ್ಕಷ್ಟೆ ಫಲ ಪಡೆಯಬೇಕು ಎಂದಿದ್ದಾರೆ. ರಾಜರುಗಳು, ಧನಿಕರು, ಅಪರಿಮಿತ ಧನ, ಧಾನ್ಯ, ಸುವರ್ಣಾದಿ ದಾನಗಳಿಂದ ಯಾಜ್ಞಿಕರನ್ನು, ಯಜಮಾನರುಗಳನ್ನು ತೃಪ್ತಿಪಡಿಸುತ್ತಿರುತ್ತಾರೆ.

ಉಷಸ್ಸು ಪುನರಾವರ್ತನೆಗೊಳ್ಳುವ ಹಾಗೆ ಇಂದ್ರನ ಅನುಗ್ರಹ ಬುದ್ಧಿ ಮತ್ತು ಧನ ಎಣಿಸಲಾಗದಷ್ಟಿದೆ. ಉದಕವು ಆದಿತ್ಯಮಂಡಲವನ್ನು ಸೇರುತ್ತದೆ. ದೇವತೆಗಳು ಎಲ್ಲರೂ ಸೇರಿ ಸ್ವರ್ಗದಲ್ಲಿ ಇಂದ್ರನಿಗೆ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ದೇವಲೋಕದ ದೇವತೆಗಳು, ಪೃಥ್ವಿಲೋಕದ ದೇವತೆಗಳಿಗಿಂದ ವಿಸ್ತಾರ ರೂಪರು. ಧನ, ದಾನಾದಿಗಳಿಂದ ಪಾಪವು ನಾಶವಾಗುತ್ತದೆ. ದೇವಮಾತೆ ಅದಿತಿಯು ಇಂದ್ರನಿಂದಾಗಿ

ಅನೇಕರಿಂದ ಪ್ರಶಂಸಿತಳಾಗುತ್ತಾಳೆ. ದ್ಯಾವಾ ಪೃಥ್ವಿಗಳು ಇಂದ್ರನನ್ನು ದೂರ ಮಾಡುವುದಾಗಲೀ, ಅವನ ಪ್ರಭುತ್ವದಿಂದ ತಪ್ಪಿಸಿಕೊಳ್ಳುವುದಾಗಲೀ ಸಾಧ್ಯವಿಲ್ಲ ಎಂದಿದ್ದಾರೆ. ದೇವತೆಗಳ ನಿವಾಸಕ್ಕಾಗಿ ಸ್ವರ್ಗವನ್ನು ನಿರ್ಮಿಸಿದ್ದಾನೆ. ನಾಸ್ತಿಕರು, ಮೋಸಗಾರರು, ವಂಚಕರುಗಳನ್ನು ನಾಶಮಾಡುತ್ತಾನೆ.

ಪೃಥ್ವಿಯು ಇನ್ನೂ ಹತ್ತುಪಟ್ಟು ಬೆಳೆದರೂ ಮಾನವರು ಎಷ್ಟೇ ಹೆಚ್ಚಿದರೂ ಅದು ಇಂದ್ರನ ಸಾಮರ್ಥ್ಯಕ್ಕೆ ಬಲು ಕಡಿಮೆಯೇ ಆಗಿರುತ್ತದೆ. ಬೇರೆ ಬೇರೆ ರೂಪಗಳಲ್ಲಿ ತನ್ನ ರೂಪವನ್ನು ಇಂದ್ರನು ಬದಲಾಯಿಸಿಕೊಳ್ಳುತ್ತಾನೆ. ಭಕ್ತರಿಗೆ ಇಂದ್ರನೊಬ್ಬನೇ ರಕ್ಷಕ. ಅವನ ಕೃಪೆಯಿಂದ ಬಂಧನಗಳು ಅಂಟದೇ ಕಳಚಿ ಹೋಗುತ್ತದೆ.

ಮಾನವರಲ್ಲಿ ದಯೆ ತೋರುವವನು ಇಂದ್ರನೊಬ್ಬನೇ. ಮಾನವ ದೇಹದ ಒಂಭತ್ತು ಪ್ರಾಣಗಳೊಡನೆ ಹತ್ತನೆಯ ಪ್ರಾಣರೂಪ ಇಂದ್ರ. ಮರಣಕ್ಕೆ ಮೊದಲೇ ಹವಿರರ್ಪಿಸುವವರು ಭೋಗ ಸಾಧನವುಳ್ಳವರಾಗಿ ಉತ್ತಮ ಗತಿ ಪಡೆಯುತ್ತಾರೆ. ಯಜ್ಞದಲ್ಲಿ ಹವಿಸ್ಸು, ಸೋಮ, ಸ್ತೋತ್ರ ಅರ್ಪಿಸುವವರಿಗೆ ಅವರೆಲ್ಲಿದ್ದರೂ ಸರಿ ಭೋಗ ಸಾಧನಗಳನ್ನು ಇಂದ್ರನು ಒದಗಿಸುತ್ತಾನೆ.

ವೃಷ್ಟಿಗಾಗಿಯೇ ಸ್ತುತಿಸಿದರೆ ವೃಷ್ಟಿ ಸುರಿಸುತ್ತಾನೆ. ವಿಶ್ವಕ್ಕೆ ಧನಕ್ಕೆ, ಸ್ವರ್ಗಕ್ಕೆ, ಪ್ರಭು ಇಂದ್ರ. ವಿಷ್ಣುವಿನ ಎದುರಿನಲ್ಲಿಯೇ ಹವಿಸ್ಸು ಸ್ವೀಕರಿಸುತ್ತಾನೆ. ವೃತ್ರಾಸುರನನ್ನು ಕೊಂದೊಡನೆಯೇ ವಿಷ್ಣುವು ಮೂರು ಪಾದಗಳಿಂದ ಮೂರು ಲೋಕಗಳನ್ನು ಆಕ್ರಮಿಸಿದನು. ಸ್ವರ್ಗದಲ್ಲಿ ದುಷ್ಟರಿಗೆ ಪ್ರವೇಶವಿಲ್ಲ.

ಶಸ್ತ್ರ ಮಂತ್ರ ಪಠಿಸುವವರು ದೇವಸಾನಿಧ್ಯ ಪಡೆಯುತ್ತಾರೆ. ಸೂರ್ಯನಿಂದ ದ್ಯಾವಾ ಪೃಥ್ವಿಗಳನ್ನು ಪ್ರಕಾಶಗೊಳಿಸಿದ್ದಾನೆ. ಸೋಮದಿಂದ ತೃಪ್ತಿಹೊಂದಿ ಸೂರ್ಯ ಉಷಸ್ಸುಗಳನ್ನು ಅವರವರ ಸ್ಥಾನಗಳಲ್ಲಿ ನಿಲ್ಲಿಸಿದ್ದಾನೆ. ಸೋಮನು ವೈಯುಕ್ತಿಕವಾಗಿ ದ್ಯಾವಾ ಪೃಥ್ವಿಗಳನ್ನು ಸ್ಥಾಪಿಸಿದನು. ಸ್ತೋತ್ರಗಳಿಂದ, ಮಂತ್ರಗಳಿಂದ ಇಂದ್ರನ ಶರೀರವು ವೃದ್ಧಿಯಾಗುತ್ತದೆ. ಆಕಾಶದಲ್ಲಿ ಸಕಲ ದೇವತೆಗಳನ್ನು, ಬಲವನ್ನು ವೀರ್ಯವನ್ನು ಶತ್ರು ವಧೆಗಾಗಿ ಸಂಯೋಜಿಸಿದ್ದಾನೆ. ಸಕಲ ಸಮುದ್ರ, ದ್ಯಾವಾ ಪೃಥ್ವಿ ಅಹೋ ರಾತ್ರಿ, ಅಂತರಿಕ್ಷ, ಸಾಗರ, ವಾಯು, ದಿಗಂತ, ನದಿ, ಉದಕ, ಪರ್ವತ ಎಲ್ಲವನ್ನೂ ಮೀರಿ ವ್ಯಾಪಿಸಿ ಬೆಳೆದಿದ್ದಾನೆ ಇಂದ್ರ.

ಸೂರ್ಯನನ್ನು ಅಂತರಿಕ್ಷದಲ್ಲಿ ಸ್ವರ್ಗದ ಮೇಲ್ಭಾಗದಲ್ಲಿ ಸ್ಥಾಪಿಸಿ ಪ್ರಕಾಶಿಸುವಂತೆ ಮಾಡಿದ್ದಾನೆ. ಸೂರ್ಯರೂಪಿನಲ್ಲಿಯೂ ಇಂದ್ರನು ಬೆಳಿಗ್ಗೆ ಪೂರ್ವದಲ್ಲಿ ಸಂಜೆ ಪಶ್ಚಿಮದಲ್ಲಿ ಕಾಣಿಸಿಕೊಳ್ಳುತ್ತಾನೆ. (ಇಂದ್ರ ಸೂರ್ಯ ರೂಪಿ). ಹಸಿವು, ಬಾಯಾರಿಕೆಗಳಿಗೆ ಪರಿಹಾರಾರ್ಥವಾಗಿ ಸಪ್ತ ಸಂಖ್ಯಾತ ನದಿಗಳು ತಪ್ಪಲು ಪ್ರದೇಶಗಳಲ್ಲಿ ಹರಿದು ಅನ್ನ, ನೀರುಗಳ ಅನುಕೂಲಗಳನ್ನು ಕಲ್ಪಿಸಿ ರಕ್ಷಿಸುತ್ತಿದ್ದಾನೆ. ಹಸುವಿನ ಕೆಚ್ಚಲಲ್ಲಿ ಹಾಲು ತುಂಬಿ, ಸೋಮ ಲತೆಯಲ್ಲಿ ಸೋಮರಸವನ್ನು ತುಂಬಿ ಎಲ್ಲರಿಗೂ ಅನುಕೂಲವಾಗುವಂತೆ ಮಾಡಿದ್ದಾನೆ ಇಂದ್ರ.

ಒಂದು ನೂರು ಅಶ್ವಮೇಧ ಯಾಗಗಳನ್ನು ಮಾಡಿ, ತಪಸ್ಸು ಮಾಡಿ ಇಂದ್ರನು ಸ್ವರ್ಗಾಧಿಪತ್ಯವನ್ನು ಪಡೆದುಕೊಂಡಿದ್ದಾನೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಕ್ಷರಮಾಲಿಕೆ - ಇಂದ್ರದೇವತೆ (ಆಶ್ರಮ ವಿಭಾಗ)

ಅಧ್ವರ್ಯುಗಳನ್ನು ಯಾಗಕ್ಕೆ ಪ್ರಚೋದಿಸುತ್ತಾರೆ. ಅನಾದಿ ಕಾಲದಿಂದ ಕರ್ಮಗಳನ್ನು ಮಾಡುತ್ತಾ ಬಂದಿದ್ದಾರೆ. ಅರಣ್ಯಗಳಲ್ಲಿ ಋಷಿಗಳು ದೇವತೆಗಳನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ, ಹವಿಸ್ಸು ಅರ್ಪಿಸುತ್ತಾರೆ, ಸೋಮವನ್ನು ಅರ್ಪಿಸುತ್ತಾರೆ, ನಾನಾ ರೀತಿ ಉಪಾಸನೆ ಮಾಡುತ್ತಾರೆ. ಅಪೂರ್ವ ನೂತನ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ಅಗ್ನಿಯನ್ನು ಪ್ರಜ್ವಲಿಸಿ ತೃಪ್ತಿಯಾಗುವಷ್ಟು ಹೋಮ ಮಾಡುತ್ತಾರೆ. ಸೋಮಾರ್ಪಣೆ ಮಾಡುತ್ತಾರೆ. ಅಧ್ವರ್ಯುಗಳಿಂದ ಸೋಮವು ಸಿದ್ಧವಾಗುತ್ತದೆ. ಅನೇಕರು ಒಟ್ಟಾಗಿ ಸೇರಿ ಸ್ತುತಿ ಹವಿಸ್ಸು ಅರ್ಪಿಸಿ ಇಂದ್ರನನ್ನು ತೃಪ್ತಿಗೊಳಿಸುತ್ತಾರೆ. ಅಶ್ವಗಳಿಗೂ ಭಾಗಶಃ ಸೋಮವನ್ನು ಅರ್ಪಿಸುತ್ತಾರೆ. ಅಶ್ವಗಳು ಇಂದ್ರನನ್ನು ಸೋಮಪಾನಕ್ಕೆ ಕರೆತರಲಿ ಎಂದು ಪ್ರಾರ್ಥಿಸಿದ್ದಾರೆ. ಅನೇಕ ಶ್ರೇಷ್ಟ ಕರ್ಮಗಳನ್ನು ಮಾಡುತ್ತಾರೆ. ಅಶ್ವಗಳು ಅತಿ ಶಬ್ದ ಮಾಡುತ್ತಾ ಇಂದ್ರನನ್ನು ತಮ್ಮಲ್ಲಿಗೇ ಕರೆತರಲಿ. ಅಗ್ನಿಷ್ಟೋಮ ಯಾಗಗಳನ್ನು ಮಾಡಿ ತೃಪ್ತಿಗೊಳಿಸುತ್ತಾರೆ.

ಆಶ್ರಮಗಳಲ್ಲಿ ಋಗ್ವೇದಿ = ಶಸ್ತ್ರಮಂತ್ರ ಹೇಳುವವರು ; ಯರ್ಜುವೇದಿ = ನೇರವಾಗಿ ಹೋಮ ಮಾಡುವವರು; ಸಾಮವೇದಿ = ಸಾಮಗಾನದಿಂದ ಸ್ತುತಿಸುವವರು ; ಉದ್ಗಾತೃ = ಬೃಹತ್ ಸಾಮದಿಂದ ಲೋಪದೋಶಗಳಿಲ್ಲದೆ ಯಜ್ಞ ಮಾಡುವವರು.

ಬ್ರಹ್ಮ: ಎಲ್ಲವನ್ನು ಬಲ್ಲವನು, ಕರ್ಮವನ್ನು ವೀಕ್ಷಿಸುವವನು, ಇವರೆಲ್ಲರೊಂದಿಗೆ ಋಷಿಗಳು ಲೋಪ ದೋಷಗಳಿಲ್ಲದೆ ಯಜ್ಞ ಯಾಗಗಳನ್ನು ಮಾಡುತ್ತಿರುತ್ತಾರೆ. ಆಹ್ವಾನಿಸಿದ ನಂತರವೇ ಕರ್ಮಗಳನ್ನು ಮಾಡುತ್ತಾರೆ. ಆತ್ಮ ಪ್ರೇರಣೆಯಿಂದಲೇ ಕರ್ಮಗಳನ್ನು ಮಾಡುತ್ತಾರೆ.

ಇಂದ್ರ, ಮರುತ್‌ಗಳಿಬ್ಬರನ್ನು ಆಹ್ವಾನಿಸುತ್ತಾರೆ. ಇಂದ್ರನು ಸಹಾಯಕ್ಕೆ ಬಂದೇ ಬರುತ್ತಾನೆಂದು ಋಷಿಗಳು ನಂಬಿದ್ದಾರೆ. ಇಂದ್ರನನ್ನು ಬಯಸುವವರು ಪಾಪಾಚರಣೆ ಮಾಡಬಾರದು. ಇಂದ್ರನ ಮಹಾತ್ಮೆಯನ್ನು ತಿಳಿದವರೇ ಸ್ತುತಿಸುತ್ತಾರೆ. ಇಂದ್ರನನ್ನು ಎಲ್ಲಾ ರೀತಿಯಿಂದಲೂ ಪ್ರಶಂಶಿಸಿ ಪ್ರಸನ್ನೀಕರಿಸಿಕೊಳ್ಳಲು ಋಷಿಗಳು ಆದೇಶಿಸುತ್ತಾರೆ. ಇಂದ್ರನ ಸಾಹಸ ಕರ್ಮಗಳನ್ನು ಪ್ರಶಂಸಿಸುತ್ತಾರೆ. ಇಂದ್ರನ ಜೊತೆಗೆ ಅಗ್ನಿ, ಅಶ್ವಿನಿ, ವರುಣ, ಸೋಮ, ಬ್ರಹ್ಮಣಸ್ಪತಿ, ಉಷಾರವರನ್ನು ಇತರೇ ದೇವತೆಗಳನ್ನು ಆಹ್ವಾನಿಸಿ ಪೂಜಿಸಲು ಹೇಳಿದ್ದಾರೆ. ಇಂದ್ರನು ಬೇರೆ ಎಲ್ಲೂ ಹೋಗದೆ ತಮ್ಮ ಯಾಗಕ್ಕೆ ಬರಬೇಕೆಂದು ಆಹ್ವಾನಿಸುತ್ತಾರೆ. ಎಲ್ಲೇ ಇರಲಿ ''ಹರಿ'' ನಾಮಕ ಅಶ್ವಗಳೊಡನೆ ಬರಲು ಬಯಸುತ್ತಾರೆ. ಇಂದ್ರ ಧನವು ಋಷಿಗಳು ಯಾಜ್ಞಿಕರಿಗಾಗಿಯೇ ಎಂದು ತಿಳಿಸಿದ್ದಾರೆ. ಇಂದ್ರನು ತಮ್ಮ ಪ್ರಭುವೆಂದೇ ಸಂಪೂರ್ಣ ನಂಬಿದ್ದಾರೆ. ಇಂದ್ರನನ್ನು ಉದ್ದೇಶಿಸಿಯೇ ಯಾಗ ಮಾಡುತ್ತಾರೆ.

ಉತ್ತರ ವೇದಿಕೆಯಲ್ಲಿ ಇಂದ್ರನನ್ನು ಸ್ಥಾಪಿಸುತ್ತಾರೆ. ಉಷ ಕಾಲದಿಂದಲೇ ಎದ್ದು ಸಕಲ ಸಿದ್ಧತೆಗಳನ್ನು ಮಾಡಿಕೊಂಡಿರುತ್ತಾರೆ. ಉತ್ತಮ ಜ್ಞಾನಿಗಳಿರುತ್ತಾರೆ. ಶ್ರದ್ಧಾವಂತ ಕರ್ಮನಿರತರು ಇರುತ್ತಾರೆ. ಉತ್ತರ ವೇದಿಕೆಯಲ್ಲಿ ಚಮಸ ಪಾತ್ರೆಯಲ್ಲಿ ಸೋಮ ಇಟ್ಟಿರುತ್ತಾರೆ. ಉತ್ತಮ ಸೋಮ ಸಿದ್ಧ ಪಡಿಸಿ ನಂತರವೇ ಇಂದ್ರನನ್ನು ಆಹ್ವಾನಿಸುತ್ತಾರೆ. ಉತ್ತಮ ಶಸ್ತ್ರಮಂತ್ರ, ಉಕ್ತ ಮಂತ್ರ ನಿರ್ಮಿಸಿ ಪಠಿಸುತ್ತಾರೆ. ಉಷಃಕಾಲದಲ್ಲಿ ಇಂದ್ರನನ್ನು ಪೂಜಿಸುವವರು ಸುಖವಾಗಿ ಇರುತ್ತಾರೆ.

ಋಷಿಗಳಿಗೆ, ಯಾಜ್ಞಿಕರಿಗೆ, ಯಜಮಾನರಿಗೆ ಪಾಪವು ಸಮೀಪಿಸುವುದಿಲ್ಲ. ಋಷಿಗಳು ಹೊಸ ಹೊಸ ನಾನಾ ಯಜ್ಞಯಾಗಾದಿಗಳನ್ನು ಜನರಿಗಾಗಿ ನಾನಾ ಪ್ರಯೋಜನಗಳಿಗಾಗಿ ಇಂದ್ರ ಪ್ರೀತ್ಯರ್ಥವಾಗಿ ಅನಾದಿ ಕಾಲದಿಂದಲೂ ಮಾಡುತ್ತಾ ಬಂದಿದ್ದಾರೆ. ಋತ್ವಿಜರು ಧನಾಪೇಕ್ಷೆಯಿಂದಲೇ ಕರ್ಮವನ್ನು ಮಾಡುತ್ತಾರೆ. ಇಂದ್ರನನ್ನು ಆಹ್ವಾನಿಸುತ್ತಾರೆ. ಶಸ್ತ್ರಮಂತ್ರವನ್ನು ಪಠಿಸುತ್ತಾರೆ. ಋಷಿಗಳು ಇಂದ್ರಾಗ್ನಿಗಳನ್ನು ತಮ್ಮ ಸಮೀಪ ಬಂಧುವನ್ನಾಗಿ ಮಾಡಿಕೊಂಡಿದ್ದಾರೆ. ಋಷಿಗಳು ಯಜ್ಞ ಗೃಹ ಪ್ರವೇಶಿಸಿ ಇಂದ್ರನನ್ನು ಆರಾಧಿಸಿ ತೃಪ್ತಿಗೊಳಿಸಿದ್ದಾರೆ. ಋಷಿ ಕಾಣ್ವರು ಇಂದ್ರನನ್ನು ಯಜ್ಞದಲ್ಲೂ, ಯುದ್ಧದಲ್ಲೂ, ಆಹ್ವಾನಿಸಿದ್ದಾರೆ. ಋತ್ವಿಜರು ದೇವತೆಗಳಿಗೆ ದರ್ಭಾಸನ ಹರಡಿರುತ್ತಾರೆ. ಸಕಲ ಯಜ್ಞಕರ್ಮಗಳನ್ನು ಮಾಡಿ ಇಂದ್ರನನ್ನು ದಷ್ಟಪುಷ್ಟನನ್ನಾಗಿ ಬೆಳೆಯುವಂತೆ ಮಾಡಿದ್ದಾರೆ. ಋಷಿಗಳು ಗೃಹ ಕ್ಷೇತ್ರ, ಸಾಮ್ಯಗಳನ್ನು ತ್ಯಾಗಮಾಡಿ ಉಪನಿಷತ್ ವಾಕ್ಯ ಶಾಸ್ತ್ರಜ್ಞಾನ, ಮನನ ಸಾಮರ್ಥ್ಯಗಳನ್ನು ತಪಶಕ್ತಿಯಿಂದ ಪಡೆದುಕೊಂಡಿದ್ದಾರೆ. ಋಗ್ವೇದ ಸ್ತುತಿ ಮಂತ್ರಗಳಿಂದ ಸ್ತುತಿಸಿ ಇಂದ್ರನ ಸ್ನೇಹಿತರಾದರು. ಋತ್ವಿಜರು ಆಹವನೀಯಾಗ್ನಿಯನ್ನು ಪ್ರಜ್ವಲಿಸುತ್ತಾರೆ. ಏಳು ಛಂದಸ್ಸುಗಳಲ್ಲಿ ಯಾಗ ಮಾಡುತ್ತಾರೆ.

ಕರ್ಮ ಹೀನರಿಗೆ ದೇವತೆಗಳು ಸಹಾಯಕರಾಗುವುದಿಲ್ಲ. ಕಠಿಣ ಸಾಧನೆ ಸ್ತುತಿಗಳಿಂದ ಸೋಮ ಹಿಂಡಿ ಪುರೋಡಾಶ ಪಕ್ವ ಮಾಡಿ ಯಜ್ಞಯಾಗಗಳನ್ನು ಮಾಡಿ ಸಾಗರವನ್ನು ದಾಟಿದ್ದಾರೆ. ಕಾಲೋಚಿತ ಸ್ತೋತ್ರಗಳನ್ನು ಮಾಡುತ್ತಾರೆ. ಗ್ರಾವಗಳಿಂದ ಸೋಮಲತೆ ಚಚ್ಚುವ ಶಬ್ದವು ಕೇಳುತ್ತಿರುತ್ತದೆ. ಜನ ಮುಖಂಡರು ಯಜಮಾನರು ಕರ್ಮಗಳನ್ನು ಮಾಡಿ ದೇವತೆಗಳನ್ನು ಒಲಿಸಿಕೊಳ್ಳುತ್ತಾರೆ. ಜ್ಯೋತಿಯನ್ನು ಬೆಳಗಿಸುತ್ತಾರೆ. ಧ್ಯಾನಿಸುತ್ತಾರೆ. ತಂದೆಯಿಂದ ಮಕ್ಕಳು ರಕ್ಷಣೆ ಪಡೆದಂತೆ ಇಂದ್ರನಿಂದ ರಕ್ಷಣೆ ಪಡೆದಿದ್ದಾರೆ. ದೇವತೆಗಳನ್ನು ಆಹ್ವಾನಿಸಿದ ನಂತರ ಕರ್ಮಗಳನ್ನು ಮಾಡುತ್ತಾರೆ. ದೂರ ದೇಶದಿಂದ, ದ್ಯುಲೋಕದಿಂದ ಅಥವಾ ಬೇರೆ ಎಲ್ಲೆ ಇದ್ದರೂ ಸರಿ ಇಂದ್ರನು ಅಶ್ವರೂಢನಾಗಿ ಮರುತ್‌ಗಳೊಡಗೂಡಿ ಯಜ್ಞಕ್ಕೆ ಬರಲಿ ಎಂದು ಆಹ್ವಾನಿಸಿದ್ದಾರೆ.

ಯಜಮಾನಾಭಿಮುಖ ಕುಳಿತುಕೊಳ್ಳಲಿ. ಸ್ತುತಿ ಕೇಳಲಿ. ಹವಿಸ್ಸು ಸ್ವೀಕರಿಸಲಿ. ಸೋಮಪಾನ ಮಾಡಲಿ ಎಂದೆಲ್ಲಾ ಇಂದ್ರನನ್ನು ಆಹ್ವಾನಿಸುತ್ತಾರೆ. ದೇವತೆಗಳಿಗಾಗಿ ಕಲ್ಲಿನಿಂದ ಜಜ್ಜಿ ಹಿಂಡಿದ ಸೋಮರಸ ಸಿದ್ಧಪಡಿಸಿರುತ್ತಾರೆ. ದರ್ಭಾಸನ ಕಲ್ಪಿಸಿ ಆದರದಿಂದ ದೇವತೆಗಳನ್ನು ಆಹ್ವಾನಿಸುತ್ತಾರೆ. ಧನಾಪೇಕ್ಷೆಗಳಿಂದ ಕರ್ಮಗಳನ್ನು ಮಾಡುತ್ತಾರೆ. ದರ್ಭಾಸನವು ಸಿದ್ಧವಾಗಿರುತ್ತದೆ. ಧ್ಯಾನಾತ್ಮಕ, ಸತ್ಯಾತ್ಮಕ ಸ್ತುತಿಗಳಿಂದ, ಸತ್ಕರ್ಮಗಳಿಂದ ದೇವತೆಗಳನ್ನು ಆಹ್ವಾನಿಸಿ ಪೂಜಿಸುತ್ತಾರೆ. ದರ್ಭೆ ಕತ್ತರಿಸಲು ಪೂರ್ವ ದಿಕ್ಕಿಗೆ ಆಯುಧ ಸಹಿತ ಹೋಗುತ್ತಾರೆ. ದ್ಯಾವಾ ಪೃಥ್ವಿಗಳೆರಡಕ್ಕೂ ಇಂದ್ರನು ಪ್ರಭುವಾದ್ದರಿಂದ ವಿಶೇಷ ಪೂಜೆಗಳನ್ನು ನಡೆಸುತ್ತಾರೆ. ದಿಕ್ಕು ವಿದಿಕ್ಕುಗಳೆಲ್ಲಾ ಕೇಳಿಸುವಂತೆ ಮಂತ್ರಗಳನ್ನು ಪಠಿಸುತ್ತಾರೆ. ದ್ರೋಣ ಕಳಸದಲ್ಲಿಯ ಸೋಮವು ಅಗ್ನಿಯಲ್ಲಿ ಅರ್ಪಿತವಾಗುತ್ತದೆ. ದಾರಿಯಲ್ಲಿ ಯಾರೂ ಇಂದ್ರನನ್ನು ತಡೆಯದಿರಲಿ ಎನ್ನುತ್ತಾರೆ. ದೇವತೆಗಳಿಗೆಲ್ಲಾ ಹಂಚಿ ಸರೋವರದಂತಹ ತನ್ನ ಉದರವನ್ನು ಇಂದ್ರನು ತುಂಬಿಕೊಳ್ಳಲಿ. ದೇವತೆಗಳು ತಮ್ಮ ಜೊತೆಯಲ್ಲಿಯೇ ಇರಲಿ ಎಂದು ಆಶಿಸುತ್ತಾರೆ.

ನಾಲ್ಕೂ ಬಗೆಯ ಋತ್ವಿಜರು ವೇದ ಘೋಷ ಮಾಡುತ್ತಾರೆ. (1) ಮಂದ್ರ (2) ಮಧ್ಯಮ (3) ತಾರಕ (4) ಧ್ಯಾನಾತ್ಮಕ

ನದಿಗಳು ಸಮುದ್ರವನ್ನು ಸೇರುವಂತೆ ಸ್ತೋತ್ರಗಳೆಲ್ಲವೂ ಇಂದ್ರನನ್ನು ಸೇರಲಿ ಎನ್ನುತ್ತಾರೆ. ನೂತನ ಸ್ತುತಿಗಳಿಂದ ಸ್ತುತಿಸುತ್ತಾರೆ. ನೂರಾರು ಋಷಿಗಳು, ಋತ್ವಿಜರುಗಳು ಪುನಹ ಪುನಹ ಹವಿಸ್ಸು ಅರ್ಪಿಸುತ್ತಿರುತ್ತಾರೆ.

ಪುತ್ರರೊಂದಿಗೆ ಶಸ್ತ್ರ ಮಂತ್ರಗಳಿಂದ ಇಂದ್ರನನ್ನು ಪೂಜಿಸುತ್ತಾರೆ. ಪುರೋಡಾಶ ತಯಾರಿಸುತ್ತಾರೆ. ಪ್ರಾಯಶ್ಚಿತ್ತಗಳಿಂದ ಲೋಪ ದೋಷಗಳನ್ನು ಋತ್ವಿಜರು ಕರ್ಮಗಳಿಂದ ಸರಿಪಡಿಸಿಕೊಳ್ಳುತ್ತಾರೆ. ಪ್ರಸಿದ್ಧ ಸ್ತುತಿಗಳನ್ನೇ ನಿರ್ಮಿಸಿ ಸ್ತುತಿಸಿ ನಿಲ್ಲದೆ ಸ್ತೋತ್ರ ಮಾಡುತ್ತಿರುತ್ತಾರೆ. ಪುರಾತನ, ನೂತನ, ಅತ್ಯುತ್ತಮ ಸ್ತುತಿಗಳಿಂದ ಇಂದ್ರನನ್ನು ಸ್ತುತಿಸುತ್ತಾರೆ. ಶಸ್ತ್ರ ಮಂತ್ರಗಳನ್ನು ಪಠಿಸುತ್ತಾರೆ. ಪಾಪ ಪುಣ್ಯಗಳ ಅರಿವು ಅರಿತ ಪರಾಕ್ರಮಿ ಇಂದ್ರ ಪೃಥ್ವಿ, ಅಂತರಿಕ್ಷ, ದ್ಯುಲೋಕ ಎಲ್ಲಿದ್ದರೂ ಸರಿ ಮನೋವೇಗದಲ್ಲಿ ಬರಲಿ ಎಂದು ಪ್ರಾರ್ಥಿಸಿದ್ದಾರೆ. ಪರಿಶುದ್ಧ ಮನಸ್ಸಿನಿಂದ ಸ್ತುತಿಸುತ್ತಾರೆ. ಪಾಪಾಭಿಮಾನಿ ದೇವತೆಯು ಯಾಜ್ಞಿಕರಿಂದ ದೂರ ಆಗುತ್ತಾಳೆ. ಪೂಜ್ಯ ಭಾವದಿಂದ ಸ್ತುತಿಸಿ ಪೂಜಿಸುತ್ತಾರೆ.

ಭಯಂಕರ ಸಂಗ್ರಾಮ ಸನ್ನಿವೇಶದಲ್ಲಿ ಇಂದ್ರ, ವರುಣರ ಅನುಗ್ರಹಕ್ಕಾಗಿ ವಿಶೇಷ ಪೂಜೆ, ಯಾಗ, ಪ್ರಾರ್ಥನೆಗಳನ್ನು ಮಾಡುತ್ತಾರೆ. ಬೇರೆ ಬೇರೆ ಕಡೆ ಹೋಗುವ ಮುಂಚೆ ಮದಕರ ಸೋಮ ಸ್ವೀಕರಿಸಲು ಮೂರು ಸವನಗಳಲ್ಲೂ ಆಹ್ವಾನಿಸಿ ಕರ್ಮಗಳನ್ನು ಮಾಡುತ್ತಾರೆ. ಬ್ರಹ್ಮನೆಂಬ ಋತ್ವಿಜನಿಂದ ಸ್ತೋತ್ರ ಮಾಡಲ್ಪಟ್ಟಾಗ ಶ್ಯೇನ ರೂಪ ಗಾಯತ್ರಿಯಿಂದ ಇಂದ್ರನಿಗೆ ಸೋಮವು ತರಲ್ಪಟ್ಟಿತ್ತು ಎಂದು ವಾಮನ ಋಷಿಗಳು ಹೇಳಿದ್ದಾರೆ.

ಮೇಧಾವಿ ಋಷಿಗಳು ಪ್ರಜೆಗಳಿಂದ ದಾನ್ಯ, ಸಾಧನ, ಸಂಪತ್ತು, ಹಿರಣ್ಯಾಧಿಗಳನ್ನು ಪಡೆದಿದ್ದಾರೆ. ಮದಕಾರಕ ಸೋಮದಿಂದ ಇಂದ್ರನನ್ನು ತೃಪ್ತಿಪಡಿಸುತ್ತಾರೆ. ಮೂರು ಸವನಗಳಲ್ಲೂ ಇಂದ್ರನನ್ನು ಆಹ್ವಾನಿಸಿದ್ದಾರೆ. ಮರಣ ಧರ್ಮರಹಿತ ದೇವತೆಗಳನ್ನು ಪತ್ನಿಯರ ಸಮೇತ ಸ್ತುತಿ, ಹವಿಸ್ಸು, ಸೋಮಾರ್ಪಣೆಗಳಿಂದ ತೃಪ್ತಿಪಡಿಸುತ್ತಾರೆ. ಮಹತ್ತಾದ ಛಂಧೋಬದ್ಧ ಸ್ತುತಿಗಳಿಂದಲೇ ಸ್ತುತಿಸುತ್ತಾರೆ. ಮಾನವರು ಮಾಡುವ ಕರ್ಮಗಳಲ್ಲಿ ಭಾಗಿಯಾಗಲು ಇಂದ್ರನನ್ನು ಪ್ರಾರ್ಥಿಸುತ್ತಾರೆ.

ಯಜ್ಞಾರ್ಹ ದೇವತೆಗಳೊಂದಿಗೆ ಇಂದ್ರನನ್ನು ಆಹ್ವಾನಿಸುತ್ತಾರೆ. ಯಜ್ಞ ಮತ್ತು ಸಮರಗಳಲ್ಲಿ ವಿಶೇಷ ಸ್ತೋತ್ರಗಳು, ಪೂಜೆಗಳು ನಡೆಯುತ್ತವೆ. ಯಜ್ಞ ಕರ್ಮಗಳನ್ನು ಮಾಡಿ ಹವಿಸ್ಸು ಅರ್ಪಿಸುತ್ತಾರೆ. ಯಜಮಾನರು ರಮಣೀಯ ಯಜ್ಞಗಳನ್ನು ಮಾಡುತ್ತಾರೆ. ಇಂದ್ರ ಮಿತ್ರರಾಗಿಯೇ ಇರುತ್ತಾರೆ. ಯಜ್ಞಗಳಲ್ಲಿ ಈ ಹಿಂದೆ ಪ್ರಯೋಜನ ಪಡೆದಿದ್ದಾರೆ. ಈಗಲೂ ಪಡೆಯುತ್ತಿದ್ದಾರೆ. ಯಜ್ಞ ಗೃಹದಲ್ಲೇ ಇದ್ದು ಹವಿಸ್ಸು ಸೋಮ ಸ್ವೀಕರಿಸಿ ಕಲ್ಯಾಣಗಳಿಂದ ರಕ್ಷಿಸಲಿ. ಯಜಮಾನರು ನಮಸ್ಕರಿಸುತ್ತಾರೆ. ಜೊತೆಯಲ್ಲಿ ಋಷಿಗಳು, ಋತ್ವಿಜರು ಭಾಗವಹಿಸುತ್ತಾರೆ. ಯಜಮಾನರ ಸಮೀಪವೇ ಕುಳಿತು ಸೋಮಪಾನ ಮಾಡಲಿ ಎಂದು ಕೇಳಿಕೊಳ್ಳುತ್ತಾರೆ. ಯಾಜ್ಞಿಕರು ಪುತ್ರ, ಪೌತ್ರರೊಡಗೂಡಿ ಯಜ್ಞ ಕಾರ್ಯಗಳಲ್ಲಿ ಎಲ್ಲರೂ ಭಾಗಿಗಳಾಗಿ ಯಜ್ಞ ಕರ್ಮಗಳನ್ನು ಮಾಡುತ್ತಾರೆ. ಪರಿಣತರಾದವರುಗಳನ್ನೇ ಆಯಾಯ ಕರ್ಮಗಳಲ್ಲಿ ನಿಯಮಿಸಿರುತ್ತಾರೆ. ಯಜ್ಞವು ಯಾಜ್ಞಿಕರ ಮತ್ತು ಇಂದ್ರನ ಸ್ನೇಹ ಸೌಹಾರ್ದದ ಒಂದು ಪ್ರಮುಖ ಕರ್ಮ. ಯಜ್ಞಕುಂಡದ ಸುತ್ತಲೂ ತಂಡುಲೋಪಸ್ಕರ ದಾನ್ಯವನ್ನು ಹರಡಿರುತ್ತಾರೆ. ಇಂದ್ರನ ಅಶ್ವಗಳು ಅವನ್ನು ತಿನ್ನಲು ಕಾತುರವಾಗಿರುತ್ತವೆ.

ಯಜ್ಞ ಯಾಗಾದಿಗಳನ್ನು ಮಾಡಿಯೇ ಆ ಬಲದ ಮೇಲೆಯೇ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳುತ್ತಾರೆ. ರಕ್ಷಣೆಯ ಅವಶ್ಯಕತೆಬಿದ್ದಾಗ ರಕ್ಷಣಾರ್ಥ ಕರ್ಮಗಳನ್ನು ಮಾಡುತ್ತಾರೆ. ರಾಜ ಋಷಿಗಳು ಇಂದ್ರ ಪ್ರಿತ್ಯರ್ಥವಾಗಿ ಯಾಗಗಳನ್ನು ಮಾಡಿದ್ದಾರೆ ಸೋಮವನ್ನು ಹಿಂಡಿದ್ದಾರೆ.

ವಾಯುವಿನಂತೆ ಇಂದ್ರನು ಅಭಿಮುಖನಾಗಲಿ. ವಾಯು ಬಲ ಹೊಂದಿರುವ ಅಶ್ವರಥದಲ್ಲಿ ಇಂದ್ರನು ಬರಲಿ. ಲೋಕೋಪಕಾರ ಮಾಡುವ ಇಂದ್ರನನ್ನು ಅತಿಶಯವಾಗಿ ಸ್ತುತಿಸುತ್ತಾರೆ. ವರುಣನನ್ನು ಯಜ್ಞ ರಕ್ಷಣಾರ್ಥವಾಗಿ ಆಹ್ವಾನಿಸುತ್ತಾರೆ. ಶಸ್ತ್ರಮಂತ್ರಗಳಿಂದ ಇಂದ್ರ ಮತ್ತಿತರ ದೇವತೆಗಳನ್ನು ಆಹ್ವಾನಿಸುತ್ತಾರೆ. ಶ್ರೇಷ್ಟಮಂತ್ರಗಳನ್ನೆ ಪಠಿಸುತ್ತಾರೆ. ಶುದ್ಧಿ ಹೊಂದಿದ ಸೋಮವು ದ್ರೋಣ ಕಲಶ ಸೇರಿ ಅಮೃತ ಸಮಾನವಾಗಿ ಇರುತ್ತದೆ. ಶ್ರದ್ಧಾ ಭಕ್ತಿಗಳಿಂದ, ಅಭಿಮಾನಗಳಿಂದ ಶ್ರೇಷ್ಟ ವಸ್ತುಗಳನ್ನು ಉಪಯೋಗಿಸಿ ಕರ್ಮಗಳನ್ನು ಮಾಡುತ್ತಾರೆ. ಸೋಮವನ್ನು ಶೋಧಿಸಿದ ನಂತರ ಚಮಸ ಪಾತ್ರೆಯಲ್ಲಿಟ್ಟಿರುತ್ತಾರೆ.

ಸ್ತುತಿಸುವವರಿಗೂ ಪ್ರಜೆಗಳು ಧನಾದಿಗಳನ್ನು ನೀಡಿದ್ದಾರೆ. ಸೋಮವನ್ನು ಉಷಃಕಾಲದಲ್ಲೇ ಸಿದ್ಧಪಡಿಸುತ್ತಾರೆ. ಸೋಮರಾಜನು ದ್ಯುಲೋಕ, ಪೃಥ್ವಿ, ಹಗಲು, ರಾತ್ರಿ, ನೀರು, ಓಷಧಿಗಳಲ್ಲಿ ಇರುತ್ತಾನೆ ಎಂದಿದ್ದಾರೆ. ಸೋಮಾರ್ಪಣೆ, ಸ್ತುತಿ, ಗಾನಗಳಿಂದ ತೃಪ್ತಿಪಡಿಸುತ್ತಾರೆ. ಸೋಮಯಾಗವು ಪೃಥ್ವಿಯಲ್ಲಿ ಮಾನವರ ಹಿತಕ್ಕಾಗಿ ಮೂರು ಸವನಗಳಲ್ಲಿಯೂ ನಡೆಯುತ್ತದೆ. ಸೋಮವನ್ನು ಹಿಂಡಿ, ಶೋಧಿಸಿ ನಂತರ ಆಶ್ರಿರ ದ್ರವ್ಯಗಳೊಂದಿಗೆ ಮಿಶ್ರ ಮಾಡಿ ಚಮಸ ಪಾತ್ರೆಯಲ್ಲಿ ಇಂದ್ರನಿಗೆ ಅರ್ಪಿಸುತ್ತಾರೆ. ಸೋಮಪಾನ ಮಾಡಲು ಇಂದ್ರನು ದಾವಿಸಿ ಬರಲಿ ಎಂದು ಆಹ್ವಾನಿಸುತ್ತಾರೆ. ಸವಿತೃವಿನ ಸ್ತೋತ್ರವನ್ನು ಮಾಡುತ್ತಾರೆ.

ದೇವತೆಗಳು ಸ್ವರ್ಗದಿಂದ ಸೋಮಾಪಾನಾರ್ಥವಾಗಿ ಬರಲಿ ಎಂದು ಪ್ರಾರ್ಥಿಸುತ್ತಾರೆ. ಸೋಮವು ದರ್ಭಾಸನದ ಮೇಲೆ ಇರುತ್ತದೆ. ಆಗ ಸೋಮನನ್ನು ಗಟ್ಟಿಯಾಗಿ ಸ್ತುತಿಸುತ್ತಾರೆ. ಸ್ತೋತ್ರಗಳನ್ನು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಸೂರ್ಯರೂಪಿನಿಂದ ಯಾಜ್ಞಿಕರ ಹಿತಕರ ಪ್ರಿಯ ವಸ್ತುಗಳು ದೊರೆಯುವಂತೆ ಇಂದ್ರನು ಅನುಗ್ರಹಿಸುತ್ತಾನೆ. ಸೋಮವನ್ನು ಗೋಚರ್ಮದ ಮೇಲೆ ಇಟ್ಟಿರುತ್ತಾರೆ. ಸ್ವಾದುಯುತ ಅನ್ನವು ಇಂದ್ರನ ಜಠರ ಸೇರಲಿ ಎಂದು ಅರ್ಪಿಸುತ್ತಾರೆ. ದ್ರೋಣ ಕಲಶದಲ್ಲೂ ಸೋಮವು ತುಂಬಿರುತ್ತದೆ. ಸೋಮದ ಬಾವಿಗಳೇ ಇರುತ್ತದೆ. ಸೋಮಕ್ಕೆ ಉದಕ, ಹಾಲು ಸೇರಿಸಿ ಪರಿಷ್ಕರಿಸುತ್ತಾರೆ. ಸೋಮವನ್ನು ಹಿಂಡುವ ಕಲ್ಲುಗಳೊಂದಿಗೆ ಆಶ್ರಮದಲ್ಲಿ ವೇದಿಕೆಯ ಬಳಿ ಮೂರು ಸವನಗಳಿಗೂ ಸಾಕಾಗುವಷ್ಟು ಸೋಮವನ್ನು ನುರಿತ ಆಶ್ರಮವಾಸಿಗಳು ತಯಾರಿಸಿರುತ್ತಾರೆ. ಇಂದ್ರನಿಗಾಗಿಯೇ ಸೋಮವು ಸಿದ್ಧವಾಗುತ್ತದೆ.

ಹವಿಸ್ಸಿನಿಂದ ಇಂದ್ರಾಗ್ನಿಗಳನ್ನು ಸೇವಿಸುತ್ತಾರೆ. ಹಿಂದಿನವರು ಸ್ತುತಿಸಿದಂತೆಯೇ ಸ್ತುತಿಸುತ್ತಾರೆ, ಪೂಜಿಸುತ್ತಾರೆ, ಶಸ್ತ್ರ ಮಂತ್ರ ಪಠಿಸುತ್ತಾರೆ, ಹವಿಸ್ಸು, ಆಜ್ಯ, ಸೋಮ ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಹುಲ್ಲುಗಾವಲಿನಲ್ಲಿ ಗೋವುಗಳು ಹುಲ್ಲು ತಿಂದು ತೃಪ್ತರಾಗಿ ನೀರು ಕುಡಿಯುವಂತೆ ದೇವತೆಗಳು ಹವಿಸ್ಸಿನಿಂದ ತೃಪ್ತರಾಗಿ ಸೋಮಪಾನ ಮಾಡಲಿ ಎಂದು ಪ್ರಾರ್ಥಿಸಿದ್ದಾರೆ.

ಇಂದ್ರನಿಗಾಗಿಯೇ ಉತ್ತಮ ಸ್ಥಾನ, ಹವಿರೂಪ ಅನ್ನ, ಹೊಸ ಹೊಸ ಸ್ತೋತ್ರಗಳು, ಸೋಮರಸ ಎಲ್ಲವನ್ನೂ ಸಿದ್ಧಪಡಿಸಿಕೊಂಡಿರುತ್ತಾರೆ. ಇಂದ್ರಾಗ್ನಿಗಳನ್ನು ಉದ್ದೇಶಿಸಿಯೇ ಕರ್ಮಗಳನ್ನು ಇಂದ್ರ ಪ್ರೀತ್ಯರ್ಥವಾಗಿ ಮಾಡುತ್ತಾರೆ. ಶಸ್ತ್ರಮಂತ್ರಗಳನ್ನು ಪಠಿಸುತ್ತಾರೆ. ಇಂದ್ರಾಗ್ನಿಗಳು ಖಂಡಿತವಾಗಿಯೂ ರಕ್ಷಿಸಿಯೇ ರಕ್ಷಿಸುತ್ತಾರೆಂದು ದೃಢವಾಗಿ ನಂಬಿದ್ದಾರೆ. ಇಂದ್ರನು ಪೂಜಕರಲ್ಲದವರನ್ನು, ನಾಸ್ತಿಕರನ್ನು, ಅಸುರರನ್ನು, ಶತ್ರುಗಳನ್ನು ಸಂಹರಿಸುತ್ತಾನೆ. ಇಂದ್ರನ ಜೊತೆಗೆ ಅಗ್ನಿ, ವರುಣ, ಬ್ರಹಸ್ಪತಿ, ವಾಯು, ಸೋಮರು ಇರುತ್ತಾರೆ.

ಉಪಾಸನೆ ಅತ್ಯಗತ್ಯ. ಪಾಪಾಚರಣೆ ಮಾಡಬಾರದು ಎಂದಿದ್ದಾರೆ. ಒಂದೇ ರೀತಿಯಲ್ಲಿ ತೊಂದರೆಗಳಲ್ಲಿ ಇರುವವರು ಇಂದ್ರಾಗ್ನಿಗಳನ್ನು ಸ್ತುತಿಸಿ ಆರಾಧಿಸಲು ಹೇಳಿದ್ದಾರೆ. ದ್ಯುಲೋಕ ದೇವತೆ, ಪೃಥ್ವಿ ದೇವತೆಗಳಿಗಿಂತ ಇವರು ವಿಸ್ತಾರರೂಪರು. ದಾನಗಳಿಂದ ಸ್ವರ್ಗವು ಪ್ರಾಪ್ತಿಯಾಗುತ್ತದೆ ಎಂದಿದ್ದಾರೆ. ತಪಃಶಕ್ತಿಯಿಂದ ಅಸುರ ಮೋಹಕ ಶಕ್ತಿಯನ್ನು ನಿವಾರಿಸಿ ಬೆಳಕು ಪಡೆದಿದ್ದಾರೆ. ದ್ಯುಲೋಕ, ಪೃಥ್ವಿ, ಹಗಲು, ರಾತ್ರಿ, ನೀರು, ಓಷಧಿಗಳಲ್ಲಿ ಸೋಮರಾಜನು ಇರುತ್ತಾನೆ. ಮೃತ್ಯುರಹಿತ ಸೋಮವು ಇಂದ್ರನಿಗಾಗಿಯೇ ಹೋಮರೂಪದಿಂದ ಅರ್ಪಿತವಾಗುತ್ತದೆ. ಮಾನವರಲ್ಲಿ ತಮ್ಮ ಜೀವಿತದ ಪರಿಣಾಮವನ್ನು ಖಂಡಿತ ಯಾರೂ ಅರಿಯಲಾಗುವುದಿಲ್ಲ.

ಯಾಜ್ಞಿಕರು ಯರ್ಜುವೇದ ಯಜ್ಞಸಾಧಕ ಮಂತ್ರ, ಹವಿಸ್ಸುಗಳಿಂದ ಮಹತ್ವ ಪಡೆದಿರುತ್ತಾರೆ. ಯಜ್ಞವು ಯಾಜ್ಞಿಕರ, ಇಂದ್ರನ ಸೌಹಾರ್ದದ ಒಂದು ಪ್ರಮುಖ ಪ್ರತೀಕ ಹಾಗು ಪ್ರಮುಖ ಕರ್ಮ. ಯಾಜ್ಞಿಕರು ತಡೆಯಿಲ್ಲದೆ ನಿರಂತರವಾಗಿ ಸ್ತೋತ್ರ, ಪ್ರಾರ್ಥನೆಗಳನ್ನು ಮಾಡುತ್ತಿರುತ್ತಾರೆ. ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಮಾಡಿ ಆ ಬಲದ ಮೇಲೆಯೇ ತಮ್ಮ ಅಪೇಕ್ಷೆಗಳನ್ನು ಪಡೆದುಕೊಳ್ಳುತ್ತಾರೆ. ಮಹಾತ್ಮ್ಯ ತಿಳಿದವರೇ ಪೂಜಿಸುವವರು, ಮರುತ್ ಗಣವು ಯಜ್ಞರಕ್ಷಕರು, ಪ್ರಾಣಿಗಳಿಗೆ ಸಂಚಾರ ಮಾರ್ಗ ದರ್ಶಕರು ಹಾಗು ಮಳೆ ಸುರಿಸುವವರು. ಶಸ್ತ್ರಮಂತ್ರ ಪಠಿಸುವವರು ದೇವ ಸಾನ್ನಿಧ್ಯವನ್ನು ಪಡೆಯುತ್ತಾರೆ.

ಸೋಮವನ್ನು ಹಿಂಡಿ, ಶೋಧಿಸಿ, ಸಿದ್ಧಪಡಿಸಿ ಮೂರು ಸವನಗಳಲ್ಲಿಯೂ ಇಂದ್ರಾಗ್ನಿಗಳಿಗೆ ಅರ್ಪಿಸುತ್ತಾರೆ. ವಾಯು ಇಂದ್ರರನ್ನು ವಿಶೇಷವಾಗಿ ಪೂಜಿಸುತ್ತಾರೆ. ಸಮುದ್ರದ ಅಲೆಗಳಂತೆ ಒಂದಾದ ಮೇಲೆ ಒಂದು ಯಾಗಗಳನ್ನು ಮಾಡುತ್ತಲೇ ಇರುತ್ತಾರೆ. ಸೋಮನು ಇಂದ್ರನಿಗೂ, ಋತ್ವಿಜರಿಗೂ ಸಂಬಂಧವನ್ನು ಕಲ್ಪಿಸುವವನು. ಇಂದ್ರನು ಶ್ರದ್ಧಾಭಕ್ತಿಗಳು ಇಲ್ಲದವರ ಸ್ತೋತ್ರ, ಹವಿಸ್ಸುಗಳನ್ನು ಸ್ವೀಕರಿಸುವುದಿಲ್ಲ. ಕಾರ್ಯಕ್ಕೆ ತಕ್ಕಷ್ಟೇ ಫಲ ಪಡೆಯಬೇಕು ಎಂದಿದ್ದಾರೆ. ರಾಜರುಗಳು, ಧನಿಕರು, ಅಪರಿಮಿತ ಧನ, ಧಾನ್ಯ, ಸುವರ್ಣಾದಿ ದಾನಗಳಿಂದ ಯಾಜ್ಞಿಕರನ್ನು, ಯಜಮಾನರುಗಳನ್ನು ತೃಪ್ತಿಪಡಿಸುತ್ತಿರುತ್ತಾರೆ.

ಉಪಸ್ಸು ಪುನರಾವರ್ತನೆಗೊಳ್ಳುವ ಹಾಗೆ ಇಂದ್ರನ ಅನುಗ್ರಹ ಬುದ್ಧಿ ಮತ್ತು ಧನ ಎಣಿಸಲಾಗದಷ್ಟಿದೆ. ಉದಕವು ಆದಿತ್ಯಮಂಡಲವನ್ನು ಸೇರುತ್ತದೆ. ದೇವತೆಗಳು ಎಲ್ಲರೂ ಸೇರಿ ಸ್ವರ್ಗದಲ್ಲಿ ಇಂದ್ರನಿಗೆ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ದೇವಲೋಕದ ದೇವತೆಗಳು, ಪೃಥ್ವಿಲೋಕದ ದೇವತೆಗಳಿಗಿಂದ ವಿಸ್ತಾರ ರೂಪರು. ಧನ, ದಾನಾದಿಗಳಿಂದ ಪಾಪವು ನಾಶವಾಗುತ್ತದೆ. ದೇವಮಾತೆ ಅದಿತಿಯು ಇಂದ್ರನಿಂದಾಗಿ



॥ ಓಂ ಶ್ರೀ ಮಹಾಗಣಪತಯೇ ನಮಃ ॥

# ಇಂದ್ರ, ದೇವರು

## ಋಷಿಗಳ ಅಮೃತವಾಣಿ

## ಋಗ್ವೇದ ದಿಂದ ಪರಿಚಯ

* ಅನ್ನವು ಸುಲಭವಾಗಿ ದೊರೆಯುವಂತೆ ಮಾಡಲಿ, ಅಕ್ಷಯ ಧನ ನೀಡಲು ಪ್ರಾರ್ಥಿಸಿದ್ದಾರೆ. ಅತಿಶಯ ಕೀರ್ತಿ ಶಾಲಿಗಳಾಗುವಂತೆ ಅನುಗ್ರಹಿಸಲು, ಅಶ್ವಗಳಿಗಾಗಿ ಬೇಡಿದ್ದಾರೆ. ಅನ್ನ ಧನಗಳಿಗಾಗಿ ಪ್ರಾರ್ಥಿಸಿದ್ದಾರೆ, ಅನ್ನವಂತರನ್ನಾಗಿ ಮಾಡಲಿ ಅಧಿಕ ಸಂಪತ್ತಿಗಾಗಿ ಬೇಡಿದ್ದಾರೆ, ಅಸುರರನ್ನು ಸೋಲಿಸಿ ಆಪತ್ತುಗಳಿಂದ ಪಾರುಮಾಡಲಿ, ಅಧಿಕಕ್ಷೀರ ಕೊಡುವ ಗೋವುಗಳನ್ನು ಕರುಣಿಸಲಿ, ಅನ್ನ ಆಹಾರಗಳಿಗಾಗಿ ಬೇಡಿದ್ದಾರೆ.
* ಅನ್ನ ಪೂಜ್ಯ ಧನಗಳಿಗಾಗಿ ಪ್ರಾರ್ಥಿಸಿದ್ದಾರೆ. ಅಶ್ವಗಳಿಗಾಗಿ ಬೇಡಿದ್ದಾರೆ, ಅಭಿಷ್ಟಗಳನ್ನು ಈಡೇರಿಸಲಿ. ಅಧಿಕ ಪ್ರೀತಿಯಿಂದ ಪೂಜಿಸಿದವರಿಗೆ ವಿಶೇಷವಾಗಿ ಅನುಗ್ರಹಿಸಲಿ, ಅನ್ನ ಒದಗಿಸಿ ಸಂತೋಷ ಪಡಿಸಲಿ, ಅಪ್ರಯದಾತನಾಗಿರಲಿ, ರಕ್ಷಣೆ ನೀಡಲಿ,
* ಅಹಂಕಾರ ಪಡುವವರನ್ನು ಧಮನಮಾಡಿಲಿ, ಅದಿತಿಯು ಯಜಮಾನನಿಗೆ ಅಹಿಂಸಕಳಾಗಿರಲಿ, ಅಧಿಕ ಧನ, ರಕ್ಷಣೆ, ಪುತ್ರರನ್ನು ಕೊಡಲಿ, ಅಶ್ವಗಳು ಆಕರ್ಷಕ ಹಿರಣ್ಯ ದಾನವಾಗಿ ಲಭಿಸಲಿ,
* ಅಧಿಕ ಬಲವನ್ನು ತಮಗೂ ಸ್ನೇಹಿತರಿಗೂ ಶೋತೃಗಳಿಗೂ ಕೊಡಲಿ, ಅನ್ನ ಉದಕಗಳಿಗಾಗಿ ಪ್ರಾರ್ಥಿಸಿದ್ದಾರೆ, ಅಶ್ವಗಳಿಗಾಗಿ ಬೇಡಿದ್ದಾರೆ, ಅತಿಶಯ ಧನ ದಾತನಾಗಿರಲಿ
* ಆಶ್ರಯಿಸಿದರವರಿಗೆ ಐಶ್ವರ್ಯಕೊಡಲಿ (ವ್ಯಾಪಾರಿಯಂತೆ ಆಗುವುದು ಬೇಡ) ಆಯಸ್ಸು ನೂರು ವರ್ಷಗಳಿಗಾಗಿ ಬೇಡಿದ್ದಾರೆ. ಅನುಭವಿಸಲು ಆಹಾರ, ಆರೋಗ್ಯ ಆಯಸ್ಸುಗಳಿಗೆ ಕೇಳಿಕೊಂಡಿದ್ದಾರೆ. ಆಶ್ರಮವಾಸಿಗಳಿಗೆ ಹಿಂಸೆ ಆಗದಿರಲಿ, ನೂರು ವರ್ಷಗಳ ಆಯಸ್ಸು ಬೇಡಿದ್ದಾರೆ, ಆಸ್ತಿಕರಿಂದ ತಮಗೆ ಧನ ದೊರೆಯುವಂತಗಲಿ ಆಪ್ತಮಿತ್ರನಂತೆ ಇಂದ್ರನು ಸಹಾಯಕನಾಗಿರಲಿ,
* ಆಯಸ್ಸು ಪರಿಯಂತ ವಿಸ್ತಾರ ಗೃಹದಲ್ಲಿ ಇರುವಂತಾಗಲೀ ಆರೋಗ್ಯಕ್ಕಾಗಿ ಪ್ರಾರ್ಥಿಸಿದ್ದಾರೆ. ಇಷ್ಟಾರ್ಥ ಸಿದ್ಧಿಗಾಗಿ ಬೇಡಿದ್ದಾರೆ, ಇಂದ್ರನ ಸ್ನೇಹವನ್ನು ಬಯಸುತ್ತಾರೆ, ಇಚ್ಛಿಸುವ ಸಂಪತ್ತು ಇಷ್ಟಾರ್ಥಗಳನ್ನು ಕರುಣಿಸಲಿ, ಇಂದ್ರನು ಮನೋಭಿಷ್ಟೇಗಳನ್ನು ನೆರವೇರಿಸಲಿ, ಇಂದ್ರನು ಸಕಲ ಸುಖ-ದುಃಖ ವಿಚಾರಗಳಲ್ಲಿ ಮಾರ್ಗದರ್ಶಕನಾಗಿರಲಿ, ಇಂದ್ರನ ಸಖ್ಯ ಇರುವವರಿಗೆ ಹಿಂಸೆ ಆಗದಿರಲಿ, ಇಂದ್ರನು ಯಜಮಾನನನ್ನು ಶತ್ರುಗಳಿಂದ ರಕ್ಷಿಸಲಿ,
* ಇಂದ್ರವರುಣರು ಧನ-ಅನ್ನ ತುಂಬಿಕೊಡಲಿ ಇಂದ್ರ, ಧನವು ಅವನಿಂದ ಕೆಳಮುಖ ಹರಿಯಲಿ, ಇಂದ್ರ, ದತ್ತ ಧನವನ್ನು ಯಜಮಾನನು ಅನುಭವಿಸುತಾಗಲಿ, ಇಂದ್ರ ವಿರೋಧಿಗಳನ್ನು ಸ್ವರ್ಗದಿಂದ ಕೆಳಗೆ ತಳ್ಳಲಿ ಇಷ್ಟಾರ್ಥ ಯಾಚಿಸುವವರ ಪ್ರಾರ್ಥನೆಗಳು ಫಲಕಾರಿಯಾಗಲಿ,
* ಇಂದ್ರ ದತ್ತ ಧನವು ಇಷ್ಟಾರ್ಥ ಸುಖ ಅನುಭವಿಸುವಂತೆ ಆಗಲಿ, ಇಂದ್ರ ಆಯುಧಗಳು ಶತ್ರುಗಳ ಮೇಲೆ ಬಿದ್ದು ನಾಶವಾಗಲಿ, ಇಂದ್ರನು ದ್ವೇಶಿಗಳನ್ನು ಯಾರೆ ಆಗಿರಲಿ ಶರಣಾಗುಂತೆ ಮಾಡಲಿ, ಇಂದ್ರನು ಸ್ತುತಿ ಕರ್ತರ ಭೀತಿಯನ್ನು ನಿವಾರಿಸಲಿ, ಉತ್ತಮ ರಕ್ಷಣೆ ಧನ ಸಂಪತ್ತಿಗಾಗಿ ಬೇಡಿದ್ದಾರೆ. ಋಷಿಗಳಿಗೆ ಇಷ್ಟಾರ್ಥ ಪ್ರದನಾ ಇರಲಿ, ಮಿತ್ರನಂತೆ ಇರಲಿ,
* ಋತ್ವಿಜರನ್ನು ಮರೆಯದಿರಲಿ, ಹರುಷ ನೀಡಲಿ, ಆಶ್ರಯಕೊಟ್ಟು ಅನ್ನ ಕೀರ್ತಿಗಳನ್ನು ಕರುಣಿಸಲಿ, ದುಃಖದಲ್ಲಿ ಇರುವವರಿಗೆ ಅವರ ಪುತ್ರಪೌತ್ರರಿಗೆ ದೈವಾನುಗ್ರಹ ದೊರೆಯುವಂತೆ ಮಾಡಲಿ, ಮಂಗಳ ಕರ್ಮಗಳನ್ನು ಮಾಡಿಸಿ ಪ್ರವೃದ್ಧರನ್ನಾಗಿರಿಸಲಿ, ಋತ್ವಿಜರು ಪಾಪನಾಶಗಳಿಗಾಗಿ ಪ್ರಾರ್ಥಿಸಿದ್ದಾರೆ,
* ಉತ್ತಮ ಸ್ಥಿತಿಯಲ್ಲಿರುವಂತೆ ಕೃಪೆಮಾಡಲಿ, ತೇಜೋಯುಕ್ತರನ್ನಾಗಿ ಮಾಡಲಿ, ಅತಿಶಯ ಧನ ನೀಡಲಿ ಎಂದು ಪ್ರಾರ್ಥಿಸಿದ್ದಾರೆ.

## ಇಂದ್ರ ದೇವರು
## ಅಕ್ಷರ ಮಾಲಿಕೆ (ಪ್ರಾರ್ಥನಾ ವಿಭಾಗ)

* ಎಲ್ಲಾ ತರಹ ರಕ್ಷಣೆಗಳನ್ನು ಇಂದ್ರನಿಂದ ಬಯಸಿದ್ದಾರೆ, ಎಲ್ಲೆ ಇರಲಿ ಕರೆದಾಗ ಬರಲಿ ಅವಶ್ಯಕತೆಗಳನ್ನು ಈಡೇರಿಸಲಿ, ಐಶ್ವರ್ಯಕ್ಕಾಗಿ ಬೇಡಿದ್ದಾರೆ, ಕಲ್ಯಾಣಗಳಿಗಾಗಿ ಪ್ರಾರ್ಥಿಸಿದ್ದಾರೆ, ಕರ್ಮಗಳನ್ನು ಮಾಡುತ್ತಿರುವಂತೆಯೇ ಇರಲು ಅನುಗ್ರಹಿಸಲಿ, ಕ್ರೋಧವಿಲ್ಲದ ಲಕ್ಷಣವಾದ ಧೇನುಗಳನ್ನು ಕರುಣಿಸಲಿ, ಕರ್ಮಗಳನ್ನು ಪದೇ ಪದೇ ಮಾಡುತ್ತಿರುವಂತೆ ಅನುಗ್ರಹಿಸಲಿ, ಕರ್ಮ ನಿರತ ಯಜಮಾನನ ಗೃಹಕ್ಕೆ ಮಹತ್ವದ ಧನ ಸೇರಿಸಿ ರಕ್ಷಿಸಲಿ.
* ಕರ್ಮಗಳು ನಡೆಯದಿರುವ ಕಡೆಗಳಲ್ಲಿ ಈಗಾಲಾದರು ನಡೆಯಲಿ. ಕಲ್ಯಾಣಗಳಿಂದ ರಕ್ಷಿಸಲಿ ಕಠಿಣ ಸಮಸ್ಯೆಗಳನ್ನು ಎದುರಿಸಲು ಶಕ್ತಿ ನೀಡಲಿ, ಕಷ್ಟ ಕಾಲದಲ್ಲಿ ತಮ್ಮನ್ನು ಪುತ್ರ ಪೌತ್ರರನ್ನು ರಕ್ಷಿಸಲಿ, ಕೇಡು ಬಯಸುವ ಮೇಲೆ ಬೀಳುವ ಶತ್ರುಗಳಿಂದ ಯಜಮಾನನ್ನು ಹಿಂಭಾಗ ಮುಂಭಾಗ, ಮೇಲ್ಭಾಗ,
* ಕೆಳಭಾಗಗಳಿಂದಲೂ ಪೂರ್ವ-ಪಶ್ಚಿಮದಿಂದಲೂ ರಕ್ಷಿಸಲಿ ಎಂದು ಕೇಳಿಕೊಂಡಿದ್ದಾರೆ. ಕರ್ಮಗಳನ್ನು ಮಾಡಿಯೇ ಧನಾದಿಗಳನ್ನು ಕೇಳಿಕೊಂಡಿದ್ದಾರೆ, ಕ್ಷೀರಕೊಡುವ ಗೋವುಗಳಿಗಾಗಿ ಕೇಳಿಕೊಂಡಿದ್ದಾರೆ. ಗೋವುಗಳು ಯಜ್ಞ ಸಾಧನ ಗೋ ಸಂಪತ್ತಿಗಾಗಿ ಪ್ರಾರ್ಥಿಸುತ್ತಾರೆ, ಗೃಹಗಳಿಗಾಗಿ ಗೌರವ ಸಂಪತ್ತುಗಳಿಗಾಗಿ ಬೇಡಿದ್ದಾರೆ. ಗೋವುಗಳು ದಾನರೂಪದಲ್ಲಿ ಸಿಗಲಿ ಎಂಬು ಪ್ರಾರ್ಥಿಸುತ್ತಿದ್ದಾರೆ.
* ಗೋ ರೂಪಿ ಇಂದ್ರನನ್ನು ಸೇವಿಸುವವರನ್ನು ರಕ್ಷಿಸಲಿ, ಗೋವುಗಳನ್ನು ಆರಾಧಿಸಿದವರನ್ನು ರಕ್ಷಿಸಲಿ, ಗೃಹ-ಅನ್ನಗಳಿಗಾಗಿ ಬೇಡಿದ್ದಾರೆ, ತೇಜೋವಂತರನ್ನಾಗಿ ಬಲಶಾಲಿಗಳನ್ನಾಗಿ ಮಾಡಲಿ ತೊಂದರೆಯಲ್ಲಿರುವ ಭಕ್ತರ ಅಭಿಮುಖನಾಗಿ ಅವರನ್ನು ರಕ್ಷಿಸಲಿ ಪ್ರಸಿದ್ಧರನ್ನಾಗಿ ಮಾಡಲಿ ತೊಂದರೆಯಲ್ಲಿರುವವರ ತೊಂದರೆ ನಿವಾರಿಸಲಿ, ತಮ್ಮ ದನದ ಕೊಟ್ಟಿಗೆಗೆ ನಾನಾ ವರ್ಣದ ಬಹು ಸಂಖ್ಯೆಯ ಕರುಗಳ ಜೊತೆಯಲ್ಲಿರುವ ಗೋವುಗಳನ್ನು ಬಯಸಿದ್ದಾರೆ,.
* ತಂದೆಯಿಂದ ಮಕ್ಕಳು ಭಾಗ ಕೇಳುವಂತೆ ಇಂದ್ರನಿಂದ ಧನ ಯಾಚಿಸಿದ್ದಾರೆ, ತಪ್ಪುಮಾಡಿದ ಯಜಮಾನನನ್ನು ಹಿಂಸಿಸದೆ ರಕ್ಷಿಸಲಿ ಎಂದು ಕೇಳಿಕೊಂಡಿದ್ದಾರೆ. ಧನಸಂಪತ್ತಿಗಾಗಿ ಬೇಡಿದ್ದಾರೆ, ಐಶ್ವರ್ಯವಂತರಾನ್ನಾಗಿಸಲಿ, ದೇವಾರ್ಪಣ ಯೋಗ್ಯ ಧನ ಕರುಣಿಸಲಿ, ಧನ ಹೆಚ್ಚುತ್ತಿರುವಂತೆಯೇ ಕರುಣಿಸಲಿ, ಧನವನ್ನು ಒಡನೆಯೆ ಅನುಭವಿಸುವಂತಾಗಲಿ ದಕ್ಷಿಣೆ ರೂಪದಲ್ಲಿಯೇ ಬೇಡಿದ್ದಾರೆ,
* ದೀರ್ಘಾಯಸ್ಸಿನ ಮಕ್ಕಳು ಮೊಮಕ್ಕಳಿಗಾಗಿ ಕೇಳಿದ್ದಾರೆ, ಧನ ಉದಕಗಳಿಗಾಗಿ ಪ್ರಾರ್ಥಿಸಿದ್ದಾರೆ, ಧನಿಕರಿಂದಲೂ ಧನ ಸಿಗುವಂತೆ ಇಂದ್ರನು ಕೃಪೆ ಮಾಡಲಿ ದುಃಖ ನಾಶ ಮಾಡಲಿ, ಧನ ದಾತನಾಗಿರಲಿ, ದಾನಕ್ಕೆ ಪಾತ್ರರನ್ನಾಗಿ ಮಾಡಲಿ, ಕ್ಷಿಪ್ರವಾಗಿ ಧನ ರಕ್ಷಣೆಗಳನ್ನು ನೀಡಲಿ, ದ್ಯಾವಾ ಪೃಥ್ವಿಗಳು ಕೊಡಬೇಕಾದ ಉತ್ಪನ್ನಗಳಿಗೆ ಬೇಡಿದ್ದಾರೆ. ದಾರಿದ್ರ ಹಸಿವು, ನಿಂದನೆಗಳನ್ನು ನಿವಾರಿಸಿ ಯಜಮಾನರ ಅಭಿಪ್ರಾಯಗಳನ್ನು ಈಡೇರಿಸಲಿ.
* ದುರ್ಗಮ ಪ್ರದೇಶದಲ್ಲಿ ಸಿಕ್ಕಿಬಿದ್ದಾಗ ಸುಖಕರ ಮಾರ್ಗದರ್ಶನ ಮಾಡಲೀ ಎಂದು ಕೇಳಿದ್ದಾರೆ, ದನಿಕರಿಂದ ಧನ ದೊರೆಯುವಂತಾಗಲಿ ದಾನ್ಯಗಳಿಂದ ಹಸಿವು, ಸ್ವಶಕ್ತಿಯಿಂದ ಶತ್ರು ಜಯ ಬೇಡಿದ್ದಾರೆ, ಧನಿಕರಿಂದ ಧನ ಯಜಮಾನನಿಗೆ ಸಿಗಲಿ, ದೀರ್ಘಾಯಸ್ಸಿಗಾಗಿಯೂ ಬೇಡಿದ್ದಾರೆ. ನಾಶರಹಿತ ಧನ ನೀಡಲಿ, ನೀರಿನ ಸೌಕರ್ಯ (ಮಳೆ)ಗಾಗಿ ಪ್ರಾರ್ಥಿಸಿದ್ದಾರೆ. ನಿಂದನೆಗೆ ಗುರಿಯಾಗದಂತೆ ಮಾಡಲಿ.
* ನದಿ ದೇವತೆಗಳು ರಕ್ಷಿಸಲಿ ನೂರು ವರ್ಷಗಳ ಕಾಲ ಪುತ್ರ ಪೌತ್ರರೊಡನೆ ಸುಖವಾಗಿ ಇರುವಂತಾಗಲೀ, ನಿಂಧಕ ಶತ್ರುಗಳನ್ನು ದೂರಮಾಡಲೀ, ನಿವಾಸಕ್ಕಾಗಿ ಪ್ರಾರ್ಥಿಸಿದ್ದಾರೆ. (ಉತ್ತಮ ಭದ್ರ ಹಾಗೂ ತೊಂದರೆರಹಿತವಾದ್ದದ್ದು) ನೀರಿನ ಸೌಕರ್ಯಕ್ಕಾಗಿ ಅಪರಿಮಿತ ವೃಷ್ಟಿ ಸುರಿಸಲು ಪ್ರಾರ್ಥಿಸಿದ್ದಾರೆ. ನಮ್ಮೆಲ್ಲ ಪಾಪಗಳನ್ನು ನಾಶಮಾಡಿ ಇಷ್ಟಾರ್ಥಗಳನ್ನು ಈಡೇರಿಸಲಿ ಎಂದು ನಿರೀಕ್ಷಿಸುತ್ತಾ ಇರುತ್ತಾರೆ,
* ಪ್ರವೃದ್ಧರನ್ನಾಗಿ ಮಾಡಲಿ, ಪ್ರೀತಿ-ಪಾತ್ರ ಅಶ್ವಗಳಿಗಾಗಿ ಕೇಳಿದ್ದಾರೆ, ಪ್ರಭೂತ ಧನವಂತರಾನ್ನಾಗಿಸಲಿ, ಪೂಜಿಸುವ ಯಜಮಾನನಿಗೆ ದೊರಕಿಸಲಿ, ಪಾಪಗಳನ್ನು ನಾಶಮಾಡಲಿ, ಪುತ್ರ ಪೌತ್ರರಿಗಾಗಿ ಬೇಡಿದ್ದಾರೆ, ಅವರಿಗೆ ಮತ್ತು ಪ್ರಾಣಿಗಳಿಗೆ ರೋಗಪರಿಹಾರ ಹಾಗೂ ಆರೋಗ್ಯಕ್ಕಾಗಿಯೂ ಪ್ರಾರ್ಥಿಸಿದ್ದಾರೆ, ಬಲಶಾಲಿಗಳಾಗಿಯೂ ಇರಲಿ ಎಂದು ಬಯಸಿದ್ದಾರೆ, ಪುತ್ರರಿಗೆ ಪ್ರಾಣಿಗಳಿಗೆ ರೋಗ ಪರಿಹರಿಸಲಿ ಎಂದು ಕೇಳಿದ್ದಾರೆ, ಪೂಜನೀಯ ಧನ ಸುಖ ಕೇಳಿದ್ದಾರೆ, ಪೃಥ್ವಿಯ ಸಮಸ್ಯೆಗಳನ್ನು ಪರಿಹರಿಸಲು ಭಾವಿಸಿ ಪ್ರಭೂತ ಧನ ಕೃಪೆಮಾಡಲು ಕೇಳಿಕೊಂಡಿದ್ದಾರೆ. ಪೂಜ್ಯ ಧನವನ್ನು ಎರಡು ಕೈಗಳಿಂದಲೂ ತುಂಬಿಕೊಡಲಿ, ಪುತ್ರರನ್ನು ಬೇಡುವವರಿಗೆ ಪುತ್ರಸಂತತಿ ನೀಡಲಿ, ಪೂಜಕರಿಗೆ ವೃಷ್ಟಿ ಉದಕ ನೀಡಲಿ, ಪುತ್ರರೊಂದಿಗೆ ಸುಖವಾಗಿರುವಂತಾಗಲೀ, ಪಿತೃಗಳಿಗೆ ಕರುಣಿಸಿದಂತೆ ನಮಗೂ ಅವಶ್ಯಕತೆಗಳೆಲ್ಲವನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ.

# ಇಂದ್ರ ದೇವರು

## ಅಕ್ಷರ ಮಾಲಿಕೆ (ಪ್ರಾರ್ಥನಾ ವಿಭಾಗ)

* ಪುತ್ರರನ್ನು ಸುಸಂಸ್ಕೃತರನ್ನಾಗಿ ಮಾಡಲಿ, ಪಾಪಗಳನ್ನು ನಾಶಮಾಡಲಿ, ಪ್ರಶಾಂತ ಮನಸ್ಸನ್ನು ಕೃಪೆಮಾಡಲಿ, ಪುತ್ರ ಪೌತ್ರರಿಗಾಗಿ ಬೇಡಿದ್ದಾರೆ. ಪ್ರಭೂತ ಧನ-ಅನ್ನ ಬೇಡಿದ್ದಾರೆ, ಪೂರ್ವ-ಪಶ್ಚಿಮ, ದಕ್ಷಿಣ-ಉತ್ತರ, ಮೇಲೆ-ಕೆಳಗೆ, ಮುಂದೆ -ಹಿಂದೆ, ವರ್ತಮಾನ, ಭವಿಷ್ಯತ್‌ಕಾಲ, ಸಕಲಕಾಲಗಳಲ್ಲೂ ಹಗಲು-ರಾತ್ರಿ ರಕ್ಷಿಸಲಿ, ಪಾಪಗಳನ್ನು ಪರಿಹರಿಸಿ ಆಚೆಯ ದಡ ಸೇರಿಸಲಿ, ಪ್ರಸಿದ್ಧ ಧನ-ಗೋವು-ಅನ್ನ ಹಾಗೂ ನಮಗೆ ಇಚ್ಛಿತವಾದುದೇಲ್ಲವನ್ನು ಅನುಗ್ರಹಿಂಸಲಿ.
* ಬಹಳ ಒಳ್ಳೆಯ ಗಾಳಿಗಾಗಿ ಪ್ರಾರ್ಥಿಸಿದ್ದಾರೆ. ಬಲಶಾಲಿಗಳನ್ನಾಗಿ ಮಾಡಲಿ, ಬುದ್ಧಿಯನ್ನು ಚುರುಕುಗೊಳಿಸಲಿ, ಬಲಶಾಲಿ ಮಕ್ಕಳಿಗಾಗಿ ಬೇಡಿದ್ದಾರೆ, ಭಕ್ತರನ್ನು ಬಲಶಾಲಿಗಳನ್ನಾಗಿ ಮಾಡಲಿ, ಭೋಗ ಯೋಗ್ಯ ಅನ್ನ-ಸಂಪತ್ತು ಬೇಡಿದ್ದಾರೆ, ಬೇಡಿದವರಿಗೆ ಅತೀ ಶೀಘ್ರವಾಗಿ ಧನ ನೀಡಲು ಕೇಳಿದ್ದಾರೆ, ಬಂಧುಗಳು ಅಸಂತೋಷದಿಂದ ಯಜಮಾನನ ಮೇಲೆ ಬೀಳುವ ಮೊದಲೇ ರಕ್ಷಿಸಲು ಬೇಡಿದ್ದಾರೆ, ಭಕ್ತರು ತೊಂದರೆಯಲ್ಲಿ ಇರುವಾಗ ಇಂದ್ರನು ರಕ್ಷಿಸಿ, ಧನ-ದಾರೆ ದರಿಸಲಿ, ಬ್ರೃಹಸ್ಪತಿಯೂ ಯಜಮಾನನ ಧನಾಭಿಲಾಶೆ ಪುರೈಸಲಿ ಬೆಲೆ ಬಾಳುವ ಸುವರ್ಣಾಧಿ ಅಲಂಕಾರ, ಆಭರಣಗಳನ್ನು ಬೇಡಿದ್ದಾರೆ, ಭಯ ರಾಹಿತ್ಯಕ್ಕಾಗಿ ಬೇಡಿದ್ದಾರೆ.
* ಮಳೆಗಾಗಿ ಪ್ರಾರ್ಥಿಸಿದ್ದಾರೆ, ಮೇದಾ ಶಕ್ತಿ ನೀಡಲಿ, ಮಿತ್ರರು ಮಾತ್ರ ನಮ್ಮನ್ನು ಗುರುತಿಸಲಿ, ಮಳೆ ಸುರಿಯುವಂತೆ ಮಾಡಲಿ, ಜಲಾಭಿವೃದ್ಧಿಗಾಗಿ ಪ್ರಾರ್ಥಿಸಿದ್ದಾರೆ, ಮಾನವರಿಗೆ ಶಕ್ತಿ ಕೊಡುವುದಕ್ಕಾಗಿ ಮರುತ್ತುಗಳೊಳಗೂಡಿ ಇಂದ್ರನು ಬರಲಿ, ಮಾಧ್ಯಂದಿನ ಸವನದಲ್ಲಿ ವರುಣನೊಂದಿಗೆ ಬಂದು ರಕ್ಷಿಸಲಿ, ಮಾನವ ರಕ್ಷಿತ ಗೃಹದಲ್ಲಿ ಯಜಮಾನನು ಇರುವಂತಾಗಲಿ, ಮಂಗಳಗಳಿಗಾಗಿ ಪ್ರಾರ್ಥಿಸಿದ್ದಾರೆ, ಮಾನವರಂತೆ ಮಾತನಾಡಿ ಇಂದ್ರನು ನಮಗೆ ಬುದ್ಧಿಹೇಳಲಿ.
* ಮಾಧ್ಯಮಿಕ ವಾಕ್ ಹಿಂದಿನಂತೆಯೇ ಪ್ರಕಾಶಿಸಲಿ, ಮೇಧಾವಿ ಯಜಮಾನರನ್ನು ತನ್ನವರನ್ನಾಗಿ ಮಾಡಿಕೊಳ್ಳಲಿ, ಮಕ್ಕಳು ಮೊಮ್ಮಕ್ಕಳಿಗಾಗಿ ಕೇಳಿದ್ದಾರೆ,
* ಯಥೇಶ್ಚವಾಗಿ ಆಹಾರ ದೊರೆಯುವಂತೆ ಮಾಡಲಿ, ಯಜಮಾನನನ್ನು ಸಂಪತ್ ಭರಿತನನ್ನಾಗಿ ಮಾಡಲಿ, ಯಜಮಾನರು ಪುತ್ರ ಪೌತ್ರರನ್ನು ಬೇಡುತ್ತಾರೆ. ಅತೀಶಯ ಗೋವುಗಳನ್ನು ಯಾಜ್ಞಿಕರನ್ನು ರಕ್ಷಣೆಮಾಡಲಿ, ಯಾಜ್ಞಿಕರಿಗೆ ಧನ ಹಂಚಿ ನಂತರ ಇಂದ್ರಾಣಿಯ ಜೊತೆ ಸೇರಲಿ, ಯಜ್ಞ ಕರ್ಮ ಪ್ರವರ್ತಕರನ್ನಾಗಿಯೇ ಇರಿಸಲಿ, ಯಜ್ಞ ಕರ್ತರ ಇಷ್ಟಾರ್ಥಗಳನ್ನು ನೆರವೇರಿಸಲಿ, ಯಜಮಾನನ್ನು ಪಾಪ ಕರ್ಮಗಳನ್ನು ಮಾಡದಂತೆ ಸತ್‌ಬುದ್ಧಿ ಕರುಣಿಸಲಿ,
* ಯಾವ ದಿಕ್ಕಿನಿಂದಲೂ ಆಪತ್ತುಗಳು ಬಾರದಿರಲಿ, ಯಜಮಾನರನ್ನು ಸುಖಿಗಳನ್ನಾಗಿ ಇರಿಸಿರಲಿ, ಯಾವ ತೊಂದರೆಗಳು ಇಲ್ಲದೆ ಮನೆಗಳಿಗೆ ಹಿಂತಿರುಗುವಂತಾಗಲಿ, ಯುದ್ಧ ಸಮಯದಲ್ಲಿ ಶೀಘ್ರವಾಗಿ ಪೋಷಕ ಧನ-ದಾನ್ಯಗಳು ಸಿಗುವಂತೆ ಮಾಡಲಿ, ಯಜ್ಞ ಕರ್ಮಗಳಲ್ಲಿ ಇಂದ್ರನು ಸ್ವಯಂ ರಕ್ಷಕನಾಗಿರಲಿ, ಯಜ್ಞ ವರ್ಧಕ, ತೇಜಸ್ಸು, ಅನ್ನ ನೀಡಲಿ.
* ಯಜಮಾನರು ಇಂದ್ರನ ಪ್ರೀತಿ ಪಾತ್ರರಾಗಿ ಇರುವಂತಾಗಲೀ ಯಜಮಾನರ ಪುತ್ರರನ್ನು ಬೇರೆಹೋಗದಂತೆ ಅವರಿಗೆ ಬುದ್ಧಿ ಹೇಳಲಿ, ಯಜಮಾನನ ಕರ್ಮಗಳು ಫಲಬರಿತವಾಗಿರಲಿ, ಯಜಮಾನನು ದೇವತೆಗಳಿಂದ ಬಲ ಪಡೆಯುವಂತಾಗಲೀ, ಯಜಮಾನರು ಯಜ್ಞ-ಯಾಗಾದಿಗಳಲ್ಲಿ, ಅನ್ನದಾನ, ಗೋದಾನ, ಸುವರ್ಣದಾನಗಳನ್ನು ಮಾಡಲಿ.
* ಯಜ್ಞಯಾಗಾದಿಗಳನ್ನು ಮಾಡುವ ಸಮಯಗಳಲ್ಲಿ ಇಂದ್ರನು ಅಭಿಮುಖನಾಗಲಿ, ಹವಿಸ್ಸು ಸ್ವೀಕರಿಸಲಿ, ಸೋಮಪಾನ ಮಾಡಲಿ, ಶತ್ರುಗಳನ್ನು ಸಂಹರಿಸಲಿ, ಯಜಮಾನನ್ನು ಚೈತನ್ಯಗೊಳಿಸಿ ಅವನ ಬುದ್ಧಿಯನ್ನು ಕರ್ಮ ನಿರತವನ್ನಾಗಿ ಮಾಡಲಿ, ಯಜಮಾನರ ದಾರಿದ್ರ್ಯ ಪರಿಹರಿಸಲಿ ಪಶು ಸಂಪತ್ತನ್ನು ನೀಡಲಿ.
* ಯಾಚಕರಿಗೆ ಶಕ್ತಿ ಸಾಮರ್ಥ್ಯಗಳನ್ನು ನೀಡಲಿ, ರಕ್ಷಣೆಯನ್ನು ಮಾಡಲಿ, ಯಾಜ್ಞಿಕರಿಗೆ ದಕ್ಷಿಣ ಹಸ್ತದಿಂದ ಧನ-ದಾನ ಮಾಡಲಿ, ಯಾಜ್ಞಿಕರು ರಕ್ಷಣೆ ಮತ್ತು ಸುಖತ್ವಕ್ಕಾಗಿ ಪ್ರಾರ್ಥಿಸುತ್ತಾರೆ. ರಥ-ರಕ್ಷಣೆಗಾಗಿ ಬೇಡಿದ್ದಾರೆ, ಶತ್ರುನಾಶಕ್ಕಾಗಿ ರಕ್ಷಣೆಕೇಳಿದ್ದಾರೆ, ಪುತ್ರ ಪೌತ್ರರನ್ನು ರಕ್ಷಿಸಲಿ, ರಥ-ರಥಮಾರ್ಗ ಸೌಕರ್ಯಗಳಿಗಾಗಿ ಪ್ರಾರ್ಥಿಸಿದ್ದಾರೆ.
* ರಾಕ್ಷಸಕರನ್ನು ಹಗಲು ರಾತ್ರಿಗಳಲ್ಲಿ ಸಂಹರಿಸಿ ಯಾಜ್ಞಿಕರಿಗೆ ರಕ್ಷಣೆ ನೀಡಲಿ, ರಕ್ಷಣಾರ್ಥವಾಗಿ ಶಸ್ತ್ರಗಳನ್ನು ನೀಡಲಿ, ರಣರಂಗದಲ್ಲಿ ಇಂದ್ರನು ಪಡೆದ ಧನ-ದಾನ್ಯ ಆಭರಣಾಧಿಗಳನ್ನು ಯಾಜ್ಞಿಕರಿಗೆ ಕೊಡಲಿ, ರಾಕ್ಷಸರನ್ನು ಶತ್ರುಗಳನ್ನು ಕೊಲ್ಲಬಲ್ಲ ರಕ್ಷಣಾ ಶಕ್ತಿಯನ್ನು ಯಜಮಾನನಿಗೆ ಕೊಡಲಿ.

# ಇಂದ್ರ ದೇವರು
## ಅಕ್ಷರ ಮಾಲಿಕೆ (ಪ್ರಾರ್ಥನಾ ವಿಭಾಗ)

* ವಿರೋಧಿಗಳು ಶರೀರಕ್ಕೆ ಕೆಡಕು ಮಾಡದಿರಲಿ, ವರುಣನು ತುಷ್ಟನಾಗಲಿ ವರ್ಚ ವೈಢೂರ್ಯಗಳಿಗಾಗಿ ಪ್ರಾರ್ಥಿಸಿದ್ದಾರೆ, ವೀರವಂತ ಪುತ್ರರಿಗಾಗಿ ಬೇಡಿದ್ದಾರೆ, ವೀರಪುತ್ರರನ್ನೇ ಅನುಗ್ರಹಿಸಲಿ, ವೃತ್ರ ರೂಪಿ ಶತ್ರುವನ್ನು ಬೇರೆ ಕಡೆಗೆ ಓಡಿಸಲಿ, ವಾಹನ ಯೋಗ್ಯ ರಸ್ತೆಗಳಿಗಾಗಿ ಹಾಗೂ ಅಶ್ವಗಳಿಗಾಗಿ ಬೇಡಿದ್ದಾರೆ. ವಿಶೇಷವಾಗಿ ಗೋ ಸಂಪತ್ತನ್ನು ಕೇಳಿದ್ದಾರೆ.
* ವಜ್ರಾಯುಧದಿಂದ ನಾಸ್ತಿಕರನ್ನು ಅಂಧಕಾರಕ್ಕೆ ತಳ್ಳಲಿ, ವಿಷಯ ಸುಖಗಳು ಯಜಮಾನನಿಗೆ ಲಭಿಸಲಿ, ವೃಷ್ಟಿಗಾಗಿ ಪ್ರಾರ್ಥಿಸಿದ್ದಾರೆ, ವಾಸ-ಗೃಹಕ್ಕಾಗಿ ಬೇಡಿದ್ದಾರೆ, ವಜ್ರಾಯುಧದಿಂದ ಎಲ್ಲ ಶತ್ರುಗಳನ್ನು ನಾಶಮಾಡಿ ರಕ್ಷಿಸಲಿ ಎಂದು ಬೇಡಿಕೊಂಡಿದ್ದಾರೆ.
* ಶರೀರ ರಕ್ಷಣೆಗಾಗಿ ಬೇಡಿದ್ದಾರೆ, ಶತ್ರು ಧನವನ್ನು ಋತ್ವಿಜರು ಯಜಮಾನರಿಗೆ ಹಂಚಲಿ, ಶತ್ರುಗಳನ್ನು ನಾಶಮಾಡಿ ನೆಮ್ಮದಿಯಿಂದ ಇರುವಂತೆ ಮಾಡಲಿ, ಶತ್ರುಗಳು ಪರಸ್ಪರ ಹೊಡೆದಾಡಿ ಸಾಯಲಿ, ಶರೀರ ಪೋಷಣೆಗೆ ಅನ್ನ ಸಂಪತ್ತು ಬೇಡಿದ್ದಾರೆ, ಶತ್ರುಗಳನ್ನು ರಾಕ್ಷಸರನ್ನು ನಿಗ್ರಹಿಸಿಕೊಲ್ಲುವ ಶಕ್ತಿ-ಸಾಮರ್ಥ್ಯವನ್ನು ಕೇಳಿದ್ದಾರೆ, ಶತ್ರುಗಳನ್ನು ನೇರವಾಗಿ ಎದುರಿಸುವ ಶಕ್ತಿಯನ್ನು ಯಜಮಾನನಿಗೆ ನೀಡಲಿ, ಅಶ್ವಗೋವುಗಳಿಗಾಗಿ ಬೇಡಿದ್ದಾರೆ, ಶತ್ರುಗಳನ್ನು ತಮ್ಮ ಗೃಹಗಳಿಂದ ದೂರವೇ ಇರುವಂತೆ ಮಾಡಲಿ.
* ಸ್ವರ್ಗವನ್ನು ಕರುಣಿಸಲಿ, ಸ್ನೇಹಿತನಾಗಿಯೇ ಇರಲಿ, ಸಂಪತ್ ಅಭಿವೃದ್ಧಿ ಪಡಿಸಲಿ, ಸೋಮದಿಂದ ತೃಪ್ತನಾಗಲಿ, ಸ್ತೋತ್ರ ಮಾಡುವವರನ್ನು ಶಕ್ತಿಯುತರನ್ನಾಗಿ ಮಾಡಲಿ, ಸ್ತುತಿಗಳಿಂದ ತೃಪ್ತಿ ಹೊಂದಲು ಪ್ರಾರ್ಥಿಸುತ್ತಾರೆ. ಸಂಪತ್ತು ಬಯಸುವವರಿಗೆ ಸಂಪತ್ತು ನೀಡಲಿ ಎಂದು ಕೇಳಿದ್ದಾರೆ, ಸೋಮ ಸೇವಿಸಲು ರಕ್ಷಿಸಲು ಇಂದ್ರನು ದಾಪಿಸಲಿ, ಸ್ತುತಿಕರ್ತರಿಗೆ ಅನ್ನಕ್ಕಾಗಿ ಬೇಡಿದ್ದಾರೆ. ಸಕಲ ಅಸುರಿಮಾಯೆಗಳನ್ನು ನಾಶಮಾಡಲಿ, ಸುಖದಾತನಾಗಿರಲಿ, ಸರ್ವ ಅಪೇಕ್ಷೆಗಳನ್ನು ಈಡೇರಿಸಲಿ.
* ಸೀತ ಮಳೆ-ಬಿಸಿಲಿನಿಂದ ಗಾಳಿಯಿಂದ ರಕ್ಷಿಸಲಿ ಸೇವಕರಿಗೆ ಒಳ್ಳೆಯದನ್ನು ಮಾಡಲಿ, ಅವರ ಶ್ರೇಯಸ್ಸನ್ನು ಪ್ರಾರ್ಥಿಸಿದ್ದಾರೆ. ಸಕಲ ದೇವತೆಗಳೊಂದಿಗೆ, ಇಂದ್ರನು ಬಂದು ರಕ್ಷಿಸಲಿ ಸ್ವಯಂ ಪ್ರೇರಿತನಾಗಿ ಯಜಮಾನ ಅಭಿಮುಖನಾಗಲಿ, ಸಂಪತ್ತು ಹೊಂದಿದವರು ಶ್ರೇಷ್ಠ ಯಜ್ಞಗಳನ್ನು ಮಾಡುವಂತೆ ಅವರನ್ನು ಪ್ರೇರಿಸಲಿ, ಸೂರ್ಯ ದರುಶನ ಪ್ರತಿದಿನವೂ ನಮಗೆ ಲಭಿಸುವಂತಾಗಲೀ ಸೂರ್ಯನು ನಮ್ಮನ್ನು ಕರ್ಮವಿಷಯಗಳಲ್ಲಿ ಜ್ಞಾನಿಗಳನ್ನಾಗಿ ಮಾಡಲಿ, ಸುಸ್ತಿಕರ್ತರನ್ನು ಧನವಂತಾರಾಗಿ ಮಾಡಲಿ
* ಸೋಮ ಅರ್ಪಿಸುವವರಿಗೆ ಮೊದಲು ಧನ ನೀಡಲಿ, ಸಂಗ್ರಾಮದಲ್ಲಿ ಅಚಲವಾಗಿ ನಿಂತು ಶತ್ರು ಸದೆ ಬಡಿದು ಅವರ ಧನವನ್ನು ಯಜಮಾನನಿಗೆ ಸೇರಿಸಲಿ,
* ಸುವರ್ಣ ಆಭರಣ ಅಲಂಕೃತ ಅಶ್ವ ಗೋವುಗಳನ್ನು ದಾನವಾಗಿ ಪಡೆಯುವಂತಾಗಲಿ, ಸ್ತುಸಿಕರ್ತರಿಗೆ ಧನ ನೀಡಲಿ, ಸೋಮಪಾನದಿಂದ ಹರುಷಹೊಂದಲಿ, ಸನ್ಮಾರ್ಗಿಗಳನ್ನಾಗಿ ಮಾಡಲಿ, ಸ್ನೇಹ ಅಚಲವಾಗಿ ಇರಲಿ ಹಾಗೂ ಧನಕ್ಕಾಗಿ ಬೇಡಿದ್ದಾರೆ,ಸ್ತುತಿಗಳನ್ನು ಅರ್ಪಿಸಿ ಪಾಪ ನಾಶಕ್ಕಾಗಿ ಪ್ರಾರ್ಥಿಸಿದ್ದಾರೆ, ಸುಖವಾಗಿರುವಂತೆಯೇ ಇಂದ್ರನು ಕೃಪೆತೋರಲಿ, ಸಕಲ ಕಷ್ಟಗಳನ್ನು ನಿವಾರಿಸಲಿ, ಸ್ತೋತೃಗಳಿಗೆ ಅಶ್ವಗಳನ್ನು, ಗೋವುಗಳನ್ನು ಅನುಗ್ರಹಿಸಲೀ.

## ಈ ತೊಂದರೆಗಳು ಬೇಡಾ ಎನ್ನುತ್ತಾರೆ

* ಅಸುರರು ಯಜ್ಞಕ್ಕೆ ತೊಂದರೆ ಮಾಡದಿರಲಿ, ಆಶ್ರಮ ವಾಸಿಗಳಿಗೆ ತೊಂದರೆ ಮಾಡದಿರಲಿ, ಭಕ್ತರನ್ನು ಶತ್ರುಗಳಿಗೆ ಬಿಟ್ಟುಕೊಡದಿರಲಿ, ವಿರೋಧಿಗಳನ್ನು ಸ್ವರ್ಗದಿಂದ ಕೆಳಗೆ ತಳ್ಳಲಿ ಇಂದ್ರ ಆಯುಧಗಳು ಶತ್ರುಗಳ ಮೇಲೆ ಬಿದ್ದು ಅವರು ನಾಶವಾಗಲಿ, ಯಜ್ಞ ವಿರೋಧಿಗಳನ್ನು ನಾಶಮಾಡಲಿ, ಯಾವ ಅಪಾಯಗಳು ಬಾರದಂತೆ ರಕ್ಷಿಸಲಿ, ರೋಗಾಧಿಗಳು ಹಿಂಸಿಸದಿರಲಿ, ಪಾಪಗಳಿಂದ ಯಜಮಾನನ್ನು ಪರಿಹರಿಸಿ ರಕ್ಷಿಸಲಿ ಶತ್ರುಗಳಿಗೆ ಸೂರ್ಯ ಪ್ರಕಾಶ ಇಲ್ಲದಂತೆ ಆಗಲಿ.

## ಬ್ರಹ್ಮ ದ್ವೇಷಿಗಳನ್ನು ಅನುಗ್ರಹಿಸುವುದು ಬೇಡ

* ಸ್ತೂರ್ಥಪಾನ ಮತ್ತರನ್ನು ನಾಸ್ತಿಕರನ್ನು ಹಿಂಸಕರನ್ನು ಭಯಪಡಿಸುವವರನ್ನು ತಮ್ಮಿಂದ ದೂರವೇ ಇರಿಸಿರಲಿ, ಕರ್ಮ ಬ್ರಷ್ಟರಿಗೆ ತಮನ್ನು ಒಪ್ಪಿಸುವುದು ಬೇಡ, ಲೋಬಿಗಳಿಗೆ ಧನ ದಾತೃ ಆಗುವುದು ಬೇಡ, ನಿಂಧಿಸುವವರು, ದುಃಖ ಉಂಟು ಮಾಡುವವರು ತಮ್ಮಿಂದ ದೂರಹೋಗಲಿ, ಹಿಂಸೆಗಳಿಂದ ಪಾರು ಮಾಡಲಿ, ಹಿಂಸಕರ ಆಯುಧಗಳನ್ನು ನಾಶಮಾಡಲಿ, ಇಂದ್ರನು ಎಲ್ಲ ರೀತಿಯಿಂದಲೂ ಯಜಮಾನರು ಯಾಜ್ಞಿಕರು ಭಕ್ತರುಗಳಿಗೆ ಎಲ್ಲ ರೀತಿಯ ತೊಂದರೆಗಳನ್ನು ಪರಿಹರಿಸಿ ಎಲ್ಲ ಆವಶ್ಯಕತೆಗಳನ್ನು ಅನುಗ್ರಹಿಸಲಿ' ಎಂದು ಬೇಡಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಇಂದ್ರದೇವರು (ಪ್ರಾರ್ಥನಾ ವಿಭಾಗ) ಅಕ್ಷರಮಾಲಾ ಅಡಿಯಲ್ಲಿ

ಪ್ರಾರ್ಥನೆಗಳು : ಅನೇಕ ಸಂವತ್ಸರಗಳು ಹವಿಸ್ಸನ್ನು ಅರ್ಪಿಸುತ್ತಿರುವಂತೆ ಅನುಗ್ರಹಿಸಲಿ. ಭೋಗಯೋಗ್ಯ ದೋಷರಹಿತ ಅನ್ನ, ಧನಗಳಿಗಾಗಿ ಬೇಡಿದ್ದಾರೆ. ಪ್ರೀತಿಪಾತ್ರ ವಾಹನಯೋಗ್ಯ ಅಶ್ವಗಳಿಗಾಗಿ ಬೇಡಿದ್ದಾರೆ. ಅಧಿಕ ಸಂಪತ್ತು, ಪ್ರಭೂತ ಧನಗಳಿಗಾಗಿ, ಅಸುರರನ್ನು ಸೋಲಿಸಿ ಆಪತ್ತುಗಳಿಂದ ಪಾರುಮಾಡಲಿ. ಅಧಿಕ ಕ್ಷೀರಕೊಡುವ ಗೋಸಂಪತ್ತು ಕೊಟ್ಟು ರಕ್ಷಿಸಲಿ. ಅನ್ನ ಆಹಾರಗಳಿಗಾಗಿ ಬೇಡಿದ್ದಾರೆ. ಅನುಗ್ರಹ ಬುದ್ಧಿಯಿಂದ ಅಶ್ವಾರೂಢನಾಗಿ ಬರಲಿ. ಅಹಂಕಾರಪಡುವವರನ್ನು ದಮನ ಮಾಡಲಿ. ಅರ್ಪಿಸಿದ ಸೋಮಪಾನ ಮಾಡಿ ತೃಪ್ತನಾಗಲಿ. ಅದಿತಿಯು ಯಜಮಾನನಿಗೆ ಅಹಿಂಸಕನಾಗಿದ್ದು, ಅನ್ನ, ತೇಜಸ್ಸು ಒದಗಿಸಲಿ. ಅಧಿಕ ಬಲವನ್ನು, ಸ್ನೇಹಿತರನ್ನು ಸ್ತೋತೃಗಳಿಗೆ ಕೊಡಲಿ. ಅತ್ಯಂತ ದುರ್ಗಮ ಪ್ರದೇಶದಲ್ಲಿ ಸುಖಕರ ಮಾರ್ಗದರ್ಶನ ಮಾಡಲಿ. ಅಪೇಕ್ಷಿಸುವಷ್ಟು ಕ್ಷೀರ ಕೊಡುವ ಗೋವುಗಳನ್ನು ಯಾಜ್ಞಿಕರಿಗೆ ಕೊಡಲಿ. ಅಪರಿಮಿತ ಧನದೊಂದಿಗೆ ಇಂದ್ರನು ಯಜ್ಞಕ್ಕೆ ಬರಲಿ.

ಆಶ್ರಮವಾಸಿಗಳಿಗೆ ಹಿಂಸೆ ಆಗದಿರಲಿ. ಆಯಸ್ಸು ನೂರು ವರ್ಷ ಬೇಡಿದ್ದಾರೆ. ಆಸ್ತಿಕರ ಧನ ನಮಗೆ ಸಿಗುವಂತೆ ಮಾಡಲಿ. ಆಪ್ತ ಮಿತ್ರನಂತೆ ಇಂದ್ರನು ಬರಲಿ. ಆಶ್ರಯಿಸಿದವರಿಗೆ ರಕ್ಷಕನಾಗಿರಲಿ. ಆಯಸ್ಸು ಪರ್ಯಂತ ವಿಸ್ತಾರ ಗೃಹ ಶಾಶ್ವತ ನಿವಾಸದಲ್ಲಿ ಇರುವಂತಾಗಲಿ. ಆರೋಗ್ಯವನ್ನು ಕರುಣಿಸಲಿ.

ಇಂದ್ರನು ಯಜಮಾನನ ಸ್ನೇಹಿತನಾಗಿರಲಿ, ರಕ್ಷಕನಾಗಿರಲಿ, ಇತರರ ಸ್ತುತಿ ಅಲಕ್ಷಿಸಿ ಈ ಯಜಮಾನನ ಸ್ತುತಿಯನ್ನೇ ಕೇಳಲಿ. ಇಂದ್ರನು ಕೊಟ್ಟದ್ದನ್ನು ನಾವು ಅನುಭವಿಸುವಂತಾಗಲಿ. ಶ್ರದ್ಧೆವುಳ್ಳ ಭಕ್ತರನ್ನು ರಕ್ಷಿಸಲಿ. ಇಚ್ಛಿಸುವ ಸಂಪತ್ತು ಇಷ್ಟಾರ್ಥಗಳನ್ನು ಕರುಣಿಸಲಿ. ಇಂದ್ರದತ್ತ ಧನವನ್ನು ಒಡನೆಯೇ ಅನುಭವಿಸುವಂತಾಗಲಿ ಅದು ನಾಶವಾಗದಿರಲಿ. ಇತರರ ಮುಂದೆ ತನ್ನನ್ನು ಪ್ರಸಿದ್ಧ ಪಡಿಸಲಿ. ಇಂದ್ರನು ಯಜಮಾನನನ್ನು ಶತ್ರುಗಳಿಗೆ ಬಿಟ್ಟುಕೊಡುವುದು ಬೇಡ. ಇಂದ್ರದತ್ತ ಅನ್ನ ಅನುಭವಿಸಲು ಸಮರ್ಥರಾಗಿರುವಂತಾಗಲಿ. ಧನ ತುಂಬಿದ ರಥದಲ್ಲಿ ಇಂದ್ರನು ಬರಲಿ. ಇಷ್ಟಾರ್ಥಗಳನ್ನು ಈಡೇರಿಸಿಯೇ ಸ್ವರ್ಗಕ್ಕೆ ಹಿಂತಿರುಗಲಿ. ನಮ್ಮ ಇಷ್ಟಾರ್ಥಗಳು ಫಲಕಾರಿಯಾಗಲಿ. ಇಂದ್ರ ಒದಗಿಸಿದ ಧನ ತಕ್ಷಣ ಯಜಮಾನನನ್ನು ಸೇರಲಿ. ಪೂರ್ವ, ಪಶ್ಚಿಮಗಳಿಂದ ಯಜಮಾನನ್ನು ರಕ್ಷಿಸಲಿ.

ಉತ್ತಮ ರಕ್ಷಣೆ, ಧನ, ಸಂಪತ್ತು ಬೇಡಿದ್ದಾರೆ. ಉತ್ತಮ ನಿವಾಸಕ್ಕಾಗಿ ಬೇಡಿದ್ದಾರೆ. ಋಷಿಗಳು ಯಾಜಮಾನರುಗಳಿಗೆ ಆಶ್ರಯ, ಅನ್ನ, ಧನ, ಕೀರ್ತಿ ಸಿಗುವಂತೆ ಮಾಡಿ ಹರ್ಷಪಡಿಸಲಿ. ಋತ್ವಿಕ್ ಯಜಮಾನರನ್ನು ಎಲ್ಲಾ ರೀತಿಯಿಂದಲೂ ರಕ್ಷಿಸಲಿ. ಋತ್ವಿಜರ ಪಾಪಗಳನ್ನೆಲ್ಲಾ ಪರಿಹರಿಸಲಿ. ಋಷಿಗಳು ಯಾಜ್ಞಿಕರು ಉತ್ತಮ ಸ್ಥಿತಿಯಲ್ಲಿ ಇರುವಂತಾಗಲಿ.

ಎಲ್ಲಾ ತರಹ ರಕ್ಷಣೆಗಳನ್ನು ಬೇಡಿದ್ದಾರೆ. ಎಲ್ಲೇ ಇರಲಿ ಕರೆದಾಗ ಬರಲಿ. ಅವರಿಗೂ ಪಶುಗಳಿಗೂ ಬೇಕಾದ ಅವಶ್ಯಕತೆಗಳನ್ನು ಈಡೇರಿಸಲಿ. ಕಲ್ಯಾಣಗಳಿಗಾಗಿ ಪ್ರಾರ್ಥಿಸಿದ್ದಾರೆ. ಕರ್ಮಗಳನ್ನು ಮಾಡುತ್ತಿದ್ದಂತೆಯೇ ಅನುಗ್ರಹಿಸಲಿ. ಕರ್ಮಗಳಿಗೆ ಪ್ರತಿಫಲ ದಕ್ಷಿಣೆಯ ರೂಪದಲ್ಲಿ ಬರಲಿ. ಕಠಿಣ ಮಸ್ಯೆಗಳನ್ನು ದಾಟುವಂತಾಗಲಿ. ಕಷ್ಟ ಕಾಲದಲ್ಲಿ ಯಜಮಾನನ ಪುತ್ರ ಪೌತ್ರರನ್ನು, ಆಶ್ರಿತರನ್ನು ಂಪೂರ್ಣವಾಗಿ ರಕ್ಷಿಸಲಿ. ಕೇಡು ಬಯಸುವ, ಮೇಲೆ ಬೀಳುವ ಶತ್ರುಗಳಿಂದ ಯಜಮಾನನನ್ನು ೃಹಸ್ಪತಿಯು ಹಿಂಭಾಗ, ಮುಂಭಾಗ, ಮೇಲ್ಭಾಗ ಕೆಳಭಾಗಗಳಿಂದ ರಕ್ಷಿಸಲಿ.

ಗೋವುಗಳು ಗೋವು ಸಂಪತ್ತಿಗಾಗಿ ಬೇಡಿದ್ದಾರೆ. ಗೃಹಗಳಿಗಾಗಿ, ಗೌರವ ಸಂಪತ್ತುಗಳಿಗಾಗಿ ಬೇಡಿದ್ದಾರೆ. ಗೋರೂಪಿ ಇಂದ್ರನನ್ನು ಸೇವಿಸಿದವರನ್ನು ಇಂದ್ರನು ರಕ್ಷಿಸಲಿ. ಆರಾಧಿಸಿದವರನ್ನು ರಕ್ಷಿಸಲಿ. ಗೋವುಗಳು, ಅಶ್ವಗಳು, ಹಿರಣ್ಯ ಎಲ್ಲವೂ ದಾನವಾಗಿ ಲಭಿಸಲಿ. ಗೃಹವು ಯಾವ ತೊಂದರೆಯೂ ಇಲ್ಲದೆ ಭದ್ರವಾಗಿ ಇರಲಿ. ಜರಾರಾಹಿತ್ಯವನ್ನುಬೇಡಿದ್ದಾರೆ. ತೇಜೋಬಲಕ್ಕಾಗಿ ಪ್ರಾರ್ಥಿಸಿದ್ದಾರೆ. ತೊಂದರೆಯಲ್ಲಿರುವ ಭಕ್ತರಿಗೆ ಅಭಿಮುಖನಾಗಿ ಅವರ ತೊಂದರೆಗಳನ್ನು ನಿವಾರಿಸಲಿ. ತಂದೆಯಿಂದ ಮಗನು ಭಾಗ ಕೇಳುವಂತೆ ಯಾಜ್ಞಿಕರು ಇಂದ್ರನಲ್ಲಿ ಧನ ಯಾಚಿಸಿದ್ದಾರೆ. ತಪ್ಪುಗಳನ್ನು ಮಾಡಿದ್ದರೆ ಅಂತಹ ಯಜಮಾನನನ್ನು ಹಿಂಸಿಸದೆ ಕ್ಷಮಿಸಿ ರಕ್ಷಿಸಲಿ. ತೊಂದರೆ ಮಾಡುವವನು ಸ್ವಜಾತಿಯವನಾಗಿರಲಿ, ಬೇರೆ ಯಾರೇ ಆಗಿರಲಿ ಅವನು ಶರಣಾಗತನಾಗುವಂತೆ ಮಾಡಲಿ. ದ್ಯಾವಾಪೃಥ್ವಿಗಳು ಕೊಡಬೇಕಾದ ಉತ್ಪನ್ನಗಳಿಗಾಗಿ ಬೇಡಿದ್ದಾರೆ. ದಾರಿದ್ರ್ಯ, ಹಸಿವು, ನಿಂದನೆಗಳನ್ನು ನಿವಾರಿಸಿ ಇಷ್ಟಾರ್ಥಗಳನ್ನು ಕರುಣಿಸಲು ಇಂದ್ರನಲ್ಲಿ ಪ್ರಾರ್ಥಿಸಿದ್ದಾರೆ.

ಧನ ಸಂಪತ್ತಿಗಾಗಿ ಬೇಡಿದ್ದಾರೆ. ದಕ್ಷಿಣೆ ರೂಪದಲ್ಲಿ ಧನ ಬೇಡಿದ್ದಾರೆ. ಶತ್ರು ಧನವನ್ನು ಯಾಜ್ಞಿಕರಿಗೆ ಹಂಚಲಿ. ಧನಕ್ಕಾಗಿ, ಉದಕಗಳಿಗಾಗಿ ಪ್ರಾರ್ಥಿಸಿದ್ದಾರೆ. ಧನದಾತೃವಾಗಲಿ, ಅನ್ನ ಸಂಪತ್ತಿಗೆ ಬೇಡಿದ್ದಾರೆ. ದು:ಖವನ್ನು ನಾಶಮಾಡಲಿ. ದಾನಕ್ಕೆ ಪಾತ್ರರಾಗಿ ಇರುವಂತಾಗಲಿ, ಧನಾಭಿಲಾಷೆಯಿಂದ ಇಂದ್ರನನ್ನು ಸ್ತುತಿಸುವವರಿಗೆ ಧನ, ರಕ್ಷಣೆ ನೀಡಲಿ. ದಾರಿದ್ರ್ಯ, ದು:ಖದಲ್ಲಿರುವವರಿಗೆ ದೈವಾನುಗ್ರಹ ಪ್ರಾಪ್ತಿಯಾಗುವಂತೆ ಮಾಡಲಿ. ಧನಿಕರಿಂದ ಧನ ದೊರೆಯುವಂತಾಗಲಿ. ಧನ ಕಡಿಮೆಯಾಗದಂತೆ ನೋಡಿಕೊಳ್ಳಲಿ. ನೂತನ ರಕ್ಷಣೆಗಳಿಗಾಗಿ ಸಖಿತ್ವಕ್ಕಾಗಿ ಬೇಡಿದ್ದಾರೆ. ನೀರಿನ ಸೌಕರ್ಯಕ್ಕಾಗಿ (ಮಳೆಗಾಗಿ) ಬೇಡಿದ್ದಾರೆ. ನದಿ ದೇವತೆಗಳು ರಕ್ಷಿಸಲಿ ಎಂದು ಬೇಡಿದ್ದಾರೆ. ನಿಂದನೆಗೆ ಗುರಿಯಾಗದಂತೆ ಇರುವಂತಾಗಲಿ ಎಂದು ಬೇಡಿದ್ದಾರೆ. ನಾನಾ ಬಗೆಯ ಅನ್ನ ಒದಗಿಸಿ ಸಂತೋಷಪಡಿಸಲಿ. ನೂರು ವರುಷಗಳ ಕಾಲ ಪುತ್ರ, ಪೌತ್ರರುಗಳೊಂದಿಗೆ ಸು:ಖವಾಗಿ ಇರುವಂತೆ ಅನುಗ್ರಹಿಸಲಿ. ನಿರಭಿಮಾನ, ಪ್ರಶಾಂತತೆ, ನಿರ್ಮಲ ಮನಸ್ಸುಗಳನ್ನು ಕರುಣಿಸಲಿ.

ಪ್ರವೃದ್ಧರನ್ನಾಗಿ ಮಾಡಲಿ. ಪುತ್ರರಿಗೆ, ಪ್ರಾಣಿಗಳಿಗೆ ರೋಗ ಪರಿಹರಿಸಲು ಕೇಳಿದ್ದಾರೆ. ಪುತ್ರ ಪೌತ್ರರಿಗೆ ಪೂಜನೀಯ ಧನ, ಸುಖ ಬೇಡಿದ್ದಾರೆ. ಪುತ್ರರನ್ನು ಬೇಡಿದವರಿಗೆ ಬಲಶಾಲಿಗಳಾದ ಪುತ್ರ, ಪೌತ್ರ ಸಂತತಿ ನೀಡಲಿ. ಪುತ್ರರೊಂದಿಗೆ ಸುಖವಾಗಿ ಇರುವಂತಾಗಲಿ. ಪಿತೃಗಳಿಗೆ ಕರುಣಿಸಿದಂತೆ ಯಜಮಾನಿಗೂ ಅಶ್ವಗಳು, ಗೋವುಗಳು, ಧನವನ್ನು ದಾನರೂಪ ಸಿಗುವಂತೆ ಅನುಗ್ರಹಿಸಲಿ. ಪುಷ್ಕಳ ಅನ್ನಕ್ಕಾಗಿ ಹಾಗೂ ಆಳವಾದ ನೀರಿರುವ ಪ್ರದೇಶಗಳಿಗಾಗಿ ಪ್ರಾರ್ಥಿಸಿದ್ದಾರೆ. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಮೇಲೆ, ಕೆಳಗೆ, ಮುಂದೆ, ಹಿಂದೆ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿ ಸಕಲ ದಿನಗಳಲ್ಲೂ, ಹಗಲು ರಾತ್ರಿಯಲ್ಲೂ ನಮ್ಮೆಲ್ಲರನ್ನು ಇಂದ್ರನು ರಕ್ಷಿಸಲಿ. ಪ್ರಸಿದ್ಧ ಧನ, ಗೋವು, ಅಶ್ವಗಳು ನಮಗೆ ಅಪೇಕ್ಷಿತವಾದವುಗಳು ಎಲ್ಲವನ್ನೂ ಇಂದ್ರನು ಒದಗಿಸಲಿ.

ಮಳೆಗಾಗಿ ಪ್ರಾರ್ಥಿಸಿದ್ದಾರೆ. ಮಳೆ ಸುರಿಯುವಂತೆ ಮಾಡಲಿ, ಜಲಾಭಿವೃದ್ಧಿಗೊಳಿಸಲಿ. ಮಹತ್ವದ ಧನ ಸೇರಿಸಿ ರಕ್ಷಿಸಲಿ. ಮರುತ್‌ಗಳೊಡಗೂಡಿ ಪೃಥ್ವಿಯ ಸಮಸ್ಯೆಗಳನ್ನು ಪರಿಹರಿಸಲು ದಾವಿಸಲಿ. ಮಾನವ ರಕ್ಷಿತ ಗೃಹದಲ್ಲಿ ಯಜಮಾನನು ಇರುವಂತಾಗಲಿ. ಮಂಗಳ ಕರ್ಮಗಳನ್ನು ಮಾಡಿಸಿಯೇ ಕೀರ್ತಿ ಬರುವಂತೆ ಮಾಡಲಿ. ಮಾನವರಂತೆ ಮಾತನಾಡಿ ನಮಗೆ ಬುದ್ಧಿ ಹೇಳಲಿ. ಮೇಧಾವಿ ಯಜಮಾನರನ್ನು ತನ್ನವರನ್ನಾಗಿ ಮಾಡಿಕೊಳ್ಳಲಿ. ಮಕ್ಕಳು, ಮೊಮ್ಮಕ್ಕಳುಗಳಿಗಾಗಿ ಬೇಡಿದ್ದಾರೆ. ಮಾಡಿದ ಸ್ತೋತ್ರಗಳೆಲ್ಲವು ಇಂದ್ರನನ್ನು ಸೇರಲಿ. ಯುದ್ಧ ಸಮಯದಲ್ಲಿ ಸಹಾಯ ಬೇಡಿದ್ದಾರೆ.

ಯಜಮಾನನನ್ನು ಸ್ವತಂತ್ರವಾಗಿ ಬಿಟ್ಟುಬಿಡಲಿ. ಯಾಜ್ಞಿಕರನ್ನು ಸಾಲದಿಂದ ಮುಕ್ತಗೊಳಿಸಲಿ. ಯಾವ ತೊಂದರೆಗಳು ಇಲ್ಲದೆ ಮನೆಗಳಿಗೆ ಹಿಂತಿರುಗುವಂತಾಗಲಿ. ಯಜ್ಞಯಾಗಗಳನ್ನು ಮಾಡಿ ಆ ಬಲದ ಮೇಲೆಯೇ ಯಾಜ್ಞಿಕರು ತಮ್ಮ ಇಷ್ಟಾರ್ಥಗಳನ್ನು ಪ್ರಾರ್ಥಿಸಿದ್ದಾರೆ. ಯಜ್ಞಕರ್ಮ ನಡೆಯುವಲ್ಲಿ ಇಂದ್ರನು ರಕ್ಷಕನಾಗಿರಲಿ.ಯಜಮಾನರನ್ನು ಅವರ ಪುತ್ರರನ್ನು ಬೇರೆ ಮಾಡದಿರಲಿ. ಅವರನ್ನು ಸುಸಂಸ್ಕೃತರನ್ನಾಗಿ ಮಾಡಲಿ. ಯಜಮಾನನ ಕರ್ಮಗಳು ಫಲಭರಿತವಾಗಿ ಇರಲಿ. ಯಜಮಾನರು ದೇವತೆಗಳಿಂದ ಬಲ ಪಡೆಯುವಂತಾಗಲಿ. ಸಕಲ ಸಂಪತ್ತು ಪಡೆದವರು ಶ್ರೇಷ್ಟ ಯಜ್ಞಗಳನ್ನು ಮಾಡುವಂತಾಗಲಿ. ಯಜಮಾನನು ಧನವಂತನಾದರೆ ಅವನ ಆಶ್ರಿತರೆಲ್ಲರೂ ಧನವಂತರಾಗುತ್ತಾರೆ. ಯಜಮಾನನ ದಾರಿದ್ರ್ಯ ಪರಿಹಾರಾರ್ಥ ಪಶು, ಸಂಪತ್ತು ಕೇಳಿದ್ದಾರೆ. ಇಂದ್ರನು ಯಾಜ್ಞಿಕರಿಗೆ ದಕ್ಷಿಣ ಹಸ್ತದಿಂದ ಧನ ದಾನ ಮಾಡಲಿ.

ರಕ್ಷಣೆಗಳಿಗಾಗಿ, ಶತ್ರು ನಾಶಕ್ಕಾಗಿ ಪ್ರಾರ್ಥಿಸಿದ್ದಾರೆ. ರೋಗಗಳಿಂದ ಹಿಂಸಿಸುವ ಪಾಪಗಳನ್ನು ಯಜಮಾನನಿಂದ ಓಡಿಸಿ ಅವನನ್ನು ಅವನ ಪುತ್ರ ಪೌತ್ರರನ್ನು ರಕ್ಷಿಸಲಿ. ರಾಕ್ಷಸರನ್ನು ಹಗಲೂ ರಾತ್ರಿಗಳಲ್ಲಿ ಸಂಹರಿಸಿ ರಕ್ಷಿಸಲಿ. ರಣರಂಗದಲ್ಲಿ ಪಡೆದ ದನಕರುಗಳನ್ನು ಧನವನ್ನು ಯಜ್ಞಯಜಮಾರಿಗೆ ಯಾಜ್ಞಿಕರಿಗೆ ಕೊಡಲಿ. ರಾಕ್ಷಸರನ್ನು ಕೊಲ್ಲಬಲ್ಲ ಶಕ್ತಿಯು ಯಜಮಾನನಿಗೆ ಬರುವಂತೆ ಮಾಡಲಿ. ವರುಣನೊಂದಿಗೆ ಮಧ್ಯಂದಿನ ಸವನದಲ್ಲಿ ಬಂದು ಯಜಮಾನರನ್ನು ರಕ್ಷಿಸಲಿ. ವೃಷ್ಟಿ ಉದಕ ಅನುಗ್ರಹಿಸಲಿ. ಶತ್ರುಗಳನ್ನು ನಾಶಮಾಡಿ ನೆಮ್ಮದಿ ಉಂಟುಮಾಡಲಿ. ಶತ್ರು ಧನವನ್ನು ಋತ್ವಿಜರುಗಳಿಗೆ ಹಂಚಲಿ. ಶಾಪ ಹೊಂದಿದವರನ್ನು ಇಂದ್ರಾ ವರುಣರು ಕ್ಷಮಿಸಿ ಅನುಗ್ರಹಿಸಲಿ. ಶಸ್ತ್ರಮಂತ್ರಗಳಿಂದ, ಸೋಮದಿಂದ ಇಂದ್ರನು ಹರ್ಷಿತನಾಗಿ ಯಾಜ್ಞಿಕರಿಗೆ ಗೋವು, ಅಶ್ವ, ರಥ ಮಾರ್ಗಗಳನ್ನು ಕರುಣಿಸಲಿ ಎಂದು ಬೇಡಿದ್ದಾರೆ. ಸಂಪತ್ತು ಪಡೆದವರು ಯಜ್ಞ ಯಾಗಗಳಲ್ಲಿ ಅನ್ನ, ಧನ, ಗೋವು, ಸುವರ್ಣ ದಾನಗಳನ್ನು ಮಾಡಲಿ.

ಸ್ತೋತ್ರ ಮಾಡಲು ಇಂದ್ರನು ಪ್ರೇರಿಸಲಿ. ಸ್ವರ್ಗವನ್ನು ಕರುಣಿಸಲಿ. ಸೋಮರಸವನ್ನು ಹರ್ಷಾರ್ಥವಾಗಿ ಪಾನಮಾಡಲಿ. ಸೋಮಪಾನದಿಂದ ಆನಂದಿತನಾದ ಇಂದ್ರನು ಯಜಮಾನನ್ನು ಅನ್ನವಂತ, ಧನವಂತನನ್ನಾಗಿ ಮಾಡಲಿ. ಸ್ನೇಹಿತನಾಗಿಯೂ ಇರಲಿ. ಸ್ತೋತ್ರ ಮಾಡುವವರನ್ನು ಶಕ್ತಿಯುತರನ್ನಾಗಿ ಮಾಡಲಿ. ಸ್ತುತಿಸುವವರಿಗೆ ಅತಿ ಶೀಘ್ರ ಅನ್ನ ಧನ ಅನುಗ್ರಹಿಸಲಿ. ಸುತ್ತಲೂ ಇರುವ ಶತ್ರುಗಳನ್ನು ರಾಕ್ಷಸರನ್ನು ನಾಶಮಾಡಲಿ. ಸನ್ಮಾರ್ಗ ಪ್ರವರ್ತಕರನ್ನಾಗಿ ಮಾಡಲಿ. ಸೇವಕರಿಗಾಗಿಯೂ, ಅವರ ಶ್ರೇಯಸ್ಸಿಗಾಗಿಯೂ ಬೇಡಿದ್ದಾರೆ. ಸಕಲ ದೇವತೆಗಳು ಭಕ್ತರು ತೊಂದರೆಯಲ್ಲಿರುವಾಗ ಇಂದ್ರನೊಂದಿಗೆ ಬಂದು ರಕ್ಷಿಸಲಿ

ಸೂರ್ಯದರ್ಶನವು ಪ್ರತಿದಿನವೂ ಲಭಿಸಲಿ. ಸೂರ್ಯನು ಕರ್ಮಗಳನ್ನು ಮಾಡುವ ಜ್ಞಾನ ಕೊಡಲಿ. ಸೋಮ ಅರ್ಪಿಸುವವರಿಗೆ ಮೊದಲು ಧನ ನೀಡಲಿ. ಸ್ತುತಿಕರ್ತರಿಗೆ ಪ್ರಭೂತ ಧನ, ಅನ್ನ ಅನುಗ್ರಹಿಸಲಿ. ಸುವರ್ಣ, ಅಭರಣ ಅಲಂಕೃತ ಅಶ್ವ ಗೋವುಗಳನ್ನು ದಾನ ಮಾಡಲಿ. ಸ್ನೇಹ ಇಂದ್ರನೊಡನೆ ಅಚಲವಾಗಿ ಇರಲಿ. ಸ್ವಶಕ್ತಿಯಿಂದ ಶತ್ರುಗಳನ್ನು ಜಯಿಸಬಲ್ಲ ಶಕ್ತಿ ನೀಡಲಿ. ಹರ್ಷವನ್ನು ನೀಡಿ ಹರ್ಷಿತರಾಗಿರುವಂತೆ ಮಾಡಲಿ.

## ಇವುಗಳು ಬೇಡ ಎಂದಿದ್ದಾರೆ

ಕರ್ಮಭ್ರಷ್ಟರಿಗೆ, ಲೋಭಿಗಳಿಗೆ ಧನ ನೀಡದಿರಲಿ. ಬ್ರಹ್ಮ ದ್ವೇಷಿಗಳನ್ನು ಅನುಗ್ರಹಿಸುವುದು ಬೇಡ. ಇಂದ್ರ ವಿರೋಧಿಗಳನ್ನು ಸ್ವರ್ಗದಿಂದ ಕೆಳಗೆ ತಳ್ಳಲಿ. ನಿಂದಕರು, ದುಷ್ಟರು ನಮ್ಮಿಂದ ಬಹುದೂರವೇ ಇರಲಿ. ಕರ್ಮಭ್ರಷ್ಟರ ಸಹವಾಸ ಬೇಡವೇ ಬೇಡ. ಗುಂಪುಗೂಡಿ ಕೇಡು ಬಯಸುವವರಿಗೆ ಕತ್ತಲು ಆವರಿಸುವಂತೆ ಮಾಡಲಿ. ದ್ವೇಷಿಗಳನ್ನು ಹಿಂಸಿಸಲಿ. ವಂಚಕರು ಯಜ್ಞವಿರೋಧಿಗಳನ್ನು ವಜ್ರಾಯುಧದಿಂದ ಹೊಡೆದು ನಾಶಮಾಡಲಿ. ಶತ್ರುಗಳನ್ನು ಸೋಲಿಸಿ ಯಾಜ್ಞಿಕರನ್ನು ರಕ್ಷಿಸಲಿ. ಇಂದ್ರನು ಯುದ್ಧಗಳಲ್ಲಿ ಮತ್ತು ಯಜ್ಞಗಳಲ್ಲಿ ಸಂಪೂರ್ಣ ರಕ್ಷಕನಾಗಿ ಇರಲಿ, ಶತ್ರುಗಳನ್ನು ನಾಶ ಮಾಡಲಿ. ಸುರಾಪಾನಮತ್ತರನ್ನು , ಹಿಂಸಕರನ್ನು, ನಾಸ್ತಿಕರನ್ನು, ಭಯಪಡಿಸುವವರನ್ನು ನಮ್ಮಿಂದ ದೂರ ಓಡಿಸಿ ರಕ್ಷಿಸಲಿ.

ಇಂದ್ರನು ಎಲ್ಲಿದ್ದಾನೆ? ಹೇಗೆ ಧನ ಒದಗಿಸುತ್ತಾನೆ. ಯಾವ ಯಾವ ಯಜ್ಞಕ್ಕೆ ಬರುತ್ತಾನೆ. ಯಾವ ರೂಪಿನಿಂದ ಇಂದ್ರನನ್ನು ಸೇವಿಸುವುದು. ಯಾವ ಶಸ್ತ್ರ ಮಂತ್ರ ಇಂದ್ರನಿಗೆ ಪ್ರಿಯವಾದುದು. ನಮ್ಮ ಇಷ್ಟಾರ್ಥಗಳನ್ನು ಯಾವಾಗ ಅನುಗ್ರಹಿಸುತ್ತಾನೆ. ಯಾರ ಯಜ್ಞದಲ್ಲಿ ಸೋಮಪಾನ ಮಾಡಿದ್ದಾನೆ. ಯಾವಾಗ, ಯಾವ ರೂಪಿನಲ್ಲಿ ಧನ ಸಹಿತ ಅಭಿಮುಖನಾಗುತ್ತಾನೆ ಎಂದೆಲ್ಲಾ ಚಿಂತಿಸುತ್ತಾರೆ.

## ಅಕ್ಷರ ಮಾಲಿಕೆಯಿಂದ ಅವಶ್ಯಕತೆಗಳಿಗೆ ಅನುಸಾರವಾಗಿ ಈ ಕೆಳಗಿನಂತೆ ವಿಭಜಿಸಿ ತೆಗೆಯಲಾಗಿದೆ

ವಾಸಸ್ಥಾನಕ್ಕಾಗಿ ಗೃಹಗಳನ್ನು ಬೇಡಿದ್ದಾರೆ. ಆಯಸ್ಸು ಪರ್ಯಂತ ವಿಸ್ತಾರ, ಗೃಹಗಳಲ್ಲಿ ಶಾಶ್ವತವಾಗಿ ಇರುವಂತಾಗಲಿ. ಉತ್ತಮ ನಿವಾಸಕ್ಕಾಗಿ ಪ್ರಾರ್ಥಿಸಿದ್ದಾರೆ. ಗೃಹಗಳಿಗೆ ಗೌರವಗಳಿಗಾಗಿ ಸಂಪತ್ತಿಗಾಗಿ ಬೇಡಿದ್ದಾರೆ. ಗೃಹವು ಯಾವ ತೊಂದರೆಯೂ ಇಲ್ಲದೆ ಭದ್ರವಾಗಿ, ಶಾಂತವಾಗಿ ಇರಲಿ. ಮಾನವ ರಕ್ಷಿತ ಗೃಹದಲ್ಲಿ ಇರುವಂತಾಗಲಿ.

<u>ಅನ್ನ:</u> ಭೋಗಯೋಗ್ಯ, ದೋಷರಹಿತ ಅನ್ನಕ್ಕಾಗಿ ಬೇಡಿದ್ದಾರೆ. ಅನ್ನ ಆಹಾರಗಳಿಗಾಗಿ ಪ್ರಾರ್ಥಿಸಿದ್ದಾರೆ. ಅನ್ನ ಸಂಪತ್ತಿಗಾಗಿ ಬೇಡಿದ್ದಾರೆ. ನಾನಾ ಬಗೆಯ ಅನ್ನ ಒದಗಿಸಿ ಸಂತೋಷಪಡಿಸಲಿ ಎಂದು ಪ್ರಾರ್ಥಿಸಿದ್ದಾರೆ.

<u>ನೀರು :</u> ಜಲ ಸಂಪತ್ತಿಗಾಗಿ ನೀರಿಗಾಗಿ ಪ್ರಾರ್ಥಿಸಿದ್ದಾರೆ. ನದಿ ದೇವತೆಗಳನ್ನು ಪೂಜಿಸಿ ಪ್ರಾರ್ಥಿಸಿದ್ದಾರೆ. ಮಳೆಗಾಗಿ, ಜಲಾಭಿವೃದ್ಧಿಗಾಗಿ ಸ್ತುತಿಸಿ ಪ್ರಾರ್ಥಿಸಿದ್ದಾರೆ.

<u>ಧನ, ದಾನ್ಯ :</u> ಪ್ರಭೂತ ಧನ ದಾನ್ಯ, ಅನ್ನ ಸಂಪತ್ತಿಗಾಗಿ ಬೇಡಿದ್ದಾರೆ. ಅಪರಿಮಿತ ಧನದೊಂದಿಗೆ ಇಂದ್ರನು ಬರಲಿ. ಆಸ್ತಿಕರ ಧನದಾನ್ಯ ದೊರೆಯುವಂತೆ ಆಗಲಿ. ಇಂದ್ರದತ್ತ ಧನವು ಒಡನೆಯೇ ಅನುಭವಿಸುವಂತೆ ಆಗಲಿ. ಬೇಡಿದವನಿಗೆ ಅದು ಸೇರಲಿ. ಧನ ಸಂಪತ್ತನ್ನು ದಕ್ಷಿಣೆಯ ರೂಪದಲ್ಲಿ ಬೇಡಿದ್ದಾರೆ. ಧನವು ಕಡಿಮೆಯಾಗದಂತೆಯೂ ನೋಡಿಕೊಳ್ಳಲಿ.

<u>ಆರೋಗ್ಯ :</u> ಆರೋಗ್ಯಕ್ಕಾಗಿ ಪ್ರಾರ್ಥಿಸಿದ್ದಾರೆ. ಜರಾರಾಹಿತ್ಯವನ್ನು ಬೇಡಿದ್ದಾರೆ. ನಿರಭಿಮಾನ ಪ್ರಶಾಂತ ವಾತಾವರಣ, ನಿರ್ಮಲ ಮನಸ್ಸು ನಮಗೆ ದೊರಕುವಂತಾಗಲಿ. ಪುತ್ರರಿಗೆ, ಪೌತ್ರರಿಗೆ, ಪಶುಗಳಿಗೆ ಪ್ರಾಣಿಗಲಿಗೆ ಯಾವ ರೋಗಗಳು ಇಲ್ಲದೆಯೇ ಎಲ್ಲರೂ ಆರೋಗ್ಯವಂತರಾಗಿ ನೆಮ್ಮದಿಯಿಂ ಇರುವಂತಾಗಲಿ.

ಅಶ್ವಗೋವುಗಳು : ಪ್ರೀತಿಪಾತ್ರ ವಾಹನಯೋಗ್ಯ ಅಶ್ವಗಳಿಗಾಗಿ ಬೇಡಿದ್ದಾರೆ. ಅಧಿಕ ಕ್ಷೀರ ಕೊಡುವ ಗೋವುಗಳಿಗಾಗಿ ಮತ್ತು ಅವುಗಳ ರಕ್ಷಣೆಗಾಗಿ ಬೇಡಿದ್ದಾರೆ. ಅಪೇಕ್ಷಿತ ಬಹು ಕ್ಷೀರಕೊಡಬಲ್ಲ ಗೋವುಗಳನ್ನು ಕೊಡಲಿ. ನಾನಾ ವರ್ಣದ ಬಹುಸಂಖ್ಯೆಯ ಒಳ್ಳೆಯ ಕರುಗಳನ್ನುಳ್ಳ ಅಲ್ಲೇ ಮಲಗುವ ಗೋವುಗಳನ್ನು ಅಪೇಕ್ಷಿಸಿದ್ದಾರೆ. ಗೋ ರೂಪಿನಿಂದ ಇಂದ್ರನನ್ನು ಪೂಜಿಸಿ ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ. ಗೋವುಗಳು ಅಶ್ವಗಳು ದಾನರೂಪವಾಗಿ ಲಭಿಸಲಿ. ದಾರಿದ್ರ್ಯ ಪರಿಹಾರಾರ್ಥವಾಗಿ ಪಶುಸಂಪತ್ತನ್ನು ಕೇಳಿದ್ದಾರೆ. ಪಶುಗಳು ತೊಂದರೆಗಳಿಲ್ಲದೆ ಆರೋಗ್ಯವಾಗಿ ಇರುವಂತೆ ಹಾಗೂ ಅರಣ್ಯಗಳಿಂದ ಮೇದು ಮನೆಗೆ ಸುಖವಾಗಿ ಹಿಂತಿರುವಂತೆಯೂ ಅನುಗ್ರಹಿಸಲಿ. ರಥ ಮಾರ್ಗಗಳಿಗಾಗಿ ಕೇಳಿದ್ದಾರೆ.

ರಕ್ಷಣೆಗಳಿಗಾಗಿ : ಶತ್ರುಗಳಿಗೆ ಬಿಟ್ಟು ಕೊಡದಿರಲಿ, ರಕ್ಷಿಸಲಿ. ತೊಂದರೆ ಮಾಡುವವನು ಸ್ವಜಾತಿಯವನಾಗಿರಲಿ. ಬೇರೆ ಯಾರೇ ಆಗಿರಲಿ ಅವನು ಶರಣಾಗತನಾಗುವಂತೆ ಮಾಡಲಿ. ಪೂರ್ವ ಪಶ್ಚಿಮ ದಕ್ಷಿಣ ಉತ್ತರ ಮೇಲೆ ಕೆಳಗೆ ಮುಂದೆ ಹಿಂದೆ ವರ್ತಮಾನ ಭವಿಷ್ಯತ್ ಕಾಲಗಳಲ್ಲಿಯೂ ಇಂದ್ರನು ನಮ್ಮನ್ನು ಸದಾ ರಕ್ಷಿಸಲಿ. ಮಂಗಳಕರ್ಮಗಳನ್ನು ಮಾಡಿಸಿ ಆ ಮೂಲಕ ಪ್ರವೃದ್ಧರಾಗುವಂತೆ ಮಾಡಲಿ. ಕೇಡು ಬಯಸುವವರನ್ನು ಮೇಲೆ ಬೀಳ ಬಯಸುವವರನ್ನು ಬ್ರಹಸ್ಪತಿಯು ಎಲ್ಲಾ ದಿಕ್ಕಿನಿಂದಲೂ ರಕ್ಷಿಸಲಿ.

ಅವಶ್ಯಕತೆಗಳು : ಅನೇಕ ಸಂವತ್ಸರಗಳು ಹವಿಸ್ಸು ಅರ್ಪಿಸುತ್ತಿರುವಂತೆ ಅನುಗ್ರಹಿಸಲಿ. ಮಕ್ಕಳು ಮೊಮ್ಮಕ್ಕಳೊಂದಿಗೆ ನೂರು ವರ್ಷಗಳ ಕಾಲ ಸುಖವಾಗಿ ಇರುವಂತೆ ಕರುಣಿಸಲಿ. ಪುತ್ರ ಪೌತ್ರರಿಗೂ ಪೂಜನೀಯ ಅನ್ನ, ಧನ ಬೇಡಿದ್ದಾರೆ. ತಮ್ಮ ಜೊತೆಯಲ್ಲಿ ಇದ್ದು ಯಜ್ಞಕರ್ಮಗಳನ್ನು ಮಾಡಿಸಿ ಅವು ಫಲಪ್ರದವಾಗುವಂತೆ ಕೃಪೆ ಮಾಡಲಿ. ಭಕ್ತರ ಇಷ್ಟಾರ್ಥಗಳನ್ನು ಈಡೇರಿಸಿಯೇ ಸ್ವರ್ಗಕ್ಕೆ ಹಿಂತಿರುಗಲಿ. ಪುತ್ರರನ್ನು ಬೇಡಿರುವವರಿಗೆ ಪುತ್ರರನ್ನು ಕರುಣಿಸಲಿ. ಅವರೂ ಆರೋಗ್ಯವಾಗಿ ಇರಲಿ. ಸುಸಂಸ್ಕೃತರಾಗಿ ಇರಲಿ. ಮಕ್ಕಳೊಂದಿಗೆ ತಾವು ಸುಖವಾಗಿ ಇರಬಯಸಿದ್ದಾರೆ.

ಪಿತೃಗಳಿಗೆ ಅನುಗ್ರಹಿಸಿದಂತೆ ತಮಗೂ ಅಶ್ವ, ಗೋವು, ಧನ, ದಾನ್ಯಗಳು ದಾನ ರೂಪವಾಗಿ ಸಿಗುವಂತೆ ಇಂದ್ರನು ಕೃಪೆ ಮಾಡಲಿ. ಧನಿಕರಿಂದ ಧನ ದೊರೆಯುವಂತೆ ಆಗಲಿ. ಸ್ತುತಿಸುವವರನ್ನು ಶಕ್ತಿಯುತರನ್ನಾಗಿ ಮಾಡಲಿ. ತೇಜಸ್ವಿಗಳನ್ನಾಗಿ ಮಾಡಲಿ, ಬಲಶಾಲಿಗಳನ್ನಾಗಿ ಮಾಡಲಿ. ಇಂದ್ರ ರೂಪಿ ಸೂರ್ಯ ದರ್ಶನವು ತಮಗೆ ಪ್ರತಿದಿನವೂ ದೊರೆಯುಲಿ ಅವರು ಎಲ್ಲ ರೀತಿಯಿಂದಲೂ ತಮ್ಮನ್ನು ರಕ್ಷಿಸಲಿ ಎಂದು ಋಷಿಗಳು ಯಜಮಾನರು, ಯಾಜ್ಞಿಕರು ಸೂರ್ಯರೂಪಿ ಇಂದ್ರನನ್ನು ಪ್ರಾರ್ಥಿಸಿದ್ದಾರೆ.

ತೊಂದರೆಗಳು : ರಾಕ್ಷಸರನ್ನು ಹಗಲೂ ರಾತ್ರಿ ಓಡಿಸಿ ರಕ್ಷಿಸಲಿ. ಅತ್ಯಂತ ದುರ್ಗಮ ಪ್ರದೇಶದಲ್ಲಿ ದಾರಿ ತೋರಿಸಲಿ. ಆಶ್ರಮವಾಸಿಗಳಿಗೆ ತೊಂದರೆಯಾಗದಿರಲಿ. ಅವರ ಪಾಪಗಳನ್ನು ಪರಿಹರಿಸಲಿ. ಕಠಿಣ ಸಮಸ್ಯೆಗಳಿಂದ ಪಾರುಮಾಡಲಿ. ಕಷ್ಟಕಾಲದಲ್ಲಿ ಯಜಮಾನನನ್ನು ಅವರ ಪುತ್ರ ಪೌತ್ರರನ್ನು ಆಶ್ರಿತರನ್ನು ಸಂಪೂರ್ಣ ರಕ್ಷಿಸಲಿ. ತಪ್ಪುಗಳನ್ನು ಮಾಡಿದ್ದರೆ ಹಿಂಸಿಸದೆ ಇಂದ್ರಾ ವರುಣರು ತೊಂದರೆಗೆ ಒಳಗಾದವರನ್ನು ಕ್ಷಮಿಸಿ ರಕ್ಷಿಸಲಿ. ದಾರಿದ್ರ್ಯ, ಹಸಿವು ನಿವಾರಣೆ ಮತ್ತು ರಕ್ಷಣೆಗಾಗಿ ಬೇಡಿದ್ದಾರೆ. ನಿಂದನೆಗೆ ಗುರಿಯಾಗದಂತೆ ಮಾಡಲಿ. ಯಾಜ್ಞಿಕರನ್ನು ಸಾಲಗಳಿಂದ ಮುಕ್ತರನ್ನಾಗಿ ಮಾಡಲಿ. ದಾರಿಯಲ್ಲಿ ಯಾವುದೇ ತೊಂದರೆಗಳು ಇಲ್ಲದೆ ಮನೆಗಳಿಗೆ ಹಿಂದಿರುಗುವಂತಾಗಲಿ. ಶತ್ರುಗಳನ್ನು ಸ್ವಶಕ್ತಿಯಿಂದ ಜಯಿಸುವ ಶಕ್ತಿ ನೀಡಲಿ. ಸುರಾಪಾನ ಮತ್ತರನ್ನು ನಾಸ್ತಿಕರನ್ನು ಹಿಂಸಕರನ್ನು ಭಯಪಡಿಸುವವರನ್ನು ನಮ್ಮಿಂದ ದೂರವೇ ಇರುವಂತೆ ಮಾಡಲಿ. ನಾವು ಹಿಂಸಾ ರಹಿತ ಮಾರ್ಗಗಳಿಂದ ತೊಂದರೆಗಳು ಇಲ್ಲದೆ ನೆಮ್ಮದಿಯಿಂದ ಇದ್ದು ಆಶ್ರಮದ ಪೂಜೆಗಳು ಯಜ್ಞಯಗಾದಿಗಳು ಮುಂತಾದವುಗಳಲ್ಲಿ ಭಾಗವಹಿಸುವಂತಾಗಲಿ. ಅಹಂಕಾರಿಗಳನ್ನು ದಮನ ಮಾಡಲಿ.

ವಿಶೇಷ ಬೇಡಿಕೆಗಳು : ಅಶ್ವಾರೂಢನಾಗಿ ಅನುಗ್ರಹಬುದ್ಧಿಯಿಂದ ನಮ್ಮಲ್ಲಿಗೆ ಬರಲಿ. ಸೋಮಪಾನದಿಂದ ತೃಪ್ತನಾಗಲಿ. ಆಶ್ರಯಿಸಿದವನಿಗೆ ರಕ್ಷಕನಾಗಲಿ. ಧನದಾತನಾಗಿರಲಿ, ಆಧನವನ್ನು ನಾವು ಅನುಭವಿಸುವಂತಾಗಲಿ. ಇತರರ ಮುಂದೆ ನಮ್ಮನ್ನು ಪ್ರಸಿದ್ಧಪಡಿಸಲಿ. ಋಷಿಗಳಿಗೆ ಮಿತ್ರನಾಗಿ ಇರಲಿ. ಹಿಂದಿನಂತೆ ಈಗಲೂ ಸಹ ಇಷ್ಟಾರ್ಥಪ್ರದನಾಗಿ ಇರಲಿ. ಋತ್ವಿಜರು ಉತ್ತಮ ಸ್ಥಿತಿಯಲ್ಲಿ ಇರುವಂತೆ ಆಗಲಿ. ಇಂದ್ರನು ಎಲ್ಲೇ ಇರಲಿ ಕರೆದಾಗಲೆಲ್ಲ ಬರಲಿ. ಶತ್ರು ಧನವನ್ನು ಯಾಜ್ಞಿಕರಿಗೇ ಹಂಚಲಿ. ಪೃಥ್ವಿಯ ಮೇಲೆ ಇರಬಹುದಾದ ಸಮಸ್ಯೆಗಳನ್ನು ಪರಿಹರಿಸಲು ಮರುತ್‌ಗಳೊಡಗೂಡಿ ಇಂದ್ರನು ದಾವಿಸಲಿ. ಯಜ್ಞ ಯಾಗಾದಿಗಳನ್ನು ಸದಾ ಮಾಡುತ್ತಲೇ ಇದ್ದು ಆ ಬಲಗಳ ಮೇಲೆ (ಎ) ತಮ್ಮ ಇಷ್ಟಾರ್ಥಗಳನ್ನು ಋಷಿಗಳು, ಯಾಜ್ಞಿಕರು, ಯಜಮಾನರುಗಳು ಕೇಳಿಕೊಳ್ಳುತ್ತಾರೆ. ಸಂಪತ್ತು ಪಡೆದವರು ಶ್ರೇಷ್ಟ ಯಜ್ಞಯಾಗಾದಿಗಳನ್ನು ಮಾಡುತ್ತಿರುವಂತಾಗಲಿ. ಯಾಗಗಳಲ್ಲಿಯೂ ಯಜಮಾನರೂ ಅನ್ನದಾನ, ಗೋದಾನ, ಸುವರ್ಣದಾನಗಳನ್ನು ಮಾಡಲಿ. ಯಜಮಾನನನ್ನು ಚೈತನ್ಯಗೊಳಿಸಿ ಕರ್ಮನಿರತರಾಗಿರುವಂತೆ ಮಾಡಲಿ. ಇಂದ್ರನು ದಕ್ಷಿಣ ಹಸ್ತದಿಂದ ಯಾಜ್ಞಿಕರಿಗೆ ಧನ ದಾನಮಾಡಲಿ. ರಣರಂಗದಲ್ಲಿ ಪಡೆದ ಪಶುಗಳು ಧನಗಳನ್ನು ಯಾಜ್ಞಿಕರಿಗೆ ಕೊಡಲಿ.

ಪ್ರತಿಫಲ : ಕರ್ಮಗಳಿಗೆ ಪ್ರತಿಫಲವು ದಕ್ಷಿಣೆಯ ರೂಪದಲ್ಲಿ ಬರಲಿ. ಧನ ದಾನ್ಯಗಳು ದಾನ ರೂಪದಲ್ಲೇ ಸಿಗಲಿ. ತಂದೆಯಿಂದ ಮಗನು ಭಾಗ ಕೇಳುವಂತೆ ಇಂದ್ರನಿಂದ ಯಾಜ್ಞಿಕರು ಧನ ಬೇಡಿದ್ದಾರೆ. ಧನಾಭಿಲಾಷೆಯಿಂದಲೇ ಸ್ತುತಿಸುವವರಿಗೆ ತಕ್ಷಣ ಧನ ದೊರೆಯುವಂತೆ ಮಾಡಲಿ. ಧನಿಕರಿಂದ ಧನ ದಾನ್ಯ ದಾನವೂ ಸಹ ಸಿಗಲಿ. ದ್ಯಾವಾ ಪೃಥ್ವಿಗಳು ಕಾಲಕಾಲಕ್ಕೆ ಕೊಡಬೇಕಾದ ಉತ್ಪನ್ನಗಳನ್ನು ತಮಗೂ ಪ್ರಾಣಿಗಳಿಗೂ, ಪಶು ಪಕ್ಷಿಗಳಿಗೂ ತಪ್ಪದೇ ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ.

## ಇಂದ್ರನ ಜೊತೆಗೆ ಆರಾಧಿಸಿದ ಇತರೇ ದೇವತೆಗಳು :

ಪ್ರತಿ ಮಂಡಲದಲ್ಲೂ ಯಾಜ್ಞಿಕರು ಕನಿಷ್ಟ 5ರಿಂದ ಗರಿಷ್ಟ 12ರವರೆಗೂ ದೇವತೆಗಳನ್ನು ಆರಾಧಿಸಿದ್ದಾರೆ. ಕೆಲವು ಋಷಿಗಳು 33 ದೇವತೆಗಳನ್ನು ಪತ್ನಿಯರ ಸಮೇತ ಪೂಜಿಸಿದ್ದಾರೆ.

| | | | |
|---|---|---|---|
| ಇಂದ್ರ | ವಿಷ್ಣು | ಸೂರ್ಯ | ಅಬ್‌ದೇವತೆ |
| ಅಗ್ನಿ | ಸರಸ್ವತಿ | ಸವಿತೃ | ಸುಪರ್ಣ |
| ವಾಯು | ರುದ್ರರು | ಮಿತ್ರಾವರುಣರು | ಅಹೋರಾತ್ರಿ |
| ವರುಣ | ಆದಿತ್ಯ | ಉಷೋದೇವಿ | ಋತುದೇವತೆ |
| ಮರುತ್ | ಬ್ರಹಸ್ಪತಿ | ಪೂಷನ್ | ಇಳಾ, ಭಾರತಿ, ಸರಸ್ವತಿಯರು |
| ಸೋಮರು | ಬ್ರಹ್ಮಣಸ್ಪತಿ | ತ್ವಷ್ಟ, ಅಶ್ವಿನಿ | |







ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ, ಸರಸ್ವತಿ ಭಾರತಿ, ಉಮಾ ಗಾಯತ್ರಿ,ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।

ಋಗ್ವೇದ ದಂಸ್ಕಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

ದೇವತೆಗಳು

ಋಷಿಗಳ ಅಮೃತವಾಣಿ ಋಗ್ವೇದ ದಿಂದ ಪರಿಚಯ

## ಅಗ್ನಿ ದೇವರು

ಸ್ತೋತ್ರಗಳು
1 ರಿಂದ 15
ಆಶ್ರಮಗಳಲ್ಲಿ
16 ರಿಂದ 35
ಪ್ರಾರ್ಥನೆಗಳು
36 ರಿಂದ 45
ಇತರೇ
46 ರಿಂದ 53
ಮಂಡಲ 3ರ
ವಿವರಗಳು
54 ರಿಂದ 61
ಒಟ್ಟಾರೆ
ಪ್ರಾರ್ಥನೆ
62 ರಿಂದ 63

**195-257**

## ಇಂದ್ರ ದೇವರು

ಮಂಡಲಗಳ ಪ್ರಕಾರ
1,2,3,4
1ರಿಂದ14ಪುಟಗಳು
5,6,7,
15ರಿಂದ30ಪುಟಗಳು
8
31ರಿಂದ38ಪುಟಗಳು
10
39ರಿಂದ44ಪುಟಗಳು

ಪ್ರತಿ ಮಂಡಲದಲ್ಲೂ

ಸ್ತೋತ್ರ ವಿಭಾಗಗಳು-ವಿಶೇಷತೆ
ಆಶ್ರಮ ವಿಭಾಗಗಳು-ವಿಶೇಷತೆ
ಅವಶ್ಯಕತೆಗಳು, ತೊಂದರೆಗಳು
ಮತ್ತು ಬೇಡಿಕೆಗಳು ಇತ್ಯಾದಿ
ವಿಷಯಗಳನ್ನು ಒಳಪಟ್ಟಿದೆ.

**151-194**

ಷಡಾಡನನಂ ಕುಂಕುಮ ರಕ್ತವರ್ಣಂ ಮಹಾಮತಿಂ ದಿವ್ಯ ಮಯೂರ ವಾಹನಂ।
ರುದ್ರಸ್ಯ ಸೂನಂ ಸುರಸೈನ್ಯನಾಥಂ ಗುಹಂ ಸದಾ ಶರಣಮಹಂ ಪ್ರಪದ್ಯೆ॥
ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ ತನ್ನೋ ಷಣ್ಮುಖಃ ಪ್ರಚೋದಯಾತ್

ದಿನಾಂಕ : 20.01.2004

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

# ಇಂದ್ರದೇವರು

## ಸ್ತೋತ್ರ ವಿಭಾಗ - ಪ್ರಥಮ ಮಂಡಲ

### ಬೇರೆ ಬೇರೆ ಋಷಿಗಳಿಂದ ತೆಗೆದು ಒಂದುಗೂಡಿಸಿ ಬರೆಯಲಾಗಿದೆ

**ಋಷಿಗಳ ಅಮೃತವಾಣಿ :** (1) ಮಧುಶ್ಛಂದ್ರ ವೈಶ್ವಾಮಿತ್ರರು (2) ಮಧುಶ್ಛಂದ್ರರು (3) ಮೇಧಾತಿಥಿ ಕಾಣ್ವರು (4) ಶುನಃಶ್ಶೇಪ ಅಜೀಗರ್ತಿಗಳು (5) ಅಜೀಗರ್ತಿಗಳು (6) ಹಿರಣ್ಯಸ್ತೂಪ ಆಂಗೀರಸರು (7) ಸವ್ಯ ಆಂಗೀರಸರು (8) ನೋಧಾ ಗೌತಮರು (9) ಗೋತಮಾರಹೂ ಗಣರು (10) ಕುತ್ಸ ಆಂಗೀರಸರು (11) ಪರಿಚ್ಛೇಪೋ ದೈವೋದಾಸಿ (12) ಅಗಸ್ತ್ಯರು

ಅಭಿವೃದ್ಧಿಕಾರಕರು, ರಕ್ಷಕರು, ಅನುಗ್ರಹ ಬುದ್ಧಿಯುಳ್ಳವರು, ಅವರು ಭಕ್ತರಿಗೆ ಧನ ನೀಡುತ್ತಾರೆ. ಅಶ್ವಗೋವುಗಳ ಅಧಿಪತಿ, ಅಶ್ವರಥದಲ್ಲಿ ಆಗಮಿಸುತ್ತಾರೆ. ಅಳತೆ ಮೀರಿ ಮಾನವರ ಪಾಲಕ. ಅಹೋರಾತ್ರಿಗಳಲ್ಲಿ ನಡೆಸುವ ಕರ್ಮಗಳನ್ನು ಅನುಮೋದಿಸುತ್ತಾರೆ. ★ ಅಂತರಿಕ್ಷದಲ್ಲಿ ಸೂರ್ಯನನ್ನು ಪ್ರಕಾಶಿಸುವುದಕ್ಕಾಗಿ ಸ್ಥಾಪಿಸಿದರು. ★ ಮೇಘಗಳನ್ನು ಪ್ರೇರಿಸಿ ಮಳೆ ಸುರಿಸಿ ಆಹಾರ ಧಾನ್ಯಗಳು ಲಭಿಸುವಂತೆ ಮಾಡಿರುವವನು ಇಂದ್ರ. ಅಸುರರು ನೀತಿ ಬಾಹಿರರು, ವಿಷಯ ಲಂಪಟರು, ಅವರನ್ನು ಅವರ ಪಟ್ಟಣಗಳನ್ನು ನಾಶ ಮಾಡಿದ್ದಾನೆ.

ಆಹಾರ ಧಾನ್ಯಗಳು ಬೆಳೆಯಲು ಧಾರಾಕಾರ ಮಳೆ ಸುರಿಸುತ್ತಾನೆ. ★ ಆದಿತ್ಯ, ಅಗ್ನಿ, ವಾಯು, ನಕ್ಷತ್ರ ರೂಪಿನಲ್ಲಿ ಇಂದ್ರನು ಪ್ರಕಾಶಿಸುತ್ತಾನೆ. ★ ಆಂಗೀರಸರು ಸ್ತೋತ್ರಗಳಿಂದ, "ಸತ್ರಯಾಗದಿಂದ" ಇಂದ್ರನ ಅನುಗ್ರಹ ಪಡೆದಿದ್ದಾರೆ.

ಇಂದ್ರನು ವಿಚಿತ್ರ ಕಾಂತಿಯುತ, ಸುಂದರ, ಸ್ತೋತ್ರಪ್ರಿಯ, ಭಕ್ತಿಪ್ರಿಯ, ವೇದರೂಪಿ, ಇಂದ್ರನು ಸಮುದ್ರದಂತೆ ಸರ್ವವ್ಯಾಪಿ, ಧನಾಧಿಪತಿ, ಕುಬೇರನಿಗೂ ಅಧಿಪತಿ, ಇಂದ್ರನ ಕಾರ್ಯವೆಲ್ಲವೂ ಲೋಕ ಕಾರ್ಯವೇ ಆಗಿರುತ್ತದೆ. ಅಲಂಕಾರ ಶೋಭಿತ, ತೀವ್ರ ಕ್ರೋಧದವನು, ಪಂಚ ಜಾತಿಯ ಜನರನ್ನು ರಕ್ಷಿಸುತ್ತಾನೆ. ಇಂದ್ರಾಗ್ನಿಗಳು ಎಲ್ಲವನ್ನು ನೋಡಬಲ್ಲರು. ಇಂದ್ರನು ಸೃಷ್ಟಿಕರ್ತನಿಂದ ಸೃಷ್ಟಿಸಲ್ಪಟ್ಟವನು. ಇಂದ್ರನು ಯಾರನ್ನು ಅನುಗ್ರಹಿಸಬಯಸುವನೋ ಅವರನ್ನು ಯಜ್ಞ ಮಾಡಲು ಸಮರ್ಥರಾಗುವಂತೆ ಮಾಡುತ್ತಾನೆ. ಇಂದ್ರನು ಫಣಿಯ ಗೋವ್ರಜದಿಂದ ಗೋವುಗಳನ್ನು ಬಿಡಿಸಿದನು. ★ ಇಂದ್ರನ ಬಳಿಗೆ ಏಕೆ, ಅನವ ಕುದುರೆಗಳ ಬಳಿಗೂ ಶತ್ರುಗಳೂ ಸಹ ಬರಲು ಸಾಧ್ಯವಾಗುವುದಿಲ್ಲ, ಇಂದ್ರನಿಗೆ ಸಮಾನ ಇಂದ್ರನೇ. ಉದಕವು ಸಮುದ್ರಾಭಿಮುಖ ಹರಿಯುವಂತೆ ಮಾಡಿ ಭೂಮಿಯ ಮೇಲೆ ಆಹಾರ ಧಾನ್ಯಗಳು ಬೆಳೆಯುವಂತೆ ಮಾಡಿದ್ದಾನೆ. ಇಂದ್ರನು ಕರ್ಮಾಚರಣೆ ಮಾಡುವ, ಮಾಡದಿರುವವರ ವ್ಯತ್ಯಾಸಗಳನ್ನು ಚೆನ್ನಾಗಿ ಅರಿತಿದ್ದಾನೆ. ಸುಸಂಸ್ಕೃತರ, ಮೇಧಾವಿಗಳ, ಯಾಜ್ಞಿಕರ, ಯಜಮಾನರ, ಭಕ್ತರ, ಪ್ರಾರ್ಥನೆಗಳಿಗೆ ಓಗೊಟ್ಟು ಅವರುಗಳನ್ನು ಅನುಗ್ರಹಿಸುತ್ತಾನೆ.

ಇಂದ್ರನು ಉಷಸ್, ಸೂರ್ಯ, ಯುಕ್ತನಾಗಿ ಅಂಧಕಾರವನ್ನು ನಾಶ ಮಾಡುತ್ತಾನೆ. ಅವನು ಪ್ರಬಲನಾಗಿರುವುದರಿಂದಲೇ ಸೋಮ ಪ್ರವಾಹವು ಅವನ ಕಡೆಗೆ ಹರಿಯುತ್ತದೆ. ಇಂದ್ರನಿಲ್ಲದ ಜಾಗ ಸ್ಮಶಾನ ಎನ್ನುತ್ತಾರೆ ಋಷಿಗಳು.

★ ಇಂದ್ರನನ್ನು ಮರುತ್‌ಗಳು ಕಾರ್ಯೋನ್ಮುಖ ಮಾಡುತ್ತಾರೆ. ★ ಇಂದ್ರನು ಸೂರ್ಯನ ಮೂಲಕ ಎದ್ದತಕ್ಷಣ ಅಂದರೆ ಸೂರ್ಯೋದಯವಾದಾಗ ವಸ್ತುಗಳನ್ನು ನೋಡಲು ಶಕ್ತರಾಗತ್ತಾರೆ. ★ ಎಡಗೈಯಲ್ಲಿ ಶತ್ರುಗಳನ್ನು ಸದೆ ಬಡಿದು ಬಲಗೈಯಲ್ಲಿ ಹವಿಸ್ಸನ್ನು ಸ್ವೀಕರಿಸುತ್ತಾನೆ. ★ ಇಂದ್ರಾಗ್ನಿಗಳು ಒಟ್ಟಾಗಿ ಇರುವವರು. ಅನೇಕ ರೂಪಧಾರಿಗಳು. ಇವರುಗಳು ಇರುವ ಸ್ಥಳಗಳನ್ನು ಋಷಿಗಳು ಈ ರೀತಿ ಹೇಳಿದ್ದಾರೆ. (1) ಸ್ವಗೃಹ (2) ಬ್ರಾಹ್ಮಣರ ಯಜ್ಞ ಭೂಮಿ (3) ಕ್ಷತ್ರಿಯರ ಯುದ್ಧ ಭೂಮಿ, ಉದರದಲ್ಲಿ ಜಲಾಶಯದಂತೆ ಸೋಮರಸ ತುಂಬಿಕೊಂಡಿದ್ದಾನೆ. ದೇವಶ್ರೇಷ್ಠ ಧನಯುಕ್ತ ಶತ್ರು ನಾಶಕ, ಉದಕವು ಪ್ರವಹಿಸುವಂತೆ ಮಾಡಿ ಅತಿಶಯ ಪ್ರೀತಿಗೆ ಪಾತ್ರನಾಗಿದ್ದಾನೆ. ಇಂದ್ರನಿಂದ ಸುಖ ಸಂತೋಷಗಳು ಲಭಿಸುತ್ತವೆ.

ಮಾನವರು ವೀರರಾಗಿ ಬಾಳುತ್ತಾರೆ. ಪ್ರಾರ್ಥಿತರಿಗೆ ಅನುಗ್ರಹಿಸುತ್ತಾರೆ. ಇಂದ್ರನ ಹೆದರಿಕೆಯಿಂದ ಗಂಗಾದಿ ನದಿಗಳು ಹರಿಯುತ್ತವೆ. ಇಂದ್ರನಿಂದ ರಕ್ಷಿತರಾದವರು ಸಂಪತ್ ಯುಕ್ತರಾಗುತ್ತಾರೆ. ಭಕ್ತರಿಗಾಗಿ ಉದಕ, ಧನ, ಗೋವು, ಹಿರಣ್ಯ ರೂಪ ಧನ, ಇಷ್ಟಾರ್ಥಗಳನ್ನು ನೀಡುತ್ತಾರೆ. ★ ಇಂದ್ರನು ದೇವರೇ ಎಂಬ ಗೌರವವನ್ನು ಇಟ್ಟುಕೊಂಡಿದ್ದಾರೆ.

**ಈ ಕೆಳಗಿನವರಿಗೆ ಪುನರ್ಜನ್ಮವಿಲ್ಲ ಎಂದು ಹೇಳಿದ್ದಾರೆ**

(1) ಯೋಗಾಭ್ಯಾಸ ನಿರತ ವಿರಾಗಿಗೆ (2) ಆತ್ಮ ಸಾಕ್ಷಾತ್ಕಾರ ಹೊಂದುತ್ತಿರುವ ಯೋಗಿಗಳಿಗೆ (3) ಯುದ್ಧದಲ್ಲಿ ಪ್ರಾಣಾರ್ಪಣೆ ಮಾಡಿದ ವೀರ ಯೋಧರುಗಳಿಗೆ ★ ಇಂದು ನಾಳೆ ಏನು ಸಂಭವಿಸುವುದೋ ಅದು ಯಾರಿಗೂ ತಿಳಿಯದು ಎಂದಿದ್ದಾರೆ ಋಷಿಗಳು. ಇಂದ್ರನು ಸಕಲರಿಗೂ ಆಶ್ರಯದಾತನಾಗಿದ್ದಾನೆ. ಅವನ ಅನುಗ್ರಹದಿಂದ ಬಲಾಢ್ಯರು, ಅವಧ್ಯರು, ಶತ್ರು ನಿಗ್ರಹ ಶಕರು ಆಗುತ್ತಾರೆ

# ಇಂದ್ರದೇವರು - ಸ್ತೋತ್ರ ವಿಭಾಗ

ಪ್ರಥಮ ಮಂಡಲದ ನಾನಾ ಋಷಿಗಳಿಂದ ಬೇರೆ ಬೇರೆ ತೆಗೆದು ಒಂದುಗೂಡಿಸಿ ಬರೆಯಲಾಗಿದೆ.

ಕಿವಿಗಳಿಂದ ಕೇಳುವ ಶಕ್ತಿ ಇಂದ್ರನ ಮಹಿಮೆಯೇ. ಕಪಟ ರಾಕ್ಷಸರನ್ನು ಕಪಟದಿಂದಲೇ ಕೊಲ್ಲುತ್ತಾನೆ. ಕೋಪಕ್ಕೆ ಭೂಮಿ ಆಕಾಶಗಳು ನಡುಗುತ್ತವೆ. ಕೃತಯುಗ, ತ್ರೇತಾಯುಗಗಳ ಸೃಷ್ಟಿಕರ್ತ. ★ ಕಠಿಣ ಪರ್ವತಗಳ ನಡುವೆ ಸೋಮವು ಯಥೇಚ್ಛವಾಗಿ ಬೆಳೆದಿರುತ್ತದೆ. ಆ ಸೋಮವನ್ನು ಇಂದ್ರನು ಪಡೆಯುತ್ತಾನೆ. ಕರ್ಮಗಳಿಗೆ ಅಧಿಕಾರಿ. ಇಂದ್ರನು ಹಿಂಸಕರನ್ನು ಅಗ್ನಿ ಜ್ವಾಲೆಯಿಂದ ಧಹಿಸುತ್ತಾನೆ. ಗಾಯತ್ರಿಯು ಸ್ವರ್ಗದಿಂದ ''ಪಕ್ಷಿ'' ರೂಪದಿಂದ ಭೂಮಿಗೆ ಸ್ವಲ್ಪ ಸೋಮವನ್ನು ತಂದಳು. ನದೀ ರೂಪಿನಲ್ಲಿ ಯಾಜ್ಞಿಕರಿಗೆ ಒದಗಿಸಿದಳು ಎನ್ನುತ್ತಾರೆ ಋಷಿಗಳು. ಜಗತ್ತಿನಲ್ಲಿ ಜನ್ಮ ಪಡೆದ ಸಕಲರಿಗೂ ಪ್ರಭು ಇಂದ್ರ. ತನ್ನ ಸ್ವಶಕ್ತಿಯಿಂದ ಅಂತರಿಕ್ಷ, ದ್ಯುಲೋಕ, ಪೃಥ್ವಿಗಳ ಅಂತರದಲ್ಲೆಲ್ಲ ತುಂಬಿದ್ದಾನೆ.

ದ್ಯುಲೋಕವನ್ನು ಮಾಯಾವಿ ರಾಕ್ಷಸರಿಂದ ರಕ್ಷಿಸಿದ್ದಾನೆ. ದೇವತೆಗಳ ನಾಯಿಯ ಹೆಸರು ''ಸುರಮೆ''. ದಧೀಚಿ ಋಷಿಯ 810 ಮೂಳೆಗಳಿಂದ ಆದ ಆಯುಧದಿಂದ ಶತ್ರುನಾಶ ಮಾಡಿದನು. ★ ದ್ಯಾವಾ ಪೃಥ್ವಿಗಳು, ಗಂಗಾಧಿ ನದಿಗಳು ಇಂದ್ರನಿಗಾಗಿ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿಷ್ಟವಾಗಿವೆ (ನಿರತವಾಗಿವೆ). ದೇವತೆಗಳು ಎಲ್ಲರೂ ಸೇರಿ ಸ್ವರ್ಗದಲ್ಲಿ ಇಂದ್ರನಿಗೆ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ಧ್ಯಾನದಿಂದ, ಸ್ತೋತ್ರಗಳಿಂದ, ಪೂಜೆಗಳಿಂದ, ಯಜ್ಞ ಯಾಗಗಳಿಂದ ದ್ಯಾವಾ ಪೃಥ್ವಿಗಳು ಪವಿತ್ರವಾಗಿವೆ.

ಇಂದ್ರನು ಉತ್ಕೃಷ್ಟ ಸ್ತೋತ್ರಗಳನ್ನು ಬಯಸುತ್ತಾನೆ. ಧನ, ಸುಖ, ಜಯ, ರಕ್ಷಣೆ, ಇಂದ್ರನ ಕೃಪೆಯಿಂದ ಪಡೆಯಬಹುದು. ದ್ರೋಹಿಗಳನ್ನು ಅವರು ಆಕ್ರಮಿಸಿದ ಭಾಗಗಳನ್ನು ಪುಡಿ ಪುಡಿಮಾಡುತ್ತಾನೆ.

ನದಿಗಳು ಗರ್ಜಿಸುವಂತೆ ಮಾಡುತ್ತಾನೆ. ನಾನಾ ವಿಷಯಗಳಲ್ಲಿ ಪ್ರವರ್ತಿಸುವ ಮನುಷ್ಯನ ಮನಸ್ಸು ಸಹ ತಿಳಿಯಲಾಗುವುದಿಲ್ಲ ಎನ್ನುತ್ತಾರೆ ಋಷಿಗಳು.

ಪ್ರತಿಭಟಿಸುವ ಕ್ರೂರಿಗಳು, ಶತ್ರುಗಳು ಇಂದ್ರನಿಗೆ ಯಾರೂ ಇಲ್ಲ. ಪೃಥ್ವಿಯನ್ನು ಅಸುರರ ಪೀಡೆಯಿಂದ ರಕ್ಷಿಸಿದನು. ಪ್ರತಿ ಯಜ್ಞ ಅಥವಾ ಯುದ್ಧದಲ್ಲಿ ಸಹಾಯ ರಕ್ಷಣೆಗಳನ್ನು ಮಾಡುತ್ತಾನೆ. ಪೃಥ್ವಿಯು ಇನ್ನೂ ಹತ್ತು ಪಟ್ಟು ಬೆಳೆದರೂ ಮಾನವರ ಸಂಖ್ಯೆ ಎಷ್ಟೇ ಹೆಚ್ಚಿದರೂ ಅದು ಇಂದ್ರನ ಸಾಮರ್ಥ್ಯಕ್ಕೆ ಬಹಳ ಕಡಿಮೆಯದೆ ಎನ್ನುತ್ತಾರೆ ಋಷಿಗಳು.

ಫಣಿಯು ಬಚ್ಚಿಟ್ಟಿದ್ದ ಹಸುಗಳನ್ನು ಪತ್ತೆ ಹಚ್ಚಿ ರಾಕ್ಷಸ ವಲನನ್ನು ಸಂಹರಿಸಿ ಗೋವುಗಳನ್ನು ಬಿಡಿಸಿದನು. ಅದನ್ನು ಆಂಗೀರಸರು ಪಡೆದರು. ಅದರ ಫಲವಾಗಿ ಗೋಕ್ಷೀರ ಜಗತ್ತಿಗೆ ದೊರೆಯಿತು.

ಬೆಳಗಿನ ಆದಿತ್ಯ ತೇಜಸ್ಸನ್ನು ರಾತ್ರಿಯ ಚಂದ್ರನಲ್ಲಿ ಇರಿಸಿದವನು ಇಂದ್ರನೇ. ಇಂದ್ರನನ್ನು ಬಹು ಜನರು ಆಶ್ರಯಿಸಿದ್ದಾರೆ. ಭೂಮಿಯ ಎತ್ತರ ಪ್ರದೇಶವನ್ನು ಸಮ ಮಾಡಿದನು. ಭೂಮಿ ಆಕಾಶಗಳನ್ನು ಬೇರೆ ಬೇರೆ ಮಾಡಿದನು. ಅಲ್ಲಿರಬಹುದಾದ ಅಸುರರ ಭಯಗಳನ್ನು ನಾಶ ಮಾಡುತ್ತಾನೆ. ಭೂತಗಳು, ದೃಢ ಪರ್ವತಗಳು ಇಂದ್ರನಿಗೆ ಹೆದರಿ ನಡುಗುತ್ತವೆ. ಭೂಮಿ ಆಕಾಶಗಳ ಮಧ್ಯೆ ಅಗ್ನಿ ಸಂಚರಿಸುತ್ತಾ ಯಾಜ್ಞಿಕರು, ಋಷಿಗಳು ಅರ್ಪಿಸಿದ ಹವಿಸ್ಸನ್ನು ಇಂದ್ರನಿಗೆ ತಲುಪಿಸುತ್ತಾರೆ.

ಮಾನವ ವರ್ಗಕ್ಕೆ ಸ್ವಾಮಿ ಇಂದ್ರ. ಮಳೆ ಸುರಿಸುವುದರಿಂದಲೇ ಇಂದ್ರನು ಇಷ್ಟಾರ್ಥಪ್ರದನಾಗಿದ್ದಾನೆ. ಭಕ್ತರು ಎಲ್ಲೇ ಇರಲಿ ಅವರನ್ನು ಹಿಂಸಿಸುವುದಿಲ್ಲ. ಯಜ್ಞ ಕರ್ಮ ರಹಿತರಿಗೆ ಇಂದ್ರ ಶತ್ರು. ಯಜ್ಞ ಹಿಂಸಕರನ್ನು ಹಿಂಸಿಸಿ ಯಾಜ್ಞಿಕರನ್ನು ಪಾಪ ರಹಿತರನ್ನಾಗಿ ಮಾಡುತ್ತಾನೆ. ಯಜ್ಞ ಯಾಗಾಧಿಗಳನ್ನು ಮಾಡುತ್ತಾ ಇರಲು ಹವಿಸ್ಸನ್ನು ಅರ್ಪಿಸುತ್ತಾ ಇರಲು ಋಷಿಗಳಿಗೆ, ಯಾಜ್ಞಿಕರುಗಳಿಗೆ ಪ್ರೇರೇಪಿಸಿರುತ್ತಾನೆ. ಯಜಮಾನರನ್ನು ಐಶ್ವರ್ಯವಂತರನ್ನಾಗಿ ಮಾಡುತ್ತಾನೆ. ಉದಕ, ಗೋವುಗಳನ್ನು ಅನುಗ್ರಹಿಸುತ್ತಾನೆ. ರಾಕ್ಷಸರು ಹವಿಸ್ಸು ಪಡೆಯುತ್ತಾ ಇದ್ದರು. ಅವರನ್ನು ಜಯಿಸಿ ರಾಕ್ಷಸರನ್ನು, ದಸ್ಯುಗಳನ್ನು ನಾಶ ಮಾಡಿ ಅವರ ಸಂಪತ್ತನ್ನು, ಐಶ್ವರ್ಯವನ್ನು ಪರ್ವತದಲ್ಲಿ ಬಚ್ಚಿಟ್ಟನು. ರಾಕ್ಷಸರ ತೊಂದರೆಗಳಿಂದ ಭಕ್ತರನ್ನು ತಪ್ಪದೇ ರಕ್ಷಿಸುತ್ತಾನೆ.

ವಿಚಿತ್ರ ಕೃತ್ಯಗಳನ್ನು ಎಸಗುತ್ತಾನೆ. ವಾಯು, ಸೂರ್ಯರ ತಲೆಯ ಮೇಲೆ ಮಳೆ ಸುರಿಸುತ್ತಾನೆ. ವಜ್ರಾಯುಧದಿಂದ ಶತ್ರುಗಳನ್ನು ಛಿದ್ರ, ಛಿದ್ರ ಮಾಡುತ್ತಾನೆ. ವಿವಿಧ ಬಣ್ಣದ ಗೋವುಗಳ ಕ್ಷೀರವನ್ನೆಲ್ಲ ಶುಭ್ರ ಬಿಳುಪು ಆಗುವಂತೆ ಮಾಡಿದ್ದಾನೆ. ವಜ್ರಾಯುಧವನ್ನು ಧರಿಸಿ ಶತ್ರುಗಳನ್ನು, ಅವರ ಪಟ್ಟಣಗಳನ್ನು ನಾಶ ಮಾಡುತ್ತಾನೆ. ಅವನಿಗೆ ದ್ಯಾವಾ ಪೃಥ್ವಿಗಳು, ಪರ್ವತಗಳು ಹೆದರುತ್ತವೆ.

ಶ್ರೇಷ್ಟ ಕರ್ಮಗಳಿಗಾಗಿ ಹಾಗೂ ಭೋಗ ಸಾಧನೆಗಾಗಿ ಬೇಕಾಗುವ ಹೆಚ್ಚು ಧನ ಇಂದ್ರನಲ್ಲಿದೆ. ★ ಶಾಂತಿ 'ಅಗ್ನಿ'ಯನ್ನು ಮನೆಯಲ್ಲಿ ಸ್ಥಾಪಿಸಿರುತ್ತಾರೆ. ಶುಭಾಶುಭ ಫಲಗಳು ಅವರವರ ಕರ್ಮ ಫಲಾನುಸಾರ ಉಂಟಾಗುತ್ತವೆ ಎಂದಿದ್ದಾರೆ ಋಷಿಗಳು. ಶತ್ರು ಸೇನೆ ಎಷ್ಟೇ ಬಲಶಾಲಿ ಆಗಿದ್ದರೂ ಒಮ್ಮೆಲೇ ಎದುರಿಸುವುದು ಇಂದ್ರನಿಗೆ ಬಹಳ ಕಮ್ಮಿಯಾದ ಕೆಲಸವೇ. ಸಕಲ ಜ್ಞಾನಿಗಳಿಗೂ ಏಕಮಾತ್ರ ಆಶ್ರಯದಾತ. ಸೋಲರಿಯದ ಶಕ್ತಿಸಾಮರ್ಥ್ಯಕ್ಕೆ ಅಧಿಪತಿ. ★ ಸ್ತೋತ್ರ ಮಾಡಿದವರಿಗೆ ಹಿಂದೆ ಎಷ್ಟೇ ಧನ ಕೊಟ್ಟಿದ್ದರೂ ಸಹ ಲೆಕ್ಕಿಸದೇ ಈಗಲೂ ಕೊಡುತ್ತಾನೆ. ಸೋಮದಿಂದಲೇ ಮಳೆಗರೆದು ಸಮುದ್ರ ತುಂಬುವುದು. ಸೋಮಪಾನದಿಂದಲೇ ಹರ್ಷಿತನಾಗುತ್ತಾನೆ. ಸೋಮಪಾನ ಪ್ರಿಯ ಸೋಮವನ್ನು ಗಟಗಟ ಕುಡಿದು ಬಿಡುತ್ತಾನೆ.

ಸ್ತುತಿಸಿದವರ ಸ್ತೋತ್ರಗಳು ಇಂದ್ರನನ್ನು ಸೇರುತ್ತವೆ. ಸ್ತುತಿ ಕೇಳ ಬಯಸಿದಾಗ ಇಂದ್ರನೇ ಸ್ತುತಿಸುವಂತೆ ಮಾಡುತ್ತಾನೆ. ಸೂರ್ಯ ರೂಪಿನಿಂದ ಸಕಲ ಭೂತ ಜಾತಗಳಿಗೂ ಪ್ರಭು. ಸರದಿಯ ಮೇಲೆ ನಿತ್ಯ ತಾರುಣ್ಯದಿಂದ ಹಗಲೂ-ರಾತ್ರಿಗಳು ಭೂಮಿ, ಆಕಾಶಗಳನ್ನು ಆವರಿಸುವಂತೆ ಮಾಡಿದ್ದಾನೆ. ಸೂರ್ಯ ಪ್ರಕಾಶದಿಂದ ಪ್ರಾಣಿಗಳು ತಮ್ಮ ತಮ್ಮ ಕೆಲಸಗಳನ್ನು ಮಾಡುವಂತೆ ಮಾಡಿದ್ದಾನೆ. ಸೂರ್ಯ, ವರುಣ, ನದಿಗಳು ಎಲ್ಲವೂ ಇಂದ್ರನ ಆಜ್ಞಾವರ್ತಿಗಳೇ. ಸೂರ್ಯ ಚಂದ್ರರು ಇಂದ್ರನಲ್ಲಿ ಇಟ್ಟಿರುವ ಶಾಶ್ವತ ಶ್ರದ್ಧೆಯಿಂದಾಗಿ ಶಾಶ್ವತ ಗಮನ ಹೊಂದಿದ್ದಾರೆ. ★ ಸೂರ್ಯನಂತೆ ಹಿತವರಲ್ಲದಿದ್ದರೂ ತೊಂದರೆ ಮಾಡುವುದಿಲ್ಲ. ವೃಷ್ಟಿಗಾಗಿಯೇ ಸ್ತುತಿಸಿದರೆ, ವೃಷ್ಟಿ ಸುರಿಸುತ್ತಾನೆ. ಸೋಮವು ಕಾಮವರ್ಷಕ, ಅಪರಿಮಿತ ಆನಂದದಾಯಕ, ತೃಪ್ತಿದಾಯಕ, ಮದಸಾಧಕವಾದುದ್ದು. ★ ಸ್ತ್ರೀಯರಿಗೆ ಮಂತ್ರಹೇಳುವ, ಅಧ್ಯಯನ ಮಾಡುವ, ಯಾಗ ಮಾಡುವ, ಸಾಮರ್ಥ್ಯ, ತಿಳುವಳಿಕೆ ಇಲ್ಲದಿರುವುದರಿಂದ ಪತಿಯೇ ಪತ್ನಿಯ ಅನುಜ್ಞೆ ಪಡೆಯುತ್ತಾನೆ. ಸ್ವರ್ಗದಲ್ಲಿ ದುಷ್ಟರಿಗೆ ಪ್ರವೇಶವಿಲ್ಲ. ಸಪ್ತ ನದಿಗಳು (ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದಾ, ಸಿಂಧು, ಕಾವೇರಿ) ಹರಿಯುವ ನೀರಿಗೆ ದಡ ನಿರ್ಮಿಸಿ ಸುಗಮವಾಗಿ ನೀರು ಹರಿದು ಸಮುದ್ರ ಸೇರುವಂತೆ ಮಾಡಿರುವವನು ಇಂದ್ರ. ಹುಟ್ಟಿದಂದಿನಿಂದಲೇ ಶತ್ರು ರಹಿತ. ಹಾಲು, ಸೋಮ, ಯುವಧಾನ್ಯಗಳಿಂದ ಹರ್ಷಗೊಳ್ಳುತ್ತಾನೆ.

**ಕೆಲವು ವಿಶೇಷ ಮಹಿಮೆಗಳು**

ಅರ್ಥ ತಿಳಿಯದೆ ಮಂತ್ರ ಪಠಿಸಿದರೂ ಅವರನ್ನು ನಮ್ಮವರೆಂದು ತಿಳಿದು ಕಾಪಾಡುತ್ತಾನೆ. ಅವರ ಶತ್ರುಗಳಿಗೆ ಸಹಿಸಲಾಗದಂತೆ ಹಿಂಸೆ ಕೊಡುತ್ತಾನೆ. ಇಂದ್ರ ನಿಂದೆ ಮಾಡಿದವ ಎಲ್ಲಿ ಹೋದರೂ ಸತ್ ಬುದ್ಧಿ ಬರುವುದಿಲ್ಲ, ಬರುವುದೂ ಬೇಡ. ಅಂತಹವರು ಇಂದ್ರನನ್ನು ತಿಳಿಯುವುದು ಬೇಡ. ವಜ್ರಾಯುಧವು "ತ್ವಷ್ಟ" ಪ್ರಜಾಪತಿಯಿಂದ ನಿರ್ಮಿತವಾದುದು. ಸಕಲ ಜಗತ್ತು ಇಂದ್ರನನ್ನು ಕುರಿತು ಯಾಗ ಮಾಡಲಿ ಎಂದಿದ್ದಾರೆ.

**ಸೋಮದ ಬಗೆಗೆ**

ಪರ್ವತದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಹುಡುಕಿ ಸೋಮಲತೆ ಸಮಿತ್ತುಗಳನ್ನು ತರುತ್ತಾರೆ. ಬಟ್ಟೆಯಲ್ಲಿ ಶೋಧಿಸಿ ಸಂಸ್ಕರಿಸಿ ಉತ್ತಮ ಸ್ಥಳದಲ್ಲಿ ಗೋ ಚರ್ಮದ ಮೇಲೆ ಇಟ್ಟಿರುತ್ತಾರೆ. ದಶಾಪವಿತ್ರ ಶೋಧನೆಗಳಿಂದ ಸಂಸ್ಕರಿಸಿ ಹಾಲು, ಮೊಸರುಗಳೊಂದಿಗೆ ಸೋಮವು ಸಿದ್ಧವಾಗುತ್ತದೆ. ★ಗಾಯತ್ರಿಯು ಸ್ವರ್ಗದಿಂದ ಶ್ಯೇನ ಪಕ್ಷಿರೂಪದಿಂದ ಭೂಮಿಗೆ ಸ್ವಲ್ಪ ಸೋಮವನ್ನು ತಂದಳು. ನದೀ ರೂಪದಲ್ಲಿ ಯಾಜ್ಞಿಕರಿಗೆ ಒದಗಿಸಿದಳು. ನೂರಾರು ಮಂದಿ ಯಜ್ಞ ಕರ್ತರು ಬೃಹತ್ ಸಾಮದಿಂದ ಸ್ತೋತ್ರ ಮಾಡುತ್ತಾರೆ. ನ್ಯೂನತೆಗಳಿಲ್ಲದೆ ಯಜ್ಞ ಯಾಗಗಳನ್ನು ಮಾಡುತ್ತಾರೆ. ಪುನ: ಪುನ: ಯೋಗ್ಯವಾದ ಸ್ತೋತ್ರಗಳನ್ನು ಪೂಜೆಗಳನ್ನು ಮಾಡುತ್ತಿರಬೇಕೆಂದು ಹೇಳಿದ್ದಾರೆ. ಯಜ್ಞಕ್ಕೆ ಸುವರ್ಣ ರಥದಲ್ಲಿ ಬರಲಿ. ದರ್ಭಾಸನವು ಸಿದ್ಧವಾಗಿದೆ. ಕುಳಿತುಕೊಳ್ಳಲಿ, ಕರ್ಮಗಳು ಮುಗಿಯುವವರೆಗೂ ಜೊತೆಯಲ್ಲೇ ಇರಲಿ. ಯಜ್ಞದಲ್ಲಿ ಪಯಸ್ಸತ್ವ ಹವಿರ್ಯುಕ್ತ ಅನ್ನ ಅರ್ಪಿಸುತ್ತಾರೆ. ಯಜ್ಞಕರ್ತರ ಮಧ್ಯದಲ್ಲೇ ಇರಲಿ, ಕರ್ಮಗಳಿಂದ ತೃಪ್ತನಾಗಲಿ, ಯಜ್ಞಕರ್ತರು ಸ್ತುತಿಸುವುದರಿಂದ ಇಂದ್ರನ ಬಲ ವೃದ್ಧಿಯಾಗುತ್ತದೆ. ಯಾಜ್ಞಿಕರು ಅಗ್ನಿಯ ಸುತ್ತಲೂ ಚರು, ಪುರೋಡಾಶ ನವ ಧಾನ್ಯಾದಿ ತಂಡುಲೋಪಸ್ಕರಗಳನ್ನು ಹರಡಿರುತ್ತಾರೆ. ★<u>ಯಜ್ಞಕರ್ತರು ಪಾಪಕರ್ಮಗಳನ್ನು ಮಾಡಬಾರದು ಎಂದು ಋಷಿಗಳು ಹೇಳಿದ್ದಾರೆ</u>. ನಮಗೆ ಜ್ಞಾನ ನೀಡುವವರು ಇಂದ್ರಾಗ್ನಿಗಳೇ. ಮಂತ್ರಗಳಿಂದ <u>ಕರ್ಮಫಲಕ್ಕನುಗುಣವಾಗಿ ಫಲ ಪಡೆದುಕೊಳ್ಳುತ್ತಾರೆ.</u>

★ ಮಹಾಬಲಿಷ್ಠ ಸೋಮಾರ್ಪಣೆ ಮಾಡಿ ಇಂದ್ರನನ್ನು ಒಲಿಸಿಕೊಳ್ಳಬಹುದು. ★ ಮಂತ್ರ ಪೂರ್ವಕ ಶಾಸ್ತ್ರೋಕ್ತ ಹವಿಸ್ಸು ಅರ್ಪಿಸುತ್ತಾರೆ. ★ಮಂಗಳಕರ ಕರ್ಮಗಳನ್ನು ಮಾಡುತ್ತಾರೆ. ★ ತಮ್ಮ ಬೇಡಿಕೆಗಳನ್ನು ತಪ್ಪದೇ ಈಡೇರಿಸಲಿ ಎಂದು ಪ್ರಾರ್ಥಿಸುತ್ತಾರೆ.

★ಬ್ರಹ್ಮನೆಂಬ ಋತ್ವಿಜನಿಂದ ಸ್ತೋತ್ರ ಮಾಡಲ್ಪಟ್ಟಾಗ "ಶ್ಯೇನ ರೂಪ" ಗಾಯತ್ರಿಯಿಂದ ಇಂದ್ರನಿಗೆ ಬಲರೂಪದ ಸೋಮವು ತರಲ್ಪಟ್ಟಿತು. ★ ಅಹಸ್ಸಿನಲ್ಲಿ (ಹಗಲು) ಸೂರ್ಯನೊಂದಿಗೆ ಅಗ್ನಿಯೂ ರಾತ್ರಿಯಲ್ಲಿ ಅಗ್ನಿಯೊಂದಿಗೆ ಸೂರ್ಯನೂ ಸೇರಿಕೊಳ್ಳುತ್ತಾರೆ. ★ ವಸಿಷ್ಟರು ಅಥರ್ವ ಋಷಿಗಳು, ಮನು, ದಧೀಚಿ ಅವರುಗಳು ಹವಿಸ್ಸನ್ನು ಇಂದ್ರನಿಗೆ ಅರ್ಪಿಸಿದಂತೆ ಇತರ ಋಷಿಗಳು ಹವಿಸ್ಸನ್ನು ಅರ್ಪಿಸುತ್ತಾರೆ.

<u>ವೃತ್ರಾಸುರನ ವೃತ್ತಾಂತ :</u> ವೃತ್ರಾಸುರನು ಮೋಡಗಳನ್ನು , ಮಳೆಯನ್ನು ತಡೆಹಿಡಿದಿದ್ದನು. ಅಂಧಕಾರವೇ ಕವಿದಿತ್ತು. ವೃತ್ರರೂಪ ಮೋಡ, ಮಳೆ ಗರೆಯದಿದ್ದಾಗ ಇಂದ್ರನು ಯಾಜ್ಞಿಕರ ಹವಿಸ್ಸು ಸ್ವೀಕರಿಸಿ ವಜ್ರಾಯುಧದಿಂದ ಮೇಘವನ್ನು ಬಡಿದು ಸೀಳಿ ಮರುತ್‌ಗಳ ಜೊತೆ ಸೇರಿ ಮಳೆ ಸುರಿಸಿದನು. ಅವನ 7 ಪುರಗಳನ್ನು ನಾಶಮಾಡಿ ಅವನ ಪ್ರಜೆಗಳನ್ನು ಸಬ್ಬರನ್ನಾಗಿ ಮಾಡಿದನು.

ಶ್ಯೇನಪಕ್ಷಿಯಂತೆ 99 ನದಿಗಳನ್ನು ದಾಡಿ ಬಂದು "ವೃತ್ರವಧೆ" ಮಾಡಿದನು. ವಜ್ರಾಯುಧವು ಅವನನ್ನು ಕೊಂದಿತು. ಅವನ ಕೈ ಕಾಲುಗಳನ್ನು ಕತ್ತರಿಸಿ ಅವನ ಸಹಾಯಕ್ಕೆ ಬಂದ ಅವನ ತಾಯಿ ದಾನವಿಯನ್ನು ಕೊಂದನು. ವೃತ್ರನ ವಧೆಯಿಂದ ದೇವತೆಗಳು ಹಾಗೂ ಇಡೀ ಜಗತ್ತು ಹರ್ಷಗೊಂಡಿತು. ಕತ್ತಲೆಯನ್ನು ಹೋಗಲಾಡಿಸಿದನು. ವೃತನು ನದಿ ನೀರಿನ ಅಡಿಯಲ್ಲಿ ಸತ್ತು ಬಿದ್ದಿದ್ದನು. ಇಂದ್ರನೊಬ್ಬನೇ ಏಕಾಂಗಿಯಾಗಿ ದೇವತೆಗಳು ಪ್ರೇರಿಸಿದ್ದರಿಂದ ಪ್ರವಾಹಕ್ಕೆ ಅಡ್ಡವಾಗಿ ಮಲಗಿದ್ದ ವೃತ್ರನನ್ನು ಪೂರ್ಣ ಅಮಾವಾಸ್ಯೆಯಂದು ವಧಿಸಿ ಉದಕವು ಹರಿಯುವಂತೆ ಮಾಡಿದನು.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಇಂದ್ರದೇವರು

## ಮಂಡಲ 2 – ಗೃತ್ಸಮದ ಋಷಿಗಳು (ಸ್ತೋತ್ರ ವಿಭಾಗ)

ಅದ್ವಿತೀಯ ಪ್ರಭು, ಯಜಮಾನನ ಪ್ರಭು, ರಕ್ಷಕ, ಅಸುರರ ಪ್ರಾಣ ಹಿಂಡುತ್ತಾ ಸಜ್ಜನರನ್ನು ರಕ್ಷಿಸುತ್ತಾನೆ. ಅನ್ನದಾತ, ಸುಖದಾತ, ''ಪಂಚಜನ''ರನ್ನು ರಕ್ಷಿಸುತ್ತಾನೆ. (1) ದೇವತೆಗಳು (2) ಮಾನವರು (3) ಪಿತೃಗಳು (4) ಪಶುಗಳು (5) ಪಕ್ಷಿಗಳು. ಪಂಚಜನರನ್ನು ರಕ್ಷಿಸುತ್ತಾನೆ ಅಂತರಿಕ್ಷ, ದ್ಯಾವಾ ಪೃಥ್ವಿಗಳನ್ನು ತೇಜಸ್ಸಿನಿಂದ ತುಂಬಿದ್ದಾನೆ. ಅಧೋಮುಖ ಉದಕ ಪ್ರವಹಿಸುವಂತೆ ಮಾಡಿದ್ದಾನೆ. ಆಕಾಶದಲ್ಲಿ ಪ್ರಕಾಶಮಾನ ಸೂರ್ಯನನ್ನು ಸ್ಥಾಪಿಸಿದನು. ಆಶ್ರಿತರನ್ನು ರಕ್ಷಿಸಿ ಸಹಾಯ ಮಾಡಿ ಕಾಪಾಡುತ್ತಾನೆ. ಆಶ್ರಯಿಸಿದವರಿಗೆ, ಹವಿರರ್ಪಿಸಿದವರಿಗೆ ಶತ್ರು ನಾಶಕ, ರಕ್ಷಕ ಈಶ್ವರನಾಗಿದ್ದಾನೆ. ಅಂಗೀರಸ್ಸುಗಳಿಗಾಗಿ ''ವಲ'' ನನ್ನು ಸೀಳಿ ಅಸುರ ನಾಶ ಮಾಡಿದನು. ಇಂದ್ರದತ್ತ ಅನ್ನತಿಂದವರು ಸಕಲ ಕಾರ್ಯಗಳನ್ನು ಮಾಡುತ್ತಾರೆ. ಇಂದ್ರನನ್ನೇ ಉಪಚರಿಸುವವರು ಧನಯುಕ್ತರಾಗುತ್ತಾರೆ. ಇಂದ್ರನು ಭೂಮಿ, ಅಂತರಿಕ್ಷ, ದ್ಯುಲೋಕ, ಸಕಲ ಧನ, ಸಂಪತ್ತುಗಳಿಗೂ ಪ್ರಭು. ಇಂದ್ರನಿಲ್ಲದೆ ಜಗತ್ತೇ ಇಲ್ಲ. ಸ್ತೋತ್ರಗಳಿಂದ ಸ್ತುತಿಸಲ್ಪಡುವವನು. ಇಷ್ಟಾರ್ಥ ಪ್ರದ.

ಉದಕ ನಿರ್ಮಾತೃ, ಉದರದಲ್ಲಿ ಜಲಾಶಯದಂತೆ ಸೋಮರಸ ತುಂಬಿಕೊಂಡಿದ್ದಾನೆ. ದೇವಶ್ರೇಷ್ಠ ಧನಯುಕ್ತ, ಶತ್ರುನಾಶಕ. ಋಷಿಗಳಿಗಾಗಿ ಅಸುರರನ್ನು ನಾಶ ಮಾಡಿದ್ದಾನೆ. ಪಾಪನಾಶಕ ನದಿಗಳು ಬಹುಕಾಲ ಹರಿಯುವಂತೆ ವಿಶೇಷ ರೀತಿಯಲ್ಲಿ ಮಾರ್ಗನಿರ್ಮಿಸಿ ಋಷಿಗಳಿಗೆ ಉಪಕಾರ ಮಾಡಿದ್ದಾನೆ.

ಕಪಿಂಜಲ ರೂಪಿನಲ್ಲಿ ಇಂದ್ರನನ್ನು ಸ್ತುತಿಸಿದ್ದಾರೆ. ಋತು ಕಾಲಕ್ಕೆ ಸರಿಯಾಗಿ ಋತು ಧರ್ಮದಂತೆ ಮಂಗಳಕರವಾಗಿ ಹಾಡುತ್ತವೆ, ಗಾನ ಮಾಡುತ್ತವೆ. ಸಂತೋಷಗೊಳಿಸುತ್ತವೆ. ಋಷಿಗಳು ಈ ಆನಂದವನ್ನು ಕರುಣಿಸಿದ ಋತುಗಾನವನ್ನು ಹಾಡಿದ ಪಕ್ಷಿಗಳಿಗೆ ಮಂಗಳವಾಗಲಿ ಎಂದು ಸ್ತುತಿಸಿದ್ದಾರೆ.

ಗೋವಿನ ಕೆಚ್ಚಲಿನಲ್ಲಿ ಹಾಲು ತುಂಬುವಂತೆ ಇಂದ್ರನು ಸೋಮರಸವನ್ನು ತುಂಬಿಕೊಂಡಿದ್ದಾನೆ.

ಧನಿಕ, ದರಿದ್ರ, ಯಾಚಕ ಸ್ತುತಿಸುವವರು ಎಲ್ಲರಿಗೂ ಏಕ ಪ್ರಕಾರ ಧನದಾತ.

ದ್ಯಾವಾ ಪೃಥ್ವಿಗಳನ್ನು ತೇಜಸ್ಸಿನಿಂದ ತುಂಬಿದವನು.

ಧನಕ್ಕೆ ಪ್ರಭು, ಪೃಥ್ವಿಗಿಂತ, ಅಂತರಿಕ್ಷಕ್ಕಿಂತ, ದೇವತೆಗಳಿಗಿಂತ ಬಲಶಾಲಿಯಾಗಿದ್ದಾನೆ. ದ್ಯಾವಾ ಪೃಥ್ವಿಗಳನ್ನು ಭೀತಿಗೊಳಿಸಿ ಅವು ಅಲುಗಾಡದಂತೆ ಸ್ಥಿರವಾಗಿ ಇರುವಂತೆ ಮಾಡಿದನು.

ನದಿಗಳು ಇಂದ್ರ ಕರ್ಮದಿಂದ ಇಂದ್ರ ರೂಪಿನಿಂದ ತುಂಬಿ ಇಂದ್ರ ಮಾರ್ಗದಲ್ಲಿ ಹರಿದು ಸಮುದ್ರ ಸೇರುತ್ತವೆ.

ನಶ್ವರ ಲೋಕವನ್ನು ಸ್ಥಿರವಾಗಿ ಇರುವಂತೆ ಮಾಡಿದ್ದಾನೆ.

ಪ್ರಾಣಿಗಳ ಸಮೂಹ ಸೃಷ್ಟಿಸಿದವನು ಇಂದ್ರನೇ. ಓಷಧಿಗಳಿಂದ ಮಧುರ ಧಾನ್ಯದಲ್ಲಿ ರಸ ತುಂಬಿದ್ದಾನೆ. ಪ್ರೀತಿ, ಆದರಗಳಿಂದ ಸ್ತುತಿಸುವವರೆಲ್ಲರೂ ಇಂದ್ರನ ಮಿತ್ರರೇ ಹಾಗೂ ಬಂಧುಗಳೇ ಆಗಿರುತ್ತಾರೆ. ಪಾಪಿಗಳನ್ನು, ಅಹಂಕಾರಿಗಳನ್ನು ಕೊಂದು ಶತ್ರುಕ್ಷಯ ಕಾರಕನಾದನು, ಅವರ ಧನವನ್ನು ವಶ ಪಡಿಸಿಕೊಂಡನು. ಭಯಂಕರ ಶತ್ರುಗಳು ಇಂದ್ರನಿಗೆ ಹೆದರುತ್ತಾರೆ. ಭಕ್ತರಿಂದ ಅರ್ಪಿಸಲ್ಪಟ್ಟ ಸ್ತುತಿಗಳಿಂದ ತೃಪ್ತನಾಗಿ ಅವರಿಗೆ ಅನ್ನ, ವೃಷ್ಟಿ ಅನುಗ್ರಹಿಸಿ ಪಾಪಗಳನ್ನು ಪರಿಹರಿಸುತ್ತಾನೆ.

ಮಾಯಾವಿ ''ಶಂಭರಾಸುರನ'' ನೂರಾರು ಪಟ್ಟಣಗಳನ್ನು ನಾಶಮಾಡಿದನು. ಮಾನವರ ಹೃದಯ ಗೆದ್ದವನು ಹಾಗೂ ಅವರಿಗೆ ಉದಕವನ್ನು ನೀಡಿದವನು ಇಂದ್ರ.

ಯಾಜ್ಞಿಕರ ಬುದ್ಧಿಯನ್ನು ವೃದ್ಧಿಸುತ್ತಾನೆ ಮತ್ತು ಅವರಿಗೆ ಮಿತ್ರನಾಗಿರುತ್ತಾನೆ. ರಾಕ್ಷಸರಿಂದ ಪಡೆದ ಧನವನ್ನು ಭಕ್ತರೆಲ್ಲರೂ ಒಟ್ಟಾಗಿ ಅನುಭವಿಸುವಂತೆ ಮಾಡುತ್ತಾನೆ. ವಿಶ್ವಕ್ಕೆ, ಧನಕ್ಕೆ, ಸ್ವರ್ಗಕ್ಕೆ ಪ್ರಭು ಇಂದ್ರ. ವಿಷ್ಣುವಿನೊಂದಿಗೆ ಹವಿಸ್ಸು ಸೇವಿಸುತ್ತಾನೆ.

ಶಿರದಲ್ಲೇ ದ್ಯುಲೋಕವನ್ನು ಎತ್ತಿ ಹಿಡಿದಿದ್ದಾನೆ. ಶರೀರದಲ್ಲಿ ತೇಜಸ್ಸು, ಕೈಯಲ್ಲಿ ವಜ್ರಾಯುಧಧಾರಿ. ಶತ್ರುಗಳನ್ನು ಸದೆಬಡಿದು ಅವರ ಧನವನ್ನು ವಶಪಡಿಸಿಕೊಳ್ಳುತ್ತಾನೆ.

ಸದಾ ಮದಕರ ಸೋಮರೂಪಿ ಅನ್ನವನ್ನು ಇಚ್ಛಿಸುತ್ತಾನೆ. ಸೋಮದ ಗಾಢವಾದ ಸುಖ ಸ್ವರೂಪವನ್ನು ಇಂದ್ರನು ಮಾತ್ರ ತಿಳಿಯಬಲ್ಲನು. ಸೋಮ ಹಿಂಡುವವರನ್ನು ಪುರೋಡಾಶ ಪಕ್ವ ಮಾಡುವವರನ್ನು, ಸ್ತುತಿ ಕರ್ತರನ್ನು ವಿಶೇಷವಾಗಿ ರಕ್ಷಿಸುತ್ತಾನೆ. ಸೋಮ ಲತೆಯು ಸಾರಭೂತವಾದದ್ದು. ವರುಷ ಋತುವಿನಲ್ಲಿ ಇಂದ್ರನಿಗಾಗಿ ಬೆಳೆದುನಿಂತಿರುತ್ತದೆ. ಅಹಸ್ಸಿನಲ್ಲಿ ಹಿಂಡಿದ ಸೋಮಪಾನದಿಂದ ವೃತ್ರಾಸುರನನ್ನು ಕೊಂದನು. ಸೋಮಪಾನ ಬಲದಿಂದ ಹಾರುವ ಪರ್ವತದ ರೆಕ್ಕೆಗಳನ್ನು ಕತ್ತರಿಸಿ ಅವು ಸ್ಥಿರವಾಗಿ ನಿಲ್ಲುವಂತೆ ಮಾಡಿದನು. ಸೂರ್ಯ, ನಕ್ಷತ್ರ, ಉಷ, ಅಂತರಿಕ್ಷಗಳನ್ನು ನಿರ್ಮಿಸಿದನು ಇಂದ್ರ. ಸಪ್ತಸಂಖ್ಯಾತ ರಶ್ಮಿಗಳಿಂದ ಮೇಘ ಮಧ್ಯದಲ್ಲಿ ವಿದ್ಯುತ್ ರೂಪಿನಲ್ಲಿ ಅಗ್ನಿ ಸೃಷ್ಟಿಸಿ ಮೇಘ ಹನನ ಮಾಡಿ ''ಅಹಿ'' ಎಂಬ ರಾಕ್ಷಸನಿಂದ ಸಪ್ತ ನದಿಗಳನ್ನು ಬಿಡಿಸಿ ಉದಕ ಪ್ರೇರಿಸಿ ನದಿಗಳನ್ನು ಹರಿಯುವಂತೆ ಮಾಡಿದನು.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಇಂದ್ರದೇವರು - ಸ್ತೋತ್ರ ವಿಭಾಗ

★ ಅಂತರಿಕ್ಷ ದ್ಯುಲೋಕಗಳು ಬೀಳದಂತೆ ಹಿಡಿದಿದ್ದಾನೆ.

★ ಅಸುರರನ್ನು, ಪಾಪಾತ್ಮರನ್ನು ಮರುತ್‌ಗಳೊಡಗೂಡಿ ಮೂಲ, ಮಧ್ಯಮ, ಅಂತ್ಯದಲ್ಲಿ ಕತ್ತರಿಸುತ್ತಾನೆ.

★ ಅತೀ ಆಳದ ಸಮುದ್ರ, ಅತೀ ಎತ್ತರದ ಪರ್ವತ ಯಾವುವು ಇಂದ್ರನನ್ನು ತಡೆಯಲಾರವು.

★ ಪೃಥ್ವಿ, ಅಂತರಿಕ್ಷ, ದ್ಯುಲೋಕ, ಸೂರ್ಯ, ಉಷಸ್‌ಗಳ ಸೃಷ್ಟಿಕರ್ತ. ದೇವತೆಗಳಿಗೆ ಅಭಯದಾತ, ನಾನಾರೂಪಿ, ಸೋಮಪಾನದಿಂದ ತೃಪ್ತನಾಗುತ್ತಾನೆ.

★ ಆಶ್ರಯಿಸಿದ ಭಕ್ತರನ್ನು ಕೈಬಿಡದೆ ನಾನಾ ರೀತಿ ಸಹಾಯ ಮಾಡಿ ರಕ್ಷಿಸುತ್ತಾನೆ. ಅದಿತಿ ಕಶ್ಯಪರ ಪುತ್ರ.

★ ಹೊಂಬಣ್ಣದ ಆಯುಧಧಾರಿ. ಕಾಮವರ್ಷಕ.

★ ಉಷಾದೇವಿಯ ಪುತ್ರರಿಂದ ತಮಸ್ಸು ನಾಶವಾಗುತ್ತದೆ.

★ ಉಷಃಕಾಲದಿಂದಲೇ ಯಜ್ಞಾಭಿಮುಖನಾಗುತ್ತಾನೆ.

★ ಋಷಿಗಳಿಗಾಗಿ ಅಸುರರನ್ನು ನಾಶ ಮಾಡಿದ್ದಾನೆ.

★ ಅಂಗೀರಸ್ಸುಗಳಿಗಾಗಿ ವಲನನನ್ನು ಸೀಳಿ ಅಸುರನನ್ನು ಕೊಂದನು.

★ ಕುದುರೆಗಳು ಹಳದಿ ಬಣ್ಣದವು.

★ ದೂರಲೋಕದಿಂದ ಹತ್ತಿರ ಕರೆತರುತ್ತವೆ.

★ ಗೋವುಗಳು ಗುಹೆಯಲ್ಲಿ ಸೆರೆಹಿಡಿಯಲ್ಪಟ್ಟವು. ಇಂದ್ರನು ಅಲ್ಲಿಗೆ ಹೋದಾಗ ಪರ್ವತ ರಾಜನು ಹೆದರಿ ಸ್ನೇಹ ಬೆಳೆಸಿ ಗೋವುಗಳನ್ನು ಇಂದ್ರನಿಗೆ ಬಿಟ್ಟುಕೊಟ್ಟನು. ಅಂಗೀರಸರು ಇಂದ್ರನನ್ನು ಪೂಜಿಸಿದರು.

★ ದೇವತೆಗಳು ಜಗದಾದಿ ಪಥ್ಯಕ್ಕಾಗಿ ಇಂದ್ರನನ್ನು ಉತ್ಪತ್ತಿ ಮಾಡಿದರು. ಅವನನ್ನು ಮೀರಿಸುವವರು ಅಥವಾ ಹಿಂಸಿಸುವವರು ಯಾರೂ ಇಲ್ಲ.

★ ದೇವ ಯಜ್ಞ ನಡೆಯುವ ಸ್ಥಳಕ್ಕೆ ಒಂದೇ ಮುಹೂರ್ತದಲ್ಲಿ ಅಶ್ವರಥದಲ್ಲಿ ಸ್ವರ್ಗದಿಂದ ಬಂದು ಭಾಗಿಯಾಗುತ್ತಾನೆ.

★ ನದಿಗಳು ಇಂದ್ರನಿಂದ ಸ್ಥಾಪಿತವಾಗಿವೆ. ಅವು ಸಮುದ್ರಾಭಿಮುಖವಾಗಿ ವೇಗವಾಗಿ ಹರಿಯುವಂತೆ ಮಾಡಿದ್ದಾನೆ. ಪರ್ವತದ ತುದಿಯ ಸೋಮಖಂಡದ ರಸವನ್ನು ಕುಡಿದವನು.

★ ಪ್ರಾಣಿಗಳ ಉಪಕಾರಕ್ಕಾಗಿ ಓಷಧಿ ವೃಕ್ಷಗಳನ್ನು ಸೃಷ್ಟಿಸಿದ್ದಾನೆ.

★ ಪಾಪನಾಶಕ ನದಿಗಳು ಬಹುಕಾಲ ಹರಿಯುವಂತೆ ವಿಶೇಷ ರೀತಿಯಲ್ಲಿ ಮಾರ್ಗ ನಿರ್ಮಿಸಿ ಋಷಿಗಳಿಗೆ ಮಹದುಪಕಾರ ಮಾಡಿದ್ದಾನೆ. ಪೃಥ್ವಿಯು ಪೈರು ಪಚ್ಚೆಗಳಿಂದ ತುಂಬಿತುಳುಕಾಡುವಂತೆ ಮಾಡಿದ್ದಾನೆ.

★ ಬೇರೆ ಬೇರೆ ರೂಪಗಳಲ್ಲಿ ತನ್ನ ರೂಪವನ್ನು ಬದಲಾಯಿಸಿಕೊಳ್ಳುತ್ತಾನೆ.

★ ಭಯಂಕರ ಶತ್ರುಗಳು ಹೆದರಿ ನಡುಗುತ್ತಾರೆ.

★ ಮರುತ್‌ಗಳೊಡಗೂಡಿ ಶತ್ರುಗಳನ್ನು ಸದೆಬಡಿಯುತ್ತಾನೆ.

★ ಯಾಜ್ಞಿಕರನ್ನು ಯಾರೂ ಹಿಂಸಿಸದಂತೆ ರಕ್ಷಿಸುತ್ತಾನೆ. ಅವರಿಗೆ ಅಶ್ವ, ಗೋವು, ಧನ, ಸುವರ್ಣಗಳನ್ನು ಅನುಗ್ರಹಿಸುತ್ತಾನೆ.

★ ಯುದ್ಧದಲ್ಲಿ ಗೆದ್ದ ಧನಗಳನ್ನು ಅವರಿಗೆ ಹಂಚುತ್ತಾನೆ.

★ ಯಜ್ಞ ಕರ್ತರ ಅಭಿಮತ ಅರಿತು ಅವರನ್ನು ಅನುಗ್ರಹಿಸುತ್ತಾನೆ.

★ ರಾಕ್ಷಸರಿಂದ ಕೆಡಿಸಲ್ಪಟ್ಟ ಉದಕವು ಅಗ್ನಿ, ವಾಯು, ಸೋಮ ಸೂರ್ಯರಿಂದ ಶುದ್ಧಿಯಾಗುತ್ತದೆ.

★ ಲೋಕವನ್ನು ಸುತ್ತುತ್ತಾ ಎಲ್ಲರನ್ನೂ ರಕ್ಷಿಸುತ್ತಾನೆ.

★ ಶ್ಯೇನ ಪಕ್ಷಿಯು ಇಂದ್ರನಿಗಾಗಿ ಸೋಮವನ್ನು ತಂದಿತು.

★ ಶ್ರದ್ಧೆಯಿಂದ ಇಂದ್ರಪ್ರಿಯ ಕರ್ಮ ಮಾಡುವವರನ್ನು ರಕ್ಷಿಸುತ್ತಾನೆ.

★ ವಜ್ರಾಯುಧಕ್ಕೆ ಹೆದರಿ ಮೇಘವು ಮಳೆ ಸುರಿಸುತ್ತದೆ.

★ ಸೋಮವು ಜ್ಯೋತಿಷ್ಟೋಮ (ಹೋಮ ಸಾಧಕ) ಸೋಮಯಾಗ ಫಲವು ಸ್ವರ್ಗ ಪ್ರಾಪ್ತಿಯೇ ಆಗಿರುತ್ತದೆ.

★ ಇಂದ್ರಾಗ್ನಿಗಳಿಗೆ ಉತ್ಸಾಹಕಾರಿಯಾದುದು ಆಗಿದೆ. ಸೂರ್ಯಪುತ್ರಿ (ವಾಗ್ದೇವಿ)ಯು ಶಬ್ದರೂಪವಾಸಿ.

★ ಅಜ್ಞಾನ ನಾಶಕಳು

★ ಹವಿಸ್ಸಿನಿಂದ ಇಂದ್ರನು ಪ್ರವೃದ್ಧನಾಗುತ್ತಾನೆ.

★ ಹುಟ್ಟಿದ ಕೂಡಲೇ ಸೋಮಪಾನ ಮಾಡಿದವನು ಇಂದ್ರ.

ಮಹಾಮಹಿಮ ದೇವೇಂದ್ರನಿಗೆ ನಮೋ ನಮಃ

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಇಂದ್ರದೇವರು - ಸ್ತೋತ್ರ ವಿಭಾಗ - ಮಂಡಲ ನಾಲ್ಕು

★ ಅನೇಕರಿಂದ ಆಹ್ವಾನಿತ. ಅಪ್ರತಿಹತ, ಅಜ್ಞಾನ ಮೋಹಗಳಿಂದ ಪಾರಾಗಿ ಆತ್ಮಸಾಕ್ಷಾತ್ಕಾರ ಪಡೆದಿದ್ದವರು (ವಾಮ ದೇವರು) ಅಪಹೃತ ಗೋವುಗಳನ್ನು ಬಿಡಿಸಿದನು.

★ ಅಪರಿಮಿತ ಇಷ್ಟಾರ್ಥಗಳನ್ನು ಈಡೇರಿಸಲು ಅಶ್ವಗಳು ಇಂದ್ರ ವಾಯುಗಳನ್ನು ಯಜ್ಞಕ್ಕೆ ಕರೆತರುತ್ತವೆ. ಅಶ್ವಗಳು ದೂರದ ಸ್ವರ್ಗದಿಂದ ಅವರನ್ನು ಕರೆತರುತ್ತವೆ. ಆದಿತ್ಯನ ಅಂತರಿಕ್ಷದಲ್ಲಿ ಸಪ್ತಛಂದಸ್ಸಿನ ಮುಖದಿಂದ ಅನೇಕ ಪ್ರಾಕಾರಗಳಲ್ಲಿ ಉತ್ಪನ್ನನಾಗಿ ಸಪ್ತರಶ್ಮಿಯುಕ್ತರಾಗಿ ಕತ್ತಲೆಯನ್ನು ನಾಶಮಾಡಿದನು. ಆಜ್ಯಾದಿಗಳು ಅಗ್ನಿಯನ್ನು ತೃಪ್ತಿಗೊಳಿಸುವಂತೆ ಮೇಘ ವೃಷ್ಟಿಯು ಇಂದ್ರನನ್ನು ತೃಪ್ತಿಗೊಳಿಸುತ್ತದೆ.

★ ಆರಾಧಿಸದಿದ್ದ ಚಿತ್ರರಥನನ್ನು ನಾಶಮಾಡಿದನು.

★ ಇಂದ್ರ ಉತ್ಪತ್ತಿ ಕಾಲದಲ್ಲಿ ದ್ಯುಲೋಕ, ಭೂಲೋಕಗಳು ಕಂಪಿಸಿದವು.

★ ಮಲಗಿದ್ದಾಗ, ಸಂಚರಿಸುತ್ತಿದ್ದಾಗ ಯಾರೂ ವಧಿಸಲು ಆಗುವುದಿಲ್ಲ. ಇತರೇ ದೇವತೆಗಳು ಯಾರೂ ಇಂದ್ರನಿಗಿಂತ ಹೆಚ್ಚು ಶಕ್ತರಲ್ಲ.

★ ಅನ್ನ, ಧನ, ಸಂಪತ್ತು, ಪುತ್ರ ಪೌತ್ರರುಗಳನ್ನು ಪಂಚಜನರಿಗೂ ಅನುಗ್ರಹಿಸುತ್ತಾನೆ.

★ ಇಂದ್ರನ ಅದ್ಭುತ ಸ್ವರೂಪ ನೋಡಿ ಸಮುದ್ರ, ಪರ್ವತ, ದ್ಯುಲೋಕ, ಪೃಥ್ವಿಗಳು ಹೆದರಿದವು.

★ ಇಂದ್ರನ ಭಯದಿಂದ ಧೇನುಗಳು ಹಾಲು ಕೊಡುತ್ತವೆ. ನದಿಗಳಲ್ಲಿ ನೀರು ಪ್ರವಹಿಸುತ್ತವೆ.

★ ಇಂದ್ರನ ಸಹಾಯದಿಂದಲೇ ದೇವತೆಗಳು ಯುದ್ಧ ಮಾಡಿದರು. ಇಂದ್ರನ ರಥವು ಶತ್ರುನಾಶಕ. ಕಾಂತಿಯುತವಾದುದು.

★ ಇಂದ್ರನ ಕುದುರೆ (ಹರಿ) ಯನ್ನು ಸ್ಮರಿಸಿದರೆ ದೀರ್ಘಾಯುಷ್ಯವಂತರಾಗುತ್ತಾರೆ. ಅವು ಹೊಂಬಣ್ಣದವು.

★ ಇಂದ್ರನನ್ನು ಯಾಜ್ಞಿಕರ ಜೊತೆ ಇರುವಂತೆ ಮಾಡುತ್ತವೆ.

★ ಪಾಪಗಳೆಲ್ಲವನ್ನು ನಾಶಮಾಡುತ್ತಾನೆ.

★ ಇಂದ್ರನ ಮನಸ್ಸಿನಿಂದ ಸಕಲ ಕರ್ಮಗಳು ಸಹ ಸತ್ಯಾತ್ಮಕವಾಗಿರುತ್ತದೆ.

★ ಇಂದ್ರನು ಮಾಡುವ ಎಲ್ಲಾ ಕಾರ್ಯಗಳು ಮಾನವರ ಹಿತಕ್ಕಾಗಿಯೇ ಎಂದು ತಿಳಿದವರು ಮಾತ್ರ ಸ್ತುತಿಸುತ್ತಾರೆ. ವಿರೋಧಿಗಳು ಅಲ್ಲ.

★ ಸೂರ್ಯನಂತೆ ಅಧಿಕ ಬೆಲೆಯ ಧನಕ್ಕೆ ಪ್ರಭು. ಯಜಮಾನನ ರಕ್ಷಕ ಮತ್ತು ಶತ್ರುನಾಶಕನಾಗಿದ್ದಾನೆ.

★ ಇಂದ್ರನನ್ನು ಮೊದಲು ಪೂಜಿಸಿ ನಂತರ ಸೂರ್ಯನನ್ನು ಪೂಜಿಸುತ್ತಾರೆ.

★ ಇಂದ್ರನು ಧನ ಕೊಡಲು ಇಚ್ಛಿಸಿದರೆ ಯಾರೂ ತಡೆಯಲಾಗುವುದಿಲ್ಲ.

★ ಇಂದ್ರ, ವಾಯುಗಳು ಶಕ್ತಿಪಾಲಕರು, ಒಂದೇ ರಥದಲ್ಲಿ ಯಜ್ಞಕ್ಕೆ ಬರುವವರು, ಉತ್ತಮ ರೂಪಿನವರು. ಉತ್ತಮ ಸ್ತೋತ್ರ ಮಾಡುವುದರಿಂದ ಪಾಪ ನಾಶವಾಗುತ್ತದೆ.

★ ಕುರುಡನು ಸರ್ವಸ್ವವನ್ನು ನೋಡುವಂತೆ ಮಾಡುತ್ತಾನೆ. ಧನವಂತ, ಧನದಾತ, ಧನದ ಒಡೆಯ. ಧನ ಕೊಡಲು ಬಯಸಿದರೆ ಯಾರೂ ತಡೆಯಲಾರರು.

★ ನದಿ ಹರಿಯುವಂತೆ ಮಾಡಿ ಪ್ರಾಣಿಗಳ ದಾಹ ಅಡಗಿಸಿದನು. ದೇವಮಾನವರಿಗೆ ಪ್ರಭು, ಪೃಥ್ವಿಗಿಂತ ಮಹತ್ತಾದವನು, ದೇವತಾತ್ಮ, ಪ್ರಜಾಪತಿಯು ಇಂದ್ರನನ್ನು ಸೃಷ್ಟಿಸಿದನು.

★ ಪೃಥ್ವಿಯನ್ನು ಚೈತನ್ಯಶೀಲಳನ್ನಾಗಿ ಮಾಡಿದವನು ಇಂದ್ರ, ಬಂಜೆ ಹಸುಗಳು ಹಾಲು ಕೊಡುವಂತೆ ಮಾಡಿದ್ದಾನೆ.

★ ಬ್ರಹಸ್ಪತಿ ಇಂದ್ರರು ವಿಶ್ವಪಾಲಕರು, ಕಾಮವರ್ಷಕರು, ಸರ್ವ ದೇವತಾತ್ಮರು, ಬ್ರಹಸ್ಪತಿಯನ್ನು ಅವರ ಅಶ್ವಗಳು ದೂರದ ಸ್ವರ್ಗದಿಂದ ಕರೆತರುತ್ತವೆ.

★ ಬೆಂಗಾಡು ಭೂಮಿಯಲ್ಲಿ ನದಿಗಳು ತುಂಬಿ ಹರಿಯುವಂತೆ ಅನ್ನ ದೊರೆಯುವಂತೆ ಮಾಡಿದ್ದಾನೆ. ಬ್ರಹಸ್ಪತಿಗೆ ಪ್ರಥಮ ಸ್ಥಾನ ಕೊಟ್ಟು ಪೂಜಿಸುವವನು ವಿಜಯಿಯಾಗುತ್ತಾನೆ. ಸಕಲ ದೇವತೆಗಳಿಂದಲೂ ರಕ್ಷಿತನಾಗುತ್ತಾನೆ.

★ ಭಕ್ತರ ರಕ್ಷಣಾರ್ಥವಾಗಿ ವೇಗವಾಗಿ ಹೊಂಬಣ್ಣದ ಅಶ್ವರಥದಲ್ಲಿ ಬರುತ್ತಾನೆ.

★ ಭಕ್ತರು ಧನಾಭಾವದಿಂದ ನಶಿಸದಂತೆ ನೋಡಿಕೊಳ್ಳುತ್ತಾನೆ. ಮರುತ್‌ಗಳ ಧ್ವನಿಯಿಂದ ಮೇಘವು ಸೀಳಿದಾಗ ಆಂಗೀರಸ್ಸುಗಳು ಗೋಸ್ಥಾನ ತೆರೆಯಿಸಿದವು.

★ ಸುರಮೆಯು ಇಂದ್ರನ ಮುಂದೆ ಗೋವುಗಳನ್ನು ಪ್ರದರ್ಶಿಸಿದಳು. ಮರುತ್‌ಗಳು ವೇಗವಾಗಿ ಮುನ್ನುಗ್ಗಿ ಮೇಘವನ್ನು ಸೀಳಿ ನದಿಗಳು ನೀರಿನಿಂದ ತುಂಬಿ ಹರಿಯುವಂತೆ ಮಾಡಿದರು.

★ ಮೇಘ ವೃಷ್ಟಿಯೇ ಇಂದ್ರನನ್ನು ತೃಪ್ತಿಗೊಳಿಸುತ್ತದೆ.

★ ಯಜಮಾನನ ಋಣ ಇದ್ದರೂ ಅವನಿಗೆ ಅದರಿಂದ ತೊಂದರೆಯಾಗದಂತೆ ಆಶ್ರಯಗಳನ್ನು ಕೊಟ್ಟು ರಕ್ಷಿಸುತ್ತಾನೆ.

★ ಮೇಧಾವಿ ಸ್ತೋತ್ರಗಳ ಯಜ್ಞಾಭಿಮುಖ ಹರ್ಷದಿಂದ ಬಂದು ರಕ್ಷಿಸುತ್ತಾನೆ. ಯಾರಿಗೂ ಬಗ್ಗದ ಶತ್ರುಗಳನ್ನು, ರಾಕ್ಷಸರನ್ನು ಶಿಕ್ಷಿಸಲು ತನ್ನ ಆಯುಧವನ್ನು ಹರಿತಮಾಡಿಕೊಳ್ಳುತ್ತಾನೆ. ರಾಜರುಗಳಿಗಾಗಿ ಭೂಮಿಯನ್ನು ಅನ್ನ ಉದಕಗಳಿಂದ ತುಂಬಿದ್ದಾನೆ.

★ ವನ, ಗಜದಂತೆ ವಜ್ರಾಯುಧಧಾರಿ, ಸಿಂಹದಂತೆ ಭಯಂಕರ ''ಹರಿ ಸಂಜ್ಞಿಕ'' ಅಶ್ವವುಳ್ಳವನು. ವಾಯುವು ಮಾನವರಂತೆ ಶಬ್ದ ಮಾಡುತ್ತಾ ಅಂತರಿಕ್ಷ ಸಂಚಾರಿ ''ನಿಯತ್ಸು'' ಅಶ್ವವುಳ್ಳವನು. ಶ್ರವಣ ಶಕ್ತಿ ಇಂದ್ರನಿಂದ ದೊರೆಯುತ್ತದೆ. ಇಂದ್ರ, ಬ್ರಹಸ್ಪತಿ ಶಸ್ತ್ರಮಂತ್ರ ಪ್ರಿಯರು.

★ ಶಂಭಾರಾಸುರನ 99 ಪಟ್ಟಣಗಳನ್ನು ನಾಶಮಾಡಿ 100ನೆಯದನ್ನು ರಾಜಋಷಿ ''ದಿವೋದಾಸ''ನಿಗೆ ಕೊಟ್ಟನು.

★ ಸಕಲ ಲೋಕಗಳನ್ನು ಸುಭದ್ರ ತಳಹದಿಯ ಮೇಲೆ ಶಾಶ್ವತವಾಗಿ ನಿಲ್ಲಿಸಿದ್ದಾನೆ. ಸೂರ್ಯನ ಮಾತಾ-ಪಿತೃ ದ್ಯಾವಾಪೃಥ್ವಿಗಳ ಭಾರವನ್ನು ಇಂದ್ರನೇ ವಹಿಸುತ್ತಾನೆ.

★ ಸ್ವಶಕ್ತಿಯಿಂದ 10 ದಿಕ್ಕುಗಳನ್ನು ನಿಲ್ಲಿಸಿದವನು ಇಂದ್ರ. ಸೋಮ ಹಿಂಡುವ ಅಗ್ನಿ ಜ್ವಲಿತವಾಗುವ ಯಜ್ಞಪ್ರಿಯ ಇಂದ್ರ ಸರ್ವವ್ಯಾಪಿ ''ವಾಮದೇವ'' ಎಂದು ಜನರು ತಿಳಿದಿದ್ದಾರೆ.

★ ಸೂರ್ಯಪ್ರಭಾವ ಕುಂದಿದರೆ ಇಂದ್ರ ಪ್ರಭಾವ ಅಧಿಕವಾಗುತ್ತದೆ.

★ ಸರ್ವದಾ ಭೂಮಿಯಲ್ಲಿ ಸಸ್ಯ ಸಂಪತ್ತುಗಳೊಡಗೂಡಿ ಫಲ ಪುಷ್ಪಗಳನ್ನು ನೀಡುತ್ತಾನೆ. ಸಪ್ತ ಮಹಾನದಿಗಳು ಪ್ರವಾಹದಿಂದ ತುಂಬಿ ಹರಿಯುವಂತೆ ಮಾಡಿದ್ದಾನೆ.

★ ಹಿಂದಿನಂತೆಯೇ ಈಗಲೂ ಋಷಿಗಳನ್ನು ರಕ್ಷಿಸುತ್ತಾನೆ. ಹವಿರರ್ಪಿಸುವವರ ಪಾಪ ಎಷ್ಟೇ ಇದ್ದರೂ ಅದನ್ನು ನಾಶಮಾಡಿ ಅವರನ್ನು ಧನವಂತರನ್ನಾಗಿ ಮಾಡುತ್ತಾನೆ.

★ ಸ್ತುತಿಸುವವರ ಜೊತೆಯಲ್ಲೇ ಇದ್ದು ಅವರ ಇಷ್ಟಾರ್ಥ ಸುಖ ಸಂತೋಷಗಳನ್ನು ಅನುಗ್ರಹಿಸುತ್ತಾನೆ. ಇಂದ್ರನನ್ನು ಯುದ್ಧದಲ್ಲಿ ನಂಬಿದಂತೆ ಯಜ್ಞದಲ್ಲೂ ಸಹ ಯಜಮಾನರು ನಂಬಿದ್ದಾರೆ.

★ ವಾಮದೇವರು ಅವರ ತಾಯಿ ಹೇಳಿದಂತೆ ಇಂದ್ರನನ್ನು ಓರ್ವ ರಾಕ್ಷಸಿ ನುಂಗಿದಾಗ ಸ್ವಶಕ್ತಿಯಿಂದಲೇ ಹೊರಬಂದವನೆಂದು ಹೇಳಿದ್ದಾರೆ.

★ ಇಂದ್ರನು ''ಕುತ್ಸನ'' ಒಳಿತಿಗಾಗಿ ''ಶುಷ್ಣಾಸುರ'' ಎಂಬ ರಾಕ್ಷಸನನ್ನು ಅವನ ಸಹಸ್ರಾರು ಅನುಯಾಯಿಗಳನ್ನು ಅವನ ಪಟ್ಟಣವನ್ನು 50,000 ಸೈನ್ಯವನ್ನು ನಾಶ ಮಾಡಿದನು.

★ ಇಂದ್ರನ ತೃಪ್ತಿಗಾಗಿ ಯಾಗಮಾಡುವ, ಸ್ತುತಿಸುವ, ಸೋಮ ಅರ್ಪಿಸುವವರು ಇಂದ್ರನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

★ ನದಿಗಳು ಇಂದ್ರನ ಬ್ರಹ್ಮ ಹತ್ಯಾದಿ ದೋಷಗಳನ್ನು ನೊರೆಯರೂಪಿನಲ್ಲಿ ಧರಿಸುತ್ತವೆ.

★ ಉತ್ಕೃಷ್ಟರು, ನಿಷ್ಕೃಷ್ಟರು, ಮಧ್ಯಮ ವರ್ಗದವರು, ಕಾರ್ಯ ಅಪೇಕ್ಷಿತರು, ಗೃಹ ವಾಸಿಗಳು, ಅನ್ನ ಅಪೇಕ್ಷಿಗಳು ಎಲ್ಲರೂ ಇಂದ್ರನನ್ನು ಅಪೇಕ್ಷಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಇಂದ್ರದೇವರು - ಆಶ್ರಮ ವಿಭಾಗ (ಮಂಡಲ-ಒಂದು)

ಅನಾದಿ ಕಾಲದಿಂದ ಇಂದ್ರ ಕರ್ಮಗಳನ್ನು ಮಾಡುತ್ತಾ ಬಂದಿದ್ದಾರೆ. ಅರಣ್ಯಗಳಲ್ಲಿ ಋಷಿಗಳು ಸ್ತುತಿಸುತ್ತಾರೆ, ಪೂಜಿಸುತ್ತಾರೆ, ಹವಿಸ್ಸು ಸೋಮ ಅರ್ಪಿಸುತ್ತಾರೆ, ಪ್ರಾರ್ಥಿಸುತ್ತಾರೆ. ಆಹ್ವಾನಿಸಿ ದೇವತೆಗಳನ್ನು ನಂತರ ಕರ್ಮಗಳನ್ನು ಮಾಡುತ್ತಾರೆ. ಇಂದ್ರನ ಪ್ರೀತಿ ಸಂಪಾದಿಸಲು ಆಶ್ರಮಗಳಲ್ಲಿ ಆಹ್ವಾನ, ಸ್ತೋತ್ರಗಳು, ಪೂಜೆಗಳು, ಯಜ್ಞ ಯಾಗಗಳನ್ನು ಮಾಡುತ್ತಿರುತ್ತಾರೆ. ಇಂದ್ರನು ಅತಿಯಾಗಿ ಯಾಜ್ಞಿಕರಿಗೆ ಮಾರ್ಗದರ್ಶನ ನೀಡುತ್ತಾನೆ. ★ ಇಂದ್ರನ ಕೃಪೆ ಪಡೆಯಲು ಅತ್ಯುತ್ತಮ ಉಪಾಸನೆ ಬೇಕು. ★ ಇಂದು ನಾಳೆ ಏನು ಸಂಭವಿಸುವುದೆಂದು ಯಾರಿಗೂ ತಿಳಿಯುವುದಿಲ್ಲ. ಇಂದ್ರಾಗ್ನಿಗಳು ಸಮೀಪ ಬಂಧುಗಳೇ ಎಂದೇ ತಿಳಿದಿದ್ದಾರೆ.

ಆಶ್ರಮಗಳಲ್ಲಿ ಋಷಿಗಳು ಇಂದ್ರನ ಜೊತೆಗೆ ಆರಾಧಿಸಿದ ಇತರೇ ದೇವತೆಗಳು ಹೀಗಿದ್ದಾರೆ.

1) ಅಗ್ನಿ (2) ಆದಿತ್ಯ (3) ಅಶ್ವಿನಿ (4) ಉಷಾ ದೇವಿ (5)ತ್ವಷ್ಟ(6) ನಕ್ಷತ್ರ (7)ಮರುತ್ (8) ಋತು ದೇವತೆಗಳು (9) ವಾಯು

ಈ ಎಲ್ಲಾ ದೇವತೆಗಳು ನಮ್ಮ ಸಮೀಪ ಬಂಧುಗಳೇ ಎಂದು ತಿಳಿದಿದ್ದಾರೆ. ಇವರುಗಳು ಎಲ್ಲೇ ಇರಲಿ ಇಂದ್ರ ಜೊತೆಯಲ್ಲಿ ಬರಲಿ, ತೃಪ್ತಿಯಾಗುವಷ್ಟು ಸೋಮಪಾನ ಮಾಡಲಿ, ನಮ್ಮೆಲ್ಲರನ್ನು ಅನುಗ್ರಹಿಸಲಿ. ಇಂದ್ರನು ಇರಬಹುದಾದ ಸ್ಥಳಗಳನ್ನು ಋಷಿಗಳು ಹೀಗೆ ಹೇಳಿದ್ದಾರೆ. ಅ) ಯಜ್ಞ ಯಾಗಗಳು ನಡೆಯುವ ಸ್ಥಳದಲ್ಲಿ ಇರುತ್ತಾರೆ. (ಆ) ಯುದ್ಧ ಭೂಮಿಯಲ್ಲಿರುತ್ತಾರೆ.
(ಇ) ಪೃಥ್ವಿಯಲ್ಲಿ(ಈ) ಅಂತರಿಕ್ಷದಲ್ಲಿ(ಉ) ದ್ಯುಲೋಕದಲ್ಲಿ(ಊ) ಅಹಿಂಸಕರ ಗುಂಪಿನಲ್ಲಿ(ಋ) ಪರ್ವತದಲ್ಲಿ
(ಎ) ಗಿಡ ಮೂಲಿಕೆಗಳಲ್ಲಿ(ಏ) ನೀರಿನಲ್ಲಿ

ಋಷಿಗಳು ಹೊಸ ಹೊಸ ಯಜ್ಞಗಳನ್ನು, ಯಾಗಗಳನ್ನು ನಾನಾ ಪ್ರಯೋಜನಗಳಿಗಾಗಿ ಯಾಗಗಳನ್ನು ಮಾಡುತ್ತಾರೆ. ಋಷಿಗಳು ಅರಣ್ಯದಲ್ಲಿ ಅನಾದಿಕಾಲದಿಂದಲೂ ಇಂದ್ರ ಪ್ರೀತ್ಯರ್ಥವಾಗಿ ಅನೇಕ ಕರ್ಮಗಳನ್ನು ಮಾಡುತ್ತಾ ಬಂದಿದ್ದಾರೆ. ಉಷಃ ಕಾಲದಿಂದಲೇ ಎದ್ದು ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ.

★ ಋಗ್ವೇದಿ = ಶಸ್ತ್ರರೂಪ ಮಂತ್ರ ಹೇಳುವವರು. ★ ಯಜುರ್ವೇದೀ = ನೇರವಾಗಿ ಹೋಮ ಮಾಡುವವನು.
★ ಸಾಮವೇದಿ = ಸಾಮಗಾನದಿಂದ ಸ್ತುತಿಸುವವನು ★ ಉದ್ಗಾತೃ = ಬೃಹತ್ ಸಾಮದಿಂದ ಲೋಪದೋಷಗಳಿಲ್ಲದೆ ಯಜ್ಞ ಮಾಡುವವನು. ★ ಬ್ರಹ್ಮ= ಎಲ್ಲವನ್ನುಬಲ್ಲವನು, ಕರ್ಮಗಳನ್ನು ವೀಕ್ಷಿಸುತ್ತಿರುತ್ತಾನೆ. ಋಷಿಗಳು ಎಲ್ಲರೊಂದಿಗೆ ಸ್ತುತಿಸುತ್ತಾರೆ, ಪೂಜಿಸುತ್ತಿರುತ್ತಾರೆ, ಹವಿಸ್ಸು, ಸೋಮ ಅರ್ಪಿಸಿ ಪ್ರಾರ್ಥಿಸುತ್ತಾರೆ. ಲೋಪ ದೋಷಗಳಿಲ್ಲದೆ ಯಾಗ ಮಾಡುತ್ತಾರೆ.

## ಇಂದ್ರದೇವರು - ಆಶ್ರಮ ವಿಭಾಗ (ಮಂಡಲ-ಮೂರು)

ಅನೇಕ ಶ್ರೇಷ್ಟ ಕರ್ಮಗಳನ್ನು ಮಾಡುತ್ತಾರೆ. ಅನುಕೂಲ ಮನಸ್ಕನಾಗಿ ವೈದಿಕ ಸ್ತೋತ್ರಗಳನ್ನು ಸ್ವೀಕರಿಸಲಿ. ಅಂಗೀರಸರಂತೆ ಪೂಜಿಸುತ್ತಾರೆ. ಅಧ್ವರ್ಯುವು ಮಧುರ ಸೋಮವನ್ನು ಇಂದ್ರನಿಗಾಗಿ ಸಿದ್ಧ ಪಡಿಸಿದ್ದಾನೆ. ಇತರೇ ದೇವತೆಗಳನ್ನು ಆಹ್ವಾನಿಸಿ ಪೂಜಿಸಲು ಹೇಳಿದ್ದಾರೆ. ಋಷಿಗಳು ಯಾಜ್ಞಿಕರಿಗೆ ಕರ್ಮ ಮಾಡಲು ತಿಳಿಸುತ್ತಾರೆ. ಋತ್ವಿಜರು ಆಹವನೀಯಾಗ್ನಿಯನ್ನು ಪ್ರಜ್ವಲಿಸುತ್ತಾರೆ. ಇಂದ್ರನನ್ನು ಯಜ್ಞಕ್ಕೆ ಸೋಮಪಾನಕ್ಕೆ ಬಾರಿ ಬಾರಿ ಆಹ್ವಾನಿಸುತ್ತಾರೆ. ಜ್ಯೋತಿಯನ್ನು ಧ್ಯಾನಿಸುತ್ತಾರೆ. ದಾರಿಯಲ್ಲಿ ಯಾರೂ ತಡೆದು ನಿಲ್ಲಿಸದಿರಲಿ (ಇಂದ್ರನನ್ನು) ಬೇರೆ ದೇವತೆಗಳಿಗಿಂತ ಮೊದಲೇ ಬರಲಿ. ದೇವತೆಗಳಿಗೆಲ್ಲಾ ಹಂಚಿ ಸರೋವರದಂತಹ ಉದರವನ್ನು ಸೋಮದಿಂದ ತುಂಬಿಕೊಳ್ಳಲಿ. ದೇವತೆಗಳು ಜೊತೆಯಲ್ಲೇ ಇರಲಿ. ದೇವತೆಗಳು ಕೂಡಲು ಕತ್ತರಿಸಿದ ದರ್ಭಾಸನವಿದೆ. ದೂರವಿರಲಿ, ಹತ್ತಿರವಿರಲಿ ಯಜಮಾನಾಭಿಮುಖ ಯಜ್ಞಕ್ಕೆ ಬರಲಿ. ನೂತನ ಸ್ತುತಿಗಳಿಂದ ಸ್ತುತಿಸುತ್ತಾರೆ. ಪೂಜ್ಯ ಭಾವದಿಂದ ಪೂಜಿಸುತ್ತಾರೆ. ಪುರೋಡಾಶ ಸಿದ್ಧವಿದೆ. ಪಕ್ವಯುವ ಧಾನ್ಯ ಸಿದ್ಧವಿದೆ. ಮಾನವರು ಮಾಡುವ ಕರ್ಮಗಳಲ್ಲಿ ಭಾಗಿಯಾಗಲು ಪ್ರಾರ್ಥಿಸಿದ್ದಾರೆ. ಯಜ್ಞ ಕರ್ತರೆಲ್ಲರು ಶಸ್ತ್ರಮಂತ್ರ ಪಠಿಸುತ್ತಿರುತ್ತಾರೆ. ಯಜ್ಞಕ್ಕೆ ಬರಲಿ, ಹವಿಸ್ಸು ಸ್ವೀಕರಿಸಲಿ, ಸೋಮಪಾನ ಮಾಡಲಿ, ವರುಣನನ್ನು ಯಜ್ಞ ರಕ್ಷಣಾರ್ಥ ಕರೆಯುತ್ತಾರೆ. ಶ್ರೇಷ್ಟ ವಸ್ತುಗಳನ್ನು ಉಪಯೋಗಿಸುತ್ತಾರೆ. ಶಸ್ತ್ರಮಂತ್ರ ಸ್ತುತಿಸುತ್ತಾರೆ. ಸೋಮವು ದ್ರೋಣ ಕಲಶದಲ್ಲಿ ತುಂಬಲ್ಪಟ್ಟಿದೆ. ಸ್ವಧಾರೂಪಿ ಅನ್ನವು ಇಂದ್ರನ ಜಠರ ಸೇರಲಿ. ★ ಸೋಮಕ್ಕೆ ಉದಕ, ಹಾಲು ಸೇರಿಸಿ ಪರಿಷ್ಕರಿಸಲಾಗಿದೆ. ಸವನ ತ್ರಯಗಳಲ್ಲೂ ಶಸ್ತ್ರಮಂತ್ರಗಳಿಂದ ದೇವತೆಗಳು ತೃಪ್ತರಾಗಲಿ. ★ ಸೋಮ ಹಿಂಡುವ ಕಲ್ಲುಗಳೊಂದಿಗೆ ಆಶ್ರಮದಲ್ಲಿ ವೇದಿಕೆಯ ಬಳಿ ಮೂರು ಸವನಗಳಿಗೂ ಸಾಕಾಗುವಷ್ಟು ಸೋಮವನ್ನು ನುರಿತ ಆಶ್ರಮವಾಸಿಗಳು ತಯಾರಿಸಿದ್ದಾರೆ. ★ಹರಿತ ವರ್ಣದ ಅಶ್ವ ರಥದಲ್ಲಿ ಇಂದ್ರನು ಬಂದು ಯಜ್ಞ ಸ್ವೀಕರಿಸಲಿ. ಯಜ್ಞ ಯಾಗಾದಿಗಳನ್ನು ಮಾಡಿ ಆ ಬಲದ ಮೇಲೆಯೇ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಾರೆ. ಅಪೇಕ್ಷಿಸಿದಾಗಲೆಲ್ಲ ನಮ್ಮ ಅಭೀಷ್ಟಗಳನ್ನು ಈಡೇರಿಸಲು ಪ್ರಾರ್ಥಿಸಿದ್ದಾರೆ.

ವಿಶ್ವಾಮಿತ್ರರು ಇಂದ್ರನ ಜೊತೆಗೆ ಆರಾಧಿಸಿದ ಇತರೇ ದೇವತೆಗಳು : 1) ಏಕಾದಶ ರುದ್ರರು (2) ಅಗ್ನಿ (3) ಮಿತ್ರಾ ವರುಣರು (4) ಸೋಮ (ಪ್ರಾಣಿಗಳಿಗೆ, ಪುತ್ರರಿಗೆ, ರೋಗಪರಿಹಾರಕ್ಕಾಗಿ) (5) ಮರುತ್‌ಗಳು (6) ಸವಿತೃ (ಅನ್ನ, ಧನ ಅನುಗ್ರಹಿಸಲು) (7) ಪೂಷನ್ (ಯಜ್ಞ ರಕ್ಷಣೆಗಾಗಿ) (8) ಸರಸ್ವತಿ (ಗೋ ಸಂಪತ್ತುಗಳಿಗಾಗಿ)

# ಇಂದ್ರದೇವರು - ಆಶ್ರಮ ವಿಭಾಗ (ಮಂಡಲ - ಎರಡು)

★ ಅಧ್ವರ್ಯುವನ್ನು ಯಾಗಕ್ಕೆ ಪ್ರಚೋದಿಸುತ್ತಾರೆ.

★ ಅರಣ್ಯದಲ್ಲಿ, ಆಶ್ರಮದಲ್ಲಿ ಇಂದ್ರರೂಪಿ ಕಪಿಂಜಲ ಪಕ್ಷಿ ಇಂಪಾಗಿ ವೀಣಾ ವಾದನದಂತೆ ಹಾಡಲು ಬಯಸಿದ್ದಾರೆ.

★ ಇಂದ್ರನು ಬೇರೆ ಯಜ್ಞಕ್ಕೆ ಹೋಗದೆ ಈ ಯಜ್ಞಕ್ಕೆ ಬಂದು ಸ್ತೋತ್ರಗಳನ್ನು ಆಲಿಸಿ ಸೋಮಪಾನ ಮಾಡಲಿ.

★ ಇಂದ್ರನ ಸಖ್ಯಕ್ಕಾಗಿ ಇಂದ್ರನ ಸ್ತೋತ್ರಗಳನ್ನು ಮಾಡುತ್ತಾರೆ.

★ ಇಂದ್ರಾದಿಗಳನ್ನು ಪೂಜಿಸಲು ಹೇಳಿದ್ದಾರೆ.

★ ಇಂದ್ರದತ್ತ ಧನದಿಂದ ಯಜಮಾನರು ಸುಖವಾಗಿದ್ದಾರೆ.

★ ಉತ್ತರ ವೇದಿಕೆಯಲ್ಲಿ ಇಂದ್ರನು ಸ್ಥಾಪಿತನಾಗಲಿ.

★ ಋಷಿಗಳಿಗೆ, ಯಾಜ್ಞಿಕರಿಗೆ, ಯಜಮಾನರಿಗೆ ಪಾಪವು ಸಮೀಪಿಸುವುದಿಲ್ಲ.

★ ಕರ್ಮಗಳನ್ನು ಮಾಡಿ ಸ್ತುತಿಸಿ ಪೂಜಿಸುತ್ತಾರೆ.

★ ನಾಲ್ಕು ಬಗೆಯ ಋತ್ವಿಜರು ವೇದ ಘೋಷ ಮಾಡುತ್ತಾರೆ.

ಎ) ಮಂದ್ರ (ಬಿ) ಮಧ್ಯಮ (ಸಿ) ತಾರಕ (ಡಿ) ಧ್ಯಾನಾತ್ಮಕ

★ ಏಳು ಛಂದಸ್ಸುಗಳಲ್ಲಿ ಯಾಗ ನಡೆಯುತ್ತದೆ.

★ ಪುತ್ರರೊಡಗೂಡಿ ಇಂದ್ರನನ್ನು ಪೂಜಿಸುತ್ತಾರೆ.

★ ಪುರೋಡಾಶ ತಯಾರಿಸುತ್ತಾರೆ.

★ ಅಧ್ವರ್ಯುವು ಪಶ್ವಾದಿ ಛೇದನದಲ್ಲಿ ನಿರತರಾಗಿರುತ್ತಾರೆ.

★ ಇಂದ್ರ ಸಾನಿಧ್ಯ ಬಯಸುತ್ತಾರೆ.

★ ಪ್ರಾಯಶ್ಚಿತ್ತಗಳಿಂದ ಋಷಿಗಳು, ಋತ್ವಿಜರು ಮತ್ತು ಬ್ರಹ್ಮ ಕರ್ಮಗಳನ್ನು ಸರಿಪಡಿಸುತ್ತಾರೆ.

★ ಪುತ್ರರೊಂದಿಗೆ ಯಜಮಾನರು ಶಸ್ತ್ರಮಂತ್ರ ಪಠಿಸುತ್ತಾರೆ.

★ ಯಜ್ಞ ಕರ್ಮಗಳನ್ನು ಮಾಡಿ ಹವಿಸ್ಸು ಅರ್ಪಿಸುತ್ತಾರೆ.

★ ಯಾಜ್ಞಿಕರು ಶ್ರೇಷ್ಠಮಂತ್ರಗಳಿಂದ ಸ್ತುತಿಸುತ್ತಾರೆ.

★ ಸೋಮಯಾಗವು ಪೃಥ್ವಿಯಲ್ಲಿ ಮಾನವರ ಶುಭಕ್ಕಾಗಿ ಮೂರು ಸವನಗಳಲ್ಲೂ ನಡೆಯುತ್ತಿರುತ್ತದೆ.

★ ಸೋಮವು ಸಿದ್ಧವಾಗಿದೆ. ಇಂದ್ರನು ಸೋಮಪಾನಕ್ಕೆ ಬರಲಿ.

★ ಮದಕಾರಿ ಸೋಮವನ್ನು ಹಿಂಡುತ್ತಾರೆ. ಶೋಧಿಸಿದ ನಂತರ ಚಮಸ ಪಾತ್ರೆಯಲ್ಲಿ ಉದಕದೊಂದಿಗೆ ಅಗ್ನಿ ಇಂದ್ರರಿಗೆ ಅರ್ಪಿಸುತ್ತಾರೆ.

★ ಸ್ತೋತ್ರಗಳನ್ನು ಸ್ವೀಕರಿಸಿ ಸೋಮಪಾನ ಮಾಡಿ ತೃಪ್ತನಾಗಲಿ.

★ ಸೂಕ್ತಗಳನ್ನು ಪಠಿಸಿ ಸ್ತುತಿಸುತ್ತಾರೆ.

★ ಸೋಮವನ್ನು ಇಂದ್ರನಿಗಾಗಿಯೇ ಸಂಪಾದಿಸುತ್ತಾರೆ. ಪ್ರೀತಿಯಿಂದ ಸ್ವೀಕರಿಸಲು ಇಂದ್ರನನ್ನು ಪ್ರಾರ್ಥಿಸುತ್ತಾರೆ.

★ ಹೋತೃವು ಪುರೋನುವಾಕ್ಯೂ ಸಿದ್ಧ ಹವಿಸ್ಸು ಪ್ರಕಟಿಸುತ್ತಾನೆ.

★ ಎಲ್ಲರಿಗೂ ಗೋವುಗಳು, ಧನ, ರಕ್ಷಣೆಗಳನ್ನು, ಹರುಷವನ್ನು ಅನುಗ್ರಹಿಸಲು ಪ್ರಾರ್ಥಿಸುತ್ತಾರೆ.

ಮಂಡಲ 4ರಲ್ಲಿ ವಾಮದೇವರು ಇಂದ್ರನ ಜೊತೆಗೆ ಆರಾಧಿಸಿದ ಇತರೇ ದೇವತೆಗಳು ಹೀಗಿದ್ದಾರೆ (1) ಋತು ದೇವತೆಗಳು (2) ವಾಯು (3) ಬ್ರಹಸ್ಪತಿ (4) ಮರುತ್‌ಗಳು (5) ಅಶ್ವಿನಿ ದೇವತೆಗಳು (6) ಸೋಮ (7) ಅಗ್ನಿ

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಇಂದ್ರದೇವರು –ಆಶ್ರಮ ವಿಭಾಗ (ಮಂಡಲ 4)

★ ಅನಾದಿ ಕಾಲದಿಂದ ಇಂದ್ರ ಕರ್ಮಗಳನ್ನು ಮಾಡುತ್ತಾ ಬಂದಿದ್ದಾರೆ.

★ ಇತರ ಋಷಿಗಳಂತೆಯೇ ಯಜಮಾನರು ಶಸ್ತ್ರರೂಪ ಸ್ತೋತ್ರಗಳನ್ನು ಪಠಿಸುತ್ತಾರೆ.

★ ಇಂದ್ರ, ಅಗ್ನಿ, ಸೋಮರ ಪೂಜೆ ಮಾಡಲು ಹೇಳಿದ್ದಾರೆ.

★ ಇಷ್ಟ ಪ್ರಾಪ್ತಿಗೆ ಯಜ್ಞ ಪ್ರವರ್ತಕರಾಗುವಂತೆ ಯಜಮಾನರು ಪ್ರೇರಿಸುತ್ತಾರೆ. ಇಂದ್ರನನ್ನು ಸ್ತೋತ್ರ ಮಾಡುತ್ತಾರೆ. ನಮಸ್ಕರಿಸುತ್ತಾರೆ.

★ ಇಂದ್ರನ ಜೊತೆ ಅಗ್ನಿ, ವರುಣ, ಬ್ರಹ್ಮಣಸ್ಪತಿ, ಅಶ್ವಿನಿ, ಉಷಾರವರುಗಳನ್ನು ಆಹ್ವಾನಿಸಿದ್ದಾರೆ.

★ ಇಂದ್ರ ಸಖ್ಯಕ್ಕಾಗಿ ಇಂದ್ರನ ಪ್ರೀತಿಗೋಸ್ಕರವಾಗಿ ಪೂಜೆಗಳನ್ನು ಸಲ್ಲಿಸುತ್ತಾರೆ.

★ ಉಷಃಕಾಲದಿಂದಲೇ ಸ್ತುತಿ, ಸ್ತೋತ್ರ, ಹವಿಸ್ಸು ಅರ್ಪಿಸುತ್ತಾರೆ.

★ ಉತ್ತರ ವೇದಿಕೆಯಲ್ಲಿ ಚಮಸ ಪಾತ್ರೆಯಲ್ಲಿ ಸೋಮ ಇಟ್ಟಿರುತ್ತಾರೆ.

★ ಋಷಿಗಳು ಋತು ದೇವತೆಗಳನ್ನು ಪೂಜಿಸಲು ಹೇಳಿದ್ದಾರೆ.

★ ನೂತನ ಸ್ತುತಿಗಳನ್ನು, ಹವಿಸ್ಸನ್ನು ಅರ್ಪಿಸಿ ಯಜ್ಞ ಕರ್ಮ ಮಾಡಿ ಇಂದ್ರನ ಪ್ರೀತಿ ಪಾತ್ರರಾಗಲು ಹೇಳಿದ್ದಾರೆ.

★ ನೂರಾರು ಋಷಿಗಳು ಪುನ: ಪುನ: ಹವಿಸ್ಸನ್ನು ಅರ್ಪಿಸುತ್ತಾರೆ.

★ ಸ್ತುತಿ, ಪೂಜೆ (ಪಯಸ್ವತ್) ಹವಿಸ್ಸು ಅರ್ಪಿಸುತ್ತಾರೆ.

★ ಬ್ರಹ್ಮನೆಂಬ ಋತ್ವಿಜನಿಂದ ಸ್ತೋತ್ರ ಮಾಡಲ್ಪಟ್ಟಾಗ (ಶ್ವೇನ) ರೂಪ (ಗಾಯತ್ರಿ) ಯಿಂದ ಇಂದ್ರನಿಗೆ ಸೋಮವು ತರಲ್ಪಟ್ಟಿತ್ತು.

★ ಮಂಗಳಕರ ಪವಿತ್ರ ಕರ್ಮಗಳನ್ನು ಮಾಡುತ್ತಾರೆ.

★ ಮಂತ್ರ ಪೂರ್ವಕ ಶಾಸ್ತ್ರೋಕ್ತ ಕರ್ಮಗಳನ್ನು ಮಾಡುತ್ತಾರೆ.

★ ಮಹಾಬಲಿಷ್ಟಸೋಮಾರ್ಪಣೆ ಮಾಡಿ ಒಲಿಸಿಕೊಳ್ಳುತ್ತಾರೆ.

★ ಮರುತ್ ಗಣವು ಯಜ್ಞ ರಕ್ಷಕರು. ಪ್ರಾಣಿಗಳಿಗೆ ಸಂಚಾರ ಮಾರ್ಗದರ್ಶಕರು. ಮೇಘವನ್ನು ಡಿಕ್ಕಿ ಹೊಡೆದು ಮಳೆ ಸುರಿಸುತ್ತಾರೆ.

★ ಯಾಗ ಮಾಡುತ್ತಾ ಮಾಡುತ್ತಾ ಇಂದ್ರನ ಮಿತ್ರರಾಗುತ್ತಾರೆ.

★ ಯಜ್ಞಕ್ಕೆ ಇಂದ್ರ, ವಾಯುಗಳು ದಯಮಾಡಿಸಲಿ, ಹರ್ಷಪಡಲಿ.

★ ಯಜಮಾನನ ಸಮೀಪವೇ ಕುಳಿತು ಸೋಮಪಾನ ಮಾಡಿ ತೃಪ್ತರಾಗಲಿ.

★ ಯಜ್ಞ ಕುಂಡದ ಸುತ್ತಲೂ ತಂಡುಲೋಪಸ್ಕರ ಧಾನ್ಯವನ್ನು ಹರಡಿರುತ್ತಾರೆ (ಇಂದ್ರ, ಅಶ್ವ'ಹರಿ' ತಿನ್ನಲು ಕಾತುರವಾಗಿದೆ).

★ ಲೋಕೋಪಕಾರ ಮಾಡಿದ ಇಂದ್ರನನ್ನು ಅತಿಶಯವಾಗಿ ಸ್ತುತಿಸುತ್ತಾರೆ.

★ ವಾಯು, ಇಂದ್ರರು ಯಜ್ಞಕ್ಕೆ ಬರಲಿ.

★ ಮೊದಲು ಸೋಮಪಾನ ಮಾಡಲಿ.

★ ವ್ರತಾಚಾರಣೆ ಮಾಡಿ ವೀರ್ಯಯುತ ಸೋಮಪಾನಕ್ಕೆ ಇಂದ್ರ ಅಶ್ವಗಳು ಇಂದ್ರನನ್ನು ಕರೆತರಲಿ ಎಂದು ಅಶ್ವಗಳನ್ನು ಪ್ರಾರ್ಥಿಸಿದ್ದಾರೆ.

★ ಶ್ರದ್ಧೆ ಅಭಿಮಾನಗಳಿಂದ ಶಸ್ತ್ರಮಂತ್ರ ಪಠಿಸಿ ಹವಿಸ್ಸು ಅರ್ಪಿಸುತ್ತಾರೆ

★ ಸಕಲ ದೇವತೆಗಳಿಗೆ ಒಡೆಯನಾದ "ಇಂದ್ರ"ನ ಉಪಾಸನೆ ಅತ್ಯಗತ್ಯ ಎಂದು ಹೇಳಿದ್ದಾರೆ.

★ ಸೋಮವನ್ನು ಗೋ ಚರ್ಮದ ಮೇಲೆ ಇಟ್ಟಿರುತ್ತಾರೆ.

★ ಸೋಮ ತುಂಬಿದ ದ್ರೋಣ ಕಳಶ ಇರುತ್ತದೆ. ಸೋಮದ ಬಾವಿಗಳೇ ಇರುತ್ತದೆ. ಹತ್ತಿರ, ದೂರ ಎಲ್ಲೇ ಇರಲಿ ಇಂದ್ರನು ಯಾಗಕ್ಕೆ ಬರಲಿ, ಸ್ತೋತ್ರಗಳನ್ನು, ಪೂಜೆಗಳನ್ನು ಸ್ವೀಕರಿಸಲಿ.

★ ಹವಿಸ್ಸು, ಪುರೋಡಾಶ ಸ್ವೀಕರಿಸಿ ತೃಪ್ತಿಯಾಗುವಷ್ಟು ಸೋಮಪಾನವನ್ನು ಮಾಡಿ ಅನುಗ್ರಹಿಸಲಿ.

## ಇಂದ್ರದೇವರು - ಪ್ರಾರ್ಥನಾ ವಿಭಾಗ

★ ಅತಿಶಯ ಕೀರ್ತಿಶಾಲಿಯಾಗುವಂತೆ ಅನುಗ್ರಹಿಸಲಿ. ಅನ್ನವೂ ಸುಲಭವಾಗಿ ದೊರೆಯುವಂತೆ ಮಾಡಲಿ.

★ ನೂರು ವರುಷಗಳ ಆಯಸ್ಸಿಗಾಗಿ ಬೇಡಿದ್ದಾರೆ.

★ ಯಥೇಚ್ಛವಾಗಿ ಆಹಾರ ದೊರಕುವಂತೆ ಮಾಡಲಿ.

★ ಅಶ್ವಗಳಿಗಾಗಿ ಬೇಡಿದ್ದಾರೆ. ಶರೀರ ರಕ್ಷಣೆಗಾಗಿ ಬೇಡಿದ್ದಾರೆ.

★ ಇಷ್ಟಾರ್ಥ ಸಿದ್ಧಿಗಾಗಿ, ಐಶ್ವರ್ಯಕ್ಕಾಗಿ, ಯಜ್ಞಕರ್ತರಿಗೆ ಅಕ್ಷಯ ಧನ ನೀಡಲು ಪ್ರಾರ್ಥಿಸಿದ್ದಾರೆ.

★ ಇಂದ್ರನನ್ನು ಸ್ತೋತ್ರ ಮಾಡುವವರ ಶರೀರಕ್ಕೆ ವಿರೋಧಿಗಳು ಕೆಡುಕು ಮಾಡದಂತೆ ರಕ್ಷಿಸಲಿ.

★ ಇಂದ್ರನು ತನ್ನನ್ನು ನಂಬಿದವರಿಗೆ (ಆಶ್ರಯಿಸಿದವರಿಗೆ) ಐಶ್ವರ್ಯವನ್ನು ಕೊಡಲಿ (ವ್ಯಾಪಾರಿಯಂತಾಗುವುದು ಬೇಡ) ಒಳ್ಳೆಯ ಗಾಳಿಗಾಗಿ ಪ್ರಾರ್ಥಿಸಿದ್ದಾರೆ.

★ ಧನ ಸಂಪತ್ತಿಗಾಗಿ, ಐಶ್ವರ್ಯವಂತನನ್ನಾಗಿ ಮಾಡಲಿ. ದೇವಾರ್ಪಣ, ಯೋಗ್ಯ ಧನ ಕರುಣಿಸಲಿ.

★ ಧನ ಹೆಚ್ಚುತ್ತಿರುವಂತೆ ಅನುಗ್ರಹಿಸಲಿ. ನೋಡುವ ಶಕ್ತಿಯನ್ನು ನೀಡಲಿ. ನಮ್ಮೊಡನೆಯೇ ಇರಲಿ, ಪ್ರೀತಿಯಿಂದ ನೋಡಲಿ.

★ ಎಲ್ಲಾ ರೀತಿಯಿಂದಲೂ ರಕ್ಷಿಸಲಿ. ನಾಶ ರಹಿತ ಧನ ನೀಡಲಿ, ಪಾಪ ನಾಶ ಮಾಡಲಿ.

★ ಪುತ್ರ ಪೌತ್ರರಿಗಾಗಿ ಬೇಡಿದ್ದಾರೆ. ಬಲಶಾಲಿಗಳನ್ನಾಗಿಸಲಿ.

★ ಬುದ್ಧಿ ಚುರುಕುಗೊಳಿಸಲಿ.

★ ಭೂಲೋಕ, ಸ್ವರ್ಗ, ಅಂತರಿಕ್ಷ ಎಲ್ಲಿದ್ದರೂ ಇಂದ್ರನು ಮರುತ್‌ಗಳ ಜೊತೆಯಲ್ಲಿ ಯಜ್ಞಕ್ಕೆ ಬರಲಿ, ಧನ ತಂದುಕೊಡಲಿ. ಮಳೆ ಸುರಿಯುವಂತೆ ಮಾಡಲಿ. ಮೇಧಾಶಕ್ತಿ, ಯಶಸ್ಸು ಕೊಡಲಿ, ಪ್ರಸಿದ್ಧಗೊಳಿಸಲಿ.

★ ಮಾಡಿದ ಕರ್ಮಫಲ, ಸುಖ ಅಪೇಕ್ಷಿಸುತ್ತಾರೆ. ಮಿತ್ರರು ಮಾತ್ರ ನಮ್ಮನ್ನು ಗುರುತಿಸಲಿ. ಯಜಮಾನನ, ಯಾಜ್ಞಿಕರ ರಕ್ಷಣೆ ಮಾಡಲಿ.

★ ಯಾಜ್ಞಿಕರಿಗೆ ಧನ ಹಂಚಿ ಅನಂತರ ಇಂದ್ರಾಣಿಯನ್ನು ಸೇರಲಿ. ಯಜ್ಞ ಕರ್ಮ ಪ್ರವರ್ತಕರನ್ನಾಗಿಸಲಿ.

★ ಯಜ್ಞವನ್ನು ಪವಿತ್ರಗೊಳಿಸಲಿ. ಯಶಸ್ಸಿಗಾಗಿ ಪ್ರಾರ್ಥಿಸಿದ್ದಾರೆ.

★ ಯಜ್ಞಕರ್ತರ ಇಷ್ಟಾರ್ಥವನ್ನು ನೆರವೇರಿಸಲಿ. ಯಜಮಾನನು ಪಾಪಕರ್ಮ ಮಾಡದಂತೆ ರಕ್ಷಿಸಲಿ. ರಾಕ್ಷಸರ ನಾಶ ಮಾಡಿ ಅವರನ್ನು ನಿರ್ಮೂಲ ಮಾಡಲಿ.

★ ವರುಣನು ತೃಪ್ತನಾಗಲಿ, ಪ್ರಸನ್ನನಾಗಲಿ, ಶತ್ರುಗಳನ್ನು ನಾಶಮಾಡಲಿ. ವಜ್ರ, ವೈಢೂರ್ಯ, ಚಿನ್ನ, ಬೆಳ್ಳಿ ಅನುಭವಿಸುವಂತಾಗಲಿ. ಶತ್ರುಗಳ ಯಜ್ಞಕ್ಕೆ ವಿಘ್ನ ಮಾಡಿ ಶತ್ರುಗಳನ್ನು ನಾಶ ಮಾಡಲಿ.

★ ಶತ್ರುಗಳು ಪರಸ್ಪರ ಹೊಡೆದಾಡಿ ಸಾಯಲಿ. ಯಜಮಾನನನ್ನು ಗುರುತಿಸಲಾಗದೆ ದೂರಹೋಗಲಿ.

★ ಸುವರ್ಣ ರಥದಲ್ಲಿ ಯಜ್ಞಕ್ಕೆ ಬರಲಿ. ಸೋಮಪಾನ ಮಾಡಲಿ, ಸುಖವನ್ನು ನೀಡಲಿ. ಸ್ತುತಿಗಳನ್ನು ಕೇಳಲಿ.

★ ಯಾಜ್ಞಿಕರನ್ನು ಸಾಲದಿಂದ ಮುಕ್ತಗೊಳಿಸಿ ರಕ್ಷಿಸಲಿ. ಮಳೆ ಸುರಿಯುವಂತೆ ಮಾಡಲಿ, ಜಲಾಭಿವೃದ್ಧಿಗೊಳಿಸಲಿ ಗೋಸಂಪತ್ತಿಗಾಗಿ ಬೇಡಿದ್ದಾರೆ. ಇಂದ್ರದತ್ತ ಸಂಪತ್ತು ನಾಶವಾಗದಿರಲಿ. ಜ್ಞಾನಯುಕ್ತರನ್ನಾಗಿ ಮಾಡಲಿ. ಈ ಮಂಡಲದಲ್ಲಿ ಋಷಿಗಳು ಎಂಟು ಜನ ಇಂದ್ರನ ಜೊತೆಗೆ ಬ್ರಹ್ಮಣಸ್ಪತಿ, ಉಷ, ಅಶ್ವಿನಿ, ಮರುತ್, ಸೋಮ ಅಗ್ನಿ, ಮಿತ್ರಾವರುಣರುಗಳನ್ನು ಪೂಜಿಸಿ ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಇಂದ್ರದೇವರು - ಪ್ರಾರ್ಥನಾ ವಿಭಾಗ

★ ಅಶ್ವಗಳನ್ನು ಬೇಡಿದ್ದಾರೆ. ಅನ್ನ ಆಹಾರಗಳಿಗಾಗಿ ಬೇಡಿದ್ದಾರೆ.
★ ಅಸುರರನ್ನು ಸೋಲಿಸಿ ಆಪತ್ತುಗಳಿಂದ ಪಾರುಮಾಡಲಿ.
★ ಇಂದ್ರನು ಭಕ್ತರನ್ನು (ಶ್ರದ್ಧೆವುಳ್ಳವರನ್ನು) ರಕ್ಷಿಸಲಿ.
★ ಇಚ್ಛಿಸುವ ಸಂಪತ್ತು ಇಷ್ಟಾರ್ಥಗಳನ್ನು ಕರುಣಿಸಲಿ.
★ ಇಂದ್ರನು ಸ್ನೇಹಿತನಾಗಿಯೇ ಇರಲು ಬಯಸುತ್ತಾರೆ.
★ ಇಂದ್ರದತ್ತ ಧನವನ್ನು ಒಡನೆಯೇ ಅನುಭವಿಸುವಂತಾಗಲಿ.
★ ಕರ್ಮಗಳನ್ನು ಮಾಡುತ್ತಿರುವಂತೆಯೇ ಅನುಗ್ರಹಿಸಲಿ.
★ ಕರ್ಮಗಳಿಗೆ ತಕ್ಕಷ್ಟು ಫಲ ಕೊಡುತ್ತಿರಲಿ.
★ ಕರ್ಮಗಳಿಗೆ ಪ್ರತಿಫಲ ದಕ್ಷಿಣೆಯ ರೂಪದಲ್ಲಿ ಬರಲಿ.
★ ಕ್ರೋಧವಿಲ್ಲದ ಲಕ್ಷಣವಾದ ಧೇನುಗಳನ್ನು ಕರುಣಿಸಲಿ.
★ ಗೋ ಸಂಪತ್ತು ಕೊಡಲಿ (ಅಧಿಕ ಕ್ಷೀರಕೊಡುವವು) ಮತ್ತು ಅವನ್ನು ರಕ್ಷಿಸಲಿ
★ ಗೃಹಗಳಿಗಾಗಿ ಮತ್ತು ಗೌರವ ಸಂಪತ್ತುಗ್ತಳಿಗಾಗಿ ಬೇಡಿದ್ದಾರೆ
★ ನೂತನ ರಕ್ಷಣೆಗಳು ಮತ್ತು ಮಳೆ ನೀರುಗಳಿಗಾಗಿ ಬೇಡಿದ್ದಾರೆ. ★ ಧನ ಸಂಪತ್ತಿಗಾಗಿ ಬೇಡಿದ್ದಾರೆ.
★ ದಕ್ಷಿಣೆ ರೂಪದಲ್ಲಿ ಧನವನ್ನು ಬೇಡಿದ್ದಾರೆ.
★ ಪುತ್ರ ಪೌತ್ರರಿಗೆ ಪ್ರಾಣಿಗಳಿಗೆ ಆರೋಗ್ಯ (ರೋಗ ಪರಿಹಾರಕ್ಕಾಗಿ) ಬೇಡಿದ್ದಾರೆ.
★ ಪುತ್ರ ಪೌತ್ರರು ಸುಖವಾಗಿ ಬಲಶಾಲಿಗಳಾಗಿ ಇರುವಂತೆ ಕರುಣಿಸಲು ಬೇಡಿದ್ದಾರೆ.
★ ಯಾವ ದಿಕ್ಕಿನಿಂದಲೂ ಆಪತ್ತುಗಳು ಬಾರದಿರಲಿ.
★ ರಥಕ್ಕಾಗಿ ಹಾಗು ರಕ್ಷಣೆಗಾಗಿ ಬೇಡಿದ್ದಾರೆ.
★ ಶರೀರಕ್ಕೆ ಶತ್ರುಗಳು ಹಿಂಸೆ ಮಾಡದಿರಲಿ.
★ ಶರೀರ ಪೋಷಣೆಗೆ ಅನ್ನ ಸಂಪತ್ತು ಬೇಡಿದ್ದಾರೆ.
★ ಹವಿಸ್ಸಿನಿಂದ ತೃಪ್ತಿಹೊಂದಿ ನಮಗೆ ಹರುಷ ನೀಡಲಿ ಎಂದು ಬೇಡಿದ್ದಾರೆ.
★ ಯಜಮಾನನ್ನು ಸುಖಿಯನ್ನಾಗಿ ಇರಿಸಲಿ.
★ ಇಷ್ಟಾರ್ಥಗಳನ್ನು ಈಡೇರಿಸಲಿ.
★ ಕರ್ಮಗಳನ್ನು ಪದೇ ಪದೇ ಮಾಡುತ್ತಿರುವಂತೆ ಅನುಗ್ರಹಿಸಲಿ.
★ ಋಷಿ ಗೃತ್ಸಮದರು ಈ ಮಂಡಲದಲ್ಲಿ ಇಂದ್ರನ ಜೊತೆಗೆ ಪ್ರಾರ್ಥಿಸಿದ ಇತರೇ ದೇವತೆಗಳು : ಅಗ್ನಿ ಸವಿತೃ, ಸೋಮ ಮತ್ತು ಪೂಷನ್

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಇಂದ್ರದೇವರು -ಪ್ರಾರ್ಥನಾ ವಿಭಾಗ

★ ಅನ್ನ ಆಹಾರಗಳಿಗಾಗಿ ಪ್ರಾರ್ಥಿಸಿದ್ದಾರೆ.

★ ಆಶ್ರಮವಾಸಿಗಳಿಗೆ ಹಿಂಸೆಯಾಗದಿರಲಿ.

★ ಅನ್ನ, ಪೂಜ್ಯ ಧನ ನೀಡಲಿ.

★ ಅಶ್ವಗಳಿಗಾಗಿ ಪ್ರಾರ್ಥಿಸಿದ್ದಾರೆ.

★ ಆಯಸ್ಸು ನೂರು ವರ್ಷಗಳು ಬೇಡಿದ್ದಾರೆ

★ ಅಭೀಷ್ಟಗಳನ್ನು ಈಡೇರಿಸಲಿ.

★ ಅಧಿಕ ಕ್ಷೀರ ಕೊಡುವ ಗೋ ಸಂಪತ್ತಿಗಾಗಿ ಬೇಡಿದ್ದಾರೆ.

★ ಸಂಪತ್ಭರಿತ ಗೃಹಗಳಿಗಾಗಿ ಬೇಡಿದ್ದಾರೆ.

★ ನೀರಿನ ಸೌಕರ್ಯಕ್ಕಾಗಿ (ಮಳೆಗಾಗಿ) ಬೇಡಿದ್ದಾರೆ.

★ ದೀರ್ಘಾಯುಸ್ಸಿನ ಮಕ್ಕಳು, ಮೊಮ್ಮಕ್ಕಳಿಗಾಗಿ ಬೇಡಿದ್ದಾರೆ.

★ ನಿಂದನೆಗೆ ಗುರಿಯಾಗದಿರುವಂತೆ ಮಾಡಲಿ.

★ ನದಿ ದೇವತೆಗಳು ರಕ್ಷಿಸಲಿ.

★ ಆಸ್ತಿಕರ ಧನವನ್ನು ನಮಗೆ ಸಿಗುವಂತೆ ಮಾಡಲಿ.

★ ಪುತ್ರರಿಗೆ, ಪ್ರಾಣಿಗಳಿಗೆ ರೋಗ ಪರಿಹರಿಸಲು ಬೇಡಿದ್ದಾರೆ.

★ ಪುತ್ರ, ಪೌತ್ರರಿಗೆ ಪೂಜನೀಯ ಧನ, ಸುಖಕ್ಕಾಗಿ ಬೇಡಿದ್ದಾರೆ.

★ ಬಲಶಾಲಿ ಮಕ್ಕಳಿಗಾಗಿ ಬೇಡಿದ್ದಾರೆ.

★ ಯಜ್ಞ ಯಾಗ ವಿರೋಧಿಗಳನ್ನು ವಜ್ರಾಯುಧದಿಂದ ಹೊಡೆದು ನಾಶ ಮಾಡಲಿ.

★ ಯಜಮಾನನಿಗೆ ಅಭಿಮುಖನಾಗಿ ಯಜ್ಞ ಪೂರ್ಣ ಮಾಡಲಿ.

★ ಯಾವ ತೊಂದರೆಗಳು ಇಲ್ಲದೆ ಮನೆಗಳಿಗೆ ಹಿಂದಿರುಗುವಂತಾಗಲಿ.

★ ಎಲ್ಲಾ ತರಹದ ರಕ್ಷಣೆಗಳನ್ನು ಇಂದ್ರನಿಂದ ಬೇಡಿದ್ದಾರೆ.

★ ಶತ್ರು ಧನವನ್ನು ಯಾಜ್ಞಿಕರಿಗೆ ಹಂಚಲಿ.

★ ಸಂಪತ್ ಅಭಿವೃದ್ಧಿಪಡಿಸಲಿ.

★ ಹರ್ಷವನ್ನು ನೀಡಿ, ಹರ್ಷಿತರಾಗಿ ಇರುವಂತೆ ಮಾಡಲಿ.

★ ಯಜ್ಞ, ಯಾಗಗಳನ್ನು ಮಾಡಿ ಆ ಬಲದ ಮೇಲೆಯೇ ಯಾಜ್ಞಿಕರು ತಮ್ಮ ಇಷ್ಟಾರ್ಥಗಳನ್ನೆಲ್ಲಾ ಬೇಡಿಕೊಳ್ಳುತ್ತಾರೆ.

★ ಇಂದ್ರನ ಜೊತೆಗೆ ಪೂಜಿಸಿದ ಇತರೇ ದೇವತೆಗಳು :

★ ಸವಿತೃ, ಮರುತ್‌ಗಳು, ಋಬುಗಳು, ಸರಸ್ವತಿ, ವಾಗ್ದೇವಿಯರನ್ನು ಪೂಜಿಸಿ ಪ್ರಾರ್ಥಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಇಂದ್ರದೇವರು –ಪ್ರಾರ್ಥನಾ ವಿಭಾಗ

★ ಅನೇಕ ಸಂವತ್ಸರಗಳು ಹವಿಸ್ಸು ಅರ್ಪಿಸುತ್ತಿರುವಂತೆ ಅನುಗ್ರಹಿಸಲಿ.

★ ಅನ್ನ ಧನಗಳಿಗಾಗಿ ಪ್ರಾರ್ಥಿಸಿದ್ದಾರೆ.

★ ಅಶ್ವಗಳಿಗಾಗಿ ಬೇಡಿದ್ದಾರೆ

★ ಇಂದ್ರನು ಯಜಮಾನನ ಸ್ನೇಹಿತನಾಗಿರಲಿ, ರಕ್ಷಕನಾಗಿರಲಿ, ಇಷ್ಟಾರ್ಥ ಕೈಗೂಡಿಸಲಿ.

★ ಇತರರ ಸ್ತುತಿ ಅಲಕ್ಷಿಸಿ ಈ ಯಜಮಾನನ ಸ್ತುತಿಯನ್ನೇ ಕೇಳಲಿ.

★ ಇಂದ್ರನು ಕೊಟ್ಟದ್ದನ್ನು ಯಜಮಾನನು ಅನುಭವಿಸುವಂತಾಗಲಿ.

★ ಕಾರ್ಯಕ್ಕೆ ತಕ್ಕಷ್ಟೇ ಫಲ ಪಡೆಯಬೇಕು ಎಂದು ಋಷಿಗಳು ಹೇಳಿದ್ದಾರೆ

★ ಕಲ್ಯಾಣಗಳಿಗಾಗಿ ಪ್ರಾರ್ಥಿಸಿದ್ದಾರೆ.

★ ಗೋವುಗಳು ಯಜ್ಞ ಸಾಧನ, ಗೋಸಂಪತ್ತಿಗಾಗಿ ಬೇಡಿದ್ದಾರೆ.

★ ತೇಜೋಬಲಕ್ಕಾಗಿ ಬೇಡಿದ್ದಾರೆ.

★ ಅಧಿಕ ಸಂಪತ್ತಿಗಾಗಿ ಪ್ರಾರ್ಥಿಸಿದ್ದಾರೆ.

★ ಧನಿಕರ ಬಳಿ ಸಮೀಪಿಸುವಂತೆ ಮಾಡಲಿ.

★ ನೂತನ ರಕ್ಷಣೆಗಳಿಗಾಗಿ, ಸಖಿತ್ವಕ್ಕಾಗಿ ಪ್ರಾರ್ಥಿಸಿದ್ದಾರೆ.

★ ಪ್ರಬುದ್ಧರನ್ನಾಗಿ ಮಾಡಲಿ.

★ ಪ್ರೀತಿ ಪಾತ್ರ ಅಶ್ವಗಳಿಗಾಗಿ ಬೇಡಿದ್ದಾರೆ.

★ ಪೂಜಿಸುವ ಯಜಮಾನನಿಗೆ ದೋಷರಹಿತ ಅನ್ನ ದೊರಕಿಸಲಿ.

★ ಮಳೆಗಾಗಿ ಪ್ರಾರ್ಥಿಸಿದ್ದಾರೆ ಮತ್ತು ಯುದ್ಧ ಸಮಯದಲ್ಲಿ ಸಹಾಯವನ್ನು ಬೇಡಿದ್ದಾರೆ.

★ ಯಜಮಾನನನ್ನು ಸ್ವತಂತ್ರವಾಗಿ ಬಿಟ್ಟುಬಿಡಲಿ.

★ ಯಜಮಾನನು ಪುತ್ರ, ಪೌತ್ರರನ್ನು ಬೇಡಿದ್ದಾರೆ.

★ ಯಜ್ಞಕ್ಕೆ ಬರಲಿ, ಅಶ್ವ– ಗೋವುಗಳನ್ನು ಕೊಡಲಿ.

★ ಯಜಮಾನನಿಗೆ ಪ್ರಭೂತ ಧನವನ್ನಿತ್ತು ಧನಾದಿಪತಿಯನ್ನಾಗಿ ಮಾಡಲಿ.

★ ವೀರ್ಯವಂತ ಪುತ್ರರನ್ನು ಕರುಣಿಸಲಿ.

★ ಶತ್ರುಗಳನ್ನು ನಾಶಮಾಡಿ ನೆಮ್ಮದಿಯಿಂದ ಇರುವಂತೆ ಮಾಡಲಿ.

★ ಶತ್ರು ಧನವನ್ನು ಋತ್ವಿಜರು ಯಜಮಾನರುಗಳಿಗೆ ಹಂಚಲಿ.

★ ಸ್ತೋತ್ರ ಮಾಡಲು ಇಂದ್ರನು ಪ್ರೇರಿಸಲಿ, ಗೋವುಗಳನ್ನು ನೀಡಲಿ, ಸ್ವರ್ಗವನ್ನು ಕರುಣಿಸಲಿ.

★ ಸೋಮರಸದ ಅಗ್ರಭಾಗವನ್ನು ಹರ್ಷಾರ್ಥವಾಗಿ ಪಾನಮಾಡಲಿ.

★ ಸೋಮದಿಂದ ಆನಂದಿತನಾದ ಇಂದ್ರನು ಯಜಮಾನನನ್ನು ಸಂಪತ್ಭರಿತನನ್ನಾಗಿ, ಅನ್ನವಂತನನ್ನಾಗಿ, ಧನವಂತನನ್ನಾಗಿ ಮಾಡಲಿ.

★ ಸ್ತುತಿಸುತ್ತಿರುವಂತೆಯೇ ಮಾಡಿ ಸ್ತುತಿಗಳನ್ನು ಆಲಿಸಲಿ.

★ ಸೂರ್ಯನು ಯಜ್ಞವನ್ನು ಕಾಪಾಡಲಿ, ಕರ್ಮವನ್ನು ರಕ್ಷಿಸಲಿ, ಅತಿಶಯ ವೃಷ್ಟಿ ಸುರಿಸಲಿ.

★ **ಹವಿಸ್ಸಿನಿಂದ ದೇವತೆಗಳು ತೃಪ್ತರಾಗಲಿ (ಹುಲ್ಲುಗಾವಲಿನಲ್ಲಿ ಗೋವುಗಳು ಹುಲ್ಲುತಿಂದು ತೃಪ್ತರಾಗುವಂತೆ)**

★ ಯಜಮಾನರನ್ನು, ಯಾಜ್ಞಿಕರನ್ನು ಹರ್ಷಿತರನ್ನಾಗಿ ಮಾಡಲಿ. ★ ಋಷಿ ವಾಮದೇವರು ಇಂದನ ಜೊತೆಗೆ ಆರಾಧಿಸಿದ ಇತರೇ ದೇವತೆಗಳು : ಅಗ್ನಿ, ಅಶ್ವಿನಿ, ವಾಯು, ಸೂರ್ಯ, ಸೋಮ, ಮರುತ್ ದೇವತೆಗಳು.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಇಂದ್ರದೇವರು

## ಮಂಡಲ 5 - ಅತ್ರಿ ಋಷಿಗಳು (ಸ್ತೋತ್ರ ವಿಭಾಗ)

ಅಗ್ನಿ, ವಾಯು, ಆದಿತ್ಯ, ತೇಜಸ್ಸು, ಅಂತರಿಕ್ಷಸ್ಥವಾಗಿದೆ. ಅಗ್ನಿ, ಇಂದ್ರ ಸಖ್ಯಕ್ಕಾಗಿ ಪುರೋಡಾಶ ಪಾಕ ಮಾಡಿಸಿ ಅಭಿಮುಖ ಮಾಡಿಕೊಳ್ಳುತ್ತಾರೆ. ಅಧಿಕ ಸಂಖ್ಯೆಯ ಶತ್ರುಗಳನ್ನು ಏಕಾಂಗಿಯಾಗಿ ಎದುರಿಸಿ ಅವರನ್ನು ನಾಶ ಮಾಡುತ್ತಾನೆ. ಅಸುರರನ್ನು ಹಿಂಸಿಸಿ ಓಷಧಿ ವನಸ್ಪತಿಗಳನ್ನು ನದೀ ತೀರದಲ್ಲಿ ಬೆಳೆಸಿದವನು ಇಂದ್ರ. ಅವೈದಿಕ ಪಾಪ ಕರ್ಮಗಳಿಗೆ ಇಂದ್ರನು ಹೆದರುವುದಿಲ್ಲ. ಅವನ ಮನಸ್ಸು ದಾನ ಮಾಡುವ ಸಂಕಲ್ಪದ್ದು. ಅನೇಕರ ರಕ್ಷಣಾರ್ಥ ಅನುಗ್ರಹಿಸುತ್ತಾನೆ. ಅಪೇಕ್ಷಿತ ವಸ್ತುಗಳನ್ನು ನೀಡುತ್ತಾನೆ. ಆಂಗೀರಸ ಪುತ್ರರು ಜ್ಞಾನಿಗಳು, ಉತ್ತಮ ಕರ್ಮವುಳ್ಳವರು. ಆಂಗೀರಸ್ಸುಗಳು ಸ್ತುತಿಸುತ್ತಾ ಇಂದ್ರನನ್ನು ಪ್ರಸಿದ್ಧ ಮಾಡಿದವು. ಇಂದ್ರನಿಗೆ ಮೊದಲು ಸೋಮ ಪಾನ ಮಾಡಲು ದೇವತೆಗಳು ಒಮ್ಮತದಿಂದ ಅನುಮತಿಸಿದ್ದಾರೆ. ಇಂದ್ರನು ಶತ್ರುಗಳನ್ನು ಅಟ್ಟಿಸಿಕೊಂಡು ಹೋಗುತ್ತಾನೆ. ಕರ್ಮಸಾಧಕ, ರಕ್ಷಕ, ಶತ್ರು ನಾಶಕ, ವೃಷ್ಟಿದಾತ, ದೇವ ಗಂದರ್ವಾದಿ ಪಂಚ ಜನರಿಗೂ ರಕ್ಷಕ.

ಇಂದ್ರನು ಅನುಚರರೊಂದಿಗೆ ಎಲ್ಲೆಲ್ಲೂ ಸಂಚರಿಸುತ್ತಾನೆ. ಇಂದ್ರನ ಪತ್ನಿ ಶಚಿ ದೇವಿಯರು ಅವನನ್ನು ಅನುಸರಿಸುತ್ತಾರೆ. ಇಂದ್ರನನ್ನು ಮಿತ್ರನನ್ನಾಗಿ ಮಾಡಿಕೊಂಡವರು ಇಂದ್ರ ಕರ್ಮಗಳನ್ನು ಮಾಡಿ ತಮ್ಮ ಸಂಪತ್ತನ್ನು ರಕ್ಷಿಸಿಕೊಂಡು ಸೂರ್ಯ ಅಗ್ನಿಯ ಪ್ರೀತಿಗೆ ಪಾತ್ರರಾಗುತ್ತಾರೆ. ಇಂದ್ರನನ್ನು ವಲಿಸಿಕೊಳ್ಳುವುದು ಬಹಳ ಕಷ್ಟ ಎನ್ನುತ್ತಾರೆ ಅತ್ರಿ ಋಷಿಗಳು. ಇಂದ್ರಾಗ್ನಿಗಳು ಪೂಜ್ಯರು, ಪ್ರಸಿದ್ಧರು, ಸರ್ವಜ್ಞರು, ಧನವಂತರು, ಅಹಿಂಸಕರು, ಆದಿತ್ಯನಂತೆ ಪ್ರಕಾಶಮಾನರು, ಸ್ತುತಿಗೆ ಪಾತ್ರರು, ಜಂಗಮಾತ್ಮಕ ಧನಕ್ಕೆಲ್ಲ ಒಡೆಯರು, ಮಾನವರಂತೆ ಪ್ರತಿದಿನವೂ ವೃದ್ಧಿ ಹೊಂದುವವರು, ಇಂದ್ರಾಗ್ನಿಗಳ ಒಲವು ಶತ್ರು ನಿರೋಧಕವಾಗಿದೆ. ಕರ್ಮಗಳುಳ್ಳ ಮರುತ್‌ಗಳು ಇಂದ್ರನಿಗೆ ಬಲದಾಯಕರು. ಇಂದ್ರನು ಜಠರ ಪೂರ್ತಿ ಸೋಮ ರಸ ತುಂಬಿಕೊಳ್ಳುತ್ತಾನೆ. ತನ್ನನ್ನು ಇತರ ದೇವತೆಗಳನ್ನು ಪೂಜಿಸುವವರಿಗೆ ಮರುತ್‌ಗಳೊಡಗೂಡಿ ಮನ ಬಂದಂತೆ ಅನುಗ್ರಹಿಸುತ್ತಾನೆ. ಅಂತಹವರ ಕೊಟ್ಟಿಗೆಗಳನ್ನು ಗೋವುಗಳಿಂದ ತುಂಬುತ್ತಾನೆ.

ದಾನರಹಿತ ಲೋಭಿಯ ಅನ್ನಸಂಪತ್ತು ಅಪಹರಿಸುತ್ತಾನೆ. ದೇವತಾತ್ಮ ಇಂದ್ರಾ ಮರುತ್‌ಗಳು ಉನ್ನತ ಸ್ಥಾನದಲ್ಲಿದ್ದು ದ್ಯಾವಾ ಪೃಥ್ವಿಗಳನ್ನು ಪ್ರಕಾಶಿಸುತ್ತಾರೆ. ದೇವತೆಗಳ ಮುಖ್ಯಸ್ಥ ಇಂದ್ರನು ದರ್ಶನೀಯ. ದ್ಯುಲೋಕದಿಂದ ಭೂಲೋಕಕ್ಕೆ ಇಳಿಯುತ್ತಾನೆ. ಪರ್ವತ ಭೇದಿಸಿ ಗೋವುಗಳನ್ನು ಬಿಡಿಸಿ ಕರುಗಳಿಂದ ಒಂದುಗೂಡಿಸಿದನು. ಪಂಚ ಜನರಿಗೂ ಸುಖಕರನಾದ ಇಂದ್ರ ಅವರವರುಗಳನ್ನು ಆಯಾಯ ಕರ್ಮಗಳಲ್ಲಿ ಪ್ರಚೋದಿಸುತ್ತಾನೆ. ಪ್ರಭೂತ ಅನ್ನ ಹೊಂದಿರುವವನು, ಬೇಕಾದವರು ಅಧಿಕ ಸ್ತುತಿ ನಿರ್ಮಿಸುವವರು ಯಜ್ಞ ಮಾಡುವವರು, ಪೂಜೆ ಸಲ್ಲಿಸುವವರು, ಸೋಮ ಹಿಂಡುವವರು, ಇಂದ್ರನಿಗೆ ಬೇಕಾದವರು. ಮರುತ್‌ಗಳು ತೇಜಸ್ಸನ್ನು ಧರಿಸುತ್ತಾರೆ. ಮನು ಅರ್ಪಿಸಿದ ಮೂರು ದ್ರೋಣ ಕಲಶ ಸೋಮಪಾನ ಮಾಡಿ ಇಂದ್ರನು "ವೃತನ ವಧೆಗೆ ಶಕ್ತಿ ಪಡೆದನು. ಮರುತ್‌ಗಳು ಶತ್ರುಗಳಿಗೆ ಅಭಿಮುಖವಾಗಿ ಓಡುತ್ತಾರೆ. ಮಹಾಮಹಿಮ ಪೂರ್ಣ ಪ್ರಜ್ಞೆವುಳ್ಳ ಮಾನವರಿಗೆ ಪ್ರಭು. ಯಜ್ಞಾರ್ಹರು ಯಾರು ಎಂದು ತಿಳಿದು ಅವರಿಗೆ ಸಹಾಯ ಮಾಡುತ್ತಾನೆ. ಯಾರಿಗೂ ಹೆದರದೆ ಯೋಗ್ಯ ರೀತಿಯಿಂದ ಇದ್ದು ಹವಿಸ್ಸು ಅರ್ಪಿಸಿದರೆ ತಿರಸ್ಕರಿಸದೆ ಸ್ವೀಕರಿಸುತ್ತಾನೆ. ಯಜಮಾನರ ಧನ ವೃದ್ಧಿಸುತ್ತಾನೆ. ರಥ ರಕ್ಷಿಸುತ್ತಾನೆ. ಯಾರಿಂದ ಸ್ತುತಿತನಾಗುವನೋ, ಯಜ್ಞ ಮಾಡಲ್ಪಡುವವನೋ ಅವನು ದುಃಖಿ:ತನಾಗುವುದಿಲ್ಲ. ಶತ್ರು ಭಯ ಇಲ್ಲದೆ ಸುಖವಾಗಿ ಇರುತ್ತಾನೆ. ಪ್ರಾಣಿಗಳ ಆಹಾರವನ್ನೆಲ್ಲಾ ಕಿತ್ತು ತಿನ್ನುತ್ತಿದ್ದ ರಾಕ್ಷಸನನ್ನು ವಜ್ರಾಯುಧದಿಂದ ಕೊಂದಿದ್ದಾನೆ. ಉದಕ ತಡೆಹಿಡಿದು ತೊಂದರೆ ಕೊಡುತ್ತಿದ್ದ ರಾಕ್ಷಸ 'ಅಹಿ'ಯನ್ನು ಸಂಹಾರ ಮಾಡಿ ಉದಕ ಸರಾಗವಾಗಿ ಹರಿದು ಸಮುದ್ರ ಸೇರುವಂತೆ ಮಾಡಿದನು. ಈ ರಾಕ್ಷಸ ಸಂಹಾರ ನಂತರ ದೇವತೆಗಳು ಇಂದ್ರನನ್ನು ಸ್ತುತಿಸಿ ಪೂಜಿಸಿದರು. ವಜ್ರಾಯುಧವು ಇವರ ಬಾಹುಗಳಲ್ಲಿ ಪ್ರಕಾಶಿಸುತ್ತದೆ. ವೃತ್ರಾಸುರ ವಧೆ ಮಾಡಿದ್ದಾನೆ. ಆಗ ದೇವತೆಗಳು ಇಂದ್ರನನ್ನು ಸ್ವಾಮಿ ಎಂದು ಕರೆದರು. ವೃಷ್ಟಿ ಚೇತಕ ಇಂದ್ರ, ಶತ್ರುಗಳನ್ನು ಮುನ್ನುಗ್ಗಿ ಧ್ವಂಸ ಮಾಡುತ್ತಾನೆ. ಶ್ರೇಷ್ಟ ಧನಿ, ಶತ್ರು ಸೈನ್ಯಗಳ ಮಧ್ಯೆಯೂ ಪಂಚಜನರನ್ನು ಸಂಪೂರ್ಣವಾಗಿ ರಕ್ಷಿಸುತ್ತಾನೆ.

ಸೋಮದಿಂದ ತೃಪ್ತಿಗೊಂಡು ವಜ್ರಾಯುಧಧಾರಿಯಾಗುತ್ತಾನೆ. ಸ್ತುತಿ, ಸೋಮ ಸ್ವೀಕರಿಸಿದ ನಂತರವೇ 'ವಲ' ಎಂಬ ರಾಕ್ಷಸನಿಂದ ಗೋವುಗಳು ತಡೆಹಿಡಿದಿದ್ದ ಜಾಗದ ಬಾಗಿಲು ತೆರೆಯಿತು. ಸೋಮ ಅರ್ಪಿಸುವ ಯಜಮಾನನ ಸಹಾಯಾರ್ಥ ಸುಖಕರ ಅಶ್ವರಥದಲ್ಲಿ ಸಕಲ ಧನ ಸೇನೆಗಳೊಡನೆ ಅವನನ್ನು ಹುಡುಕಿಕೊಂಡು ಅವನ ಮನೆಗೆ ಬರುತ್ತಾನೆ. ಸೋಮ ಹಿಂಡುವವರನ್ನು ಕಂಡರೆ ಬಲು ಪ್ರೀತಿ. ಅವರನ್ನು ಅಧಿಕ ಬಲಯುತರನ್ನಾಗಿ, ಸಂಪತ್‌ಯುಕ್ತರನ್ನಾಗಿ ಮಾಡುತ್ತಾನೆ. ಹೊಂಬಣ್ಣದ ರೂಪಿ, ಹೊಂಬಣ್ಣದ ಅಶ್ವವುಳ್ಳವನು, ಹಿತರಾದವರಿಗೆ ಧನ ತುಂಬುತ್ತಾನೆ. ಗೋವುಗಳನ್ನು ರಕ್ಷಿಸಿ ಗೋ ಸಂಪತ್ತನ್ನು ಯಾಜ್ಞಿಕರಿಗೆ ನೀಡುತ್ತಾನೆ.

# ಇಂದ್ರದೇವರು

## ಮಂಡಲ 5 - ಅತ್ರಿ ಋಷಿಗಳು (ಆಶ್ರಮ ವಿಭಾಗ)

ಅತ್ಯುತ್ತಮ ಸ್ತುತಿಗಳಿಂದ ಸ್ತುತಿಸುತ್ತಾರೆ. ಕರ್ಮಗಳನ್ನು ಆಚರಿಸುತ್ತಾರೆ, ಪೂಜಿಸುತ್ತಾರೆ. ಇಂದ್ರನನ್ನು ಯಜ್ಞದಲ್ಲಿ ಪೂಜಿಸುತ್ತಾರೆ. ವಿನಯದಿಂದ ನಮಸ್ಕರಿಸುತ್ತಾರೆ. ಇಂದ್ರನ ಶತ್ರುನಾಶಕ ಬಲವನ್ನು ಯಾರೂ ತಿಳಿಯಲಾರರು, ಇಂದ್ರನನ್ನು ಮೊದಲು ಸೋಮಪಾನ ಮಾಡಲು ಹೇಳುತ್ತಾರೆ. ಇಂದ್ರಾ ಮರುತ್‌ಗಳಿಬ್ಬರನ್ನು ಆಹ್ವಾನಿಸುತ್ತಾರೆ. ಇಂದ್ರಾಗ್ನಿಗಳನ್ನು ಒಟ್ಟಾಗಿ ಹವಿಸ್ಸಿನಿಂದ, ಸ್ತುತಿಗಳಿಂದ ಸೋಮದಿಂದ ಸೇವಿಸುತ್ತಾರೆ. ಆಶ್ರಮದಲ್ಲಿ ಇರುವವರು ಉತ್ತಮ ಜ್ಞಾನಿಗಳಾಗಿರುತ್ತಾರೆ. ಉತ್ತಮ ಕರ್ಮನಿರತರಾಗಿರುತ್ತಾರೆ. ಋಷಿಗಳು ಕಾವ್ಯಾತ್ಮಕರಾಗಿರುತ್ತಾರೆ. ದೇವತೆಗಳಿಗಾಗಿ ಕಲ್ಲುಗಳಿಂದ ಜಜ್ಜಿ ಹಿಂಡಿದ ಸೋಮರಸ ಸಿದ್ಧಪಡಿಸಿರುತ್ತಾರೆ. ದ್ಯಾವಾ ಪೃಥ್ವಿಗಳು ಇಂದ್ರನ ಶಕ್ತಿ ಬಲದಿಂದಲೇ ಚಲಿಸುತ್ತವೆ. ದರ್ಭಾಸನವನ್ನು ಕಲ್ಪಿಸಿ ಆದರದಿಂದ ದೇವತೆಗಳನ್ನು ಆಹ್ವಾನಿಸುತ್ತಾರೆ. ಧನಾಪೇಕ್ಷೆಗಳಿಂದ ಕರ್ಮಗಳನ್ನು ಮಾಡುತ್ತಾರೆ. ದಾರಿದ್ರ್ಯ ಬಯದಿಂದ ಧನ ದಾನ್ಯಗಳ ಅಪೇಕ್ಷೆಯಿಂದ ಆಶ್ರಮಗಳಲ್ಲಿನ ಕರ್ಮಗಳನ್ನು ಮಾಡುತ್ತಾರೆ. ಇಂದ್ರನು ಪಂಚಜನರನ್ನು ರಕ್ಷಿಸುತ್ತಾನೆ. ಪುರಾತನ ಸ್ತುತಿಗಳಿಂದ ಪೂಜಿಸುತ್ತಾರೆ. ಮರುತ್‌ಗಳನ್ನು ಪೂಜಿಸುತ್ತಾರೆ. ಮರುತ್‌ಗಳೊಡನೆ ಬಂದು ಸೋಮಪಾನ ಮಾಡಲು ಇಂದ್ರನನ್ನು ಪ್ರಾರ್ಥಿಸುತ್ತಾರೆ. ಯಜಮಾನನು ಮೊದಲು ನದಿಗೆ ಇಳಿಯುತ್ತಾನೆ. ಶಸ್ತ್ರಮಂತ್ರಗಳಿಂದ ಇಂದ್ರ ಮತ್ತು ಇತರೆ ದೇವತೆಗಳನ್ನು ಸಮೀಪಿಸುತ್ತಾರೆ.

★ ಅಸುರ ಪುತ್ರ ಸ್ವಭಾರ್ಯುವು ಸೂರ್ಯನನ್ನು ಮಾಯೆಯಿಂದ ಆವರಿಸಿ ಕರ್ಮ ನಿರೋಧಿಸಲು ಮರೆ ಮಾಡಿದನು. ಮೂರು ಲೋಕಗಳು ಚದುರಿದವು. ಅವರುಗಳಿಗೆ ಅವರವರ ನಿವಾಸ ಸ್ಥಾನ ತಿಳಿಯದಾಯಿತು. ಅಸುರನು ಆದಿತ್ಯನ ಅಧ: ಪ್ರದೇಶವನ್ನೆಲ್ಲಾ ಅಂಧಕಾರ ಮಾಡಿ ಶಕ್ತಿನಾಶಮಾಡಿದನು. ★ ಆಗ ಬ್ರಹ್ಮಜ್ಞಾನಿಯಾದ ಅತ್ರಿ ಋತ್ರಿಯು ದೇವತೆಗಳನ್ನು ಸ್ತೋತ್ರಗಳಿಂದ, ಹವಿಸ್ಸಿನಿಂದ, ಸೋಮದಿಂದ ತೃಪ್ತಿಪಡಿಸಿ ಸೂರ್ಯ ಮಂಡಲದ ವರ್ಚಸ್ಸನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು. ಅಸುರರ ಮೋಹಕ ಶಕ್ತಿಯನ್ನು ನಿವಾರಿಸಿ ಸೂರ್ಯನನ್ನು ಪುನಹ ಪಡೆದರು. ಇಂದ್ರನ ಮಹಿಮೆಯನ್ನು ಇತರರಿಗೆ ಪ್ರಕಟಿಸಲು ಹೇಳಿದ್ದಾರೆ. ಇಂದ್ರನು ಯಜಮಾನನ ಸಹಾಯಕ್ಕೆ ಬರುತ್ತಾನೆಂದು ತಿಳಿಯಿರಿ ಎಂದಿದ್ದಾರೆ. ★ಮೇಧಾವಿ ಋಷಿಗಳು ಪ್ರಜೆಗಳಿಂದ ಸಾವಿರಾರು ಗೋವುಗಳನ್ನು ಗೃಹ ಸಾಧನ ಸಂಪತ್ತುಗಳನ್ನು, ಹಿರಣ್ಯಾದಿಗಳನ್ನು ಪಡೆದಿದ್ದಾರೆ. ★ಸ್ತುತಿಸುವವರಿಗೂ ಧನ, ಅಲಂಕಾರಾಭರಣಗಳನ್ನು ನೀಡಿದ್ದಾರೆ. ಧಾನಿಗಳು ಕಾಂತಿಯುತ ಶುಭ್ರ ವರ್ಣದ ಅಶ್ವಗಳನ್ನು ನೀಡಿದ್ದಾರೆ. ಯೋಗ್ಯರಿಂದ ಅತ್ರಿಋಷಿಗಳಿಗೆ ಪುಷ್ಟಿಯಾದ ಅನ್ನ ದೊರಕಲಿ ಎಂದು ಇಂದ್ರನಲ್ಲಿ ಪ್ರಾರ್ಥಿಸಿದ್ದಾರೆ. ಅತ್ರಿ ವಂಶಜರನ್ನು (ಅ) ವಂಚಕರು (ಆ) ಅಸುರರು (ಇ) ಭಯಾನಕ ಕತ್ತಲು ತೊಂದರೆ ಮಾಡದಿರಲಿ. ಇಂದ್ರನನ್ನು ಬಯಸುವವರು ಪಾಪ ಆಚರಿಸದಿರಲಿ. ★ ದೈವಭಕ್ತಿಇಲ್ಲದವರು, ದುರಭಿಮಾನಿಗಳು, ಕೆಟ್ಟಜನರು, ಇವರನ್ನು ಇಂದ್ರನು ಇಚ್ಛಿಸುವುದಿಲ್ಲ. ★ ಸೋಮರಾಜನು ದ್ಯುಲೋಕ, ಪೃಥ್ವಿ ಹಗಲೂ, ರಾತ್ರಿ, ನೀರು, ಓಷದಿಗಳಲ್ಲಿ ಇದ್ದಾನೆ. ಸೋಮವನ್ನು ಉಷಕಾಲದಲ್ಲೆ ಸಿದ್ಧಪಡಿಸುತ್ತಾರೆ. ಸ್ತೋತ್ರಗಳನ್ನು ಮಾಡುತ್ತಾರೆ. ಸ್ತುತಿಗಳಿಂದ ಇಂದ್ರನನ್ನು ಹರ್ಷಗೊಳಿಸುತ್ತಾರೆ. ಸೋಮ ಹಿಂಡುವ ಕಾರ್ಯ ತತ್ಪರರಾಗಿರುತ್ತಾರೆ. ಸ್ತೋತ್ರದಿಂದ ಪ್ರಸನ್ನನಾಗಿ ಧನ ಕೊಡುವ ಇಂದ್ರನ ಮಹಾತ್ಮವನ್ನು ತಿಳಿದವರು ಮಾತ್ರವೇ ಇಂದ್ರನನ್ನು ಸ್ತುತಿಸುತ್ತಾರೆ.

# ಇಂದ್ರದೇವರು

## ಮಂಡಲ 5 - ಅತ್ರಿ ಋಷಿಗಳು (ಪ್ರಾರ್ಥನಾ ವಿಭಾಗ)

ಕರ್ಮನಿರತ ಯಜಮಾನನ ಗೃಹಕ್ಕೆ ಮಹತ್ವದ ಧನ ಸೇರಿಸಿ ರಕ್ಷಿಸಲಿ. ಆಪ್ತ ಮಿತ್ರನಂತೆ ಇಂದ್ರನು ಬರಲಿ, ಸೋಮದಿಂದ ತೃಪ್ತನಾಗಲಿ, ಅಧಿಕ ಪ್ರೀತಿಯಿಂದ ಪೂಜಿಸುವ ಯಾಚಿಸುವ ಸಖ ಯಜಮಾನನಲ್ಲಿಗೆ ಅನುಗ್ರಹ ಬುದ್ಧಿಯಿಂದ ಇಂದ್ರನು ಅಶ್ವಾರೂಢನಾಗಿ ಬರಲಿ ಮಾನವರಿಗೆ ಶಕ್ತಿ ಕೊಡುವುದಕ್ಕಾಗಿ ಮರುತ್‌ಗಳೊಡಗೂಡಿ ಪೃಥ್ವಿಯ ಸಮಸ್ಯೆಗಳನ್ನು ಪರಿಹರಿಸಲು ಧಾವಿಸಲಿ. ಯಜಮಾನರ ಶತ್ರುಗಳನ್ನು ಸೋಲಿಸಿ ರಕ್ಷಿಸಲಿ. ಇಂದ್ರನನ್ನು ಒಮ್ಮೆ ಅಪೇಕ್ಷಿಸಿದವರು ಪುನ: ಪುನ: ಅಪೇಕ್ಷಿಸುತ್ತಾರೆ. ಯಜಮಾನರುಗಳಿಗೆ ಬರಲಿ, ಸ್ತೋತ್ರ ಮಾಡುವವರನ್ನು ಶಕ್ತಿಯುತರನ್ನಾಗಿ ಮಾಡಲಿ, ಬಲಶಾಲಿಗಳನ್ನಾಗಿ ಮಾಡಲಿ, ಯಜಮಾನಾಭಿಮುಖನಾಗಲಿ, ಧನಕ್ಕಾಗಿ, ಉದಕಗಳಿಗಾಗಿ ಪ್ರಾರ್ಥಿಸಿದ್ದಾರೆ. ರಕ್ಷಣೆಗಳಿಗಾಗಿ ಶತ್ರು ನಾಶಕ್ಕಾಗಿ ಪ್ರಾರ್ಥಿಸಿದ್ದಾರೆ. ಪ್ರಭೂತ ಧನ ಅನ್ನಗಳಿಗಾಗಿ ಬೇಡಿದ್ದಾರೆ. ತಾವು ನಿರ್ಮಿಸಿದ ಸ್ತುತಿಗಳಿಂದ ತೃಪ್ತಿ ಹೊಂದಲಿ, ಸಂಪತ್ತು ಬಯಸುವವರಿಗೆ ಧನಿಕರಾದ ತನ್ನವರಿಂದ ಧನ ಸಿಕ್ಕುವಂತೆ ಮಾಡಲಿ. ಪೂಜ್ಯ ಧನವನ್ನು ಎರಡೂ ಕೈಗಳಿಂದ ತುಂಬಿ ಕೊಡಲಿ. ಸೋಮ ಸೇವಿಸಲು, ರಕ್ಷಿಸಲು, ಇಂದ್ರನು ಧಾವಿಸಲಿ, ಮಧ್ಯಂದಿನ ಸವನದಲ್ಲಿ ಯಜಮಾನನನ್ನು ವರುಣನೊಡನೆ ಬಂದು ರಕ್ಷಿಸಲಿ, ಉತ್ತಮ ರಕ್ಷಣೆ ಧನ ಸಂಪತ್ತು ಬೇಡಿದ್ದಾರೆ.

★ ★ ★ ★ ★ ★ ★ ★ ★ ★ ★ ★ ★ ★

# ಇಂದ್ರದೇವರು

## ಮಂಡಲ 6 - ಭರದ್ವಾಜ ಋಷಿಗಳು (ಸ್ತೋತ್ರ ವಿಭಾಗ)

ಅನ್ನವಂತ, ಅಶ್ವಗಳ ಸ್ಥಾಪಕ, ಅಹಿಂಸಕ, ಅಶ್ವಯುಕ್ತ, ಅಪ್ರತಿಹತ, ಅನುಗ್ರಹ ಬುದ್ಧಿಯವನು, ಅತ್ಯಧಿಕ ಧಾನಿ, ಅನೇಕರಿಂದ ಆಹ್ವಾನಿತ, ಅಚಲ ಪರ್ವತವನ್ನು ಛೇದಿಸಿ ಗೋವುಗಳನ್ನು ಬಿಡಿಸಿ ಅವುಗಳಲ್ಲಿ ಕ್ಷೀರ ತುಂಬುವಂತೆ ಮಾಡಿದನು. ವ್ಯರ್ಥ ಕಾರ್ಯ ಮಾಡದವನು. ಅನೇಕರನ್ನು ಆಪತ್ತಿನಿಂದ ರಕ್ಷಿಸಿದ್ದಾನೆ. ಪ್ರಚಂಡ ರಾಕ್ಷಸರನ್ನು ನಾಶಮಾಡಿದ್ದಾನೆ. ಅತ್ಯಂತ ಧನವಂತ, ಅಂದಕಾರ ಆವರಿಸಿದಾಗ ಸೂರ್ಯನಿಂದ ಪ್ರಕಾಶವಾಗುವಂತೆ ಮಾಡಿದನು ಇಂದ್ರ. ಅನ್ನಗಳಿಗೆ ಇಂದ್ರನು ವಿಭಾಗಕರ್ತನಾಗಿದ್ದಾನೆ. ಅಶ್ವಗಳು ಉತ್ತಮ ಚಕ್ರದ ಆದರಣೆಗೆ ಪಾತ್ರವಾದ ರಥಕ್ಕೆ ಸೇರಿ ಇಂದ್ರನನ್ನು ಯಜ್ಞಾಭಿಮುಖ ಹವಿರಭಿಮುಖ ಕರೆತರುತ್ತವೆ. ಅಸುರರ ಮೇಲೆ ಆಕ್ರಮಣ ಮಾಡಿ ಅಪರಿಮಿತ ಜಯ ನೀಡುತ್ತಾನೆ. ಆಂಗೀರಸ್ಸುಗಳಿಂದ ಸ್ತುತಿತನಾಗಿ ಫಣಿಗಳಿಂದ ಅಪಹೃತ ಗೋವುಗಳನ್ನು ವಾಪಸ್ಸು ಬರುವಂತೆ ಮಾಡಿದನು ಆಗ ಅವು ಸ್ವತಂತ್ರವಾಗಿ ಓಡಾಡತೊಡಗಿದವು. (ಇಂದ್ರನು ಗೋವುಗಳನ್ನು ಪಡೆಯಲು ಅಪೇಕ್ಷಿಸಿ 'ವಲ' ನಿರ್ಮಿತ ಪರ್ವತವನ್ನು ಸೀಳಿ ಫಣಿಗಳನ್ನು ಪ್ರತಿಭಟಿಸಿ ನಂತರ ನಾಶ ಮಾಡಿದನು.) ಇಂದ್ರನಲ್ಲಿ ಎಲ್ಲವೂ ಇದೆ ಎನ್ನುತ್ತಾರೆ ಋಷಿಗಳು. ಇಷ್ಟಾರ್ಥಪ್ರದ. ಇವನನ್ನು ಸೋಲಿಸುವವರು ಇಲ್ಲ, ಇಂದ್ರ ಸಖ್ಯವು ಎಂದೂ ನಾಶವಾಗುವುದಿಲ್ಲ, ಇಂದ್ರನು ಧನ ನೀಡುತ್ತಾನೆ.

ಉದಾರ ದಾನಿ, ಉದಾರ ಮನಸ್ಸಿನಿಂದ ಯಜ್ಞ ಯಾಗಾದಿಗಳಿಗೆ ಹೊರಡುತ್ತಾನೆ. ಉತ್ಪನ್ನವಾದೊಡನೇ ಹರುಷಕ್ಕಾಗಿ ಸೋಮಪಾನ ಮಾಡಿದನು. ಉಷೆಯ ಪ್ರಭಾವವನ್ನು ಯಜಮಾನರು ಅರಿಯುತ್ತಾರೆ. ಉಷಸ್ಸುಗಳು ಇಂದ್ರನನ್ನು ಬೆಳಗುತ್ತವೆ. ಉತ್ತಮ ಮಂತ್ರ ಫಠಿಸುವವರನ್ನು ವೃದ್ಧಿಗೊಳಿಸುತ್ತಾನೆ. ಉದಕ ಗೋವುಗಳನ್ನು ಆಯಾಯ ಸ್ಥಳಗಳಲ್ಲಿ ಇರುವಂತೆ ಮಾಡುತ್ತಾನೆ. ಕಾಮವರುಷಕ, ಕವಿಗಳಲ್ಲಿ ಉತ್ತಮ ಕವಿ. ಕಾಂತಿಯುತ.

ಗೋಪಾಲಕ, ಗೋವು, ಅಶ್ವ, ಸಖಿತ್ವ ಕರುಣಿಸುತ್ತಾನೆ. ಗೋವುಗಳು ಇಂದ್ರನ ರೂಪವೇ ಆಗಿವೆ. ಗೋವುಗಳು ಕದಿಯಲ್ಪಡದಿರಲಿ, ನಾಶವಾಗದಿರಲಿ, ಶತ್ರುಗಳು ಗೋವುಗಳ ಮೇಲೆ ಬೀಳದಿರಲಿ, ರುದ್ರನ ಆಯುಧವು ಅವುಗಳ ಮೇಲೆ ಬೀಳದಿರಲಿ, ಯಜ್ಞದಲ್ಲಿ ಅವು ಛೇದಿತವಾಗದಿರಲಿ. ದುಷ್ಟಪ್ರಾಣಿಗಳು ಅವುಗಳ ಮೇಲೆ ಬೀಳದಿರಲಿ, ಗೋವುಗಳಿಗೆ ಪ್ರಭೂತ ಅನ್ನ ಅರ್ಪಿತವಾಗಲಿ, ಒಳ್ಳೆಯ ಹುಲ್ಲು ಮೇಯಲಿ, ನಿರ್ಮಲ ಉದಕ ಕುಡಿಯಲಿ, ಗೋವುಗಳು ಮೊದಲರ್ಪಿತ ಸೋಮಕ್ಕಾಗಿ

ಕ್ಷೀರ ಒದಗಿಸಲಿ. ಗೋವು ನಿಮಿತ್ತವಾಗಿ ಆಂಗೀರಸರು ಪದೇ ಪದೇ ಸ್ತೋತ್ರ ಮಾಡಿದ್ದರಿಂದ ಇಂದ್ರನು ಗೋವುಗಳನ್ನು ಬಿಡಿಸಿದನು. ಗೋವುಗಳಿಗೆ ಹುಲ್ಲುಗಾವಲು ಸುಖದಾಯಕವಾಗಿರುವಂತೆ ಇಂದ್ರನಿಗೆ ಸ್ತೋತ್ರಗಳು ಸುಖದಾಯಕವಾಗಿರುತ್ತವೆ. ಗೋವಿನ ಹಾಲಿನಂತೆ ಸಂಪತ್ಭರಿತನಾಗಿರುತ್ತಾನೆ.

ಜನ್ಮಪಡೆದ ಸಕಲರಿಗೂ ಪ್ರಭು ಇಂದ್ರ. ತಡೆಯಲ್ಪಟ್ಟ ಉದಕವು ಹರಿದು ಸಮುದ್ರವನ್ನು ಸೇರಿತು. ತ್ರಿಲೋಕ ರಕ್ಷಕ,ತುರ್ವಶ ಮತ್ತು ಯದು ಎಂಬುವವರು ಸಮುದ್ರದಲ್ಲಿ ಮುಳುಗಿದಾಗ ಅವರನ್ನು ರಕ್ಷಿಸಿದನು. ದೇವತೆಗಳಿಂದ ಕೊಡಲ್ಪಟ್ಟ ಸಕಲ ಐಶ್ವರ್ಯ ಎಲ್ಲವೂ ಇಂದ್ರನ ಅನುಗ್ರಹವೇ. ದುರ್ಜನರನ್ನು ವೀರರಿಂದೊಡಗೂಡಿ ಹಿಂಸಿಸುತ್ತಾನೆ. ದಿವೋದಾಸನಿಗೆ ಅನೇಕ ರಕ್ಷಣೆಗಳನ್ನು ಕೊಟ್ಟಿದ್ದಾನೆ. ದೇವ ಪೂಜಿತ ಯಜಮಾನನಿಗಾಗಿ ಅಪೇಕ್ಷಿತ ಧನವನ್ನು ಸಂಪಾದಿಸಿ ಕೊಡುತ್ತಾನೆ. ದ್ಯಾವಾ ಪೃಥ್ವಿಗಳು, ದೇವತೆಗಳು ಇಂದ್ರನ ಶಕ್ತಿಯನ್ನು ಪ್ರಶಂಸಿಸಿದ್ದಾರೆ. ದ್ಯಾವಾ ಪೃಥ್ವಿಗೆ ಸೇರಿದ ಧನಕ್ಕೆಲ್ಲಾ ಒಡೆಯ. ಧನ ಮತ್ತು ವೀರಪುತ್ರರನ್ನು ನೀಡುತ್ತಾನೆ. ದ್ಯಾವಾ ಪೃಥ್ವಿಗಳನ್ನು ಮೀರಿ ನಿಂತಿದ್ದಾನೆ. ಧನದಾತ, ದೇವಮುಖ್ಯ, ದ್ಯುಲೋಕ ವಾಸಿ, ಧನವಂತ. ನೀಲವರ್ಣದವನು, ನಿಂದಿತವಲ್ಲದ ರಕ್ಷಣೆ ಮಾಡಿ ಮಿತ್ರನಾಗಿರುತ್ತಾನೆ. ನೇರ ಗಮನಿ, ಯಜಮಾನನಿಂದ ಪ್ರಾರ್ಥಿತನಾದಾಗ ಸಹಾಯ ಮಾಡುತ್ತಾನೆ.

ಪರ್ವತವನ್ನು ಬೇಕಾದರೂ ಚಲಿಸುವಂತೆ ಮಾಡುತ್ತಾನೆ. ಪ್ರಾಣಿಗಳ ಅಹಿಂಸಕ, ಪಿತೃ, ಪಿತಾ ಮಹರಿಗೆ ಯಾವಾಗಲೂ ಸುಖ ಕಾರಕನಾಗಿರುತ್ತಾನೆ. ಪ್ರಾಣಿಗಳಿಗೆ ಅದ್ವಿತೀಯ ಒಡೆಯ, ಪ್ರಕಾಶರಹಿತ ಲೋಕವನ್ನು ಸತ್ಯಾತ್ಮಕ ತೇಜಸ್ಸಿನಿಂದ ವ್ಯಾಪಿಸಿ ಪ್ರಕಾಶಗೊಳಿಸುತ್ತಾನೆ. ಪ್ರಶಂಸಿಸುವವರು ಯಾಗಾದಿ ಕರ್ಮ ಮಾಡುವವರು ಇವರುಗಳು ಸುಖ ಹೊಂದುವುದರೊಂದಿಗೆ ಶತ್ರುಗಳನ್ನು ಜಯಿಸುತ್ತಾರೆ. ★ ಪರ್ವತದಿಂದ ಹೊರ ಹೊರಟ ದುರಭಿಮಾನಿ ಶಂಭರಾಸುರ ಎಂಬ ರಾಕ್ಷಸನನ್ನು ಅವನ ಶತಸಂಖ್ಯಾತ ರಾಕ್ಷಸರನ್ನು ಸಂಹರಿಸಿದನು. ಪ್ರಜಾ ಹಿತಕ್ಕಾಗಿ ಅವರ ಅಭಿಮುಖನಾಗುತ್ತಾನೆ. ಪರ್ವತದ ಮಧ್ಯೆ ದೃಢವಾಗಿ ಬಂಧಿತವಾಗಿದ್ದ ಗೋವುಗಳನ್ನು ಸೋಮಪಾನ ತೃಪ್ತಿಯಿಂದ ಬಿಡಿಸಿದನು. ಪ್ರಭೂತ ಧನದೊಡೆಯ. ಪ್ರಜೆಗಳ ಒಡೆಯ, ಪರ್ವತ ಭೇದಕ, ಪಾಪ ನಾಶಕ, ಪರಿಶುದ್ಧ ಪುರಾತನ, ಪೂಜ್ಯ, ಪ್ರಸಿದ್ಧ ಪ್ರಶಂಸೆಯಿಂದ ಅಭಿಮುಖನಾಗುತ್ತಾನೆ, ಪ್ರಕಾಶಮಾನಿ, ಪರಾಕ್ರಮಿ, ಪೃಥ್ವಿಯನ್ನು ವ್ಯಾಪಿಸಿ ದ್ಯುಲೋಕವನ್ನು ಎತ್ತಿ ಹಿಡಿದಿದ್ದಾನೆ. ಪರ್ವತಗಳು ಇಂದ್ರನಿಂದ ಅಚಲವಾಗಿ ನಿಂತಿವೆ. ಭಯಂಕರ ಬಲಶಾಲಿ, ಭಕ್ತ ರಕ್ಷಕ, ಭೂಮಿಗೆ ವೃಷ್ಟಿದಾನ ದಿಂದ ಕಾಮವರ್ಷಕನಾಗಿದ್ದಾನೆ. ಭಾರ್ಗವ ಋಷಿಯನ್ನು ಯುದ್ಧದಲ್ಲಿ ಹುರಿದುಂಬಿಸಿದನು.

ಮಹತ್ ರೂಪಿ, ಮಾರ್ಗದರ್ಶಕ, ಮೇಧಾವಿ, ಮಹಾತ್ಮ, ಮದಕಾರಕ, ಮರಣರಹಿತ, ಮಂಗಳಕರ, ಮಹತ್ ಶರೀರಿ, ಮಾನವರಲ್ಲಿ ಅದ್ವಿತೀಯ. ★ ಮರುತ್‌ಗಳೊಡಗೂಡಿ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರಗಳಿಂದ ಬಲವನ್ನು ಯಜಮಾನನಿಗೆ ಸೇರಿಸುತ್ತಾನೆ. ಮಹತ್ವವುಳ್ಳ ದೇವತೆಗಳಲೆಲ್ಲಾ ಪ್ರಧಾನನಾದವನು. ಮಹತ್ ಸಂಗ್ರಾಮದಲ್ಲಿ ಯಜಮಾನನ ರಕ್ಷಕ. ★ ಮೇಘ ಸೀಳಿ ರುದ್ರಾಸುರನಿಂದ ಉದಕ ಬಿಡಿಸಿ ಉದಕಸ್ಥ ವೃತ್ರನನ್ನು ಕೊಂದು ನದಿ ಪ್ರವಹಿಸುವ ಮಾರ್ಗವನ್ನು ನಿರ್ಮಿಸಿ ಪ್ರವಾಹ ಉಂಟುಮಾಡಿದನು. ಮರುತ್‌ಗಳ ಶಕ್ತಿ ಅಶ್ವಗಳು ದೇವತೆಗಳಿಂದ ಪಡೆದ ಶಕ್ತಿ ಎಲ್ಲವೂ ಇಂದ್ರನನ್ನು ಒಟ್ಟಾಗಿ ಸೇವಿಸುವುವು. ಮರುತ್‌ಗಳೊಡಗೂಡಿ ಇಂದ್ರನು ಹರ್ಷಕಾರಕನಾಗಿದ್ದಾನೆ. ಯುದ್ಧದಲ್ಲಿ ಅಪ್ರತಿಹತ, ಯಜಮಾನದಾರಕ, ಯಜಮಾನನಿಗೆ ಧನರೂಪಿ. ರಾಜ ವೃಷಭನಿಗೆ 10 ವರ್ಷ ಕಾಲ ಯುದ್ಧ ಸಾಮಗ್ರಿಯನ್ನು ಒದಗಿಸಿ ಅವನನ್ನು ರಕ್ಷಿಸಿದನು. ರಥವೇರಿ ವಜ್ರಾಯುಧ ಹಿಡಿದು ವಂಚಕ ಶತ್ರುಗಳನ್ನು ಎದುರಿಸಿ ನಾಶಮಾಡುತ್ತಾನೆ. ರಾಕ್ಷಸರು ಮತ್ತು ದ್ರೋಹಿಗಳಿಂದ ಆಕ್ರಮಿತ ಭೂಮಿ ಆಕಾಶಗಳಲ್ಲಿನ ಪ್ರದೇಶವನ್ನು ತನ್ನ ಪ್ರಭೆಯಿಂದ ಉರಿಯುವಂತೆ ಮಾಡಿ ಅವುಗಳನ್ನು ನಾಶ ಮಾಡುತ್ತಾನೆ.

ವೀರ ಮರುತ್‌ಗಳ ಒಡಗೂಡಿ ಇರುವವನು, ವಜ್ರಾಯುಧವನ್ನು ಸಕಾಲದಲ್ಲಿ ತ್ವಷ್ಟನು 100 ಅಲಗುಳ್ಳ ಆಯುಧವನ್ನು ನಿರ್ಮಿಸಿಕೊಟ್ಟನು. ''ವೃತ್ರಾಸುರ''ನು ಪ್ರತಿಭಟಿಸುವ ಕಾಲದಲ್ಲಿ ದೇವತೆಗಳು, ಮರುತ್‌ಗಳು ಇಂದ್ರನನ್ನು ಮುಂದಿಟ್ಟು ನಡೆದಿರು. ವೃತ್ರಾಸುರ ಸಂಹಾರದ ನಂತರ ದ್ಯುಲೋಕವು ಶಾಂತವಾಯಿತು. ಮಾಯಾವಿ ವಂಚಕ ರಾಕ್ಷಸರನ್ನು ನಾಶ ಮಾಡಿದನು. ವಜ್ರಾಧಾರಿ, ಮೇಘಗಾಮಿ, ವಸತಿದಾಯಕ, ವೃಷ್ಟಿಕರ್ಮಿ. ಶತ್ರು ನಾಶಕ್ಕಾಗಿ ಮನುವನ್ನು ಶತ್ರುವಿಗಿಂತ ಬಲಶಾಲಿಯನ್ನಾಗಿ

ಮಾಡಿದನು. ಶಸ್ತ್ರ, ಮಂತ್ರ ಪಠಿಸುವವರು ದೇವ ಸಾನಿಧ್ಯ ಪಡೆಯುತ್ತಾರೆ. ಶತ್ರುಗಳ ಜೊತೆಯಲ್ಲಿ ವೃಷಭದಂತೆ ಓಡಾಡಬಲ್ಲನು. ಶತ್ರು ಸಾಹಸವನ್ನು ವ್ಯರ್ಥಗೊಳಿಸಿ ಸೋಲಿಸುತ್ತಾನೆ. ಶತ್ರು ಧನಕ್ಕೆ ಪ್ರಭು. ಮಿತ್ರರನ್ನು ಹಿಂಸಿಸದವನು. ಶಕ್ತಿಪುತ್ರ. ಶಚಿಪತಿ, ಶಕ್ತಿದಾಯಕ, ಶತ್ರುನಾಶಕ, ಅವರು ನಡುಗುವಂತೆ ಮಾಡುತ್ತಾನೆ.

ಸಜ್ಜನ ಪಾಲಕ, ಸೋಮಪ್ರಿಯ, ಸತ್ಯ ಶಕ್ತಿವುಳ್ಳವನು, ಸರ್ವತ್ರ ಸಂಚಾರಿ, ಸ್ತುತಿಕರ್ತರಿಗೆ ಸುಖದಾಯಕ, ಸಕಲವನ್ನು ನೋಡಬಲ್ಲವನು, ಸಂಪತ್ ಸ್ವಾಮಿ, ಸರ್ವೇಶ್ವರ, ಸೃಷ್ಟಿಕರ್ತ, ಸೋಮಪಾನಿ, ಸಕಲವನ್ನು ಅರಿತವನು, ಸ್ವಾಧಾ ರೂಪಿ. ಸ್ತುತಿಗಳಿಂದ ಪ್ರೀತನಾಗುತ್ತಾನೆ. ಸ್ತುತಿಕರ್ತರಿಗೆ ಸಂಪತ್‌ಪ್ರದ. ಹೋತೃಗಳ ಕಾಮವರುಷಕ, ಹವಿಸ್ಸನ್ನು ಸ್ವೀಕರಿಸುತ್ತಾನೆ, ಹರಿನಾಮಕ ಅಶ್ವಗಳು ಇಂದ್ರನನ್ನು ವಹಿಸುತ್ತವೆ. ಹವಿರರ್ಪಿಸಿದ ರಾಜಋಷಿಗೆ ಶ್ರೇಷ್ಟರೀತಿಯ ಅಪಾರ ಧನವನ್ನು ಕೊಟ್ಟನು ಹವಿರರ್ಪಿಸುವ ಯಜಮಾನನಿಗೆ ವೃಷ್ಟಿ ಉದಕಗಳನ್ನು ಕೊಡುತ್ತಾನೆ.

## ಇಂದ್ರನ ಬಗೆಗೆ ಕಂಡುಬಂದ ವಿಶೇಷತೆಗಳು

ಭರಧ್ವಾಜರು ತಮಗೆ ಗೊತ್ತಿರುವ ಕರ್ಮಗಳಿಂದಲೇ ಹವಿರೂಪ ಧನದಿಂದ ಇಂದ್ರನನ್ನು ಪೂಜಿಸಿ ಪ್ರಶಂಸಿಸಿದ್ದಾರೆ. ದ್ಯುಲೋಕದಲ್ಲಿದ್ದರೂ, ಯುದ್ಧ ನಿರತನಾಗಿದ್ದರೂ, ''ಸೋಮಾಭಿಶ್ರವಣ''ವಾದೊಡನೆಯೇ ಯಜಮಾನನನ್ನು ಹಿಂಸಕರಿಂದ ರಕ್ಷಿಸುತ್ತಾನೆ. ಸ್ತೋತ್ರ ಜನಕ್ಕೆ ಅವರ ಪುತ್ರರಿಗೂ ದಾರಿದ್ರ ನಾಶ ಮಾಡುತ್ತಾನೆ. ಸೋಮಪಾನಿ ಇಂದ್ರ. ಸಮರ್ಥ ಯಜಮಾನರು ಕಾರ್ಯಕರ್ತರುಗಳಿಗೆ ಉತ್ತಮ ಸ್ಥಾನ ನೀಡುತ್ತಾನೆ. ಸ್ತೋತೃಗಳನ್ನು ಸುರಕ್ಷಿತ ಸ್ಥಾನಗಳಿಗೆ ರಕ್ಷಣೆಗಳೊಂದಿಗೆ ಕರೆದೊಯ್ಯುತ್ತಾನೆ. ಸಮಸ್ತ ಸ್ತ್ರೀ ಪುರುಷ ದೇವತೆಗಳನ್ನು ಸ್ತುತಿಸಿ ಪ್ರೇರಿಸಿದಾಗ ಇಂದ್ರ, ವರುಣರು ಯಜಮಾನರನ್ನು ಬಲಯುತರನ್ನಾಗಿ ಮಾಡುತ್ತಾರೆ. ದ್ಯುಲೋಕ ದೇವತೆ ಪೃಥ್ವಿ ದೇವತೆಗಿಂತ ವಿಸ್ತಾರ ರೂಪರು. ವರುಣನು ತನ್ನ ಪ್ರಸಿದ್ಧ ಕಾಂತಿಯಿಂದ ದ್ಯಾವಾ ಪೃಥ್ವಿಗಳನ್ನು ಬೆಳಗಿಸಿದನು, ಮಿತ್ರಾ ವರುಣರ ರಥವು ಯಜ್ಞಮಾರ್ಗ ಅನುಸರಿಸುತ್ತದೆ. ಇಂದ್ರ ಪ್ರಭಾವ ಭೂಲೋಕ ದ್ಯುಲೋಕಗಳಿಗಿಂತ ಅಧಿಕವಾದುದು. ಸೂರ್ಯನಿಂದ ದ್ಯಾವಾಪೃಥ್ವಿಗಳನ್ನು ಪ್ರಕಾಶಗೊಳಿಸಿದ್ದಾನೆ. ಇಂದ್ರನಲ್ಲಿ ಅವನ ರಕ್ಷಣೆಗಳೆಲ್ಲವೂ ಅಂತರ್ಗತವಾಗಿದೆ. ಸೋಮವು ಬೃಹತ್ತಾಗಿ ಬೆಳಸಲ್ಪಡುತ್ತವೆ. ಉದಕ ಭರಿತ ನದಿಗಳನ್ನು ತುಂಬಿ ಹರಿಯುವಂತೆ ಮಾಡಿದ್ದಾನೆ. ನಾನಾ ವರ್ಣದ ಗೋವುಗಳಲ್ಲಿ (ಪಯಸ್ಸು) ತುಂಬಿದ್ದಾನೆ. ಸ್ತುತಿಸುವವರು ಇಂದ್ರನಿಂದ ಧನ ಪಡೆಯುತ್ತಾರೆ. ಸೋಮಕ್ಕಾಗಿ ಸಕಲ ಕರ್ಮಗಳನ್ನು ಮಾಡುತ್ತಾರೆ. ಸೋಮಪಾನ ತೃಪ್ತಿಯಿಂದ ತ್ರಿಲೋಕದಲ್ಲೂ ಹರಡಿರುವ ಸಂಪತ್ತಿನಿಂದ ಲೋಕೋಪಕಾರಿಯಾಗಿದ್ದಾನೆ. ಸೂರ್ಯರೂಪಿನಲ್ಲಿ ಇಂದ್ರನು ಸತ್ಯಾತ್ಮಕ ತೇಜಸ್ಸಿನಿಂದ ಉಷಸ್ಸನ್ನು ವ್ಯಾಪಿಸಿದನು. ಸೂರ್ಯ ರಥವನ್ನು ಸಪ್ತ ರಶ್ಮಿವುಳ್ಳದ್ದಾಗಿ ಮಾಡಿದ್ದಾನೆ. ಸೂರ್ಯ ಚಕ್ರ ಅಪಹರಿಸಿದ ಅಸುರನನ್ನು ಹಿಂಸಿಸಿದನು ಹಾಗೂ ದೂರ ಓಡಿಸಿದನು. ಭರಧ್ವಾಜರ ಸ್ತೋತ್ರಗಳೆಲ್ಲವು ಸ್ಪರ್ಧೆಯಂಥೆ ಇರುತ್ತವೆ. ಇಂದ್ರನು ಸ್ವರ್ಗದಲ್ಲಿರುವ ದೇವತೆಗಳನ್ನು ಪೂಜಿಸುತ್ತಾನೆ. ಇಂದ್ರನ ಅನುಗ್ರಹಿತರು ಸ್ವಂತ ಬುದ್ಧಿಯಿಂದಲೇ ಗೆಲ್ಲುತ್ತಾರೆ. ಇಂದ್ರನು ದ್ಯಾವಾ ಪೃಥ್ವಿಗಳ ನಡುವೆ ಸಂಚರಿಸುವಾಗ ಮಿತ್ರರನ್ನು ರಕ್ಷಿಸುತ್ತಾನೆ. ಇಂದ್ರ ಪೂಜಿತರು ಮಾತ್ರ ಇಂದ್ರಧನ ಪಡೆಯುತ್ತಾರೆ. ಅಸುರರನ್ನು ಕತ್ತಲನ್ನು ನಾಶ ಮಾಡುತ್ತಾನೆ. ಪೃಥ್ವಿಯನ್ನು ವಿಸ್ತಾರ ಬೆಳೆಯುವಂತೆ ಮಾಡಿದ್ದಾನೆ. ಸೋಮದಿಂದ ತೃಪ್ತಿಹೊಂದಿ ಸೂರ್ಯ, ಉಷಸ್ಸುಗಳನ್ನು ಅವರವರ ಸ್ಥಾನದಲ್ಲಿ ಸ್ಥಾಪಿಸಿದ್ದಾನೆ. ಸೂರ್ಯನು ಇಂದ್ರನ ಅನುಗ್ರಹದಿಂದಲೇ ಗೋಚರಿಸುತ್ತಾನೆ. ಸ್ತೋತ್ರ, ಆಂಗೀರಸ್ಸುಗಳು ಧ್ಯಾನ ನಿರತರು, ಸಂವತ್ಸರ, ಮಾಸ, ದಿನಗಳು ವೃಷ್ಟಿಗೆ ಕಾರಣವಾಗಿರುತ್ತವೆ. ಸಂಪತ್‌ಯುಕ್ತನಾಗಿ ಅಶ್ವರಥದಲ್ಲಿ ಸಂಚರಿಸುತ್ತಾನೆ. ಸೋಮನು ವ್ಯಯಕ್ತಿಕವಾಗಿ ದ್ಯಾವಾ ಪೃಥ್ವಿಗಳನ್ನು ಸ್ಥಾಪಿಸಿದನು.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಇಂದ್ರದೇವರು

## ಮಂಡಲ 6 - ಭರದ್ವಾಜರು ಇಂದ್ರನ ಜೊತೆಯಲ್ಲಿ ಆರಾಧಿಸಿದ ಇತರೇ ದೇವತೆಗಳು (ಸ್ತೋತ್ರ ವಿಭಾಗ)

**ಸೋಮದ ಬಗೆಗೆ :** ಸೋಮಗಳು ಯಜ್ಞ ಸೇರಿ ಶುದ್ಧಿ ಹೊಂದಿ ''ದ್ರೋಣ'' ಕಲಶ ಸೇರುತ್ತವೆ. ಸೋಮವು ಅಮೃತಕ್ಕೆ ಸಮಾನ. ಸೋಮಕ್ಕೆ ಇಂದ್ರನು ಈಶ್ವರ (ಅಧಿಕಾರಿ). ಸೋಮವನ್ನು ಸುಪರ್ಣ ಎಂಬ ಪಕ್ಷಿಯು ಸ್ವರ್ಗದಿಂದ ತಂದಿತು. ಸೋಮವು ''ಲತಾರೂಪಿ''. ರಸವು ಮದಕಾರಕ, ಚೈತನ್ಯದಾಯಕ, ಫಲದಾಯಕ, ದ್ಯುಲೋಕ ಉತ್ಪನ್ನ, ಪ್ರಸಿದ್ಧ ಸೋಮವು ಯಜ್ಞದಲ್ಲಿ ಅಂದರೆ ಆಶ್ರಮಗಳಲ್ಲಿ ಹಿಂಡಲ್ಪಟ್ಟಾಗ ಅಶ್ವಗಳು ಇಂದ್ರನನ್ನು ಅಲ್ಲಿಗೆ ಕರೆತರುತ್ತವೆ. ಸೋಮಪಾನದಿಂದಲೇ ಇಂದ್ರನು ಅಸಾಧಾರಣ ಶಕ್ತಿ ಹೊಂದಿದ್ದಾನೆ. ಇಂದ್ರನ ಅಪರಿಮಿತ ಐಶ್ವರ್ಯ ಸಾಮರ್ಥ್ಯಗಳನ್ನು ಅರ್ಥಮಾಡಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಎಂತಹ ಪ್ರಬಲಶಾಲಿಯಾದರೂ ಅವನನ್ನು ಬಿಡುವುದಿಲ್ಲ. ಕರ್ಮಹೀನರನ್ನು ಕರ್ಮ ಮಾಡುವಂತೆ ಮಾಡಿ ಅವರನ್ನು ಅನುಗ್ರಹಿಸುತ್ತಾನೆ. ಯಜಮಾನರು ಗೋವುಗಳೊಂದಿಗೆ ಸುಖವಾಗಿರುವಂತೆ ಮಾಡುತ್ತಾರೆ. ಸೋಮ ಸ್ನೇಹದ ಫಲವಾಗಿ ಸೋಮದಿಂದ ತೃಪ್ತನಾದ ಇಂದ್ರನು ಋಷಿಗಳು ತಿಳಿಯಲಾಗದಂತಹ ಕರ್ಮಗಳಿಗೆ ಫಲ ನೀಡುತ್ತಾನೆ. ಸೋಮನು ಇಂದ್ರನೊಡನೆ ಸೇರಿಕೊಂಡು ಅಸುರರ ಪಡೆ ನಾಶ ಮಾಡಿದನು. ಸೋಮನು ಸೂರ್ಯನ ಮಧ್ಯೆ ತೇಜಸ್ಸನ್ನಿಟ್ಟನು. ಉಷಸ್ಸನ್ನು ಸೂರ್ಯನ ಪತ್ನಿಯನ್ನಾಗಿಸಿದನು. ಸವನ ತ್ರಯ ಮಾತ್ರರೂಪಿ. ಶ್ರದ್ಧಾ ಭಕ್ತಿಗಳಿಲ್ಲದವರ ಸ್ತೋತ್ರ ಹವಿಸ್ಸನ್ನು ಇಂದ್ರನು ಸ್ವೀಕರಿಸುವುದಿಲ್ಲ. ★ ದೇವತೆಗಳು ಸೋಮವನ್ನು ''ಚಂದ್ರರೂಪ'' ಪ್ರಜ್ಞಾಪಕವಾಗಿ ಕಲ್ಪಿಸಿದ್ದಾರೆ.

ಇಂದ್ರನಿಗಿಂತ ಸಮರಾಗಲಿ ಅಧಿಕರಾಗಲಿ, ಶ್ರೇಷ್ಠರಾಗಲಿ, ದೇವತೆಗಳಲ್ಲಿ, ಮಾನವರಲ್ಲಿ ಇಲ್ಲ. ಇದು ಸತ್ಯ. ಇಂದ್ರನಿಗೆ ಭಯಗೊಂಡು ಮೂರು ಲೋಕಗಳಲ್ಲೂ ಮಳೆ ಸುರಿಯುತ್ತದೆ. ಇಂದ್ರಾಗಮನ ಕಾಲದಲ್ಲಿ ದ್ಯಾವಾ ಪೃಥ್ವಿಗಳು, ವೃಕ್ಷಗಳು, ಸಮಸ್ತ ವಸ್ತುಗಳು ಬೀತಿಗೊಳ್ಳುತ್ತವೆ.

### ಇಂದ್ರನ ಜೊತೆಯಲ್ಲಿ ಅಗ್ನಿ

ಇಂದ್ರಾಗ್ನಿಗಳಿಬ್ಬರಿಗೂ ಪ್ರಜಾಪತಿಯೇ ತಂದೆ, ಸರ್ವತ್ರ ಸ್ಥಿತಳಾದ, ಸರ್ವತ್ರ ವ್ಯಾಪ್ತಳಾದ ಅದಿತಿಯೇ ತಾಯಿ, ಈ ಸಹೋಉತ್ಪನ್ನರು ಪ್ರಕಾಶಮಾನರು, ದೇವತಾತ್ಮರು, ಸಮಾನರು, ಮಹತ್ವವುಳ್ಳವರು, ಯಜ್ಞ ವರ್ಧಕರು, ಒಟ್ಟಾಗಿ ಸೇರಿ ಒಂದೇ ಸ್ಥಾನವುಳ್ಳವರು, ಅಹಿಂಸಕರು, ಇವರಿಂದ ಶತ್ರುಗಳು ಕೊಲ್ಲಲ್ಪಡುತ್ತಾರೆ. ಪೂಜಿತರನ್ನು ಈ ರೂಪ ದೇವತೆಗಳು ರಕ್ಷಿಸುತ್ತಾರೆ. ಇವರು ಪ್ರಸಿದ್ಧರು, ದಾತೃಗಳು, ಶತ್ರು ನಾಶಕರು, ಅನ್ನದಾತರು, ಹವಿರ್ರೂಪ ಅನ್ನ ಅಪೇಕ್ಷಿಗಳು.

### ಇಂದ್ರನ ಜೊತೆಯಲ್ಲಿ ವರುಣರು

ಇವರು ಮಹಾತ್ಮರು, ದೇವತಾತ್ಮರು, ಶೂರರು, ಉತ್ತಮ ಧನದಾತರು, ಕಾಮವರುಷಕರು, ಉದಾರ ದಾನಿಗಳು, ಅತ್ಯಧಿಕ ಬಲದಿಂದ ಶತ್ರು ನಾಶಕರು, ಕಷ್ಟಸಮಯದಲ್ಲಿ ಸ್ತುತಿಕರ್ತರ ರಕ್ಷಕರಾಗಿರುತ್ತಾರೆ.

### ಇಂದ್ರನ ಜೊತೆಯಲ್ಲಿ ವಿಷ್ಣು

ಆಕರ್ಷಕ ರೂಪಿನವರು, ಅಶ್ವವಂತರು, ಘೃತರೂಪ ಅನ್ನವಂತರು, ಅಪಜಯ ಹೊಂದದವರು, ಸೋಮ ಇಡುವ ಕಲಶ ರೂಪರು, ಒಟ್ಟಾಗಿ ಹರ್ಷ ಹೊಂದುವವರು, ಸಮುದ್ರದಂತೆ ಗಂಭೀರ ನಿಯಮವಂತರು, ಸಕಲ ಲೋಕಗಳನ್ನು ಜೀವನಕ್ಕೆ ಯೋಗ್ಯವಾಗುವಂತೆ ಮಾಡಿದ್ದಾರೆ. ಇಂದ್ರ, ವಿಷ್ಣುಸ್ತುತಿ ಆಲಿಸಲಿ, ಶಸ್ತ್ರರೂಪ ಮಂತ್ರವನ್ನು ಕೇಳಲಿ, ಹವಿಸ್ಸನ್ನು ಸ್ವೀಕರಿಸಲಿ, ಸೋಮಪಾನ ಮಾಡಲಿ.

### ಇಂದ್ರನ ಜೊತೆಯಲ್ಲಿ ಸೋಮರು

ಇವರು ಮಹಾತ್ಮರು, ಶಕ್ತಿಯುತರು, ಉದಕ ನಿರ್ಮಿಸುವವರು, ಎಲ್ಲಾ ಭೂತಜಾತಗಳ ನಿರ್ಮಾಪಕರು, ದ್ಯುಲೋಕವು ಆಧಾರಸ್ತಂಭ, ಅಂತರಿಕ್ಷ ಅವಲಂಬಿಸುವಂತೆ ಮಾಡಿದವರು, ಸೂರ್ಯ ಪ್ರಭೆಯೊಡನೆ ಉಷಸ್ ಕಾಂತಿ ಸೇರುವಂತೆ ಮಾಡಿರುವವರು, ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿ ಎಲ್ಲರಿಗೂ ಗೋಚರಿಸುವಂತೆ ಮಾಡಿದ್ದಾರೆ.

## ಇಂದ್ರಾ, ಪೂಷನ್

ಮಹತ್ ಪ್ರವಾಹ ಕಾಲದಲ್ಲಿ ಪೂಷನ್ ಇಂದ್ರನೊಡನೆ ಇರುತ್ತಾನೆ. ಇಂದ್ರನನ್ನು ಆಶ್ರಯಿಸಿರುತ್ತಾನೆ. ಕೊಂಬೆ ವೃಕ್ಷವನ್ನು ಆಶ್ರಯಿಸುವಂತೆ ರಥಿಕನು ಲಗಾಮು ಎಳೆಯುವಂತೆ ಪೂಷನ್‌ನು ಯಜಮಾನನ್ನು ಆಕರ್ಷಿಸಿ ಬರಮಾಡಿಕೊಳ್ಳುತ್ತಾನೆ. ಪೂಷನ್‌ನು ಇಂದ್ರನು ಸೋಮವನ್ನು ಅಪೇಕ್ಷಿಸುವಂತೆ ಘೃತ ಮಿಶ್ರ ಹವಿಸ್ಸಿನ ಭಾಗ ಅಪೇಕ್ಷಿಸುತ್ತಾನೆ. ಇಂದ್ರನು "ಹರಿ ನಾಮಕ" ಅಶ್ವವಾಹನ ಹೊಂದಿದ್ದಾನೆ. ಪೂಷನ್‌ನು "ಅಜ ವಾಹನ"ನಾಗಿದ್ದಾನೆ. ಸ್ವಪ್ರೇರಣೆಯಿಂದ ಉತ್ತಮ ಸ್ತುತಿ ಅರ್ಪಿಸುತ್ತಾರೆ.

ಫಲಶ್ರುತಿ ಹೀಗೆ ಸ್ತುತಿಸಿ ಹವಿಸ್ಸು, ಸೋಮ ಅರ್ಪಿಸುವವರು (1) ಉತ್ತಮ ದಾನಿಗಳು (2) ಧನವಂತರು (3) ಉದಾರಿಗಳು

(4) ಯಜ್ಞವಂತರು ಆಗುತ್ತಾರೆ. ಶತ್ರುಗಳಿಂದ, ಕಷ್ಟಗಳಿಂದ ಪಾರಾಗುತ್ತಾರೆ. ಧನಯುಕ್ತ ಪುತ್ರರನ್ನು ಧನವನ್ನು, ಸುಖವನ್ನು ಹೊಂದುತ್ತಾರೆ ಎಂದು ಭರಧ್ವಾಜರ ವಾಣಿ ಹೇಳುತ್ತದೆ. ಇಂದ್ರನ ಜೊತೆಯಲ್ಲಿ ಮಿತ್ರಾವರುಣರು, ಸವಿತೃ ಮರುತ್ ಗಣ, ಓಷದಿ ಅಭಿಮಾನಿ ದೇವತೆಗಳು ಇರುತ್ತಾರೆ. ದ್ಯುಲೋಕದಲ್ಲಿನ, ಪೃಥ್ವಿಯಲ್ಲಿನ ಸಕಲ ಸಂಪತ್ತು ಇಂದ್ರಾಗ್ನಿಗಳದ್ದೆ ಆಗಿವೆ. ರಕ್ಷಣೆಯಲ್ಲಿ ಅತ್ಯುತ್ತಮ, ಮಧ್ಯಮ, ಸಾದಾರಣ ರೀತಿ ಅಪೇಕ್ಷಿತರಿಗೆ ಅನುಗುಣವಾಗಿ ರಕ್ಷಿಸುತ್ತಾನೆ. ಧನ ದಾನದಿಂದ ಪಾಪಗಳು ನಾಶವಾಗುತ್ತವೆ. ಧನದಾನದಿಂದ ಶೋತೃಗಳ ಪುತ್ರರನ್ನು ಧನದಿಂದ ಅನುಗ್ರಹಿಸುತ್ತಾನೆ. ಸ್ತೋತ್ರ, ಮಂತ್ರಗಳಿಂದ ಇಂದ್ರ ಶರೀರವು ವೃದ್ಧಿಯಾಗುತ್ತದೆ.

## ಇಂದ್ರದೇವರು – ಭರಧ್ವಾಜರು – ಆಶ್ರಮ ವಿಭಾಗ

ಧರ್ಭಾಸೀನವು ಸಿದ್ಧವಾಗಿರುತ್ತದೆ. ಅಶ್ವಗಳು ಇಂದ್ರನನ್ನು ಕರೆತರಲು ಋತ್ವಿಜರು ಆಹ್ವಾನಿಸುತ್ತಾರೆ. ಪೂಜೆಗೊಳ್ಳಲು ದಯಮಾಡಿಸಲಿ ಎಂದು ಪ್ರಾರ್ಥಿಸಿದ್ದಾರೆ. ನಾನಾ ಸ್ತೋತ್ರಗಳಿಂದ ಇಂದ್ರನ ಬಲವನ್ನು ಸ್ತುತಿಸಿದ್ದಾರೆ. ಋಗ್ವೇದಿಯು ದೇವತಾ ಗುಣಗಳಿಂದ ಸ್ತುತಿಸಿದ್ದಾನೆ. ಇಂದ್ರನು ಅಶ್ವಗಳೊಂದಿಗೆ ಬರಲಿ ಎನ್ನುತ್ತಾರೆ. ಮೂರು ಸವನಗಳಲ್ಲೂ ದರ್ಭಾಸೀನರಾಗಲಿ ಎಂದು ಆಹ್ವಾನಿಸಿ ಪ್ರಶಂಸಿಸುತ್ತಾರೆ. ಅಪೂರ್ವ ನೂತನ ಸುಖಕರ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ಇಂದ್ರಾಗ್ನಿಗಳನ್ನು ಆಹ್ವಾನಿಸಿದ್ದಾರೆ, ಸ್ತುತಿಸಿದ್ದಾರೆ. ಯಜ್ಞಾರ್ಹ ದೇವತೆಗಳೊಂದಿಗೆ ಇಂದ್ರನು ದಯಮಾಡಿಸಲಿ, ಯಜಮಾನರು ಪುನಹ ಪುನಹ ಸಹಾಯ ಅಪೇಕ್ಷಿಸಿ ಇಂದ್ರನನ್ನು ಕರೆಯುತ್ತಾರೆ. ಸ್ನೇಹಿತರಾಗಿರುವಂತೆ ಪ್ರಾರ್ಥಿಸುತ್ತಾರೆ ಮತ್ತು ಪೂಜಿಸುತ್ತಾರೆ. ಹಿಂದಿನವರು ಪೂಜಿಸಿದಂತೆಯೇ ಪೂಜಿಸುತ್ತಾರೆ, ಸ್ತುತಿಸುತ್ತಾರೆ. ಶತ್ರು ಮಂತ್ರಗಳನ್ನು ಪಠಿಸುತ್ತಾರೆ. ಋತ್ವಿಜರು ಧನ ತುಂಬಿದ ಹಸ್ತದ ಇಂದ್ರನನ್ನು ಸ್ನೇಹ ಅಪೇಕ್ಷಿಗಳಾಗಿ ಪೂಜಿಸುತ್ತಾರೆ. ಯಜಮಾನರು ಶಸ್ತ್ರಮಂತ್ರ ಪಠಿಸಿದ ಕೂಡಲೇ ಅಶ್ವಗಳನ್ನು ರಥಕ್ಕೆ ಕಟ್ಟಿ ವಜ್ರಾಯುಧದೊಂದಿಗೆ ಯಜ್ಞಕ್ಕೆ ಬರಲಿ. ದೂರದಲ್ಲಿರುವ ಇಂದ್ರನಿಗೆ ಕೇಳುವಂತೆ ಯಾಜ್ಞಿಕರು ಸ್ತುತಿಸುತ್ತಾರೆ. ಸ್ತೋತ್ರಗಳಿಂದ ಪ್ರೀತನಾದ ಇಂದ್ರನನ್ನು ಅಶ್ವಗಳು ಕರೆತರುತ್ತವೆ. ಅನೇಕರು ಒಟ್ಟಾಗಿ ಸೇರಿ ಸ್ತುತಿ ಹವಿಸ್ಸು ಅರ್ಪಿಸಿ ಇಂದ್ರನನ್ನು ತೃಪ್ತಿಗೊಳಿಸುತ್ತಾರೆ. ಸಕಲ ದೇವತೆಗಳು ಭರಧ್ವಾಜರ ತೃಪ್ತಿಗಾಗಿ ಯಜ್ಞಾಭಿಮುಖರಾಗಲಿ ಎಂದು ಪ್ರಾರ್ಥಿಸಿದ್ದಾರೆ. ಯಜ್ಞ ಸಮಯದಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತಾರೆ. ಯಜಮಾನರು ರಮನೀಯ ಯಜ್ಞ ಮಾಡುತ್ತಾರೆ. ಸ್ತೋತ್ರ ನಂತರ ಹವಿಸ್ಸಿನಿಂದ ತೃಪ್ತಿ ಪಡಿಸುತ್ತಾರೆ. ★ ಋಷಿಗಳು ಹವಿಸ್ಸಿನಿಂದ ಇಂದ್ರನನ್ನು ತೃಪ್ತಿಪಡಿಸಿ ಪ್ರಸನ್ನೀಕರಿಸುತ್ತಾರೆ, ಕರ್ಮಗಳನ್ನು ಆಚರಿಸುತ್ತಾರೆ. ★ ಆಹುತಿ ಅರ್ಪಿಸುವಾಗ ಪುರೋಡಾಶ ಪಕ್ವಮಾಡುವಾಗ , ಸೋಮ ರಸ ಹಿಂಡುವಾಗ ಇಂದ್ರನನ್ನು ಸ್ತುತಿಸುತ್ತಾರೆ. ಉತ್ತಮ ಯಜ್ಞಗಳನ್ನೇ ಮಾಡುತ್ತಾರೆ. ಹವಿಸ್ಸನ್ನು ಅರ್ಪಿಸುತ್ತಾರೆ. ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ಯಜ್ಞಕ್ಕೆ ಇಂದ್ರ, ಮರುತ್‌ಗಳನ್ನು ಆಹ್ವಾನಿಸುತ್ತಾರೆ. ಇಂದ್ರನ ಕರ್ಮಗಳನ್ನು ಶತ್ರು ನಾಶಕ ಶಕ್ತಿಯನ್ನು ಪ್ರಶಂಸಿಸುತ್ತಾರೆ. ತೃಪ್ತಿಯಾಗುವಷ್ಟು ಹವಿಸ್ಸಿನಿಂದ ಯಾಗ ಮಾಡುತ್ತಾರೆ. ಮೃತ್ಯು ರಹಿತ ಸೋಮವು ಇಂದ್ರನಿಗಾಗಿಯೇ ಹೋಮ ರೂಪದಿಂದ ಅರ್ಪಿತವಾಗುತ್ತದೆ. ಚಮಸ ಪಾತ್ರೆಯಲ್ಲಿ ಸೋಮ ಪಾನ ಮಾಡಲು ಇಂದ್ರನನ್ನು ಕೋರುತ್ತಾರೆ. ಮೂರು ಪಾತ್ರೆಗಳಲ್ಲಿ ಮದಕಾರಿ ಸೋಮವನ್ನು ಒದಗಿಸಿದ್ದಾರೆ. ರಾಜಋಷಿಯು ಇಂದ್ರನಿಗಾಗಿ ಸೋಮ ಹಿಂಡಿದನು, ಶುದ್ಧಿ ಹೊಂದಿದ ಸೋಮವು ದ್ರೋಣ ಕಲಸ ಸೇರಿ ಅಮೃತ ಸಮಾನವಾಗುತ್ತದೆ. ಇಂದ್ರನು ಈಶ್ವರ ಸೋಮಪಾನಕ್ಕೆ ದಯಮಾಡಿಸಲು ಪ್ರಾರ್ಥಿಸಿದ್ದಾರೆ. ಸೋಮವು ಹಿಂಡಲ್ಪಟ್ಟಿದೆ. ಇಂದ್ರಾಗ್ನಿಗಳನ್ನು ಸ್ತುತಿಸಿದ್ದಾರೆ, ಪಾತ್ರೆಗಳಲ್ಲಿ ಸೋಮವು ತುಂಬಿದೆ. ಗೋವು ಉತ್ಪನ್ನ ಕ್ಷೀರ ವಸತಿವರಿಗಳು ಒಟ್ಟಾಗಿ ಸೇರಿದಾಗ ಅಧ್ವರ್ಯುಗಳಿಂದ ಸೋಮವು ಹಿಂಡಲ್ಪಟ್ಟಿತ್ತು. ಗಾನ ರೂಪ ಸ್ತುತಿಗಳು ಇಂದ್ರನನ್ನು

ಸೇರುತ್ತವೆ. ಋಷಿಗಳು ಶಸ್ತ್ರಮಂತ್ರಗಳಿಂದ ಸ್ತುತಿಸುತ್ತಾರೆ. ಯಜಮಾನರು ಅಪೂರ್ವ, ನೂತನ, ಅತ್ಯಧಿಕ, ಸುಖಕರ ಸ್ತೋತ್ರಗಳಿಂದ ಸ್ತುತಿಸಿದ್ದಾರೆ. ಇಂದ್ರನ ಉತ್ಕೃಷ್ಟಕರ್ಮಗಳನ್ನು ಪ್ರಶಂಶಿಸಿದ್ದಾರೆ. ಕ್ಷಿಪ್ರವಾಗಿ ತೃಪ್ತಿಯಾಗುವಷ್ಟು ಸೋಮಪಾನ ಮಾಡಲು ಇಂದ್ರನಿಗೆ ಹೇಳುತ್ತಾರೆ. ಇಂದ್ರನ ಮನಸ್ಸು ಸಂತೋಷ ಪಡಿಸಲು ಕರ್ಮಗಳನ್ನು ಮಾಡುತ್ತಾರೆ. ಮೂರು ಸವನಗಳಲ್ಲಿ ಹಿಂಡಿ ಸಿದ್ಧಪಡಿಸಿದ ಮದಕರ ಸೋಮವನ್ನು ಇಂದ್ರನು ಪಾನಮಾಡಲಿ, ಸೋಮವನ್ನು ಇಂದ್ರನಿಗೆ ಅರ್ಪಿಸುತ್ತಾರೆ. ಭಾಗಶ: ಸೋಮವನ್ನು ಅಶ್ವಗಳಿಗೂ ಅರ್ಪಿಸುತ್ತಾರೆ. ಭರಧ್ವಾಜರು ಸ್ತುತಿಕರ್ತರೂ ಹೌದು, ಇಂದ್ರನು ಅನುಕೂಲಕರನಾಗಲಿ ಎಂದು ಸ್ತುತಿಸಿದ್ದಾರೆ. ಇಂದ್ರನಿಗೆ ಯಜಮಾನರು ಬಂಧುಗಳು. ಇಂದ್ರನು ಯಜ್ಞ ಮಾರ್ಗದಲ್ಲಿ ಕಾಣಿಸಿಕೊಳ್ಳಲಿ, ಸೇವೆ ಸ್ವೀಕರಿಸಲಿ ಎಂದು ಕೇಳಿದ್ದಾರೆ. ಅಶ್ವಗಳು ಇಂದ್ರನನ್ನು ಸೋಮಪಾನಕ್ಕೆ ಕರೆತರಲಿ, ಅಧ್ವರ್ಯುಗಳಿಂದ ಹಿಂಡಲ್ಪಟ್ಟು ಚಮಸ ಪಾತ್ರೆಯಲ್ಲಿ ಶೇಖರಿತ ಸೋಮವು ಇಂದ್ರಾರ್ಪಿತವಾಗುತ್ತದೆ. ಉಷ ಕಾಲದಲ್ಲಿ ಹಾಲು ಕರೆಯುತ್ತಾರೆ. ಇಂದ್ರಾರ್ಥವಾಗಿ ಗೋವುಗಳು ಭಯರಹಿತ ಸಂಚರಿಸಲಿ, ಸುಖವಾಗಿರಲಿ, ತಮ್ಮನ್ನು ಸಂತೋಷಪಡಿಸಲಿ ಎನ್ನುತ್ತಾರೆ. ಕಡೆಯಲ್ಲಿ ಪೂಜಾನಿರತ ಋತ್ವಿಜರಿಂದ ಅನ್ನಸಮಾರಾದನೆಗಾಗಿ ಸೋಮವು ಅರ್ಪಿತವಾಗಲಿ ಎಂದಿದ್ದಾರೆ ಭರಧ್ವಾಜರು. ಯಜ್ಞ ಗೃಹದಲ್ಲಿ ಈ ಹಿಂದೆ ಸ್ತೋತ್ರಗಳು ಫಲ ಪಡೆದಿದ್ದಾರೆ. ಈಗಲೂ ಪಡೆಯುತ್ತಿದ್ದಾರೆ. ಶಸ್ತ್ರಮಂತ್ರಗಳಿಂದ ಪ್ರಶಂಸನಾ ವಾಕ್ಯಗಳಿಂದ, ಸ್ತೋತ್ರಗಳಿಂದ ಗಾನರೂಪ ಸ್ತುತಿಗಳಿಂದ ಹವಿಸ್ಸು ಸೋಮಾರ್ಪಣೆಗಳಿಂದ ಇಂದ್ರನನ್ನು ಸಂತೋಷಗೊಳಿಸಿ ಪ್ರಸನ್ನೀಕರಿಸಿಕೊಳ್ಳುತ್ತಾರೆ.

## ಪ್ರಾರ್ಥನಾ ವಿಭಾಗ

ನಾನಾ ಬಗೆಯ ಅನ್ನ ಒದಗಿಸಿ ಸಂತೋಷಪಡಿಸಲಿ, ಅನ್ನಕ್ಕಾಗಿ ಬೇಡಿದ್ದಾರೆ. ಭೋಗಯೋಗ್ಯ ಅನ್ನ ಸಂಪತ್ತು ಬೇಡಿದ್ದಾರೆ. ಧನದಾತೃವಾಗಿರಲಿ, ಐಶ್ವರ್ಯಕ್ಕಾಗಿ ಬೇಡಿದ್ದಾರೆ. ಧನ ಬೇಕೆನ್ನುವವರಿಗೆ ಅತಿ ಶೀಘ್ರ ಧನ ಅನುಗ್ರಹಿಸಲು ಬೇಡಿದ್ದಾರೆ. ಸ್ತುತಿಕರ್ತರಿಗೆ ಅನ್ನ ಕೊಡಲಿ, ಅನ್ನಕ್ಕಾಗಿ ಪ್ರಾರ್ಥಿಸಿದ್ದಾರೆ. ವೀರ ಪುತ್ರರನ್ನು ಅನುಗ್ರಹಿಸಲಿ, ಪುತ್ರರರನ್ನು ಬೇಡುವವರಿಗೆ ಪುತ್ರ, ಪೌತ್ರ ಸಂತತಿ ನೀಡಲಿ, ಪೂಜಕರಿಗೆ ವೃಷ್ಟಿ ಉದಕ ನೀಡಲಿ, ಯುದ್ಧ ಸಮಯದಲ್ಲಿ ಶೀಘ್ರವಾಗಿ ಪೋಷಕ ಧನ, ಧಾನ್ಯ ಒದಗಿಸಲಿ. ಕರ್ಮಗಳು ನಡೆಯದಿರುವ ಕಡೆಗಳಲ್ಲಿ ಈಗಲಾದರೂ ನಡೆಯಲಿ, ಯಜ್ಞ ಕರ್ಮಗಳಲ್ಲಿ ಇಂದ್ರನು ರಕ್ಷಕನಾಗಿರಲಿ, ಆಶ್ರಯ ದಾತನಾಗಿರಲಿ, ರಕ್ಷಣೆ ನೀಡಲಿ, ಸೇವಿಸಿದ ಯಜಮಾನರನ್ನು ಪ್ರಸಿದ್ಧಗೊಳಿಸಲಿ, ಶತ್ರುಗಳನ್ನು, ರಾಕ್ಷಸರನ್ನು ನಿಗ್ರಹಿಸಿ ಕೊಲ್ಲುವ ಶಕ್ತಿ ನೀಡಲಿ, ಅಹಂಕಾರ ಪಡುವವರನ್ನು ದಮನ ಮಾಡಲಿ, ಸುತ್ತಲೂ ಇರುವ ರಾಕ್ಷಸರನ್ನು ಶತ್ರುಗಳನ್ನು ನಾಶಮಾಡಲಿ, ಸಕಲ ಆಸೂರಿ ಮಾಯಗಳನ್ನು ನಾಶಮಾಡಲಿ, ಸನ್ಮಾರ್ಗ ಪ್ರವರ್ತಕರನ್ನಾಗಿಸಲಿ, ದುಃಖ ನಾಶ ಮಾಡಲಿ, ಇಷ್ಟಾರ್ಥಗಳನ್ನು ಕರುಣಿಸಲಿ, ಸುಖದಾತನಾಗಿರಲಿ, ಸರ್ವ ಅಪೇಕ್ಷೆಗಳನ್ನು ಈಡೇರಿಸಲಿ, ವೃತ್ರರೂಪಿ ಶತ್ರುವನ್ನು ಬೇರೆ ಕಡೆಗೆ ಓಡಿಸಲಿ, ಆಂಗೀರಸ ಗೋತ್ರ ಉತ್ಪನ್ನರನ್ನು ತೃಪ್ತಿಪಡಿಸಲಿ, ಶತ್ರುಗಳನ್ನು ನಾಶಮಾಡಲು ವಜ್ರಾಯುಧಗಳನ್ನು ಬಳಸಲಿ, ಶೀತ, ಮಳೆ ಬಿಸಿಲುಗಳಿಂದ ರಕ್ಷಿಸಲಿ, ಗೃಹಕ್ಕಾಗಿ ಬೇಡಿದ್ದಾರೆ. ಶಕ್ತಿ, ಬುದ್ಧಿ, ಬಲ, ಯಶಸ್ಸುಗಳಿಗಾಗಿ ಬೇಡಿದ್ದಾರೆ. ವಾಹನ ಯೋಗ್ಯ ಅಶ್ವಗಳಿಗಾಗಿ ಬೇಡಿದ್ದಾರೆ. ವಿಶೇಷವಾಗಿ ಗೋ ಸಂಪತ್ತುಗಳನ್ನು ಕೇಳಿದ್ದಾರೆ. ಗೋ ರೂಪಿ ಇಂದ್ರನನ್ನು ಸೇವಿಸುವವರನ್ನು ರಕ್ಷಿಸಲಿ, ಗೋವುಗಳನ್ನು ಆರಾಧಿಸುವವರನ್ನು ರಕ್ಷಿಸಲಿ, ನೂರು ವರುಷಗಳ ಕಾಲ ಪುತ್ರ ಪೌತ್ರರೊಡನೆ ಸುಖ ಅನುಭವಿಸುವಂತಾಗಲಿ, ಜರಾರಾಹಿತ್ಯವನ್ನು ಬೇಡಿದ್ದಾರೆ. ತೊಂದರೆಯಲ್ಲಿರುವ ಭಕ್ತರ ಅಭಿಮುಖನಾಗಿ ಅವರನ್ನು ರಕ್ಷಿಸಲಿ ಹಾಗೂ ಪ್ರಸಿದ್ಧರನ್ನಾಗಿಸಲಿ, ಇಂದ್ರನ ಸ್ನೇಹವನ್ನು ಬಯಸುತ್ತಾರೆ. ಇಂದ್ರನು ತಮ್ಮನ್ನು ಇತರರ ಮುಂದೆ ಪ್ರಸಿದ್ಧ ಪಡಿಸಲಿ ಎಂದು ಬೇಡುತ್ತಾರೆ. ಸೇವಕರಿಗಾಗಿ ಮತ್ತು ಅವರ ಶ್ರೇಯಸ್ಸಿಗಾಗಿಯೂ ಪ್ರಾರ್ಥಿಸಿದ್ದಾರೆ. ಹಗಲೂ ರಾತ್ರಿಗಳು ಹಿಂಸಾ ರಹಿತರಾಗಿರಲಿ, ಯಜಮಾನನಿಗೆ ಅಪಾಯವಾಗದಂತೆ ರಕ್ಷಿಸಲಿ, ತೊಂದರೆಗಳಲ್ಲಿರುವ ಭಕ್ತರಿಗೆ ಅಭಿಮುಖನಾಗಿ ಅವರ ತೊಂದರೆ ನಿವಾರಿಸಲಿ, ಯಜಮಾನನು ಎಲ್ಲವನ್ನೂ ಅನುಭವಿಸುವಂತಾಗಲಿ, ಇಂದ್ರನು ಸಕಲ ಸುಖ, ದುಃಖ ಸಂಚಾರ, ವಿಚಾರಗಳಲ್ಲಿ ಮಾರ್ಗದರ್ಶಕನಾಗಿರಲಿ, ಬಂಧುಗಳು ಅಸಂತೋಷಿಗಳು ಯಜಮಾನನ ಮೇಲೆ ಬೀಳುವ ಮೊದಲೇ ಅವರ ಶತ್ರುಗಳೇ ಅವರುಗಳನ್ನು ನಾಶಮಾಡಲಿ, ಇಂದ್ರನ ಸಖ್ಯ ಇರುವವರೆಗೆ ಹಿಂಸೆ ಆಗುವುದು ಬೇಡ. ಇಂದ್ರನು ಯಜಮಾನನನ್ನು ಶತ್ರುಗಳಿಗೆ ಬಿಟ್ಟುಕೊಡದಿರಲಿ, ಸಕಲ ದೇವತೆಗಳೊಂದಿಗೆ ಇಂದ್ರನನ್ನು ರಕ್ಷಿಸಲಿ, ಭಕ್ತರು ತೊಂದರೆಯಲ್ಲಿರುವಾಗ ತಪ್ಪದೇ ಇಂದ್ರನು ರಕ್ಷಿಸಿ ಅನುಗ್ರಹಿಸಲಿ, ಧನಧಾರೆ ಹರಿಸಲಿ,

ಧನದಾತನಾಗಿರಲಿ, ಸಂತೋಷ ಅಭಿವೃದ್ಧಿಗಳಿಗೆ ಪ್ರಾರ್ಥಿಸಿದ್ದಾರೆ. ಸ್ವಯಂ ಪ್ರೇರಿತನಾಗಿ ಇಂದ್ರನು ಯಜಮಾನಾಭಿಮುಖನಾಗಲಿ, ಅರ್ಪಿತ ಸೋಮವನ್ನು ಪಾನಮಾಡಿ ತೃಪ್ತನಾಗಲಿ, ಸೋಮ ಹಿಂಡುವವರನ್ನು, ಹವಿಸ್ಸು ಅರ್ಪಿಸುವವರನ್ನು ವಿಶೇಷವಾಗಿ ಕಾಪಾಡಲಿ, ಶತ್ರುಗಳಿಗೆ ಸೂರ್ಯದರ್ಶನ ಪ್ರಕಾಶ ಇಲ್ಲದಂತಾಗಲಿ, ಹಿಂಸಾರಹಿತ ಮಾರ್ಗದಿಂದ ತೊಂದರೆಗಳು ಇಲ್ಲದೆ ಯಜಮಾನನನ್ನು ಇಂದ್ರನು ದಡ ಸೇರಿಸಲಿ, ಇಂದ್ರಾ, ವರುಣರು ಧನ, ಅನ್ನ ತುಂಬಿಕೊಡಲಿ. ಶಾಪ ಹೊಂದಿರುವವರನ್ನು ಇಂದ್ರಾ, ವರುಣರು ಕ್ಷಮಿಸಿ ಅನುಗ್ರಹಿಸಲಿ. ಋಷಿಗಳು ತಮ್ಮ ಕೊಟ್ಟಿಗೆಯಲ್ಲಿ ನಾನಾ ವರ್ಣದ ಬಹುಸಂಖ್ಯೆಯ ಒಳ್ಳೆಯ ಕರುಗಳನ್ನುಳ್ಳ ಅಲ್ಲಿ ಮಲಗುವ ಗೋವುಗಳನ್ನು ಅಪೇಕ್ಷಿಸಿದ್ದಾರೆ. ದೂರ ದೇಶದಿಂದ, ದ್ಯುಲೋಕದಿಂದ, ಸ್ವರ್ಗದಿಂದ ಅಥವಾ ಬೇರೆ ಎಲ್ಲೆ ಇದ್ದರೂ ಸರಿ ಇಂದ್ರನು ಅಶ್ವಾರೂಢನಾಗಿ, ಮರುತ್‌ಗಳೊಡಗೂಡಿ ದಯಮಾಡಿಸಲಿ. ಯಜಮಾನಾಭಿಮುಖ ಕುಳಿತುಕೊಳ್ಳಲಿ, ಸ್ತುತಿ ಕೇಳಲಿ, ಹವಿಸ್ಸನ್ನು ಸ್ವೀಕರಿಸಲಿ, ಹರ್ಷಕ್ಕಾಗಿ ಸೋಮಪಾನ ಮಾಡಲಿ ಎಂಬುದಾಗಿ ಭರದ್ವಾಜ ಋಷಿಗಳು ಇಂದ್ರ ದೇವನಲ್ಲಿ ಪ್ರಾರ್ಥಿಸಿದ್ದಾರೆ.

★ ★ ★ ★ ★ ★ ★ ★ ★ ★

## ಇಂದ್ರದೇವರು

### ಮಂಡಲ 7 – ವಸಿಷ್ಠ ಋಷಿಗಳು – ಸ್ತೋತ್ರ ವಿಭಾಗ

ಇಂದ್ರನಲ್ಲಿ ಅನುಗ್ರಹ ಬುದ್ಧಿ ಮತ್ತು ಧನ ಎಣಿಸಲಾಗದಷ್ಟಿದೆ. ಅಸುರರನ್ನು ಯುದ್ಧದಲ್ಲಿ ಸಂಹರಿಸುತ್ತಾನೆ. ಅನ್ನದೊಂದಿಗೆ ಇಂದ್ರನು ಕೂಡಿಕೊಳ್ಳುತ್ತಾನೆ. ಅಪಾರವಾದ ಧನವನ್ನು ಅನೇಕ ವೇಳೆ ಯಜಮಾನನಿಗೆ ದಾನ ಮಾಡಿದ್ದಾನೆ. ಅನೇಕ ಜನರನ್ನು ಜನ್ಮದಿಂದಲೇ ರಕ್ಷಿಸಿದ್ದಾನೆ. ಅನ್ನಕ್ಕಾಗಿ ಪ್ರಶಂಸಿಸಿದ ಸ್ತುತಿಕರ್ತರಿಗಾಗಿ ಶತ್ರುಗಳನ್ನು ಜಯಿಸಿ ಅವರ ಧನವನ್ನು ಭಕ್ತರಿಗಾಗಿ ಕೊಡುತ್ತಾನೆ. ಅಸಾಧಾರಣ ಯಶಸ್ಸು ಸಂಪಾದಿಸಿರುವ ಇಂದ್ರನ ಮಹತ್ವ ಪಡೆಯಲು ಯಾರಿಗೂ ಸಾಧ್ಯವಿಲ್ಲ. ಅತ್ಯಧಿಕ ಧನ ಹೊಂದುವುದು , ಪರಾಕ್ರಮ ಪಡೆಯುವುದು ಸಾಧ್ಯವಿಲ್ಲ. ಇಂದ್ರ ಗೋವುಗಳಿಗೆ ಪತಿ, ಅವನ ಸಖಿತ್ವ ಮರೆಯಲಾರದ್ದು. ಇಂದ್ರನು ಮಹಾಪರಾಕ್ರಮಿ, ಬಹಳಷ್ಟು ಜನರನ್ನು ರಕ್ಷಿಸಿದ್ದಾನೆ. ಇವನು ಸೋಮಪಾನದಿಂದ ತೃಪ್ತನಾಗುತ್ತಾನೆ. ಇಂದ್ರನು ಸುಧಾಸನನ್ನು ರಕ್ಷಿಸಿದನು. ಶತ್ರುಗಳನ್ನು ಹಿಂಸಿಸಿದ್ದರಿಂದ ಅವರು ಸಮಸ್ತ ಭೋಗ ಸಾಮಗ್ರಿಗಳನ್ನು ಬಿಟ್ಟು ಓಡಿದರು. ಇಂದ್ರನನ್ನು ಆಶ್ರಯಿಸಿದವರಿಗೆ ಅನಂತ ಭೋಗ ಸಾಮಗ್ರಿಗಳು ಸಿಗುತ್ತವೆ. ಇಂದ್ರಾನುಗ್ರಹದಿಂದ ಮಾನವರು ರಕ್ಷಿತ ಗೃಹದಲ್ಲಿ ಇರುವಂತಾಗಿದೆ. ಇಂದ್ರನು ಮಾನವ ಸೇನೆಗಳಿಗೆಲ್ಲಾ ನಾಯಕ, ಇಂದ್ರನು ಅಪಾರ ಧನವನ್ನು ಅನೇಕ ವೇಳೆ ಯಜಮಾನನಿಗೆ ದಾನ ಮಾಡಿದ್ದಾನೆ. ಅತಿಶಯ ರಕ್ಷಣೆಯಿಂದಲೇ ಲೋಕವು ರಕ್ಷಿತವಾಗಿದೆ. ಅಸಾಧಾರಣ ಕರ್ಮಗಳಿಂದ ಪೃಥ್ವಿಯು ಸಕಲ ಬಂಧುಗಳು ಇಂದ್ರನಿಗಾಗಿಯೇ ಆಗಿದೆ. ಸಮಸ್ತ ಭುವನಗಳು ಇಂದ್ರನ ಭೀತಿಯಿಂದ ಕಂಪಿಸುತ್ತವೆ. ★ **ಉಷಸ್ಸು ಪುನರಾವರ್ತನೆಗೊಳ್ಳುವ ಹಾಗೆ ಇಂದ್ರನ ಅನುಗ್ರಹ ಬುದ್ಧಿ ಮತ್ತು ಧನ ಎಣಿಸಲಾಗಷ್ಟಿದೆ.** ಗೋವುಗಳನ್ನು ಅಪಹರಿಸಲು ಸಜ್ಜಾಗಿದ್ದ ಶತ್ರುಗಳನ್ನು ನಾಶಮಾಡಿದನು. ಸೋಮಪಾನದಿಂದ ಹರ್ಷಗೊಂಡು ಇಂದ್ರಾವರುಣರು 'ವೃತ್ರ'ನಿಂದ ಮುಚಲ್ಪಟ್ಟ ಉದಕ ಧ್ವಾರಗಳನ್ನು ಪೂರ್ಣವಾಗಿ ತೆರೆಸಿದರು.

ಅನುಭವ ಯೋಗ್ಯ ಸ್ತೋತ್ರಗಳಿಗೆ ರಕ್ಷಣಾರ್ಥ, ಅಪೇಕ್ಷಿತ ಧನದಾನ್ಯ ನೀಡಲು ಮರುತ್‌ಗಳೊಡನೆ ಇಂದ್ರನು ಕ್ಷಿಪ್ರವಾಗಿ ಬರುತ್ತಾನೆ. ಉತ್ತಮ, ಶ್ರೇಷ್ಟ ಅಧಿಕ ಮಹತ್ವದ ಪ್ರಭೂತ ಸೋಮವು ವೇಗವಾಗಿ ಇಂದ್ರನನ್ನು ಸಮೀಪಿಸುತ್ತದೆ. ಅವನಿಂದ ಸೇವಿಸಲ್ಪಡುತ್ತದೆ. ಪ್ರಾಚೀನ ಋಷಿಗಳು ಸ್ತುತಿಗಳಿಂದ ಇಂದ್ರನನ್ನು ತೃಪ್ತಿಗೊಳಿಸುತ್ತಾರೆ. ಓಷಧಿಗಳು ಬೆಳೆವಾಗ ದೇವತಾ ಪ್ರಿಯವಾದ ಸ್ತುತಿರೂಪ ಪೋಷಕಗಳು ಸ್ತುತಿಕರ್ತನಲ್ಲಿ ಉಂಟಾಗುತ್ತವೆ. ಕಾಮವರುಷಕ ಇಂದ್ರನು ಶತ್ರುಗಳನ್ನು ನಾಶಮಾಡಿದ್ದಾನೆ. ಜನಹಿತ ಬಯಸುವ ಯಜಮಾನರಿಗೆ ಗೂಢವಾಗಿ ಧನ ಇಟ್ಟಿರುವ ಶತ್ರುಪಟ್ಟಣ ಧ್ವಾರ ಭೇದಿಸಿ ಆ ಧನವನ್ನು ಬಲ ಅಪೇಕ್ಷಿತ ಯಜಮಾನನಿಗೆ ಕೊಡುತ್ತಾನೆ. ಜಲ ರಹಿತ ನದಿಗಳನ್ನು ಜಲಭರಿತವನ್ನಾಗಿ ಮಾಡಿದನು. ನದಿ ನೀರಿಗೆ ತಡೆಹಿಡಿದಿದ್ದ ರಾಕ್ಷಸನನ್ನು ಕೊಂದು ನದಿ ಪ್ರವಹಿಸುವಂತೆ ಮಾಡಿದನು. ತನ್ನ ವಿರುದ್ಧ ವ್ಯವಹರಿಸುವ ಸಕಲ ಶತ್ರುಗಳನ್ನು ನಾಶಮಾಡುತ್ತಾ ''ವೃತ್ರ''ನನ್ನು ಸಂಹರಿಸಿ ಸುದಾಸನಿಗೆ

ರಾಜ್ಯ ಸಿಗುವಂತೆ ಮಾಡಿದನು. ಧನದಾನಕ್ಕೆ, ಶಕ್ತಿಪ್ರಧಾನಕ್ಕೆ ಪ್ರಭಾವ ಬೀರಿ ಕೃಪಣನನ್ನು ಹಿಂಸಿಸಲೂ ಸಮರ್ಥನನ್ನಾಗಿ ಮಾಡುತ್ತಾನೆ. ದೇವತೆಗಳು ತೃಪ್ತಿಕರ ಕರ್ಮಮಾಡಿ ಹವಿರರ್ಪಿಸುವವರೆಗೆ ಸುಖಕೊಡುತ್ತಾನೆ. ದುರ್ಭಾಷೆ, ಹಿಂಸೆಕಾರಕರ ಸ್ತುತಿಗಳ ಇಂದ್ರನಿಂದ ಧನ ಕೊಡಿಸುವುದಿಲ್ಲ. ಮರುತ್‌ಗಳು ಇಂದ್ರನ ಸಹಾಯಕರಾಗಿದ್ದಾರೆ. ಮಹಾತ್ಮ್ಯಗಳಿಂದ ಯುಕ್ತ ಶಕ್ತಿಗಳಿಂದ ದ್ಯಾವಾ ಪೃಥ್ವಿಗಳೆರಡನ್ನು ವ್ಯಾಪಿಸಿ ಸೋಮರೂಪ ಅನ್ನದೊಂದಿಗೆ ಇಂದ್ರನು ಕೂಡಿಕೊಳ್ಳುತ್ತಾನೆ. ಪಿತೃಕಶ್ಯಪ ಮಾತೃ ಅದಿತಿಗಳು ಇಂದ್ರನನ್ನು ಉತ್ಪತ್ತಿ ಮಾಡಿದರು. ಮಾನವರ ಹಿತ ಕಾರ್ಯಗಳನ್ನು ಅರಿತು ಸಕಲ ರಕ್ಷಣೆಗಳಿಂದ ಕೂಡಿಕೊಂಡು ಸಂತೋಷ ಪ್ರಕಟಿಸುತ್ತಾನೆ.

ಪುರಾತನ ಅಸುರರು ಸಹ ತಮ್ಮ ಹಿಂಸಕಾರಕ ಬಲಕ್ಕಿಂತ ಇಂದ್ರನ ಬಲವೇ ಅಧಿಕವೆಂದು ಸಂಪೂರ್ಣವಾಗಿ ನಂಬಿದರು. ಇಂದ್ರನು ಯಜ್ಞಗಳ ಮಧ್ಯದಲ್ಲಿರುತ್ತಾನೆ. ವೃದ್ಧಿ ಹೊಂದತಕ್ಕ ಇಂದ್ರನು ಪ್ರಭಾವ ಬೀರಿ ಸಕಲ ಜಗತ್ತಿಗೂ ಈಶ್ವರನಾಗಿದ್ದಾನೆ. ವೀರಕರ್ಮ ಆಚರಿಸಲು ಉತ್ಪನ್ನನಾದವನು ಇಂದ್ರ. ಯುದ್ಧಾಸಕ್ತ, ಯುದ್ಧಕುಶಲಿ, ವಜ್ರಾಯುಧವನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಾನೆ. ಸ್ತುತಿಸುವವರನ್ನು ಉದಾರವಾಗಿ ಅನುಗ್ರಹಿಸುತ್ತಾನೆ. ಸ್ತುತಿ ವಾಕ್ಯಗಳಿಂದ ಪ್ರೀತನಾಗಿ ಸಹಾಯಕನು ಆಗಿರುತ್ತಾನೆ. ಸೋಮ ಹಿಂಡಿ ಹವಿರ್ರಪಿಸುವ ಯಜಮಾನರಿಗೆ ಇಂದ್ರನು ಅತ್ಯಧಿಕ ಧನ ನೀಡುತ್ತಾನೆ. ಸ್ತೋತ್ರಗಳನ್ನು ರಕ್ಷಿಸುತ್ತಾನೆ. ಸಂಕಲ್ಪ ಕರ್ಮಗಳನ್ನು ನಿರ್ವಹಿಸುತ್ತಾನೆ. ಸ್ತುತಿ, ಹವಿಸ್ಸು, ಯಜ್ಞ ಕರ್ಮಗಳಿಂದ ಇಂದ್ರನನ್ನು ಉಪಚರಿಸುವವರು ಪದಚ್ಯುತಿ ಹೊಂದುವುದಿಲ್ಲ. ಸಕಲ ರಕ್ಷಣೆಗಳೊಡನೆ ಯಜ್ಞ ಪ್ರವೇಶಿಸಿ ಅಧಿಕ ಪಾಪ ಪರಿಹರಿಸಿ ಯಜಮಾನನ್ನು ರಕ್ಷಿಸುತ್ತಾನೆ. ಸಕಲ ಧನಗಳು ಇಂದ್ರನ ಅನುಗ್ರಹದಿಂದಲೇ ವೃದ್ಧಿಸುತ್ತವೆ. ಸಕಲ ಲೋಕಗಳು ಒಟ್ಟಾಗಿ ಸೇರಿದರು ಇಂದ್ರನ ಮಹತ್ವ ಮೀರಲು ಸಾಧ್ಯವಿಲ್ಲ. ಸ್ವಶಕ್ತಿಯಿಂದಲೇ ವೃತ್ರಾಸುರನನ್ನು ನಾಶಮಾಡಿ ಅವನಿಂದ ತಡೆಹಿಡಿದಿದ್ದ ಉದಕವು ಪ್ರವಹಿಸುವಂತೆ ಮಾಡಿದನು. ವಜ್ರಾಯುಧಿ ಮುನ್ನುಗಿ ಅಸುರರನ್ನು, ಅವರ ಪಟ್ಟಣಗಳನ್ನು ಕಂಪಿಸುವಂತೆ ಮಾಡಿದ್ದಾನೆ. ಸಮಸ್ತ ಭೂತ, ಜಾತಗಳನ್ನು ಸ್ವಶಕ್ತಿಯಿಂದ ಉತ್ಪನ್ನ ಮಾಡಿದವನು. ಸೂರ್ಯನನ್ನು ಅಂತರಿಕ್ಷದಲ್ಲಿ ಪ್ರಭುವಾಗಿ ನಿಯಮಿಸಿ ಸ್ಥಾಪಿಸಿದನು. ಸಕಲ ದೇವತೆಗಳನ್ನು ಆಕಾಶದಲ್ಲಿ ಬಲವನ್ನು ವೀರ್ಯವನ್ನು, ಶತ್ರು ವಧೆಗಾಗಿ ಸಂಯೋಜಿಸಿದ್ದಾನೆ.

ಹವಿರರ್ಪಿಸುವವನನ್ನು ಕಾಪಾಡುತ್ತಾನೆ. (ಹರಿ) ಸಂಜ್ಞಿಕ ಅಶ್ವದ ಇಂದ್ರನು ಅತ್ಯಧಿಕ ಧನಕ್ಕೆ ರಕ್ಷಕ. ವೃತ್ರ ವಧಾಧಿ ಶತ್ರುನಾಶಕ್ಕೆ ವಜ್ರಾಯುಧ ಧರಿಸಿ ಅಪ್ರತಿಹತನಾದ ಇಂದ್ರನು ಸ್ತುತಿಸುವ ಮಾನವರನ್ನು ದ್ಯಾವಾ ಪೃಥ್ವಿಗಳ ಅಂತರದಲ್ಲಿ ಸಂಚರಿಸಲು ಸಮರ್ಥರನ್ನಾಗಿ ಮಾಡಿದನು. ಇಂದ್ರನು ಸಕಲ ಜಗತ್ತಿಗೂ, ಮಾನವರಿಗೂ ಪೃಥ್ವಿಯಲ್ಲಿರುವ ನಾನಾ ಧನಕ್ಕೂ ಪ್ರಭು, ಈಶ್ವರ, ಎಲ್ಲವನ್ನೂ ತಿಳಿದ ವಿವೇಕಿ.ಜಗತ್ತಿಗೂ ಈಶ್ವರ. ಇಂದ್ರನು ದೂರಸ್ಥನಾದರೂ (ಗೌರ ಮೃಗದಂತೆ) ವಾಸನೆಯಿಂದಲೇ ಸಿದ್ಧ, ಮನೋಹರ, ಸೋಮರೂಪ ಅನ್ನವನ್ನು ಸಕಲ ದಿನಗಳಲೂ ಅಪೇಕ್ಷಿಸುತ್ತಾನೆ. ಇಂದ್ರನ ನಾಯಿ (ಸಾರಮೇಯು) ಶ್ವೇತ ವರ್ಣದ್ದು. ಕೆಲವು ಅಂಗಗಳು ಹೊಂಬಣ್ಣದವು, ಅದು ಕಚ್ಚಲು ಬಾಯಿ ತೆರೆದಾಗ ದಂತಗಳು ಆಯುಧದಂತೆ ಪ್ರಕಾಶಿಸುತ್ತವೆ. ಪ್ರಜೆಗಳ ಇಷ್ಟಾರ್ಥ ತುಂಬಿಕೊಡುವ ಮನೋ ಇಂದ್ರ, ರಕ್ಷಕ, ದ್ಯುಲೋಕಸ್ಥ, ಸತ್ಯಾತ್ಮಕ, ಧನವುಳ್ಳವನು, ಅನೇಕ ಕರ್ಮಕರ್ತ. ಮುಂದೆ ನಿಂತು ಯುದ್ಧ ಮಾಡುವವನು, ಮಹಾ ಕ್ರೋಧಿ, ಯಾರಿಂದಲೂ ಎದುರಿಸಲಾಗದವನು. ಇಂದ್ರನ ಮಹತ್ತಾದ ಬಲವನ್ನು ದ್ಯಾವಾ ಪೃಥ್ವಿಗಳು ಗೌರವಿಸುತ್ತವೆ. ಇಂದ್ರನು ರಕ್ಷಣಾರ್ಥ ಕರ್ಮಗಳನ್ನು ಇತರ ದೇವತೆಗಳು ಮೀರುವುದಿಲ್ಲ. ಇಂದ್ರನು ಸ್ವಯಂ ಪ್ರಕಾಶಕನೆಂದು ಪ್ರಸಿದ್ಧನಾಗಿದ್ದಾನೆ. ಮರುತ್‌ಗಳೊಡಗೂಡಿ ಅಲಂಕೃತನಾಗಿ ವೃಷ್ಟಿ ಉದಕ ಪ್ರೇರಿಸುತ್ತಾನೆ. ಅಲ್ಪ ಸಾಧನೆಗಳಿಂದಲೇ ಅಧಿಕ ಬಲಯುತ ಶತ್ರುಗಳನ್ನು ನಾಶಮಾಡುತ್ತಾನೆ. ಸಕಲ ಲೋಕಕ್ಕೂ ಒಡೆಯ. ಇಂದ್ರಾ ವರುಣರು, ದ್ಯಾವಾ ಪೃಥ್ವಿಗಳ ಸಂಪತ್ತಿಗೆ ಒಡೆಯರು. ಇವರ ಕೃಪೆಯಿಂದ ಶತ್ರುಗಳನ್ನು ಎದುರಿಸಿ ಸೋಲಿಸುತ್ತಾರೆ. ಇಂದ್ರನು ವಿಶ್ವವನ್ನೆಲ್ಲಾ ಧರಿಸಿರುವ ಮಹತ್ವರೂಪಿ. ಅಧಿಕ ಬಲಶಾಲಿ, ಸರ್ವಪ್ರಸಿದ್ಧ ದ್ಯುಲೋಕದಂತೆ ಅಂತರಿಕ್ಷದಲ್ಲೂ ಪ್ರಕಾಶಮಾನನಾಗಿದ್ದಾನೆ. ಯಜಮಾನರ ಅಭಿವೃದ್ಧಿಗೆ ಕಾರಣನಾಗಿದ್ದಾನೆ. ಇಂದ್ರನ ಮನಸ್ಸು ಎರಡೂ ಲೋಕಗಳಲ್ಲೂ ಹೊಂದಿರುತ್ತದೆ.

ಅದಿತಿಯ ಪುತ್ರ ವರುಣ ಶೋತ್ರಗಳಿಗೆ ಅಪರಿಮಿತ ಧನ ನೀಡುತ್ತಾನೆ. ಅದಿತಿಯು ಇಂದ್ರನು ಹುಟ್ಟಿದೊಡನೆಯೇ ಶಕ್ತಿಗಾಗಿ ಸೋಮಪಾನ ಮಾಡಿದ್ದನ್ನು ಪ್ರಚುರ ಪಡಿಸಿದ್ದಾರೆ. ಶತ್ರುಗಳನ್ನು ಜಯಿಸಿದೊಡನೆಯೇ ಇಂದ್ರನಿಗೆ ಸೋಮಪಾನವು ಅತಿ ಆನಂದವನ್ನು ಉಂಟುಮಾಡುತ್ತದೆ. ವಾಯುವನ್ನು ಪ್ರಶಂಸಿಸಿ ಪಾಪರಹಿತರಾಗಿದ್ದಾರೆ.

ದ್ಯುಲೋಕವು ಇಂದ್ರಾ ವರುಣರ ಮಹತ್ ರಾಜ್ಯವಾಗಿದೆ. ಉದಕದಂತೆ ಪ್ರವಹಿಸುವ ಪ್ರಸಿದ್ಧಸೋಮರಸವು ಇಂದ್ರಾ ವರುಣರನ್ನು ಅವರವರ ಸ್ಥಾನಗಳಲ್ಲಿ ಸ್ಥಾಪಿಸುತ್ತದೆ.

ಉಷಸ್ಸುಗಳು ಪಾಪರಹಿತವಾದುದು. ಉತ್ತಮ ಧನಗಳಿಗೆ ಕಾರಣಭೂತವಾದುದು. ಇಂದ್ರನು ಸಕಲರಿಗೂ ಪ್ರಿಯನಾದವನು, ಸಕಲವನ್ನು ತಿಳಿದವನು, ಉಗ್ರ ಶಕ್ತಿಯುತನು, ಋಷಿಗಳ ಸ್ತುತಿ ಆಲಿಸಿ ಮಹತ್ತಾದ ಧನ, ಪ್ರತಿಫಲ ನೀಡುತ್ತಾನೆ. ಮಾನವರಲ್ಲಿ ದಯೆ ತೋರುವವನು ಇಂದ್ರನು ಒಬ್ಬನೇ. ಪ್ರೀತಿಯ ತಂದೆಯಂತೆ ಯಜಮಾನನ ಬಂಧುವಾಗಿದ್ದಾನೆ. ಪೂಜ್ಯ ಧನಕೊಡುವ ಸ್ತುತಿಕರ್ತರ ಅತಿಶಯ ರಕ್ಷಕನಾಗಿದ್ದಾನೆ. ಮಹಾತ್ಮ ಇಂದ್ರನು ಪೂಜಾಯೋಗ್ಯ. ಪ್ರಸಿದ್ಧ ಯುದ್ಧದಲ್ಲಿ ಧನ, ಬಲ, ಅನ್ನಗಳನ್ನು ಕೊಡುತ್ತಾನೆ. ಭಕ್ತರಿಗೆ ಇಂದ್ರನೊಬ್ಬನೇ ರಕ್ಷಕ, ಅವನ ಕೃಪೆಯಿಂದ ಬಂಧನಗಳು ಅಂಟದೇ ಕಳಚಿ ಹೋಗುವವು.

## ಇಂದ್ರದೇವರು - ಪ್ರಾರ್ಥನಾ ವಿಭಾಗ - ವಸಿಷ್ಠರಿಂದ (ಮಂಡಲ 7)

★ ಅದಿತಿಯು ಯಜಮಾನನಿಗೆ ಅಹಿಂಸಕವಾಗಿದ್ದು ಯಜ್ಞ ವರ್ಧಕ ತೇಜಸ್ಸು ಕೊಡಲಿ, ಅನ್ನ ಒದಗಿಸಲಿ.

★ ಅಧಿಕ ಧನ, ರಕ್ಷಣೆ, ರಥಗಳು, ಪುತ್ರರುಗಳನ್ನು ಇಂದ್ರನು ಕೊಡಲಿ.

★ ಯಜಮಾನರು ಪ್ರೀತಿ ಪಾತ್ರರಾಗಿ ಇರುವಂತಾಗಲಿ, ★ ಇಂದ್ರ ಧನವು ಅವನಿಗಿಂತ ಕೆಳಮುಖ ಹರಿಯಲಿ

★ ಗೃಹ , ಅನ್ನ ಒದಗಿಸಲಿ. ★ ಹಿಂಸೆಗಳಿಂದ ಪಾರುಮಾಡಲಿ, ಕಲ್ಯಾಣಗಳಿಂದ ರಕ್ಷಿಸಲಿ.

★ ಇಂದ್ರದತ್ತ ಅನ್ನ ಅನುಭವಿಸಲು ಯಜಮಾನರು ಸಮರ್ಥರಾಗಲಿ.

★ ದಾನಕ್ಕೆ ಪಾತ್ರರಾಗಿ ಇರುವಂತೆಯು ಆಗಲಿ. ಕಠಿಣ ಸಮಸ್ಯೆಗಳನ್ನು ದಾಟುವಂತಾಗಲಿ. ಗೋವುಗಳು, ಅಶ್ವಗಳು, ಆಕರ್ಷಕ ಹಿರಣ್ಯ ಎಲ್ಲವೂ ದಾನವಾಗಿ ಲಭಿಸಲಿ. ಪುತ್ರರೊಂದಿಗೆ ಸುಖವಾಗಿ ಇರುವಂತಾಗಲಿ.

★ ಧನಾಭಿಲಾಷೆಯಿಂದ ಇಂದ್ರನನ್ನು ಸ್ತುತಿಸುವ ಸ್ತುತಿಕರ್ತರಿಗೆ ಕ್ಷಿಪ್ರವಾಗಿ ಧನ, ರಕ್ಷಣೆ ನೀಡಲಿ. ನಿಂದಕ ಶತ್ರುಗಳನ್ನು ದೂರ ಮಾಡಲಿ. ಹಿಂಸಕ ಆಯುಧಗಳನ್ನು ನಾಶಮಾಡಲಿ.

★ ಶತ್ರುಗಳನ್ನು ಕೊಲ್ಲುವ ಶಕ್ತಿಯನ್ನು ಯಜಮಾನನಲ್ಲಿ ಉತ್ಪತ್ತಿಮಾಡಿ ಶತ್ರು ಮರ್ಧನ ಮಾಡಲಿ. ಅಧಿಕ ಬಲವನ್ನು ಸ್ನೇಹಿತರಿಗೂ, ಸ್ತೋತ್ರಗಳಿಗೂ ಕೊಡಲಿ. ಪಿತೃಗಳಿಗೆ ಕರುಣಿಸಿದಂತೆ ಯಜಮಾನನಿಗೂ ಅಶ್ವಗಳು, ಗೋವುಗಳು, ಧನವನ್ನು ದಾನ ರೂಪವಾಗಿ ಕರುಣಿಸಲಿ. ಮಾನವ ರಕ್ಷಿತ ಗೃಹದಲ್ಲಿ ಯಜಮಾನರು ಇರುವಂತಾಗಲಿ.

★ ಯಜಮಾನರನ್ನು ಅವರ ಪುತ್ರರನ್ನು ಬೇರೆ ಮಾಡದಿರಲಿ. ಸುಸಂಸ್ಕೃತರನ್ನಾಗಿ ಮಾಡಲಿ. ಬೃಹಸ್ಪತಿಯು ಉತ್ತಮ ಶಕ್ತಿಯುಳ್ಳ ಯಜಮಾನರು ಧನಾಭಿಲಾಷೆ ಪೂರೈಸಲಿ. ಪುಷ್ಕಳ ಅನ್ನಕ್ಕಾಗಿ ಹಾಗೂ ಆಳವಾದ ಉದಕಗಳಿಗಾಗಿ ಪ್ರಾರ್ಥಿಸಿದ್ದಾರೆ. ಅತ್ಯಂತ ಶಕ್ತಿಯುತ, ಕ್ರೀಡಾನಿರತ ಅಸುರರು ಯಜ್ಞವನ್ನು ವಿಘ್ನ ಮಾಡದಿರಲಿ, ಸ್ತೋತ್ರಗಳನ್ನು ಹಿಂಸಿಸದಿರಲಿ, ಯಜಮಾನನ ಕರ್ಮಗಳು ಫಲಭರಿತವಾಗಿರಲಿ, ಯಜ್ಞ ವರ್ಧಕ ಅದಿತಿಯು ಅಹಿಂಸಕ ತೇಜಸ್ಸು ಕೊಡಲಿ, ಯಜಮಾನನು ದೇವತೆಗಳಿಂದ ಬಲ ಪಡೆಯುವಂತಾಗಲಿ. ಆಯಸ್ಸು ಪರ್ಯಂತ ವಿಸ್ತಾರ ಗೃಹ (ಶಾಶ್ವತ ನಿವಾಸದಲ್ಲಿ ಇರುವಂತಾಗಲಿ)

★ ಅಸುರ ನಿಗ್ರಹ ಬುದ್ಧಿ, ವೀರ ಪುತ್ರರು, ಅಪೇಕ್ಷಿತ ಅನ್ನ ಧನ ನೀಡಲಿ. ಯಜಮಾನನ ತೃಪ್ತಿಗಾಗಿ ಗೋವುಗಳು ತುಂಬಿದ ಕೊಟ್ಟಿಗೆ, ರಸಯುಕ್ತ ಅನ್ನ, ಧನ, ಮಂಗಳಗಳಿಗಾಗಿ ಪ್ರಾರ್ಥಿಸಿದ್ದಾರೆ. ಈ ಸಂಪತ್ತನ್ನು ಹೊಂದಿ ಶ್ರೇಷ್ಟ ಯಜ್ಞಗಳನ್ನು ಮಾಡುವಂತಾಗಲಿ.

★ ರೋಗಾದಿಗಳಿಂದ ಹಿಂಸಿಸುವ ಪಾಪಗಳನ್ನು ಯಜಮಾನನಿಂದ ದೂರ ಓಡಿಸಿ ಅವನನ್ನು ಪುತ್ರ, ಪೌತ್ರರನ್ನು ರಕ್ಷಿಸಲಿ. ಯಜಮಾನರು ಯಜ್ಞ ಯಾಗಾದಿಗಳಲ್ಲಿ ಅನ್ನದಾನ, ಗೋದಾನ, ಸುವರ್ಣ ದಾನಗಳನ್ನು ಮಾಡಲಿ, ಪ್ರತಿ ದಿನವೂ ಸೂರ್ಯನ ಜ್ಯೋತಿ ನೋಡುವಂತಾಗಿ ಅವನು ಕರ್ಮ ವಿಷಯಗಳಲ್ಲಿ ನಮ್ಮನ್ನು ಜ್ಞಾನಿಯನ್ನಾಗಿಸಲಿ.

★ ಕರ್ಮ ಭ್ರಷ್ಟರಿಗೆ ನಮ್ಮನ್ನು ಒಪ್ಪಿಸುವುದು ಬೇಡ, ವಶಪಡಿಸುವುದು ಬೇಡ ಎಂದು ಪ್ರಾರ್ಥಿಸಿದ್ದಾರೆ. ತನ್ನಲ್ಲಿರುವ ಅಧಿಕ ಬಲವನ್ನು ಯಾಜ್ಞಿಕರಿಗೆ ಕೊಡಲಿ. ಯಜಮಾನರು ಧನವಂತರಾದರೆ ಅವರ ಆಶ್ರಿತರಿಗೆ ಧನ ದಾತರಾಗುತ್ತಾರೆ. ಇಂದ್ರ, ವರುಣ, ಮಿತ್ರಾ, ಆರ್ಯಮರು, ಅದಿತಿ ಅವರು ಯಜಮಾನನಿಗೆ ಹಿಂಸೆ ಉಂಟಾಗದಂತೆ ಪಾಪಗಳನ್ನು ನಾಶಮಾಡಿ ಕಷ್ಟಕಾಲಗಳಲ್ಲಿ ಯಜಮಾನನನ್ನು ಅವರ ಪುತ್ರ, ಪೌತ್ರರನ್ನು ಆಶ್ರಿತರನ್ನು ಸಂಪೂರ್ಣವಾಗಿ ರಕ್ಷಿಸಲಿ.

★ ★ ★ ★ ★ ★ ★ ★ ★ ★ ★

## ಇಂದ್ರಾವರುಣರು
## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ ವಿಭಾಗ)

ಸ್ತುತಿಸದ ಕರ್ಮಭ್ರಷ್ಟರನ್ನು ನಾಶ ಮಾಡುತ್ತಾರೆ. ಇಂದ್ರ ವರುಣರು ಅನುಗ್ರಹಿಸುವ ಯಜಮಾನರನ್ನು ಪಾಪವಾಗಲಿ, ಪಾಪದ ಫಲವಾಗಲಿ, ಸಂತಾಪಗಳಾಗಲಿ, ಹಿಂಸೆಗಳಾಗಲಿ ಬಾಧಿಸುವುದಿಲ್ಲ. ವರುಣನು ಪಾಪಪುಣ್ಯ ರೂಪದಲ್ಲಿ ಬೇರೆ ಬೇರೆ ಪ್ರಜೆಗಳನ್ನು ನಿಯಮನದಿಂದ ರಕ್ಷಿಸುತ್ತಾನೆ. ವರುಣನು ಪ್ರಕಾಶಮಾನ ಪ್ರಭು. ಮಿತ್ರಾ, ವರುಣರನ್ನು ರಕ್ಷಣಾರ್ಥವಾಗಿ ಪೂಜಿಸುತ್ತಾರೆ.

**ಪ್ರಾರ್ಥನೆ:** ಇಂದ್ರಾ ವರುಣರು ತಮ್ಮನ್ನು ಪೂಜಿಸುವ ಪುರುಷನಿಗೆ ಯಜ್ಞಕ್ಕೆ ಅನುಕೂಲವಾಗುವಂತಹ ಮಹತ್ತಾದ ಗೃಹ ಒದಗಿಸಲಿ. ಪಾಪ ನಾಶಕ, ಪ್ರಜ್ಞಾವಂತ ವರುಣನು ಯಜಮಾನನನ್ನು ವೀಕ್ಷಿಸುವ ಆಪತ್ತುಗಳನ್ನು ನಾಶಮಾಡಲಿ.

## ಇಂದ್ರಾಗ್ನಿ
## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ ವಿಭಾಗ)

ಇಂದ್ರಾಗ್ನಿಗಳು ಸುಲಭ ಆಹ್ವಾನ ಪಾತ್ರರು ಹಾಗೂ ಜೊತೆಯಲ್ಲಿಯೇ ಇರುವವರು. ಸಕಲರಿಂದ ಪೂಜಿತರು. ಒಟ್ಟಿಗೆ ಬೆಳೆಯುವವರು, ಬಲದೊಡನೆ ವೃದ್ಧಿಸುವವರು, ವೀರ ಕರ್ಮವುಳ್ಳವರು, ಧನ ಅನ್ನಕ್ಕೆ ಈಶ್ವರರು, ಶತ್ರುನಾಶಕರು, ಪ್ರಸಿದ್ಧರು, ಸೋಮಪಾನದಿಂದ ಹರ್ಷಿತರು.

**ಆಶ್ರಮ:** ಇಂದ್ರಾಗ್ನಿಗಳು ಯಾವಾಗಲೂ ಯಜಮಾನರುಗಳನ್ನು ತ್ಯಜಿಸುವುದಿಲ್ಲ ಹಾಗೂ ಇತರರನ್ನು ಗೌರವಿಸಿಯೂ ಇಲ್ಲ. ಇಂದ್ರಾಗ್ನಿಗಳು ದಯಮಾಡಿಸಲಿ ಎಂದು ಆಹ್ವಾನಿಸಿದ್ದಾರೆ. ಅಗ್ನಿಯು ಹವಿಸ್ಸು ಸ್ವೀಕರಿಸಲಿ, ಶಸ್ತ್ರಮಂತ್ರ ಸ್ತುತಿಸುತ್ತಾರೆ, ಪೂಜಿಸುತ್ತಾರೆ, ಯಜ್ಞ ನಿರ್ವಹಿಸುತ್ತಾರೆ, ಹವಿಸ್ಸು ಅರ್ಪಿಸುತ್ತಾರೆ, ಸೋಮದೊಡಗೂಡಿ ಆಹ್ವಾನ ಮನ್ನಿಸಿ ಅನುಗ್ರಹಿಸಲು ಅನ್ನದೊಡನೆ ಇಂದ್ರಾಗ್ನಿಗಳು ದಯಮಾಡಿಸಲಿ. ಒಂದೇ ರೀತಿ ತೊಂದರೆಯಲ್ಲಿರುವವರು ಇಂದ್ರಾಗ್ನಿಗಳನ್ನು ಸ್ತುತಿಸಲು ಋಷಿಗಳು ಹೇಳಿದ್ದಾರೆ.

**ಪ್ರಾರ್ಥನೆ:** ಸೋಮಾಭಿಶವಣ ಕ್ರಿಯೆಯನ್ನು ಅನುಗ್ರಹಿಸಲಿ, ದೇವತೆಗಳನ್ನು ಪೂಜಿಸದ ಕರ್ಮ ಭ್ರಷ್ಟರನ್ನು ನಾಶಮಾಡಲಿ, ಸ್ತೋತ್ರ ಮಾಡಲು ಅನ್ನ, ಬಲ ನೀಡಲಿ. ದಾನಾರ್ಹ ಧನಗಳಿಂದ ಪ್ರಸಿದ್ಧರಾಗುವಂತೆ ಮಾಡಲಿ, ಅಂತಹ ಧನವನ್ನು ಅನುಭವಿಸುವಂತೆ ಆಗಲಿ. ಮಿತ್ರ, ವರುಣ, ಇಂದ್ರರು ಯಜಮಾನರನ್ನು ಪ್ರಶಂಸಿಸಲಿ. ಎಲ್ಲಾ ಅಪರಾಧಗಳನ್ನು, ಪಾಪಗಳನ್ನು ಮನ್ನಿಸಿ ರಕ್ಷಿಸಲಿ, ರಕ್ಷಣೆಗಾಗಿ ಬೇಡಿದ್ದಾರೆ. ಅಶ್ವ, ಗೋವು, ಸುವರ್ಣ ಪಡೆಯಲು ಕರ್ಮಗಳನ್ನು ಮಾಡಿದ್ದಾರೆ. ಪಾಪಗಳಿಗೆ ವಶಮಾಡದೇ ಶತ್ರುಗಳಿಗೆ ಬಿಟ್ಟುಕೊಡದೆ, ದೂಷಕರ ಕೈಗೆ ಸಿಗದಂತೆ ಮಾಡಲಿ ಎಂದು ಪ್ರಾರ್ಥಿಸಿದ್ದಾರೆ. ಯಾರ ಹಿಂಸೆಯೂ ಯಜಮಾನನನ್ನು ಸಮೀಪಿಸದಿರಲಿ, ಸಂಪತ್ ಕಬಳಿಸುವವರನ್ನು ಮಡಕೆ ಒಡೆದಂತೆ ಆಯುಧಗಳಿಂದ ಬಡಿದು ಯಜಮಾನನನ್ನು ರಕ್ಷಿಸಲಿ.

## ಇಂದ್ರ, ಬ್ರಹಸ್ಪತಿ
## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ ವಿಭಾಗ)

ಬ್ರಹಸ್ಪತಿಯು ದಾತ್ಯ, ಪೂಜ್ಯ, ಶುದ್ಧ, ಬುದ್ಧಿಕಾರಕ, ಸುಖಕಾರಕ, ಆದಿತ್ಯನಂತೆ ಆಕರ್ಷಕ ರೂಪಿ, ಅನೇಕ ಸುವರ್ಣಮಯ ಆಯುಧಗಳುಳ್ಳವನು, ಯಜಮಾನನಿಗೆ ಅತ್ಯಧಿಕ ಅನ್ನ ಕೊಡುತ್ತಾನೆ. ಅನ್ನವು ಲೋಕಕ್ಕೆ ಪ್ರಸಿದ್ಧ ಭೋಗಸಾಧನ, ಶಾಶ್ವತ ಜೀವನಕ್ಕೆ ಅತ್ಯವಶ್ಯಕವಾದುದು. ಬ್ರಹಸ್ಪತಿಯ ಆಜ್ಞಾನುಸಾರ ಯಜಮಾನರು ಅನ್ನ ಧನ ಪಡೆಯುತ್ತಾರೆ. ಪ್ರಶಸ್ತ ಸುಖಕಾರಕ, ಸ್ತೋತ್ರಗಳಿಗೆ, ಮಂತ್ರಗಳಿಗೆ ಪ್ರಭು, ಅನೇಕ ವಿಧ ಆಯುಧ ಧರಿಸಿ ಎಲ್ಲರಿಗೂ ಬೇಕಾದವನು, ಉತ್ತಮ ಉದಕಪ್ರದ, ಉತ್ತಮ ನಿವಾಸವುಳ್ಳವನು, ಗೃಹಸ್ಥರಿಗೆಲ್ಲ ಪೂಜ್ಯ, ಶುದ್ಧ ಸ್ತುತಿಪಾತ್ರ. ಅಪ್ರತಿಹತ, ಪಾಪರಹಿತರಾಗಿ ಹವಿಸ್ಸು ಅರ್ಪಿಸುವವರಿಗೆ, ಪೂಜಿಸುವವರಿಗೆ ಬ್ರಹಸ್ಪತಿಯು (ತಂದೆಯು ಸಂಪಾದಿಸಿದ ಧನವನ್ನು ಪುತ್ರರಿಗೆ ಕೊಡುವಂತೆ) ಕೊಡುತ್ತಾನೆ. ಅತ್ಯಧಿಕ ಧನ ನೀಡುತ್ತಾನೆ. ಇಂದ್ರನು ಪ್ರಜೆಗಳ ಮಧ್ಯದಲ್ಲಿ ಅತಿ ಶ್ರೇಷ್ಠ ಧನವಂತ, ಯುದ್ಧಮಾಡಿ ಧನ ಸಂಪಾದಿಸುತ್ತಾನೆ. ಅಂತರಿಕ್ಷವನ್ನೆಲ್ಲಾ ವ್ಯಾಪಿಸಿರುವ ಇಂದ್ರನು ತೇಜಸ್ವಿ ಹಾಗೂ ಗೋವುಗಳಿಗೆ ಪಾಲಕ. ಇಂದ್ರನು ಸೂರ್ಯರೂಪಿನಿಂದ, ತೇಜಸ್ಸಿನಿಂದ ಪ್ರಕಾಶಿಸುವ ಸಕಲ ಜಗತ್ತು ಇಂದ್ರನದೇ ಆಗಿದೆ.

ಇಂದ್ರನು ಯಜಮಾನರ ಜೊತೆ ನಿಂತು ಬಾಹುಬಲದಿಂದಲೇ ಶತ್ರುಗಳನ್ನು ಜಯಿಸುವಂತೆ ಮಾಡುತ್ತಾನೆ. ಉತ್ತಮ ಅನ್ನಕ್ಕೆ ಕಾರಣವಾದ ಯುದ್ಧದಲ್ಲಿ ಮರುತ್‌ಗಳೊಡನೆ ಸೇರಿ ಶತ್ರುಗಳನ್ನು ದಮನಮಾಡಿ ಯಜಮಾನರು ಜಯಿಸುವಂತೆ ಮಾಡುತ್ತಾನೆ.

**ಆಶ್ರಮ :** ಇಂದ್ರನು ಇತರೇ ದೇವತೆಗಳಿಗಿಂತ ಪೂರ್ವಭಾವಿಯಾಗಿ ತನ್ನ ಅಶ್ವಗಳೊಡನೆ ಬಂದು ಸೋಮಪಾನ ಮಾಡಿ ಹರ್ಷಿಸಲಿ, ಹೊಂಬಣ್ಣದ ಅಶ್ವಗಳು ನಿವಾಸದ ಒಟ್ಟು ಶಕ್ತಿಯಂತಿರುವ ಬ್ರಹಸ್ಪತಿಯನ್ನು ಕರೆತರಲಿ. ಇಂದ್ರ ಬ್ರಹಸ್ಪತಿ ಇಬ್ಬರೂ ಧನಕ್ಕೆ ಒಡೆಯರು. ಅತ್ಯಧಿಕ ಧನ ನೀಡುತ್ತಾರೆ. ಪೂಜಾ ಯೋಗ್ಯ ಸ್ತುತಿ ಸೇವಿಸಲಿ, ಬ್ರಹಸ್ಪತಿಯು ಯಜಮಾನನ ಯಜ್ಞ ವೇದಿಕೆಯಲ್ಲಿ ಕುಳಿತುಕೊಳ್ಳಲಿ, ಯಜಮಾನನು ಬ್ರಹಸ್ಪತಿಯನ್ನು ಸ್ತುತಿಸಿ ಹವಿರರ್ಪಿಸಿ ಕರ್ಮರಕ್ಷಕರಾಗಿ ಇರಲು ಪ್ರಾರ್ಥಿಸುತ್ತಾರೆ. ಯಜ್ಞವು ಪೃಥ್ವಿಗೆ ಸೇರಿದುದು. ಯಜಮಾನನ ಸಾಧನಭೂತವಾದುದು. ದೇವತಾ ಅನುಗ್ರಹ ಅಪೇಕ್ಷಿಸಿ ಯಜಮಾನನು ಹರ್ಷಪಡುವಂತಹುದು. ಸೋಮರಸ ಹಿಂಡಲ್ಪಡುವಂತಹದು. ದ್ಯಾವಾ ಪೃಥ್ವಿಗಳು ದೇವತಾತ್ಮರು, ಬ್ರಹಸ್ಪತಿಯ ಉತ್ಪಾದಕರು ಹಾಗೂ ಅವನನ್ನು ಬೆಳೆಸುವವರು, ಬ್ರಹಸ್ಪತಿಯನ್ನು ಸ್ತೋತ್ರಗಳಿಂದ, ಪೂಜೆಗಳಿಂದ, ನಮಸ್ಕಾರಗಳಿಂದ, ಯಜಮಾನರು ನಮಿಸಿ, ಸ್ತುತಿಸಿ ತೃಪ್ತಿ ಪಡುತ್ತಾರೆ.

## ಇಂದ್ರ - ವಿಷ್ಣು
## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ ವಿಭಾಗ)

ವಿಷ್ಣುವು ಶರೀರ ವೃದ್ಧಿ ಹೊಂದಿರುವವನು, ದಾನಾದಿ ಗುಣಯುಕ್ತ ಕರ್ಮಗಳಿಂದ ವಿಷ್ಣುವಿನ ಮಹಾತ್ಮ್ಯವನ್ನು ಯಾರೂ ತಿಳಿಯಲಾರರು. ಅಳತೆಮಾಡಲು ಯಾರಿಂದಲೂ ಸಾಧ್ಯವಿಲ್ಲ. ದ್ಯಾವಾ ಪೃಥ್ವಿಗಳೆರಡನ್ನು ಪ್ರತ್ಯೇಕವಾಗಿ ಎತ್ತಿ ಹಿಡಿದು ಪೃಥ್ವಿಯನ್ನು ಪರ್ವತಗಳು ಸುತ್ತುವರಿಯುವಂತೆ ಮಾಡಿದುದು ವಿಷ್ಣುವೇ. ಅತ್ಯುತ್ಕೃಷ್ಟವಾದ ಪರಲೋಕವನ್ನು ಅರಿತಿರುವವನು ವಿಷ್ಣು ಒಬ್ಬನೇ. ಅವನ ಮಹಾತ್ಮವನ್ನು ಯಾರೂ ಅರಿಯರು. ಆಕರ್ಷಕ ಮಹಾತ್ಮ್ಯದ ದ್ಯುಲೋಕವನ್ನು ಎತ್ತಿ ಹಿಡಿದಿರುವ ಪೃಥ್ವಿಯ ಪೂರ್ವ ದಿಕ್ಕನ್ನು ಧರಿಸಿರುವವ ವಿಷ್ಣುವಿನ ಮಹತ್ವವನ್ನು ಈಗ ಉತ್ಪನ್ನರಾಗಿರುವ ಮುಂದೆ ಉತ್ಪನ್ನರಾಗುವ ಯಾರೂ ಸಮೀಪಿಸಲಾರರು. ದ್ಯಾವಾ ಪೃಥ್ವಿಗಳು ಸ್ತುತಿಸುವ ಮಾನವರಿಗೆ ದಾನ ಮಾಡುವ ಇಚ್ಛೆಯಿಂದ ಅನ್ನ, ಧೇನು, ತೃಣಗಳನ್ನು ಭರಿಸಿವೆ. ಇಂದ್ರಾ ವಿಷ್ಣುಗಳು ಬೃಹತ್ ಸ್ವರೂಪರು, ಶಕ್ತಿಯುತರು, ಸೂರ್ಯ, ಉಷಸ್, ಅಗ್ನಿ ಇವರು ಯಜಮಾನನಿಗಾಗಿ ಉತ್ಪತ್ತಿ ಮಾಡುತ್ತಾ ಸ್ವರ್ಗ ಲೋಕ ನಿರ್ಮಿಸಿದ್ದಾರೆ. ಇಂದ್ರಾ ವಿಷ್ಣುಗಳು ವಂಚಕ ರಾಕ್ಷಸರನ್ನು ನಾಶ ಮಾಡಿದ್ದಾರೆ. ಶಂಬರಾಸುರನನ್ನು ಅವನ 99 ಪಟ್ಟಣಗಳನ್ನು ಒಂದು ಲಕ್ಷ ವೀರ ಭಟರನ್ನು ಒಟ್ಟಾಗಿ ನಾಶಮಾಡಿದ್ದಾರೆ.

ಆಶ್ರಮ: ವಷಟ್ಕಾರ ಪೂರ್ವಕ ಮಂತ್ರ ನಿರ್ಮಿಸಿ, ಪಠಿಸಿ, ಸ್ತುತಿಸಿ ಹವಿರರ್ಪಿಸಿ ಮಂತ್ರಗಳಿಂದ ಪ್ರವೃದ್ಧರಾಗಿದ್ದಾರೆ.

ವಾಸ್ತೋಸ್ಪತಿ : ವಾಸ್ತೋಸ್ಪತಿ ದೇವನು ಯಜಮಾನನ ಮಿತ್ರನಾಗಿ, ಸುಖಕಾರಕನಾಗಿ, ರೋಗ ನಾಶಕನಾಗಿ, ವಿವಿಧ ಸ್ವರೂಪ ಹೊಂದುತ್ತಾನೆ.

ಪ್ರಾರ್ಥನೆ: ಯಜಮಾನನ ಸಕಲ ಬಂಧು-ಜನ, ಪರಿವಾರ ಜನ ಎಲ್ಲರೂ ಸದ್ದಿಲ್ಲದೆ ನಿದ್ದೆಮಾಡುವಂತಾಗಲಿ, ಮಂಗಳಕರ ಸುಗಂಧಯುಕ್ತ ಸುಪತ್ತಿಗೆಯ ಮೇಲೆ ಮಲಗಿರುವ ಎಲ್ಲಾ ಸ್ತ್ರೀಯರು ನಿದ್ರಿಸುವಂತಾಗಲಿ.

## ಇಂದ್ರ - ಸೋಮರು

## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ, ವಿಭಾಗ)

ಸೋಮನು ಅಸತ್ಯವನ್ನು ನಾಶಮಾಡಿ ಸತ್ಯ ಪ್ರಾಮಾಣಿಕತೆಯನ್ನು ರಕ್ಷಿಸುತ್ತಾನೆ. ಸೋಮಪಾನದಿಂದ ಸುಸಂಸ್ಕೃತರಾಗುತ್ತಾರೆ. ಮದಕಾರಿ ಅಸುರರನ್ನು, ಅಸತ್ಯ ಹೇಳುವ ಪುರುಷರನ್ನು, ಅಸತ್ಯ ವಾಕ್ ಬೆಳೆಸುವವರನ್ನು ಅವರು ಎಷ್ಟೇ ಶಕ್ತಿಯುತರಾದರೂ ಬಿಡುವುದಿಲ್ಲ. ಅಂತಹ ದುಷ್ಟರನ್ನು ಇಂದ್ರನು ಕೊಲ್ಲುತ್ತಾನೆ. ಮೋಸ ಮಾಡುವ, ಅಸತ್ಯ ಹೇಳುವ, ಹವಿಸ್ಸನ್ನು ನಾಶಮಾಡಲು ಬರುವ ರಾಕ್ಷಸರನ್ನು ಹಿಂಸಿಸುತ್ತಾನೆ. ರಾಕ್ಷಸರು ಮೌನದಿಂದರಲಿ, ನಾನಾ ರೂಪ ಧರಿಸಿರಲಿ, ರಾಕ್ಷಸ ರೂಪಿನಲ್ಲೆ ಇರಲಿ, ನಾಯಿಯಂತಿರಲಿ, ಗೂಬೆಯಂತಿರಲಿ, ಚಕ್ರವಾಕದಂತಿರಲಿ, ಅವರನ್ನು ಬಿಡುವುದಿಲ್ಲ ಹಿಂಸಿಸಿ ನಾಶಮಾಡುತ್ತಾನೆ.

ಆಶ್ರಮ : ಯಜಮಾನರು ಇಂದ್ರನೊಡನೆ ಪರಿಶುದ್ಧ ಭಕ್ತಿಯಿಂದ ವ್ಯವಹರಿಸುತ್ತಾರೆ. ಸೋಮದೇವನಿಂದ ಜ್ಞಾನಿಗಳಿಗೆ ಸತ್ಯ, ಅಸತ್ಯಗಳ ವ್ಯತ್ಯಾಸ ಸುಲಭವಾಗಿ ತಿಳಿಯುತ್ತದೆ.

ಪ್ರಾರ್ಥನೆ : ಇಂದ್ರ ಸೋಮರು ಧ್ಯಾನಾತ್ಮಕ ಸ್ತುತಿಗಳಿಂದ ಶುದ್ಧ ಭಕ್ತಿಯುತರಾಗಿ ಇರುವವರನ್ನು (ಇಂದ್ರಾ ವರುಣರು ತೃಪ್ತರಾಗಿ ರಾಜನು ಧನದಿಂದ ತುಂಬುವಂತೆ) ವೇಗಗಾಮಿ ಅಶ್ವಗಳೊಂದಿಗೆ ಬಂದು ಫಲದಿಂದ ತುಂಬಲಿ. ಅಂತರಿಕ್ಷ, ಪೃಥ್ವಿ ದ್ಯುಲೋಕ ಉತ್ಪನ್ನ ಪಾಪಗಳಿಂದ ರಕ್ಷಿಸಲಿ. ಸ್ತ್ರೀ ಪುರುಷ ರಾಕ್ಷಸ ಜೋಡಿಗಳನ್ನು ಉಷೋ ದೇವಿ ಹೊಡೆದೋಡಿಸಲಿ. ಇಂದ್ರ ಸೋಮರು ಹಿಂಸಕರು, ವಂಚಕರು, ಮುಂತಾದವರನ್ನು ಅಧೋ ಭಾಗಕ್ಕೆ ತಳ್ಳಿ ದಹಿಸಿ ಹಿಂಸಿಸಿ ನಾಶಮಾಡಲಿ. ಅಗ್ನಿಯೊಂದಿಗೆ ಸೇರಿ ಪೂರ್ಣ ನಾಶ ಮಾಡಲಿ. ಅಂತರಿಕ್ಷದ ಮೇಲ್ಭಾಗದಿಂದ ವಜ್ರಾಯುಧ ಪ್ರಯೋಗಿಸಿ ಇಂದ್ರನು ಅವರ ಸಂಪತ್ತನ್ನು ಸಂಪೂರ್ಣವಾಗಿ ನಾಶಮಾಡಲಿ, ಅವರು ಶಬ್ಧ ಮಾಡದೇ ಓಡಿ ಹೋಗಲಿ. ದುಷ್ಕರ್ಮಿಗಳನ್ನು ಅಂಧಕಾರಾವೃತ ಆಳ ಪ್ರದೇಶಕ್ಕೆ ತಳ್ಳಿ ಇಂದ್ರ ಸೋಮರು ಹಿಂಸಿಸಲಿ. ಯಜಮಾನನು ಹಿಂಸಿತನಾಗದಂತೆ ನೋಡಿಕೊಳ್ಳಲಿ, ಋಷಿಗಳನ್ನು ನಿಂದಿಸುವವರು, ಪುತ್ರರನ್ನು ಕಳೆದುಕೊಂಡು ದುಃಖ:ಅನುಭವಿಸುವಂತಾಗಲಿ. ಯಜಮಾನನ ಹಿಂಸಕರು, ಚೋರರು, ಸಂಪತ್ ಅಪಹರಿಸುವವರನ್ನು ಅಗ್ನಿಯು ಪೂರ್ಣ ಹಿಂಸಿಸಲಿ. ಆಹೋ ರಾತ್ರಿ ಹಿಂಸಿಸುವ ಅಸುರನು ಎಲ್ಲವನ್ನೂ ಕಳೆದುಕೊಂಡು ಅಂಧಕಾರ ಪ್ರದೇಶಕ್ಕೆ ಬೀಳಲಿ, ಅನ್ನ ನಾಶವಾಗಲಿ. ರಾಕ್ಷಸ ಸ್ತ್ರೀಯರು ಗೂಬೆಯಂತೆ ಆಳ ಕಮರಿಗೆ ತಲೆಕೆಳಗಾಗಿ ಬೀಳಲಿ. ಮರುತ್‌ಗಳು ಯಜ್ಞಕರ್ತ ಪ್ರಜೆಗಳ ನಡುವೆ ನಿಂತು ಅಸುರರ ಹಾವಳಿಯಿಂದ ರಕ್ಷಿಸಲಿ.

### <u>ಈ ಮಂಡಲದಲ್ಲಿ ಕೆಲವು ವಿಶೇಷತೆಗಳು</u>

1) ಅತಿ ದೂರದಿಂದ ಯಾಗ ಪ್ರದೇಶಕ್ಕೆ ಅಶ್ವಗಳೊಂದಿಗೆ, ಧನದೊಡನೆ ಬಂದು ಅಲ್ಲೇ ಇದ್ದು ಸ್ತುತಿಗಳನ್ನು ಕೇಳಿ ಧನ, ಗೃಹ ರಕ್ಷಣೆಗಳನ್ನು ಮಾಡಲು ಕೇಳಿಕೊಂಡಿದ್ದಾರೆ.

2) ಸ್ತೋತ್ರಗಳಿಲ್ಲದ ಕರ್ಮಗಳನ್ನು ಇಂದ್ರನು ಸ್ವೀಕರಿಸುವುದಿಲ್ಲ.

3) ಸಕಲ ಪ್ರಜೆಗಳೂ ಇಂದ್ರನ ಸಹಾಯಾರ್ಥ ಅತಿಶಯ ಭಕ್ತಿ ಸ್ತುತಿಗಳಿಂದ ಇಂದ್ರನನ್ನು ನಮಸ್ಕರಿಸುತ್ತಾರೆ.

4) ಮಾನವರಲ್ಲಿ ತನ್ನ ಜೀವಿತದ ಪರಿಣಾಮವನ್ನು ಖಂಡಿತ ಯಾರೂ ಅರಿಯಲಾಗುವುದಿಲ್ಲ.

5) ಈ ಹಿಂದೆ ಸ್ತೋತೃಗಳು (ವೃದ್ಧರು) ನಿಯಮಾನುಸಾರ ವಾಯುವನ್ನು ಪ್ರಶಂಸಿಸಿ ಪಾಪ ರಹಿತರಾಗಿದ್ದಾರೆ.

6) "ಸುದಾಸನ" ಕೀರ್ತಿ ದ್ಯಾವಾ ಪೃಥ್ವಿಪ್ರಸಿದ್ಧವಾದುದು. ಸಾಧು ಸಜ್ಜನರಿಗೆ ಧನ ದಾನಮಾಡಿದವರು ಸಪ್ತಲೋಕ ಪ್ರಸಿದ್ಧರು. ಪುರಾತನ ಉದಕಗಳು ಹರಿಯುವುದು ಯಾಜ್ಞಿಕರಿಗಾಗಿಯೆ.

7) ಕೆಟ್ಟ ಮಾರ್ಗಕ್ಕೆ ಎಳೆಯುವವರನ್ನು ಸೋಮ ಸರ್ಪದ ಬಾಯಿಗೆ ಅಥವಾ ಪಾಪ ದೇವತೆ ನಿರ್ಋತಿ ಹಿಂಸೆಗೆ ಒಳಪಡಿಸಲಿ. ರಾತ್ರಿಯ ವೇಳೆ ಸಂಚರಿಸುವ ಪಕ್ಷಿರೂಪ, ಹಾರಾಡುವ ರಾಕ್ಷಸರನ್ನು ಹಿಡಿದು ಚೂರು ಚೂರು ಮಾಡಲಿ. ಸ್ತುತಿಕರ್ತರ ಸ್ತುತಿಗಳಿಂದ, ಆಚರಿಸಿದ ಕರ್ಮಗಳಿಂದ ತೃಪ್ತನಾಗಿ (ಸತಿಯನ್ನು ಪತಿಯು ಸ್ವಾಧೀನ ಪಡಿಸಿಕೊಳ್ಳುವಂತೆ ನಮ್ಮನ್ನು ಇಂದ್ರನು ತನ್ನ ಸ್ನೇಹಿತನನ್ನಾಗಿ ಮಾಡಿಕೊಳ್ಳಲಿ).



## ಇಂದ್ರ, -ವಾಯು

## ಮಂಡಲ 7 - ವಸಿಷ್ಠರು ಋಷಿಗಳು (ಸ್ತೋತ್ರ ವಿಭಾಗ)

ಇಂದ್ರ ವಾಯುಗಳು ಸರ್ವೇಶ್ವರರು, ಶುಭ್ರವರ್ಣ, ಧನದಾತೃ, ಧನಯುಕ್ತ, ವೀರ್ಯಯುಕ್ತ, ದ್ಯಾವಾ ಪೃಥ್ವಿಗಳು ವಾಯುವನ್ನು ಉತ್ಪನ್ನ ಮಾಡಿದರು, ಸ್ತುತಿಸುವವರಿಗೆ ಕ್ಷಿಪ್ರ ಧನ ನೀಡುತ್ತಾರೆ. ವಾಯುವನ್ನು ಸೇವಿಸುವವರನ್ನು ವಾಯುವಿನ ಅಶ್ವಗಳು ದಾರಿದ್ರ್ಯ ರಹಿತ ಪ್ರದೇಶಕ್ಕೆ ಕರೆದೊಯ್ಯುತ್ತವೆ. ವೀರ್ಯಯುಕ್ತರು, ಹವಿಸ್ಸು ಸೇವಿಸುವವರು, ಅಶ್ವರಥದಲ್ಲಿ ಯಜ್ಞಕ್ಕೆ ಬರುವವರು, ಅನ್ನವಂತರು, ಸಂಪತ್‌ಯುಕ್ತರು, ಇಂದ್ರ ವಾಯುಗಳು ಪೂಜಾ ಅಪೇಕ್ಷಿಗಳು, ರಕ್ಷಕರು, ಸೋಮಪಾನಿಗಳು, ಅನೇಕ ಸಂವತ್ಸರಗಳ ಕಾಲ ರಕ್ಷಿಸುವವರು, ವಾಯುವು ದೇವತಾತ್ಮ, ಎಲ್ಲರಿಂದಲೂ ಅಪೇಕ್ಷಿತ, ಎಲ್ಲರಿಗಿಂತಲೂ ಮುಂಚೆ ಸೋಮಪಾನ ಮಾಡುವವನು.

**ಆಶ್ರಮ :** ಇಂದ್ರ ವಾಯುಗಳನ್ನು ದರ್ಭಾಸೀನರಾಗಲು ಪ್ರಾರ್ಥಿಸುತ್ತಾರೆ. ಪುರೋಡಾಶಯುಕ್ತ ಆಹುತಿ, ಸೋಮ ಅರ್ಪಿಸುವ ಯಜಮಾನನನ್ನು ಮಾನವರಲ್ಲಿ ಪ್ರಮುಖನನ್ನಾಗಿ ಮಾಡುತ್ತಾನೆ ಹಾಗು ಧನ ಪ್ರಾಪ್ತಿಗೆ ಅರ್ಹನಾಗುವಂತೆ ಮಾಡುತ್ತಾನೆ. ಯಾಜ್ಞಿಕರು ಹವಿಸ್ಸು ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಶತ್ರು ಬಾಧೆ, ರಕ್ಷಣೆ ಮಾಡಲು ಹವಿಸ್ಸನ್ನು ಅರ್ಪಿಸುತ್ತಾರೆ. ಪ್ರಜಾ ಸಂತತಿಗಾಗಿ ಕರ್ಮನೇತೃಗಳು ವಾಯುವಿಗೆ ನಿರ್ದಿಷ್ಟ ಸಕಲ ಕರ್ಮಗಳನ್ನು ಮಾಡುತ್ತಾರೆ. ಅಧ್ವರ್ಯುಗಳು ಕುಶಲಿಗಳು. ಪ್ರಥಮಸೋಮಪಾನಾರ್ಹರು. ಸೋಮವು ಸಿದ್ಧವಾಗಿರುತ್ತದೆ. ಸಮಸ್ತ ಸ್ತೋತ್ರಗಳಿಂದ ಸ್ತುತಿಸುತ್ತಾರೆ.

ಸೋಮವನ್ನು ವಾಯು ಸಮೀಪ ತಂದಿಡುತ್ತಾರೆ. ಯಾಜ್ಞಿಕರ ಸಮೀಪವೇ ವಾಯುವು ಕುಳಿತುಕೊಳ್ಳಲು ಹೇಳುತ್ತಾರೆ. ಪ್ರಾತ: ಸವನದಲ್ಲಿ ಹರ್ಷಗೊಳ್ಳಲಿ. ಯಜ್ಞ ಸಾರ್ಥಕಪಡಿಸಲು ಪ್ರಾರ್ಥಿಸುತ್ತಾರೆ.

**ಪ್ರಾರ್ಥನೆಗಳು :** ಇಂದ್ರ ವಾಯುಗಳು ಒಂದೇ ರಥದಲ್ಲಿ ಬರಲಿ, ಯಜಮಾನಾಭಿಮುಖ ಬರಲು ವಸಿಷ್ಠ ವಂಶಜರು ಪ್ರಾರ್ಥಿಸಿದ್ದಾರೆ. ಯಜಮಾನನಿಗೆ ಉತ್ತಮ ಧನ, ಅನ್ನ ಒದಗಿಸಲಿ. ಶಕ್ತಿಯುಕ್ತ ಪುತ್ರರು, ಗೋಸಂಪತ್ತು, ಅಶ್ವಸಂಪತ್ತುಗಳನ್ನು ಒದಗಿಸಲಿ, ಶತ್ರುಗಳನ್ನು ನಾಶಮಾಡಲು ಶಕ್ತಿ ನೀಡಲಿ, ದೇವತೆಗಳು ತಮ್ಮನ್ನು ಕಲ್ಯಾಣಗಳಿಂದ ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ.

# ಇಂದ್ರದೇವರು

## ವಸಿಷ್ಟರ ಆಶ್ರಮದಲ್ಲಿ ಕಾರ್ಯಕ್ರಮಗಳು

ಅನೇಕ ಪ್ರಾಕಾರಗಳಿಂದ ಇಂದ್ರ ಸ್ತುತಿಕರ್ತರು, ಇಂದ್ರ ಪೂಜಕರು ಅಧಿಕವಾಗಿ ಪ್ರಸಿದ್ಧ ಸ್ತುತಿಗಳನ್ನು ನಿರ್ಮಿಸಿ ನಿಲ್ಲಿಸದೆ ಸ್ತುತಿಸುತ್ತಿರುತ್ತಾರೆ. ಉತ್ತಮ ಸ್ತುತಿಗಳನ್ನು ಇಷ್ಟಾರ್ಥ ಸಾಧನೆಗಾಗಿ ಇಂದ್ರನಿಗೆ ಅರ್ಪಿಸುತ್ತಾರೆ ಮತ್ತು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಋತ್ವಿಜರ ಸ್ತೋತ್ರಗಳಿಂದ ಇಂದ್ರಾ-ವರುಣರು ಪ್ರಸನ್ನರಾಗುತ್ತಾರೆ. ಹಿಂದಿನ ಋಷಿಗಳು ಸ್ತುತಿಸಿದಂತೆಯೇ ಇವರು ಸ್ತುತಿಸಿ ದೇವತೆಗಳನ್ನು ಸಮೀಪಿಸುತ್ತಾರೆ. ಭಯಂಕರ ಸಂಗ್ರಾಮ ಸನ್ನಿವೇಶದಲ್ಲಿ ಇಂದ್ರಾ ವರುಣರ ಅನುಗ್ರಹಕ್ಕಾಗಿ ವಿಶೇಷ ಪೂಜೆ, ಪ್ರಾರ್ಥನೆ ಯಾಗಗಳನ್ನು ಮಾಡುತ್ತಾರೆ. ಸವಿತೃವನ್ನು ಸ್ತೋತ್ರ ಮಾಡುತ್ತಾರೆ. ಇಂದ್ರನು ಸ್ತುತಿ ಆಲಿಸಲಿ, ವಿಮರ್ಶಿಸಲಿ, ಸ್ವೀಕರಿಸಲಿ, ವೈಯುಕ್ತಿಕವಾಗಿ ಸಕಲರು ಸ್ತುತಿಸಿ ಸಹಾಯಕ್ಕೆ ಕರೆಯುತ್ತಾರೆ. ಧ್ಯಾನಾತ್ಮಕ, ಸತ್ಯಾತ್ಮಕ ಸ್ತುತಿಗಳಿಂದ, ಸತ್ಕರ್ಮಗಳಿಂದ ದೇವತೆಗಳನ್ನು ಆಹ್ವಾನಿಸುತ್ತಾರೆ. ಇಂದ್ರನನ್ನು ಉದ್ದೇಶಿಸಿಯೇ ಕರ್ಮಗಳನ್ನು ಮಾಡುತ್ತಾರೆ. ಕರ್ಮ ಹೀನರಿಗೆ ದೇವತೆಗಳು ಸಹಾಯಕರಾಗುವುದಿಲ್ಲ. ಕುಶಲತೆಯಿಂದ ಕರ್ಮದ ನಿರ್ವಹಿಸುವವರು ಮಾತ್ರ ಗೃಹಗಳಲ್ಲಿ ವಾಸಿಸುತ್ತಾರೆ ಮತ್ತು ಜಯ ಗಳಿಸುತ್ತಾರೆ. ಇಂದ್ರಾದಿ ದೇವತೆಗಳು ಹವಿರೂಪ ಅನ್ನ ಸೇವಿಸಲಿ, ವಾಯುವಿನಂತೆ ಇಂದ್ರನು ಸ್ತುತಿ ಕರ್ತರ ಅಭಿಮುಖನಾಗಲಿ, ಇಂದ್ರನು ಸ್ತುತಿ ಸ್ವೀಕರಿಸಿ ಅಶ್ವಗಳನ್ನು ಯಜಮಾನಾಭಿಮುಖ ಮಾಡಲಿ, ಯಜ್ಞದಲ್ಲೇ ಇದ್ದು ಸ್ತುತಿಗಳಿಂದ ತೃಪ್ತಿ ಹೊಂದಿ ಸೋಮದಿಂದಲೂ ಹರ್ಷಿತನಾಗಿ ಕಲ್ಯಾಣಗಳಿಂದ ರಕ್ಷಿಸಲಿ.

ವಸಿಷ್ಟ ವಂಶೋತ್ಪನ್ನ ಹವಿಷ್ಮಂತ ಯಜಮಾನನು ಪರಾಕ್ರಮಿ ಇಂದ್ರನಿಂದ ರಕ್ಷಿತರಾಗಿ ಕಠಿಣ ಸಾಧನೆ ಸ್ತುತಿಗಳಿಂದ ಸೋಮ ಹಿಂಡಿ ಪುರೋಡಾಶ ಪಕ್ವ ಮಾಡಿ ಉತ್ಸಾಹದಿಂದ ಯಜ್ಞ ಮಾಡಿ ಸಾಗರವನ್ನು ದಾಟಿದ್ದಾರೆ. ಇಂದ್ರನಿಗಾಗಿ ಉತ್ತಮ ಸ್ಥಾನ, ಹವಿರೂಪ ಅನ್ನ, ಸ್ತೋತ್ರಗಳು, ಸೋಮರಸ ಸಿದ್ಧಪಡಿಸಿದ್ದಾರೆ. ಅಭಿಷವಣ ಕಾಲದಲ್ಲಿ ಸೋಮ ಹಿಂಡುವ ಕಲ್ಲುಗಳು ಹೊರಬಂದು ನಿಯಮಿತ ಶಬ್ದ ಮಾಡುತ್ತಾ ದರ್ಭಾಸನ ಹಿಡಿದ ಯಜಮಾನನ ಗೃಹದಲ್ಲಿ ಅವನ ಜೊತೆ ಸೇರುತ್ತವೆ. ಮದಕಾರಕ ಸೋಮದಿಂದ ಇಂದ್ರನನ್ನು ತೃಪ್ತಿಪಡಿಸುತ್ತಾರೆ. ಗ್ರಾವಗಳಿಂದ ಮದಕರ ಸೋಮಲತೆ, ಜಜ್ಜುವ ಕಲ್ಲಿನ ಶಬ್ದ ಕೇಳುತ್ತದೆ. ಸೋಮಪಾನದಿಂದ ಹರ್ಷಗೊಂಡಾಗಿನ ಇಂದ್ರನ ಪ್ರಭಾವ ತಿಳಿಯಲು ಯಜಮಾನನು ಎಚ್ಚರನಾಗಿರುತ್ತಾನೆ. ಶತ್ರುಗಳನ್ನು ಕೊಲ್ಲುವುದಕ್ಕಾಗಿ ಇಂದ್ರನು ಸೋಮಪಾನ ಮಾಡಲಿ. ಮನೋಹರ ಉತ್ತಮ ಸೋಮ ಸಿದ್ಧಪಡಿಸಿ ಪ್ರಾರ್ಥಿಸಿ ಕರೆಯುತ್ತಾರೆ. ಮಧುಯುಕ್ತ ಪಾತ್ರೆಯಲ್ಲಿ ಸೋಮವು ಇರುತ್ತದೆ. ಮಾನವ ಯಜ್ಞ ಕರ್ಮಗಳಿಂದ ಇಂದ್ರಾದಿ ದೇವತೆಗಳು ತೃಪ್ತರಾಗಲಿ ಎಂದು ಯಾಜ್ಞಿಕರು ಪ್ರಾರ್ಥಿಸುತ್ತಾರೆ. ಇಂದ್ರ ಆರಾದಕರು, ಪೂಜಿಸುವವರು ಅವನಿಗೆ ಮಿತ್ರರೂ ಆಗಿರುತ್ತಾರೆ. ಧನಲಾಭಾರ್ಥ ಇಂದ್ರಾ ವರುಣರನ್ನು ಉತ್ತಮ ಸ್ತುತಿಗಳಿಂದ ಪ್ರಾರ್ಥಿಸುತ್ತಾರೆ. ದೇವತಾತ್ಮ ಸವಿತೃವಿನ ಸ್ತೋತ್ರವನ್ನು ಯಜಮಾನನು ಪಠಿಸುತ್ತಾನೆ. ದರ್ಭೆ ಕತ್ತರಿಸಲು ಪೂರ್ವ ದಿಕ್ಕಿಗೆ ಆಯುಧ ಸಹಿತ ಹೋಗುತ್ತಾರೆ. ಬಂಧುತ್ವಕ್ಕಾಗಿ, ಸಹಾಯಕ್ಕಾಗಿ, ಗೋವುಗಳಿಗಾಗಿ ಪೂಜಿಸುತ್ತಾರೆ. ಯಜಮಾನರು ಮತ್ತು ಜನ ಮುಖಂಡರು ಕರ್ಮಗಳನ್ನು ಮಾಡಿ ದೇವತೆಗಳನ್ನು ಒಲಿಸಿಕೊಳ್ಳುತ್ತಾರೆ. ಪರಾಶರ ವಸಿಷ್ಟಮುಂತಾದ ಋಷಿಗಳು ಇಂದ್ರನನ್ನು ಪೂಜಿಸಲು ಅಪೇಕ್ಷಿಸಿ ಯಜ್ಞ ಗೃಹ ಪ್ರವೇಶಿಸಿ ತ್ವಷ್ಟಿಗೊಳಿಸಿದ್ದಾರೆ. ಇಂದ್ರನ ಮಿತ್ರತ್ವವನ್ನು ಬಯಸುತ್ತಾರೆ. ಪೃಥ್ವಿ ದ್ಯುಲೋಕಗಳೆರಡಕ್ಕೂ ಇಂದ್ರನು ಪ್ರಭುವಾಗಿದ್ದಾನೆ. ವಸಿಷ್ಟರು ಧೇನುವಿನಿಂದ ಕ್ಷೀರ ಪಡೆದಂತೆ ಇಂದ್ರನಿಂದ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ಅದಕ್ಕಾಗಿಯೇ ವಿಶೇಷವಾಗಿ ಶಸ್ತ್ರ ಮಂತ್ರಗಳನ್ನು ಪಠಿಸುತ್ತಾರೆ. ಇಂದ್ರನು ಪೃಥ್ವಿಯಲ್ಲಿರಲಿ, ಸ್ವರ್ಗದಲ್ಲಿರಲಿ, ಎಲ್ಲೇ ಇರಲಿ ಮರುತ್‌ಗಳೊಡನೆ ''ಹರಿ'' ನಾಮಕ ಅಶ್ವಗಳೊಡನೆ ಬರಲಿ ಎಂದು ಪ್ರಾರ್ಥಿಸಿದ್ದಾರೆ. ಸ್ತುತಿಗಳು ರಾಕ್ಷಸ ಸ್ಪರ್ಶ ಇಲ್ಲದುದು, ಪ್ರಭಾವಯುತವಾದುದು. ವಜ್ರಾಯುಧಿ ಇಂದ್ರನನ್ನು ಉದ್ದೇಶಿಸಿದ ಮಂತ್ರರೂಪ ಅತ್ಯುತ್ತಮ ಸ್ತುತಿಗಳನ್ನು ಪಠಿಸುತ್ತಾರೆ. ಪುರಾತನ, ನೂತನ ಸ್ತುತಿಗಳಿಂದ ಸ್ತುತಿಸಿ ಸೋಮ ಅರ್ಪಿಸಲಿ. ಮರಕೆಲಸದವರು ಚಕ್ರದ ಮರ ಹಿಡಿದು ಬಗ್ಗಿಸುವಂತೆ ಯಜಮಾನರು ಇಂದ್ರನಿಗೆ ಬಗ್ಗಿ ನಮಸ್ಕರಿಸುತ್ತಾರೆ. ವಾಯುವಿಗಾಗಿ ಅಧ್ವರ್ಯುವಿನಿಂದ ಸೋಮವು ಅರ್ಪಿತವಾಗುತ್ತದೆ. ಇಂದ್ರಾ ವರುಣರನ್ನು ಯಜ್ಞದಲ್ಲಿ ಆಹ್ವಾನಿಸಿ ಹವಿಸ್ಸು ಅರ್ಪಿಸುತ್ತಾರೆ. ದಧಿ ಮಿಶ್ರಿತ ಸೋಮವು ಇಂದ್ರನ ಹರ್ಷವನ್ನು ಅಧಿಕಗೊಳಿಸುತ್ತದೆ. ಸೋಮಾರ್ಪಣೆ ಮಾಡಿದ ದಿನವೇ ಅನ್ನ, ಧನಗಳನ್ನು ಪಡೆಯುತ್ತಾರೆ. ಧನವಂತ ಇಂದ್ರನು ಆದರದಿಂದ ಕೇಳುವ, ತೃಪ್ತಿಹೊಂದುವ ಉತ್ತಮ ಶಸ್ತ್ರಮಂತ್ರ, ಉಕ್ತಮಂತ್ರಗಳನ್ನು ನಿರ್ಮಿಸಿ ಪಠಿಸಿ ಸೋಮವನ್ನು ನೀಡಿ ರಕ್ಷಣಾರ್ಥ ''ಪುತ್ರರು ತಂದೆಯ ರಕ್ಷಣೆಯನ್ನು ಪಡೆದಂತೆ'' ರಕ್ಷಿಸಲು ಯಾಗಗಳಲ್ಲಿ ಆಹ್ವಾನಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಇಂದ್ರದೇವರು

## ಮಂಡಲ 8 - ಕಾಣ್ವ ಋಷಿಗಳು (ಸ್ತೋತ್ರ ವಿಭಾಗ)

ಇಂದ್ರನ ಮನಸ್ಸು ಅನೇಕ ಯಜಮಾನರಲ್ಲಿ ನೆಲೆಸಿದೆ. ಇಂದ್ರನ ಐಶ್ವರ್ಯದ ಮುಂದೆ ಯಾವುದೂ ಇಲ್ಲ. ಆಪತ್ತುಗಳಿಂದ ದಾಟಿಸಿ ಕಾಪಾಡಲು ಇಂದ್ರನ ಅನುಗ್ರಹ ಬೇಕು. ಅದಕ್ಕಾಗಿ ಎಲ್ಲರೂ ಸ್ತುತಿಸುತ್ತಾರೆ. ಅಗ್ನಿಷ್ಟೋಮ ಕರ್ಮಗಳಿಂದ ತೃಪ್ತಿಪಡಿಸುವವರನ್ನು ಒಡನೆಯೇ ರಕ್ಷಿಸುತ್ತಾನೆ. ಸ್ತುತಿಸುವವರಿಗೆ, ಹವಿಸ್ಸು ಅರ್ಪಿಸುವವರಿಗೆ ಸೋಮ ಹಿಂಡುವವರಿಗೆ ಅಪೇಕ್ಷಿಗಿಂತ ಅಧಿಕ ಧನ ನೀಡುತ್ತಾನೆ. ಅಶ್ವಗಳು ಇಂದ್ರನನ್ನು ಶೀಘ್ರ ಕರೆತರಲು ಶತಯೋಜನ ಸಂಚಾರಕ್ಕೆ ಯೋಗ್ಯವಾದ ನವೀನ, ಆಕರ್ಷಕ ಶ್ವೇತವರ್ಣದವುಗಳನ್ನು ರಥಕ್ಕೆ ಕಟ್ಟಿರುತ್ತಾರೆ. ಇಂದ್ರನನ್ನು ಕುರಿತು ಮಾಡುವ ಎಲ್ಲಾ ಸ್ತುತಿಗಳು ಅವನ ಬಲವನ್ನು ವೃದ್ಧಿಸುತ್ತದೆ. ಅಶ್ವಬಲ, ಮರುತ್‌ಬಲ ಹೊಂದಿದ್ದಾನೆ. ಉದಕವು ಸಮುದ್ರಾಭಿಮುಖ ಹರಿಯುವಂತೆ ಮಾಡಿದ್ದಾನೆ. ಅನೇಕ ರಾಕ್ಷಸರನ್ನು, ವೃತ್ರಾಸುರನನ್ನು ಅಂತರಿಕ್ಷದಿಂದ ಕೆಳಗೆ ಉರುಳಿಸಿ ಕೊಂದು ಅವರಲ್ಲಿದ್ದ ಧನವನ್ನು ಅಪಹರಿಸಿ ''ಭೃಗು'' ಋಷಿಗಳಿಗೆ ಕೊಟ್ಟನು. ಇಂದ್ರನ ಮಹಾತ್ಮೆಯನ್ನು ಯಾರೂ ಅರಿಯಲಾಗಿಲ್ಲ. ಇಂದ್ರ ಮಿತ್ರತ್ವ ಹೊಂದಿದವರು ಶತ್ರುಗಳಿಂದ ಭಯ ಪಡಬೇಕಾಗಿಲ್ಲ. ಇಂದ್ರನು ಯಜ್ಞಕ್ಕೆ ಪುತ್ರರೂಪಿ. ಅಸಾಧಾರಣ ಬೆಳವಣಿಗೆಯವನು. ಅಗ್ನಿಪ್ರಭೆಯಂತೆ ಕೋಪವುಳ್ಳವನು. ಅನಂತ ಸ್ವರೂಪವುಳ್ಳವನು. ಇಂದ್ರನು ಇಷ್ಟಾರ್ಥಪ್ರದನೆಂದೇ ಹೆಸರಾದವನು.

ಅತಿ ಸಮೀಪದ ಯಜಮಾನನಿಗೆ ಕೇಳುವಂತೆ ಗುಡುಗು ಶಬ್ದ ಮಾಡುತ್ತಾನೆ. ಅನ್ನವಂತ, ಅತ್ಯುತ್ತಮ ಫಲದಾಯಕ, ಇಂದ್ರನು ಹಿಂದಿನ ಋಷಿಗಳಿಂದ ಪ್ರಶಂಸಿತನಾಗಿ ತೃಪ್ತಿ ಹೊಂದಿದಂತೆ ಇನ್ನೂ ತೃಪ್ತಿಗೊಂಡು ಅನ್ನ, ರಕ್ಷಣೆ, ಪುತ್ರರು, ಸ್ವರ್ಗವನ್ನು ಕರುಣಿಸುತ್ತಾನೆ. ಅಶ್ವಗಳು ಹವಿಸ್ಸಿಗಾಗಿ, ಶತ್ರು ನಾಶಕ್ಕಾಗಿ ತ್ವರಿತ ಹೋಗುವವು. ಇಂದ್ರನು ಕೊಡುವಷ್ಟು ಪೂಜ್ಯ ಧನವನ್ನು ದೇವಮಾನವರಲ್ಲಿ ಯಾರೂ ಕೊಡಲಾರರು. ಇಂದ್ರನ ಬಲವನ್ನು ದ್ಯುಲೋಕವೂ, ಯಶಸ್ಸನ್ನು ಪೃಥ್ವಿಯೂ, ಅಂತರಿಕ್ಷವು ಮೇಘ, ಪರ್ವತಗಳು ಸಂತೋಷವನ್ನು ಸ್ತುತಿಕರ್ತರು, ವೀರ್ಯವನ್ನು, ಶತ್ರು ನಾಶಕ ಬಲವನ್ನು ವೃದ್ಧಿಸುತ್ತಾರೆ. ಇಂದ್ರನು ಪ್ರಜೆಗಳ ಸಾರ್ವಭೌಮ. ಅನೇಕರಿಂದ ಆಹ್ವಾನಿತ, ಧನಾಧಿಪತಿ. ''ಇಂದ್ರ ಉಪಾಸಕರು ನೌಕೆಯಿಂದ ಕ್ಷೇಮವಾಗಿ ಸಮುದ್ರ ದಾಟುವಂತೆ'' ಶತ್ರುಗಳನ್ನು ಧನ ಗಳಿಸುತ್ತಾರೆ. ಸೋಮ ಅರ್ಪಿಸಿದವರಿಗೆ ಸುಪ್ರೀತನಾಗುತ್ತಾನೆ ಮತ್ತು ಲೋಕದ ಜನರ ನಾನಾ ಕಷ್ಟಗಳನ್ನು ಪರಿಹರಿಸಲು ಸಾಹಸ ಕಾರ್ಯಗಳನ್ನು ಮಾಡುತ್ತಾನೆ. ಜಗತ್ತಿಗೇ ಈಶ್ವರ. ಶತ್ರುಗಳನ್ನು ತಾನೊಬ್ಬನೇ ಸದೆಬಡಿದು ನಾಶಮಾಡುತ್ತಾನೆ. ಅಶ್ವಗಳು ಸುವರ್ಣ ರಥ ನೊಗಕ್ಕೆ ಕಟ್ಟಲ್ಪಟ್ಟಾಗ ಇಂದ್ರನನ್ನು ಯಜಮಾನನ ಸಮೀಪ ಕರೆತರುತ್ತವೆ. ಚಾವಟ, ಇಂದ್ರ, ಅಶ್ವ ಎಲ್ಲಾ ಇಷ್ಟಾರ್ಥ ಪ್ರದರೇ, ಕಾಮವರ್ಷಕರೇ ಆಗಿದ್ದಾರೆ. ಅಗ್ನಿಯು ಇಂದ್ರನನ್ನು ಯಜ್ಞಕ್ಕೆ ಕರೆತರುತ್ತಾನೆ. ಋಷಿ ಕಾಣ್ವರನ್ನು ಸಂತೋಷಿಸುತ್ತಾನೆ.

ಒಂದೇ ರೂಪದ ದಷ್ಟಪುಷ್ಟ ಅಶ್ವಗಳು ಇಂದ್ರನನ್ನು ಎಲ್ಲಿದ್ದರೂ ಸರಿ ಪರ್ವತಗಳಲ್ಲಾಗಲೀ, ಮೂರು ಲೋಕದಲ್ಲಿ ಎಲ್ಲಿಂದಲಾಗಲಿ ಯಜ್ಞಕ್ಕೆ ಕರೆತರಲಿ. ಇಂದ್ರನು ಸ್ವರ್ಗವನ್ನು ಸೃಷ್ಟಿಸಿದ್ದಾನೆ. ಭೂಲೋಕ ಉತ್ಪತ್ತಿ ಮಾಡಿ ಅಶ್ವಗೋವುಗಳನ್ನು ಸೃಷ್ಟಿಸಿದ್ದಾನೆ. ವಜ್ರಾಯುಧಿ. ಋಕ್‌ಸ್ತುತ್ಯ, ದೇವಲೋಕ ಸಂಚಾರಿ. ಇಂದ್ರದತ್ತ ಧನವು ಯಜಮಾನನನ್ನು ಸುಸಂಸ್ಕೃತನನ್ನಾಗಿ ಮಾಡುತ್ತದೆ. ಇಂದ್ರನು ಸ್ತೋತ್ರಗಳನ್ನು ಅಪೇಕ್ಷಿಸುತ್ತಾನೆ. ಎಷ್ಟೇ ಪ್ರಬಲ ರಾಕ್ಷಸನಾದರೂ ಸರಿ, ಎಲ್ಲಿದ್ದರೂ ಸರಿ, ಅವರನ್ನು ಆಯುಧಗಳಿಂದ ಹಿಂಸಿಸಿ ಸಂಹರಿಸುತ್ತಾನೆ. ಆದಿತ್ಯರೂಪಿಯಾಗಿ, ಆದಿತ್ಯ ಮಂಡಲವಾಗಿ ಸ್ಥಾಪಿತನಾಗಿದ್ದಾನೆ. ಅತ್ಯುತ್ತಮ ನಾಲ್ಕನೆಯ ಸ್ಥಾನದಲ್ಲಿದ್ದಾನೆ ಇಂದ್ರ. ಅನ್ನನಿಮಿತ್ತ ಯಜಮಾನನು ಸ್ತುತಿಸಿದಾಗ ತೃಪ್ತಿ ವ್ಯಕ್ತಪಡಿಸುತ್ತಾನೆ. ಇಷ್ಟಾರ್ಥ ಪ್ರದರಲ್ಲೇ ಅಗ್ರಗಣ್ಯ. ಇಂದ್ರನಿಗೆ ಸೇರಿದವರಲ್ಲಿ ಯಜಮಾನರ ಗುಂಪೇ ಅತ್ಯಂತ ಶ್ರೇಷ್ಟ. ಯಜಮಾನನಿಗೆ ಬೇಕಾದ ಪ್ರಶಸ್ತ ಧನಕ್ಕೆ ಒಡೆಯ. ಯಜ್ಞಕರ್ತರ ಪಾಲಕ, ಜಗದೀಶ್ವರ, ಇಂದ್ರನಲ್ಲಿ ಯಜಮಾನನಿಗೆ ಬೇಕಾದವು ಎಲ್ಲವೂ ಇದೆ. ಇಂದ್ರನನ್ನು ಪೂಜಿಸಿ ಧ್ಯಾನಿಸಿದವರ ಮನಸ್ಸು ಕಲ್ಮಶವಾಗುವುದಿಲ್ಲ. ಇಂದ್ರನು ವೀರ್ಯ ಕರ್ಮ ಮಾಡುವವರಿಗೆ ಕ್ಷಿಪ್ರ ಧಾನ ಮಾಡುವ ಸ್ವಭಾವದವನು, ಇಷ್ಟಾರ್ಥಪ್ರದ, ಇಂದ್ರನಿಗೆ ಸಮಾನ ಪ್ರಭು ಯಾರೂ ಇಲ್ಲ.

ಇಂದ್ರನು ತನ್ನ ಮಹಾತ್ಮ ತೇಜಸ್ಸಿನಿಂದ ಅನೇಕ ಯಜಮಾನರುಗಳಿಗೆ ಒಂದೇ ರೀತಿಯಲ್ಲಿ ಪೂಜ್ಯನಾಗಿದ್ದಾನೆ. ಉತ್ಪನ್ನನಾದೊಡನೆಯೇ ದ್ಯಾವಾ ಪೃಥ್ವಿಗಳು ಇಂದ್ರನನ್ನು ನಮಸ್ಕರಿಸಿದವು. ಅನೇಕ ಋಷಿಗಳಿಂದ ಒಂದೇ ಸಮನಾಗಿ ಪೂಜಿತ ಇಂದ್ರನು ಅನೇಕ ಗೋವುಗಳನ್ನು ಸ್ತುತಿಕರ್ತರಿಗೆ ಕೊಡುತ್ತಾನೆ. ಇಂದ್ರನು ಸ್ವರ್ಗಾಧಿಪತಿಯಾದ್ದರಿಂದ ನಾವು ಸುಖವಾಗಿದ್ದೇವೆ. ಸ್ವಶಕ್ತಿಯಿಂದಲೇ ಪ್ರಭುವಾದವನು, ಅಂತರಿಕ್ಷ ಸಂಚಾರಿ, ಮನಸಂಕಲ್ಪದಿಂದಲೇ ಮಹತ್ತರ ಸ್ಥಿತಿ ಹೊಂದುತ್ತಾನೆ, ವೃಷ್ಟಿಸುರಿಸಲು ಇಂದ್ರನ ಒಂದೇ ಒಂದು ಬಾಣ ಸಾಕು. ಆರಾಧಕರಿಗೆ, ಸೋಮ ಅರ್ಪಿಸುವವರಿಗೆ, ಯಜಮಾನರುಗಳಿಗೆ ಅತಿಶಯ ರಕ್ಷಕನಾಗಿರುತ್ತಾನೆ. ಆಕರ್ಷಕ ರೂಪಿ, ದುಃಖನಾಶಕ. ಋತ್ವಿಜರೆಲ್ಲರಿಗೂ ಸಂಬಂಧಿ, ಸ್ತೋತ್ರಗಳಿಗೆ ಉದಾರ ಧನಪ್ರದ, ಎಲ್ಲರಅಂತರ್ಯಾಮಿ, ಧನದಾತುವೆಂದೇ ಇಂದ್ರನನ್ನು ಸಮೀಪಿಸುತ್ತಾರೆ. ಕರ್ಮಮಾಡುವುದನ್ನು ಬಿಟ್ಟು ಮರೆತು ಸ್ವಪ್ನಾವಸ್ಥೆಯಲ್ಲಿರಲು ಅವಕಾಶ ಕೊಡುವುದಿಲ್ಲ. ಕಾಣ್ವರು ಪೂಜಿಸಿದಂತೆ ಭೃಗು ಗೋತ್ರದವರು ಪ್ರಿಯ ಮೇಧರು ಇಂದ್ರನನ್ನು ಪೂಜಿಸಿ ಸ್ತುತಿಸಿದ್ದಾರೆ. ಕಣ್ವರ ಸ್ತೋತ್ರಗಳು, ಯಜ್ಞಗಳು ಎಲ್ಲವೂ ಇಂದ್ರನನ್ನೇ ಸೇರುತ್ತವೆ. ಇಂದ್ರನು ಋಷಿಗಳ ಮಧ್ಯೆ ಸ್ತುತಿಯಿಂದ ಪ್ರಕಾಶಿತನಾಗುತ್ತಾನೆ. ಇಂದ್ರನೇ ಸಕಲ ಲೋಕಕ್ಕೂ ಪ್ರಭು, ಕಣ್ವಪುತ್ರ "ಪ್ರಸ್ಕಣ್ವ"ರು ಶತ್ರು ಪೀಡಿತರಾದಾಗ ಇಂದ್ರನು ರಕ್ಷಿಸಿ ಅಸಂಖ್ಯಾತ ಗೋವುಗಳು ಅವರಿಗೆ ಸಿಗುವಂತೆ ಮಾಡಿದನು. ಕ್ಷೀರಾದ್ರಾಶ್ರಯಣಯುಕ್ತ ಸೋಮರಸಗಳು ಮತ್ತು ಶಸ್ತ್ರರೂಪ ಸ್ತುತಿಗಳು ಇಂದ್ರನಿಗೆ ಆತ್ಮ ತೃಪ್ತಿ ಕೊಟ್ಟು ಪ್ರಭಾವಯುತನನ್ನಾಗಿ ಮಾಡುತ್ತದೆ. ಕರ್ತವ್ಯಗಳನ್ನು ಮರೆಯುವವನೇ ಅಲ್ಲ. ಕರ್ಮಗಳಲ್ಲಿ ಪ್ರೀತಿವುಳ್ಳವರು ಮಾತ್ರ ಇಂದ್ರನನ್ನು ಸ್ತುತಿಸುತ್ತಾರೆ.

ದ್ಯಾವಾ ಪೃಥ್ವಿಗಳು ವಿಸ್ತಾರವಾಗುವಂತೆ ಮಾಡಿದನು, ತನ್ನಲ್ಲಿಯೇ ಭೂತ ಜಾತಗಳು ವಿಹರಿಸುವಂತೆ ಮಾಡಿದ್ದಾನೆ. ದ್ಯಾವಾ ಪೃಥ್ವಿಗಳನ್ನು ತನ್ನ ತೇಜಸ್ಸಿನಿಂದ ಸಂಕುಚಿತಗೊಳಿಸುತ್ತಾನೆ. ದ್ಯುಲೋಕದ ಮೇಲ್ಭಾಗದಲ್ಲಿ ಸೂರ್ಯ ರೂಪಿನಲ್ಲಿ ಪ್ರಕಾಶಿಸುತ್ತಾನೆ. ದೇವ ಮಾತೆ ಅದಿತಿಯು ಇಂದ್ರನಿಗಾಗಿ ಅನೇಕರಿಂದ ಪ್ರಶಂಸಿತಳಾಗುತ್ತಾಳೆ. ಯಜ್ಞ ಸಂಬಂಧಿ ಸ್ತುತಿಯನ್ನು ಯಜಮಾನ ರಕ್ಷಣಾರ್ಥ ನಿರ್ಮಿಸಿದ್ದಾಳೆ. ದಾವಾಗ್ನಿಗಳಂತೆ ಸೂರ್ಯ ಕಿರಣಗಳ ಮೂಲಕ ಅಸುರರ ನಾಶವನ್ನು ಮಾಡಿದ್ದಾನೆ. ಯಜ್ಞ ಪ್ರಭು ಇಂದ್ರ, ದೇವತೆಗಳ ನಡುವೆ ಪ್ರಕಾಶಿಸುವ ಅತೀಂದ್ರಿಯ ಜ್ಞಾನಿ. ದ್ಯಾವಾ ಪೃಥ್ವಿಗಳನ್ನು ಬೇರೆಮಾಡಿದ್ದಾನೆ. ದ್ಯುಲೋಕ ನಿರ್ಮಾಪಕ ಇಂದ್ರ, ನಾಸ್ತಿಕರು, ಮೋಸಗಾರರು, ವಂಚಕರುಗಳನ್ನು ನಾಶಮಾಡುತ್ತಾನೆ. ಇಂದ್ರನು ಧನಸ್ಸು, ಬಾಣಗಳು ಎಲ್ಲವೂ ಸುವರ್ಣ ನಿರ್ಮಿತವಾದದ್ದು. ಪ್ರರ್ಜನ್ಯನು ವೃಷ್ಟಿಯಿಂದ ವೃದ್ಧಿಗೊಂಡಂತೆ ಇಂದ್ರನು ತನ್ನ ಬಲದಿಂದಲೇ ಮೂರು ಲೋಕದಲ್ಲೂ ಇಂದ್ರನ ಸಮಾನ ಶಕ್ತಿವಂತರು ಯಾರು ಇಲ್ಲ ಎಂದಿದ್ದಾರೆ. ಮೇಘಗಳನ್ನು ಸೀಳಿ ವೃಷ್ಟಿಸುರಿಯುವಂತೆ ಮಾಡಿ ಪೃಥ್ವಿಯನ್ನು ತೋಯಿಸುತ್ತಾನೆ. ಮಿತ್ರಾ ವರುಣರು ಇಂದ್ರನನ್ನು ಸ್ತುತಿಸುತ್ತಾರೆ. ಮರುತ್ ಸಂಘವು ಹರುಷ ಪ್ರಕಟಿಸುತ್ತವೆ. ಪರ್ಜನ್ಯನು ವೃಷ್ಟಿಸುರಿಸಿ ತೃಪ್ತಿಗೊಳಿಸುತ್ತಾನೆ. ಮಾನವ ದೇಹದ ಒಳಗೆ ಒಂಭತ್ತು ಪ್ರಾಣಗಳೊಡನೆ ಹತ್ತನೆಯವನು ಇಂದ್ರ ಪ್ರಾಣರೂಪಿ. ಏಳು ನದಿಗಳ ಸಂಪತ್ಪ್ರೇರಕ. ನಿತ್ಯ, ಅನಿತ್ಯ ಜನ್ಮಗಳೆರಡನ್ನು ಪೂರ್ಣವಾಗಿ ರಕ್ಷಿಸುತ್ತಾನೆ. ಮರುತ್‌ಗಳ ಸಹಾಯದಿಂದ ಹಿಂದೆ ಮಾಡಿದ, ಮುಂದೆ ಮಾಡುವ ಸಕಲ ಕರ್ಮಗಳು ಇಂದ್ರನಲ್ಲಿ ಅಡಗಿವೆ. ಪ್ರಾಣಿಗಳು ಆತುರದಿಂದ ಧಾನ್ಯ ಭಕ್ಷಿಸುವಂತೆ ಲೋಕವೆಲ್ಲ ಅನ್ನ ಸ್ವೀಕರಿಸುತ್ತವೆ. ಪುತ್ರರು ತಂದೆಯ ಸಹಾಯ ಅಪೇಕ್ಷಿಸುವಂತೆ ಯಾಜ್ಞಿಕರು ಇಂದ್ರನನ್ನು ಸಹಾಯಕ್ಕೆ ಕರೆಯುತ್ತಾರೆ. ಮಾತಾ ಪಿತೃಗಳಾದ ದ್ಯಾವಾ ಪೃಥ್ವಿಗಳ ಸೌಕರ್ಯಕ್ಕಾಗಿ ಮೇಘವನ್ನು ಸಿದ್ಧಪಡಿಸಿ ಗರ್ಜನೆಯ ಶಬ್ದದಿಂದ ಮೇಘವನ್ನು ಸೀಳಿ ಮಳೆ ಸುರಿಸುತ್ತಾನೆ. ಪ್ರಜ್ಞಾವಂತ ಮೇಘದಿಂದ ಉದಕ ಬಿಡುಗಡೆ ಮಾಡುತ್ತಾನೆ. ಇಂದ್ರನ ವಜ್ರಾಯುಧವು ಮಿತ್ರ, ಮರುತ್‌ಗಳ ಸಹಾಯದಿಂದ ವೃತ್ರಾಸುರನನ್ನು ಸೀಳಿತು.

ಯಜಮಾನನ ಯಾಗ ಕರ್ಮವನ್ನು ಸೋಮ, ಹವಿಸ್ಸು ಅರ್ಪಿಸುವುದನ್ನು ಬಗ್ಗಿ ನೋಡುತ್ತಾ ದ್ಯುಲೋಕ ಎತ್ತರದಿಂದಲೇ ಪ್ರಜೆಗಳನ್ನು ರಕ್ಷಿಸುತ್ತಾನೆ. ಯಜ್ಞ ಕರ್ಮಗಳ ಫಲವಾಗಿ ಪರ್ವತ ಪ್ರದೇಶಗಳಲ್ಲಿ ನದಿಗಳ ಸಂಗಮ ಪ್ರದೇಶಗಳಲ್ಲಿ ಇಂದ್ರನು ಗೋಚರಿಸುತ್ತಾನೆ. ಯಜ್ಞ ಸ್ಥಾನದಲ್ಲಿ ಇಂದ್ರರೂಪಿಯಾಗಿದ್ದು ಇತರ ಎಲ್ಲಾ ಕಡೆಗಳಲ್ಲೂ ದೇವತಾ ಸ್ವರೂಪ ಹೊಂದಿದ್ದಾನೆ. ಯಾಗಗಳು ಮತ್ತು ಶಸ್ತ್ರಮಂತ್ರ ಸೋಮಗಳು ಇಂದ್ರನನ್ನು ಹೆಚ್ಚು ಬೆಳೆಯುವಂತೆ ಮಾಡುತ್ತವೆ. ಯಜಮಾನರು ಶಕ್ತಿಯುತರಾಗಿದ್ದರೆ ಅಲ್ಲಿಯವರಿಗೆಲ್ಲ ಗೋ ಸಂಪತ್ತು ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ.

ರಾಜರುಗಳು ಅಪರಿಮಿತ ಧನದಿಂದ ಯಾಜ್ಞಿಕರನ್ನು ಮತ್ತು ಯಜಮಾನರುಗಳನ್ನು ತೃಪ್ತಿಗೊಳಿಸಿದ್ದಾರೆ. ಯಜಮಾನನಿಗೆ, ಪರಿವಾರದವರಿಗೆ ಹಿಂಸೆ, ಶಿಕ್ಷೆ ಕೊಡಲು ಇಂದ್ರನು ಯಾರಿಗೂ ಅವಕಾಶ ಕೊಡುವುದಿಲ್ಲ. ಯಾರ ಸಹಾಯವೂ ಇಲ್ಲದೆ ಎಲ್ಲರನ್ನೂ ರಕ್ಷಿಸುತ್ತಾನೆ. ಯಜ್ಞಕ್ಕೆ ಇಂದ್ರಾಗ್ನಿಗಳು ಋತ್ವಿಕ್ ರೂಪರು, ನೇತೃಗಳು ಒಟ್ಟಿಗೆ ರಥದಲ್ಲಿ ಸಂಚರಿಸುವವರು. ಶತ್ರು ಹಂತಕರು, ಅಪಹರಿಸಿದ ಶತ್ರು ಧನವುಳ್ಳವರು. ಯಜ್ಞ ನಿರ್ವಹಣಾರ್ಥ ವೀರ ಪುರುಷರೊಡಗೂಡಿ ಶತ್ರುಗಳನ್ನು ಸೋಲಿಸಿ ಯಜ್ಞಾಭಿಮುಖ ಬರುತ್ತಾರೆ. ಯಜಮಾನರ ಹತ್ತಿರ ದೂರದ ಸಂಬಂಧಿ ಗಳಿಂದ ತಯಾರಿಸಿದ ಸೋಮರಸ ಮಾತ್ರ ಇಂದ್ರನಿಗೆ ಹರ್ಷಕಾರಕ. ರುದ್ರಪುತ್ರ ಮರುತ್‌ಗಳು ಪರ್ವತ ಸಮಾನರು, ವೃಷ್ಟಿಕಾರಕರು. ಇಂದ್ರನ ಒಡನಿದ್ದು ಸಹಾಯಕ್ಕೆ ಸಕಲ ದೇವತೆಗಳೊಡನೆ ಬಂದು ರಕ್ಷಿಸುತ್ತಾರೆ. ಯಜ್ಞ ಕರ್ಮಗಳಿಂದ ಇಂದ್ರನು ತೃಪ್ತನಾಗುವವನು, ಅಶ್ವಪರೀಕ್ಷಾ ಚತುರ. ಧನ ರಹಸ್ಯ ತಿಳಿದವನು, ಅನೇಕ ರೂಪಗಳಲ್ಲಿ ಅನೇಕ ಕರ್ಮಕರ್ತ. ಸಂತೃಪ್ತನಾದಾಗ ಧನಿಕರು ಭೂಮಿಯಲ್ಲಿ ಹೂತಿಟ್ಟಿರಬಹುದಾದ ಧನವನ್ನು ತಂದು ಸುರಿಯುತ್ತಾನೆ. ಸೂರ್ಯನು ಏತಶ ಋಷಿಯನ್ನು ಹಿಂಸಿಸಿದಾಗ ಸೂರ್ಯನನ್ನು ಎದುರಿಸಿ ಋಷಿಯ ಸಹಾಯಾರ್ಥ ಇಂದ್ರನು ಬಂದನು. ಶುಷ್ಣಾಸುರನ ನಿವಾಸಗಳನ್ನು ಆಯುಧಗಳಿಂದ ನಾಶಮಾಡಿ ಅವನನ್ನು ಹಿಂಬಾಲಿಸಿ ಕೊಂದನು. ಸ್ತುತಿ ಕರ್ತರಿಗೆ ಅನ್ನ, ಗೋವು, ಅಶ್ವಗಳನ್ನು ಕೊಡುತ್ತಾನೆ.

ಸೋಮರಸವನ್ನು ತನ್ನಲ್ಲೇ ಐಕ್ಯ ಮಾಡಿಕೊಳ್ಳುತ್ತಾನೆ. ಅಪಹರಿಸಿ ಪಾನಮಾಡಿ ಬಲಾಢ್ಯನಾಗಿದ್ದಾನೆ. ವೃತ್ರಾಸುರನು ದ್ಯಾವಾ ಪೃಥ್ವಿಗಳನ್ನು ಆವರಿಸಿ ಕತ್ತಲು ಮಾಡಿ ನದಿ ಮಧ್ಯೆ ತಡೆಯಾಗಿ ಮಲಗಿದ್ದವನನ್ನು ಸೀಳಿ ಕೊಂದು ಮಳೆ ಸುರಿಸಿ ನದಿ ನೀರುತುಂಬಿ ಹರಿದು ಸಮುದ್ರ ಸೇರುವಂತೆ ಮಾಡಿದನು. ಸೂರ್ಯನಂತೆ ಅವನ ರಥ, ಧ್ವಜ, ವಜ್ರಾಯುಧ, ಸಮಸ್ತ ರಕ್ಷಣೆಗಳೊಂದಿಗೆ ಸ್ತೋತೃಗಳ ಇಷ್ಟಾರ್ಥವನ್ನು ಪೂರೈಸುತ್ತಾನೆ. ವೃತ್ರಾಸುರನನ್ನು ಕೊಂದೊಡನೆಯೇ ವಿಷ್ಣುವು ಮೂರು ಪಾದಗಳಿಂದ ಮೂರು ಲೋಕಗಳನ್ನು ಆಕ್ರಮಿಸಿದನು. ಸೂರ್ಯನು ದ್ಯುಲೋಕದಲ್ಲಿ ಸ್ಥಾಪಿತನಾದನು, ಒಡನೆಯೇ ಸಮಸ್ತ ಭೂತ ಜಾತಗಳು ಇಂದ್ರನ ನಿಯಮನಕ್ಕೆ ಒಳಪಟ್ಟವು. ದ್ಯಾವಾ ಪೃಥ್ವಿಗಳು ಇಂದ್ರನನ್ನು ದೂರ ಮಾಡುವುದಾಗಲಿ, ಅವನ ಪ್ರಭುತ್ವದಿಂದ ತಪ್ಪಿಕೊಳ್ಳುವುದಾಗಲಿ ಸಾಧ್ಯವಿಲ್ಲ. ಸಕಲ ದೇವತೆಗಳಿಗೂ ಮೊದಲೇ ಉತ್ಪನ್ನನಾದವನು, ಸರ್ವರಿಗೂ ಪ್ರಭು, ಸಮಸ್ತ ಇಷ್ಟಾರ್ಥ ಸುಖಕಾರಕ, ಶ್ರೇಷ್ಟ ಬಂಧು, ಸಕಲ ರಕ್ಷಣೆಗಳೊಡನೆ ಯಜಮಾನನನ್ನು ರಕ್ಷಿಸುತ್ತಾನೆ. ಸ್ವಾಹಾದೇವಿಯ ಪತಿ ಅಗ್ನಿಯನ್ನು ಇಂದ್ರನನ್ನು ಪೂಜಿಸಿ ಸ್ತುತಿಸಿ ಕರ್ಮಗಳನ್ನು ಮಾಡಿ ಪ್ರಶಂಸಿಸುತ್ತಾರೆ. ಇಂದ್ರನು ಸಕಲವನ್ನೂ ನೋಡುತ್ತಾನೆ, ಕೇಳುತ್ತಾನೆ, ಅವನಿಗೆ ಅನುಕೂಲವಾದ ಯಜ್ಞಕ್ಕೆ ಬರುತ್ತಾನೆ. ಹೋತೃರೂಪದ ಸ್ತುತಿಕರ್ತನಿಗೆ ಅಶ್ವ ಗೋವು, ಧನ, ಶಕ್ತಿಕೊಟ್ಟು ಉಪದೇಶಕನಾಗುತ್ತಾನೆ. ಹವಿರರ್ಪಿಸುವ ಯಜಮಾನನಿಗೆ ಅತಿ ಬೆಲೆ ಬಾಳುವ ಧನವನ್ನು, ಗೃಹವನ್ನು ನೀಡುತ್ತಾನೆ.

ಹವಿಸ್ಸು ಇಂದ್ರನನ್ನು ಸಮೀಪಿಸಿದಾಗ ಆದರದಿಂದ ಸ್ವೀಕರಿಸುತ್ತಾನೆ. ಹೋಮ ಕಾಲದಲ್ಲಿ ಹವಿಸ್ಸು ಅಪೇಕ್ಷಿಸಿ ಬರುತ್ತಾನೆ. ಹಿಂದಿನವರು ಅರ್ಪಿಸಿದಂತೆ ಇಂದಿನವರು ಹವಿಸ್ಸು, ಶಸ್ತ್ರಮಂತ್ರಗಳನ್ನು ಅರ್ಪಿಸುತ್ತಾರೆ. ಹವಿರಾದಿಗಳಿಂದ ಪೂಜಿಸುವವರನ್ನು ಯಾರೂ ಹಿಂಸಿಸಲಾರರು. ಹಿಂಸಿಸ ಬಯಸುವವರನ್ನು ಮುಂಚಿತವಾಗಿಯೇ ಬಲಹೀನರನ್ನಾಗಿ ಮಾಡುತ್ತಾನೆ. ಪಶುಗಳಿಗೆ ಆಹಾರವನ್ನು ಒದಗಿಸಿ ಯಾಜ್ಞಿಕರಿಗೆ ಕ್ಷೀರ ದೊರೆಯುವಂತೆ ಮಾಡಿದ್ದಾನೆ. ವೃಕ್ಷ ಶಾಖೆಗಳು ವೃಕ್ಷ ಅಧೀನವಾಗಿರುವಂತೆ ಸಕಲಲೋಕಗಳು ಇಂದ್ರ ಅಧೀನವಾಗಿವೆ. ಒಲಾಸುರನೆಂಬ ರಾಕ್ಷಸನನ್ನು ಸಂಹರಿಸಿ ಅವನಿಂದ ಅಪಹರಿಸಿ ಬಚ್ಚಿಟ್ಟಿದ್ದ ಗೋವುಗಳನ್ನು ಆಂಗೀರಸರಿಗೆ ಒಪ್ಪಿಸಿದನು. ಸೂರ್ಯನು ಪ್ರತಿದಿನವೂ ಬೆಳಿಗ್ಗೆ ನಾನಾ ದಿಕ್ಕುಗಳಲ್ಲಿ ಓಡಾಡುವ ಪಕ್ಷಿಗಳ ಚಲನ ವಲನಗಳನ್ನು ತಿಳಿದಿರುವಂತೆ ಇಂದ್ರನು ಶತ್ರುಗಳ ಮತ್ತು ರಾಕ್ಷಸರ ಚಲನ ವಲನಗಳನ್ನು ತಿಳಿದಿದ್ದಾನೆ. ವೃಷ್ಟಿಯನ್ನು ಸುರಿಸಿ ಗೋವುಗಳಲ್ಲಿ ಹಾಲನ್ನು ಸ್ಥಾಪಿಸಿದ ಇಂದ್ರನು ಸ್ತುತಿಸುವವರಿಗೆ ಏನೂ ಕೊಡುವುದಿಲ್ಲವೆಂದೇನೂ ಇಲ್ಲ. ಇಷ್ಟೇ ಕೊಡಬೇಕೆಂಬ ನಿಯಮವೇನಿಲ್ಲ. ಅನುಗ್ರಹಿಸುತ್ತಾನೆ ಎನ್ನುತ್ತಾರೆ ಮೇದಾತಿಥಿ ಕಾಣ್ವರು. ವಾಯುವಿಗೆ ಅರ್ಪಿಸಿದಂತೆಯೇ ಇಂದ್ರನಿಗೂ ಸೋಮವನ್ನು ಮೊದಲೇ ಅರ್ಪಿಸುತ್ತಾರೆ. ಸೋಮ ಅರ್ಪಿಸಿದ ಯಜಮಾನರನ್ನು, ಬ್ರಾಹ್ಮಣರನ್ನು ಸಮಸ್ತ ರಕ್ಷಣೆಗಳಿಂದ ರಕ್ಷಿಸುತ್ತಾನೆ. ಸ್ವರ್ಗದಲ್ಲಿರುವ ಪಿತೃಗಳಿಗೂ ಒಳ್ಳೆಯದನ್ನೇ ಮಾಡುತ್ತಾನೆ. ಸುವರ್ಣಮಯ ರೂಪಿ ಇಂದ್ರ. ಭಾಗ್ಯ ದೇವತೆ, ಸಮಸ್ತ ಉದಕಗಳಿಗೆ ಒಡೆಯ.

ಗೋವುಗಳ ಕೆಚ್ಚಲಿನಲ್ಲಿ ಹಾಲು ತುಂಬಿರುವುದು ಇಂದ್ರನಿಂದಲೇ. ನೂರಾರು ಅಲಗುಳ್ಳ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದನು. ಇಂದ್ರನ ಉತ್ಪನ್ನದೊಂದಿಗೆ ''ಅಗ್ನಿಷ್ಟೋಮಾಧಿ'' ಯಾಗ, ಅವುಗಳ ಅನುಷ್ಠಾನ, ಮಂತ್ರಗಳು ಉತ್ಪನ್ನವಾದವು. ದೇವತೆಗಳೆಲ್ಲರ ಸ್ನೇಹಕ್ಕೆ ಸಾಮಗಾನ ಮಾಡುತ್ತಾರೆ. ಇಂದ್ರನ ಗೃಹವು ಸ್ವರ್ಗ ಲೋಕದಲ್ಲಿದೆ. ಮಾನವ ಅಪೇಕ್ಷಿತ ವಸ್ತುಗಳೆಲ್ಲ ಇಂದ್ರನ ಬಳಿ ಇದೆ. ಮೊಳಕಾಲೂರಿ ಸ್ತುತಿಸುವ ಯಜಮಾನನಿಗೆ ಇಂದ್ರನು ಧನಾಧಿಗಳನ್ನು ಕೊಡುತ್ತಾನೆ. ಪಾಪ ಪರಿಹಾರಕ, ಸಜ್ಜನ ಪಾಲಕ, ಆಕರ್ಷಕ ಕಿನ್ನೆಯವನು. ಇಂದ್ರನು ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟವನು. ಸ್ತೋತ್ರ ಜನಕ್ಕೆ ಧನ ಕೊಡಲು ಸೂರ್ಯರೂಪಿನಲ್ಲಿ ಉದಯಿಸುತ್ತಾನೆ. ಉದಯಿಸಿದಾಗ ಈ ಸಮಸ್ತ ಜಗತ್ತು ಇಂದ್ರಾಧಿ ೀನವಾಗಿರುತ್ತದೆ. ಇಂದ್ರನು ಋಬುಗಳೊಡನೆ ವಾಸಿಸುವವನು. ಮಾನವರ ಹಿತಕಾರಿ, ಕೆಲಸಗಳನ್ನು ಮಾಡುವವನು. ''ಚಕ್ರದ ಪಟ್ಟಿಯು ಇತರ ಭಾಗಗಳನ್ನು ಒಟ್ಟಾಗಿ ಹಿಡಿದಿಡುವಂತೆ ಇಂದ್ರನು ಸಕಲ ಭೂತ ಜಾತಗಳನ್ನು ಹಿಡಿದಿದ್ದಾನೆ''. ಇಂದ್ರನೊಬ್ಬನೇ ಸಮೀಪ ಬಂಧು ಎನ್ನುತ್ತಾರೆ ಋಷಿಗಳು. ಸ್ತುತಿಪ್ರಿಯ, ಪ್ರಾಜ್ಞ, ಸತ್ಯಾತ್ಮಕ, ಸಕಲ ಲೋಕ ನಿರ್ಮಾಪಕ, ಸಕಲ ದೇವತಾ ಸ್ವರೂಪಿ, ಸ್ವರ್ಗಕ್ಕೆ ಈಶ್ವರ, ಸಂಚಾರಶೀಲ, ಎಲ್ಲರಿಂದಲೂ ಆಹ್ವಾನಿತ. ಸ್ತುತಿಸಲ್ಪಡುವವನು, ಪೂಜಿಸಲ್ಪಡುವವನು, ಸೋಮಪಾನಿ.

ದ್ಯಾವಾ ಪೃಥ್ವಿಗಳೆರಡನ್ನು ವ್ಯಾಪಿಸಿರುವ ಪರ್ವತದಂತಹ ವಿಸ್ತಾರ ರೂಪಿ ಇಂದ್ರನು ಯಜ್ಞಕರ್ತ ಯಜಮಾನರ ವೃದ್ಧಿಕಾರಕ. ಅತ್ಯಧಿಕ ಪ್ರಕಾಶಕ್ಕೆ ಆಧಾರನಾಗಿ ಸ್ವರ್ಗವನ್ನು ಬೆಳಗಿಸುವವನು, ಅಂತರಿಕ್ಷ ವ್ಯಾಪಿಸಿ ಸಂಚರಿಸುತ್ತಾನೆ. ವಿವೇಕ ದೃಷ್ಟಿಯಿಂದ ಸಕಲವನ್ನು ನೋಡತಕ್ಕ ಪ್ರಾಜ್ಞ. ಸೋಮ ಅರ್ಪಿಸುವವರ ವೃದ್ಧಿಕಾರಕನಾಗಿದ್ದಾನೆ. ಪ್ರಬಲ ಶತ್ರುಗಳನ್ನು, ಹಿಂಸಕರನ್ನು ಇಂದ್ರನೊಬ್ಬನೇ ನಾಶ ಮಾಡುತ್ತಾನೆ. ''ಜಲಕ್ರೀಡೆಯಲ್ಲಿ ಮಿತ್ರರ ಮೇಲೆ ನೀರೆರಚುವಂತೆ'' ನದಿಗಳು ಸಮುದ್ರವನ್ನು ಅಧಿಕವಾಗಿ ಬೆಳೆಸುವಂತೆ ಯಜಮಾನರ, ಯಾಜ್ಞಿಕರ, ಸ್ತುತಿಕರ್ತರ ಸ್ತುತಿಗಳು ಇಂದ್ರನಿಗೆ ಅರ್ಪಿತವಾಗುತ್ತವೆ. ನೃಮೇಧ ಋಷಿಯು ಇಂದ್ರನನ್ನು ನಾರಾಯಣ ರೂಪಿನಲ್ಲಿ ಸ್ಮರಿಸುತ್ತಾರೆ. ಪಾಪರಹಿತ, ಕ್ಷಯರಹಿತ, ಅನೇಕ ವಿಧ ಪ್ರಜ್ಞೆವುಳ್ಳವನು, ನಾನಾ ವಿಧ ರಕ್ಷಣೆಗಳುಳ್ಳವನು. ಶುದ್ಧವಸ್ತುಗಳನ್ನೇ ದಾನ ಮಾಡುವ ದಾನಿ. ಸೂರ್ಯಾಶ್ರಯಿ ರಶ್ಮಿಗಳು ಸೂರ್ಯನನ್ನು ಸೇವಿಸುವಂತೆ ಸಕಲ ಧನಗಳು ಇಂದ್ರ ರೂಪಿ ನಾರಾಯಣನಿಗೇ ಸೇರಿದ್ದು. ತನ್ನ ಮನಸ್ಸು ದಾನಕ್ಕಾಗಿಯೇ ಪ್ರೇರಿಸುತ್ತಾ ಸೇವಿಸುವ ಸ್ತುತಿಕರ್ತನ ಇಚ್ಛೆಯನ್ನು ಇಂದ್ರ ರೂಪಿ ನಾರಾಯಣನು ಭಂಗಗೊಳಿಸುವುದಿಲ್ಲ. ಈಗ ಇರುವ, ಮುಂದೆ ಬರುವ ಸಕಲ ಭೂತ ಜಾತಗಳಿಗೂ ತನ್ನ ಬಲದಿಂದಲೇ ಧನವನ್ನು ಹಂಚುತ್ತಾನೆ. ಪಿತ್ರಾರ್ಜಿತ ಧನದಲ್ಲಿ ಭಾಗ ನಿರೀಕ್ಷಿಸುವಂತೆಯೇ ಇಂದ್ರ, ಧನದಲ್ಲಿ ''ಯಜಮಾನರು'', ಯಾಜ್ಞಿಕರು ಭಾಗ ನಿರೀಕ್ಷಿಸುತ್ತಾರೆ. ಮಗುವನ್ನು ಅನುಸರಿಸುವ ತಾಯಿಯಂತೆ ದ್ಯಾವಾ ಪೃಥ್ವಿಗಳು ಇಂದ್ರನನ್ನು ಅನುಸರಿಸುತ್ತಾರೆ. ಶತ್ರುವಿನ ಬಹುಧನವನ್ನು ಆಪ್ತ ಋಷಿ ಶರಭರಿಗೆ ಕೊಟ್ಟನು. ವೃತ್ರಾಸುರ ವಧೆಯ ನಂತರ ಯಜಮಾನರು ವಿಷ್ಣುವಿನೊಂದಿಗೆ ಸಕಲ ದೇವತೆಗಳೂ ಸೇರಿ ಇಂದ್ರನನ್ನು ಸಮೀಪಿಸುತ್ತಾರೆ.

''ಗರುತ್ಮಂತನು'' ಮನೋವೇಗದಲ್ಲಿ ಸುವರ್ಣ ನಿರ್ಮಿತ ಪಟ್ಟಣಕ್ಕೆ ಹೋಗಿ ಸೋಮವನ್ನು ತಂದನು. ಯಜಮಾನರು ಸೋಮವನ್ನು ಮಧುರ ಬೋಗಾರ್ಹ ಮಾಡಿ ಉಳಿದ ದೇವತೆಗಳಿಗೆ ಮುಂಚೆಯೇ ಇಂದ್ರನ ಜಠರ ಸೇರಲೆಂದು ಇಂದ್ರನ ಮುಂದೆ ಹಿಡಿದರು. ಯಜ್ಞ ಆಚರಿಸುತ್ತಿರುವವರೆಲ್ಲರೂ ಒಟ್ಟಾಗಿ ಅದ್ವಿತೀಯವಾಗಿ ಮನೋಹರ ಅಂತರಿಕ್ಷ ಮಧ್ಯೆ ಕುಳಿತಿದ್ದ ಇಂದ್ರನಲ್ಲಿಗೆ ಬಂದಾಗ ಇಂದ್ರನಿಗೆ ಗೊತ್ತಾಯಿತು. ಎಲ್ಲರೂ ಕೂಗುತ್ತಿರುವುದು ಕೇಳಿಸಿತು. ದೇವತೆಗಳು ''ಮಾಧ್ಯಮಿಕ'' ದೇವಿಯನ್ನು ಉತ್ಪನ್ನ ಮಾಡಿದರು. ಮಾಧ್ಯಮಿಕಾ ದೇವಿ ಸ್ವಪ್ರಭುತ್ವದಿಂದ ಪ್ರಕಾಶಯುತಳಾಗಿ ಸಂತೋಷಕಾರಕಳಾದಳು ಮಾನವರಿಗೆ ಅರ್ಥವಾಗದ ವಾಕ್ ಉಚ್ಚರಿಸುತ್ತಾ ಭೂಮಿಯಲ್ಲಿ ಕುಳಿತಾಗ ನಾಲ್ಕು ದಿಕ್ಕುಗಳಿಂದಲೂ ಅನ್ನ, ಉದಕ ಕರೆದಳು. ನಾನಾ ರೂಪ, ನಾನಾ ವಿಧ ಪಶುಗಳು ವಾಗ್ದೇವಿಯನ್ನು ಪ್ರಶಂಸಿಸಿದರು. ಆಗ ವಾಗ್ದೇವಿಯು ಧೇನು ರೂಪ ಆಶ್ರಯಿಸಿ ಸ್ತುತಿಸಲ್ಪಟ್ಟು ಮಾಯವಾದಳು. **ಈ ಮೂಲ ತತ್ವ ಎಲ್ಲಿಗೆ ಹೋಯಿತು ಯಾರಿಗೂ ತಿಳಿಯದು.** ಮರುತ್‌ಗಳ ಸಖ್ಯದಿಂದ ಶತ್ರುಗಳನ್ನು ಜಯಿಸುವಂತಾಯಿತು. ಇಂದ್ರ ಭೃತ್ಯರು ಸಮೀಪದಲ್ಲೇ ಒಟ್ಟಾಗಿ ಸಂಚರಿಸುತ್ತಿರುತ್ತಾರೆ. ಗಂಗಾಧಿ ನದಿಗಳು ಸುಗಮವಾಗಿ ಹರಿಯುವಂತೆ ಮಾಡಿದ್ದಾನೆ. (1) ಮರುತ್‌ಗಳೊಂದಿಗೆ ಶತ್ರು ನಾಶ ಮಾಡಿದ್ದಾನೆ. (2) ಬೃಹಸ್ಪತಿಯೊಂದಿಗೆ ಸೇರಿ ಎದುರು ಬಿದ್ದ ಶತ್ರು ಸೇನೆಯನ್ನು ನಾಶ ಮಾಡಿದ್ದಾನೆ. (3) ವಜ್ರಾಯುಧ ಹಿಡಿದಾಗ ಮೇಘಗಳು ಹೆದರಿ ಇಂದ್ರನಿಗೆ ತಲೆಭಾಗುತ್ತವೆ. ಏಳು ಜನ ಪ್ರಮುಖ ರಾಕ್ಷಸರನ್ನು ನಾಶ ಮಾಡಿದ್ದಾನೆ.

ಸೋಮಪಾನ ಮಾಡಿದಾಗ ಅವನನ್ನು ಯಾರೂ ತಡೆಯಲಾರರು. ಸೋಮರಸ ಹೊಂದಿದಾಗ ತೃಪ್ತನಾಗಿ ಎಲ್ಲಾರೀತಿಯಿಂದಲೂ ರಕ್ಷಿಸುತ್ತಾನೆ. ಸರೋವರದಂತಹ 30 ಪಾತ್ರೆಗಳಲ್ಲಿನ ಆಕರ್ಷಕ ಸೋಮವನ್ನು ಒಂದೇ ಗುಟುಕಿನಲ್ಲಿ ಕುಡಿದು ವೃದ್ಧಿ ಹೊಂದಿದನು. ಸ್ವರ್ಗಲೋಕದ ತುದಿಯವರೆಗೂ ವ್ಯಾಪಿಸಿದ್ದಾನೆ.

**ಒಂದು ಸಂದರ್ಭ (ಅಗ್ನಿ ಪುತ್ರಿ ಅಪಾಲೆ) :** ಅಪಾಲೆಯು ದೋಷಾರೋಪಿತಳಾಗಿ ಪತಿಗೃಹದಿಂದ ಹೊರದೂಡಲ್ಪಟ್ಟದ್ದಾಳೆ. ಅವಳಿಗೆ ದಾರಿಯಲ್ಲಿ ಸೋಮಲತೆ ಕಂಡಿತು. ಅದನ್ನು ಅವಳು ಹಲ್ಲಿನಿಂದ ಸಿಗಿದು ರಸವನ್ನು ತೊಟ್ಟಿಕ್ಕಿಸಿ ಇಂದ್ರಾರ್ಪಣವೆನ್ನುತ್ತಾಳೆ. ಅವಳ ಬೇಡಿಕೆ ಇವು ಎನ್ನುತ್ತಾರೆ ಋಷಿಗಳು. (1) ತಂದೆಯ ತಲೆಯ ಕೂದಲು ಬೆಳೆಯಬೇಕೆಂದು (2) ತಂದೆಯ ಬಂಜರು ಭೂಮಿಯಲ್ಲಿ ಧಾನ್ಯಗಳು ಬೆಳೆಯಬೇಕೆಂದು (3) ತನ್ನ ರೋಗ ನಿವಾರಣೆಗಾಗಿ (4) ಬಹುವಿಧ ಅನ್ನಕ್ಕಾಗಿ (5) ಶಕ್ತಿಯುತರನ್ನಾಗಿಸಲು ಪ್ರಾರ್ಥಿಸುತ್ತಾಳೆ. ಶ್ರದ್ಧಾ ಭಕ್ತಿಯಿಂದ ಏನನ್ನಾದರೂ ಸರಿ ಅರ್ಪಿಸಿದರೆ ಭಗವಂತನು ಯಾವ ರೂಪಿನಿಂದಾದರೂ ಸರಿ ಸ್ವೀಕರಿಸಿ ಅನುಗ್ರಹಿಸುತ್ತಾನೆ ಎನ್ನುವುದನ್ನು ತೋರಿಸುತ್ತದೆ. ಆಸ್ತಿಕರು ಇಂದ್ರನು ಅಪಾಲೆಯನ್ನು ಅನುಗ್ರಹಿಸಿದನು ಎಂದೇ ತಿಳಿಯಬೇಕು.

**ವೃತ್ರನ ಬಗೆಗೆ :** ಮೃಗ ರೂಪಿ ವೃತ್ರನ ಬಲ, ಭಯ ದೇವತೆಗಳನ್ನು ಆಕ್ರಮಿಸಿತ್ತು. ವೃತನ ಉಚ್ಛ್ವಾಸ, ನಿಚ್ಛ್ವಾಸಕ್ಕೆ ದೇವತೆಗಳು ಹೆದರಿದರು. ಇಂದ್ರನು ಮೇಘರೂಪಿ ವೃತ್ರನನ್ನು ಕೊಂದು ಅವನನ್ನು ಸಂಹರಿಸಿ ಉದಕವು ಸರಾಗವಾಗಿ ಹರಿದು ಸಮುದ್ರ ಸೇರುವಂತೆ ಮಾಡಿದನು.

**ಸೋಮದ ಬಗೆಗೆ :** ಸವನ ತ್ರಯಗಳಲ್ಲಿ ಹಿಂಡಿ ಅರ್ಪಿಸಿದ ಸೋಮವು ಇಂದ್ರಾದಿ ದೇವತೆಗಳನ್ನು ತೃಪ್ತಿಪಡಿಸುತ್ತದೆ. ದ್ರೋಣಕಳಶ, ಪೂತಭೃತು, ಅಧವನೀಯ ಪಾತ್ರೆಗಳಲ್ಲಿ ಸುರಿಯಲ್ಪಟ್ಟು ಚಮಸ ಪಾತ್ರೆಗಳಲ್ಲಿ ತುಂಬಿದೆ. ಸೋಮವು ಮದಕಾರಕ, ಪುರೋಡಾಶಗಳೊಂದಿಗೆ ಸೇವಿಸಲು ಇಂದ್ರನನ್ನು ಆಹ್ವಾನಿಸುತ್ತಾರೆ. ಆಲಸ್ಯವಿಲ್ಲದೆ ಎಚ್ಚರವಾಗಿರುವ ದೇವತೆಗಳು ಸೋಮವನ್ನು ಹೊಂದುತ್ತಾರೆ. ಸೋಮಾಭಿಷವಣ ಮಾಡುವ ಅಧ್ವರ್ಯುವು ಆಹುತಿ ರೂಪ ಸೋಮವನ್ನು ಧನಕ್ಕಾಗಿ ಅರ್ಪಿಸುತ್ತಾರೆ. ಅಧ್ವರ್ಯುವು ಕಲ್ಲಿನಿಂದ ಉತ್ತಮವಾಗಿ ಹಿಂಡಿ ಸಿದ್ಧಪಡಿಸಿ ಅಭಿಷವಣಾದಿ ವಿದ್ಯುಕ್ತ ಕರ್ಮಗಳಿಂದ ಸಂಸ್ಕರಿಸಿ ಶುದ್ಧ ವಸತಿವರ್ಯಾದಿಗಳು ಸೇರಿದ ರಸಭರಿತ ಶೀಘ್ರ ಹರ್ಷಕಾರಿ ಸೋಮ ಸಿದ್ಧವಾದಾಗ ಮರುತುಗಳು ಅಂತರಿಕ್ಷವನ್ನು ಮೇಘಗಳಿಂದ ಹೊದ್ದಿಸುತ್ತಾ ನದಿಗೆ ಪ್ರವಾಹಗಳಾಗಿ ವೃಷ್ಟಿ ಉದಕ ಕರೆಯುತ್ತಾರೆ. ಸೋಮ ಸ್ತುತಿಗಳಿಂದ ಇಂದ್ರ ಕೋಪ ಶಮನವಾಗುತ್ತದೆ. ಉದಾ : ''ಜಲಾಶಯಾಭಿಮುಖಿ ಬಂದು ಜಿಂಕೆಯು ಜಲಪಾನ ಮಾಡಿದಂತೆ'' ; ''ಉದಕ ತುಂಬಿದ ತಟಾಕಕ್ಕೆ ಬಾಯಾರಿದ ಗೌರ ಮೃಗವು ಬೇಟೆ ಹೋಗುವಂತೆ'' ಇಂದ್ರನು ಮೊದಲೇ ಕ್ಷೀರಯುಕ್ತ ರಸಯುಕ್ತ ಸೋಮಪಾನ ಮಾಡಲು ಪ್ರಾರ್ಥಿಸುತ್ತಾರೆ. ಸೋಮವು ಯಜಮಾನನಿಗೆ ಧನ ನಿಮಿತ್ತವಾಗಿ ಸಿದ್ಧವಾಗುತ್ತವೆ.

ಇಂದ್ರನು ಚಮಸ ಪಾತ್ರೆಯಲ್ಲಿ ಸೋಮಾಭಿಮುಖಿ ಬಂದು ಧಾರಾಕಾರವಾಗಿ ಇಷ್ಟಬಂದಷ್ಟು ಸೋಮವನ್ನು ಸೇವಿಸಲಿ. ಯಜ್ಞ ಸಾಧಕ ಸೋಮ ಸೇವನೆಯಿಂದ ತೃಪ್ತಿ ಮದದಿಂದ ಸರ್ವ ಭಕ್ಷಕ ಶತ್ರುವನ್ನು ಕೊಲ್ಲುವ ಶಕ್ತಿಯನ್ನು ಇಂದ್ರನು ಹೊಂದುತ್ತಾನೆ. ಇದಕ್ಕಾಗಿ ಯಜಮಾನರು ಇಂದ್ರನಲ್ಲಿ ಮಿತ್ರತ್ವವನ್ನು ಪ್ರಾರ್ಥಿಸುತ್ತಾರೆ. ಅಶ್ವಗಳು ಇಂದ್ರನನ್ನು ಯಜ್ಞ ಸ್ಥಳಕ್ಕೆ ಕರೆತರಲಿ. ಚಂದ್ರೋದಯ ಕಾಲದಲ್ಲಿ ಸಮುದ್ರವು ಉಕ್ಕುವಂತೆ ಸೋಮವನ್ನು ಇಂದ್ರನು ಸೇವಿಸಲಿ. ಯಜಮಾನಾರ್ಪಿತ ಹಿಂಡಿದ ಸೋಮದಿಂದ ಅಧಿಕ ಹರ್ಷಗೊಳ್ಳಲಿ. ಶಸ್ತ್ರಮಂತ್ರಕಾರಕ, ಯಜ್ಞ ಸಂಬಂಧಿತ ಸೋಮವನ್ನು ಅಗ್ನಿಯಲ್ಲಿ ಆಜ್ಯ ಸುರಿದಂತೆ ಇಂದ್ರನ ಬಾಯಿಗೆ ಸುರಿದು ತೃಪ್ತಿಗೊಳಿಸುತ್ತಾರೆ. ಹಿಂಡಿದ ಸೋಮ ಯಜ್ಞ ಸ್ತುತಿಗಳು ಇಂದ್ರನನ್ನು ತೃಪ್ತಿಗೊಳಿಸುತ್ತವೆ. ಸೋಮದಿಂದ ಕರ್ಮಕರ್ತರು ಋತುಗಳಿಗನುಸಾರವಾಗಿ ಶಸ್ತ್ರಮಂತ್ರ ನಿರ್ಮಿಸುತ್ತಾ ಇಂದ್ರನನ್ನು ಶುದ್ಧಿಕಾರಕ ಎಂದು ಪ್ರಶಂಸಿಸುತ್ತಾರೆ. ಉತ್ತಮ ವಸ್ತ್ರ ಧರಿಸಿ ಬರುವ ಪತ್ನಿಯಂತೆ ಸೋಮವು ಎಲ್ಲ ಮಿಶ್ರಣಗಳಿಂದ ಒಡಗೂಡಿ ಇಂದ್ರನನ್ನು ಸಮೀಪಿಸುತ್ತದೆ. ಸ್ವರ್ಗಪ್ರಾಪಕ ಸೋಮ ಹಿಂಡುವಾಗ ಋತ್ವಿಜರೊಡಗೂಡಿ ಇಂದ್ರನೆದುರಲ್ಲೇ ಅವನ ರಕ್ಷಣೆಯಲ್ಲಿ ಕರ್ಮ ಮಾಡುತ್ತಾರೆ. ಇಂದ್ರಾಗ್ನಿಗಳು ಶ್ವೇತ ವರ್ಣಗಳು, ಶಕ್ತಿಯುತರು, ಋತ್ವಿಜರಿಂದ ಪ್ರಾರ್ಥಿತರು, ಇಂದ್ರಾಗ್ನಿಗಳ ಆಧಾರದ ಮೇಲೆ ಈ ಜಗತ್ತು ನಿಂತಿದೆ. ಇಬ್ಬರೂ ಧನಾಧಿಪತಿಗಳು, ಯಜ್ಞವು ಹಿಂಸಾರಹಿತವಾದುದು. ಸ್ವರ್ಗ ಪರ್ಯಂತ ಹವಿಸ್ಸು ಒದಗಿಸುವುದು. ಯಜ್ಞದ ಉದ್ದೇಶವನ್ನು ಸಾರ್ಥಕಪಡಿಸುತ್ತಾನೆ. ವಿಷ್ಣುವು ಮಿತ್ರನ ಉದಯಾಸ್ತಮಾನ ರೂಪ ಧರ್ಮಗಳಿಂದ ತನ್ನ ಮೂರು ಪಾದಗಳಿಂದ ಹರಡಿ ವ್ಯಾಪಿಸಿದನು.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಇಂದ್ರದೇವರು

## ಮಂಡಲ 8 - ಕಾಣ್ವ ಋಷಿಗಳು (ಆಶ್ರಮ ವಿಭಾಗ)

★ ಋಷಿ ಮೇದಾತಿಥಿ ಕಾಣ್ವರು ಇಂದ್ರನನ್ನು ಯುದ್ಧದಲ್ಲಿ ಮತ್ತು ಯಜ್ಞದಲ್ಲಿ ಮಧ್ಯದಲ್ಲಿ ಕುಳಿತುಕೊಳ್ಳಲು ಆಹ್ವಾನಿಸುತ್ತಾರೆ.

★ ಇತರೇ ದೇವತೆಗಳೊಂದಿಗೆ ಸ್ಪಂದಿಸುವ ಇಂದ್ರನಲ್ಲಿ ಶ್ರದ್ಧಾ ಭಕ್ತಿಯುತರಾಗಿರುತ್ತಾರೆ

★ ''ಎಷ್ಟು ಕರೆದರೂ ಬರದೆ ತಡ ಮಾಡುವ ದುರ್ಗುಣಿ ಅಳಿಯನಂತೆ'' ಮಾಡದೆ ಸಾಯಂಕಾಲದೊಳಗಾಗಿ ಯಜಮಾನನಲ್ಲಿಗೆ ಬರಲಿ.

★ ಇಂದ್ರ, ಮರುತ್‌ಗಳನ್ನು ಅಶ್ವಗಳು ಯಜಮಾನನ ಯಾಗಕ್ಕೆ ಸೋಮಪಾನಕ್ಕೆ ಕರೆತರಲು ಆಹ್ವಾನಿಸಿದ್ದಾರೆ.

★ ಋತ್ವಿಜರು ಇಂದ್ರನು, ಉದಯ, ಮಧ್ಯಾಹ್ನ, ಸಂಜೆಯ ಮೂರು ಸಮಯಗಳಲ್ಲೂ ಯಾಗಕ್ಕೆ ದಯಮಾಡಿಸಲಿ ಎಂದು ಪ್ರಾರ್ಥಿಸಿದ್ದಾರೆ.

★ ಕಣ್ವಪುತ್ರ ಪ್ರಸ್ಕಣ್ವರು ಇಂದ್ರನನ್ನು ಸೋಮಪಾನಾರ್ಥ ದ್ಯುಲೋಕದಿಂದ ಬರಲು ಪ್ರಾರ್ಥಿಸಿದ್ದಾರೆ.

★ ಋತ್ವಿಜರು ದೇವತೆಗಳಿಗೆ ದರ್ಭಾಸನ ಹರಡಿರುತ್ತಾರೆ.

★ ಅಶ್ವಗಳು ಇಂದ್ರನನ್ನು ತಮ್ಮಲ್ಲಿಯೇ ಕರೆತರಲಿ. ದ್ಯುಲೋಕದಿಂದ ಅತಿಶಯ ಶಬ್ದ ಮಾಡುತ್ತಾ ಬರಲಿ.

★ ಮರಣ ಧರ್ಮರಹಿತ ದೇವತೆಗಳನ್ನು ಅವರ ಪತ್ನಿಯರುಗಳನ್ನು ಸೋಮಾರ್ಪಣೆಯಿಂದ ಮತ್ತು ನಾನಾ ಸ್ತುತಿಗಳಿಂದ ತೃಪ್ತಿಪಡಿಸುತ್ತಾರೆ. ಯಜಮಾನರು ಆತ್ಮ ಪ್ರೇರಣೆಯಿಂದಲೇ ಕರ್ತವ್ಯಗಳನ್ನು ಮಾಡುತ್ತಾರೆ.

★ ಆಹ್ವಾನಿತ ದೇವತೆಗಳೆಲ್ಲರೂ ಬಂದು ದರ್ಭಾಸೀನರಾಗಲಿ. ಸ್ತುತಿ ವಾಕ್ಯಗಳಿಂದ ತೃಪ್ತಿಪಡಿಸುತ್ತಾರೆ.

★ ಆತುರ ಇಲ್ಲದೆ ಮನೋವಿಕಲ್ಪ ಇಲ್ಲದೆ ಶುದ್ಧ ಭಕ್ತಿಯಿಂದ, ಶಾಂತ ಮನಸ್ಸಿನಿಂದ ಸ್ತೋತ್ರಗಳನ್ನು ಮಾಡುತ್ತಾರೆ.

★ ಋತ್ವಿಜರು ಅಶ್ವಗಳನ್ನು ಸ್ತುತಿಸುತ್ತಾರೆ. ಶ್ರದ್ಧೆಯಿಂದ ಹಿಂದಿನವರು ಮಾಡಿದಂತೆಯೇ ಪ್ರಶಂಸಿಸಿ ಗಾನ ಮಾಡುತ್ತಾರೆ.

★ ಮಹತ್ತಾದ ಛಂದೋಬದ್ಧ ಸ್ತುತಿಗಳಿಂದಲೇ ಸ್ತುತಿಸುತ್ತಾರೆ. ಕಾಣ್ವರು ಸ್ತುತಿಸಿದಂತೆಯೇ ಅವರ ವಂಶಜರು, ಅನುಯಾಯಿಗಳು ಸೋಮ ಸ್ತುತಿಗಳಿಂದಲೂ ಸ್ತುತಿಸುತ್ತಾರೆ. ಯಜಮಾನರು ಋಷಿಗಳು ಭಾಗವಹಿಸುತ್ತಾರೆ. ಕಾಲೋಚಿತ ಸ್ತೋತ್ರಗಳನ್ನು ಮಾಡುತ್ತಾರೆ. ಇಂದ್ರನ ಗುಣಗಳನ್ನು ಯಜ್ಞ ಸಂಬಂಧಿ ಯಜಮಾನರು ಸ್ತುತಿಗಳು ಎಂಟು ದಿಕ್ಕುಗಳು, ವಿದಿಕ್ಕುಗಳು ವ್ಯಾಪಿಸುವಂತೆ ಪಠಿಸುತ್ತಾರೆ.

★ ಸ್ತುತಿಗಳನ್ನು ಕೇಳಲಿ, ನಮಸ್ಕಾರಗಳನ್ನು ಸ್ವೀಕರಿಸಲಿ. ನದಿಗಳು ಸಮುದ್ರವನ್ನು ಸೇರುವಂತೆ ಶಸ್ತ್ರಮಂತ್ರಗಳು ಇಂದ್ರನನ್ನು ಸೇರಲಿ, ಪ್ರತಿದಿನವೂ ಸ್ತುತಿಸುತ್ತಾರೆ. ವಾಯುಬಲ ಹೊಂದಿರುವ ಅಶ್ವರಥದಲ್ಲಿ ಇಂದ್ರನು ಬರಲಿ. ಪಾಪ ಪುಣ್ಯಗಳ ವ್ಯತ್ಯಾಸ ಅರಿತ ಪರಾಕ್ರಮಿ ಇಂದ್ರ, ಪೃಥ್ವಿ, ಅಂತರಿಕ್ಷ, ದ್ಯುಲೋಕ ಎಲ್ಲಿದ್ದರೂ ಸರಿ ಮನೋವೇಗದಲ್ಲಿ ಬರಲಿ.

★ ಶರಣ್ಯಾವತಿ, ಸರಸ್ಸಿನ ತೀರದಲ್ಲಿ ಆಂಗೀರಸ್ಸು ಭೃಗುಗಳು ಇಂದ್ರನನ್ನು ಸ್ತುತಿಸಿದ್ದಾರೆ.

## ಮಂಡಲ 8 - ಕಾಣ್ವ ಋಷಿಗಳು (ಯಜ್ಞ ವಿಭಾಗ)

★ ಋಷಿಗಳು ನಿರ್ಮಿಸಿದ ಸ್ತೋತ್ರಗಳನ್ನು ಆದರದಿಂದ ಇಂದ್ರನು ಕೇಳಲಿ. ಒಟ್ಟಾಗಿ ಸೇರಿ ಋಷಿಗಳು ಯಾಗ ಮಾಡುತ್ತಾರೆ.

★ ಪ್ರಾತ: ಸವನದಲ್ಲಿ ಇಂದ್ರನನ್ನು ಅಶ್ವಗಳು ಯಜ್ಞಾಭಿಮುಖ ಕರೆತರಲಿ. ಬಲಶಾಲಿ ವಾಯುವಿನಂತೆ ಎಲ್ಲಿದ್ದರೂ ಸರಿ ಇಂದ್ರನು ಯಜ್ಞ ಪ್ರವೇಶಕ್ಕೆ ಓಡಿ ಬರಲಿ.

★ ಸೋಮವು ದರ್ಭಾಸನದ ಮೇಲೆ ಸಿದ್ಧವಾಗಿದೆ. ''ಸಮುದ್ರದ ಅಲೆಗಳಂತೆ ಯಾಗಗಳು ಒಂದಾದ ಮೇಲೆ ಒಂದು ನಡೆಯುತ್ತಲೇ ಇರುತ್ತದೆ''. ಇತರೇ ದೇವತೆಗಳಿಗೆ ಮುಂಚೆಯೇ ವಾಯು ಇಂದ್ರರು ಮದಾಕಾರಕ ಸೋಮವನ್ನು ಪಾನ ಮಾಡಲಿ. ಇಂದ್ರ ಭಕ್ತರು ಬೇರಾರಿಂದಲೂ ದಾನ ಸ್ವೀಕರಿಸುವುದಿಲ್ಲ.

★ ಪಡೆದುದು ಕಳೆದು ಹೋಗುವುದೂ ಇಲ್ಲ. ಋಷಿಗಳು ಸಕಲ ಯಜ್ಞ ಕರ್ಮಗಳನ್ನು ಮಾಡಿ ಇಂದ್ರನನ್ನು ದಷ್ಟ ಪುಷ್ಟನನ್ನಾಗಿ ಬೆಳೆಯುವಂತೆ ಮಾಡಿದ್ದಾರೆ. ಋಷಿಗಳು ಗೃಹ, ಕ್ಷೇತ್ರ, ಸಾಮ್ಯಗಳನ್ನು ತ್ಯಾಗಮಾಡಿ ವಿಸ್ತೃತ ಯಜ್ಞ ಆಚರಿಸುತ್ತಿದ್ದ ಋಷಿಗಳಿಗೆ ವಿವಿಕ, ಉಪನಿಷತ್ ವಾಕ್ಯ, ಶಾಸ್ತ್ರಜ್ಞಾನವನ್ನು, ಮನನ ಸಾಮರ್ಥ್ಯವನ್ನು ಅನುಗ್ರಹಿಸುತ್ತಾರೆ ಎಂದು ತಮ್ಮ ತಮ್ಮ ತಪಶಕ್ತಿಯಿಂದ ಕಂಡುಕೊಂಡಿದ್ದಾರೆ.

★ ಕೊನೆಯ ದಿನ ಅವಭೃತ ಸ್ನಾನಾನಂತರ ಅವರವರ ಸ್ವ ಸ್ಥಾನಕ್ಕೆ ಅವರುಗಳನ್ನು ಬೀಳ್ಕೊಡುತ್ತಾರೆ.

★ ದಾನಗಳಿಂದ ಸ್ವರ್ಗವು ಪ್ರಾಪ್ತಿಯಾಗುತ್ತದೆ, ಪಾಪವು ನಾಶವಾಗುತ್ತದೆ ಎಂದಿದ್ದಾರೆ ಋಷಿಗಳು.

★ ಧನ ದಾನ ಮಾಡುವವರಿಗೆ, ಮಾಡುವಂತೆ ಉಪದೇಶಿಸುವವರಿಗೆ ಯಜ್ಞ ಯಜಮಾನರಿಗೆ ಸಂಪತ್ ಅಭಿವೃದ್ಧಿಯಾಗುತ್ತದೆ. ಮರುತ್‌ಗಳೊಡನೆ ಸೋಮಪಾನಕ್ಕೆ ಬರಲಿ ಎಂದಿದ್ದಾರೆ.

★ ಮಂತ್ರದಂಷ್ಟ್ರ ಮಾನವರು ಮಂತ್ರಗಳಿಂದ , ಹೋತೃಗಳು ಗಾಯತ್ರಾದಿಗಳಿಂದ, ಉದ್ಗಾತೃವು ಸಾಮದಾನದಿಂದ ತೃಪ್ತಿಪಡಿಸುತ್ತಾರೆ. ಸಮರ್ಥರಾಗಿರುವವರನ್ನು ಮಾತ್ರವೇ ಆಯಾಯ ಕಾರ್ಯಗಳಿಗೆ ಯಜಮಾನರು ನಿಯಮಿಸಿರುತ್ತಾರೆ. ಅಗ್ನಿಸ್ಟೋಮಾಧಿ ಕರ್ಮಗಳನ್ನು ಮಾಡಿ ತೃಪ್ತಿಪಡಿಸುತ್ತಾರೆ. ಸೋಮವು ಜಜ್ಞಿಶೇಖರಿಸುತ್ತಾ ರಸ ಪಾನಕ್ಕೆ ಸಿದ್ಧವಾದಾಗ ದರ್ಭಾಸನ ಸಿದ್ಧ ಪಡಿಸಿ ಗಟ್ಟಿಯಾಗಿ ಸ್ತುತಿಸುತ್ತಾರೆ. ಯಾವಾಗ ಬರುವನೋ ಎಂದು ನಿರೀಕ್ಷಿಸುತ್ತಾರೆ. ಯಾಗ ದಿನಗಳಲ್ಲಿಸ್ವರ್ಗ ಪ್ರಾಪ್ತಿಗಾಗಿ ಉಕ್ತಸ್ತುತಿಗಳು, ಸೋಮವು, ಚಮು ಪಾತ್ರೆಯಲ್ಲಿ ಇಂದ್ರಾರ್ಪಿತವಾಗುತ್ತದೆ. ಇಂದ್ರ ಧನವು ಋಷಿಗಳು ಯಾಜ್ಞಿಕರುಗಳಿಗಾಗಿಯೇ ಎಂದು ತಿಳಿದಿದ್ದಾರೆ. ಎಲ್ಲರೂ ಸೇರಿ ನಾನಾ ರೀತಿ ಸ್ತುತಿಸುತ್ತಾರೆ. ಪ್ರಶಂಸಿಸಿ ಪೂಜಿಸುತ್ತಾರೆ. ಬಲವಾದ ಕರ್ಮಗಳಿಂದ ಸ್ತುತಿಸಿ, ಪೂಜಿಸಿ ಇಂದ್ರನನ್ನು ಪ್ರಭುವಾಗಿಸಿಕೊಂಡಿದ್ದಾರೆ. ಪ್ರಾತ: ಸವನದಲ್ಲಿ ಬರುವ ದೇವತೆಗಳೊಂದಿಗೆ ಇಂದ್ರಾಗ್ನಿಗಳು ಬಂದು ಅಪೇಕ್ಷಿತ ಹವಿಸ್ಸು ಸೋಮ ಸ್ವೀಕರಿಸಲಿ. ಮಧ್ಯಾಹ್ನ ಕಾಲ ಅರ್ಪಿಸಿದ ಸೋಮ ಪಾನ ಮಾಡಲಿ.

## ಆಶ್ರಮದಲ್ಲಿ ಇಂದ್ರನೊಡನೆ ಆರಾಧಿಸಿದ ಇತರೇ ದೇವತೆಗಳು

**ಪೂಷನ್** : ಪಾಪದಿಂದ ಬಿಡುಗಡೆ ಮಾಡುವವನು, ಅಧಿಕ ಪ್ರಾಜ್ಞ, ಧನಿ, ಯಜಮಾನನು ಪೂಜಿಸುತ್ತಾನೆ. ಇವನಲ್ಲಿ ಬೇಕಾದಷ್ಟು ಗೋಧನವಿದೆ. ಅವನ್ನೆಲ್ಲಾ ಯಜಮಾನರು ಯಾಜ್ಞಿಕರಿಗೆ ದಾನ ಮಾಡಲಿ ಎಂದಿದ್ದಾರೆ. ಒಳ್ಳೆಯ ತೀಕ್ಷ್ಣವಾದ ಬುದ್ಧಿಕೊಡಲಿ.

**ಮರುತ್‌ಗಳು**: ಇವರು ರುದ್ರ ಪುತ್ರರು, ಪೃಥ್ವಿಯಾದಿ ಸ್ಥಾನಗಳಲ್ಲೂ ಗೋಚರಿಸುವವರು, ಶತ್ರುಗಳನ್ನು ಹಿಂಸಿಸುತ್ತಾರೆ ದ್ಯುಲೋಕ, ಉತ್ತಮ ಗಾನ ಕೇಳುವವರು, ಪ್ರಾಜ್ಞರು, ವಿಶೇಷ ಸ್ತೋತ್ರಗಳನ್ನು ಅರ್ಪಿಸುತ್ತಾರೆ. ಆಗ ಇಂದ್ರನೊಡನೆ ಇತರರೂ ಸೇರಿ ಯಜ್ಞದಲ್ಲಿ ಹವಿಸ್ಸುಸ್ವೀಕರಿಸಲು ''ಉತ್ತರವೇದಿ'' ಸ್ಥಾನದಲ್ಲಿ ಸ್ಥಾಪಿತರಾಗುತ್ತಾರೆ.

**ಅಗ್ನಿ**: ಅಗ್ನಿಯು ಪ್ರಸಿದ್ಧ, ಮಹತ್‌ರೂಪಿ, ದೇವತೆಗಳ ಹವಿರ್ವಾಹಕ, ಕಲ್ಯಾಣಾತ್ಮಕ ರಥವುಳ್ಳವನು, ಕರ್ಮಜ್ಞಾನ ಹೊಂದಿದ ಯಜಮಾನನನ್ನು ಅರಿಯುತ್ತಾನೆ. ಸರ್ವ ಪ್ರೇರಕ. ಅಗ್ನಿಯು ರಾತ್ರಿಯಲ್ಲಿ ಭೂಮಿಯ ಮೇಲೆ, ಹಗಲಿನಲ್ಲಿ ಸೂರ್ಯ ಪ್ರಕಾಶದಿಂದ ಪ್ರಕಾಶಿಸುತ್ತಾನೆ.

**ವರುಣರು**: ವರುಣನನ್ನು ಪ್ರಶಂಸಿಸುತ್ತಾರೆ. ಗಂಗಾದಿ ಸಪ್ತ ನದಿಗಳು ಪಾತಾಳದಂತೆ ಇರುವ ಹಳ್ಳಕ್ಕೆ ಪ್ರವಾಹದಿಂದ ಬೀಳುವಂತೆ ವರುಣನ ನಾಲಿಗೆಯ ಕೆಳಭಾಗಕ್ಕೆ ಬೀಳುತ್ತವೆ. ವರುಣನು ಯಾಗ ಗೃಹದಲ್ಲೇ ಇರಲಿ ಎಂದಿದ್ದಾರೆ. ನೀರು ಅತ್ಯವಶ್ಯಕ, ಅದಕ್ಕಾಗಿ ವರುಣನನ್ನು ಬೇಡುತ್ತಾರೆ. ಇವರು ಪ್ರಕಾಶಮಾನರು, ಉದಕ ಪಾಲಕರು, ಓಷಧ್ಯಾದಿಗಳ ನಿರ್ಮಾಪಕರು, ಅಂತರಿಕ್ಷ ತೀರ ಪ್ರದೇಶದಲ್ಲೆಲ್ಲಾ ಸಂಚರಿಸುವವರು, ಪ್ರತಿ ಯಜ್ಞಕ್ಕೂ ಮೂರು ಸವನದಲ್ಲೂ ಹೋಗುವವರು, ಅವರ ಭಾಗಕ್ಕೆ ಸೇರಿದ ಚರು ಪುರೋಡಾಶಗಳನ್ನು ಅರ್ಪಿಸುತ್ತಾರೆ. ಓಷದಿಗಳು ಉದಕ, ಇವರ ಮಹಿಮೆಯಿಂದ ಲಭಿಸುತ್ತದೆ.

## ಇವರ ಜೊತೆಗೆ ಆರಾಧಿಸಿದ ಇತರೆ ದೇವತೆಗಳು

1) ರುದ್ರರು (2) ವಿಷ್ಣು(3) ಸರಸ್ವತಿ (4) ಅಬ್ ದೇವತೆ ಮತ್ತು ಪೃಥ್ವಿಯ ಅಭಿಮಾನಿ ದೇವತೆಗಳು ಎಲ್ಲರೂ ಆಹ್ವಾನ ಕೇಳಲಿ, ಯಜ್ಞ ಭಾಗಿಗಳಾಗಲಿ ಎಂದು ಪ್ರಾರ್ಥಿಸಿದ್ದಾರೆ.

ಇಂದ್ರನ ರಥವು ಹೊಂಬಣ್ಣದ್ದು, ಪಾದರಹಿತ, ಶೀಘ್ರ ಗಾಮಿ, ಸಹಸ್ರ ಕಂಬಗಳುಳ್ಳದ್ದು, ಅಶ್ವಗಳು ಇಂದ್ರನನ್ನು ದರ್ಭಾಸೀನನಾಗುವಂತೆ ಹೇಳಲಿ. ಯಜಮಾನರು ಇಂದ್ರ ರಥದಲ್ಲಿ ಕುಳಿತುಕೊಳ್ಳಲು ಅಪೇಕ್ಷಿಸುತ್ತಾರೆ. ಅದಕ್ಕಾಗಿ ಆಹ್ವಾನಿಸುತ್ತಾರೆ, ಪೂಜಿಸುತ್ತಾರೆ, ಸ್ತುತಿಸುತ್ತಾರೆ. ಹವಿಸ್ಸು ಪುರೋಡಾಶ ಅರ್ಪಿಸುತ್ತಾರೆ, ಸೋಮ ಅರ್ಪಿಸುತ್ತಾರೆ.

ಮಂಡಲ 8ರಲ್ಲಿ ಕಾಣ್ವ ಋಷಿಗಳು ಇಂದ್ರ ದೇವನ ಜೊತೆಗೆ ಮೇಲ್ಕಂಡ ದೇವತೆಗಳನ್ನು ಆರಾಧಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಇಂದ್ರದೇವರು

## ಮಂಡಲ 8 - ಕಾಣ್ವ ಋಷಿಗಳು (ಪ್ರಾರ್ಥನಾ ವಿಭಾಗ)

★ ಉತ್ತಮ ನಿವಾಸಸ್ಥಾನಕ್ಕಾಗಿ ಬೇಡಿದ್ದಾರೆ. ಗೃಹವು ಯಾವ ತೊಂದರೆಗಳು ಇಲ್ಲದೆ ಭದ್ರವಾಗಿರಲಿ ಎಂದು ಕೇಳಿಕೊಂಡಿದ್ದಾರೆ. ನಿರಭಿಮಾನ ಪ್ರಶಾಂತ ಮನಸ್ಸು ಅನುಗ್ರಹಿಸಲಿ. ಪುತ್ರ ಪೌತ್ರರುಗಳಿಗಾಗಿ ಬೇಡಿದ್ದಾರೆ. ಉದಕಕ್ಕಾಗಿ, ನೀರಿನ ಸೌಕರ್ಯಗಳಿಗಾಗಿ ಅಪೇಕ್ಷಿಸಿದ್ದಾರೆ. ಅಪರಿಮಿತ ವೃಷ್ಟಿಸುರಿಸಲು ಪ್ರಾರ್ಥಿಸಿದ್ದಾರೆ.

★ ಸ್ತುತಿಕರ್ತರನ್ನು ಧನವಂತರನ್ನಾಗಿ ಮಾಡಲಿ, ದ್ಯಾವಾ ಪೃಥ್ವಿಗಳು ಕೊಡಬೇಕಾದ ಉತ್ಪನ್ನಗಳಿಗಾಗಿ ಸ್ತುತಿಸಿದ್ದಾರೆ. ಇಂದ್ರನು ಧನ ತುಂಬಿದ ರಥದಲ್ಲಿ ಬರಲು ಪ್ರಾರ್ಥಿಸಿದ್ದಾರೆ. ಸೋಮ ಅರ್ಪಿಸುವವರಿಗೆ ಮೊದಲು ಧನ ನೀಡಲಿ, ಅನಂತರ ಸ್ತುತಿಕರ್ತರಿಗೆ ಧನ ಕೊಡಲಿ, ಪ್ರಭೂತ ಧನ, ಅನ್ನ ಅನುಗ್ರಹಿಸಲಿ.

★ ತಂದೆಯಿಂದ ಮಗನು ತನ್ನ ಭಾಗ ಕೇಳುವಂತೆ ಯಾಜ್ಞಿಕರು ಇಂದ್ರನಲ್ಲಿ ಧನ ಯಾಚಿಸಿದ್ದಾರೆ.

★ ಇಂದ್ರನ ಧನವು ಯಜಮಾನಾಭಿಮುಖ ಹರಿಯಲಿ. ಶಸ್ತ್ರಮಂತ್ರ ಪಠನ ಸೋಮಗಳಿಂದ ಹರ್ಷ ಹೊಂದಿ ತೃಪ್ತನಾಗಿ ಇಂದ್ರನು ಯಜಮಾನನಿಗೆ ವೀರ್ಯಯುತ ಅಶ್ವ ಗೋವು, ಧನಗಳನ್ನು ಕರುಣಿಸಲಿ. ನೂರಾರು ಅಶ್ವಗೋವುಗಳನ್ನು ಬೇಡಿದ್ದಾರೆ. ರಥ ಮತ್ತು ರಥ ಮಾರ್ಗ ಸೌಕರ್ಯಕ್ಕಾಗಿ ಪ್ರಾರ್ಥಿಸಿದ್ದಾರೆ.

★ ಸಂಗ್ರಾಮದಲ್ಲಿ ಅಚಲವಾಗಿ ನಿಂತು ಶತ್ರು ಸಧೆ ಬಡಿದು ಅವರ ಧನವನ್ನು ಯಜಮಾನರಿಗೆ ಸೇರಿಸಲಿ, ಸುವರ್ಣ ಆಭರಣ ಅಲಂಕೃತ ಅಶ್ವಗೋವುಗಳನ್ನು ದಾನ ಮಾಡಲಿ. ಶತ್ರು ನಿಗ್ರಹಕ್ಕಾಗಿ ಪ್ರಾರ್ಥಿಸಿದ್ದಾರೆ. ಸುರಾಪಾನಮತ್ತರಾದವರನ್ನು ನಾಸ್ತಿಕರನ್ನು, ಹಿಂಸಕರನ್ನು, ಭಯ ಪಡಿಸುವವರನ್ನು ನಮ್ಮಿಂದ ದೂರವಿರಿಸಿ ರಕ್ಷಿಸಲಿ.

★ ದಾರಿದ್ರ್ಯ, ಹಸಿವು, ನಿಂದೆಗಳನ್ನು ನಿವಾರಿಸಿ ಯಾಜ್ಞಿಕರ, ಯಜಮಾನರ ಇಷ್ಟಾರ್ಥಗಳನ್ನು ಈಡೇರಿಸಲಿ. ವಜ್ರಾಯುಧದಿಂದ ನಾಸ್ತಿಕರನ್ನು ಅಂಧಕಾರಕ್ಕೆ ತಳ್ಳಲಿ. ಕರ್ಮಭ್ರಷ್ಟರಿಗೆ, ಲೋಭಿಗಳಿಗೆ ಧನ ನೀಡದಿರಲಿ.

★ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಮೇಲೆ, ಕೆಳಗೆ, ಮುಂದೆ, ಹಿಂದೆ, ವರ್ತಮಾನ, ಭವಿಷ್ಯ ಕಾಲಗಳಲ್ಲಿ ಸಕಲ ದಿನಗಳಲ್ಲೂ ಹಗಲೂ ರಾತ್ರಿಯೂ ನಮ್ಮೆಲ್ಲರನ್ನು ರಕ್ಷಿಸಲಿ.

★ ಶತ್ರುಗಳನ್ನು ಜಯಿಸಲು ಸಮರ್ಥ ಪುತ್ರರನ್ನು ಕರುಣಿಸಲಿ. ರಾಕ್ಷಸರನ್ನು ಹಗಲು ರಾತ್ರಿಗಳಲ್ಲಿ ಸಂಹರಿಸಿ ರಕ್ಷಿಸಲಿ.

★ ರಕ್ಷಣಾರ್ಥ ಕರ್ಮಗಳನ್ನು ನೆರವೇರಿಸಿಯೇ ತಮಗೆ ಬೇಕಾದವುಗಳನ್ನು ಬೇಡುತ್ತಾರೆ.

★ ''ಹರಿ'' ಎಂಬ ಅಶ್ವದೊಡನೆ ಬಂದು ರಕ್ಷಿಸಲಿ. ರಕ್ಷಣೆಗೆ ಯಜಮಾನನಿಗೆ ಶಸ್ತ್ರಗಳನ್ನು ಕೊಡಲಿ.

★ ಸೋಮಪಾನದಿಂದ ಹರ್ಷಹೊಂದಲಿ. ಸನ್ಮಾರ್ಗಿಗಳನ್ನಾಗಿ ಮಾಡಲಿ. ಋಷಿಗಳಿಗೆ ಮಿತ್ರನಾಗಿರಲಿ, ಮಾಡಿದ ತಪ್ಪುಗಳಿಗೆ ಯಜಮಾನನನ್ನು ಹಿಂಸಿಸದೆ ರಕ್ಷಿಸಲಿ. ವಿಷಯ ಸುಖಗಳು ಯಜಮಾನನಿಗೆ ಲಭಿಸಲಿ. ಹಿಂದಿನ ಋಷಿಗಳಿಗೆ ಇಷ್ಟಾರ್ಥಪ್ರದನಾದಂತೆ ಯಜಮಾನರ ಸ್ತುತಿ ಸೇವಿಸಿ ಇಷ್ಟಾರ್ಥಪ್ರದನಾಗಲಿ ಮತ್ತು ರಕ್ಷಕನಾಗಲಿ.

★ ಸಂತತಿಗಾಗಿ ಪ್ರಾರ್ಥಿಸಿದ್ದಾರೆ. ವೃಷ್ಟಿಗಾಗಿಯೂ ಪ್ರಾರ್ಥಿಸಿದ್ದಾರೆ. ಇಷ್ಟಾರ್ಥ ಈಡೇರಿಸಿಯೇ ಸ್ವರ್ಗಕ್ಕೆ ಹಿಂದಿರುಗಲಿ. ಋತ್ವಿಜರನ್ನು ಮರೆಯದಿರಲಿ, ಹರುಷ ಪಡಿಸಲಿ, ಪಾಪಗಳನ್ನು ಪರಿಹರಿಸಿ ಆಚೆಯ ದಡ ಸೇರಿಸಲಿ.

★ ಋಷಿಗಳು, ಯಜಮಾನರು, ಯಾಜ್ಞಿಕರುಗಳಿಗೆ ಇಂದ್ರನು ಆಶ್ರಯಕೊಟ್ಟು ಕೀರ್ತಿ, ಅನ್ನ ಧನಗಳಿಂದ ಅವರುಗಳನ್ನು ಪ್ರವೃದ್ಧರನ್ನಾಗಿ ಮಾಡಲಿ, ದಾರಿದ್ರ್ಯದಲ್ಲಿ ಮುಳುಗಿರುವ, ದುಃಖಿತರಾಗಿರುವ ಯಜಮಾನರು ಅವರ ಪುತ್ರ, ಪೌತ್ರರುಗಳನ್ನು ದೈವಾನುಗ್ರಹಕ್ಕೆ ಪಾತ್ರರಾಗುವಂತೆ ಮಾಡಲಿ. ಮಂಗಳ ಕರ್ಮಗಳನ್ನು ಮಾಡಿಸಿ ಪ್ರವೃದ್ಧರನ್ನಾಗಿಸಲಿ.

★ ಎಲ್ಲೇ ಇರಲಿ ಕರೆದಾಗ ತಕ್ಷಣ ಬರಲಿ. ಸ್ತುತಿಕರ್ತರಿಗೂ, ಅವರ ಪುತ್ರರಿಗೂ, ಪಶುಗಳಿಗೂ ಅವಶ್ಯಕತೆಗಳನ್ನು ಈಡೇರಿಸಲಿ.

★ ಬೆಲೆಬಾಳುವ ಸುವರ್ಣ ಅಲಂಕಾರ ಆಭರಣಗಳನ್ನು ಬೇಡಿದ್ದಾರೆ. ರಣರಂಗದಲ್ಲಿ ತಾನು ಪಡೆದ ದನ ಕರುಗಳನ್ನು, ಧನವನ್ನು ಯಜಮಾನರಿಗೆ ಕೊಡಲಿ. ಅತ್ಯಂತ ದುರ್ಗಮ ಸ್ಥಾನಗಳಲ್ಲಿ ಸುಖಕರ ಮಾರ್ಗ ತೋರಿಸಲಿ.

**ಇವುಗಳು ಬೇಡ ಎಂದಿದ್ದಾರೆ :** ಬ್ರಹ್ಮ ದ್ವೇಷಿಗಳನ್ನು ಅನುಗ್ರಹಿಸುವುದು ಬೇಡ. ಇಂದ್ರ ವಿರೋಧಿಗಳನ್ನು ಸ್ವರ್ಗದಿಂದ ಕೆಳಕ್ಕೆ ತಳ್ಳಲಿ. ನಿಂದಿಸುವವರು, ದುಃಖ ಉಂಟುಮಾಡುವವರು ನಮ್ಮಿಂದ ದೂರ ಹೋಗಲಿ. ಇಂದ್ರನು ಎಲ್ಲಿದ್ದಾನೆ, ಹೇಗೆ ಧನ ಒದಗಿಸುತ್ತಾನೆ, ಯಾವ ಯಜಮಾನನ ಯಜ್ಞಕ್ಕೆ ಬರುತ್ತಾನೆ, ಯಾವ ರೂಪಿನಿಂದ ಇಂದ್ರನನ್ನು ಸೇವಿಸುವುದು, ಯಾವ ಶಸ್ತ್ರಮಂತ್ರ ಇಂದ್ರನಿಗೆ ಪ್ರಿಯವಾದುದು, ನಮಗೆ ನಮ್ಮ ಇಷ್ಟಾರ್ಥಗಳನ್ನು ಯಾವಾಗ ಅನುಗ್ರಹಿಸುತ್ತಾನೆ. ಯಾವಾಗ ಧನ ಸಹಿತ ಯಜಮಾನಾಭಿಮುಖ ಬರುತ್ತಾನೆ. ಯಾರ ಯಜ್ಞದಲ್ಲಿ ಸೋಮಪಾನ ಮಾಡಿ ಸಂತೋಷಪಟ್ಟಿದ್ದಾನೆ ಎಂದೆಲ್ಲಾ ಚಿಂತಿಸುತ್ತಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಇಂದ್ರದೇವರು

## ಮಂಡಲ 10 – ಸ್ತೋತ್ರ ವಿಭಾಗ (ಈ ಮಂಡಲದಲ್ಲಿ 30ಕ್ಕೂ ಹೆಚ್ಚು ಋಷಿಗಳು ಇದ್ದಾರೆ)

ಅಸುರರ ಹಂತಕ, ಯಜಮಾನರ ರಕ್ಷಕ, ಅನ್ನದಾತ. ಸೋಮಪಾನ ಮಾಡುವಾಗ ಮುಖದ ಕೂದಲು ಸೋಮದಿಂದ ತೋಯುತ್ತದೆ. ತೃಪ್ತನಾಗಿ ತಲೆ ಅಲ್ಲಾಡಿಸುತ್ತಾನೆ. ಸುವರ್ಣಮಯ ವಜ್ರಾಯುಧ ಹಿಡಿದ ಕೂಡಲೇ ಅಶ್ವಗಳು ರಥವನ್ನು ವಹಿಸುತ್ತವೆ. ಯಜ್ಞ ನಿಯಾಮಕ, ಅಂತರಿಕ್ಷಸ್ಥ, ವಾಯು ಬಲದ ವೇಗದಲ್ಲಿ ನೇರ ಮಾರ್ಗದ ಅಶ್ವರಥದಲ್ಲಿ ಸಂಚರಿಸುವ ಇಂದ್ರನನ್ನು ದೇವಮಾನವರಾರೂ ತಡೆಯಲಾರರು, ಸ್ತುತಿಗಳನ್ನು ಕೇಳಿ ಮರುತ್‌ಗಳೊಡಗೂಡಿ ವೃತ್ರ ನಾಶಮಾಡಿ ಪ್ರಶಂಸಿತನಾಗುತ್ತಾನೆ. ತನ್ನನ್ನು ಪ್ರಶಂಸಿಸಿದವರಿಗೆ ಅಸಾಧಾರಣ ಧನ, ಅನ್ನ ಒದಗಿಸುತ್ತಾನೆ. ಪವಮಾನಾಧಿಗಳನ್ನು ಉತ್ಪನ್ನ ಮಾಡಿದವನು, ಪೂಜಕರಲ್ಲದವರನ್ನು , ನಾಸ್ತಿಕರನ್ನು, ಅಸುರರನ್ನು, ಶತ್ರುಗಳನ್ನು ಸಂಹರಿಸುತ್ತಾನೆ.

ಸೋಮ ಹಿಂಡದವರ ಮಿತ್ರತ್ವ ಬಯಸುವುದಿಲ್ಲ. ಸ್ತುತಿಗಳು ದೇವತೆಗಳನ್ನು ಪ್ರಶಂಸಿಸುವುವು. ಸರ್ವವ್ಯಾಪಿಯಾಗಿ ಒಟ್ಟುಗೂಡುವುವು. ಇಷ್ಟಾರ್ಥ ಈಡೇರಿಸುವುವು. ಸ್ತುತಿಕರ್ತರ ಸ್ತುತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಾನೆ ಮತ್ತು ಪ್ರತಿ ಮಾನವರ ಹೃದಯ ಪ್ರವೇಶಿಸುತ್ತಾನೆ. ಹವಿಸ್ಸು ಅರ್ಪಿಸುವವರಿಗೆ ತೇಜಸ್ಸು ಒದಗಿಸುತ್ತಾನೆ. ಪ್ರತಿ ಮಾನವರಲ್ಲಿ(ಹೃದಯದಲ್ಲಿ) ಪ್ರವೇಶಿಸುತ್ತಾ ಸ್ತುತಿಕರ್ತರ ಸ್ತುತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಾನೆ. ಇಂದ್ರನು ತನ್ನ ಮಹತ್ ಬಲದಿಂದ ಶತ್ರುಗಳನ್ನು ಕಂಪಿಸುವಂತೆ ಮಾಡಿ ದುರ್ಬಲಗೊಳಿಸುತ್ತಾನೆ. ಬೃಹಸ್ಪತಿ ರೂಪ ಸ್ತೋತ್ರಕ್ಕೆ ಇಂದ್ರನು ಪಾತ್ರನು. ದೇವತೆಗಳೊಡನೆಯೇ ಇರುವವನು. ಇಂದ್ರನು ಸಮಸ್ತ ಧನದ ಒಡೆಯ. ಇಂದ್ರನು ಸರ್ವರಿಂದಲೂ ಸ್ತುತ್ಯ. ಅತ್ಯಂತ ಬಲಶಾಲಿ, ಮಾನವರ ಹಿತಕಾರಿ, ಪರಾಕ್ರಮಿ. ಸರ್ವ ಯಜ್ಞಗಳಲ್ಲಿಯೂ ಪೂಜಿತನಾಗುತ್ತಾನೆ. ಉಪಚರಿತ ಇಂದ್ರನು ಅನ್ನ, ಆಹಾರ, ಐಹಿಕ ಹಾಗೂ ಸ್ವರ್ಗ ಸುಖವನ್ನು ಧನವನ್ನು ಕೊಡುತ್ತಾನೆ. ರಹಸ್ಯ ಶರೀರದವನು, ದ್ಯಾವಾ ಪೃಥ್ವಿಗಳಿಗೆ ಅನ್ನಾರ್ಥವಾಗಿ ಪರ್ಜನ್ಯ ರೂಪದ ಉದಕ ಸಂಘವನ್ನು ಊರ್ಧ್ವ ಮುಖ ದ್ಯುಲೋಕದಲ್ಲಿ ಸ್ಥಾಪಿಸಿದ್ದಾನೆ. ಆದಿತ್ಯ ರೂಪಿ ಇಂದ್ರ, ಐಶ್ವರ್ಯರೂಪಿ, ಧನದಾತ, ಸಕಲ ಜಗತ್ತಿಗೂ ಪ್ರಿಯನಾದವನು. ಅನೇಕ ವಿಧ ಕಾಂತಿಯವನು, ಸೂರ್ಯನನ್ನು ಪ್ರಕಾಶಿಸುವವನು ಇಂದ್ರನೇ. ಸ್ತುತಿ ಅಪೇಕ್ಷಿಸುತ್ತಾನೆ. ಬಾಣ ಹಿಡಿದವನು, ಅಪರಿಮಿತ ಶಕ್ತಿಯ ವೀರ, ಹರ್ಷಕಾರಕ ಶಬ್ದವುಳ್ಳವನು.

**''ಆಂಗೀರಸ್ಸು''ಗಳು :** ವೀರ್ಯಯುಕ್ತರು, ಪುತ್ರಯುಕ್ತರು, ಅನ್ನಯುಕ್ತರು, ಯಜ್ಞ ತಿಳಿದವರು, ಇಂದ್ರನನ್ನು ಅಪೇಕ್ಷಿಸುತ್ತಾ ಅವನಿಂದ ರಕ್ಷಿತರಾದವರು.

**ಇಂದ್ರನ ಅಶ್ವ :** ಹೊಂಬಣ್ಣದವು, ಆಕರ್ಷಕ ಶಕ್ತಿಯುತವಾದವು, ಉತ್ತಮ ಕೇಶವುಳ್ಳವು, ಶೀಘ್ರಗಾಮಿಗಳು, ಕೆನೆಯುವುವು, ಸ್ತುತಿ ಪೂಜಕವಾದವು.

**ವೃತ್ರ :** ಪಾಪದ ಫಲವಾಗಿಯೇ ಉತ್ಪನ್ನನಾದವನು, ಮರುತ್‌ಗಳು ಇಂದ್ರನೊಡನೆ ಸೇರಿ ವೃತ್ರ ವಧೆ ಮಾಡಿದರು. ಸ್ತುತಿ ಕೇಳಿ ಸ್ತುತಿ ಕರ್ತರಿಗೆ ಸುಖ ಉಂಟುಮಾಡಲು ವಜ್ರಾಯುಧವನ್ನು ಎತ್ತಿ ಹಿಡಿಯುತ್ತಾನೆ. ಉತ್ಪನ್ನನಾದೊಡನೆಯೇ ದ್ಯಾವಾ ಪೃಥ್ವಿಗಳ ನಡುವಿನ ಶತ್ರುಗಳನ್ನೆಲ್ಲಾ ಹಿಂಸಿಸಿ ನಾಶಮಾಡಿದನು. ಕತ್ತಲೆ ಚದುರಿಸಿ, ಮೇಘವನ್ನು ಸೀಳಿ ಮಳೆ ಭರಿಸಿದನು.

### ಇಂದ್ರನ ಹಿರಿಮೆಯ ಬಗೆಗೆ ಋಷಿಗಳು ಹೀಗೆ ಹೇಳಿದ್ದಾರೆ.

★ ಗಂಗಾಧಿ ನದಿಗಳು ಹಿಮ್ಮುಖ ಹರಿಯಬಹುದು, ಹುಲ್ಲು ತಿನ್ನುವ ಪ್ರಾಣಿ ಸಿಂಹವನ್ನು ಹಿಂಸಿಸಬಹುದು, ನರಿಯು ಕಾಡುಹಂದಿಯನ್ನು ಪೊದೆಯಿಂದ ಹೊರದೂಡಬಹುದು. ಮೊಲವು ಸಿಂಹವನ್ನು ಹಿಡಿಯಬಹುದು. ಮಣ್ಣುಹೆಂಟೆ ದೊಡ್ಡ ಪರ್ವತವನ್ನು ಸೀಳಬಹುದು. ಚಿಕ್ಕ ಕರು ಗೂಳಿಯೊಂದಿಗೆ ಹೋರಾಡಬಹುದು, ಸಣ್ಣ ಪ್ರಾಣಿ ದೊಡ್ಡ ಪ್ರಾಣಿಯನ್ನು ಹಿಡಿಯಬಹುದು. ಇಂದ್ರನ ಅನುಗ್ರಹ ಪಡೆದವರಿಗೆ ಮೇಲಿನಂತೆ ಏನೆಲ್ಲ ಸಾಧ್ಯವಾಗುತ್ತದೆ ಎಂದು ಋಷಿಗಳು ಹೇಳಿದ್ದಾರೆ.

**ವಿಶೇಷತೆಗಳು :** ಸ್ತುತಿಗಳನ್ನು ದೇವತೆಗಳಿಗೆ ಸೇರಿಸುವ ಯೋಗ್ಯತೆ ದೇವತೆಗಳಿಗುಂಟು. ಗೂಢಾರ್ಥ ಸಹಿತ ಸ್ತುತಿಗಳು ತೊಂದರೆ ಇಲ್ಲದೆಂತೆ ಇಂದ್ರನನ್ನು ಸೇರುತ್ತವೆ. ಹಸ್ತ ರಹಿತ, ಪಾದ ರಹಿತ ಭೂಮಿಯು ದೇವತೆಗಳನ್ನು ಕರ್ಮದಿಂದ ವೃದ್ಧಿಗೊಳಿಸುತ್ತವೆ. ಇಂದ್ರನು ರಥ ಏರಿದ ಶಬ್ದದಿಂದಲೇ ಶತ್ರುಗಳು ಶಬ್ದರಹಿತರಾಗುತ್ತಾರೆ. ಪ್ರವಾಹವನ್ನು ಶಿರದಿಂದ ತಡೆದು ವೃಷ್ಟಿಯನ್ನು ಭೂಮಿಯ ಮೇಲ್ಭಾಗಕ್ಕೂ ರಶ್ಮಿಯನ್ನು ಮೇಲಕ್ಕೂ ಭೂ ಭಾಗಕ್ಕೂ ಹರಡುವಂತೆ ಮಾಡಿದ್ದಾನೆ. ಬಲಶಾಲಿಗಳ ಧನ ಅಪಹರಿಸಿ (1) ಸ್ತ್ರೀಯರು, (2) ಅಶಕ್ತರು (3) ಸ್ತುತಿಕರ್ತರಿಗೂ ಹಂಚುತ್ತಾನೆ. ಹವಿರರ್ಪಿಸಿದವರಿಗೆ ಪ್ರೀತಿಪಾತ್ರನಾಗುತ್ತಾನೆ. ಈಶ್ವರ ಧ್ಯಾನವಿಲ್ಲದೆ ವಿಷಯದಲ್ಲೇ ಮುಳುಗಿರುವವರನ್ನು ಸಂಸಾರದಲ್ಲೇ ಸಿಲುಕಿಸುತ್ತಾನೆ. ದೇವಮಾತೆ, ಅದಿತಿ, ನಾಶರಹಿತ ಸ್ವರ್ಗವನ್ನು ಆದಿತ್ಯನನ್ನು ಉತ್ಪನ್ನ ಮಾಡಿದ್ದಾಳೆ. ಉದಕ, ಆದಿತ್ಯ ಮಂಡಲ ಸೇರುತ್ತದೆ. ಆದಿತ್ಯ ರಶ್ಮಿ 3 ಲೋಕದಲ್ಲೂ ಪ್ರಕಾಶಿಸುತ್ತದೆ.

ದ್ಯಾವಾ ಪೃಥ್ವಿಗಳು ಇಂದ್ರನಿಂದ ನಿರ್ಮಿತವಾದವು. ಇಂದ್ರನು ಸೋಮಸೇವಿಸುವುದನ್ನು ಅಶ್ವಿನಿ ದೇವತೆಗಳು ನೋಡಿದ್ದಾರೆ. ಸ್ತುತಿಸುವವರನ್ನು ಸ್ನೇಹಿತರಂತೆ ತನ್ನವರಂತೆ ಕಾಣುತ್ತಾನೆ, ಆದಿತ್ಯ, ಪರ್ಜನ್ಯ, ವಾಯು ಇವರು ಬಿತ್ತಿದ ಬೀಜದಿಂದ ಭೂಮಿಯು ಶುದ್ಧವಾಯಿತು. ಸೋಮ ಹಿಂಡುವವರನ್ನು ಅದನ್ನು ತನಗೆ ನೀಡುವವರನ್ನು ಕೈ ಬಿಡುವುದಿಲ್ಲ. ಹಸಿವು, ಬಾಯಾರಿಕೆ ಕಾರಣಗಳಿಗೆ ಪರಿಹಾರವಾಗಿ ಸಪ್ತ ಸಂಖ್ಯಾತ ನದಿಗಳು ತಪ್ಪಲು ಪ್ರದೇಶದಲ್ಲಿ ಹರಿದು ಅನ್ನ ಬೆಳೆಯುವಂತೆ ಮಾಡಿದ್ದಾನೆ. ಶತ್ರುಗಳಿಂದ ಗೆದ್ದ ಅಪರಿಮಿತ ಧನವನ್ನು ಇತರರ್‍ಯಾರು ಪಡೆಯಲು ಅವಕಾಶ ಕೊಡುವುದಿಲ್ಲ. ಬಾವಿಯಲ್ಲಿಬಿದ್ದಿದ್ದ "ತ್ರಿತಾ" ಎಂಬ ಋಷಿಗೆ ಉಪಕಾರ ಮಾಡಿ ಉದ್ಧರಿಸಿದನು. ಸೋಮ ಅರ್ಪಿಸಿದವರಿಗೆ ಪ್ರೀತಿಯಿಂದ ಸ್ವರ್ಣ, ಆಭರಣ, ಅಶ್ವ, ಗೋವು, ಧನ ಅನುಗ್ರಹಿಸುತ್ತಾನೆ. ದ್ಯುಲೋಕವನ್ನು ಎತ್ತಿ ನಿಲ್ಲಿಸಿ ಉದಕವನ್ನು ಅಧೋಮುಖ ಹರಿಯುವಂತೆ ಮಾಡಿದ್ದಾನೆ. ಅಗ್ನಿಯು ಹವಿಸ್ಸು ಭಕ್ಷಿಸಿ ಪ್ರಜಾಪತಿಯನ್ನು ಪೂಜಿಸುತ್ತಾನೆ. ಪ್ರಜಾಪತಿಯಿಂದ ಸಪ್ತಋಷಿಗಳು, ವಾಲಖಿಲ್ಯರು, ಪ್ರಭು ಆದಿ ಒಂಭತ್ತು ಋಷಿಗಳು ಮುಂಭಾಗದಿಂದ ಆಂಗೀರಾದಿಗಳು ಪ್ರಜಾಪತಿ ಸ್ಥಾಪಿಸಿದ ಪ್ರಕೃತಿ ಉದಕದಲ್ಲಿ ನಿಂತಿದ್ದಾರೆ.

ಆಂಗೀರಸರು ಮಂತ್ರಗಳಿಂದ ಪ್ರಜಾಪತಿಯನ್ನು ಕರೆಯುವವರು, ಇವರು ಎಲ್ಲೆಡೆ ಸಂಚರಿಸುವವರು, ಇಂದ್ರಾರ್ಥ ಟಗರನ್ನು ನಿರ್ಮಿಸಿದವರು (ಸೃಷ್ಟಿ ಮಾಡಿದರು) ಒಂದು ಸಲ ಸೋಮ ಅಭಾವವಾಯಿತು ಎಂದಿದ್ದಾರೆ. ಆಗ "ಗಾಯತ್ರಿ"ಯು ಪಕ್ಷಿರೂಪದಿಂದ ಸೋಮವನ್ನು ಸ್ವರ್ಗದಲ್ಲಿ ಇಟ್ಟಿತ್ತು, ಇಂದ್ರನು ಮರುತ್‌ಗಳೊಂದಿಗೆ ಹೋಗಿ ಸೋಮ ಪಾನ ಮಾಡಿ ಶತ್ರುನಾಶ ಮಾಡಿದ್ದಾನೆ ಎಂದಿದ್ದಾರೆ. ಆದಿತ್ಯ ಮಂಡಲದಲ್ಲಿ ಇಂದ್ರನ ವಜ್ರಾಯುಧವಿದೆ. ಮಂಡಲದ ಕೆಳಗೆ ಮೇಘಗಳ ಮೇಲೆ ವಜ್ರಾಯುಧ ಪ್ರಯೋಗವಾಗಿ ಉದಕವನ್ನು ಮರುತ್‌ಗಳು ಅಂತರಿಕ್ಷಾಭಿಮುಖ ಬೀಳುವಂತೆ ಮಾಡಿದ್ದಾರೆ. "ಬೇಟೆಗಾರನಂತೆ ಹೊಂಚು ಹಾಕಿ ಶತ್ರುಗಳನ್ನು ದೂರದಿಂದಲೇ ಓಡಿಸಿ, ಹೆದರಿಸಿ ಕೊಲ್ಲುತ್ತಾನೆ". ಅವರ ಸಕಲ ಸಂಪತ್ತನ್ನು ವಶಪಡಿಸಿಕೊಳ್ಳುತ್ತಾ ಧನಭಾರದಿಂದ ಬಗ್ಗಿ ಸಂಪತ್ತನ್ನು ಯಜ್ಞ ಯಜಮಾನರಿಗೆ ಕಂಚುತ್ತಾನೆ. ಮಾತರಿಶ್ವನ ಪುತ್ರ ದಧೀಚಿಗಾಗಿ ವೃಷ್ಟಿಸುರಿಸಿದನು. "ತ್ವಷ್ಟನು" ತಯಾರಿಸಿದ ವಜ್ರಾಯುಧದಿಂದ ಯಾರಿಗೂ ಬಗ್ಗದ, ಮಥಿಸಿದ ಶತ್ರುಗಳನ್ನು ವಧಿಸಿದನು. ನದಿಗಳಿಗೆ ಧಾರಕನಾಗಿ ಜನರಿಗೆ ಬೇಸಿಗೆಯಲ್ಲಿ ಸಿಹಿ ನೀರನ್ನು ಒದಗಿಸುತ್ತಾನೆ. ಮನುಷ್ಯ ಮಾರ್ಗ ಸುಗಮವಾಗಿರುವಂತೆ ಮಾಡಿದ್ದಾನೆ. ತ್ವಷ್ಟ ಅಥವಾ ಸೂರ್ಯನಿಂದ ಆಗದ ಕೆಲಸವನ್ನು ಅಂದರೆ ಹಸುವಿನ ಕೆಚ್ಚಲಲ್ಲಿ ಹಾಲು ತುಂಬುವ ಸೋಮಲತೆಯಲ್ಲಿ ಸೋಮರಸ ತುಂಬುವ ಕೆಲಸ ಮಾಡಿದ್ದಾನೆ. ಸ್ವರ್ಗ, ಅಂತರಿಕ್ಷ, ಭೂಮಿಯಲ್ಲಿರುವ ದೇವತೆಗಳೆಲ್ಲ ಇಂದ್ರನನ್ನು ಹವಿರಾಧಿಗಳಿಂದ ಸೇವಿಸುತ್ತಾರೆ. ಇಂದ್ರನು ಆಗ ಅಶ್ವರಥದಲ್ಲಿ ವಜ್ರಾಯುಧಿಯಾಗಿ ಬರುತ್ತಾನೆ. ಆದಿತ್ಯಾದಿ ಜ್ಯೋತಿರ್ಮಂಡಲದಲ್ಲಿ ತೇಜಸ್ಸನ್ನು ಸ್ಥಾಪಿಸಿದನು, ಸೋಮಾಧಿ ದ್ರವ್ಯಗಳನ್ನು ಮಧುರ ದ್ರವ್ಯಗಳಿಂದ ಇಂದ್ರನು ಸಂಯೋಜಿಸಿದನು, ಅಸಾಧಾರಣ ಸಂಪತ್ತನ್ನು ರಹಸ್ಯವಾಗಿ ಹೊಂದಿದ್ದಾನೆ.

ಇಂತಹ ಇಂದ್ರನ ಮಹತ್ವವನ್ನು ತಿಳಿದವರು ಋಷಿಗಳಲ್ಲೂ ಯಾರೂ ಇಲ್ಲ ಎನ್ನುತ್ತಾರೆ ಬ್ರಹದುಕ್ಥೊ ವಾಮದೇವರು. ಕರ್ಮ ಸಹಿತರು, ಕರ್ಮರಹಿತರು ಎಂದು ವಿಭಾಗಿಸಿ ವೀಕ್ಷಿಸಿ ಯಜ್ಞಕ್ಕೆ ಪ್ರಭುವಾಗಿ ಬರುತ್ತಾನೆ. ಸೋಮಪಾನ ಮಾಡುತ್ತಾ ಯಜಮಾನನ್ನು ಅನುಗ್ರಹಿಸುತ್ತಾನೆ. ದೇವ ಮಾನವಾಧಿ ಪಂಚಜನರು ಸೇವಿಸಲು ಪ್ರೀತಿಯಿಂದ ಆಕಾಶದಲ್ಲಿ ಜ್ಯೋತಿಯನ್ನು ಸ್ಥಾಪಿಸಿದನು, ದ್ಯಾವಾ ಪೃಥ್ವಿಗಳು ಈ ತೇಜಸ್ಸಿನಿಂದ ಆವೃತವಾಗಿವೆ. ಭೂತ, ಭವಿಷ್ಯತ್ ತತ್ವಗಳು ಉತ್ಪನ್ನವಾದವು, ಮರುತ್ ಗಣಗಳ ಮೂಲಕ ಇಂದ್ರನು ದಾಹ ನಾಶಕ ವೃಷ್ಟಿ ಪ್ರದಾನ ಕಾರ್ಯ ಮಾಡಿದ್ದಾನೆ. ದ್ಯುಲೋಕದಿಂದ ಬಂದು ಸೋಮಪಾನದಿಂದ ವೃದ್ಧಿಗೊಳ್ಳುತ್ತಾನೆ. ಉಷೆ ಮತ್ತು ಆದಿತ್ಯರ ಮೂಲಕ ತನ್ನ ಸಂಬಂಧವನ್ನು ಕೆಳಗಿನ ಲೋಕದೊಡನೆ ಇಟ್ಟುಕೊಂಡಿದ್ದಾನೆ. ಇಂದ್ರನು ಉತ್ತಮ ಮಾರ್ಗದರ್ಶಿ, ಸಕಲ ಸಮುದ್ರ, ದ್ಯಾವಾ ಪೃಥ್ವಿ ಅಹೋರಾತ್ರಿ, ಅಂತರಿಕ್ಷ, ಸಾಗರ, ವಾಯು, ದಿಗಂತ, ನದಿ, ಉದಕ, ಪರ್ವತ ಎಲ್ಲವನ್ನು ಮೀರಿ ವ್ಯಾಪಿಸಿ ಬೆಳೆದಿದ್ದಾನೆ. ತೇಜಸ್ಸು ಸರ್ವತ್ರ ಪರಿಭ್ರಮಣವಾಗುವಂತೆ ಹಾಗು ಕರ್ಮನಿರತವಾಗುವಂತೆ ಕತ್ತಲೆ ನಾಶವಾಗುವಂತೆ ಮಾಡಿದ್ದಾನೆ. ಇಂದ್ರನೊಂದಿಗೆ ಚೈತ್ರಾದಿ ಮಾಸಗಳು, ವನ, ವೃಕ್ಷ, ಪರ್ವತಗಳ, ದ್ಯಾವಾ ಪೃಥ್ವಿಗಳು ಉತ್ಪನ್ನವಾದವು. ಎಲ್ಲವೂ ತಲೆಬಾಗಿ ಇಂದ್ರನ ಆಜ್ಞೆ ಪಾಲಿಸುತ್ತವೆ .

ಸೂರ್ಯಾತ್ಮಕ ಇಂದ್ರನು ಪರಬ್ರಹ್ಮನಿಂದಲೇ ಉತ್ಪನ್ನನಾದವನು, ಬ್ರಹ್ಮವಸ್ತುವೆಂದರೆ ಪರಬ್ರಹ್ಮ. ಶತ್ರು ಬಲ ಬಲ್ಲವನು. ದಸ್ಯುಗಳನ್ನು ಏಳು ಪ್ರಮುಖ ಮೇಘರೂಪಿ ರಾಕ್ಷಸರನ್ನು ಸೀಳಿ ಬಚ್ಚಿಟ್ಟಿದ್ದ ಗೋವುಗಳನ್ನು ಸೆರೆಯಿಂದ ಬಿಡಿಸಿದನು. ಸ್ಥಾವರಜಂಗನಾತ್ಮಕವಾದ ಸಕಲ ಪ್ರಾಣಿಗಳನ್ನು ವೃಕ್ಷಾದಿಗಳಿಂದ ಪೋಷಿಸುತ್ತಾನೆ. ಪೃಥ್ವಿಸಂಪತ್ತನ್ನು ಉತ್ಕೃಷ್ಟಮಾಡುತ್ತಾನೆ. ದ್ಯಾವಾ ಪೃಥ್ವಿಗಳನ್ನು ಸ್ಥಿರ ಹಾಗೂ ದೃಢಪಡಿಗೊಳಿಸಿದ್ದಾನೆ. ಇಂದ್ರನು ಸರ್ವರಿಗೂ ಅಧಿಕ ಆಶ್ಚರ್ಯಕರ ಮಹಿಮೆವುಳ್ಳವನು, ಶ್ಯೇನಪಕ್ಷಿಯಂತೆ ವೇಗವುಳ್ಳವನು, ಉಕ್ಕಿನಂತಹ ಹಿಮ್ಮಡಿವುಳ್ಳವನು, ಗೋವುಗಳಿಗೆ ಆಹಾರ ಒದಗಿಸಿ ಸೋಮಪಾನ ಮಾಡುವವನು, ಯಜ್ಞ ಪ್ರದೇಶಕ್ಕೆ ಹೋಗಿ ಕೂಡುವವನು. ಇಂದ್ರನಿಂದ ಯಜಮಾನರು ಯಜ್ಞಾನುಷ್ಠಾನ ಫಲವನ್ನು ಬೇಗ ಪಡೆಯುತ್ತಾರೆ. ಇಂದ್ರನ ಕೋಪವು ದ್ಯಾವಾ ಪೃಥ್ವಿಗಳನ್ನು ನಡುಗಿಸುತ್ತದೆ. ವೃತ್ರ ನಾಶಮಾಡಿ ಉದಕ ತಂದನು, ಆಂಗೀರಸರಿಗೆ ಫಣಿಗಳನ್ನು ಹುಡುಕುವುದರಲ್ಲಿ ಇಂದ್ರನ ಕೋಪ ಸಹಾಯ ಮಾಡಿತು. ಆದ್ದರಿಂದಲೇ ಆಂಗೀರಸರಿಗೆ ಇಂದ್ರನ ಬಗ್ಗೆ ಆದರವಿದೆ. ಸ್ವಸಾಮರ್ಥ್ಯದಿಂದ ಸಕಲ ಲೋಕಗಳನ್ನು ವ್ಯಾಪಿಸಿರುತ್ತಾನೆ. ಇಂದ್ರನನ್ನು ಸ್ತುತಿಸುವವರು ಶ್ರೇಷ್ಠ ಧನವನ್ನು ಇಷ್ಟಾರ್ಥ ಸಿದ್ಧಿಯನ್ನು ಪಡೆಯುತ್ತಾರೆ. ಇಂದ್ರನು ತನ್ನ ಆರಾಧನೆಗೆ ಸಹಾಯವಾಗಲೆಂದೇ ಯಾಜ್ಞಿಕರಿಗೆ ಗೋವು ಧನವನ್ನು ಅನುಗ್ರಹಿಸಿ ತನ್ನನ್ನು ಗುರುತಿಸುವಂತೆ ಮಾಡುತ್ತಾನೆ. ಇದರಿಂದ ಯಜಮಾನನ ಭಯ ನಿವಾರಣೆಯಾಗಿ ರಕ್ಷಣೆ ಒದಗಿ ಇಂದ್ರನ ವಿಶ್ವಾಸಕ್ಕೆ ಪಾತ್ರರಾಗುತ್ತಾರೆ. ಒಂದು ನೂರು ಅಶ್ವಮೇಧ ಯಾಗಗಳನ್ನು ಮಾಡಿ ತಪಸ್ಸು ಮಾಡಿ ಸ್ವರ್ಗವನ್ನು ಪಡೆದಿದ್ದಾರೆ. ಇಂದ್ರನು ಜೀವಾತ್ಮ, ದೇವಾಧಿಕ , ಮಾನವರ ಸ್ವಾಮಿ, ಸೂರ್ಯನನ್ನು ಅಂತರಿಕ್ಷದಲ್ಲಿ ಸ್ವರ್ಗದ ಮೇಲ್ಭಾಗದಲ್ಲಿ ಸ್ಥಾಪಿಸಿ ಪ್ರಕಾಶಿಸುವಂತೆ ಮಾಡಿದ್ದಾನೆ. ಇಂದ್ರನು ಸ್ವಜನರಿಗೆ ಉಪಕಾರಿ, ಸೋಮಪಾನದಿಂದ ಬೇಗ ಹರ್ಷಗೊಳ್ಳುತ್ತಾನೆ. ಉತ್ಪನ್ನವಾದ ಕೂಡಲೇ ಸೂರ್ಯರೂಪಿನಿಂದ ದಸ್ಯು ಜನರನ್ನು ಪರಾಭವಗೊಳಿಸಿದನು. ಇಂದ್ರನು ಅತಿಶಯ ಮಹತ್ವದಿಂದ ಸ್ವರ್ಗ ತುಂಬಿರುವವನು. ಇಂದ್ರನು ವಿಶ್ವಾಮಿತ್ರ ಜಮದಗ್ನಿಗಳು ಪ್ರಾರ್ಥಿಸಿದಾಗ ತಾನು ಅವರ ಯಜ್ಞಕ್ಕೆ ಧನ ಸಹಿತ ಬರುವುದಾಗಿ ಆಶ್ವಾಸನೆ ನೀಡುತ್ತಾನೆ. ಇಟೋ ಭಾರ್ಗವ ಋಷಿಯ ರಥವನ್ನು ರಕ್ಷಿಸಿದ್ದಾನೆ. ಸೂರ್ಯರೂಪಿನಲ್ಲಿ ಪ್ರಾತ: ಕಾಲದಲ್ಲಿ ಪೂರ್ವದಲ್ಲಿ ಹಾಗೂ ಸಂಜೆ ಪಶ್ಚಿಮದಲ್ಲಿ ಇರುವ ಇಂದ್ರನು ರಾತ್ರಿ ಎಲ್ಲಿರುವನೆಂದು ತಿಳಿಯದು ಎನ್ನುತ್ತಾರೆ ಋಷಿಗಳು. ಇಂದ್ರನು ಅನೇಕರ ಆಹ್ವಾನಕ್ಕೆ ಪಾತ್ರನಾದವನು, ಪ್ರಶಸ್ತ ಬಲದವನು, ಧನದ ಒಡೆಯ, ಸಿಂಹದಂತೆ ಭಯಂಕರ, ದೂರ ದ್ಯುಲೋಕವಾಸಿ, ವಜ್ರಾಯುಧಿ , ಸರ್ವರನ್ನು ಕಾಪಾಡುವ ಸಾಮರ್ಥ್ಯವುಳ್ಳವನು, ಸಕಲ ಇಷ್ಟಾರ್ಥಗಳನ್ನು ಮಾನವರಿಗಾಗಿ ಒದಗಿಸಿ ಕೊಡುವವನು, ದೇವತೆಗಳ ವಾಸಕ್ಕೆ ಸ್ವರ್ಗವನ್ನು ನಿರ್ಮಿಸಿದವನು.

ಇತರೆ : ಸೋಮಪಾನದಿಂದ ಇಂದ್ರನ ಮುಖಭಾವವು ಪ್ರಕಾಶಿಸುತ್ತದೆ.ಪುರುಷರಿಗೆ ಎರಡು ದಾರಿಗಳಿವೆ. (1) ಶ್ರೇಷ್ಟ ದೇವತೆಗಳನ್ನು ಕರೆದು ಯಜ್ಞ ಮಾಡಿ ಇತರರಿಂದ ಪಡೆಯಲಾಗದಂತಹ ಕೀರ್ತಿ ಪಡೆಯುವುದು ಅಥವಾ ಯಜ್ಞ ಮಾಡದೇ ಪಾಪಕರ್ಮಗಳಿಂದ ಋಣ ಪೀಡಿತನಾಗಿ ಅಧೋಗತಿಗೆ ಇಳಿಯುವುದು. (2) ಧನ ಸಂಪಾದನೆ ಶಕ್ತಿ ಇದ್ದರೂ ದುಷ್ಟಬುದ್ಧಿಯವನಾಗಿ ಕರ್ಮರಹಿತನಾಗಿ ಇರುವವರು, ಅಧೋಗತಿಗೆ ಇಳಿಯುತ್ತಾರೆ. ಮರಣಕ್ಕೆ ಮೊದಲೇ ಹವಿರರ್ಪಿಸುವವರು ಅತ್ಯಧಿಕ ಜ್ಞಾನಿಗಳು, ಭೋಗಸಾಧನವುಳ್ಳವರು ಆಗಿ ಉತ್ತಮ ಗತಿ ಪಡೆಯುತ್ತಾರೆ. ಸೋಮವು ಅಸುರರಿಂದ ಹಾಳಾಗುವುದಿಲ್ಲ. ದ್ಯಾವಾ ಪೃಥ್ವಿಗಳು ಇಂದ್ರ ಕಾರ್ಯವನ್ನು ಪ್ರಶಂಸಿಸುತ್ತವೆ. ಇಂದ್ರನ ಮಹಿಮೆ ಇಂದ್ರನಿಗೆ ಮಾತ್ರ ಗೊತ್ತು. ಬೇರಾರಿಗೂ ತಿಳಿಯದು ಎನ್ನುತ್ತಾರೆ ಗೌರೀವೀತಿ ಋಷಿಗಳು, ರಶ್ಮಿಗಳು ಇಂದ್ರನಲ್ಲೇ ಐಕ್ಯಗೊಂಡಿವೆ. ದೇವಮಾನವರೆಲ್ಲರೂ ಧನಲಾಭಾರ್ಥ ಧನಯುಕ್ತ ಇಂದ್ರನನ್ನೇ ಆಶ್ರಯಿಸುತ್ತಾರೆ. ಯುದ್ಧದಲ್ಲಿ ಶತ್ರುಗಳ ಬಗ್ಗೆ ಕಠಿಣ ಹೃದಯೀ ಇಂದ್ರ. ದ್ಯಾವಾಪೃಥ್ವಿಗಳೆರಡಕ್ಕೂ ಸಂಬಂಧಿಸಿದವನಾಗಿ ಸೋಮವನ್ನು ಉದರದಲ್ಲಿ ಇರಿಸಿಕೊಳ್ಳುತ್ತಾನೆ. ಯೋಗ್ಯ ಯಜ್ಞದಲ್ಲಿ ಶೇಖರಿತವಾದ ಸೋಮಪಾನಕ್ಕೆ ಕುದುರೆಯು ರಥವನ್ನು ವಹಿಸುತ್ತದೆ. ಇಂದ್ರನು ಅಶ್ವವನ್ನು ಪ್ರಶಂಸಿಸಿ ಮೈ ಸವರಿದಾಗ ಯುಧದಲ್ಲಿ ಅಶ್ವವು ಮುನ್ನುಗುತ್ತದೆ. ಯಜ್ಞದಲ್ಲಿ ಹವಿಸ್ಸು ಅಥವಾ ಸ್ತೋತ್ರ ಅರ್ಪಿಸುವವರಿಗೆ ಅವರು ಎಲ್ಲಿದ್ದರೂ ಸರಿ ಭೋಗ ಸಾಧನೆಗಳನ್ನು ಒದಗಿಸುತ್ತಾನೆ. ದೇವ ಮಾನವರಿಗಾಗಿ ತೊಂಭತ್ತೊಂಭತ್ತು ನದಿ ಮಾರ್ಗಗಳನ್ನು ತಿಳಿದಿದ್ದಾನೆ. ಯಾಜ್ಞಿಕರನ್ನು ವಿರೋಧಿಸುವವರು ಯಾರೇ ಆಗಿರಲಿ ಅವರನ್ನು ತಡೆಯುತ್ತಾನೆ. ಇಂದ್ರನು ಎಲ್ಲಾ ದೇವತೆಗಳೊಂದಿಗೆ ಮುನ್ನುಗ್ಗಿ ಮರುತ್‌ಗಳೊಡಗೂಡಿ ಶತ್ರುಗಳನ್ನು ಅಳುವಂತೆ ಮಾಡುತ್ತಾನೆ. ಇಂದ್ರನು ಎಲ್ಲಾ ದೇವತೆಗಳೊಂದಿಗೆ ಮುನ್ನುಗ್ಗಿ ಶತ್ರುಗಳನ್ನು ನಾಶಮಾಡಲಿ ಎಂದು ಯಾಜ್ಞಿಕರು ಅಪೇಕ್ಷಿಸುತ್ತಾರೆ. ಜಯವು ಲಭಿಸಿಯೇ ಲಭಿಸುತ್ತದೆ ಎಂದು ಪೂರ್ಣ ನಂಬಿದ್ದಾರೆ.

**ಸೋಮ:** ಇಂದ್ರನಿಗೆ ಪ್ರಿಯವಾದ ಸೋಮವು ''ಆರ್ಜಿಕ'' ಪ್ರದೇಶದಲ್ಲಿ ಸುಷೋಮ ನದಿಯ ಸಮೀಪ ಶರಣ್ಯಾವರ್ತ ಎಂಬ ಸರಸ್ಸಿನಲ್ಲಿ ಬೆಳೆದಿದೆ. ಕಾವಲಿದ್ದ ಗಂಧರ್ವರನ್ನು ಸೋಲಿಸಿ ಅಂತರಿಕ್ಷ ಲೋಕದಿಂದ ಸೋಮವನ್ನು ಶ್ವೇನ ಪಕ್ಷಿಯು ಶತ್ರುಗಳಿಗೆ ಸ್ಪರ್ಶವಾಗದಂತೆ ತನ್ನ ಕಾಲುಗಳಿಂದ ಹಿಡಿದು ತಂದಿತು. ಈಗ ಸೋಮಾಭಿಶ್ರವಣ ಕಲ್ಲುಗಳಿಂದ ಹಿಂಡಲ್ಪಟ್ಟು ಹಸುವಿನ ಹಾಲಿನಿಂದ ಮಿಶ್ರಿತವಾಗಿ ಸೋಮವು ಪಾನಪಾತ್ರೆ ''ಚಮೂ'' ನಲ್ಲಿ ತುಂಬಿರುತ್ತದೆ. ''ಸ್ವಚ್ಛ ನೀರಿನಲ್ಲಿ ಪ್ರತಿಬಿಂಬಿಸುವ ಚಂದ್ರನಂತೆ'' ಇಂದ್ರನಿಗಾಗಿ ಚಮೂ ಪಾತ್ರೆಯಲ್ಲಿ ಸೋಮವು ಪ್ರಾತ:ಸವನ, ಮಾಧ್ಯಂದಿನ ಸವನಗಳಲ್ಲಿ ಸಿದ್ಧವಾಗಿರುತ್ತದೆ. ಇಂದ್ರನ ಪ್ರಿತ್ಯರ್ಥವಾಗಿ ಸ್ವಾಹಾಪೂರ್ವಕವಾಗಿ ಸೋಮವು ಅಗ್ನಿಯಲ್ಲಿ ಹೋಮ ಮಾಡಲ್ಪಡುತ್ತದೆ. ಸೋಮವನ್ನು ಶುದ್ಧಗೊಳಿಸಿ ಕ್ಷೀರಾದ್ಯಾಶ್ರಯಣಗಳನ್ನು ಸೇರಿಸಿ ಶುದ್ಧಪಡಿಸಿದುದನ್ನು ಶುದ್ಧಿಕಾರಕ ಮಂತ್ರಗಳಿಂದ ಇಂದ್ರನನ್ನು ದೋಷರಹಿತನನ್ನಾಗಿ ಮಾಡಿ ಪರಿಶುದ್ಧನಾಗುವಂತೆ ಯಾಜ್ಞಿಕರು ಮಾಡುತ್ತಾರೆ. ಇಂದ್ರನಿಗೆ ಅರ್ಪಿಸಿ ಸ್ವೀಕರಿಸಲು ಪ್ರಾರ್ಥಿಸುತ್ತಾರೆ. ಇಂದ್ರನಿಗಾಗಿಯೇ ''ಋಜೀಷ'' ಎಂಬ ಸೋಮಲತೆಯಿಂದ ರಸ ಸಿದ್ಧವಾಗಿ ವಸತೀವರಿ ಮತ್ತು ಜಲಮಿಶ್ರಿತವಾಗಿ ಸೋಮವು ಇರುತ್ತದೆ.

**ಅಹೋರಾತ್ರಿ ದೇವಿಯರು** : ಉತ್ತಮ ರೂಪಿಗಳು, ದ್ಯುಲೋಕ ಪುತ್ರಿಯರು, ಹವಿಸ್ಸು ಅಪೇಕ್ಷಿಸುವ ದೇವತೆಗಳ ಪಕ್ಕದಲ್ಲಿ ಕುಳಿತುಕೊಳ್ಳುತ್ತಾರೆ.

**ಇಳಾ, ಸರಸ್ವತಿ, ಭಾರತಿಯರು** : ಇವರು ಯಜ್ಞಗಳಿಗೆ ಬರುತ್ತಾರೆ.

**ತ್ವಷ್ಟ:** ಸುಂದರ, ಧನಪ್ರದ, ಆಂಗೀರಸ ವಂಶಸ್ಥರೊಡನೆ ಸೇರಿದ್ದಾನೆ. ಆಂಗೀರಸರು ಇಂದ್ರನನ್ನು ಪೂಜಿಸುತ್ತಾರೆ. ಭೂಮಿಯು ಒಂದೇ ಬಾರಿ ಉತ್ಪನ್ನವಾದುದು, ಇಷ್ಟಪ್ರದವಾದುದು, ಓಷದಿಗಳನ್ನು ಹೊಂದಿರುವಂತಹುದು. ಇಂದ್ರನಿಲ್ಲದೆ ಯಾವ ಕರ್ಮವು ನಡೆಯುವುದಿಲ್ಲ ಎನ್ನುತ್ತಾರೆ ಋಷಿಗಳು, ಉತ್ತರ ವೇದಿಕೆಯಲ್ಲಿ ಮಂತ್ರ ಸಂಸ್ಕರಿತ ಸ್ವರ್ಗಲೋಕದ ವಸತೀವರಿ ಮಿಶ್ರಿತ ಸೋಮವಿದೆ. ಅದನ್ನು ದೇವತೆಗಳಿಗೆ ಅರ್ಪಿಸಲಾಗುತ್ತದೆ. ಸೂರ್ಯನನ್ನು ಅಂತರಿಕ್ಷ ಅಥವಾ ಸ್ವರ್ಗಕ್ಕೆ ಇಂದ್ರನು ಎಸೆಯಬಲ್ಲನು. ಬೆಳಗುವ ಮಹಾಮಹಿಮ ಆದಿತ್ಯನು ಇಂದ್ರನೇ. ಇಂದ್ರನ ಒಂದು ರಪ್ಪೆ ಸ್ವರ್ಗದಲ್ಲೂ ಮತ್ತೊಂದು ಭೂಮಿಯಲ್ಲೂ ಸ್ಥಾಪಿತವಾಗಿದೆ. ಅಗ್ನಿಯಾಗಿ ಇಂದ್ರನು ಹವಿಸ್ಸು ಸ್ವೀಕರಿಸಿ ದೇವತೆಗಳಿಗೆ ತಲುಪಿಸುತ್ತಾನೆ. ಪ್ರಪಂಚದ ನಾಭಿ ಅಂತರಿಕ್ಷದಲ್ಲಿ ಇಂದ್ರನು ಸ್ಥಾಪಿತನಾಗಿದ್ದಾನೆ. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶುದ್ರ, ನಿಷಾದಾದಿ ಪಂಚಜನರನ್ನು ಇಂದ್ರನು ವೀಕ್ಷಿಸುತ್ತಾನೆ. ಇವರ ಸ್ತುತಿಗಳು ಇಂದ್ರನನ್ನು ತಲುಪಿ ಅವನು ಅವುಗಳನ್ನು ಸ್ವೀಕರಿಸುತ್ತಾನೆ.

**ಸುಪರ್ಣ** : ಸುಪರ್ಣನು ಯಮನ ಪುತ್ರ, ತನ್ನ ಪಾದ ನಖಗಳಿಂದ ಸೋಮವನ್ನು ಸ್ವರ್ಗದಿಂದ ತಂದ ಶ್ರೇಷ್ಟ ಪಕ್ಷಿ. ಪುಷ್ಟಿಪ್ರದ, ಸರ್ವಾಪೇಕ್ಷಿತ, ಅನ್ನಪ್ರದ, ಮರಣರಹಿತ, ಭಾದರಹಿತ, ಅರುಣ ವರ್ಣದವ, ಯಜ್ಞದಲ್ಲಿ ಹವಿಸ್ಸಿನಂತೆ ಸೋಮವನ್ನು ಇಂದ್ರನಿಗೆ ಅರ್ಪಿಸುತ್ತಾರೆ. ಸೋಮನು ಇಂದ್ರನಿಗೂ ಋತ್ವಿಜರಿಗೂ ಸಂಬಂಧ ಕಲ್ಪಿಸುವವನು.

**ಇಂದ್ರ ಸೋಮರು** : ಸೋಮನು ಕೋಪ ಪ್ರಕಟಿಸುವಂತೆ ಮಾಡುವವನು, ಕಲ್ಲುಗಳಿಂದ ಹೊಡೆಯಲ್ಪಡುವವನು, ಶತ್ರುಗಳನ್ನು ನಡುಗಿಸುವವನು, ಆಯುಧವುಳ್ಳ ಕರ್ಮವಂತ, ವನ ಸೃಷ್ಟಿಸುವವನು, ಇಂದ್ರನು ಪ್ರತಿಬಿಂಬನಾಗಿದ್ದಾನೆ.

**ಇಂದ್ರ ಅಶ್ವಿನಿ ದೇವತೆಗಳು** : ಅಶ್ವಿನಿ ದೇವತೆಗಳು ಉದಕ ಪಾಲಕರು, ಅಲಂಕಾರಯುತರು, ಹವಿಸ್ಸು ಸೋಮವನ್ನು ಒಟ್ಟಿಗೆ ಸೇವಿಸಿ ಯುದ್ಧದಲ್ಲಿ ಪ್ರಶಂಸಿತರಾದವರು.

**ಪರ್ಜನ್ಯ** : ವೃಷ್ಟಿ ಸುರಿಸುವವನು, ಇಷ್ಟಾರ್ಥಪ್ರದ, ಶಕ್ತಿಯುತ, ಮಾನವ ಪಾಲಕ, ಬ್ರಹತ್‌ರೂಪಿ, ಮೇಘವನ್ನು ಮರುತ್‌ಗಳು ವೃದ್ಧಿಪಡಿಸುತ್ತವೆ. ಪರ್ಜನ್ಯನನ್ನು ಎಲ್ಲರಿಗೂ ಗೋಚರಿಸುವಂತೆ ಮಾಡಿದಾಗ ಮೇಘ ಗರ್ಜನೆ ದೂರದಿಂದಲೇ ಕೇಳುತ್ತದೆ. ಪರ್ಜನ್ಯನನ್ನು ವೃಕ್ಷ ಉರುಳಿಸುತ್ತಾ, ರಾಕ್ಷಸರನ್ನು ನಾಶಮಾಡುತ್ತಾ ಲೋಕವನ್ನೆಲ್ಲಾ ಗದರಿಸುತ್ತಾ ಪಾಪಿಗಳನ್ನು ಕೊಲ್ಲುವಾಗ ನಿರಪರಾಧಿಗಳು ಹೆದರುತ್ತಾರೆ. ಪೃಥ್ವಿಯ ಮೇಲಿನ ಸಕಲ ಚೇತನವು ಸಂತೋಷಗೊಳ್ಳುತ್ತದೆ. ತಗ್ಗು ಉನ್ನತ ಪ್ರದೇಶದಲ್ಲಿ ಒಂದೇ ಸಮನಾಗಿ ಉದಕ ಸುರಿಸಿ ಗರ್ಜಿಸುತ್ತಾ ರಥದಲ್ಲಿ ಸಂಚರಿಸುತ್ತಾನೆ. ಪೂರ್ವಾಭಿಮುಖ ಹರಿದು ಪೃಥ್ವಿಯನ್ನು ತೋಯಿಸುತ್ತಾನೆ. ಪಾನಯೋಗ್ಯ ಉದಕದಿಂದ ಪೃಥ್ವಿ ಫಲವತ್ತಾಗಿ ಮಾಡಿದಾಗ ವಾಯು ಪ್ರಬಲವಾಗಿ ಬೀಸುತ್ತದೆ. ಮಿಂಚು ಸಿಡಿಯುತ್ತದೆ. ಪೃಥ್ವಿಯು ಸಕಲ ಲೋಕಕ್ಕೂ ಯೋಗ್ಯ ಸ್ಥಾನವಾಗಿದೆ. ಓಷಧಿಗಳು ವೃದ್ಧಿಯಾಗುತ್ತವೆ. ಪರ್ಜನ್ಯನು ಒಡನೆಯೇ ಉತ್ಪನ್ನನಾಗಿ, ವೃದ್ಧಿಕಾರಕನಾಗಿ ಸಿಡಿಲು ರೂಪದಿಂದ ಘರ್ಜಿಸಿ ಶಬ್ದ ಉಂಟುಮಾಡುತ್ತಾ ತನ್ನ ಜೊತೆಯಲ್ಲಿರುವ ವೈದ್ಯುತಾಗ್ನಿ, ಓಷದ್ಯಾದಿಗಳ ಗರ್ಭ ಉಂಟುಮಾಡುತ್ತಾನೆ.

## ಇಂದ್ರದೇವರು - ಮಂಡಲ 10 - ಆಶ್ರಮ ವಿಭಾಗ

★ ಇಂದ್ರನಿಗೆ ದ್ಯುಲೋಕಕ್ಕಿಂತ ಅವನ ಸ್ತುತಿಗಳೇ ಇಷ್ಟ, ಪರಿಶುದ್ಧ ಮನಸ್ಸಿನಿಂದ, ಸ್ತುತಿಗಳಿಂದ ಆಹ್ವಾನಿಸುತ್ತಾರೆ. ''ಬಲಶಾಲಿ ಅಶ್ವರಥದಲ್ಲಿ'' ಯಜಮಾನನ ಯಜ್ಞಕ್ಕೆ ಬಂದು ದರ್ಭಾಸೀನರಾಗಲಿ. ಸೋಮ ಹಿಂಡುವ ಯಜ್ಞಕ್ಕೇ ಬರಲಿ.

★ ಇಂದ್ರ ಹೃದಯ ತಲುಪುವಂತೆ ಸ್ತುತಿಸುತ್ತಾರೆ. ಋಗ್ವೇದ ಸ್ತುತಿ, ಮಂತ್ರಗಳಿಂದ ತೃಪ್ತನಾಗುತ್ತಾನೆ. ಶಸ್ತ್ರಮಂತ್ರಗಳಿಂದ ಸ್ತುತಿಸುತ್ತಾರೆ. ಸೋಮಪಾನ ಮಾಡಿ ಶತ್ರು ನಾಶಕ್ಕೆ ಉತ್ತೇಜನ ಹೊಂದಲಿ ಎನ್ನುತ್ತಾರೆ. ಹಿತಕರ ಹವಿಸ್ಸು ಶಸ್ತ್ರಮಂತ್ರಗಳನ್ನು ಸ್ವೀಕರಿಸಲು ಯಾಗಕ್ಕೆ ಋಷಿಗಳು ಆಹ್ವಾನಿಸುತ್ತಾರೆ. ಹರ್ಷದಿಂದ ಕ್ಷಿಪ್ರವಾಗಿ ಮನೋವೇಗಕ್ಕಿಂತ ವೇಗವಾಗಿ ಅಶ್ವಗಳು ಇಂದ್ರನನ್ನು ಸೋಮಪಾನಕ್ಕೆ ಕರೆತರಲಿ. ಸ್ತೋತ್ರಗಳನ್ನು ಮನ್ನಿಸಲು ಇಂದ್ರನನ್ನು ಪ್ರಾರ್ಥಿಸುತ್ತಾರೆ.

★ ಉತ್ತಮ ಸ್ತುತಿ, ಸೋಮಗಳು ಇಂದ್ರ ಶಕ್ತಿಯನ್ನು ವೃದ್ಧಿಸುತ್ತವೆ. ಸ್ವ ಪ್ರೇರಣೆಯಿಂದ ನಿರ್ಮಿತ ಸ್ತೋತ್ರಗಳನ್ನು ಯಜ್ಞ ಯಜಮಾನನು ದೇವತೆಗಳಿಗೆ ಅರ್ಪಿಸುತ್ತಾನೆ. ಸಹೋದರಿಯಂತೆ ಪಾಪನಾಶಕ ಗಂಗಾಧಿ ನದಿಗಳ ದಂಡೆಯಲ್ಲಿ ಯಾಗ ಸಾಧಕ ದ್ರವ್ಯಗಳು ಬೆಳೆದು ಕರ್ಮಗಳಿಂದ ಇಂದ್ರ ಶಕ್ತಿ ಸಾಮರ್ಥ್ಯಗಳು ಬೆಳೆಯುತ್ತವೆ.

★ ಯಾಜ್ಞಿಕನು ಯಜ್ಞ ಆರಂಭದಲ್ಲಿ ಏಕಾಂಗಿಯಾಗಿದ್ದನು. ಯಜ್ಞ ಕಾರ್ಯಕ್ಕೆ ಪತ್ನಿಯು ಅವಶ್ಯಕವಾದ್ದರಿಂದ ಅವಳೊಂದಿಗೆ ಸೇರಿ ಪತಿ - ಪತ್ನಿಯರಾದರು. ಇಂದ್ರನ ಅನುಗ್ರಹದಿಂದ ಪ್ರೀತಿಯ ಪುತ್ರರನ್ನು ಪಡೆದರು. ಈಗ ಆ ಪ್ರೀತಿ ಪಾತ್ರ ಪೌತ್ರ ಸಂತತಿಯೊಡನೆ ಕ್ರೀಡಿಸಲು ಅಪೇಕ್ಷಿಸುತ್ತಾರೆ. ಯಜ್ಞ ಕಾರ್ಯದಲ್ಲಿ ಎಲ್ಲರೂ ಭಾಗಿಯಾಗಿ ಇಂದ್ರನನ್ನು ಪ್ರಾರ್ಥಿಸುತ್ತಾರೆ. ಆಹ್ವಾನಿಸುತ್ತಾರೆ.

★ ಇತರ ಯಾಜ್ಞಿಕರ ಬಳಿಗೆ ಹೋಗುವ ಮುಂಚೆಯೇ ಮದಕರ, ಚರು, ಪುರೋಡಾಶ ಸೋಮಾದಿಗಳನ್ನು ಸ್ವೀಕರಿಸಲು ಆಹ್ವಾನಿಸುತ್ತಾರೆ. ಮೂರು ಸವನಗಳಲ್ಲೂ ಕರ್ಮ ಮಾಡುತ್ತಾರೆ. ಋತ್ವಿಜರು ಇಂದ್ರನ ಸ್ನೇಹಿತರು, ಮಧ್ಯಾಹ್ನ ಸಮಯದಲ್ಲಿ ಗೋವಿನ ಹಾಲು, ಮೊಸರು, ಅನಂತರ ಅಗ್ನಿಯಲ್ಲಿ ಚೆನ್ನಾಗಿರುವ ಹವಿಸ್ಸು, ಸೋಮವನ್ನು ಸಿದ್ಧಪಡಿಸುತ್ತಾರೆ.

★ ಉಷ:ಕಾಲದಲ್ಲಿ ಇಂದ್ರನನ್ನು ಪೂಜಿಸುವವರು ಸುಖವಾಗಿ ಇರುತ್ತಾರೆ. ಇಂದ್ರನನ್ನು ದೃಢವಾಗಿ ನಂಬಿ, ಪೂಜಿಸಿ ಪ್ರಾರ್ಥಿಸುತ್ತಾರೆ. ಪೂಜೆ ಪುರಸ್ಕರಿಸಿ ರಕ್ಷಣೆಗೆ ಬರಲಿ ಎಂದು ಪ್ರಾರ್ಥಿಸಿದ್ದಾರೆ. ಯಜ್ಞ ಅನುಷ್ಠಾನ ತಿಳಿದವರೇ ಕರ್ಮಗಳನ್ನು ಮಾಡುತ್ತಾರೆ. ಮದಕರ ಹವಿಸ್ಸು, ಸೋಮ ಅರ್ಪಿಸಿ ಏಕ ಚಿತ್ತದಿಂದ ಇಂದ್ರನು ಆನಂದ ಪಡುವಂತೆ ಮಾಡುತ್ತಾರೆ.

★ ಪ್ರತಿ ಯಜ್ಞದಲ್ಲೂ ಹವಿಸ್ಸು, ಸೋಮಗಳನ್ನು ಅರ್ಪಿಸಿ ನಮಸ್ಕರಿಸುತ್ತಾರೆ. ಹವಿಸ್ಸು ಆಜ್ಯ ಸೋಮ ಸ್ವೀಕರಿಸಲಿ. ಸೋಮ ಯಾಗದಿಂದ ಉತ್ತಮ ಕರ್ಮ ಫಲ ಪಡೆಯುತ್ತಾರೆ. ಯಾಜ್ಞಿಕರು ಯಜ್ಞಕ್ಕಾಗಿ ಸೋಮವನ್ನು ಸಿದ್ಧಪಡಿಸಿ ಕೂಗಿದ ಒಡನೆಯೇ ಸೂರ್ಯರೂಪಿಯಾಗಿ ಬಂದು ಯಾಜ್ಞಿಕರ ಹಿತ ಆಕಾಂಕ್ಷಿಯಾಗಿ ಪ್ರಿಯ ವಸ್ತುಗಳನ್ನು ಅವರಿಗೆ ಒದಗಿಸುತ್ತಾನೆ.

★ ಯಜ್ಞಾನುಷ್ಠಾನ ಮಾಡುವವರನ್ನು ರಕ್ಷಿಸುತ್ತಾನೆ. ಯಜುರ್ವೇದದ ಯಜ್ಞ ಸಾಧಕ ಮಂತ್ರ ಹವಿರಾದಿಗಳಿಂದ ಪ್ರವರ್ಧನಾಗಿ ಮಹತ್ವ ಪಡೆಯುತ್ತಾರೆ. ಯಜ್ಞಗಳಿಂದ ತೃಪ್ತನಾದ ಇಂದ್ರನು ಯಾಜ್ಞಿಕರ ಸುಖಗಳನ್ನು ಕೊಡಲು ಸಾಧ್ಯವಾಗುವುದು. ಯಾಜ್ಞಿಕರು ತಡೆ ಇಲ್ಲದೆ ನಿರಂತರವಾಗಿ ಸ್ತೋತ್ರ, ಪ್ರಾರ್ಥನೆಗಳನ್ನು ಮಾಡುತ್ತಿರುತ್ತಾನೆ.

★ ಯಾಜ್ಞಿಕರಿಂದ ಪಾಪಾಭಿಮಾನಿ ದೇವತೆಯು ದೂರಾಗುತ್ತಾಳೆ. ಯಾಗ ಸ್ವರೂಪ ಅರಿತು ಕರ್ಮ ಫಲ ನೀಡುತ್ತಾನೆ. ಇಂದ್ರನನ್ನು ಉದ್ದೇಶಿಸಿಯೇ ಯಾಗ ಮಾಡುತ್ತಾರೆ. ಯಾಜ್ಞಿಕರು ಪಾಪನಾಶಕ್ಕಾಗಿ ಸತ್ರ ಯಾಗ ಮಾಡಲು ಬಯಸುತ್ತಾರೆ.

★ ಸೋಮ ಸ್ವೀಕರಿಸಲು ಎಲ್ಲೂ ಹೋಗದೆ ತಮ್ಮಲ್ಲಿಗೆ ಬರಲಿ ಎಂದು ಸ್ತೋತ್ರ ಮಾಡುತ್ತಾರೆ. ಕರ್ಮನಿರತರು ಯಾಗ ಮಾಡಿದಾಗ ಇಂದ್ರನು ಮರುತ್‌ಗಳೊಡನೆ ಸೋಮಪಾನಕ್ಕೆ ಬರಲು ಆಹ್ವಾನಿಸುತ್ತಾರೆ. ''ಪ್ರಶ್ನಿ'' ವರ್ಣದ ಗೋವು ಹೋಮಕ್ಕೆ ಕ್ಷೀರ ಕೊಡಲಿ, ಪ್ರಾತ: ಸವನ ಇಷ್ಟಬಂದಷ್ಟು ಸೋಮ ಸೇವಿಸಲಿ, ಸೋಮ ತುಂಬಿದ ಚಮಸ ಪಾತ್ರೆ ಸಕಲ ದೇವತೆಗಳಿಂದಲೂ ಅಪೇಕ್ಷಿತವಾದದ್ದು. ಶತ್ರು ನಾಶ ಮಾಡುವ ಇಂದ್ರನಿಗೆ ಪುನ: ಪುನ: ಸೋಮ ಅರ್ಪಿಸುತ್ತಾರೆ.

★ ಅವನೊಡನೆ ಮಿತ್ರಾ ವರುಣರು ಪಡೆಯುತ್ತಾರೆ. ಅಶ್ವಗಳೊಡನೆ ಯಜ್ಞಕ್ಕೆ ಬರಲು ಆಹ್ವಾನಿಸುತ್ತಾರೆ. ಯಜ್ಞವು ಯಾಜ್ಞಿಕರ ಮತ್ತು ಇಂದ್ರನ ಸ್ನೇಹ ಸೌಹಾರ್ದದ ಒಂದು ಪ್ರಮುಖ ಕರ್ಮ. ಯಜ್ಞ ವೇದಿಕೆಯ ಬಳಿ ಯಾಜ್ಞಿಕರು ಸೇರುತ್ತಾರೆ. ಹವಿರೂಪ ಅನ್ನ ಮಂತ್ರಾದಿಗಳಿಂದ ಸಂಸ್ಕರಿಸಿ ನಂತರ ಹವಿಸ್ಸು, ಸೋಮ ಅರ್ಪಿಸುತ್ತಾರೆ.

★ ಯಾಜ್ಞಿಕರು ಆಶ್ರಮಗಳಲ್ಲಿ ಸ್ತುತಿ ವಾಕ್ಯಗಳಂತೆ ಶಸ್ತ್ರಮಂತ್ರಗಳು, ಹವಿಸ್ಸು ವಿಶೇಷ ಉಪಚಾರಗಳಿಂದ ಉಪಚರಿಸುತ್ತಾರೆ. ಹಿಂಡಿದ ಧಾರೆಯಾಗಿ ಪ್ರವಹಿಸುವ ಸೋಮರಸವನ್ನು ಧಾರೆಯಾಗಿ ಇಂದ್ರನಿಗೆ ಮೇಧಾವಿಗಳು ಒಳ್ಳೆಯ ದೊಡ್ಡ ದೊಡ್ಡ ಸ್ತುತಿಗಳಿಂದ ಸ್ತುತಿಸಿ ಅರ್ಪಿಸುತ್ತಾರೆ. ಇಂದ್ರನಿಗಾಗಿ ದ್ರೋಣ ಕಲಶದಲ್ಲಿಯ ಸೋಮವು ಅಗ್ನಿಯಲ್ಲಿ ಅರ್ಪಿತವಾಗುತ್ತದೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಇಂದ್ರದೇವರು

## ಮಂಡಲ 10 - ಪ್ರಾರ್ಥನಾ ವಿಭಾಗ

ಇಷ್ಟಾರ್ಥ ಯಾಚಿಸುವ ಪ್ರಾರ್ಥನೆಗಳು ಫಲಕಾರಿಯಾಗಲಿ. ರಾಕ್ಷಸರನ್ನು ಕೊಲ್ಲಬಲ್ಲ ಶತ್ರು ನಾಶಕ ರಕ್ಷಣಾ ಶಕ್ತಿಯನ್ನು ಯಜಮಾನನಿಗೆ ಕೊಡಲಿ, ಇಂದ್ರದತ್ತ ಧನವು ಇಷ್ಟಾರ್ಥಸುಖ ಅನುಭವಿಸುವಂತೆ ಋತ್ವಿಕ್ ಯಜಮಾನನನ್ನು ಇಂದ್ರನು ರಕ್ಷಿಸಲಿ. ಸ್ನೇಹ ಅಚಲವಾಗಿ ಇರಲಿ ಹಾಗೂ ಧನಕ್ಕಾಗಿ ಬೇಡಿದ್ದಾರೆ. **ಮಾನವರಂತೆ ಮಾತಾಡಿ ನಮಗೆ ಬುದ್ಧಿ ಹೇಳಲಿ ಎಂದಿದ್ದಾರೆ.** ಯುದ್ಧಗಳಲ್ಲಿ ಇಂದ್ರನ ಅನುಗ್ರಹದಿಂದ, ಅವನ ಸಹಾಯದಿಂದ ಶತ್ರುಗಳು ಕೊಲ್ಲಲ್ಪಡಲಿ, ಪ್ರಸಿದ್ಧ ಧನ, ಗೋವು, ಅನ್ನ ಹಾಗೂ ನಮಗೆ ಇಚ್ಛಿತವಾದುದ್ದನ್ನೆಲ್ಲಾ ಒದಗಿಸಲಿ. **ಯಜಮಾನನನ್ನು ಚೈತನ್ಯಗೊಳಿಸಿ ಅವನ ಬುದ್ಧಿಯನ್ನು ಕರ್ಮನಿರತವನ್ನಾಗಿ ಮಾಡಲಿ. ಹಸಿವು ನಾಶಮಾಡಲಿ, ಧನಿಕರಿಂದ ಧನ ದೊರೆಯುವಂತಾಗಲಿ.** ಯಜಮಾನರ ದಾರಿದ್ರ್ಯ ಪರಿಹಾರಾರ್ಥ ಪಶು ಸಂಪತ್ತನ್ನು ಕೇಳಿದ್ದಾರೆ. ಧಾನ್ಯಗಳಿಂದ ಹಸಿವು, ಸ್ವಶಕ್ತಿಯಿಂದ ಶತ್ರು ಜಯ, ಧನಿಕರಿಂದ ಧನ ಯಜಮಾನನಿಗೆ ಸಿಗಲಿ. ಮಾಧ್ಯಮಿಕ ವಾಕ್ ಹಿಂದಿನಂತೆಯೇ ಪ್ರಕಾಶಿಸಲಿ. ಮೇಧಾವಿ ಯಜಮಾನರನ್ನು ತನ್ನವರನ್ನಾಗಿ ಮಾಡಿಕೊಳ್ಳಲಿ. ಇಂದ್ರನು ಒದಗಿಸಿದ ಧನ ಶೀಘ್ರವಾಗಿ ಯಜಮಾನನ್ನು ತಲುಪಲಿ. ಕೇಡು ಬಯಸುವ, ಮೇಲೆ ಬೀಳುವ ಶತ್ರುಗಳಿಂದ ಯಜಮಾನನನ್ನು ಬ್ರಹಸ್ಪತಿಯು ಹಿಂಭಾಗ, ಮುಂಭಾಗ, ಮೇಲ್ಭಾಗ, ಕೆಳಭಾಗಗಳಿಂದಲೂ ಇಂದ್ರನು ಪೂರ್ವ ಪಶ್ಚಿಮಗಳಿಂದಲೂ ರಕ್ಷಿಸಲಿ. ಪುತ್ರ ಸಂತಾನಕ್ಕಾಗಿ ಪ್ರಾರ್ಥಿಸಿದ್ದಾರೆ.

ವಾಸ ಗೃಹ ಇಷ್ಟಾರ್ಥಗಳನ್ನು ಅನುಗ್ರಹಿಸಲು ಕೇಳಿದ್ದಾರೆ. ಇಂದ್ರನು ಆದಿತ್ಯ, ವಸುಗಳು, ರುದ್ರರು, ಇವರ ಸ್ಥಾನದಲ್ಲಿದ್ದುಕೊಂಡು ಯಾಚಕ ಸ್ನೇಹಿತರಿಗೆ ಶಕ್ತಿಸಾಮರ್ಥ್ಯಗಳನ್ನು ಉಂಟುಮಾಡಲಿ ಎಂದು ಪ್ರಾರ್ಥಿಸಿದ್ದಾರೆ. **ಋಷಿಗಳು, ಯಜಮಾನರು, ಯಾಜ್ಞಿಕರು, ಧನಾಪೇಕ್ಷೆಯಿಂದಲೇ ಕರ್ಮಗಳನ್ನು ಮಾಡುತ್ತಾರೆ.** ತಮ್ಮ ಪಾಪಗಳೆಲ್ಲಾ ನಾಶವಾಗಲಿ ಎಂದು ಋತ್ವಿಜರು ಪ್ರಾರ್ಥಿಸಿದ್ದಾರೆ. ಸ್ತುತಿ ಅರ್ಪಿಸಿ, ಪ್ರಾರ್ಥಿಸಿ, ಪಾಪ ನಾಶ ಮಾಡಿ ಧನಕೊಡಲು ಬೇಡಿದ್ದಾರೆ. ಗುಂಪುಗೂಡಿ ಕೇಡು ಬಯಸುವವರಿಗೆ ಕತ್ತಲಾವರಿಸುವಂತೆ ಮಾಡಲಿ. ಇಂದ್ರನಿಂದ ಹರ್ಷ, ಅನ್ನ, ಬೇಡಿ ದುಃಖ: ನಾಶ ಮಾಡಲು ಕೇಳಿಕೊಂಡಿದ್ದಾರೆ. ಅನ್ನ, ಗೋವು ಸಮೂಹ, ಸಂತೋಷ ಜಯಗಳಿಗಾಗಿ ಋಷಿಗಳು ಪ್ರಾರ್ಥಿಸಿದ್ದಾರೆ. ಇಂದ್ರನು ಸುಖ ಕೊಡಲಿ, ಯಜಮಾನನ ರಕ್ಷಣೆ ಮಾಡಲಿ.

**ಅಪರಿಮಿತ ಧನದೊಡನೆ ಇಂದ್ರನು ಯಜ್ಞಕ್ಕೆ ದಯಮಾಡಿಸಲಿ.**

ಇಂದ್ರನಿಗಾಗಿ ಮಾಡಿದ ಸ್ತೋತ್ರಗಳು, ಹವಿಸ್ಸು, ಇಂದ್ರನನ್ನೇ ಸೇರಲಿ. ಇಂದ್ರನ ಕೃಪೆಯಿಂದ ಯಾಜ್ಞಿಕರು, ಋಷಿಗಳು ಉತ್ತಮ ಸ್ಥಿತಿಯಲ್ಲಿರುವಂತೆ ಆಗಲಿ. ಯಾಜ್ಞಿಕರನ್ನು ತೇಜೋಯುಕ್ತರನ್ನಾಗಿ ಮಾಡಲಿ, ಸಕಲ ಕಷ್ಟಗಳಿಂದ ಪಾರುಮಾಡಲಿ. ಅಶ್ವಗಳಿಗಾಗಿ ಬೇಡಿದ್ದಾರೆ. ಋಷಿಗಳಿಗೆ ಅತಿಶಯ ಧನಕೊಡಲಿ, ಮಂಗಳ ಉಂಟುಮಾಡಲಿ. ಸ್ತೋತೃಗಳಿಗೆ ಗೋವುಗಳನ್ನು, ಅಶ್ವಗಳನ್ನು ಕೊಡಲಿ, ಸಂಪತ್ತು, ಭಯ ರಾಹಿತ್ಯವನ್ನು ಯಾಜ್ಞಿಕರು ಪ್ರಾರ್ಥಿಸಿದ್ದಾರೆ. ಯಜಮಾನನು ವಾಸಿಸುವ ಗೃಹದ ಸುತ್ತಲೂ ಇರುವ ಶತ್ರುಗಳನ್ನು ಓಡಿಸಲಿ, **ದ್ವೇಷಿಗಳನ್ನು ಹಿಂಸಿಸಲಿ, ತೊಂದರೆ ಕೊಡುವವನು ಸ್ವಜಾತಿಯವನಾಗಿರಲಿ, ನೀಚ ಜಾತಿಯವರನಾಗಿರಲಿ, ಅವನು ಶರಣಾಗುವಂತೆ ಮಾಡಲಿ. ಅಪೇಕ್ಷಿಸುವಷ್ಟು ಕ್ಷೀರ ಕೊಡುವ ಗೋವುಗಳನ್ನು ಯಾಜ್ಞಿಕರಿಗೆ ಇಂದ್ರನು ಕೊಡಲಿ.**

ಇಂದ್ರನ ಆಯುಧಗಳು ಶತ್ರುಗಳ ಮೇಲೆ ಬಿದ್ದು ಅವರು ದೂರ ಹೋಗಲಿ, ನಾಶವಾಗಲಿ. ಸ್ತುತಿಕರ್ತರ ಭೀತಿ ನಿವಾರಿಸಲಿ, ಧನ ಕೊಡಲಿ, ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ. ಇಂದ್ರನು ಯಜಮಾನನ ಸ್ನೇಹಿತನಾಗಿರಲಿ, ಧನ ಕಡಿಮೆಯಾಗದಂತೆ ನೋಡಿಕೊಳ್ಳಲಿ. ಪುತ್ರ ಸಂತತಿ ನೀಡಲಿ, ದೀರ್ಘಾಯುಸ್ಸು, ಆರೋಗ್ಯವನ್ನು ಕರುಣಿಸಲಿ. ಮಕ್ಕಳು ಮೊಮ್ಮಕ್ಕಳಿಗಾಗಿ ಪ್ರಾರ್ಥಿಸಿದ್ದಾರೆ. ಶತ್ರುಗಳು ಯಾಜ್ಞಿಕರನ್ನು ಕೊಲ್ಲದಂತೆ ತಡೆಗಟ್ಟಲಿ. ಇಂದ್ರನು ವಜ್ರಾಯುಧದಿಂದ ಶತ್ರುಗಳನ್ನು ಹೊಡೆದು ಓಡಿಸಲಿ ಅಥವಾ ಸಂಹರಿಸಲಿ. ಯಾಜ್ಞಿಕರಿಗೆ ದಕ್ಷಿಣ ಹಸ್ತದಿಂದ ಧನ ದಾನ ಮಾಡಲಿ.







ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ ಸರಸ್ವತಿ ಭಾರತಿ, ಉಮಾ ಗಾಯತ್ರಿ,ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನ

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।

ಋಗ್ವೇದ ದಂಸ್ಕಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

ದೇವತೆಗಳು

ಋಷಿಗಳ ಅಮೃತವಾಣಿ ಋಗ್ವೇದ ದಿಂದ ಪರಿಚಯ

## ಅಗ್ನಿ ದೇವರು

ಸ್ತೋತ್ರಗಳು
1 ರಿಂದ 15
ಆಶ್ರಮಗಳಲ್ಲಿ
16 ರಿಂದ 35
ಪ್ರಾರ್ಥನೆಗಳು
36 ರಿಂದ 45
ಇತರೇ
46 ರಿಂದ 53
ಮಂಡಲ 3ರ
ವಿವರಗಳು
54 ರಿಂದ 61
ಒಟ್ಟಾರೆ
ಪ್ರಾರ್ಥನೆ
62 ರಿಂದ 63

195-257



## ಇಂದ್ರ ದೇವ

ಮಂಡಲಗಳ ಪ್ರಕಾ
1,2,3,4
1ರಿಂದ14ಪುಟಗ
5,6,7,
15ರಿಂದ30ಪುಟಗ
8
31ರಿಂದ38ಪುಟಗ
10
39ರಿಂದ44ಪುಟಗ

ಪ್ರತಿ ಮಂಡಲದಲ್ಲೂ

ಸ್ತೋತ್ರ ವಿಭಾಗಗಳು – ವಿಶೇಷತ
ಆಶ್ರಮ ವಿಭಾಗಗಳು – ವಿಶೇಷತೆ
ಅವಶ್ಯಕತೆಗಳು, ತೊಂದರೆಗಳು ವ
ಬೇಡಿಕೆಗಳು ಇತ್ಯಾದಿ ವಿಷಯಗಳ
ಒಳಪಟ್ಟಿದೆ.

151-192

ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।
ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥

ಪ್ರತಿ ಮಂಡಲಗಳಡಿಯಲ್ಲಿ ಹಿಂದಿನಂತೆಯೇ ಸ್ತೋತ್ರಗಳು, ಆಶ್ರಮದಲ್ಲಿ ಮತ್ತು ಪ್ರಾರ್ಥನೆಗಳು ಒಳಗೊಂಡಿದ
ಋಷಿಗಳ ಅಮೃತವಾಣಿ ಎಂಬ ಹೆಸರಿನ ಈ ಭಾಗವನ್ನು ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಗ್ರಂಥಕರ್ತ
ಅಪ್ಪಣೆ, ಸಲಹೆಗಳೊಂದಿಗೆ ಹಾಗೂ ಗುರುಹಿರಿಯರ ಅನುಗ್ರಹ ಆಶೀರ್ವಾದಗಳೊಂದಿಗೆ ತಯಾರಿಸಲಾಗಿದೆ.

ಶ್ರೀ ಶ್ರೀ ಕೋದಂಡಾಶ್ರಮ ಮಠದ ಹಿರಿಯ ಮಹಾಸ್ವಾಮಿಗಳವರ
ದಿವ್ಯ ಚರಣಾರವಿಂದಗಳಲ್ಲಿ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು

॥ ಹರನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

ಎನ್. ಆರ್. ನಂಜುಂಡ

ದಿನಾಂಕ : 20.01.2004

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಗ್ನಿದೇವರು

## ಋಷಿಗಳು - ನೋಧಾ ಗೌತಮರು : (ಸ್ತೋತ್ರ ವಿಭಾಗ)

ಅಗ್ನಿಯು ರುದ್ರ, ವಸುಗಳಿಂದ ಪೂಜಿತ. ಅಗ್ರ ಆಸನಿ, ಪುರೋಹಿತ ಮಾನವರಿಂದ ಸ್ತುತಿತನಾಗುತ್ತಾನೆ. ಮಾರ್ಗವನ್ನು ಕಪ್ಪಾಗಿಸುತ್ತಾನೆ. ಸ್ಥಾವರ, ಜಂಗಮಗಳು ಅಗ್ನಿಗೆ ಭಯ ಬೀಳುತ್ತವೆ. ದ್ಯಾವಾ ಪೃಥ್ವಿಗಳ ಪುತ್ರ. ಸಕಲರಿಗೂ ಅದಿಪತಿಯಾಗಿದ್ದಾನೆ. ವಿಶ್ವದಲ್ಲಿರುವ ಎಲ್ಲಾ ಅಗ್ನಿಗಳೂ "ವೈಶ್ವಾನ್ಗರಾಗ್ನಿಯ" ಶಾಖೆಗಳೇ ಆಗಿವೆ. ಪರ್ವತ, ಮೂಲಿಕೆ (ಓಷಧಿ), ನೀರು ಮಾನವರ ಧನ, ಎಲ್ಲಕ್ಕೂ ವೈಶ್ವಾನ್ಗರಾಗ್ನಿಯೇ ಅದಿಪತಿ. ಮಾನವರ ನಾಭಿಯಲ್ಲಿ ಜಠರ ರೂಪಿನಲ್ಲಿದ್ದು ಮಾನವರಿಗೆ ರಕ್ಷಣೆ ನೀಡುತ್ತಾನೆ ವೈಶ್ವಾನ್ಗರಾಗ್ನಿ ಮೇಲೆ ದ್ಯುಲೋಕಕ್ಕೆ ಶಿಖರಪ್ರಾಯನಾಗಿದ್ದಾನೆ. ಕೆಳಗೆ ಭೂಲೋಕಕ್ಕೆ ನಾಭಿಯಂತಿದ್ದಾನೆ. ದ್ಯಾವಾ ಪೃಥ್ವಿಗಳಿಗೂ ಅಧಿಪತಿ. ಹೃದಯದ ಪ್ರಾಣದಿಂದ ಉತ್ಪನ್ನನಾಗುವವನು ಅಗ್ನಿ. ಹರ್ಷದಾಯಕ ಜ್ವಾಲೆಯುಳ್ಳವನು, ದೇವತೆಗಳು, ದಾನವರು ಇಬ್ಬರಿಂದಲೂ ಸೇವಿತನಾದವನು, ವಾಯುವು ವೈಶ್ವಾನ್ಗರಾಗ್ನಿಯನ್ನು ಭೃಗು ಮಹರ್ಷಿಗಳ ಸ್ನೇಹಿತನನ್ನಾಗಿ ಮಾಡಿದರು. ಮನುವಿನ ಪುತ್ರ - ಅಗ್ನಿ.

ಆಂಗೀರಸಾಗ್ನಿಯು ಬಲದ ಪುತ್ರ. ಯಜ್ಞಗಳಿಗೆಲ್ಲಾ ಅದೃಷ್ಟಶಾಲಿ, ಬಹುದೂರದಲ್ಲಿದ್ದರೂ ನಮ್ಮ ವಿಚಾರಗಳನ್ನು ಕೇಳಬಲ್ಲವನು, ಆದರೆ ಅಗ್ನಿಯ ರಥ, ಅಶ್ವಗಳ ಸದ್ದು ನಮಗೆ ಕೇಳಿಸುವುದಿಲ್ಲ.

### ಋಷಿಗಳು - ಗೌತಮಾರಹೂಗಣರು

ಅರ್ಚನೆಗಳಿಂದ ಅಗ್ನಿಯು ಬಲಿಷ್ಠನಾಗುತ್ತಾನೆ. ಋಷಿಗಳು, ಯಾಜ್ಞಿಕರು, ಯಜಮಾನರು ಯಾರೂ ಅಗ್ನಿಯ ನಿಜ ರೂಪ ಮಹಿಮಾದಿಗಳನ್ನು ತಿಳಿಯಲು ಅಸಮರ್ಥರಾಗಿದ್ದಾರೆ. ಯಜ್ಞಕರ್ತರಿಗೆ ಸಮಸ್ತ ಪದಾರ್ಥಗಳನ್ನು ಅಗ್ನಿ ಒದಗಿಸುತ್ತಾನೆ. ಅಗ್ನಿಯು ತಾನು ಯಜಮಾನರ ಪರವಾಗಿ ಯಾರು ಯಾರು ದೇವತೆಗಳನ್ನು ಹೇಗೆ ಹೇಗೆ ಹಾಗೆ ಸ್ತುತಿಸಿ ತೃಪ್ತಿಪಡಿಸುತ್ತಾನೆ. ಗೌತಮ ವಂಶಸ್ತರು ಅಗ್ನಿಯನ್ನು ಸ್ತುತಿಸುತ್ತಾರೆ. ಹಗಲಾಗಲೀ ರಾತ್ರಿಯಾಗಲೀ ಯಜಮಾನರ ಭಕ್ತರ ಶತ್ರುಗಳನ್ನು ತಾನೇ ನಾಶಮಾಡುತ್ತಾನೆ ಅಥವಾ ತನ್ನ ಕಡೆಯವರಿಂದ ನಾಶಮಾಡಿಸುತ್ತಾನೆ ಅನಂತರ ದೇವತೆಗಳನ್ನು ಯಜಮಾನರ ಪರವಾಗಿ ಆಹ್ವಾನಿಸುತ್ತಾನೆ. ವಾಯು ಮತ್ತು ಪ್ರಕಾಶಮಾನ ಕಿರಣಗಳು ಕಪ್ಪು ಮೋಡವನ್ನು ಕರಗಿಸಿ ಗುಡುಗು ಸಹಿತ ಮಳೆ ತರುತ್ತವೆ. ಅಗ್ನಿ ಅಸಾರಯುತ ಮಳೆ ನೀರನ್ನು ಸಾರಯುತ್ತವನ್ನಾಗಿ ಮಾಡಿ ಮಾನವರು ಅದನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುವಂತೆ ಮಾಡಿದ್ದಾರೆ. ಅಗ್ನಿ ಸೋಮರಿಬ್ಬರೂ ದೇವತೆಗಳಲ್ಲೆಲ್ಲಾ ಅತ್ಯಂತ ಪೂಜ್ಯರು, ಸಮಾನ ಶಕ್ತಿಯುತರು, ಇಷ್ಟಾರ್ಥಪ್ರದರು. ಯಾಗಗಳಲ್ಲಿ ಇಬ್ಬರಿಗೂ ಒಂದೇ ವಿಧವಾದ ಪೂಜೆ, ಆಜ್ಯ, ಆಹುತಿ ಅರ್ಪಿಸುತ್ತಾರೆ. ಇಬ್ಬರನ್ನೂ ಒಟ್ಟಾಗಿ ಯಜ್ಞಕ್ಕೂ ಆಹ್ವಾನಿಸುತ್ತಾರೆ. ನಕ್ಷತ್ರ ಮಂಡಳಗಳನ್ನು ದ್ಯುಲೋಕದಲ್ಲಿ ಎತ್ತಿ ಹಿಡಿದವರು ಇವರೇ. ಸೂರ್ಯನನ್ನು ಮಾನವ ಕುಲ ಉದ್ಧಾರಕ್ಕಾಗಿ ಅಂತರಿಕ್ಷದಲ್ಲಿ ಸಂಚರಿಸುವಂತೆ ಮಾಡಿದವರು ಇವರೇ.

<u>ಅಗಸ್ತ್ಯರು :</u> (ತನೂನಪಾತ್) : ಅಗ್ನಿಯು ಮಧುರ, ಆಜ್ಯಾದಿ ದ್ರವ್ಯಗಳ ಹವಿಸ್ಸನ್ನು ಯಜ್ಞದಲ್ಲಿ ಸೇವಿಸುತ್ತಾನೆ. ಮಂದ್ರ, ಪುತ್ರ, ಅಗ್ನಿ, ವರುಣ ಮತ್ತು ಧರ್ಮ ದೇವತೆ ಹಾಗು ಆಹ್ವಾನಿತ ಇತರ ದೇವತೆಗಳು ಬರುತ್ತಾರೆ. ಯಜ್ಞ ಮಾಡದವರನ್ನು ಅಪೇಕ್ಷಿಸುವುದಿಲ್ಲ. ಅಗ್ನಿಯು ಚೋರರು, ನಿಂದಕರು, ವಂಚಕರು, ಶತ್ರುಗಳು, ಕಚ್ಚತಕ್ಕ, ಹಿಂಸೆ ಮಾಡತಕ್ಕ ಪ್ರಾಣಿಗಳು, ಹೊಟ್ಟೆಬಾಕಗಳು, ಇವರೆಲ್ಲರಿಂದ ಪಾರುಮಾಡುತ್ತಾನೆ. ಜಯ, ಆಪಜಯ, ಮಾನ, ಆಪಮಾನಗಳಿಂದ ಕುಟಿಲ ಮಾರ್ಗಗಳಿಂದ ದೂರಮಾಡಿ ಪಾಪ ನಾಶಮಾಡಿ ಕಾಪಾಡುತ್ತಾನೆ.

### ಹಿರಣ್ಯಸ್ತೂಪ ಆಂಗೀರಸರು - ಸ್ತೋತ್ರ ವಿಭಾಗ :

ಅಗ್ನಿಯು ಆಂಗಿರೋನಾಮಕ ಋಷಿಗಳಿಗಿಂತ ಮೊದಲಿಗ, ಆರಣಿ ದೇವತೆಗಳು ತಾಯಿಯರು. ವೇಗವಾಗಿ ಕಡೆಯುವುದರಿಂದ ಅಗ್ನಿ ಉತ್ಪನ್ನನಾಗುತ್ತಾನೆ. ಅಸನ್ ಮಾರ್ಗಗಳನ್ನು ಸನ್ಮಾರ್ಗಕ್ಕೆ ತರುತ್ತಾನೆ. ನೇರವಾಗಿ ಹೋಮ ಮಾಡುವವರಿಗೆ ಶಿಕ್ಷಣ ನೀಡುತ್ತಾನೆ. ಧನ, ಅನ್ನ, ಪಶು, ಪುತ್ರರು, ಸ್ವರ್ಗಗಳನ್ನು ನೀಡುತ್ತಾನೆ. ಯಜಮಾನನ್ನು ಮರಣರಾಹಿತ್ಯನನ್ನಾಗಿ ಮಾಡುತ್ತಾನೆ. ಅವರ ಮಕ್ಕಳಿಂದಲೂ ಕರ್ಮ ಮಾಡಿಸುತ್ತಾನೆ. ಅಗ್ನಿಯಿಂದ ಮರುತ್ ದೇವತೆಗಳು ಹುಟ್ಟಿದರು. ವಾಯುವಿಗೆ ಅಗ್ನಿ ಪ್ರಧಾನ. ದ್ಯಾವಾ / ಪೃಥ್ವಿಗಳು ಅಗ್ನಿ ಮಹಿಮೆಯಿಂದ

ಕಂಪಿಸುತ್ತವೆ. ಅಗ್ನಿ ಕ್ಷೇಮಪಾಲಕ, ನಮ್ಮ ರಕ್ಷಕನಾಗಿದ್ದಾನೆ.

ಕುತ್ಸ ಆಂಗೀರಸರು: ಅಗ್ನಿಯು ಜ್ಞಾನಿ, ಅಗ್ನಿಯು ಪೂಜ್ಯ, ಶಾಸ್ತ್ರವಿಹಿತ ಸ್ಥಳಗಳಲ್ಲಿ ಪ್ರಜ್ವಲಿತ ಯಾಗಗಳಿಂದ ಪ್ರೀತನಾಗಿ ಯಾಜ್ಞಿಕರನ್ನು ಪಾಪಗಳಿಂದ ಮತ್ತು ಶತ್ರುಗಳಿಂದ ಹಿಂಸಿತರಾಗದಂತೆ ರಕ್ಷಿಸುತ್ತಾನೆ. ಅಗ್ನಿಗೆ ಮೂರು ಸ್ಥಾನಗಳು : (1) ಸಮುದ್ರದಲ್ಲಿ ಒಡವಾನಲ (2) ದ್ಯುಲೋಕದಲ್ಲಿ ಆದಿತ್ಯನಾಗಿ (3) ಅಂತರಿಕ್ಷದಲ್ಲಿ ವಿದ್ಯುತ್ ರೂಪಿನಲ್ಲಿ ಅಹಸ್ಸಿನ (ಹಗಲು) ಪುತ್ರ ಅಗ್ನಿ, ರಾತ್ರಿಯ ಪುತ್ರ (ಸೂರ್ಯ).

ಅಹೋ ರಾತ್ರಿಗಳೆರಡೂ ಅಗ್ನಿಯನ್ನು ಎರಡೂ ಪಕ್ಕಗಳಿಂದ ಸೇವಿಸುತ್ತವೆ. ತೇಜಸ್ಸಿನಿಂದ ತುಂಬಿದ ನೀರು ಯಜ್ಞಾರ್ಹವಾಯಿತು. ಭೂಮಿಯನ್ನು ಸಂಪೂರ್ಣ ತೋಯಿಸಿ ನಂತರ ಅನ್ನಾದಿಗಳನ್ನು ಸಸ್ಯದಲ್ಲಿರಿಸಿ ಅವನ್ನು ಮಳೆಯಿಂದ ಪಕ್ವವಾಗಿಸಿ ಅಗ್ನಿ ಅಲ್ಲಿ ಅಂತರ್ಗತನಾಗಿದ್ದಾನೆ. ಸಕಲ ವಸ್ತುಗಳಲ್ಲೂ ಅಗ್ನಿಯು ಯಾವುದಾದರೂ ಒಂದು ರೂಪದಲ್ಲಿ ಅಡಗಿದ್ದಾನೆ. (1) ಮೇಘದ ನೀರಿನಲ್ಲಿ ಮಿಂಚಿನಂತೆ (2) ಹವಿಸ್ಸಿನ ರೂಪದಲ್ಲಿ ಅನ್ನದಂತೆ (3) ಸಮುದ್ರ ಮಧ್ಯದಲ್ಲಿ ಆದಿತ್ಯ ಔಷದಾಗ್ನಿ (ಆದಿತ್ಯ) ಸಕಲ ಭೂತ ಜಾತಗಳಿಂದಲೂ ಸಾರಭೂತ ರಸ ಹೀರಿ ಅಂತರಿಕ್ಷದಲ್ಲಿ ಜಗತ್ತಿಗೆ ಹೊದಿಕೆಯಾಗುವಂತೆ ಮಾಡಿದ್ದಾನೆ. ಅಗ್ನಿ ಹುಟ್ಟಿದ್ದು ಆರಣಿಯಲ್ಲಿ. ಅಹೋ ರಾತ್ರಿಗಳು ಹುಟ್ಟಿದ ಕೂಡಲೇ ಪುತ್ರ ರೂಪದ ಅಗ್ನಿಗೆ ಹವಿಸ್ಸು ಕೊಡಿಸುತ್ತಾರೆ. ದ್ಯಾವಾ ಪೃಥ್ವಿಗಳು ಅಗ್ನಿಯನ್ನು ಪ್ರಕಾಶಿಸುತ್ತವೆ. ಅಗ್ನಿ ಸಕಲ ಮಾನವ ಪ್ರಜೆಗಳನ್ನು ಸೃಷ್ಟಿಸಿದನು. ಪಾಪಿಗಳನ್ನು ನಾಶಮಾಡುತ್ತಾನೆ. ದೇವತೆಗಳಿಗೆ ಮಿಂಚಿನಂತೆ ಹವಿಸ್ಸು ಹಂಚುತ್ತಾನೆ. ನಾನಾ ರೂಪಿನಲ್ಲಿ ಅಗ್ನಿ ಇದ್ದಾನೆ.

ಋಷಿಗಳು : ಮೇದಾತಿಥಿ ಕಾಣ್ವರು : ಆಶ್ರಮ ವಿಭಾಗ : ಅಗ್ನಿಯು ಮೇಧಾವಿ, ಸತ್ಯಧರ್ಮ ಸ್ವರೂಪಿ, ಆರಣಿಯಲ್ಲಿ ಉತ್ಪನ್ನನಾಗಿ ಆಹವನೀಯ ಗಾರ್ಹಪತ್ಯದಲ್ಲಿ ಪ್ರಕಟಗೊಳ್ಳುತ್ತಾನೆ. ಅಗ್ನಿಯ ಮುಖ ''ಜುಹೂ'' ಮೂಲಕ ಆಜ್ಯ, ಹವಿಸ್ಸು ಸ್ವೀಕರಿಸುತ್ತಾನೆ. ಯಜ್ಞ ವಿರೋಧಿಗಳನ್ನು, ರೋಗಾದಿ ಉಪದ್ರವಗಳನ್ನು ನಾಶ ಮಾಡುತ್ತಾನೆ. ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾದವನು. ಅಗ್ನಿಯ ಇತರ ಹೆಸರುಗಳು ಹೀಗಿವೆ : (1) ಸುಸಮಿದ್ಧ (2) ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರ (8) ವನಸ್ಪತಿ (9) ಸ್ವಾಹ (10) ಇಳಾ (11) ಭಾರತಿ (12) ಸರಸ್ವತಿ ಇವರುಗಳು ಎಲ್ಲರೂ ಸುಃಖ ನೀಡುವ ಅಗ್ನಿ ಮೂರ್ತಿ ಸ್ವರೂಪರು.

ಅಗ್ನಿ ಸಂಬಂಧ ಯಜ್ಞವನ್ನು ಅತಿಕ್ರಮಿಸಲು ದೇವ ದಾನವರಿಗೂ ಸಾಧ್ಯವಿಲ್ಲ. ದೇವ ಮಾನವರಿಗೆ ಸಮಾನ ಹರ್ಷ ದಾಯಕ, ಯಜ್ಞದಲ್ಲಿ ಹವಿಸ್ಸು ಪಡೆದು ದೇವತೆಗಳಿಗೆ ಅವರವರ ಭಾಗ ಹಂಚುತ್ತಾನೆ. ಮನು ಪ್ರಜಾಪತಿ ಅಗ್ನಿಯನ್ನು ಭೂಮಿಯಲ್ಲಿ ನಿಲ್ಲಿಸಿದನು. ವರುಣ, ಮಿತ್ರಾ, ಆರ್ಯಮರು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದರು. ಲೋಕದಲ್ಲೆಲ್ಲ ಅಗೋಚರ ಜ್ವಾಲೆಯನ್ನು ಹರಡಿದರು. ಯೂಪ ಸ್ತಂಭದಲ್ಲಿ ಅಗ್ನಿ ಅಡಗಿದ್ದಾನೆ. ಯಾಜ್ಞಿಕರ ಉದ್ದೇಶ ತಿಳಿದು ಫಲ ನೀಡುತ್ತಾನೆ. ಯಜ್ಞಕರ್ತರು ಅಗ್ನಿಗೆ ಪುರೋಹಿತ ಸ್ಥಾನ ಕೊಟ್ಟರು, ಘರ್ಷಣೆಯಿಂದ ಉತ್ಪನ್ನನಾದ ಅಗ್ನಿ ಜ್ವಾಲೆಗಳಿಂದ ಪ್ರಜ್ವಲಿಸುತ್ತಾನೆ.

ಪರಾಶರ ಶಾಕ್ಯರು : ಸ್ತೋತ್ರ ವಿಭಾಗ : ಅಗ್ನಿಯು ಜಠರದಲ್ಲಿ ಆಹಾರ ಪಚನ ಮಾಡುತ್ತಾನೆ. ತನಗಾಗಿ ಇತರೇ ದೇವತೆಗಳಿಗಾಗಿ ಯಜ್ಞದಲ್ಲಿ ಹವಿಸ್ಸು ಸ್ವೀಕರಿಸುತ್ತಾನೆ. ದೇವತೆಗಳು ಭೂಮಿಗೆ ಅಗ್ನಿಯನ್ನು ಹುಡುಕಿಕೊಂಡು ಬರುತ್ತಾರೆ. ಭೂಮಿಯು ಅಗ್ನಿಯಿಂದ ಸ್ವರ್ಗವಾಗಿದೆ. ಅಗ್ನಿ ಅನ್ನಕ್ಕೂ ಕಾರಣ, ಜಲದ ಮಧ್ಯೆ ಇದ್ದಾನೆ. ಉದಕಕ್ಕೆ ಸಹೋದರ, ವಾಯುವಿನ ಸ್ನೇಹಿತ. ಕೋಪ ಬಂದರೆ ಓಷದಿಗಳ ಸಹಿತ ಕಾಡನ್ನು ಸುಡುತ್ತಾನೆ. ತನ್ನನ್ನು ಸ್ತುತಿಸುವವರನ್ನು ಶತ್ರು ಬಾಧೆಯಿಂದ ರಕ್ಷಿಸುತ್ತಾನೆ. ★ ಕನ್ಯೆಯ ಕನ್ಯಾತ್ವವನ್ನು ಹೋಗಲಾಡಿಸುತ್ತಾನೆ. ಸ್ತ್ರೀಯರಿಗೆ ಪತಿದಾತ, ಯಜ್ಞ ನಾಶಕರನ್ನು ಧ್ವಂಸ ಮಾಡುತ್ತಾನೆ. ಅಗ್ನಿ ಹವಿಸ್ಸಿನೊಂದಿಗೆ ಉದಕದಲ್ಲಿ ಅಡಗಿದ್ದರಿಂದ ಭಯ ಭೀತರಾಗಿ ಅಗ್ನಿ ಮಂತ್ರದಿಂದ ಇರುವ ಸ್ಥಳ ತಿಳಿದು ಸಮೀಪಿಸಿದರು. ವನಸ್ಪತಿ, ಓಷದಿ, ಹಲವು ವೃಕ್ಷಗಳಿಗೆ ಅಗ್ನಿಯೆ ಕಾರಣ. ಭೂಮಿಯ ಮೇಲಿರುವುದೆಲ್ಲಾ ಅಗ್ನಿಗೆ ಆಹಾರವೇ. ರಾಕ್ಷಸ ಭಾದೆಯಾದಾಗ ಅಗ್ನಿ ಮರುತ್‌ಗಳೊಂದಿಗೆ ಸೇರಿ ರಾಕ್ಷಸರನ್ನು ನಾಶ ಮಾಡಿ ಯಜ್ಞ ರಕ್ಷಣೆ ಮಾಡುತ್ತಾನೆ. ದೇವತೆಗಳಿಂದ ಪುತ್ರನಂತೆ. ರಶ್ಮಿಯಿಂದಲೇ ದೇವತೆಗಳಿಗೆ ಹವಿಸ್ಸನ್ನು ಒಯ್ಯುತ್ತಾನೆ. ★ ದೇವತೆಗಳ ಜನನಾದಿ ವಿಷಯಗಳನ್ನು ತಿಳಿದ ಸರ್ವಜ್ಞ ಮೂರ್ತಿ ಅಗ್ನಿದೇವ.

★ ಆಂಗೀರಸರು ಅಗ್ನಿ ಸ್ಥಾಪನೆ ಮಾಡಿದರು. ವಸಿಷ್ಟರ ಕಾಲದಿಂದಲೂ ಅಗ್ನಿ ಮತ್ತು ಯಾಜ್ಞಿಕರ ನಡುವೆ ಸ್ನೇಹ ಏರ್ಪಟ್ಟಿದೆ

ಹಾಗೂ ಮುಂದುವರಿದಿದೆ. ಬಲಿಷ್ಟ ಅಗ್ನಿಯಿಂದ ಫಣಿಯು ನಾಶವಾಗಿ ಗೋವುಗಳು ರಕ್ಷಿಸಲ್ಪಟ್ಟವು. ವಾಯುವು ಅಗ್ನಿಯನ್ನು ಶುಭ್ರ ವರ್ಣದವನನ್ನಾಗಿಸಿದನು. ರಾಕ್ಷಸರು ಹವಿಸ್ಸನ್ನು ಪಡೆಯಲು ಬಂದವರು ಅಗ್ನಿಗೆ ಹೆದರಿ ಓಡಿ ಹೋದರು. ಸಪತ್ನೀಕರಾಗಿ ಎಲ್ಲ ದೇವತೆಗಳು ಅಗ್ನಿಯಿಂದ ಸ್ವೀಕರಿಸಲ್ಪಟ್ಟ ಆಹುತಿಗಾಗಿ ಅಗ್ನಿಯನ್ನು ಹುಡುಕುತ್ತಾರೆ.

**ಋಷಿಗಳು – ಮದುಶ್ಚಂದ್ರರು :** ಅಗ್ನಿಯ ನಾಲ್ಕು ರೂಪಗಳು ಹೀಗಿವೆ (1) ಆಹವನೀಯ (2) ಮಾರ್ಜಾಲೀಯ (3) ಗಾರ್ಹಪತ್ಯ (4) ಅಗ್ನಿದ್ರಯ. ಅಗ್ನಿಯು ಭೂತಕಾಲದಲ್ಲಿ, ವರ್ತಮಾನ ಕಾಲದಲ್ಲಿ ಎಲ್ಲಾ ಋಷಿಗಳಿಂದಲೂ ಸ್ತುತಿಸಲ್ಪಟ್ಟವನು. ಈಗಲೂ ಸಹ ಸ್ತೋತ್ರಗಳನ್ನು ಪಡೆಯುತ್ತಾ ಇದ್ದಾನೆ. ★ **ಅಗ್ನಿಯು ಕೊಟ್ಟ ವಸ್ತುಗಳನ್ನು ಅಗ್ನಿಗೆ ಅರ್ಪಿಸುವುದರಿಂದ ಅವು ವೃದ್ಧಿಯಾಗುತ್ತವೆ.** ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾಗಿದ್ದಾನೆ. ಅಗ್ನಿಗೆ (1) ಸುಸಮಿದ್ಧ (2) ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರ (8) ವನಸ್ಪತಿ (9) ಸ್ವಾಹಾ ಎಂದೆಲ್ಲಾ ಕರೆಯುತ್ತಾರೆ. ಅಗ್ನಿ ಅತೀ ಶ್ರೇಷ್ಟಗುಣಗಳಿಂದ ದೊಡ್ಡವನು, ಪ್ರಕಾಶಮಾನ ಕಿರಣಗಳಿಂದ ಕೇಡು ಬಯಸುವವರನ್ನು ಹಿಂಸಿಸಿ ರಕ್ಷಿಸುತ್ತಾನೆ. ★ ಅಗ್ನಿಯು ಶುನಃಶ್ಯೇಪನಿಗೆ ಅಶ್ವಿನಿ ದೇವತೆಗಳನ್ನು ಪ್ರಾರ್ಥಿಸುವಂತೆ ಹೇಳುತ್ತಾನೆ.

**ದೀರ್ಘತಮ ಔಚಿತ್ಯರು :** ಅಗ್ನಿಯು ಎಲ್ಲಾ ಪ್ರಾಣಿಗಳ ಶರೀರಕ್ಕೆ ಆದಿತ್ಯ ತೇಜಸ್ಸು ಕೊಡುತ್ತಾನೆ. ಅಪ್ರತಿಹತ ಶಕ್ತ ಸೌಮ್ಯ, ಸೌರ್ವಭೌಮ, ಪ್ರಭುವೂ ಆಗಿದ್ದಾನೆ. ಉತ್ತಮ ಧನ, ಪ್ರೀತಿ ಪಾತ್ರ ಪುತ್ರರನ್ನುಕರುಣಿಸುತ್ತಾನೆ. ಪೂಜಾಯೋಗ್ಯ ಮಂತ್ರಗಳಿಂದ ಸ್ತುತಿಸುತ್ತಾರೆ. ಹರ್ಷ ಉಂಟುಮಾಡುವ ಜ್ವಾಲೆಯವನು. ಯಜಮಾನನನ್ನು ಅನುಗ್ರಹಿಸುವವನು, ಈ ಎರಡೂ ಅಗ್ನಿಯ ಫಲರೂಪಗಳು. ರೂಪಾಭಿಮಾನಿ, ದೇವತೆಗಳು ಅವರವರ ಕರ್ತವ್ಯ ನಿರತರಾಗಿರುವಂತೆ ಮಾಡಿ ಹವಿಸ್ಸನ್ನು ಹಂಚುತ್ತಾನೆ.

ಉತ್ಪನ್ನನಾದೊಡನೆಯೇ ವಾಯುವಿನೆದುರು ಪ್ರತ್ಯಕ್ಷನಾಗುತ್ತಾನೆ. ಜ್ವಲನದಿಂದ ದ್ಯುಲೋಕ, ಪೃಥ್ವಿಯನ್ನು ಬೆಳಗುತ್ತಾನೆ. ತಡೆಯಲಾಗದ ಪ್ರಸರಣವುಳ್ಳವನು, ಅಗ್ನಿ, ನೀರು ಸೇರಿ ವೃಷ್ಟಿಉಂಟುಮಾಡುತ್ತಾರೆ. ಸ್ವಸಾಮರ್ಥ್ಯದಿಂದ ಅಗ್ನಿಯು ದೇವ ಮಾನವರಿಗೆ ಈಶ್ವರನಾಗಿದ್ದಾನೆ. ದ್ಯಾವಾ ಪೃಥ್ವಿಗಳನ್ನು ವ್ಯಾಪಿಸುತ್ತಾ ನೂತನ ಸ್ತೋತ್ರಗಳನ್ನು ಸ್ವೀಕರಿಸುತ್ತಾ ಮನೋಹರನಾಗಿ ಎಲ್ಲರಿಗೂ ಗೋಚರಿಸುತ್ತಾನೆ. ಸಕಲ ದೇವತೆಗಳಿಗೂ ಏಕಮಾತ್ರ ಪ್ರತಿನಿಧಿ.

★ ಅಹಂಕಾರ ರಹಿತರು ಮಾತ್ರ ಕೃಪೆಗೆ ಪಾತ್ರರಾಗುತ್ತಾರೆ. ಇಂತಹವರು ಕೇಳುವ ಯೋಗ್ಯ ಪ್ರಶ್ನೆಗೆ ಉತ್ತರಿಸುತ್ತಾನೆ. ಪ್ರತ್ಯುತ್ತರವನ್ನು ಅಗ್ನಿ ಸಹಿಸನು. ಬಳಲಿದ್ದರೂ ಯಜಮಾನನಿಗಾಗಿ ಕರ್ಮಗಳಲ್ಲಿ ತೇಜಸ್ಸಿನಿಂದ ಸಂಯುಕ್ತನಾಗುತ್ತಾನೆ. ಜ್ವಾಲೆಗಳಿಂದ ಸರ್ವತ್ರ ಸಂಚರಿಸುತ್ತಾ ಎತ್ತರ ವೇದಿಕೆಯಲ್ಲಿ ಪಾದವಿರಿಸಿದ್ದಾನೆ. ಸೂರ್ಯರೂಪಿ, ನಾಶರಹಿತ, ದಶ ದಿಕ್ಕುಗಳಲ್ಲೂ ಕಾಣಿಸಿಕೊಳ್ಳುತ್ತಾನೆ. ಪೂಜ್ಯನಾಗುತ್ತಾನೆ. ಆದಿತ್ಯನು ದೇವತೆಗಳಿಗಿದ್ದಂತೆ ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆತರುವ ದೇವಪ್ರತಿನಿಧಿ. ಗಾರ್ಹಪಥ್ಯ ಸ್ಥಾನದಲ್ಲಿ ಶಾಶ್ವತವಾಗಿ ಜಾಗರೂಕತೆಯಿಂದ ರಕ್ಷಿತನಾಗಿ ಹಿಡಿಯಲ್ಪಟ್ಟಿದ್ದಾನೆ. ಯಜಮಾನನನ್ನು ಯಾರೂ ಹಿಂಸಿಸಲಾರರು. ಏಕೆಂದರೆ ಶ್ರದ್ಧಾ ಭಕ್ತಿಗಳಿಂದ, ಸ್ತೋತ್ರ ಕೀರ್ತನೆಗಳಿಂದ ಅಗ್ನಿದೇವತೆಗಳು ತೃಪ್ತರಾಗಿರುತ್ತಾರೆ.

★ ಅಜ್ಞಾನಿಗಳು, ಅವಿದ್ವಾಂಸರು ಅಗ್ನಿಯನ್ನು ಅವನ ಮಹತ್ತನ್ನು ತಿಳಿಯಲಾರರು. ವಾಯುವಿನ ಸಹಾಯದಿಂದ ಕಾಡನ್ನುಸುಡುತ್ತಾನೆ. ಪ್ರಭುಗಳಿಗೆ ಪ್ರಭು, ಸೂರ್ಯನಂತೆ ಬೆಳಗುತ್ತಾನೆ. ವಾಯುವಿನಂತೆ ಆಕಾಶಸ್ಥ ಇಷ್ಟಾರ್ಥ ಧನದಾತ. ಸೋಮರಸ ತಯಾರಿಕೆಯ ಶಬ್ದದಿಂದಲೇ ಸಂತೋಷಪಡುತ್ತಾನೆ. ಉದಕಯುಕ್ತ ಯಾಗಪ್ರದೇಶವಾದ ಧನ ಹೊಂದಿರುವವನು, ಜೀವರಾಶಿಗಳ ಸೃಷ್ಟಿದಾತ. ಅಗ್ನಿಯನ್ನು ಪೂಜಿಸುವವರು ಚಂದ್ರ ಸ್ಥಾನ ಪಡೆಯುತ್ತಾರೆ. ದೇವತೆಗಳಿಗೂ ಅಧಿಕನಾಗುತ್ತಾನೆ. ಮಿತ್ರಾ ವರುಣರ ಉಪಚಾರಗಳಿಂದ ಮಳೆ ಉಂಟಾಗುತ್ತದೆ. ಮೂರು ಲೋಕದಲ್ಲೂ ಮಿತ್ರಾ ವರುಣರು, ಅನ್ನ, ಧನ ಹೊಂದಿರುತ್ತಾರೆ. ದನಕರುಗಳು ರಕ್ಷಿತವಾಗಿ ಕೊಟ್ಟಿಗೆ ಸೇರುವುವು.

**ವಾಯುವು ದ್ಯುಲೋಕದಿಂದ ಅಗ್ನಿಯನ್ನು ಭೂಮಿಗೆ ತಂದನು, ಶ್ಯೇನಪಕ್ಷಿ ರೂಪದಿಂದ ಗಾಯತ್ರಿಯು ಸೋಮನನ್ನು ಯಜ್ಞಕರ್ತರಿಗಾಗಿ ಭೂಮಿಗೆ ತಂದರು.** ಅಗ್ನಿ ಮರುತ್‌ಗಳಂತೆ 49 ಶಾಖೆಗಳುಳ್ಳವನು, ಸಜ್ಜನರ ಪಾಲಕ. ಪ್ರತಿ ಯುಗದಲ್ಲೂ ದೇವತೆಗಳು ಅಗ್ನಿಯನ್ನೇ ತಮ್ಮ ಪ್ರತಿನಿಧಿಯನ್ನಾಗಿ ಮಾಡಿಕೊಂಡಿದ್ದಾರೆ. ಅವನು ಮರಣಧರ್ಮ ರಹಿತ, ಜ್ಞಾನ ದಾಯಕ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಗ್ನಿದೇವರು

## (ಋಗ್ವೇದದ ಆಧಾರದಿಂದ ತೆಗೆದ ಸ್ತೋತ್ರ ವಿಭಾಗ)

### 1) ಎರಡು ಮತ್ತು ನಾಲ್ಕನೇ ಮಂಡಲಗಳಿಂದ (ಋಷಿಗಳು, ಗೃತ್ಸಮದರು, ವಾಮನರು)

ಅಗ್ನಿಯ ಸಹಾಯದಿಂದಲೇ ಮಾನವನು ರಸರೂಪಿ ಅನ್ನ ತಿನ್ನುವುದು. ಅಗ್ನಿಯು ಸ್ವೀಕರಿಸಿದ ನಂತರವೇ ದ್ಯಾವ ಪೃಥ್ವಿಗಳಿಗೂ ಇತರ ದೇವತೆಗಳಿಗೂ ಹಂಚುತ್ತಾನೆ. ಅತಿಥಿಯಂತೆ ಪೂಜ್ಯ, ಅತ್ಯಂತ ಸ್ತುತ್ಯ. ಅಗ್ನಿಯು ಪೂಜೆ ನಮಸ್ಕಾರಗಳಿಂದ ಪ್ರಕಾಶಿಸುತ್ತಾನೆ. ಅನ್ನ, ಆಜ್ಯಗಳಿಂದ (ಆಹುತಿ) ಪ್ರೀತನಾಗುತ್ತಾನೆ. ಅಗ್ನಿಯು ಉಷ:ಕಾಲ ಹಗಲು, ರಾತ್ರಿಗಳಲ್ಲಿ ಯಜಮಾನರುಗಳಿಂದ ಸ್ತುತಿ, ಪೂಜೆ, ಯಜ್ಞ, ಮಂತ್ರಗಳಿಂದ ಪ್ರಕಾಶಿತನಾಗುತ್ತಾನೆ. ಅಗ್ನಿಯು ಯಾರಿಂದಲೂ ತಿರಸ್ಕೃತನಲ್ಲ. ಸ್ತುತಿ, ಮಹತ್ವ ತಿಳಿದವನು. ಅಗ್ನಿ ತನ್ನ ತೇಜಸ್ಸಿನಿಂದ ಶತ್ರುಗಳನ್ನು ಸೋಲಿಸಿ ಓಡಿಸುತ್ತಾನೆ. ಅಂತರಿಕ್ಷ ಮಧ್ಯದಲ್ಲಿ ತೇಜಸ್ವಿ ಹಾಗೂ ಬಂಧು ರೂಪಿಯಾಗಿದ್ದಾನೆ. ಅಂತರಿಕ್ಷದಲ್ಲಿ ಗೂಢವಾದ ಧೂಮದಲ್ಲಿ ಶಿರ ಪಾದಗಳನ್ನು ಐಕ್ಯ ಮಾಡಿದ್ದಾನೆ. ಅಗ್ನಿ ಇಂದ್ರಾದಿ ದೇವತೆಗಳ, ಮಾನವರ ಉನ್ನತಿಗಾಗಿ ಉತ್ತರ ವೇದಿಕೆಯಲ್ಲಿ ಸ್ಥಾಪಿತನಾಗಿದ್ದಾನೆ. ಅಗ್ನಿ ಹವಿಸ್ಸು ಸ್ವೀಕರಿಸಿ ಹಂಚಲು ಬರುತ್ತಾನೆ. ಅಗ್ನಿ ಪ್ರಕಾಶಿಸಿ ಇಂದ್ರನನ್ನು ಪ್ರವೃದ್ಧಗೊಳಿಸಿ ಅಪಹೃತ ಗೋವುಗಳನ್ನು ಆಂಗೀರಸರು ಪಡೆಯುವಂತೆ ಮಾಡಿದನು. ಅಗ್ನಿಯು ಯಜಮಾನರ ಕರ್ಮವಿಷಯ ಜ್ಞಾನಿ. ಸರ್ವವ್ಯಾಪಿ. ಅಗ್ನಿ ಮಹಿಮೆಯಿಂದಲೇ ಸೂರ್ಯನು ಆವಿರ್ಭೂತನಾಗುತ್ತಾನೆ.

ಅಂತರಿಕ್ಷದಿಂದ ಉದಕ ಕರೆದು ಯಜ್ಞದಿಂದ ಶಕ್ತಿ ಪಡೆಯುತ್ತಾನೆ. ಅಂತರಿಕ್ಷದಿಂದ ಮಾಧುರ್ಯಯುಕ್ತ ನದೀರೂಪವಾಗಿ ವೇಗವಾಗಿ ಹರಿಯುವಂತಾಯ್ತು. ಅಗ್ನಿ ಆಹ್ವಾನಿಸಲು ದೇವತೆಗಳು ಬಂದು ಸೇರುತ್ತಾರೆ. ಅಗ್ನಿ ಮಹಿಮೆಯಿಂದಲೇ ಕಾಮಧೇನುಗಳು ಶ್ವೇತವರ್ಣದ ಕ್ಷೀರವನ್ನು ತೃಪ್ತಿಗಾಗಿ ನೀಡುತ್ತವೆ. ಅಗ್ನಿ ಆರಾಧಕರು, ಪುತ್ರ, ಪೌತ್ರರನ್ನು, ಅಶ್ವ, ಗೋವುಗಳನ್ನು ಪಡೆಯುತ್ತಾರೆ. ಅಗ್ನಿಯು ಮನು ಸಂಬಂಧಿ, ಹೊಂಬಣ್ಣದವನು. ಅಶ್ವಗಳು ಅಗ್ನಿಯನ್ನು ಯಜ್ಞಕ್ಕೆ ಕರೆತರುತ್ತವೆ. ಅಗ್ನಿ ಕಾಂತಿಯಿಂದ ಸ್ತೋತ್ರಗಳು ವೃದ್ಧಿಹೊಂದುತ್ತವೆ. ಅಗ್ನಿಗೆ ಸಮಸ್ತ ಭೂತ ಜಾತಗಳೂ ಭಯ ಪಡುತ್ತವೆ. ಅಗ್ನಿಯು ರಾಕ್ಷಸರು, ನಿಶಾಚರರು, ಹಿಂಸಕರಿಗೆ ಭೀತಿ ದಾಯಕನಾಗಿದ್ದಾನೆ. ಅಗ್ನಿ ಪ್ರಭೆಯನ್ನು ದ್ಯಾವ, ಪೃಥ್ವಿಗಳು ತಡೆಯಲಾರವು. ಅಗ್ನಿಯ ತೇಜಸ್ಸು ಶುದ್ಧ, ಹಿತಕರ, ರಮಣೀಯ ಹಾಗು ಪ್ರಸಿದ್ಧವಾದುದು. ಅಗ್ನಿಯು ಅನೇಕ ವಿಧ ಯಜ್ಞಗಳಲ್ಲಿ ಬಹು ರೂಪಗಳಲ್ಲಿ ಉತ್ಪನ್ನ ಆಗುತ್ತಾನೆ. ಅಗ್ನಿ, ಜ್ವಾಲೆ ಶುದ್ಧಿಕಾರಕ, ಶಬ್ದಕಾರಕ, ಕಾಮವರ್ಷಕ, ಮಹಾತ್ಮ.

ಆದಿತ್ಯ ರೂಪಿನಲ್ಲಿ ಪವಿತ್ರಾಗ್ನಿ ಆಗಿದ್ದಾನೆ. ಆಂಗೀರಸ್ಸು, ಉಷಸ್ಸುಗಳ ತೇಜಸ್ಸಿನಿಂದ ಕತ್ತಲು ನಾಶವಾಗುತ್ತದೆ. ★ ಆದಿತ್ಯ ಪುತ್ರ ಆಂಗೀರಸರು ಉಷಸ್ಸಿನಿಂದ ಅಗ್ನಿ ರಶ್ಮಿ ಉತ್ಪನ್ನ ಮಾಡಿದರು. ಆಂಗೀರಸ್ಸುಗಳು ಜನನೀರೂಪ ರಶ್ಮಿಗಳು. ಇಂದ್ರಾದಿ ದೇವತೆಗಳಿಗಾಗಿ ಅಗ್ನಿ ತನ್ನ ಮುಖದಿಂದ ಭಕ್ಷಿಸುತ್ತಾನೆ.

ಉಷ:ಕಾಲವು ಬೆಳಗುತ್ತದೆ. ಉನ್ನತ ಸ್ಥಾನದಲ್ಲಿ ಅಗ್ನಿ ಕ್ರಮಿಸುತ್ತಾನೆ, ಉದಕ ವೃಕ್ಷದಲ್ಲಿ ಅಗ್ನಿ ಅಡಗಿದ್ದಾನೆ. ಉತ್ತರ ವೇದಿಕೆಯಲ್ಲಿ ಪ್ರಜ್ವಲಿಸುತ್ತಾನೆ.

ಎಲ್ಲರಿಂದಲೂ ಸೇವಿತ. ಓಷಧಿಗಳಲ್ಲಿ ವೈಶ್ವಾನರಾಗ್ನಿಯಾಗಿದ್ದಾನೆ.

ಮರುತ್ ಸಂಘಾತ, ಮರುತ್ ವರುಣರು, ಅಗ್ನಿ ಜೊತೆ ಇದ್ದಾರೆ. ಮಾನವರ ನಡುವೆ ಅಗ್ನಿಯು ಹವ್ಯವಾಹಕ. ಮನೋವೇಗ ಸಂಚಾರಿ. ಅಲಂಕೃತ ರೋಹಿತ ವರ್ಣದ ಅಶ್ವ ಹೂಡಿದ ರಥದಲ್ಲಿ ಹವಿಸ್ಸು ಸ್ವೀಕರಿಸಲು ಬರುತ್ತಾನೆ. ಮಾನವರ ಅತಿಥಿ. ಹವಿರೂಪ ಅನ್ನ ಅಪೇಕ್ಷಿ, ಮಾನವ ಅಧ್ವರ್ಯುಗಳು ಉಷ:ಕಾಲದಲ್ಲಿ ಸ್ತ್ರೀರೂಪದಂತಿರುವ ಅಂಗುಲಿಗಳಿಂದ ಉತ್ಪನ್ನ ಮಾಡಿದರು. ಮಾನವರ ಯಾಗ ಕರ್ಮಗಳನ್ನು ಇಚ್ಛಿಸುತ್ತಾನೆ. ಮಧುರ ಉದಕವು ಇಂದ್ರ, ಅಗ್ನಿ ಸೂರ್ಯರಿಂದ ನೂರಾರು ಧಾರೆಗಳಲ್ಲಿ ಪ್ರವಹಿಸುತ್ತವೆ. ಮಂತ್ರ, ಕಲ್ಪ, ಬ್ರಾಹ್ಮಣ ಮೂರು ಪ್ರಕಾರಗಳಿಂದ ಅಗ್ನಿ ಮಾನವರಲ್ಲೆಲ್ಲಾ ವ್ಯಾಪಿಸಿದ್ದಾನೆ.

ಅಗ್ನಿಯು ಯಜಮಾನನಿಗಾಗಿ ಹವಿಸ್ಸನ್ನು, ಕಾಷ್ಠಾದಿಗಳನ್ನು ದಹಿಸುತ್ತಾನೆ. ಯಾಗದ ದಿನಗಳಲ್ಲಿ ಯಾಗಕ್ಕೋಸ್ಕರವೇ ಉತ್ಪನ್ನನಾಗುತ್ತಾನೆ. ಯಜ್ಞಾರ್ಪಿತ ಅನ್ನವು ಮೊದಲು ಅಗ್ನಿಗೆ ಅಧೀನವಾಗಿರುತ್ತದೆ. ಯಜ್ಞ ಗೃಹದಲ್ಲಿ ಗೃಹಪತಿಯಾಗಿರುತ್ತಾನೆ, ಪುರೋಹಿತರ ಸ್ಥಾನದಲ್ಲಿರುತ್ತಾನೆ. ಯಜಮಾನನಿಗೆ ಸುಖ ತರುತ್ತಾನೆ.

1) ಅಗ್ನಿಥ್ವ: - ದೇವತಾ ಗುಣಗಳನ್ನುಸ್ತೋತ್ರ ಮಾಡುವವನು.

2) ಅಧ್ವರ್ಯು: - ನೇರವಾಗಿ ಹೋಮ ಮಾಡುವವನು.

3) ಬ್ರಹ್ಮ(ವೀಕ್ಷಕ) : - ನಾಲ್ಕು ವೇದಗಳನ್ನು ತಿಳಿದವನು.

ಯಜಮಾನನ ಶಕ್ತಿವೃದ್ಧಿಸುತ್ತಾನೆ. ಯಜಮಾನನ ರಕ್ಷಕ, ಯಜ್ಞಮಾಡತಕ್ಕ ಮಾನವರಲ್ಲಿ ಅಗ್ನಿ ಇದ್ದಾನೆ. ಯಜ್ಞದಲ್ಲಿ ಅಗ್ನಿಯ ಜೊತೆಗೆ ದೇವತೆಗಳೂ ಪೂಜಿಸಲ್ಪಡುತ್ತಾರೆ. ಅಗ್ನಿಯ ಸಖ್ಯ ಉಂಟಾದಾಗ ಅಗ್ನಿಯು ತೇಜಸ್ಸಿನಿಂದ ಅಭಿಮುಖನಾಗುತ್ತಾನೆ. ಯಜಮಾನನ ಅಪೇಕ್ಷಿತ ಧನವನ್ನು ತಿಳಿದವನು. ಯಜಮಾನಾಭಿಮುಖ ಸಕಾಲದಲ್ಲಿ ಬಂದು ಯಜ್ಞಕ್ಕೆ ಅನುಮತಿ ಕೊಡುತ್ತಾನೆ. ಯಜ್ಞವು ಮಂಗಳಾತ್ಮಕ, ಪ್ರಸಿದ್ಧ, ಇಷ್ಟಾರ್ಥ ಸಾಧಕ, ಸತ್ಯಾತ್ಮಕ ಮಹತ್ವವುಳ್ಳದ್ದು, ಅಗ್ನಿಯು ಯಜ್ಞಕ್ಕೆ ಆತ್ಮನಾಗಿದ್ದಾನೆ.

ರಥ ಎಂದರೆ ಅಗ್ನಿ, ರಶ್ಮಿಗಳು ಮನುಷ್ಯರ ನಡುವೆ ಪ್ರಕಾಶಿಸಿ ಉದಕ ತರುತ್ತವೆ. ರಶ್ಮಿಗಳು ತಮ್ಮ ಗುರಿ ಮುಟ್ಟುತ್ತವೆ. ರಾಕ್ಷಸರನ್ನು ನಾಶ ಮಾಡುತ್ತವೆ. ರಾತ್ರಿಯಲ್ಲಿ ಪ್ರಕಾಶನಾಗಿ ಪಾಪಿಗಳನ್ನು ನಾಶ ಮಾಡುತ್ತಾನೆ. ಕರ್ಮವಿಷಯಗಳ ಜ್ಞಾನಿ. ಕರ್ಮನಿರತರ ದೂತನಾಗಿದ್ದಾನೆ. ಚೈತನ್ಯಕಾರಿ. ಘೃತವು ದೇವತೆಗಳಿಗೆ ಅಮೃತವಾಗಿದೆ. ಘೃತವು ಕ್ಷೀರ, ದಧಿ ಆಜ್ಯ ತ್ರಿ ರೂಪದಲ್ಲಿ ಗೋವುಗಳಲ್ಲಿ ಇಡಲ್ಪಟ್ಟಿದೆ. ದೇವತೆಗಳು ಇದನ್ನು ಪಡೆದರು. ದೇವತೆಗಳನ್ನು ಯಜ್ಞಕ್ಕೆ ಕರೆತರುವವನು. ದೇವತೆಗಳನ್ನು ತಿಳಿದವನು. ದೇವತೆಗಳ ಮಧ್ಯೆಯೇ ಇರುವವನು. ದ್ಯಾವ ಪೃಥ್ವಿಗಳಿಗೆ ಪ್ರಭು. ಸರ್ವತ್ರ ಸಂಚಾರಿ. ದ್ಯಾವಾ ಪೃಥ್ವಿಗಳು ನಮಗೆ ಅನುಕೂಲಕರವಾಗಿರುತ್ತವೆ. ದ್ಯುಲೋಕವು ಅಗ್ನಿಗೆ ಜನಕನೂ, ಪಾಲಕನೂ ಆಗಿದ್ದಾನೆ. ದೇವ ಮಾತೆಯಂತಿದ್ದು ಹವಿರೂಪ ಅನ್ನ ಸ್ವೀಕರಿಸುತ್ತಾನೆ. ದೇವತೆಗಳ ಹವಿರ್ವಾಹಕ. ದೇವತೆಗಳ ಸಾನ್ನಿಧ್ಯ ಅಪೇಕ್ಷಿಸುವವನು. ದೇವಪತ್ನಿಯರನ್ನು ಪೂಜಿಸುವವನು. ದೇವತೆಗಳ ಅಂತರಿಕ್ಷ ಆರೋಹಣ ಸ್ಥಾನ ತಿಳಿದವನು. ದೇವತೆಗಳನ್ನು ತೃಪ್ತಿಗೊಳಿಸುವ ಜಿಹ್ವೆವುಳ್ಳವನು. ಪ್ರಜೆಗಳ ಸ್ವಾಮಿ, ಪ್ರಜ್ವಲಿತ ತೀಕ್ಷ್ಣ ಜ್ವಾಲೆಯವನು, ಪ್ರಾಯದವನು, ಪಾಪ ನಾಶ ಮಾಡಿಯೇ ತೀರುತ್ತಾನೆ.

ಅಗ್ನಿಯು ವೃಕ್ಷಗಳಲ್ಲಿ ದಾವಾನಲಾಗ್ನಿ ರೂಪದಲ್ಲಿದ್ದಾನೆ. ವೃಷ್ಟಿ ಸುರಿಸುವವನು, ವರುಣನು ಅಗ್ನಿಯ ಭ್ರಾತೃಸ್ವರೂಪ, ವೇದ ರೂಪಿ. ಶ್ರೇಷ್ಠಫಲದಾತ, ಶ್ರೇಷ್ಠ ನಡಿಗೆಯವನು, ಶತ್ರು ಪ್ರತಿಭಟನಾ ಸಾಧನ ರಥದಲ್ಲಿ ಇರುವ ಅಗ್ನಿಯನ್ನು ಪ್ರತಿಭಟಿಸಲು ಅಸುರರಿಗೂ ಅಸಾಧ್ಯ. ಸಕಲರ ಪೋಷಕ, ಸಕಲ ಕರ್ಮ ಪ್ರೇರಕ, ಸುಖಕ್ಕೆ ಆಧಾರಭೂತ, ಸ್ವರ್ಗಕ್ಕೆ ಕರೆದೊಯ್ಯುವವನು. ಸಕಲ ಭೂತ ಜಾತಗಳು ಅಗ್ನಿಯನ್ನು ಸಮೀಪಿಸುತ್ತವೆ. ಸಕಲರೂ ಇಚ್ಛಿಸುವವನಾಗಿದ್ದಾನೆ, ಸಕಲರಿಗೂ ನಿವಾಸದಾಯಕನಾಗಿದ್ದಾನೆ. ಸಜ್ಜನರಿಗೆ ಕಲ್ಯಾಣಾತ್ಮಕನಾಗಿದ್ದಾನೆ. ಸಕಲ ಪ್ರಜೆಗಳಿಗೂ ಈಶ್ವರ, ಸಮಿತ್ತುಗಳಿಂದ ಪ್ರಜ್ವಲಿಸುವವನು, ಸಮಸ್ತ ದೇವತೆಗಳಿಗೂ ದೂತ, ಸ್ವರ್ಣ ಆಭರಣಗಳಂತೆ ಪ್ರಕಾಶಮಾನಿ, ಸ್ತುತಿಸುವ ಸಜ್ಜನರಿಗೆ ಯಾಗಾದಿ ಕರ್ಮಗಳ ಮೂಲಕ ಸ್ವರ್ಗ ಮಾರ್ಗ ತೆಗೆಸುತ್ತಾನೆ. ಸೋಮವು ಹಿಂಡಲ್ಪಟ್ಟಲ್ಲೆಲ್ಲ ಘೃತ ಧಾರೆಗಳು ಅಗ್ನಿಯನ್ನು ಸೇರುತ್ತವೆ. ಸವನ ತ್ರಯ ರೂಪಿ.

ಹೋಮ ಸಂಪಾದಕ, ಹವಿರ್ದಾನದಿಂದ ತೃಪ್ತನಾಗಿ ಯಜ್ಞಕಾರ್ಯ ನಿರತನಾಗಿರುತ್ತಾನೆ. ಅಂತರಿಕ್ಷದಲ್ಲಿ ಧೂಮ, ಮೇಲ್ಮುಖ ಪ್ರಕಾಶ ಹೊಂದಿದ್ದಾನೆ. ಅಂತರಿಕ್ಷ, ದ್ಯಾವಾ, ಪೃಥ್ವಿಗಳನ್ನು ಅರಿತಿದ್ದಾನೆ.

## ವಿಶ್ವಾಮಿತ್ರರು – ಮಂಡಲ ಮೂರು – ಅಗ್ನಿದೇವರು

ಅಗ್ನಿಯು ಆಜ್ಯ ಪೋಷಿತ. ಅನುಗ್ರಹಾತ್ಮಕ, ಅಪ್ರತಿಹತ ಸೌಭಾಗ್ಯದವನು. ಆರಣಿಯಿಂದ ದರ್ಶನೀಯ. ಅಗ್ನಿ ಓಷಧಿ ವೃಷ್ಟಿದಾತ. ಅಗ್ನಿಯು ಪ್ರಕಾಶಾತ್ಮಕ, ದೇವಸಖ, ಅನುಗ್ರಹಾತ್ಮ, ಆಹ್ಲಾದಕರ, ★ದೇವತೆಗಳ ಜನ್ಮ ರಹಸ್ಯ, ತಿಳಿದವನು. ಆದಿತ್ಯ ಪ್ರಭಾವ, ರಶ್ಮಿ ಅನುಸರಿಸಿ ಉಷಸ್ಸಿನ ಪ್ರಭಾವ ಆವಿರ್ಭಾವ ತಿಳಿದು ಪ್ರಕಾಶಿತನಾಗಿ ಸೂರ್ಯ ರೂಪದಲ್ಲಿ ಬೆಳಗುತ್ತಾನೆ. ಅಂತರಿಕ್ಷದಲ್ಲಿ ಹೋತೃ

ಅಗ್ನಿಯು ಯಜ್ಞರಕ್ಷಕ, ದ್ಯಾವ, ಪೃಥ್ವಿಗಳನ್ನು ವಿನೂತನ ಮಾಡುತ್ತಾ ಅವುಗಳ ನಡುವೆ ವೃದ್ಧಿಸುತ್ತಾನೆ. ಅಚಲ ಚಿತ್ತದ ಅಗ್ನಿಯು ಅರಣ್ಯ ಮತ್ತು ಓಷಧಿಗಳನ್ನು ದಹಿಸುವಾಗ ಸೂರ್ಯನಿಗಿಂತ ಪ್ರಕಾಶಮಾನನಾಗುತ್ತಾನೆ. ಅಗ್ನಿಯು ತ್ವಷ್ಟಪುತ್ರ, ಅಸಂಖ್ಯಾತ ಜ್ವಾಲೆಯುಳ್ಳವನು. ★ಅಗ್ನಿಯ ಅಶ್ವಗಳು 'ಒಡವನಾಮಕ' ಅವಿಶ್ರಾಂತ ಗಮನಕ್ಕೆ ಬೇಕಾದ ಪುಷ್ಟಿಗಳಿಸಲು ಪೂರ್ವಭಾವಿಯಾಗಿ ವಿಶ್ರಾಂತಿ ಪಡೆಯುತ್ತಿವೆ. ಅಗ್ನಿಯೊಂದಿಗೆ ದ್ಯಾವ ಪೃಥ್ವಿಗಳು ಸಹಕರಿಸುತ್ತವೆ. ಅಗ್ನಿ ಸ್ತುತಿತನಾದಾಗ ಸಂತೋಷಗೊಳ್ಳುತ್ತಾನೆ. ಅಗ್ನಿ ಉಪದ್ರವ ರಹಿತ. ಒಳ್ಳೆಯ ದಾನಿ, ಅಗ್ನಿಯು ಯಜ್ಞವನ್ನು ಸರ್ವ ವಿಧದಿಂದಲೂ ರಕ್ಷಿಸುವವನು, ಸಮಸ್ತ ಪದಾರ್ಥಗಳ ವಿಷಯ ಜ್ಞಾನಿ, ಸಮಸ್ತ ಪ್ರಜೆಗಳಿಗೆ ಅಧಿಪತಿ, ಜನರಿಂದ ಸ್ತುತಿತನಾದವನು.

★ಅಗ್ನಿಯ ಗೃಹ ಯಜ್ಞ ಗೃಹವೇ ಆಗಿರುತ್ತದೆ. ಅಗ್ನಿ ಸಪ್ತ ಹೋತೃಗಳಿಂದ ಆಜ್ಯ, ಆಹುತಿ ಸ್ವೀಕರಿಸಿ ಯಾಗ ರಕ್ಷಕನಾಗಿದ್ದು (ಅಗ್ನಿಷ್ಟೋಮ) ಯಾಗದಲ್ಲಿ ಹೋತೃವಾಗಿರುತ್ತಾನೆ. ಜ್ಯೋತಿಷ್ಟೋಮ ಯಾಗ ನಿಯಾಮಕ. ಅಗ್ನಿಯು ದೇವತೆಗಳನ್ನೂ, ಜ್ಞಾನಿಗಳನ್ನೂ ಯಜ್ಞಕ್ಕೆ ಕರೆತರುತ್ತಾನೆ. ಅಗ್ನಿಯು ಸಕಲವನ್ನು ಜೀರ್ಣಿಸಿಕೊಳ್ಳುತ್ತಾನೆ. ಶುಭಾಶುಭ ಕರ್ಮಗಳನ್ನು ನೋಡುತ್ತಾ ಎಲ್ಲವನ್ನೂ ಅದರದರ ಸ್ಥಾನಗಳಲ್ಲಿ ಇಡುವವನಾಗಿದ್ದಾನೆ. ಸಕಲ ಜಗತ್ ವ್ಯಾಪಕ, ದೇವತೆಗಳ ಅನ್ನಕ್ಕೆ ಅಮೃತನಾಭಿ ಸ್ಥಾನಿ, ಇಂದ್ರಾದಿಗಳಿಗೆ ಹವಿರ್ದೂತ, ಆಜ್ಯ ಸೋಮಗಳಿಂದ ಪ್ರಜ್ವಲಿತ, ಅಗ್ನಿ ಒಳ್ಳೆಯ ಗುಣವಂತ, ಭ್ರಾಂತನಲ್ಲದವನು. ಅನೇಕ ದೇವತೆಗಳ ತೇಜಸ್ಸು ಅಗ್ನಿಯಲ್ಲಿದೆ. ಅಸುರ ಶಕ್ತಿಯನ್ನು ನಾಶಮಾಡಿ ಯಜ್ಞವನ್ನು ಪಾಲಿಸುತ್ತಾನೆ. ಅಡೆತಡೆ ಇಲ್ಲದೆ ಪ್ರಸರಿಸುವವನು. ಉತ್ತರ ವೇದಿಕೆಯಲ್ಲಿರುವವನು. ತನ್ನ ಉತ್ಪನ್ನ ಕ್ರಮವನ್ನು ತಿಳಿದಿದ್ದಾನೆ.

★ ಅಗ್ನಿ – ಪ್ರಾಣಾಗ್ನಿ – ಆದಿತ್ಯ ಹವಿಸ್ಸು ಮೂರೂ ಅಗ್ನಿಯೇ. ಶ್ರವಣ – ಮನನ – ಅಂತಃಕರಣಗಳಿಂದ ತನ್ನ ತೇಜಸ್ಸನ್ನೇ ಅರ್ಥಮಾಡಿಕೊಂಡು ತನ್ನ ಆತ್ಮಸ್ವರೂಪವನ್ನು (1) ಅಗ್ನಿ (2) ವಾಯು (3) ಸೂರ್ಯ ತತ್ವಗಳಿಂದ ರಮಣೀಯವಾಗಿ ಶುದ್ಧಮಾಡಿಕೊಂಡಿದ್ದಾನೆ. ಅಗ್ನಿಯು ಉತ್ತಮ ಕರ್ಮ ಫಲದಾತ, ಮೇಧಾವಿ, ಹವಿಸ್ಸಿನಿಂದ ದೇವತೆಗಳನ್ನೂ ರಕ್ಷಿಸುತ್ತಾನೆ. ★ ಅಗ್ನಿಯು ಆರಣಿಯಲ್ಲಿ ಗರ್ಭಸ್ಥನಾಗಿದ್ದಾಗ (1) ತನೂನಪಾತ್ ಎಂದೂ (2) ಪ್ರತ್ಯಕ್ಷನಾದಾಗ 'ನರಾಂಶ' ಎಂದೂ (3) ಅಂತರಿಕ್ಷದಲ್ಲಿ ಪ್ರಜ್ವಲಿತನಾದಾಗ 'ಮಾತರಿಷ್ವ' ಎಂದೂ ಪ್ರಸಿದ್ಧನಾಗಿದ್ದಾನೆ. ಅಗ್ನಿ ಸಂಚಾರ ಕಾಲದಲ್ಲಿ ವಾಯು ಉತ್ಪನ್ನವಾಯಿತು.

ಆಹವನೀಯ ಪ್ರಭೇದ ಅಗ್ನಿ, ಸಪ್ತ ಜಿಹ್ವೆಯವನು. ಆರಣಿಗಳಿಂದ ಕಡೆಯಲ್ಪಟ್ಟು 'ಗಾರ್ಹಪತ್ಯ' ಕುಂಡಗಳಲ್ಲಿ ಇಡಲ್ಪಟ್ಟವನು. ಅಹವನೀಯ ಸ್ಥಾನದಲ್ಲಿದ್ದಾನೆ. ಆಹುತಿಗಳಿಂದ ಪ್ರಜ್ವಲಿತನಾಗುತ್ತಾನೆ. ಉದಕವಾಹಕ ನದಿಗಳನ್ನು ಆಶ್ರಯಿಸಿದ್ದಾನೆ. ಉತ್ಪನ್ನವಾದ ಸಕಲ ವಸ್ತು ಜ್ಞಾನವುಳ್ಳವನು. ಎಲ್ಲರಿಂದ ಅಪೇಕ್ಷಿತ, ಸತ್ಯ ಸಾಧಿಸುವವನು, ಎಲ್ಲರಿಂದಲೂ ನೋಡಲ್ಪಡುವವನು. ಅಂತರಿಕ್ಷವ್ಯಾಪಿ, ಓಷಧಿ ವೃಷ್ಟಿದಾತ, ರೋಹಿತ ವರ್ಣದ ಜ್ವಾಲೆಗಳನ್ನು ವಾಹನದಂತೆ ಹೊಂದಿದ್ದಾನೆ. ಕಟ್ಟಿಗೆಯನ್ನು ಒಂದರ ಮೇಲೊಂದು ಆರಣಿ ಸೇರಿಸಿದಾಗ ತಮಸ್ಸನ್ನು ನಾಶಮಾಡಿ ತೇಜೋಮಯನಾಗುತ್ತಾನೆ. ಗವಾದಿ ಸಂಪತ್ ಫಲದಾಯಕ, ಗರ್ಭಸ್ಥ ಶಿಶುವಿನಂತೆ ರಕ್ಷಕ. ಚಿರಂತನ, ದೇವತೆಗಳು ಹವಿರ್ವಾಹನಕ್ಕಾಗಿ ಉದಕದಲ್ಲಿರುವ ಅಗ್ನಿಯನ್ನು ಸಮೀಪಿಸಿ ಆಹ್ವಾನಿಸಿದ್ದಾರೆ. ತಂದೆ ತಾಯಿಗಳಾದ ದ್ಯಾವಾ

ಪೃಥ್ವಿಗಳ ಮಧ್ಯೆ ಸಂಚರಿಸುತ್ತಾನೆ. ದ್ಯಾವ ಪೃಥ್ವಿಗಳು ಮಾತಾ ಪಿತೃಗಳು, ಧರ್ಮ ವಿಷಯವನ್ನು ಅರಿತವನು, ಧನ ಸಂಪತ್ತುಗಳಿಗೂ ಒಡೆಯ. ನಮ್ಮನ್ನು ಪಾಪಗಳಿಂದ ದಾಟಿಸುತ್ತಾನೆ. ಪರಾಕ್ರಮಿ, ವೃಷ್ಟಿಯ ಮೂಲಕ ಉದಕ ಕರೆಯುತ್ತಾನೆ. ಪಶು ಪುತ್ರರಿಗೆ ಒಡೆಯ. ಪುರೋಡಾಶ ಇಚ್ಛಿಸುತ್ತಾನೆ. ಪ್ರಜ್ವಲಿತನಾಗುತ್ತಾನೆ. ಯಜ್ಞದಿಂದ ತೃಪ್ತನಾಗುತ್ತಾನೆ. ಮರುತ್ ಗಣ, ವರುಣ, ವಾಯು, ನದಿ, ಪರ್ವತ, ಅಧ್ವರ್ಯು ಪ್ರೇರಕ. ಮಹಾ ಅರಣ್ಯಗಳು ''ದಾವಾನಲಾಗ್ನಿ'' ಯಿಂದ ಸುಡಲ್ಪಡುತ್ತಿದ್ದರೂ, ಅಗ್ನಿಯು ಜರಾರಹಿತ. ಮನ, ವಾಕ್, ಕರ್ಮಗಳಿಂದ ಐಕ್ಯತೆ ಮೂಡಿಸುತ್ತಾನೆ. ಯಜಮಾನನನ್ನು ಶುದ್ಧಿಗೊಳಿಸಿ ಅನ್ನ ಸಂಪತ್ತನ್ನು ಕೊಡುತ್ತಾನೆ. ಯಜ್ಞಕರ್ತರಿಂದ ಇಚ್ಛಿತನಾದೊಡನೆಯೇ ದ್ಯಾವಾ, ಪೃಥ್ವಿ ಅಂತರಿಕ್ಷ ವ್ಯಾಪ್ತನಾಗುತ್ತಾನೆ. ಯಜ್ಞ ಕರ್ಮ ತಿಳಿದವನಾಗಿರುತ್ತಾನೆ. ವ್ಯಯವಾದಷ್ಟು ಧನ ವೃದ್ಧಿಯಾಗುತ್ತದೆ. ವಿದ್ಯುತ್ ರಥದವನು, ವಿಷಯಾಸಕ್ತನಲ್ಲದವನು, ★ವಿಶೇಷವಾಗಿ ಭೂಮಿಯಲ್ಲಿ ಸ್ಥಾಪಿತನಾಗಿದ್ದಾನೆ. ಶ್ರೇಷ್ಟ ಧನವನ್ನು ಅನುಗ್ರಹಿಸುತ್ತಾನೆ. ಶುದ್ಧ ಕರ್ಮಿ, ಸಮಸ್ತ ಸೇನೆಯನ್ನು ಸ್ವ ಸಾಮರ್ಥ್ಯದಿಂದ ತಿರಸ್ಕರಿಸುತ್ತಾನೆ. ಸರ್ವ ಪ್ರೇರಕ ಹಾಗೂ ಮಾರ್ಗದರ್ಶಕ, ಸಕಲವನ್ನು ಜೀರ್ಣಿಸಿಕೊಳ್ಳುತ್ತಾನೆ. ಸ್ತುತಿಕರ್ತರ ಪರಾಧೀನನಾಗಿರುತ್ತಾನೆ. ಸ್ವತೇಜಸ್ಸಿನಿಂದ ಲೋಕ ರಕ್ಷಣಾರ್ಥವಾಗಿ ಎಚ್ಚರನಾಗಿರುತ್ತಾನೆ. ಸಕಲರ ಮನಸ್ಸನ್ನು ಸೆಳೆಯುವವನಾಗಿದ್ದಾನೆ.

★ ಜ್ವಾಲಾರೂಪಿ, ಕೇಶಧಾರಿ, ಸ್ತೋತ್ರಗಳಿಗೆ ಆನಂದದಾಯಕ, ಜ್ಯೋತಿಷ್ಟೋಮ ಯಜ್ಞದಲ್ಲಿ ಪ್ರಕಾಶಿಸುತ್ತಾನೆ,

**ಮಂಡಲ ಐದು ಅತ್ರಿ ಋಷಿಗಳು:**

ಅಗ್ನಿಯು ಆಸೀನನಾಗಲಿ, ಅತಿಶಯ ಪ್ರಕಾಶಿ, ಅಂಧಕಾರ ಮುಕ್ತನಾಗಿ ಸರ್ವರಿಗೂ ಗೋಚರನಾಗುತ್ತಾನೆ. ಅಸುರರು, ಭಾದೆ ಉಂಟುಮಾಡುವ ಶತ್ರುಗಳು ಅಗ್ನಿಯ ರಶ್ಮಿಯನ್ನು ತಡೆಯಲಾರರು. ಅಗ್ನಿಯು ಯಜಮಾನನ ಕಷ್ಟಗಳನ್ನು ಅರಿತವನು. ಅಗ್ನಿಯು ಶತ್ರು ಧನ ಶೇಖರಿಸುತ್ತಾನೆ. ಅತ್ರಿ ವಂಶಸ್ತ ವ್ಯನನು ಅತ್ಯಧಿಕವಾಗಿ ಅಗ್ನಿಯನ್ನು ಸ್ತುತಿಸುತ್ತಾನೆ. ಅಗ್ನಿಯು ಸಹಸ್ರ ಕಂಬಗಳಿಗೆ ಬಂಧಿತನಾಗಿದ್ದ ಶುನಃಶ್ಯೇಪನನ್ನು ಬಂಧನದಿಂದ ಬಿಡಿಸಿದನು. ಅಗ್ನಿಯಲ್ಲಿ ದೇವತೆಗಳೂ ಅಂತರ್ಗತರಾಗಿರುತ್ತಾರೆ. ಅಗ್ನಿಯು ಆಜ್ಯೋಪೇತ. ಅಶ್ವ ಗೋವು ಎಲ್ಲವು ಅಗ್ನಿಯನ್ನು ಸೇವಿಸುತ್ತವೆ. ಅನ್ನಕ್ಕೆ ರುಚಿ ಕೊಡುವವನು ಅಗ್ನಿಯೇ. ಅಗ್ನಿಗೆ ಅರ್ಪಿತವಾದ ಧ್ಯಾನಾತ್ಮಕ ಸ್ತುತಿಗಳು ಇತರ ದೇವತೆಗಳಿಂದ ಅಪಹರಿಸಲಾರವು. ಅಗ್ನಿ ಬಲು ಅನ್ನವಂತ, ಅನೇಕರಿಂದ ಆಹ್ವಾನಿತ, ಅತಿಥಿ, ಪೂಜ್ಯ. ಅಗ್ನಿಯು ಆಂಗೀರಸ ಪುತ್ರ, ಆಂಗೀರಾ ರೂಪಿ. ಅಗ್ನಿಯನ್ನು ಪುರಾತನ ಯಜ್ಞಕಾಮಿಗಳಾದ ಋಷಿಗಳು ಸ್ತೋತ್ರಗಳಿಂದ, ನಮಸ್ಕಾರಗಳಿಂದ ಸಮೀಪಿಸಿ ಸ್ವಾಗತಿಸಿದ್ದಾರೆ. ಅಗ್ನಿಯು ದೇವತೆಗಳಿಗೆ ಹವಿಸ್ಸು ಒಯ್ಯುವವನಾಗಿ ಆಹುತಿ ಅರಿತವನಾಗಿ ಯಜ್ಞಗೃಹ ಪಾಲಕನಾಗಿದ್ದಾನೆ.

ಅನ್ನ, ಆಹಾರ ವೃದ್ಧಿಗೊಂಡು ಪೃಥ್ವಿಯ ಎಲ್ಲಾ ಆಹಾರಗಳಿಗೆ ಅಗ್ನಿ ಪ್ರಭುವಾಗಿದ್ದಾನೆ. ಅಗ್ನಿಯು ಅಶ್ವರೂಪ ಧನ ಕೊಟ್ಟು ಶತ್ರು ನಾಶ ಮಾಡಿದ್ದಾನೆ. ಅನ್ನ, ಧನಕ್ಕೆ, ಯಜಮಾನರಿಗೆ ಮಾರ್ಗದರ್ಶನ ಮಾಡುತ್ತಾನೆ. ಅಗ್ನಿ ಮಾನವ ಕುಲದಲ್ಲಿ ಪ್ರಪಂಚದಲ್ಲಿ ಅತ್ಯಂತ ಪೂಜ್ಯ. ಅಗ್ನಿ ಉತ್ಪನ್ನನಾದೊಡನೆಯೇ ಅಂಧಕಾರ ಓಡಿಸಿ ಗೋವು, ಆದಿತ್ಯ, ಉದಕಗಳನ್ನು ಪ್ರಕಾಶಗೊಳಿಸುತ್ತಾನೆ. ಅಗ್ನಿ ಪ್ರಭೆಯಿಂದಲೇ ಆದಿತ್ಯನು ಪ್ರಭಾಯುಕ್ತನಾಗಿದ್ದಾನೆ. ಅಗ್ನಿಯು ಶತ್ರು ಹಿಂಸೆಗೆ ಒಳಗಾಗದವನು. ಅರಣ್ಯದಲ್ಲಿ ಕ್ರೀಡಿಸುತ್ತಾ ವಾಯುವಿನಿಂದ ಎಲ್ಲರಿಗೂ ಕಾಣಿಸಿಕೊಳ್ಳುತ್ತಾನೆ, ಯಜ್ಞಾಭಿಮುಖನಾಗುತ್ತಾನೆ. ಅಗ್ನಿಗೆ ಅರ್ಪಿಸಿದ ಧ್ಯಾನಾತ್ಮಕ ಸ್ತುತಿಯು ಇತರರಿಂದ ಅಪಹರಿಸಲಾರವು. ಘೃತದಿಂದ ಪ್ರಜ್ವಲಿತನಾಗುತ್ತಾನೆ. ತೃಪ್ತಿ ಹೊಂದುತ್ತಾನೆ. ಅಗ್ನಿ ಯಜ್ಞದಲ್ಲಿ ಅತ್ಯಂತ ಪೂಜ್ಯ, ಮಂಗಳಕರ. ಆಹುತಿಗಳಿಂದ ಸೇವಿಸಲ್ಪಡುತ್ತಾನೆ. ಆಹವನೀಯ ಅಗ್ನಿ ಸ್ವರೂಪಿ, ಆಹಾರಗಳಿಗೆ ಪ್ರಭು. ಇತರ ದೇವತೆಗಳಿಂದಲೂ ಪ್ರಶಂಸಿತನಾಗುತ್ತಾನೆ. ಇಂದ್ರನೊಂದಿಗೆ ಒಂದೇ ರಥಾರೂಢನಾಗಿ ಇರುವವನು. ಇಷ್ಟಾರ್ಥ ಪ್ರದ.

ಉಷ:ಕಾಲದಲ್ಲಿ ಯಜ್ಞವೇದಿಕೆಯಲ್ಲಿ ಉತ್ಪನ್ನನಾಗುತ್ತಾನೆ. ಉತ್ತಮ ಮನಸ್ಸಿನಿಂದ ದೇವತೆಗಳಿಗಾಗಿ ಯಜ್ಞ ಮಾಡಿದಾಗ ತನ್ನ ಶಕ್ತಿ ಪ್ರದರ್ಶಿಸುತ್ತಾನೆ. ಉತ್ಪನ್ನವಾದ ಸಕಲವನ್ನು ಬಲ್ಲವನು. ಋಷಿಗಳಿಂದ ಪ್ರಶಂಸಿತ. ಋಷಿಗಳು ಸ್ತೋತ್ರಗಳಿಂದ, ನಮಸ್ಕಾರಗಳಿಂದ ಸಮೀಪಿಸಿ ಸ್ಥಾಪಿಸಿದ್ದಾರೆ. ಋಷಿಗಳಿಗೆ ಧ್ಯಾನ ಪ್ರಚೋದಕ. ಋತ್ವಿಜರೊಡನೆ ಸಮಾನ ಭಕ್ತಿಯಿಂದ, ಪ್ರೀತಿಯಿಂದ ದರ್ಭಾಸನ ನೀಡಿ ಸ್ತುತಿಸುತ್ತಾರೆ. ಎಚ್ಚರನಾಗಿಯೇ ಇರುವವನು. ಎಲ್ಲರಿಂದಲೂ ಪ್ರೀತಿ ಪಾತ್ರ. ಮಂಗಳ ಜ್ವಾಲೆಯವನು, ಕಾಂತಿಯುತ, ಮರುತ್‌ಗಳು ಅಂತರಿಕ್ಷವನ್ನು ಶುದ್ಧಿ ಮಾಡುತ್ತವೆ. ಅಗ್ನಿಯು ಯಾಗ ಫಲದಾಯಕ, ಯಜ್ಞಾಗ್ನಿ ಯಜ್ಞವನ್ನು ಪೋಷಿಸುತ್ತಾನೆ. ಯಜಮಾನನ ಕ್ಷೇಮಕ್ಕಾಗಿ ವೃದ್ಧಿಸುತ್ತಾನೆ. ಯಜ್ಞ ನಿರ್ವಹಿಸುವವನು ಎಂದೇ ಅಗ್ನಿಯನ್ನು ಪೂಜಿಸುತ್ತಾನೆ. ಯಜಮಾನನ ಧನಕ್ಕೆಲ್ಲ ಸ್ವಾಮಿ. ರುದ್ರನಂತಿರುವ ಅಗ್ನಿ ಮನೋಹರ ಪ್ರಕಾಶಮಾನನಾಗಿದ್ದಾನೆ. ರಶ್ಮಿಗಳನ್ನು ಧರಿಸಿದ್ದಾನೆ. ರಾತ್ರಿಯ ಕಾಲದಲ್ಲಿ ದೂರದಲ್ಲಿರುವ ಮಾನವರಿಗೆ ಚೆನ್ನಾಗಿ ತಿಳುವಳಿಕೆ ಉಂಟುಮಾಡುತ್ತಾನೆ. ರಮಣೀಯ.

ಲೌಕಿಕಾಗ್ನಿ ಧನವನ್ನು ಪೋಷಿಸುತ್ತದೆ. ಲೋಕ ಕಲ್ಯಾಣಕ್ಕಾಗಿ ದೇವತೆಗಳನ್ನು ಕರೆತರುತ್ತಾನೆ. ಲೋಕೋಪಕಾರಿ. ಯಜ್ಞ ಗೃಹದಲ್ಲಿ ದೇವತಾ ಗುಣಗಳನ್ನು ಹೇಳುವವನು ಹೋತೃ. ಕೇಡು ಬಯಸುವವರು ಚೋರರು, ಶತ್ರುಗಳು ನಾಶವಾಗುತ್ತಾರೆ. ಕೊಟ್ಟಿಗೆಯ ಗೋವುಗಳು ವಿಸ್ತಾರಗೊಳ್ಳುವುವು. ಕಾಡನ್ನು ದಹಿಸುವನು. ಕೃಷಿಕ ವಂಶಜರು ಲೋಕದಾರಕ ಯಜ್ಞದಲ್ಲಿ ಜನ್ಮ ರಹಿತರಾದ ದೇವತೆಗಳನ್ನು ಮಾನವರೊಂದಿಗೆ ಸೇರಿಸಿದರು. ಗೋಧನ, ಸಂಪದ್ಯುಕ್ತ ಅಗ್ನಿ ರಶ್ಮಿಗಳು ಅನ್ನವಂತ ವೃದ್ಧಿ ಹೊಂದುವುವು. ಗೋವುಗಳು ಹಾಲು, ತುಪ್ಪ ಒದಗಿಸುವುವು. ಗೋವುಗಳಿಂದ ಕೂಡಿದ ಅನ್ನಕ್ಕೆ ದಾತೃ, ಅಗ್ನಿ. ದೇವತೆಗಳೊಳಗೂಡಿ ಸಮೀಪದ ಯಜ್ಞಕ್ಕೆ ಬರುತ್ತಾನೆ. ದು:ಖ ಉಂಟುಮಾಡುತ್ತಿದ್ದ ಆಸುರೀ ಸ್ವಭಾವದ ದುಷ್ಟ ಶಕ್ತಿಗಳನ್ನು ಮೆಟ್ಟಿ ತುಳಿಯುತ್ತಾನೆ. ಧನದಾತೃ, ದಹಿಸುವ ಅಗ್ನಿ ದೇವತೆಗಳಿಗೆ ಹವಿಸ್ಸು ಒಯ್ಯುತ್ತಾನೆ. ತಮಸ್ಸು ಜಗತ್ತಿಗೆ ಪ್ರತಿಬಂಧಕ. ತನ್ನ ತೇಜಸ್ಸಿನಿಂದ ಅಗ್ನಿ ಜ್ವಾಲೆಗಳಿಂದ ರಾಕ್ಷಸ ನಾಶಮಾಡುತ್ತಾನೆ. ನಾನಾ ರೂಪಿನಿಂದ ಎಲ್ಲವನ್ನೂ ವ್ಯಾಪಿಸಿದ್ದಾನೆ. ಪ್ರತಿ ಯಜ್ಞದಲ್ಲೂ ಅಗ್ನಿ ಸ್ತುತಿತನಾಗುತ್ತಾನೆ. ಭೃತ್ಯರನ್ನು, ಪಶುಗಳನ್ನು ರಕ್ಷಿಸುತ್ತಾನೆ.

ವನಕಾಷ್ಟಗಳಲ್ಲಿ ಸ್ಥಾಪಿತನಾಗಿದ್ದಾನೆ. ವಿಷ್ಣುವಿನ ಮಧ್ಯದ ಪಾದದಿಂದ ಉದಕದ ರಹಸ್ಯ ಹೆಸರುಗಳನ್ನು ಅಗ್ನಿ ಪೋಷಿಸುತ್ತಾನೆ. ವಸತಿದಾಯಕ, ವಿಶೇಷ ರೀತಿಯಿಂದ ಆದರಿಸಲ್ಪಡುತ್ತಾನೆ. ಶತ್ರುಗಳನ್ನು ಪ್ರತಿಭಟಿಸುತ್ತಾನೆ. ಸ್ತೋತ್ರಗಳಿಂದ ಸಕಲ ಪಾಪಗಳನ್ನು ನಾಶಮಾಡುತ್ತಾನೆ. ಸಕಲರಿಂದಲೂ ಪೂಜ್ಯ. ಸರ್ವರಿಗೂ ಗೋಚರನಾಗುತ್ತಾನೆ. ಸಮಿತ್ತುಗಳಲ್ಲಿ ಪ್ರಜ್ವಲಿತನಾಗಿ ಮಹತ್ ಸ್ವರೂಪದಿಂದ ಉಷಾಭಿಮುಖನಾಗಿ ಅಂತರಿಕ್ಷದಲ್ಲಿ ಹರಡಿ ತನ್ನ ಮೇಲೆ ಅರ್ಪಿತವಾಗುವ ಆಜ್ಯ ಧಾರೆಯನ್ನು ಜುಹು ಪಾತ್ರೆಯಲ್ಲಿ ಪಾನ ಮಾಡುತ್ತಾ ಕಾಂತಿಯುತ ರಶ್ಮಿಗಳಿಂದ ವಿಶ್ವವನ್ನೇ ಪ್ರಕಾಶ ಮಾಡುತ್ತಾನೆ. ಸಕಲರಿಂದಲೂ ಪೂಜ್ಯ ಸಮಸ್ತವನ್ನು ತನ್ನ ಶಕ್ತಿಯಿಂದ ಮೀರಿಸುತ್ತಾನೆ. ಪೂಜಾ ಸ್ಥಾನದಲ್ಲಿದ್ದು ಪೂಜೆಯಿಂದ ತೃಪ್ತನಾಗಿ ಸಂತುಷ್ಟನಾಗಿ ಸೂರ್ಯರಶ್ಮಿಗಳೊಂದಿಗೆ, ಇಳಾದೇವಿಯೊಂದಿಗೆ ಹವಿಸ್ಸು ಮತ್ತೆ ಮತ್ತೆ ಸೇವಿಸುತ್ತಾನೆ. ಸಕಲರಿಗೂ ಗೋಚರಿಸುತ್ತಾನೆ. ಮಿತ್ರರೂಪಿ, ಸಕಲ ಯಜ್ಞಗಳು ಅಗ್ನಿಯನ್ನು ಸೇವಿಸುತ್ತವೆ. ಸ್ತುತಿ ಅರಿತವನು ಆಜ್ಯಧಾರೆ ಅರ್ಪಿಸುತ್ತಾನೆ. ಸಮಸ್ತ ಅಗ್ನಿಯನ್ನು ಸಮಾನ ಪ್ರೀತಿಯಿಂದ ಹೋತೃವಾಗಿ ಆರಿಸಿಕೊಂಡಿರುತ್ತಾರೆ. ಸ್ತುತಿಯು ಜಗತ್ ರಕ್ಷಕ ಸಾಮರ್ಥ್ಯವುಳ್ಳದ್ದು. ಹವಿರೂಪ ಅನ್ನ ಸ್ವೀಕರಿಸುವವನು, ಹವಿಸ್ಸು ಅರ್ಪಿಸುವವರು ಸಂಪತ್ ಪಡೆದರೂ ಅವರಿಗೆ ಅಧಿಕ ಬಲ ಇರುವುದಿಲ್ಲ. ಅಂಧಕಾರ ಮುಕ್ತನಾಗಿ ಉದಯ ಕಾಲದಲ್ಲಿ ಉತ್ಕೃಷ್ಟ ವರ್ಣದಿಂದ ಗೋಚರಿಸುತ್ತಾನೆ. ಅಂತರಿಕ್ಷ ಮುಟ್ಟುವ ತೇಜಸ್ವಿ

## ಮಂಡಲ 6 - ಭರಧ್ವಾಜರ ಪರಂಪರೆ

ಅಗ್ನಿಯು ಪೂಜ್ಯ, ಅನ್ನ ಒದಗಿಸುವವನು, ಅತಿಶಯ ಯಜ್ಞನಿರ್ವಾಹಕ, ದೇವತಾತ್ಮ, ಪ್ರಕಾಶಮಾನಿ, ತೇಜಸ್ವಿ ರಾತ್ರಿ ಸಂಚಾರಿ, ವೇಗ ಸಂಚಾರಿ, ಅಸುರ ಪಟ್ಟಣಗಳನ್ನು ಪೂರ್ಣ ನಾಶಮಾಡುವವನು. ಅಗ್ನಿಯು ಇಂದ್ರನಂತೆ ನರಶ್ರೇಷ್ಟ, ಸೂರ್ಯನಂತೆ ಪ್ರಕಾಶಮಾನಿ. ಜಾತೋವೇದೋರೂಪಿ. ಅಶ್ವಮುಖದಂತೆ ಕಾಂತಿಯುತ, ಹೋತೃರೂಪಿ, ಅತಿಥಿರೂಪಿ, ಧನವಂತ. ರಾತ್ರಿಯ ಅಂಧಕಾರ ಕಳೆಯುವವನು, ಜ್ಞಾನಿ, ಅನ್ನದಾತ, ಹವಿರೂಪ ಅನ್ನ ಭಕ್ಷಕ. ಅರಣ್ಯದಲ್ಲಿ ತರು- ಗುಲ್ಮಾದಿಗಳನ್ನು ವೃಕ್ಷಗಳನ್ನು ದಹಿಸಿ ಕಪ್ಪಾಗಿಸುತ್ತಾನೆ. ಅಧಿಕ ಶಬ್ದ ಮಾಡುತ್ತಾನೆ ಅತಿ ಯುವಕ. ದೇವಲೋಕ ಉತ್ಪನ್ನ, ಅನೇಕ ಓಷಧಿಗಳನ್ನು ದಹಿಸುವವನು, ಅಗ್ನಿ ಜ್ವಾಲೆಗಳು ಭಯಂಕರ ವೃಕ್ಷಗಳನ ದಹಿಸುತ್ತವೆ. ಅಗ್ನಿ ಅನುಗ್ರಹದಿಂದ ಹವಿಸ್ಸು ಹೊಂದಿರುವವರು ಉತ್ಪನ್ನರಾಗುತ್ತಾರೆ. ಅಂತರಿಕ್ಷದಲ್ಲಿ ತೇಜೋಮಂಡ ನಿರ್ಮಿಸಿದವನು ಅಗ್ನಿಯೇ. ಅನೇಕ ಜ್ವಾಲೆಗಳುಳ್ಳವನು, ಅಗ್ನಿಯು ಮೇಧಾವಿ, ಅನ್ನವಂತರನ್ನಾಗಿ ಮಾಡುತ್ತಾನೆ ಅತ್ಯಂತ ಪೂಜ್ಯ, ಆರಣ್ಯದಲ್ಲಿ ದಾವಾನಲ ರೂಪಿನಲ್ಲಿದ್ದಾನೆ. ಅಂತರಿಕ್ಷದಲ್ಲಿ ಸೂರ್ಯನಂತೆ ತೇಜಸ್ಸು ಹರಡುತ್ತಾನೆ ಅಗ್ನಿಯು ಪೂಜ್ಯ, ದೇವತಾತ್ಮ, ಆಕರ್ಷಕ, ಅಂತರಿಕ್ಷ ವೃಷ್ಟಿ ಸುರಿಸುತ್ತಾನೆ. ವಾಯುವಿನಂತೆ ಸರ್ವ ವ್ಯಾಪಿ. ಅಸುರ ಅನ್ನವನ್ನು ಕಸಿದುಕೊಳ್ಳುವಂತೆ ಮಾಡುತ್ತಾನೆ.

ಆಹ್ಲಾದಕಾರಕ, ಆಕರ್ಷಕ ಕಾಂತಿಯುತ. ಇವರನ್ನು ಯಾರೂ ತಡೆಯಲಾರರು. ಉಷಕಾಲದ ಪ್ರವರ್ದ್ಧನಾಗುವನು. ಉಗ್ರವಾಗಿ ದಹಿಸುವವನು, ಉದಕವು ಇವರ ಅನುಗ್ರಹದಿಂದಲೇ. ಉತ್ಪನ್ನನಾದೊಡನೆಯೆ ತನ್ನ ಪ್ರಭೆಯಿಂದ ದ್ಯಾವಾ ಪೃಥ್ವಿಗಳನ್ನು ನೋಡಲು ಅನುವು ಮಾಡಿಕೊಡುತ್ತಾನೆ. ಉತ್ತಮ ಜ್ಞಾನಿ, ಉದಕ ಪ್ರೇರ ಉದಕ ಪಾಲಕ. ಉತ್ತಮ ಸ್ಥಾನ ನೀಡುತ್ತಾನೆ. ಊರ್ಧ್ವ ಭಾಗದಲ್ಲಿ ಮೇಘ ರೂಪದಲ್ಲಿ, ಧೂಮದಲ್ಲಿ ಸಕ ಉದಕಗಳೂ ನೆಲಸಿವೆ. ಎಲ್ಲರ ಮನಸ್ಸನ್ನು ಆಕರ್ಷಿಸುವವನು. ಎಲ್ಲಾ ದೇವತೆಗಳಿಗೂ ಪ್ರಧಾನ. ಎಲ್ಲವನ್ನು ದಹಿಸು ಸೂರ್ಯನಂತೆ ಜ್ವಾಲೆಯ ಮೂಲಕ ತೀವ್ರ ಪ್ರಸ್ಫರಿಸುತ್ತಾನೆ. ಎಲ್ಲವನ್ನು ನೋಡುತ್ತಾನೆ. ಮಂಗಳಾತ್ಮಕ, ಮರ ಧರ್ಮ ರಹಿತಿ, ಮಥನದಿಂದ ಆವಿರ್ಭವಿಸಿ ಕರ್ಮ ಯುಕ್ತನಾಗಿ ಅನ್ನ ಗ್ರಾಹ್ಯನಾಗಿದ್ದಾನೆ. ಮಾನವರುಗಳ ಅವರವರ ಕಾರ್ಯ ನಿರತರಾಗಿರುವಂತೆ ಪ್ರೇರೇಪಿಸುತ್ತಾನೆ. ಮಿತ್ರನಂತೆ ಅನುಕೂಲಕಾರಿ. ಅಗ್ನಿಯು ಯಜ್ಞಗೃಹದ ಸ್ಥಾಪಿತ, ಯಜ್ಞ ಪ್ರಜ್ಞಾಪಕ, ಯಜ್ಞ ಹೋತೃ, ಯಜ್ಞದಲ್ಲಿ ಪುರೋಡಾಶ ಬಯಸುವವನು, ಹವಿಸ್ಸು ಅಪೇ ಮಿತ್ರನಂತೆ ಬರುತ್ತಾನೆ, ಹರ್ವಿರ್ವಾಹಕನಾಗಿ ಅನ್ನ ಗ್ರಾಹ್ಯನಾಗಿರುತ್ತಾನೆ. ಯಜಮಾನರನ್ನು ಯಜ್ಞವಂತರನ ಮಾಡುತ್ತಾನೆ, ಯಜ್ಞಕ್ಕೆ ದೇವತೆಗಳನ್ನು ಕರೆತರುವವನು, ಯಾಗಗೃಹ ಮಧ್ಯೆ ಸ್ಥಾಪಿತನಾಗಿರುತ್ತಾನೆ. ಯಜ್ಞಾರ್ಥ ಉತ್ಪನ್ನನಾದ ಅಗ್ನಿಯಿಂದ ಸಂಗ್ರಾಮಕ್ಕೆ ಬೇಕಾದ ಬಲ, ಪಶು, ಧನ, ಅಂತರಿಕ್ಷ ವೃಷ್ಟಿ ಸುರಿಸುತ್ತಾನೆ. ಯುದ್ಧಕ ದೇವತೆಗಳನ್ನು ಕರೆತಲ್ಲಬಲ್ಲವನು ಅಗ್ನಿ.

ರಾತ್ರಿಯ ಅಂಧಕಾರವನ್ನು ಮಾಯ ಮಾಡುತ್ತಾ ಕಪ್ಪಾದ ಮಾರ್ಗದಲ್ಲಿ ಶುದ್ಧಿ ಕಾರಕನಾಗಿ ಪ್ರಕಾಶಿಸುತ್ತಾ ರಕ್ಷಣೆ ಮಾಡುತ್ತಾನೆ, ರಾತ್ರಿಯ ಕತ್ತಲನ್ನು ಹೊರ ನೂಕುತ್ತಾನೆ. ಲೋಕ ನಿರ್ಮಿಸುವ ಕರ್ಮ ಕರ್ತರು ಇವ ಓಷಧಿಯಲ್ಲಿ ಶೀಘ್ರ ಪ್ರಸರಣವುಳ್ಳವನು. ಕಾಂತಿಯುತ, ಕರ್ಮಹೋತೃ, ಕಾಮಪೂರಿತ ಕಾಂತಿಯಿಂದ ಪ್ರಕಾ ಕಾಷ್ಟಯುಕ್ತ ಹವಿಸ್ಸು ಅಪೇಕ್ಷಿಸಿ ಮಿತ್ರನಂತೆ ಬರುತ್ತಾನೆ. ಕಾಷ್ಟ ರೂಪ ಆರಣಿಯಲ್ಲಿ ಸ್ಥಿತನಾಗಿದ್ದಾನೆ ಅಗ್ನಿ. ಕಪ ಮಾರ್ಗವುಳ್ಳವನು, ಕೇಡು ಬಯಸದವನು. ಗೋವುಗಳನ್ನು ನೀಡುತ್ತಾನೆ. ಜರಾರಹಿತ, ಜಗತ್ ರಕ್ಷಕರು, ಅ ರೂಪಿ, ಉದಕ ಪಾಲಕರು. ಧನವಂತ, ದೇವ ಪ್ರಮುಖ, ದರ್ಶನೀಯ ರೂಪಿ, ಧನಕ್ಕಾಗಿ ಪೂಜಿತ ದ್ಯಾವ ಪೃಥ್ವಿ ಪ್ರಭೆಯುಳ್ಳವನು.

ಅಗ್ನಿಯು ದೇವತಾ ಗುಣಗಳನ್ನು ಹೊಗಳುವವರಲ್ಲಿ ಶಕ್ತಿ ರೂಪದಲ್ಲಿರುತ್ತಾನೆ. ದೇವತೆಗಳನ್ನು ಯಜ್ಞದಿಂದ ಪೂಜಿಸುವವನು. ದ್ಯುಲೋಕಕ್ಕೆ ಶಿರೋ ರೂಪಿ. ದೇವ ಲೋಕೋತ್ಪನ್ನ, ದೋಷರಹಿತ, ದೇವತೆಗಳನ್ನು ಯಜ್ಞಕ್ಕೆ ಕರೆತರುವವನು, ಧನ ಪಾಲಕ, ದೇವತಾತ್ಮ ಜ್ಞಾನಯುಕ್ತ ದೇವ ಮಾನವರನ್ನು ಅನುಗ್ರಹಿಸುತ್ತಾ ದ್ಯಾವಾ ಪೃಥ್ವಿಗಳನ್ನು ವ್ಯಾಪಿಸಿ ಸಂಚರಿಸುತ್ತಾನೆ. ಧನಪ್ರದ, ಜ್ವಾಲಾರೂಪಿ, ದ್ಯುಲೋಕ ಪಾಲಕನಾಗಿದ್ದಾನೆ. ದ್ಯಾವಾಪೃಥ್ವಿಗಳಿಗೆ ಆಹ್ವಾನ ಕೊಡುವವನು ಇವನೇ. ತೀವ್ರ ತೇಜಸ್ವಿ ತ್ರಿಲೋಕ ವ್ಯಾಪಿ, ತೇಜಸ್ಸಿನಿಂದ ಪ್ರಜ್ವಲಿಸುವವನು, ತೇಜೋಮಂಡಲ ನಿರ್ಮಲ ತೇಜಸ್ಸಿನವನು. ತನ್ನ ರಶ್ಮಿಗಳಿಂದ ವನ ನಾಶಕನಾಗಿದ್ದಾನೆ. ತೃಪ್ತಿ ಹೊಂದಿದ ಅಗ್ನಿ ಎಲ್ಲವನ್ನು ಶುದ್ಧಿಗೊಳಿಸುತ್ತಾನೆ. ಪೂಜಾ ಯೋಗ್ಯ, ಪ್ರಕಾಶ ಮಾನಿ, ಪಶುರಕ್ಷಕ, ಪ್ರಜಾಪಾಲಕ, ಪೃಥ್ವಿವ್ಯಾಪಿ ಪ್ರಭೆಯುಳ್ಳವನು, ಪೂಜ್ಯ ರಶ್ಮಿಗಳಿಂದ ಕೂಡಿದವನು. ಪ್ರಸಿದ್ಧ ಪೂರ್ಣ ಪ್ರಜ್ಞೆಯುಳ್ಳವನು, ಪ್ರಕಾಶಮಾನಿ, ಪ್ರಯಾಸವೇ ಇಲ್ಲದೆ ವನವನ್ನು ಪೂರ್ಣವಾಗಿ ದಹಿಸುವವನು. ಬೃಹತ್ ರೂಪಿ. ವಸತಿ ದಾಯಕ. ವಂದನೀಯ, ವೃಕ್ಷದಲ್ಲಿ ಅಡಗಿರುವವನು, ವಾಯು ಪ್ರೇರಿತ, ವೃಷ್ಟಿಕಾರಕ, ವೈಶ್ವಾನರಾಗ್ನಿರೂಪಿ.

ಅಗ್ನಿಯು ವನ ವೃಕ್ಷಗಳನ್ನು ದಹಿಸುವವನು, ವಿಚಿತ್ರ ಬಲದವನು, ವೀರ ಯೋಧರು ಇವರ ಅನುಗ್ರಹದಿಂದಲೇ ಉತ್ಪನ್ನರಾಗುತ್ತಾರೆ. ವೃಕ್ಷಗಳಿಗೆ ಅನ್ನವಾಗಿ ವನ ಭಕ್ಷಕನಾಗಿದ್ದಾನೆ. ವನವನ್ನು ಪೂರ್ಣವಾಗಿ ದಹಿಸುತ್ತಾ ಕಂಪಿಸುತ್ತಾ ಪ್ರತಿಬಂಧಕವಿಲ್ಲದೆ ಮರುಭೂಮಿಯನ್ನೆಲ್ಲಾ ಆಕ್ರಮಿಸಿ ಪ್ರಕಾಶಿಸುತ್ತಾನೆ. ವಾಯುವಿನಂತೆ ಮರಣಧರ್ಮ ರಹಿತನಾಗಿದ್ದಾನೆ. ಮಿತ್ರನಂತೆ ಉದಕದಾತೃ.. ವೈದ್ಯುತಾಗ್ನಿಯೊಂದಿಗೆ ಕೂಡಿ ಧನಾರ್ಥ ಪ್ರೇರಿಸುತ್ತಾನೆ. ಶಕ್ತಿಯ ಪುತ್ರ, ಶುಭ್ರ ವರ್ಣದ ಧೂಮವನ್ನು ಮೇಘ ರೂಪದಲ್ಲಿ, ಅಂತರಿಕ್ಷದಲ್ಲಿ ಹರಡುತ್ತಾನೆ. ಶತ್ರು ನಾಶಮಾಡುತ್ತಾ ದ್ಯಾವಾ ಪೃಥ್ವಿಗಳನ್ನು ತೇಜೋಮಯವನ್ನಾಗಿ ಮಾಡಿದ್ದಾನೆ. ಶುಭ್ರ ವರ್ಣ, ಶಕ್ತಿಯ ಪುತ್ರ. ಶುದ್ಧಿಕಾರಕ, ಶಾಖ ರೂಪದ ಆಹವನೀಯ, ಗಾರ್ಹಪತ್ಯ ಅಗ್ನಿ ಪ್ರಜ್ವಲಿಸುತ್ತಾನೆ, ಅಗ್ನಿಯು ಶ್ರೇಷ್ಠ ಧನಿ, ಶತ್ರುವನ್ನು ಸ್ವಬಲದಿಂದ ಕೊಲ್ಲುವಂತೆ ಮೇಧಾವಿಯನ್ನಾಗಿಸುತ್ತಾನೆ. ಶತ್ರುಗಳು ಪುತ್ರರನ್ನು ನೋಡಿದೊಡನೆಯೇ ಓಡಿಹೋಗುವಂತಹ ಪರಾಕ್ರಮಿ ಪುತ್ರರನ್ನು ಕೊಡುತ್ತಾನೆ. ಶ್ರೇಷ್ಠಕರ್ಮಕರ್ತ. ಶತ್ರು ನಾಶಕ, ಶತ್ರು ಹಿಂಸಕ. ಸಕಲರಿಗೂ ಪ್ರೀತಿ ಪಾತ್ರ ಹಾಗು ಅಧಿಪತಿಯಾಗಿದ್ದಾನೆ. ಸೂರ್ಯನು ಅಗ್ನಿಯನ್ನು ಸಮೀಪಿಸುತ್ತಾನೆ. ಸುಖಾಪೇಕ್ಷೆಯಿಂದ ಕರೆದಾಗ ನೇತೃ, ಋತ್ವಿಜರು ಸಮಾನ ಪ್ರೀತಿಯಿಂದ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡುತ್ತಾರೆ. ಸಕಲ ಕಾಲಗಳಲ್ಲೂ ಬೆಳಗುವವನು, ಸರ್ವತ್ರಪ್ರಭೆವುಳ್ಳವನು, ತೇಜಸ್ಸು ಹರಡುವವನು, ಸಮೃದ್ಧಧನ ಹೊಂದಿರುವವನು, ಸ್ಥೂಲ ಕಾಷ್ಟ ಭಕ್ಷಕ, ಸರ್ವತ್ರ ಸಂಚಾರಿ, ಸಮಸ್ತ ಲೋಕಗಳನ್ನು ವ್ಯಾಪಿಸಿರುತ್ತಾನೆ. ಮೂರು ಸ್ಥಾನಗಳಲ್ಲೂ ಇರುವವನು, ಸರ್ವಜ್ಞ, ಸೃಷ್ಟಿಕರ್ತ. ಹೋಮ ಸಂಪಾದಕ, ಹವಿರಪೇಕ್ಷಿ, ಹವಿರೂಪ ಧನವಂತ, ಹೋತೃರೂಪಿ, ಹವಿ ವಾಹಕ.

## ಮಂಡಲ 7 – ವಸಿಷ್ಠರು

ಅಗ್ನಿಯು ಅನ್ನರೂಪಿ, ಅಮೃತ ಸಾಧನ. ದಾನ ಮಾಡಲು, ಅನುಗ್ರಹಿಸಲು ಸಮರ್ಥನಿದ್ದಾನೆ. ಅಂತರಿಕ್ಷದಲ್ಲಿ ವೈಶ್ವಾನರಾಗ್ನಿಯು ಸೂರ್ಯನಂತೆ ಉತ್ಪನ್ನನಾಗಿ ವಾಯುವಿನಂತೆ ಜಲ ಹೀರಿ ವೃಷ್ಟಿ ರೂಪದಲ್ಲಿ ಉದಕ ಉತ್ಪಾದಿಸಿ ವಿದ್ಯುತ್ ರೂಪಿನಲ್ಲಿ ಗರ್ಜಿಸುತ್ತಾನೆ. ಅತ್ಯಂತ ಪೂಜ್ಯ. ಚೈತನ್ಯ ದಾಯಕ. ಅಗ್ನಿ ಹಂಚಿದ ಹವಿಸ್ಸಿನಿಂದ ದ್ಯುಲೋಕ ದೇವತೆಗಳು ತೃಪ್ತರಾಗುತ್ತಾರೆ. ಅಗ್ನಿಯು ಜಲರೂಪಿ. ಅಗ್ನಿಯು ತೇಜಸ್ವಿ, ಅಶ್ವವಂತ, ಹವಿಷ್ಮಂತ, ಸತ್ಯವಂತ, ದೇವತಾತ್ಮ, ಶಕ್ತಪುತ್ರ, ಪ್ರಶಂಸನಾರ್ಹ, ಶುಭ್ರವರ್ಣ, ಸಂಪತ್ ಪ್ರಭು, ಗೃಹಪಾಲಕ, ಸಿದ್ಧಿಕಾರಕ. ಶ್ರೇಷ್ಠಗೃಹದಲ್ಲಿ ಪೂಜ್ಯ, ಪ್ರಕಾಶಮಾನಿ, ಅತ್ಯಂತ ಯುವಕ, ಆಕರ್ಷಕ ರೂಪಿ, ಶಕ್ತಿಯುತ, ದೂರದಿಂದಲೇ ಗೋಚರಿಸುತ್ತಾನೆ. ಸುಲಭವಾಗಿ ಸಮೀಪಿಸುತ್ತಾನೆ. ರಮಣೀಯ ದರ್ಶನವುಳ್ಳವನು, ಶತ್ರುಗಳನ್ನು ಸೋಲಿಸುವವನಾಗಿ ಅಗ್ನಿ ತನ್ನದೇ ಆದ ಪ್ರಭೆ ಹೊಂದಿದ್ದಾನೆ. ಯಜ್ಞಾದಿಗಳು ಲೌಕಿಕಾಗ್ನಿಗಳಿಗಿಂತ ಅಧಿಕ ಕಾಂತಿಯುತ, ತನ್ನದೇ ಆದ ಪ್ರಭೆಯಿಂದ,

ಶಬ್ದದಿಂದ ಶತ್ರುಗಳನ್ನು ಗದರಿಸುತ್ತಾ ರೋಗದ ಶಕ್ತಿಯನ್ನು ಕುಂದಿಸುತ್ತವೆ. ಹವಿರರ್ಪಿಸುವರನ್ನು ಅಗ್ನಿಯು ಶತ್ರುಗಳಿಂದ, ಪಾಪಗಳಿಂದ ರಕ್ಷಿಸಿ ಧನವಂತರನ್ನಾಗಿ ಮಾಡುತ್ತಾನೆ.

ಯಾಚಕರಿಗೆ, ಸಹಾಯ ಮಾಡುವವರಾಗಿ ಸಹಾಯಕನಾಗುತ್ತಾನೆ. ದೇವತೆಗಳು ಇಂದ್ರನೊಡನೆ ಒಂದೇ ರಥದಲ್ಲಿ ದಯಮಾಡಲಿ. ಅದಿತಿಯು ಬಂದು ದರ್ಭಾಸೀನಳಾಗಲಿ.

ಆರಣಿಯಿಂದ ಯುವಕ, ಆಚರಿತ ಕರ್ಮಗಳನ್ನು ಸ್ವೀಕರಿಸುತ್ತಾನೆ. ಆಸುರಿ ಶಕ್ತಿಗಳು ನಾಶವಾಗುವಂತೆ ಮಾಡುತ್ತಾನೆ. ಆಗ ತಾನೆ ಉತ್ಪನ್ನನಾದ ಓಷಧಿಗಳನ್ನು ಪ್ರವೇಶಿಸುತ್ತಾನೆ. ಆಹವನೀಯ ಸ್ಥಾನದಲ್ಲಿ ದ್ಯಾವ ಪೃಥ್ವಿಗಳ ಮಧ್ಯೆ ಕಾಷ್ಠಗಳಿಂದಾಗಿ ನಾನಾ ರೂಪಿನಿಂದ ಪ್ರಕಾಶಿಸುವ ಅಗ್ನಿ ಯುವಕನಾಗಿದ್ದಾನೆ. ಇತರರ ಸಹಾಯವಿಲ್ಲದೆ ಶರೀರ ವೃದ್ಧಿಗೊಳ್ಳುತ್ತಾನೆ. ಉದಕ ಗರ್ಭರೂಪದಲ್ಲಿದ್ದಾನೆ. ಉಷಸ್ಸುಗಳ ಮಧ್ಯಭಾಗದಿಂದ ಉತ್ಪನ್ನನಾಗುತ್ತಾನೆ. ಅಗ್ನಿ ಉತ್ತಮ ಕರ್ಮ ಬಲ್ಲವನು. ಉತ್ಕೃಷ್ಟ ಜ್ಞಾನಿ, ಉತ್ತಮ ಕರ್ಮ ಕರ್ತರಿಗೆ ಧನ ತುಂಬುವವನು. ಉಷಸ್ಸು ಉದಯ ಕಾಲದಲ್ಲಿ ಪ್ರತಿ ಸೂರ್ಯನಂತೆ ತೇಜಸ್ವಿಯಾಗಿ ಪ್ರಕಾಶಿಸುತ್ತಾನೆ ಅಗ್ನಿದೇವ. ಋತ್ವಿಜರಿಗೆ ಹಿತಕಾರಿ, ಪದೇ ಪದೇ ಕರೆಯಲ್ಪಡುವವನು ಅಗ್ನಿ.

ಮಾನವರಲ್ಲಿ ಸ್ಥಾಪಿತನಾಗಿದ್ದು ಅವರನ್ನು ರಕ್ಷಿಸುತ್ತಾನೆ. ಮಾನವರ ಉಪಕಾರಾರ್ಥ ಶತ್ರುವಿಗೆ ಅಲಭ್ಯನಾಗಿ ಪ್ರಕಾಶಿಸುತ್ತಾನೆ. ಮನೋಹರ ರೂಪಿ, ಧನದ ಒಡೆಯ. ಮಾನವ ಯಜ್ಞದಲ್ಲಿ ಸ್ಥಾಪಿತನಾಗಿದ್ದಾನೆ. ಯಜಮಾನನಿಗೆ ಅನ್ನದಾತ, ಯಜ್ಞಕಾಲದಲ್ಲಿ ಸ್ತುತ್ಯನಾಗಿದ್ದಾನೆ. ಯಾರ ಗೃಹದಲ್ಲಿ ಅತಿಶಯ, ಆಹುತಿ, ಸ್ತುತಿಗಳು ಅರ್ಪಿಸಲ್ಪಡುವವೋ ಅಲ್ಲಿ ಅಗ್ನಿಯು ಮಿತ್ರನು, ವರುಣನು ಆಗಿರುತ್ತಾನೆ. ಯಜಮಾನನಿಗೆ ಹಿತಕಾರಿ, ಯಜಮಾನರ ಮುಂಭಾಗದಲ್ಲಿ ಆಸನ ಬದ್ಧನಾಗಿರುತ್ತಾನೆ, ಹವಿಸ್ಸು ಅರ್ಪಿಸಿದ ಒಡನೆಯೇ ಅದನ್ನು ವಹಿಸುತ್ತಾನೆ. ಕಾಷ್ಠಾದಿಗಳನ್ನು ಭರಿಸುತ್ತಾ ತನ್ನಲ್ಲಿ ವನವನ್ನು ಐಕ್ಯ ಮಾಡಿಕೊಳ್ಳುತ್ತಾ ಓಷದಿ, ವೃಕ್ಷ, ಪೃಥ್ವಿಗಳ ಗರ್ಭರೂಪದಲ್ಲಿ ಇದ್ದಾನೆ. ಕಾಷ್ಟಗಳಿಂದ ಉತ್ಪನ್ನನಾಗಿ ಓಷಧಿಗಳನ್ನು ವೃದ್ಧಿಸಿ ಪೂಜೆ, ಸ್ತುತಿ, ಹವಿಸ್ಸುಗಳಿಂದ ಪ್ರಜ್ವಲಿಸುತ್ತಾನೆ. ಕೃಷ್ಣವರ್ಣದ ಮಾರ್ಗ ಹಿಡಿದು ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತಾನೆ. ಕರ್ಮ ಪ್ರೇರೇಪಿಸುತ್ತಾ ಎಚ್ಚರಗೊಳಿಸುತ್ತಾನೆ.

ಅಗ್ನಿ ಜಾತವೇದೋರೂಪಿ, ಜ್ವಾಲಾರೂಪಿನಿಂದ ಶತ್ರು ಸದೆ ಬಡಿಯುತ್ತಾನೆ. ದೇವತೆಗಳಿಂದ ಅಗ್ನಿಯು ಸ್ತುತ್ಯನಾಗಿದ್ದಾನೆ. ದೇವಯಜ್ಞದಲ್ಲಿ ಸಮಸ್ತ ದೇವತೆಗಳೊಡನೆ ವೃದ್ಧಿಸುವವನು. ಉದಕ ಸುರಿಸುತ್ತಾನೆ. ಧನಕ್ಕೆ ನೇತೃ, ದೇವತೆಗಳ ಸ್ನೇಹಿತ. ದ್ಯುಲೋಕ ಪೃಥ್ವಿಗಳ ಸ್ಥಾಪಕ, ಧನ ತುಂಬುವವನು, ದೇವತೆಗಳ ನಡುವೆ ವೃಕ್ಷ ದಹಿಸುವವನು ಅಗ್ನಿಯೇ. ದೇವತೆಗಳಿಗೆ ಹವಿಸ್ಸು ಹಂಚುವವನು. ದೇವತೆಗಳು ಅಗ್ನಿಯನ್ನು ಹವಿರ್ವಾಹಕನನ್ನಾಗಿ ಪಡೆದಿದ್ದಾರೆ. ದೇವ ಮಾನವನಾಗಿ ಪಂಚ ಜನರಿಗೂ ಅಭಿಮುಖನಾಗಿ ಪ್ರತಿ ಗೃಹದಲ್ಲೂ ಕುಳಿತು ರಕ್ಷಕನಾಗಿರುತ್ತಾನೆ. ದೇವತೆಗಳನ್ನು ಹವಿಸ್ಸು ಸೋಮಗಳಿಂದ ತೃಪ್ತಿಗೊಳಿಸುತ್ತಾನೆ. ದೇವತೆಗಳನ್ನು ಸಮೀಪಿಸಿ ಸ್ತೋತ್ರಮಾಡಿ ಪೂಜಿಸಿ ಹವಿಸ್ಸು ಅರ್ಪಿಸಿ ಅವರು ಉತ್ತಮ ಯಜ್ಞವುಳ್ಳವರಾಗುವಂತೆ ಮಾಡುತ್ತಾನೆ. ನದಿಗೆ ನೇತೃ

ಅಗ್ನಿ ಪ್ರಸಿದ್ಧ ಜಾತವೇದೋ ರೂಪಿ, ಪ್ರಜೆಗಳಿಗೆ ಪತಿ, ಪುತ್ರ ರೂಪಿನಲ್ಲಿ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡುತ್ತಾನೆ. ಎಲ್ಲಾ ಭೂತ ಜಾತಗಳಿಗೂ ಸಂಬಂಧ ಕಲ್ಪಿಸುತ್ತಾನೆ. ವೈಶ್ವಾನರಾಗ್ನಿಯು ಪ್ರಜೆಗಳಿಗೆ ಒಡೆಯ. ಹಿತಕಾರಿ, ವಸು ಸಂಜ್ಞಕ, ವೃಕ್ಷ ಪೋಷಕ, ಪ್ರಾಜ್ಞ್ಯ, ಬಲಶಾಲಿ, ಸುಖದಾಯಕ. ಶತ್ರುಗಳಿಂದ, ಪಾಪಗಳಿಂದ ಯಜಮಾನನನ್ನು ರಕ್ಷಿಸುತ್ತಾನೆ. ಶ್ಯೇನ ಪಕ್ಷಿಯಂತೆ ಶೀಘ್ರ ಸಂಚಾರಿ. ಸಮಸ್ತ ಸಂಪತ್ತನ್ನು ಸೃಷ್ಟಿಸುವವನು, ಅಸುರ ನಾಶಕ, ಸಕಲ ಮಾನವರ ಹಿತಕಾರಿ, ಇಷ್ಟಾರ್ಥಪ್ರದ, ಸಮಸ್ತ ತೇಜಸ್ಸುಗಳು ಅಗ್ನಿಯಲ್ಲೇ ಸ್ಥಿರವಾಗಿದೆ. ಸುಸಂಸ್ಕೃತ, ಹವಿಸ್ಸಿನಿಂದ ಅಗ್ನಿ ಪ್ರಭುವಾಗಿದ್ದಾನೆ. ಸೂರ್ಯರೂಪಿನಲ್ಲಿ ಉತ್ಪನ್ನನಾಗಿ ಸಕಲವನ್ನೂ ಪ್ರೇರಿಸುತ್ತಾ ವಿಶ್ವವನ್ನು ಬೆಳಗಿಸುವ ವಿಶ್ವಕರ್ಮಧಾರಕ ಅಗ್ನಿ ಸುಲಭವಾಗಿ ಸಮೀಪಿಸಲು ಸಾಧ್ಯ.ಸಕಲ ಜಗತ್ತಿಗೂ ಒಡೆಯ, ರಾತ್ರಿಯನ್ನು ಕತ್ತಲಿಂದ ಮುಚ್ಚಿರುವವನು. ಸಕಲ ಯಜಮಾನರಿಗೂ ದೂತ ಅಗ್ನಿ. ಹವಿಸ್ಸಿನಿಂದ ವೃದ್ಧಿಸಿ ಜ್ಯೋತಿ ಉತ್ಪಾದಿಸಿ ಮಾನವರ ಅಭಿಮುಖ ಪ್ರಕಾಶಿಸುತ್ತಾನೆ. ಹವಿಸ್ಸು ಒಯ್ಯುವವನು, ಹೋತೃಸ್ಥಾನದಲ್ಲಿ ಕುಳಿತಿರುತ್ತಾನೆ.

**ಮಂಡಲ 8 - ಕಾಣ್ವ ಋಷಿಗಳು**

ಅಗ್ನಿಯು ಅನೇಕ ಪ್ರದೇಶದಲ್ಲಿ ಇದ್ದು ಎಲ್ಲವನ್ನು ಸಮಾಧಾನದಿಂದಲೇ ನೋಡುತ್ತಾನೆ. ಅನೇಕ ವಿಧ ತೇಜಸ್ವಿ ಆಕರ್ಷಕ ಕಾಂತಿಯುತ. ಆಜ್ಯಾಹುತಿ ಅರ್ಪಿಸುವವರಿಗೆ ಧನದಾತ. ಅಗ್ನಿಯು ಯಜ್ಞಕರ್ತರ ನಿರ್ವಾಹಕ. ಅಪೇಕ್ಷಿತ ವಸ್ತುಗಳೊಡನೆ ಕಾಣಿಸಿಕೊಳ್ಳುತ್ತಾನೆ. ಅನ್ನ, ಸ್ತೋತ್ರ, ಹವಿಸ್ಸು ಹೊಂದಿರುವ ಯಜಮಾನರುಗಳ ಅಭೀಷ್ಟಗಳನ್ನು ಈಡೇರಿಸುತ್ತಾನೆ. ಅತಿಶಯ ಪ್ರಕಾಶಮಾನಿ. ಅತಿಶಯ ಪ್ರೀತಿವುಳ್ಳವನು, ಅನ್ನವೇ ಆಹುತಿ. ದ್ಯಾವಾ ಪೃಥ್ವಿಗಳ ನಡುವೆ ಹವಿಸ್ಸು ವಹಿಸುತ್ತಾನೆ. ಅಶ್ವದಂತೆ ಶಕ್ತಿವುಳ್ಳವನು. ಅಗ್ನಿಯ ಪ್ರವೇಶ ಸ್ಥಾನವು ಉದಕದಲ್ಲಿದೆ. ಅಗ್ನಿಯು ಕಳಂಕ ರಹಿತ. ಯಜಮಾನನಲ್ಲಿಗೆ ದೇವತೆಗಳನ್ನು ಕರೆತರುತ್ತಾನೆ. ಅಗ್ನಿಯು ಸಕಲ ದೇವತೆಗಳಿಂದ ಒಳಗೂಡಿದ್ದಾನೆ. ಅಗ್ನಿದತ್ತ ಸಂಪತ್ತನ್ನು ಯಾರೂ ಅಪಹರಿಸಲಾರರು. ಅಗ್ನಿ ಉದಕ ಹತ್ತಿತನ್ನ ನಾಲಿಗೆಯಿಂದ ಮೇಘ ಸೀಳುತ್ತಾನೆ. ಅಶ್ವದಂತೆ ಸಂಚರಿಸುತ್ತಾನೆ. ಅಗ್ನಿಯನ್ನು ಪೂಜಿಸಿ ಶತ್ರುವಿನಿಂದ ಬಿಡುಗಡೆ ಹೊಂದಿ ಪ್ರವೃದ್ಧಮಾನರಾಗುತ್ತಾರೆ. ಅಗ್ನಿಯು ಯಜ್ಞಪ್ರಧಾನ, ಶಕ್ತಿಯ ಪುತ್ರ, ಅಗ್ನಿ ಶತ ಸಂಖ್ಯಾತ ಅನ್ನಕ್ಕೆ ಒಡೆಯ. ಅಗ್ನಿಶಕ್ತಿಪ್ರಯೋಗದಿಂದ ಜನಿಸಿದವನು. ಆಂಗೀರ ಎಂದು ಹೆಸರಾದವನು. ಅತಿಥಿಯಂತೆ ಗೌರವಾನ್ವಿತನಾದವನು. ಅಗ್ನಿಯು ಕರ್ಮ ಮಾಡುವವರಿಗೆ ಕಾಣಿಸಿಕೊಂಡಿದ್ದಾನೆ. ಅಗ್ನಿ ಅನ್ನ, ಧನ ಒದಗಿಸುತ್ತಾನೆ.

ಆದಿತ್ಯ ರೂಪಿ, ಉಪಕಾರಿಗಳು, ಆಂಗೀರಾ ರೂಪಿ, ಆಂಗೀರಸ್ತುಗಳಲ್ಲೆಲ್ಲ ಶ್ರೇಷ್ಠ ಜಾತವೇದೋ ರೂಪಿ, ಆಜ್ಯ, ಆಹುತಿಗಳಿಂದ ಬೇರೆ ಬೇರೆ ರೂಪಾಂತರಗಳಿಂದ ಪ್ರಜ್ವಲಿಸುತ್ತಾ ಸೂರ್ಯನಂತೆ ಪ್ರಕಾಶಿಸುತ್ತಾ ಕತ್ತಲನ್ನು ನಾಶ ಮಾಡುತ್ತಾನೆ. ಸಕಲ ಕರ್ಮ ಪ್ರೇರಕ, ಸೂಕ್ಷ್ಮ ದೃಷ್ಟಿಯುಳ್ಳವನು. ಆಂಗೀರಸ ಶ್ರೇಷ್ಟ ಅಗ್ನಿಯು ಸ್ತುತಿ ಅಪೇಕ್ಷಿಸಿ, ಹವಿಸ್ಸು ಸೇವಿಸಿ ಯಜ್ಞ ನಿರ್ವಹಣೆಗೆ ಸಹಾಯಕನಾಗಿರುತ್ತಾನೆ. ಆರಣಿಯಲ್ಲಿ ಸುಪ್ತನಾಗಿರುತ್ತಾನೆ. ಆಲಸ್ಯ ರಹಿತನಾಗಿ ಹವಿಸ್ಸನ್ನು ದೇವತೆಗಳಿಗೆ ತಲುಪಿಸುತ್ತಾನೆ. ಆಂಗೀರ ರೂಪಿನಿಂದ ಸರ್ವತ್ರ ಆಹ್ವಾನಿತ, ಕ್ಷೀರ ಕೊಡುವ ಕಾಮಧೇನುವಿನಂತೆ ಧನ ದಾತೃ, ಆಂಗೀರ ಅಗ್ನಿಯು ಪ್ರತಿ ಮಾನವನಿಂದ ಪೂಜಿತನಾಗುತ್ತಾನೆ. ಉತ್ತಮ ಸ್ತುತಿಗಳಿಂದ ಪ್ರಶಂಸಿತನಾದವನು. ಉಷಸುಗಳಲ್ಲೆಲ್ಲ ಪ್ರಿಯಕರ, ರಾತ್ರಿಯಲ್ಲಿ ವಸ್ತುಗಳನ್ನು ಪ್ರಕಾಶಿಸುತ್ತಾನೆ. ಉದಕದಲ್ಲಿ ಬೀಜರೂಪದಲ್ಲಿರುತ್ತಾನೆ. ಉತ್ತಮ ಕರ್ಮಕರ್ತ.

ಋತ್ವಿಜರು ಅಗ್ನಿಯನ್ನು ಪ್ರಾರ್ಥಿಸಿ ಯಜ್ಞಕ್ಕೆ ಆಹ್ವಾನಿಸಿ ಸ್ಥಾಪಿಸಿ, ಪ್ರಜ್ವಲಿಸಿ ಅರ್ಘ್ಯ ಆಹುತಿಗಳಿಂದ, ಸಮಿತ್ತುಗಳಿಂದ ಹವಿರರ್ಪಿಸಿ ಜ್ವಾಲೆಗಳು ಮೇಲೇಳುವಂತೆ ಮಾಡಿ ಸ್ತುತಿಸಿ ಇಷ್ಟಾರ್ಥಗಳನ್ನು ಬೇಡುತ್ತಾರೆ. ಎಲ್ಲಾ ನದಿಗಳಲ್ಲೂ ಆಶ್ರಯ ಹೊಂದಿದ್ದಾನೆ. ಎಲ್ಲವನ್ನು ಬಲ್ಲವನು, ಮೇಧಾವಿ. ಮಾನವರಲ್ಲಿ, ದೇವತೆಗಳಲ್ಲಿ ಕರ್ಮ ರಕ್ಷಕನಾಗಿರುವುದಿಂದಲೇ ಯಜ್ಞಸ್ತುತ್ಯನಾಗಿದ್ದಾನೆ. ಮನುವು ಸ್ಥಾಪಿಸಿದ ಅಗ್ನಿ ತೀಕ್ಷ್ಣ ಜ್ವಾಲೆಯವನು. ಹವಿರೂಪ ಅನ್ನ ಅಪೇಕ್ಷಿ, ಘೃತಗಳಿಂದ ಪೂಜಿತ, ಮಾನವ ವ್ಯವಹಾರಗಳನ್ನು ನೋಡಬಲ್ಲನು, ಮಿತ್ರನಂತಿರುವನು, ಮಾನವರ ಅತಿಥಿ, ಮಾನವರ ಯಜ್ಞದಲ್ಲಿ ಹೋಮ ಸಂಪಾದಕ. ಮಾನವ ಗೃಹದಲ್ಲಿ ಸ್ಥಾಪಿತನಾದಾಗ ಶತ್ರು ನಾಶ ಮಾಡುತ್ತಾನೆ. ಮೂರು ಬಗೆಯಿಂದ ಮೂರು ಲೋಕಗಳಲ್ಲಿ ವ್ಯಾಪಿಸಿ 33 ದೇವತೆಗಳನ್ನು ಪೂಜಿಸುತ್ತಾನೆ. ಗೋ ಸಂಪತ್ತನ್ನು ರಕ್ಷಿಸುತ್ತಾನೆ. ಮಿತ್ರರಿಗೆ ಹರ್ಷ ಉಂಟು ಮಾಡುತ್ತಾನೆ.

ಯಜ್ಞದಲ್ಲಿ ಅತ್ಯಂತ ಪೂಜ್ಯ, ನೇತೃ, ಯಜ್ಞ ಸ್ತುತ್ಯನಾಗಿದ್ದಾನೆ. ಯಜ್ಞಪ್ರದೇಶದಲ್ಲೇ ಇರುವವನು, ಯಜಮಾನನ ಆಹ್ವಾನದಂತೆ ಆಯಾ ದೇವತೆಗಳನ್ನು ಯಜ್ಞಭೂಮಿಗೆ ಕರೆ ತರುವವನು. ಯಜ್ಞದಲ್ಲಿ ಆ ದೇವತೆಗಳನ್ನು ಯಜಮಾನರೊಂದಿಗೆ ಸೇರಿಸುತ್ತಾನೆ. ಯಜ್ಞ ಗೃಹದಲ್ಲಿ ಯಜಮಾನರ ರಕ್ಷಕನಾಗಿರುತ್ತಾನೆ. ರಾಕ್ಷಸರನ್ನು ನಾಶ ಮಾಡುತ್ತಾನೆ. ಕರ್ಮ ಮಾಡಿದವರು ಸತ್‌ಫಲ ಹೊಂದುತ್ತಾರೆ. ಕರ್ಮ ಪೂರ್ಣ ಮಾಡಿಸುವವನು. ಕತ್ತಲು ನಾಶ ಮಾಡುವವನು. ಕೃಷ್ಣ ವರ್ಣ ಮಾರ್ಗ ಹೊಂದಿರುವವರು. ಗಾರ್ಹಪತ್ಯ, ಆಹವನೀಯ ಎರಡೂ ರೂಪಗಳಿಂದ

ಅಗ್ನಿಯನ್ನು ದೇವತೆಗಳು ಮಾನವರಲ್ಲಿ ಸ್ಥಾಪಿಸಿದ್ದಾರೆ. ಗಾರ್ಹಪತ್ಯದಲ್ಲಿ ಸ್ಥಿರನಾಗಿದ್ದಾನೆ. ಗೃಹದಲ್ಲೇ ಅಲಂಕರಿಸಿ ಪೂಜಿಸುತ್ತಾರೆ. ಜಾತೋವೇದೋ ರೂಪಿ, ದೇವ ಶ್ರೇಷ್ಟ, ವನ ಸುಡುವಾಗ ಧೂಮ ಕಪ್ಪಾಗುತ್ತದೆ. ಜ್ವಾಲೆಗಳು ಕೆಂಪು, ಬಿಳುಪು, ಕಪ್ಪುವರ್ಣದವು ಮತ್ತು ವೇಗ ಶಾಲಿಗಳು. ಸರ್ವವ್ಯಾಪ್ತವಾದವು. ಚಕ್ರಾಕಾರವುಳ್ಳವು. ಜ್ವಾಲೆಗಳು ಅದೋಮುಖ ದ್ವಾರದವು. ಕ್ಷಯ ರಹಿತವಾದವು. ಜಗತ್ ಪ್ರೇರಕವಾದದು. ಜ್ವಾಲಾಯುಕ್ತವಾದದು. ಅಗ್ನಿಯು ದಹಿಸುವ ಜ್ವಾಲಾರೂಪಿ, ದೇವತೆಗಳ ಉತ್ಪತ್ತಿ ಸ್ವರೂಪ ಮಾನವರ ರಹಸ್ಯ ಅರಿತಿದ್ದಾನೆ. ದೇವತೆಗಳ ನಡುವೆ ಯಜ್ಞಾರ್ಹ, ಪ್ರಜೆಗಳ ನಡುವೆ ಸುಖವಾಗಿ ಸಂಚರಿಸುತ್ತಾನೆ. ಧನದ ಒಡೆಯ, ಧೂಮರೂಪ ಧ್ವಜವುಳ್ಳವನು, ದೇವಶ್ರೇಷ್ಟ ದ್ಯುಲೋಕದಲ್ಲಿ ಸ್ಥಿತಿಯಲ್ಲಿದ್ದು ಯಜ್ಞಕಾಲದಲ್ಲಿ ಹವಿಸ್ಸು ವಹಿಸುತ್ತಾ ಅತಿಥಿಯಂತೆ ಪೂಜಾರ್ಹನಾಗಿ ದೇವತೆಗಳನ್ನು ಆಹ್ವಾನಿಸುತ್ತಾನೆ. ದೇವತೆಗಳ ಜೊತೆ ಇದ್ದು ಯಜಮಾನನ ಸಖ್ಯವನ್ನು ಬಯಸುವ ಅಗ್ನಿಯನ್ನು ಇಚ್ಛಿಸುತ್ತಾರೆ. ದೇವತೆಗಳಲ್ಲಿ ಶ್ರೇಷ್ಟನಾದವನು, ಧನದ ಒಡೆಯ. ದೇವಲೋಕಕ್ಕೆ ಯಜಮಾನನಿಂದ ಯಜ್ಞದಲ್ಲಿ ಅರ್ಪಿಸಲ್ಪಟ್ಟ ಹವಿಸ್ಸನ್ನು ಕೊಂಡ್ಯೆಯುವವನು. ದು:ಖ ನಿವಾರಕ, ದೇವತೆಗಳನ್ನು ಯಜ್ಞಕ್ಕೆ ಕರೆತರುವವನು. ತೇಜಸ್ವಿ ಪ್ರಜ್ವಲಿತ, ಜ್ವಾಲೆಯುಳ್ಳವನು. ಪಶುಗಳೊಡನೆ ಸುತ್ತಲೂ ಇದ್ದು ಶತ್ರುಗಳಿಂದ ರಕ್ಷಿಸುತ್ತಾನೆ. ಪ್ರಶಂಸನೀಯ, ಪ್ರಭೆಯೇ ಧನವಾಗಿವುಳ್ಳವನು. ಪ್ರೀತಿಯುತ, ಪರಿಶುದ್ಧ ಕಾಂತಿಯುತ, ಪರಿಶುದ್ಧವಾಗಿರುವ ಅಂತರಿಕ್ಷವನ್ನು ದಹಿಸುವಂತೆ ಮಾಡುವ ಅಗ್ನಿಯನ್ನು ತಡೆಯುವವರು ಯಾರೂ ಇಲ್ಲ. ಪರ್ಜನ್ಯನಂತೆ ಗರ್ಜಿಸುವವನು. ವೃಕ್ಷಾದಿಗಳಿಗೆ ಪುತ್ರ ರೂಪಿ, ವಿವಸ್ವಂತ ದೂತ, ಅಗ್ನಿ ಮಾನವರ ಧನಕ್ಕೆ ಪ್ರಭು, ವೇಗಗಾಮಿ, ವಾಯು ಪ್ರೇರಿತ, ವಸತಿ ದಾಯಕ, ವಿಚಿತ್ರ ಕಾಂತಿಯುತ. ಶತ್ರುಗಳನ್ನು ಸೋಲಿಸುವವನು, ಶತ್ರುಗಳ ಯಜ್ಞದಲ್ಲಿ ಭಾಗವಹಿಸುವುದಿಲ್ಲ. ಶಬ್ದದೊಂದಿಗೆ ಎಲ್ಲೆಡೆ ಪ್ರಸರಿಸುತ್ತಾನೆ. ಶುದ್ಧಕರ್ಮಿ, ಶಕ್ತಿಯುತ, ಶತ್ರುಗಳನ್ನು ತಿರಸ್ಕಾರದಿಂದ ನೋಡುತ್ತಾ ಅವರನ್ನು ಸಂಹರಿಸಲು ಸಿದ್ಧನಾಗುತ್ತಾನೆ. ಶ್ರೇಷ್ಟ ಯಜ್ಞಕರ್ತ, ಉತ್ತಮ ಹೋತೃ ಶುದ್ಧಿಕಾರಕ. ಸಕಲವನ್ನೂ ತಿಳಿದಿರುವವನು, ಸ್ತುತ್ಯನಾಗಿದ್ದಾನೆ. ಸಮಸ್ತ ಪ್ರಜೆಗಳ ಒಡೆಯ (ಈಶ್ವರ) ಆಗಿರುವುದರಿಂದ ಸಹಾಯಕ್ಕೆ ಎಲ್ಲರೂ ಕರೆಯುತ್ತಾರೆ. ಸ್ತುತಿಸಲ್ಪಟ್ಟಾಗ ಅತಿಥಿಯಂತೆ ಹಿತಕಾರಿ. ಸಮಸ್ತ ದೇವತೆಗಳಿಗೆ ಆಹ್ವಾನ ಕೊಡುವವನು, ಸ್ತುತಿಸಲ್ಪಟ್ಟಾಗ ಧನದ್ವಾರ ತೆಗೆದುಕೊಡುತ್ತಾನೆ. ಸಕಲ ಭೂತ ಜಾತಗಳನ್ನು ತೃಪ್ತ ಪಡಿಸುವವನು, ಸ್ತುತಿಕರ್ತರು, ಸಪ್ತ ಹೋತೃಗಳು ಅಗ್ನಿಯನ್ನು ಉಪಚರಿಸಿ ಸತ್ಕರಿಸಿ, ಸ್ತುತಿಸಿ ಪ್ರಜ್ವಲಿಸುತ್ತಾರೆ. ಸರ್ವತ್ರ, ವ್ಯಾಪಿ, ಸರ್ವತ್ರ ಸಂಚಾರಿ, ಸ್ನೇಹಿತನಂತೆ ಹಿತಕಾರಿ, ಸರ್ವರಿಂದ ಅಪೇಕ್ಷಿತ, ಸ್ವತ: ಸ್ನೇಹಿತನಂತೆ ಗೌರವಾನ್ವಿತನಾದವನು, ಸತ್ಯವಂತ, ಯಜ್ಞವಂತ, ಉಪಕಾರಿಯೂ ಆಗಿದ್ದಾನೆ, ಸಹಸ್ರ ಸಂಖ್ಯೆಯಲ್ಲಿ ಗೋದಾನ ಮಾಡುವವನು, ಸ್ತುತಿ ಕರ್ತರನ್ನು ಧನ ಲಾಭಕ್ಕೆ ಕರೆದೊಯ್ಯುವವನು, ಸಕಲ ಸಂಪತ್ತನ್ನು ಒದಗಿಸುತ್ತಾನೆ, ಸ್ನೇಹಿತನಂತೆ ಶತ್ರುಗಳಿಂದ ರಕ್ಷಿಸುತ್ತಾನೆ. ಹೋತೃವಾಗಿದ್ದಾನೆ. ಅನಾದಿ ಕಾಲದಿಂದ ದೇವತೆಗಳಿಗೆ ಹವಿಸ್ಸು ಅರ್ಪಿಸುತ್ತಾನೆ. ದೇವತೆಗಳಿಗೆ ಅದರಿಂದ ಪ್ರೇರಿತನಾಗಿ ಹವಿರೂಪ ಅನ್ನ ಪಾಲಕ, ಹವಿಸ್ಸು ಅನ್ನ ಸ್ತೋತ್ರ ಹೊಂದಿರುವ ಯಜಮಾನರ ಅಭೀಷ್ಟಗಳನ್ನು ಈಡೇರಿಸುತ್ತಾನೆ, ಹವಿಸ್ಸು ಅರ್ಪಿಸಿದವರು ವಂಚಿತರಾಗುವುದಿಲ್ಲ. ಹವಿಸ್ಸಿಗಾಗಿಯೇ ಯಜಮಾನನ್ನು ಆಶ್ರಯಿಸಿರುತ್ತಾನೆ. ಹವಿಸ್ಸು ಅರ್ಪಿಸಿದವರು, ಧನವಂತರು, ವೀರ ಪುತ್ರವಂತರು ಆಗಿರುತ್ತಾರೆ. ಹವಿಸ್ಸರ್ಪಿಸಿದ ಯಜಮಾನನಿಂದ ಯಾಚಿತ ವಿವಿಧ ಅನ್ನ, ಧನ ನೀಡಿ ದು:ಖ ನಿವಾರಿಸುತ್ತಾನೆ, ಹಿತಕಾರಿ, ಹೋಮ ಸಂಪಾದಕ, ಹೋಮ ಸಂಪಾದಕನಾಗಿರಲು ಮಾನವರ ಹಿತಕ್ಕಾಗಿ ಅಗ್ನಿಯನ್ನು ಸ್ತುತಿಸಿ ಕರೆಯಲು ಸ್ರುಕ್ ಪಾತ್ರೆಗಳು ಪ್ರಯತ್ನಿಸುತ್ತವೆ. ಹವಿಸ್ಸು ಅರ್ಪಿಸಿದಾಗ ಜ್ವಾಲಾ ರೂಪದಿಂದ ಅಂತರಿಕ್ಷ ವ್ಯಾಪಿಸುತ್ತಾನೆ. ಹವಿಸ್ಸು ಅರ್ಪಿಸಿದರೆ ಧನ ಅನುಗ್ರಹಿಸುತ್ತಾನೆ.

ಅಂತರಿಕ್ಷ ಹಾಗು ದ್ಯುಲೋಕದಲ್ಲಿ ಶಕ್ತಿಯಿಂದ ಉತ್ಪನ್ನನಾಗುವವನು.

# ಅಗ್ನಿದೇವರು

## ಮಂಡಲ ಹತ್ತರಿಂದ ನಾನಾ ಋಷಿಗಳು ಸ್ತುತಿಸಿ, ಪೂಜಿಸಿ ಯಾಗಮಾಡಿದ ವಿವರಗಳು

**ಸ್ತೋತ್ರ ವಿಭಾಗ :** ಅನ್ನ ನಿಮಿತ್ತ ಓಷದಿಗಳಿಂದಲೇ ಉಪಚರಿತನಾಗುವವನು, ಅಂಧಕಾರ ರೂಪ ಶತ್ರುವನ್ನು ನಾಶಮಾಡುತ್ತಾ ಬರುತ್ತಾನೆ, ಅಗ್ನಿ ರಶ್ಮಿಗಳು ಸ್ತುತಿಕರ್ತರನ್ನು ಹಿಂಸಿಸುವುದಿಲ್ಲ, ಅಗ್ನಿಯನ್ನು ಸ್ತುತಿಸಿ ಉತ್ಪಾದಿಸಿದಾಗಲೇ ಉಷೆಯು ಆದಿತ್ಯನೊಡನೆ ಉದಯಿಸುತ್ತಾಳೆ, ಅಗ್ನಿಯ ಸುವರ್ಣಮಯ ರಥವು ಪ್ರಜಾಪತಿಯಿಂದ ನಿರ್ಮಿತವಾದುದು, ಅಗ್ನಿ ಊರ್ಧ್ವ ಮುಖ ಹೊರಟು ದ್ಯುಲೋಕದ ಕೊನೆಯವರೆಗೆ ಅಂತರಿಕ್ಷವನ್ನು ಪೂರ್ಣ ವ್ಯಾಪಿಸುತ್ತಾನೆ. ಅನ್ನದಿಂದ ಮರಣ, ಧರ್ಮ ರಹಿತನಾಗಿ ಅಗ್ನಿ ನಿತ್ಯನಾಗಿ ಮಾನವರಲ್ಲಿ ಸ್ಥಾಪಿತನಾದನು, ಆಕರ್ಷಕ ರೂಪವುಳ್ಳವನು.

1) ದ್ಯುಲೋಕದಲ್ಲಿ 'ಅಗ್ನಿರೂಪ'' ದಲ್ಲಿ ಇರುತ್ತಾನೆ. (2) ಪೃಥ್ವಿಯಲ್ಲಿ 'ಜಾತವೇದೋ'' ರೂಪಿನಲ್ಲಿ ಇರುತ್ತಾನೆ.
3) ಅಂತರಿಕ್ಷದಲ್ಲಿ 'ವಿದ್ಯುತ್'' ರೂಪಿನಲ್ಲಿ ಇರುತ್ತಾನೆ.

ಅಥರ್ವ ಋಷಿಯಿಂದ ಪ್ರಜ್ವಲಿತ ಅಗ್ನಿಯು ಓಷದಿಗಳಲ್ಲಿ ಅಡಗಿರುತ್ತಾನೆ.

ಅಗ್ನಿ ಯಜ್ಞ ಸ್ವರೂಪ ಅರಿತವನು, ಅತ್ಯಂತ ಯುವಕ, ಅಗ್ನಿ ಇರುವ ''ಯಜ್ಞಕ್ಕೆ'' ರಾಕ್ಷಸರು ಬರಲಾರರು, ಅನುಗ್ರಹಾತ್ಮಕ ದೃಷ್ಟಿಯುಳ್ಳವನು, ಅಧಿಕ ರಶ್ಮಿಯುಳ್ಳವನು, ಅನೇಕ ವಿಧವಾದ ಉತ್ಕೃಷ್ಟ ಜ್ಞಾನವುಳ್ಳವನು, ಅಗ್ನಿ ಸೂರ್ಯ ಚಂದ್ರರ ರೂಪಿನಲ್ಲಿ, ಜ್ವಾಲಾ ರೂಪಿನಲ್ಲಿ, ಉದಕದಲ್ಲಿ ಇದ್ದಾನೆ. ಅನುಗ್ರಹ ಬುದ್ಧಿಯಿಂದ ಧನ ಒದಗಿಸುತ್ತಾನೆ. ಅಶ್ವ, ಗೋವು, ಧನವನ್ನು ಯಾಜ್ಞಿಕರಿಗೆ ಕೊಡುತ್ತಾನೆ. **ಅಗ್ನಿ ಸಕಲ ಗೃಹಗಳಲ್ಲಿ, ಮಾನವರಲ್ಲಿ, ವನಗಳಲ್ಲಿ, ಬಲಶಾಲಿಗಳಲ್ಲಿ, ಕರ್ಮವಂತರಲ್ಲಿ ಆಶ್ರಯವನ್ನು ಹೊಂದಿದ್ದಾನೆ.** ಅಗ್ನಿಯು ಅಹೋರಾತ್ರಿಯ ಪುತ್ರ. ಉಷಃಕಾಲದಲ್ಲಿ ಪ್ರಕಾಶಿಸುತ್ತಾ ಪೂರ್ವ ಸ್ಥಾನ ಪಡೆಯುತ್ತಾನೆ, ಅಗ್ನಿಯಲ್ಲಿ ಧೇನು ಸ್ಥಾಪಿತಳಾಗಿದ್ದಾಳೆ. ಅಗ್ನಿ ಹೋಮ ಸಂಪಾದಕ, ಅಗ್ನಿ ಋತ್ವಿಜರನ್ನು ಅರಿತಿದ್ದಾನೆ. ನೇರ ಗಮನವುಳ್ಳವನು, ಕೆಂಪು, ಕಪ್ಪು, ಬಿಳಿ ವರ್ಣಗಳುಳ್ಳವನು, ಆದಿತ್ಯನಂತೆ ಅಗ್ನಿಯು ತನ್ನ ಪ್ರಜ್ಞೆಯಿಂದ ಸಕಲವನ್ನು ಅರಿಯುತ್ತಾನೆ, ಆಹುತಿ ಸೇವಿಸುವುದರಲ್ಲೂ, ಸಂಗ್ರಾಮದಲ್ಲೂ, ಅಪ್ರತಿಹತ, ಆದಿತ್ಯ ಮಂಡಲದಲ್ಲಿ ಆದಿತ್ಯನು ದ್ಯುಲೋಕ ಮಧ್ಯೆ ಪ್ರಕಾಶಿಸುವಂತೆ ಮಾಡಿದವನು ಅಗ್ನಿ. ಇಂದ್ರನು ಸೂರ್ಯನಲ್ಲಿ ತೇಜಸ್ಸು ಸ್ಥಾಪಿಸುತ್ತಾನೆ, ಚಂದ್ರನಲ್ಲಿ ಕಾಂತಿಯನ್ನು ಸ್ಥಾಪಿಸುತ್ತಾನೆ, ಸೂರ್ಯ ಚಂದ್ರರು ಕಾಂತಿ ಹರಡುತ್ತಾರೆ. ಉದಕಗಳು, ದೇವತೆಗಳು ವಿಶ್ವ ಸುಖಕರ ಅಗ್ನಿಯ ಮಧ್ಯವರ್ತಿಗಳು ಎಂದು ಸೋಮದೇವನಿಂದ ಮಾನವನಿಂದ ತಿಳಿದಿದ್ದಾರೆ. ಉದಕ ದೇವತೆಗಳು ಸಕಲ ರೋಗ ನಾಶಕ ಓಷಧಿಗಳು ರೋಗ ನಾಶ ಮಾಡಿ ಪುತ್ರ, ಪೌತ್ರರಾಗುವಂತೆ ಮಾಡುತ್ತಾರೆ. ಉಷಃಕಾಲದಲ್ಲಿ ಉತ್ಪನ್ನನಾಗುವಾಗಲೇ ಪ್ರಜ್ವಲಿಸಿ ದ್ಯಾವಾ ಪೃಥ್ವಿವ್ಯಾಪಿಸಿ ಮೇಘವನ್ನು ಸೀಳಿ ವೃಷ್ಟಿ ಉಂಟುಮಾಡುತ್ತಾನೆ. ಕೆಲವೆಡೆ ಕ್ರೀಡಿಸುತ್ತಾ, ಕೆಲವೆಡೆ ಭಕ್ಷಿಸುತ್ತಾ ಕಟ್ಟಿಗೆಗಳಿಂದ ವೃದ್ಧಿ ಪುಷ್ಟಿ ಹೊಂದುತ್ತಾನೆ, ಜ್ವಾಲಾರೂಪ ನಾಲಿಗೆಯನ್ನು ಹವಿರ್ವಾಹಕವಾಗುವಂತೆ ಮಾಡುತ್ತಾನೆ. ಅಗ್ನಿ ತನ್ನ ಮಹಿಮೆಯಿಂದಲೇ ಸಕಲ ದೇವತೆಗಳಿಗಿಂತಲೂ ಮೀರಿದ ಶಕ್ತಿ ಹೊಂದಿದ್ದಾನೆ. ತಾನು ಹುಟ್ಟಿದ ತಾಯಿಯಾದ ಆರಣಿಯನ್ನು ಹುಟ್ಟುತ್ತಲೇ ಭಕ್ಷಿಸುತ್ತಾನೆ, ಅಗ್ನಿ ಸಕಲರ ಸ್ವಾಮಿ ಹಾಗು ಶತ್ರು ಭಯಂಕರ, ದ್ಯಾವಾ ಪೃಥ್ವಿಗಳಲ್ಲಿ ಸೂರ್ಯರೂಪಿನಿಂದ ಸಂಚರಿಸುತ್ತಾ ಸೂರ್ಯ ಕಾಂತಿಯನ್ನು ತನ್ನ ತೇಜಸ್ಸಿನಿಂದ ಮೇಲೆಯೇ ತಡೆಯುತ್ತಾನೆ. ಅಂತರಿಕ್ಷದ ಕೊನೆಯವರೆಗೂ ವ್ಯಾಪಿಸಿದ್ದಾನೆ. ಪರ್ವತದಲ್ಲಿ ಅಡಗಿರುವ ಧನವನ್ನು ಕಿತ್ತು ತರುತ್ತಾನೆ.

ಹವಿಸ್ಸುಗಳಿಂದ ಸರ್ವದಾ ಸಂಚಾರಿ, ಉಷ ರಾತ್ರಿಗಳಿರುವವರೆಗೆ ಅಗ್ನಿ ತನ್ನ ಈ ಕರ್ಮಗಳನ್ನು ಮಾಡುತ್ತಿರುತ್ತಾನೆ. ಪರ್ಜನ್ಯನು ದ್ಯುಲೋಕದಲ್ಲಿ ಘರ್ಜಿಸುವಂತೆ ಅಗ್ನಿ ಶಬ್ದ ಮಾಡುತ್ತಾ ದ್ಯಾವಾ ಪೃಥ್ವಿಗಳ ನಡುವೆ ಕಾಂತಿಯಿಂದ ಪ್ರಜ್ವಲಿಸುತ್ತಾನೆ. **ಪಿತೃಗಳಿಗೂ, ದೇವತೆಗಳಿಗೂ, ಮಾನವರಿಗೂ ದೇವಯಾನ, ಪಿತೃಯಾನ ಎಂಬ ಎರಡು ಮಾರ್ಗಗಳಿವೆ. ದ್ಯುಲೋಕ, ಪೃಥ್ವಿ ಲೋಕಗಳ ನಡುವೆ ಈ ವಿಶ್ವ ಎರಡೂ ಮಾರ್ಗಗಳಲಲ್ಲಿ ಸಂಚರಿಸುತ್ತಿರುತ್ತವೆ.** ಯಜ್ಞ ಕಾಲದಲ್ಲಿ ಯಜ್ಞಕ್ಕಾಗಿಯೇ ನಿಯಮಿತನಾಗಿರುತ್ತಾನೆ. ಯಜ್ಞ

ಅರಿತವನು, ಯಜ್ಞ ಸಂಪಾದಕ, ಯಜಮಾನನ ಇಷ್ಟಾರ್ಥಗಳನ್ನು ಅಗ್ನಿ ತಿಳಿಯುತ್ತಾನೆ. ರಾತ್ರಿಯ ಕತ್ತಲನ್ನು ಜ್ವಾಲೆಯಿಂದ ಆಕ್ರಮಿಸುತ್ತಾನೆ, ರೋಗನಾಶಕರೂ, ಸುಖಪ್ರದರೂ ಆಗಿದ್ದಾರೆ. ಓಷದಿ (ಲತೆಗಳ) ಪುತ್ರ ರೂಪನಾಗಿ ಬೇರೆ ಬೇರೆ ಓಷಧಿಗಳನ್ನು ಸೇರಿದ್ದಾನೆ. ಯಥಾರ್ಥ ಉದಕ ನಿರ್ಮಿಸಿದ್ದಾನೆ. ವೃಷ್ಟಿ ಕರೆದಾಗ ಸ್ವಯಂ ಸಂಘಟಿತನಾಗಿ ಉದಕ ಉತ್ಪನ್ನವಾಗುತ್ತದೆ. ಉದಕದಲ್ಲಿನ ಓಷಧಿಗಳು ದ್ಯಾವಾಪೃಥ್ವಿಗಳನ್ನು ಸೇರುತ್ತವೆ. **ಉದಕ ಸ್ಥಾನ ಅಂತರಿಕ್ಷದಲ್ಲಿ ವಿದ್ಯುತ್ ರೂಪಿ ಅಗ್ನಿಯು ದೇವತೆಗಳನ್ನು ತೃಪ್ತಿಪಡಿಸುತ್ತಾನೆ.** ವಸಂತಾದಿ ಋತುಗಳಲ್ಲಿ ಓಷಧಿಗಳಲ್ಲಿ ಅಗ್ನಿ ಗರ್ಭರೂಪದಲ್ಲಿದ್ದು ವೃಕ್ಷಗಳಲ್ಲಿ, ಉದಕಗಳಲ್ಲಿ ಉತ್ಪನ್ನನಾಗುತ್ತಾನೆ, ಅಗ್ನಿ ಅನೇಕ ಪ್ರದೇಶಗಳಲ್ಲಿ ಪ್ರಾದುರ್ಭವಿಸುತ್ತಾನೆ. **ಸಂಪತ್ತುಗಳ ಧಾರಕ, ಎಲ್ಲರಿಂದಲೂ ಪೂಜಿತ, ಸಕಲ ಭೂತ ಜಾತಗಳೂ ಸೂರ್ಯೋದಯದ ನಂತರ ಚಲಿಸಿ ವ್ಯವಹರಿಸಿ ರಾತ್ರಿ ನಿದ್ದೆ ಮಾಡುತ್ತವೆ.**

ಸತ್ಯಾತ್ಮಕ ದಿಕ್ಕುಗಳು : ದ್ಯಾವಾ ಪೃಥ್ವಿಗಳು ಹೊಂದುವಂತೆ ಮಾಡುತ್ತವೆ, ಸಕಲ ಭೂತ ಜಾತಗಳು ವಿಶ್ರಾಂತಿ ಹೊಂದುವಂತೆ ಮಾಡುತ್ತವೆ. ಸೂರ್ಯನು ಉದಯಿಸುವಂತೆಯೂ ಮಾಡುತ್ತವೆ. ಲೋಕಗಳು ಕಂಪಿಸುವಂತೆಯೂ ಮಾಡುತ್ತವೆ. ಸ್ತುತಿ ಕರ್ತರಿಂದ ಸ್ತುತಿ, ಅನ್ನ ಬಯಸಿ ಮಿತ್ರನಂತೆ ಇರುತ್ತಾರೆ. ಅಗ್ನಿ ಹರ್ಷಗೊಂಡಾಗ ತನ್ನ ಬಂಧು ಓಷಧಿಗಳಲ್ಲಿ ಗರ್ಭ ಸ್ಥಾಪಿಸುತ್ತಾನೆ. ಭೂಮಿಯ ಮೇಲೆ ಒಣಗಿ ನಿಂತಿರುವ ಲತೆಗಳಾಗಲೀ, ಮರಗಳಾಗಲೀ ಅವನ್ನು ತಕ್ಷಣ ದಹಿಸುತ್ತಾನೆ. ಅಗ್ನಿಯು ಯಜಮಾನನ ಮಿತ್ರ, ಅನುಗ್ರಹ ಕಾರಕ, ಪುತ್ರ, ಪೌತ್ರರೊಂದಿಗೆ ಯಜಮಾನರು ಅಗ್ನಿಯನ್ನು ಸ್ತುತಿಸಿ, ಪೂಜಿಸಿ, ಪ್ರಶಂಸಿಸಿ, ಪುಷ್ಟಿಗೊಳಿಸುತ್ತಾರೆ. ಯಜ್ಞ ಮಾಡುವವರಿಗೆ ಸ್ವರ್ಗವನ್ನು ಅನುಗ್ರಹಿಸುತ್ತಾರೆ.

ಮಾನವ ಗೃಹವನ್ನು ದೃಢವಾಗಿಟ್ಟಿರುತ್ತಾರೆ. ಹುಟ್ಟಿದಂದಿನಿಂದಲೇ ದೇವದೂತ, ಹತ್ತಿರ ದೂರದ ಶತ್ರುನಾಶಕ, ಯಾಜ್ಞಿಕರ ಯಜ್ಞ ರಕ್ಷಕ, ಪ್ರಾರ್ಥಿಸುವವರನ್ನು, ಪೂಜಿಸುವವರನ್ನು, ಹವಿರರ್ಪಿಸುವವರನ್ನು ರಕ್ಷಿಸುತ್ತಾನೆ, ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವವನು, ಸರ್ವಜ್ಞ. ಮರುತ್‌ಗಳಿಂದ ಒಡಗೂಡಿದವನು. ಅಗ್ನಿಯ ಧನವೇ ತೇಜಸ್ಸು, ನಿರ್ಮಲ ತೇಜಸ್ವಿ, ಪೂರ್ಣ ಪ್ರಕಾಶಿ, ಧನದಾತ, ದೇವತೆಗಳನ್ನು ಹವಿಸ್ಸಿನಿಂದಲೂ, ಪೃಥ್ವಿಯನ್ನು ವೃಷ್ಟಿಯಿಂದಲೂ ಅಗ್ನಿ ಪೋಷಿಸುತ್ತಾನೆ. ಅನ್ನ, ಧನ, ಜ್ಞಾನವನ್ನು ನೀಡುವವನು ಅಗ್ನಿಯೇ. ಅಗ್ನಿ ಸದಾ ಸಂಚಾರಿ, ಬೆಳಗುವ ಸೂರ್ಯನನ್ನು ಕೃತಿಕಾದಿ ನಕ್ಷತ್ರಗಳನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾನೆ. ಎಲ್ಲರ ಪ್ರೀತಿ ಆದರಗಳಿಗೆ ಪಾತ್ರನಾಗಿದ್ದಾನೆ. ದೇವತೆಗಳಿಗೆ ಹವಿಸ್ಸನ್ನು ಹಂಚುವವನು, ಬಲಶಾಲಿಗಳಿಗಿಂತ ಬಲಶಾಲಿ, ದಾನಿ, ಯಾಗಾರ್ಥವಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಅಗ್ನಿಯನ್ನು ಎಲ್ಲರೂ ಸ್ತುತಿಸುತ್ತಾರೆ. ಅಗ್ನಿಯು ಇಷ್ಟಾರ್ಥ ಪ್ರದ, ಸಕಲರ ಸ್ವಾಮಿ, ವೈಶ್ವಾನರ ರೂಪಿ, ಸಕಲ ಪ್ರಾಣಿಗಳಲ್ಲೂ ಇದ್ದಾನೆ. ಯಜ್ಞ ಮಾಡದವರನ್ನು ಅಗ್ನಿ ಅಪೇಕ್ಷಿಸುವುದಿಲ್ಲ, ದೇವತೆಗಳು ಸಕಲ ಸಾಧನಗಳಿಂದ ಸ್ಥಾಪಿಸಿದ್ದಾರೆ. ಅನೇಕ ವಸುಗಳೊಂದಿಗೆ ಅಂತರಿಕ್ಷ ಸಂಚಾರಿ, ಅಗ್ನಿಯಲ್ಲಿ ಸಕಲವೂ ಇದೆ, **ಕರ್ಮಗಳನ್ನು ಮಾಡಿ ಅರ್ಥಕಾಮಗಳನ್ನು ಪಡೆಯಿರಿ ಎಂದು ಅಗಸ್ತ್ಯರು ಹೇಳಿದ್ದಾರೆ.** ದೃಢವಾದ ವೃಕ್ಷಗಳನ್ನೆಲ್ಲ ಭಸ್ಮ ಮಾಡಿ ನಾಶಮಾಡುತ್ತಾನೆ. ಕರ್ಮಗಳನ್ನು ಮಾಡಿದವನಿಗೆ ಮಾತ್ರ ಧನವನ್ನು ನೀಡುತ್ತಾನೆ. ಅಗ್ನಿಯನ್ನು ಒಲಿಸಿಕೊಂಡವರು ಎಲ್ಲವನ್ನೂ ಪಡೆಯಬಲ್ಲರು, ಅವರ ಎಲ್ಲ ಕಷ್ಟಗಳನ್ನು ದುಃಖವನ್ನು ರೋಗ ದಾರಿದ್ರ್ಯವನ್ನು ದೂರಮಾಡಿ ರಕ್ಷಿಸುತ್ತಾನೆ. ದ್ಯಾವಾ / ಪೃಥ್ವಿಗಳ ಪುತ್ರ, ಜಗತ್ತಿಗೆ ಚೈತನ್ಯದಾಯಕ, ಅಗ್ನಿಸೋಮರು "ವೃತ್ರ ವಧೆ" ಮಾಡಿದರು. ಅಪಹರಿಸಿದ್ದ ಗೋವುಗಳನ್ನು ಬಿಡಿಸಿದರು, ಕಲುಷಗೊಂಡ ನದಿಗಳನ್ನು ಶುದ್ಧಗೊಳಿಸಿದರು. ಘೃತವೇ ಅನ್ನವಾಗಿ ವುಳ್ಳವನು, ಅತಿಥಿಯಂತೆ ಪೂಜ್ಯ, ಜ್ಞಾನದಾಯಕ. ಸ್ವಲ್ಪ ಹವಿಸ್ಸೇ ಅಧಿಕವೆಂದು ಅರಿಯುತ್ತಾ ಕೃಷ್ಣವರ್ಣದ ಮಾರ್ಗದಲ್ಲಿ ದೇವಲೋಕ ಅವರೋಹಣ ಸ್ಥಾನವನ್ನು ಹತ್ತುತ್ತಾನೆ. ಸೂರ್ಯರಶ್ಮಿಗಳು ದ್ಯುಲೋಕ ತುಂಬುವಾಗ ವರುಣ, ಮಿತ್ರ ಮತ್ತಿತರ ದೇವತೆಗಳು ಸವಿತೃವನ್ನು ಅನುಸರಿಸುವರು. **ಅರ್ಥವೇ ತಿಳಿಯದೆ ಅಗ್ನಿಯ ವಿಚಾರಗಳನ್ನು ಪಠಿಸಿದರೂ. ಅವರು ನಮ್ಮವರೆಂದು ತಿಳಿದು ಅಗ್ನಿ ಅಶ್ವ ಅಪೇಕ್ಷಿತ ಧನಗಳನ್ನು ನೀಡುತ್ತಾನೆ.**

II ಓಂ ಶ್ರೀ ಮಹಾಗಣಾಧಿಪತಯೇ ನಮ: II

ಅಗ್ನಿದೇವರು

# (ಆಶ್ರಮ ವಿಭಾಗ)

ನೋಧಾ ಗೌತಮರು

ಏಳು ಜನ ಹೋತೃಗಳು ಆಹ್ವಾನಿಸುತ್ತಾರೆ. ಪೂಜಿಸುತ್ತಾರೆ ಮತ್ತು ಹವಿಸ್ಸನ್ನು ಅರ್ಪಿಸುತ್ತಾರೆ. ಒಣಗಿದ ಕಟ್ಟಿಗೆಯನ್ನು ಜ್ವಲಿಸಿ ಗಂಭೀರ ಶಬ್ದದಿಂದ ಇರುವ ಅಗ್ನಿಗೆ ಹವಿಸ್ಸಿನಿಂದ ತೃಪ್ತಿಪಡಿಸುತ್ತಾರೆ. ಯಜ್ಞಕರ್ತರಿಗೆ ಜ್ಯೋತಿ ರೂಪದಲ್ಲಿರುತ್ತಾನೆ. ಯಾಜ್ಞಿಕರು ಗುಣ ಗಾನದಿಂದ, ಸ್ತೋತ್ರಗಳಿಂದ ಅಗ್ನಿಯನ್ನು ವೇದಿಕೆಗೆ ಬರಲು ಪ್ರಾರ್ಥಿಸುತ್ತಾರೆ. ಸೂರ್ಯೋದಯಕ್ಕೆ ಮೊದಲೇ ಅಗ್ನಿಯನ್ನು ಪ್ರತಿಷ್ಠಿಸುತ್ತಾರೆ.

ಗೋತಮಾ ರಹೂ ಗಣರು

ಸ್ತೋತ್ರಗಳನ್ನು ಮಾಡುತ್ತಾರೆ. ಯಜ್ಞಕ್ಕೆ ಬರಲು ಪ್ರಾರ್ಥಿಸುತ್ತಾರೆ. ಹವಿಸ್ಸು ಅರ್ಪಿಸಿ ಸ್ವೀಕರಿಸಲು ಪ್ರಾರ್ಥಿಸಿದ್ದಾರೆ. ಅಗ್ನಿಯನ್ನು ಒಲಿಸಿಕೊಳ್ಳಲು ಯಜ್ಞಕರ್ತರು ಮೊದಲು ಇಂದ್ರ, ಮಿತ್ರಾ, ವರುಣರನ್ನು ಪೂಜಿಸಲು ಋಷಿಗಳು ಹೇಳಿದ್ದಾರೆ. ಅಗ್ನಿಯು ಹವಿರಾದಿಗಳನ್ನು ಅಂಗೀಕರಿಸಲಿ. ಅಗ್ನಿಯನ್ನು ಪ್ರಥಮ ಪೂಜೆಯಲ್ಲಿ ಅಭಿಮುಖ ಮಾಡಿಕೊಳ್ಳಬೇಕು. ಗೌತಮರು ಅರ್ಚಿಸಿದಂತೆಯೇ ಇವರು ಅರ್ಚಿಸುತ್ತಿದ್ದಾರೆ. ಅಗ್ನಿದ್ಯೋತಕ ಮಂತ್ರಗಳಿಂದ ಅಭಿಮುಖ ಮಾಡಿಕೊಳ್ಳುತ್ತಾರೆ. ಮಧುರ ಮಂತ್ರಗಳಿಂದ ಗುಣಗಳನ್ನು ಹೊಗಳಿ ಸ್ತುತಿಸುತ್ತಾರೆ. ಯಜ್ಞಯಾಗಾದಿ ನಾನಾ ಕರ್ಮಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ.

ಅಗಸ್ತ್ಯರು : ಯಜ್ಞದ್ವಾರಗಳು ವಿಶಾಲ, ಶೋಭಿತ, ಪೂಜ್ಯ, ಪ್ರಕಾಶಮಾನವಾಗಿ ಉದಕ, ಪ್ರೋಕ್ಷಿತವಾಗಿದೆ. ಅಗ್ನಿ ದೇವತೆಗಳು ಮಂತ್ರ ರೂಪ ಬಲದ ದರ್ಭಾಸನದಲ್ಲಿ ಕುಳಿತು ದೇವತೆಗಳಿಗೆ ಹವಿಸ್ಸು ವಹಿಸಲಿ. ಅವರನ್ನು ಯಜ್ಞಕ್ಕೆ ಕರೆತರಲಿ, ಎಲ್ಲ ದೇವತೆಗಳು ದರ್ಭಾಸೀನರಾಗಲಿ, ಪ್ರಸಿದ್ಧ ಸ್ತೋತ್ರಗಳಿಂದ, ನಮಸ್ಕಾರಗಳಿಂದ ಅವರುಗಳನ್ನು ಯಾಜ್ಞಿಕರು ಸ್ತುತಿಸುತ್ತಾರೆ. ಅಗಸ್ತ್ಯರು ಪ್ರಸಿದ್ಧರು, ಮೇಧಾವಿಗಳು, ಇವರು ಅಗ್ನಿ ಮತ್ತಿತರ ಆಹ್ವಾನಿತ ದೇವತೆಗಳಿಗೆಲ್ಲಾ ಹವಿಸ್ಸು ಅರ್ಪಿಸಿ ಯಜ್ಞನೆರವೇರಿಸುತ್ತಾರೆ.

ಕುತ್ಸ ಆಂಗೀರಸರು : ಯಜ್ಞ ಭೂಮಿಯ ಪೂರ್ವದಲ್ಲಿ ಆಹವನೀಯ ಪಶ್ಚಿಮದಲ್ಲಿ ಗಾರ್ಹಪತ್ಯ. "ವಷಟ್ಕಾರ" ಸಹಿತ ಆಹುತಿ ಅರ್ಪಿಸುವ ಯಜಮಾನನ ಮನಸ್ಸಿಗೆ ಅಗ್ನಿಯೇ ಕಾರಣ. ದೇವ ಯಜ್ಞ ಮಾಡುವವರಿಗೆ ಸವಿತೃವು ಐಶ್ವರ್ಯ ಕೊಡುತ್ತಾನೆ. ಸವಿತೃವನ್ನು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಯಾಗಕ್ಕೆ ಬೇಕಾದ ಧನವನ್ನು ಹೊಂದಿಸುತ್ತಾನೆ. ಕರ್ಮಕರ್ತರು ಉತ್ತಮ ವರ್ಗದವರು. ಅಗ್ನಿ ಅನುಗ್ರಹಿಸುವಂತೆ ನಾವು ನಡೆದುಕೊಳ್ಳೋಣ.

ಮೇದಾತಿಥಿ ಕಾಣ್ವರು : ಅಗ್ನಿಯು ಮೇಧಾವಿ, ಸತ್ಯಧರ್ಮ ಸ್ವರೂಪಿ, ಆರಣಿಯಲ್ಲಿ ಉತ್ಪನ್ನನಾಗಿ ಆಹವನೀಯ ಗಾರ್ಹಪತ್ಯದಲ್ಲಿ ಪ್ರಕಟಗೊಳ್ಳುತ್ತಾನೆ. ಅಗ್ನಿಯ ಮುಖ "ಜುಹೂ" ಮೂಲಕ ಆಜ್ಯ, ಹವಿಸ್ಸು ಸ್ವೀಕರಿಸುತ್ತಾನೆ. ಯಜ್ಞ ವಿರೋಧಿಗಳನ್ನು, ರೋಗಾದಿ ಉಪದ್ರವಗಳನ್ನು ನಾಶ ಮಾಡುತ್ತಾನೆ. ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾದವನು. ಅಗ್ನಿಯ ಇತರ ಹೆಸರುಗಳು ಹೀಗಿವೆ : (1) ಸುಸಮಿದ್ಧ (2) ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರ (8) ವನಸ್ಪತಿ (9) ಸ್ವಾಹ (10) ಇಳಾ (11) ಭಾರತಿ (12) ಸರಸ್ವತಿ ಇವರುಗಳು ಎಲ್ಲರೂ ಸು:ಖ ನೀಡುವ ಅಗ್ನಿ ಮೂರ್ತಿ ಸ್ವರೂಪರು.

ಅಗ್ನಿ ಸಂಬಂಧ ಯಜ್ಞವನ್ನು ಅತಿಕ್ರಮಿಸಲು ದೇವ ದಾನವರಿಗೂ ಸಾಧ್ಯವಿಲ್ಲ. ದೇವ ಮಾನವರಿಗೆ ಸಮಾನ ಹರ್ಷ ದಾಯಕ, ಯಜ್ಞದಲ್ಲಿ ಹವಿಸ್ಸು ಪಡೆದು ದೇವತೆಗಳಿಗೆ ಅವರವರ ಭಾಗ ಹಂಚುತ್ತಾನೆ. ಮನು ಪ್ರಜಾಪತಿ ಅಗ್ನಿಯನ್ನು ಭೂಮಿಯಲ್ಲಿ ನಿಲ್ಲಿಸಿದನು. ವರುಣ, ಮಿತ್ರಾ, ಆರ್ಯಮರು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದರು. ಲೋಕದಲ್ಲೆಲ್ಲ ಅಗೋಚರ ಜ್ವಾಲೆಯನ್ನು ಹರಡಿದರು. ಯೂಪ ಸ್ತಂಭದಲ್ಲಿ ಅಗ್ನಿ ಅಡಗಿದ್ದಾನೆ. ಯಾಜ್ಞಿಕರ ಉದ್ದೇಶ ತಿಳಿದು ಫಲ ನೀಡುತ್ತಾನೆ. ಯಜ್ಞಕರ್ತರು ಅಗ್ನಿಗೆ ಪುರೋಹಿತ ಸ್ಥಾನ ಕೊಟ್ಟರು, ಘರ್ಷಣೆಯಿಂದ ಉತ್ಪನ್ನನಾದ ಅಗ್ನಿ ಜ್ವಾಲೆಗಳಿಂದ ಪ್ರಜ್ವಲಿಸುತ್ತಾನೆ.

ಆಶ್ರಮ : ಯಜಮಾನರು, ಯಾಜ್ಞಿಕರು ಸ್ತೋತ್ರಗಳನ್ನು ಮಾಡುತ್ತಾರೆ. ಹವಿಸ್ಸನ್ನು ಅರ್ಪಿಸುತ್ತಾರೆ. ದೇವತೆಗಳನ್ನು ಕರೆತರುತ್ತಾರೆ.

ಋಗ್ವೇದಿ: ಗಾನವಿಲ್ಲದೆ ಮಂತ್ರಗಳನ್ನು, ದೇವತಾ ಗುಣಗಳನ್ನು ಹೇಳುವವನು, ದೇವತೆಗಳಿಗೆ ನೀರು ಮತ್ತು ತುಪ್ಪದಿಂದ ಮೆದು ಮಾಡಿದ ದರ್ಭಾಸನವನ್ನು ಕುಳಿತುಕೊಳ್ಳಲು ನೀಡುತ್ತಾರೆ.

★ ಲೋಪದೋಷಗಳಿಲ್ಲದ ನ್ಯೂನಾತಿರಿಕ್ತ ಉತ್ತಮ ಯಜ್ಞಕ್ಕೆ ಅಗ್ನಿ ಬರಲಿ, ಮರುತ್‌ಗಳನ್ನು ಜೊತೆಯಲ್ಲಿ ಕರೆತರಲಿ. ಭೂಮಿಯಲ್ಲಿ ವೃಷ್ಟಿಗೆ ದೇವತೆಗಳ ಸ್ಥಿರತೆಗೆ ಕರ್ಮಗಳು ಸುಗಮವಾಗಿ ನಡೆಯಲು ಅಗ್ನಿಯೇ ಕಾರಣ ★ ಮೊದಲು ಯೂಪ ಸ್ತಂಭವನ್ನು ಪೂಜಿಸಲು ಹೇಳಿದ್ದಾರೆ. ಅಗ್ನಿ ಮಹಿಮೆ ಇಷ್ಟೆ ಎಂದು ಹೇಳಲು ಸಾಧ್ಯವಿಲ್ಲ, ಅಗ್ನಿಯ ಅನುಗ್ರಹ ಮೊದಲು ಬೇಕು. ಅಗ್ನಿಯು ಹೋಮವನ್ನು ಸ್ವೀಕರಿಸಲಿ, ಆಕರ್ಷಕ ಜ್ವಾಲೆಯಿಂದ ಎಲ್ಲರನ್ನೂ ಸಂತೋಷಪಡಿಸಲಿ. ಅಗ್ನಿಯು ಉಷ ಕಾಲದಲ್ಲಿ ಉಷ, ಅಶ್ವಿನಿ

ಮತ್ತಿತರ ಎಲ್ಲಾ ದೇವತೆಗಳೊಡನೆ ಯಜ್ಞಭೂಮಿಗೆ ಬರಲು ಆಹ್ವಾನಿಸುತ್ತಾರೆ. ಇಂತಹ ಆಹವನೀಯ ರೂಪದಲ್ಲಿ ಸಂಚರಿಸುವ ಅಗ್ನಿಯು ಯಜಮಾನನ ಆಯುರ್ವರ್ಧಕ, ಶತ್ರುನಾಶಕ, ಮಿತ್ರ ಪೋಷಕ.

★ ವಸು, ರುದ್ರ, ಆದಿತ್ಯ, ಮನುವನ್ನು ಪೂಜಿಸಲು ಹೇಳುತ್ತಾರೆ. ಹಿಂದಿನ ದಿನವೇ ಸಿದ್ಧಪಡಿಸಿದ ಸೋಮವನ್ನು ದೇವತೆಗಳೊಂದಿಗೆ ಅಗ್ನಿಯು ಸೇವಿಸಲಿ.

ಪರಾಶರ ಶಾಕ್ತ್ಯರು : ಅಗ್ನಿ ಇಂದ್ರನೊಂದಿಗೆ ಆಶ್ರಮದಲ್ಲಿ ಹವಿಸ್ಸು ಸ್ವೀಕರಿಸಲಿ, ತುಪ್ಪ ಮತ್ತು ಹೋಮದ್ರವ್ಯಗಳಿಂದ ಸಂತೋಷದಿಂದ ಇರುತ್ತಾನೆ. ಯಾಗಗಳಲ್ಲಿ ಅಗ್ನಿಗೆ ಮೊದಲ ಪೂಜೆ. ಅಗ್ನಿಯನ್ನು ಉದ್ದೇಶಿಸಿ ಮಾಡಿದ ಕರ್ಮಗಳಿಂದ ದೇವತ್ವ ಪಡೆಯಬಹುದು. ಪುತ್ರ ಸಂತಾನ ಪಡೆಯಬಹುದು. ಅನ್ನ, ಆಹಾರಾದಿಗಳನ್ನು ಪಚನ ಮಾಡಿ ಅದನ್ನು ರುಚಿಕರವನ್ನಾಗಿ ಮಾಡಿಸುತ್ತಾನೆ ಅಗ್ನಿ. ಯಜ್ಞ ಗೃಹವನ್ನು ಸುಖವಾಗಿ ಇಟ್ಟಿರುತ್ತಾನೆ. ★ ಯಾಜ್ಞಿಕರು, ಯಜಮಾನರು, ವಿಷಯಾಸಕ್ತ ರಹಿತರಾಗಿ ದೇವತೆಗಳ ಹಾಗೂ ಮಾನವರ ರಕ್ಷಣೆಗಾಗಿ, ಪೋಷಣೆಗಾಗಿ ಅಗ್ನಿ ಹೋತ್ರಾದಿ ಯಜ್ಞಗಳನ್ನು ಮಾಡುತ್ತಾರೆ. ಮಿತ್ರಾ ವರುಣರು ಗೋವು ಕ್ಷೀರವನ್ನು ಅಮೃತದಂತೆ ಮಾಡಿದರು. ನೂರು ವರ್ಷಗಳು ಆಜ್ಯ ಹೋಮ ಮಾಡಿದ ನಂತರವೇ ಮರುತ್ ದೇವತೆಗಳು ಯಜ್ಞಾರ್ಹರಾದುದು.

ಆದಿತ್ಯರು ಪುರೋಡಾಶ ಅರ್ಪಿಸಿದರು. ಬ್ರಹ್ಮನನ್ನು ಉದ್ದೇಶಿಸಿ ಮಾಡಿದ ಸ್ತೋತ್ರಗಳನ್ನು ಅಗ್ನಿಯು ಸ್ವೀಕರಿಸುತ್ತಾನೆ. ★ಅಗ್ನಿ ಜ್ವಾಲೆಗಳು ಶುಭ್ರ ವರ್ಣದಿಂದ ನಾನಾ ದಿಕ್ಕುಗಳಿಗೆ ಪ್ರಸರಿಸಿದಾಗ ಯಾಜ್ಞಿಕರು ಇದು ಹೋಮ ಸಮಯವೆಂದು ತಿಳಿಯುತ್ತಾರೆ. ಅದಿತಿ, ಸಾಗರ ದೇವತೆ, ಭೂದೇವಿ, ದ್ಯುಲೋಕ ದೇವತೆಗಳು ಪೃಥ್ವಿ ಎಲ್ಲರೂ ಯಾಜ್ಞಿಕರಿಗೆ ಅಭಿವೃದ್ಧಿ ರಕ್ಷಣೆಗಳನ್ನು ನೀಡಲಿ.

ಮದುಶ್ಛಂದ್ರರು : ಆಶ್ರಮದಲ್ಲಿ ಬ್ರಹ್ಮ, ಹೋತ್ರ, ಅಧ್ವರ್ಯು, ಉದ್ಗಾತ್ರ ಎಂಬ ನಾಲ್ಕು ಜನ ಋತ್ವಿಕರು ಯಜ್ಞ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಯಜ್ಞದ ಬಗೆಗೆ ಚೆನ್ನಾಗಿ ಬಲ್ಲವನು ಪುರೋಹಿತ. ದೇವತೆಗಳನ್ನು ಯಜ್ಞಕ್ಕೆ ಕರೆತರುವವನು. ಹೋಮಕುಂಡದಲ್ಲಿ ಆಜ್ಯದಿಂದ ಅಗ್ನಿಯನ್ನು ಪ್ರಜ್ವಲಿಸುವವನು.

ದೇವರಾತ : ಅಗ್ನಿಯು ಯಜ್ಞ ಸಂಪಾದಕ, ಅದಿತಿ ಪುತ್ರ, ವರುಣ ದೇವರ ಕ್ರೋಧ ಶಮನಕ್ಕೆ ಯಜ್ಞ ಹೋಮ ಸ್ತೋತ್ರಗಳನ್ನು ನಮಸ್ಕಾರಗಳನ್ನು ಹಗಲೂ ರಾತ್ರಿ ಅರ್ಪಿಸುತ್ತಾರೆ. ಲೋಕ ಕಲ್ಯಾಣಕ್ಕಾಗಿ ಇಂದ್ರ ವರುಣರಿಗೆ ಹವಿಸ್ಸು ಅರ್ಪಿಸುತ್ತಾರೆ. ಸಮಸ್ತ ಅಗ್ನಿಗಳೊಂದಿಗೆ ಅಗ್ನಿಯು ಆಸೀನನಾಗಲಿ. ದೇವತೆಗಳು ಪ್ರಾರ್ಥನೆಗಳನ್ನು ಸ್ವೀಕರಿಸಲಿ.

ದೀರ್ಘತಮ ಔಚಿತ್ಯರು : ಯಾಜ್ಞಿಕರು ಮಂತ್ರ ರೂಪ ಶಕ್ತಿ ಶರೀರ ಸಾಮರ್ಥ್ಯ ಸ್ತೋತ್ರಗಳಿಂದ ಅಗ್ನಿಯನ್ನು ಉತ್ಪಾದಿಸಿ ಕಟ್ಟಿಗೆಯಲ್ಲಿ ಸೂಕ್ಷ್ಮನಾಗಿದ್ದ ಅಗ್ನಿಯನ್ನು ಜಾಗೃತಗೊಳಿಸಿ ವಾಯುವಿನ ಸಹಾಯದಿಂದ ಮೂಲಿಕೆಗಳನ್ನು ದಶ ದಿಕ್ಕುಗಳಿಂದಲೂ ಆಕ್ರಮಿಸುತ್ತಾರೆ.

ಅಗ್ನಿ ಜ್ವಾಲೆಗಳು ಊರ್ಧ್ವ ಮುಖವಾಗಿ ಅಂತರಿಕ್ಷ ಸೇರುತ್ತವೆ. ಜ್ವಲಿಸುವ ಅಗ್ನಿಯಿಂದ ಕಾಷ್ಟಗಳು ಕಪ್ಪಾಗಿ ಮೃಗ ಪಕ್ಷಿಗಳು ಓಡಿಹೋಗುತ್ತವೆ. ಕರ್ತವ್ಯ ನಿರತ ವರುಣ, ಉದಾರ ದಾನಿ ಮಿತ್ರ, ಇವರು ಅಗ್ನಿಯಿಂದ ತೀಕ್ಷ್ಣ ಚೇತನ್ಯ ಪಡೆಯುತ್ತಾರೆ. ಋತ್ವಿಜರು ದೇವತೆಗಳನ್ನು ತೃಪ್ತಿಪಡಿಸುವ ಅಗ್ನಿಯನ್ನು ಶರೀರ ಬಲ ಕರ್ಮಗಳಿಂದ ಪೂಜಿಸುತ್ತಾರೆ. ಪ್ರಜ್ವಲಿಸುವ ಅಗ್ನಿ ಯಜ್ಞವನ್ನು ವಿಸ್ತರಿಸಿ ಯಜಮಾನನ ಹವಿಸ್ಸನ್ನು ಸ್ವೀಕರಿಸಲು ದೇವತೆಗಳನ್ನು ಕರೆತರಲಿ. ಫಲದಾಯಕ ಯಜ್ಞ ನೆರವೇರಿಸಲು ಹೇಳುತ್ತಾರೆ. ಭೃಗು ವಂಶದಲ್ಲಿ ರಾಜರೆಲ್ಲರಿಂದಲೂ ಯಜ್ಞದಲ್ಲಿ ಸ್ಥಾಪಿತನಾದಂತೆ ಈ ಯಜ್ಞದಲ್ಲೂ ಉತ್ತರ ವೇದಿಕೆಯಲ್ಲಿ ಸಕಾಲದಲ್ಲಿ ಸ್ಥಾಪಿತನಾಗಲಿ. ಪ್ರಜ್ವಲಿಸಲಿ. ಹೋತ್ರ, ಅಧ್ವರ್ಯು ಒಂದೇ ಶ್ರಮದಿಂದ ಕರ್ಮ ನಿರ್ವಹಿಸುತ್ತಾರೆ. ಇವರು ವಿಶೇಷ ಅನುಭವದಿಂದ ಯಜ್ಞ ಕರ್ಮ ಆಚರಿಸುತ್ತಾರೆ. ಹವಿಸ್ಸು, ಅನ್ನ ಆಜ್ಯಗಳಿಂದ ಅಗ್ನಿಯನ್ನು ತರುಣನಂತೆ ಮಾಡುತ್ತಾರೆ. ಅಗ್ನಿಯು ಸ್ತೋತ್ರ, ಹವಿಸ್ಸುಗಳಿಂದ ತೃಪ್ತನಾಗಲಿ.

★ ಯಾಜ್ಞಿಕರಿಗೆ ಯಜ್ಞಾನುಷ್ಟಾನ ಕರ್ಮಗಳಿಗೆ ಕರ್ತವ್ಯ ಜ್ಞಾನ ಉಪದೇಶಿಸುತ್ತಾನೆ. ★ಮೇಧಾವಿ, ಪ್ರಯೋಗ ಕುಶಲರು, ಹೋತ್ರ, ಅಧ್ವರ್ಯು, ಯಜಮಾನ ಅವನ ಪತ್ನಿ ಯಜ್ಞ ಸಿದ್ಧ ಮಾಡಿ ಅಗ್ನಿಯನ್ನು ಸಂತೋಷಗೊಳಿಸುತ್ತಾರೆ. ಹೃತ್ಪೂರ್ವಕವಾಗಿ ಆರಾದಿಸುತ್ತಾರೆ. ಸಾಕ್ಷಾತ್‌ಕರಿಸಿಕೊಳ್ಳುತ್ತಾರೆ. ★ದೇವಭಕ್ತರಲ್ಲದವರು ಎರಡು ಬಗೆ(1) ಧನಿಕರಾಗಿದ್ದು ಅಗ್ನಿಯನ್ನು ಪೂಜಿಸದವರು , ದಕ್ಷಿಣೆ ಕೊಡದವರು (2) ದೈವಭಕ್ತರಲ್ಲದವರು, ಸ್ತುತಿಸದವರು, ನಾಸ್ತಿಕರು ಈ ಇಬ್ಬರನ್ನು ಅಗ್ನಿಯು ಅನುಗ್ರಹಿಸಬಾರದು.

ಅಗ್ನಿಯನ್ನು ಪೂಜಿಸುವವರು. ಅಗ್ನಿ ಮೂರ್ತಿಯನ್ನು ಸ್ತೋತ್ರ ಸ್ತುತಿಗಳಿಂದ ಪೂಜಿಸುತ್ತಾರೆ. ಅಗ್ನಿಯ ಪ್ರಕಾಶ ರಶ್ಮಿಗಳು ವಾಯುವಿನಲ್ಲಿ ಅವಿಯಾಗಿ ವ್ಯಾಪಿಸಿ ಅನ್ನ, ಆಯಸ್ಸು, ಯಜ್ಞಕರ್ತರಿಗೆ ಹಾಗೂ ಅವರ ಪುತ್ರ, ಪೌತ್ರರಿಗೆ ಸಂತೋಷ ಸೂಚಿಸುವರು, ತಮ್ಮ ಕರ್ಮಗಳಿಂದ ತಮ್ಮನ್ನು ತಾವೇ ರಕ್ಷಿಸಿಕೊಳ್ಳಬಲ್ಲವರು, ಗಾರ್ಹಪತ್ಯದಿಂದ ಆಹವನೀಯಾರ್ಥ ಅಲ್ಲೇ ನಿಲ್ಲಿಸಿಕೊಂಡಿದ್ದಾರೆ. ನಂತರ ಯಜ್ಞ ಸ್ಥಾನಕ್ಕೆ ಕರೆದ್ಯೊಯುತ್ತಾರೆ. ಯಾಜ್ಞಿಕರು ಭಕ್ತಿ ಶ್ರದ್ಧೆಗಳಿಂದ ಯಜ್ಞಾದಿಗಳಿಂದ ಕರ್ಮನಿರತರಾಗಿರುತ್ತಾರೆ. ಹವಿಸ್ಸು ಅರ್ಪಿಸುವವರಿಗೆ ಸಂಪತ್ ಪ್ರದಾತ. ಮಾನವರು ಯಜ್ಞಾದಿಗಳಲ್ಲಿ ಮಿತ್ರಾ ವರುಣರನ್ನು ಶ್ಲಾಘಿಸುತ್ತಾರೆ, ಪೂಜಿಸುತ್ತಾರೆ, ಆತ್ಮ ಸಂತೋಷದಿಂದ ಸೋಮಾಹುತಿ ಅರ್ಪಿಸುತ್ತಾರೆ. ಅಗ್ನಿಮತ್ತು ಆಹ್ವಾನಿತ ದೇವತೆಗಳು ಯಾಗಕ್ಕೆ ಬರಲಿ, ನಮ್ಮ ಸ್ತುತಿಗಳನ್ನು ಕೇಳಲಿ, ಹವಿಸ್ಸನ್ನು ಸ್ವೀಕರಿಸಲಿ, ಯಾಗ ಕರ್ಮಗಳನ್ನು ನಿರ್ವಿಘ್ನವಾಗಿ, ಯಶಸ್ವಿಯಾಗಿ ನಡೆಸಿಕೊಡಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಆಶ್ರಮ ವಿಭಾಗ

## ಅಗ್ನಿದೇವರು

**ಋಷಿಗಳು : ಗೃತ್ಸಮದರು – ಮಂಡಲ ಎರಡು**

ಅಹೋ ರಾತ್ರಿ ದೇವತೆಗಳನ್ನು ಪೂಜಿಸಲಿ. ಅಗ್ನಿಯು ಯಜಮಾನನಿಂದ ಸ್ತುತಿತನಾಗುತ್ತಾನೆ. ಆಹ್ವಾನಿಸುತ್ತಾರೆ, ನಮಸ್ಕರಿಸುತ್ತಾರೆ, ಅಧ್ವರ್ಯುಗಳು ಉಷಃಕಾಲದಿಂದಲೇ ಆರಾಧಿಸುತ್ತಾರೆ.

ಇಂದ್ರನನ್ನು ಪೂಜಿಸಲಿ. ಅಗ್ನಿ ಉದಕ ಪಾಷಾಣಗಳಿಂದ ಉತ್ಪನ್ನನಾಗುತ್ತಾನೆ, ಉಪಚರಿಸುತ್ತಾರೆ.

ಋತ್ವಿಜರು ಇಂದ್ರನನ್ನು ಪೂಜಿಸಲಿ, ಋಷಿಗಳು ಅಗ್ನಿಯನ್ನು ತಿಳಿದವರು, ಋತ್ವಿಜರು ಅಗ್ನಿಯನ್ನು ಕುರಿತು ಶಸ್ತ್ರ ಮಂತ್ರ ಘಠಿಸುತ್ತಾರೆ. ಯಜ್ಞಗಳಲ್ಲಿ, ಯಜ್ಞ ಗೃಹದಲ್ಲಿ ಅಗ್ನಿಯನ್ನು ಆರಾಧಿಸುತ್ತಾರೆ. ಎಲ್ಲಾ ದೇವತೆಗಳನ್ನೂ ಉಚ್ಛ ಪ್ರದೇಶದಲ್ಲಿ ಒಟ್ಟಿಗೆ ಪೂಜಿಸಲಿ. ದ್ವಾರ ದೇವತೆಗಳನ್ನು ಪೂಜಿಸಲಿ. ನ್ಯೂನತೆ ಇಲ್ಲದೆ ಮಂತ್ರಗಳಿಂದ ಕರ್ಮ ನಡೆಸಲಿ. ನಮ್ಮೆಲ್ಲರಿಗಾಗಿಯೇ ಋಷಿಗಳು ಅಗ್ನಿಯನ್ನು ಆಹ್ವಾನಿಸುತ್ತಾರೆ. ಪ್ರಾರ್ಥಿಸಲಿ, ಪ್ರತ್ಯಕ್ಷವಾಗಿ ಪೂಜಿಸಲಿ, ಪ್ರಯೋಗ ಸ್ವರೂಪ ತಿಳಿದವರು ಪೂಜೆಗಳಿಂದ ಹೋಮಗಳ ಮೂಲಕ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಯಜ್ಞ ಕರ್ಮಗಳನ್ನು ಮಾಡುತ್ತಾರೆ. ಮಹತ್ವವುಳ್ಳ ಸ್ತೋತ್ರ ಮಾಡುತ್ತಾರೆ. ಮರುತ್‌ಗಳು ಇಂದ್ರನನ್ನು ಕರೆತರಲಿ. ಯಾಗಾರ್ಹ ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡಲಿ. ಯಜ್ಞದಲ್ಲಿ ಎಲ್ಲವೂ ಮೊದಲು ಅಗ್ನಿಗೆ. ಅನಂತರ ದ್ಯಾವಾ ಪೃಥ್ವಿಗಳಿಗೆ, ಯಜ್ಞ, ದೇವತಾರಾಧನೆ ಇರುವ ಸಮಸ್ತ ಮನನೀಯ ಧನ, 'ಜುಹೂ' ಪಾತ್ರೆಯಲ್ಲಿ ತುಂಬಿದೆ.

ವಿಶ್ವೇ ದೇವತೆಗಳು ಆದಿತ್ಯರು ಬರ್ಹಿಯ ಮೇಲೆ ಕೂಡಲಿ. ಶ್ರೇಷ್ಠ ಮಂತ್ರಗಳಿಂದ ಅಗ್ನಿಯನ್ನು ಪ್ರವೃದ್ಧಿಗೊಳಿಸುತ್ತಾರೆ. ಸ್ತೋತ್ರಗಳಿಂದ, ಪೂಜೆಗಳಿಂದ, ಹೋಮಗಳ ಮೂಲಕ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಸ್ತುತಿ ಪೂಜೆ ಯಾಗಗಳನ್ನು ಮಾಡಲಾಗುತ್ತದೆ. ★ಸ್ವಲ್ಪ ಹವಿಸ್ಸನ್ನೇ ಅಧಿಕವೆಂದು ಅರಿಯುತ್ತಾ ಕೃಷ್ಣ ವರ್ಣದ ಮಾರ್ಗದಲ್ಲಿ ದೇವಲೋಕ ಅವರೋಹಣ ಸ್ಥಾನವನ್ನು ಅಗ್ನಿ ಹತ್ತುವನು. ಹಗಲಿರುಳೂ ಸಾನಿಧ್ಯ ಬಯಸುತ್ತಾರೆ. ಹವಿಸ್ಸಿನಿಂದ ಅಲಂಕರಿಸುತ್ತಾರೆ. ಹೋಮಕಾಲದಲ್ಲಿ ದೇವತೆಗಳನ್ನು ತೃಪ್ತಿ ಪಡಿಸುತ್ತಾರೆ. ಹವಿಸ್ಸು, ಅನ್ನ, ಸ್ತುತಿ, ಪುರೋಡಾಶ ಮಂತ್ರಗಳು, ಪೂಜೆಗಳನ್ನು ಪುತ್ರಾದಿಗಳೊಂದಿಗೆ ಯಜಮಾನರು ಮಾಡುತ್ತಾರೆ.

**ವಿಶ್ವಾಮಿತ್ರ, ಋಷಿಗಳು – ಮಂಡಲ ಮೂರು**

ಅಗ್ನಿಯು ತಾವು ಉದ್ದೇಶಿಸಿದ ದೇವತೆಯನ್ನು ಕರೆತರಲಿ, ಪ್ರಜ್ವಲಿಸಿದಾಗ ಯಾಜ್ಞಿಕರು ಸ್ತುತಿಸಿದಾಗ 33 ದೇವತೆಗಳು ಅವರ ಪತ್ನಿಯರು, ಪಿತೃಗಳು ಎಲ್ಲರೂ ★ ಒಂದೇ ಅಥವಾ ಅನೇಕ ರಥಗಳಲ್ಲಿ ಯಜ್ಞಾಭಿಮುಖ ಬರಲು ಪ್ರಾರ್ಥಿಸುತ್ತಾರೆ. ಅಗ್ನಿಯನ್ನು ಆಶ್ರಯಿಸಿದವರು ಅಗ್ನಿ ಶಾಸನಕ್ಕೆ ಒಳಪಟ್ಟಿರುತ್ತಾರೆ. ತೇಜಸ್ವಿಗಳಾಗಿ ಸ್ವರ್ಗ ಸೇರುತ್ತಾರೆ. ಅಗ್ನಿ ಕುಂಡಲದ ಸುತ್ತ ಋತ್ವಿಜರು ಇರುತ್ತಾರೆ. (ಎ) ಅಧ್ವರ್ಯುಗಳು ಐದು ಜನ ಹೋತೃಗಳು ಏಳು ಜನ, ಒಟ್ಟು ಹನ್ನೆರಡು ಜನರಿರುತ್ತಾರೆ. ಅಗ್ನಿಯು ಆಹವನೀಯ ಸ್ಥಾನ ರಕ್ಷಿಸುತ್ತಾನೆ. ಮೂರು ಸವನಗಳಲ್ಲಿಯೂ ಪುರೋಡಾಶ ಅರ್ಪಿಸುತ್ತಾರೆ. ಅಗ್ನಿಯನ್ನು ಈ ಹಿಂದಿನವರು ಉತ್ಪಾದಿಸಿದಂತೆಯೇ ಸಪ್ತ ಹೋತೃಗಳ ಸನಾತನ ಅಗ್ನಿಯನ್ನು ಹತ್ತು ಬೆರಳುಗಳಿಂದ ಮಥನ ಮಾಡಿ ಉತ್ಪಾದಿಸಿದರು. ಅಗ್ನಿಯ ಉತ್ಪನ್ನವನ್ನು ಪುತ್ರೋತ್ಸವದಂತೆ ಆಚರಿಸುತ್ತಾರೆ. ಋತ್ವಿಜರು ಶಸ್ತ್ರಮಂತ್ರಗಳನ್ನು ಪಠಿಸುತ್ತಾರೆ. ನ್ಯೂನಾತೀತಗಳಿಲ್ಲದಂತೆ ಕರ್ಮ ಮಾಡುತ್ತಾರೆ. ನಾಲ್ಕು ದಿಕ್ಕಿನಲ್ಲೂ ನಾಲ್ಕು ಜನರಿರುತ್ತಾರೆ. ಅಗ್ನಿಷ್ಟೋಮ ಯಾಗ ಮಾಡುತ್ತಾರೆ. ಎಲ್ಲರಿಗೂ ಸ್ತೋತ್ರಗಳು ಪೂಜೆಗಳು, ಹವಿಸ್ಸು ಅರ್ಪಿಸಿ ಅವನ್ನು ಆಯಾಯ ದೇವತೆಗಳಿಗೆ ತಲುಪಿಸಲು ಅಗ್ನಿಯನ್ನು ಪ್ರಾರ್ಥಿಸಿದ್ದಾರೆ.ಒಂಗುಗೂಡಿ ಯಜ್ಞ ನಿರ್ವಹಿಸಿ ದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಗೊಳಿಸುತ್ತಾರೆ. ಕರ್ಮವಂತ ಯಜಮಾನರು ಆಹ್ವಾನಿಸುತ್ತಾರೆ. ★'ಕುಶಿಕ' ವಂಶೋತ್ಪನ್ನ ಋಷಿಯು ಮನಸ್ಸಿನಲ್ಲಿಯೇ ಧ್ಯಾನ, ಸ್ತುತಿ, ಪ್ರಾರ್ಥನೆ, ಹವಿಸ್ಸು ಅರ್ಪಿಸುತ್ತಾನೆ.

ಘೃತ ಸ್ರುಕ್ ಪಾತ್ರೆ ದೇವತೆಗಳ ಪೂರ್ವಾಭಿಮುಖದಲ್ಲಿ ಇರುತ್ತದೆ. ದೇವತೆಗಳಿಗೆ ದರ್ಭಾಸನವು ಸಿದ್ಧವಾಗಿದೆ. ಅವರುಗಳು ಕುಳಿತುಕೊಳ್ಳುವಂತೆ ಪ್ರಾರ್ಥಿಸುತ್ತಾರೆ. ★ದೇವಶ್ರವ, ದೇವರಾತರು, ಭರತ ಪುತ್ರರು ಇವರು ತಮ್ಮ ಹತ್ತೂ ಬೆರಳುಗಳಿಂದ ಅಗ್ನಿಯನ್ನು ಮಥಿಸಿ ಉತ್ಪಾದಿಸಿದ್ದಾರೆ. ನಾನಾ ದೇವತೆಗಳನ್ನು ಯಜ್ಞಕ್ಕೆ ಕರೆತರಲು ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ಭೂದೇವಿಯು ಅನುಕೂಲಕರಳಾಗಿ ಇರುವಂತೆ ಯಾಜ್ಞಿಕರು ಪ್ರಾರ್ಥಿಸುತ್ತಾರೆ. ಮೇಧಾವಿ ಋತ್ವಿಜರು ರಮಣೀಯ ಸ್ತೋತ್ರಗಳಿಂದ ಯಜ್ಞ ನಿರ್ವಹಿಸುತ್ತಾರೆ. ಯಜ್ಞಕ್ಕೆ ಬೇಕಾಗುವ ಎಲ್ಲಾ ಸಾಮಗ್ರಿಗಳು ಯಜ್ಞಶಾಲೆಯಲ್ಲಿ ಸಿದ್ಧವಾಗಿವೆ. ಯಜ್ಞಮಂಟಪದಲ್ಲಿ ದೇವತೆಗಳ ಸ್ತೋತ್ರಗಳು, ಹವಿರರ್ಪಣೆ, ಪುರೋಡಾಶ, ನಮಸ್ಕಾರಗಳನ್ನು ಮಾಡಲಾಗುತ್ತದೆ. ಯೂಪ, ರಜ್ಜು, ದರ್ಭೆ, ಕೂರ್ಚ ಸಿದ್ಧವಾಗಿವೆ. ರಾತ್ರಿ ಆರಂಭದಲ್ಲಿ ಉದ್ದೀಪ್ತ ಅಗ್ನಿಯನ್ನು ಉಪಾಸಿಸಿ ಆಹುತಿ ಅರ್ಪಿಸುತ್ತಾರೆ. ಸೋಮಸೇಚನದಿಂದ ಮೊದಲು ಅಗ್ನಿಯನ್ನು ಸಂತೋಷಗೊಳಿಸುತ್ತಾರೆ. ನಂತರ ಇತರ ದೇವತೆಗಳನ್ನು ಸಂತೋಷಗೊಳಿಸುತ್ತಾರೆ.

ಋಷಿಗಳು ವಾಮನರು - ಮಂಡಲ ನಾಲ್ಕು

ಅಧ್ವರ್ಯುಗಳೂ ಘೃತದಿಂದ ಪೋಷಿಸಿದರು. ಅಗ್ನಿಯು ಯಜ್ಞದ್ವಾರಕ್ಕೆ ಬರಲು ಪ್ರಾರ್ಥಿಸಿದರು. ಉತ್ತರ ವೇದಿಕೆಯಲ್ಲಿ ಸ್ಥಾಪಿಸಿದರು, ಅನ್ನ ಪುರೋಡಾಷ ಅರ್ಪಿಸುತ್ತಾರೆ. ಅಗ್ನಿಯ ತೇಜಸ್ಸನ್ನು ಅರಿಯುತ್ತಾರೆ.

ಇತರ ಋಷಿಗಳು ಸಹ ಉಪಚರಿಸಿ ಆದಿತ್ಯ, ತಮಜ್ಯೋತಿ ಪಡೆದು ಯಜ್ಞಕರ್ಮ ನೆರವೇರಿಸಿದರು, ಇಂದ್ರಾದಿಗಳ ನಡುವೆ ಯಜ್ಞನಿರ್ವಾಹಕನಾದ ಅಗ್ನಿಯನ್ನು ಋತ್ವಿಜರು ಪ್ರತಿದಿನವೂ ಅತಿಶಯವಾಗಿ ಸ್ತುತಿಸುತ್ತಾರೆ.

ಉತ್ತಮ ಸ್ತುತಿ ನಿರ್ಮಿಸಲು ನಮಗೆ ಬುದ್ಧಿ ಕೊಡಲಿ. ಋಷಿಗಳು ಅಗ್ನಿಯನ್ನು ಆಹ್ವಾನಿಸುತ್ತಾರೆ. ಋತ್ವಿಜರು ಸ್ತೋತ್ರಗಳನ್ನು ಪಠಿಸುತ್ತಾರೆ. ಕರ್ಮ ಪ್ರವೃತ್ತ ಮಾನವರು ಅಗ್ನಿಯನ್ನು ಆಹ್ವಾನಿಸಿ ವಿಶ್ವವ್ಯಾಪಿ ಮಾಡಿದರು. ದೇವತೆಗಳ ಯಜ್ಞದಲ್ಲಿ ಅಗ್ನಿಯು ಯಜಮಾನನಿಗೆ ಬಂಧುವಾಗಿ ಇರಲಿ. ಪಿತೃ ಪಿತಾಮಹಾಧಿ ಆಂಗೀರಸರು ಯಜ್ಞಸ್ಥಾಪಿಸಿ ಅಗ್ನಿಯನ್ನು ಪೂಜಿಸಿರುವುದರಿಂದ ಪರ್ವತ ಗುಹೆಗಳಲ್ಲಿ ತಡೆಹಿಡಿದಿದ್ದ ಗೋವುಗಳು ಹೊರಬಂದವು. ಪೂಜಿಸುವವರಿಗೆ ಅಗ್ನಿಸ್ನೇಹಿತನಾಗಿರುತ್ತಾನೆ. ಬ್ರಹ್ಮನಾಲ್ಕು ವೇದಗಳನ್ನು ಬಲ್ಲವನು, ನಮ್ಮ ಸ್ತೋತ್ರಗಳನ್ನು ಆಲಿಸಲಿ. ಮಾನವರ ಅತಿಥಿ, ಹವಿಸ್ಸನ್ನು ದೇವತೆಗಳಿಗೆ ತಲುಪಿಸುವವನು. ಮಹಿಮೆಯ ಪಠಣದಿಂದ ಒಳ್ಳೆಯ ಬುದ್ಧಿ, ಪುತ್ರರು, ಧನ, ರಕ್ಷಣೆ ಪಡೆಯುತ್ತಾರೆ. ಸತ್ಕರ್ಮ ಮಾಡಿ ಅಗ್ನಿಯ ರಕ್ಷಣೆ ಪಡೆಯಲಿ.

ಮಾನವರು ಅಗ್ನಿಯನ್ನು ಉಪಚರಿಸುತ್ತಾರೆ. ಯಜಮಾನರು ಸ್ತುತಿಗಳಿಂದ, ಕರ್ಮಗಳಿಂದ ಅಗ್ನಿಯನ್ನು, ದೇವತೆಗಳನ್ನು ಪ್ರೇರಿಸುತ್ತಾರೆ. ಯಾಗಾದಿಗಳಿಂದ ಮಾನವ ಜನ್ಮ ಸಂಸ್ಕಾರ. ಅದರಿಂದ ಅಗ್ನಿಯು ಅವರಿಗೆ ಅನುಗ್ರಹಿಸಲು ಸಿದ್ಧನಾಗುತ್ತಾನೆ. ಯಜಮಾನರು ಶ್ರೇಷ್ಟಕರ್ಮಕರ್ತರು, ಶಾಂತಿಯುತರು, ದೇವತಾತ್ಮರು, ದೇವತಾ ಅಪೇಕ್ಷಿಗಳು, ಹವಿರ್ವಾಹಕ ಅಗ್ನಿಯು ಮನೋ ವೇಗ ಅಶ್ವದಲ್ಲಿ ಬರುವನು. ಯಜಮಾನನಿಗೆ ನೇತ್ರವಾಗಿರುತ್ತಾನೆ. ಅಗ್ನಿಯನ್ನು ಸ್ತುತಿಪೂರ್ವಕ ಕರ್ಮಗಳಿಂದ ಸ್ತುತಿಸುತ್ತಾರೆ, ಉಪಚರಿಸುತ್ತಾರೆ. ಸವನ ತ್ರಯಗಳಲ್ಲೂ 'ಸ್ರುಕ್' ಪಾತ್ರೆ ಹಿಡಿದು ಅಗ್ನಿಯನ್ನು ಪ್ರಕಾಶಗೊಳಿಸುತ್ತಾರೆ. ಯಜ್ಞವನ್ನು ದೇವತೆಗಳು ಸ್ವೀಕರಿಸಲಿ. ಶುಭ್ರ ಮನಸ್ಸಿನಿಂದ, ತೇಜಸ್ಸಿನಿಂದ ಅಭಿಮುಖನಾಗಲಿ ಎಂದು ಅಗ್ನಿಯನ್ನು ಪ್ರಾರ್ಥಿಸುತ್ತಾರೆ.

ಹೋತೃಗಳು ಏಳು ಜನ ಸ್ತುತಿಗಳನ್ನು ನಿರ್ಮಿಸಿದರು, ಹವಿರರ್ಪಿಸಿದವರಿಗೆ ರಮಣೀಯ ಧನ ನೀಡುತ್ತಾನೆ. ಯಾಜ್ಞಿಕರು ಸ್ತುತಿಗಳು, ನಮಸ್ಕಾರಗಳು, ಘೃತ ಧಾರೆಗಳು ಎಲ್ಲವನ್ನೂ ಭಕ್ತಿ ಪೂರ್ವಕವಾಗಿ ಮಾಡುತ್ತಾರೆ. ಅದನ್ನು ಅಗ್ನಿ ಸ್ವೀಕರಿಸುತ್ತಾನೆ. ★ ಭಕ್ತಿಯಿಂದ, ಆತ್ಮ ಪ್ರೇರಣೆಯಿಂದ ಅಗ್ನಿಯನ್ನು ಉಪಚರಿಸುವವರು ಧನ ರಕ್ಷಣೆ ಪಡೆಯುತ್ತಾರೆ. ★ ಅಗ್ನಿಯು ಪ್ರತ್ಯಕ್ಷನಾಗಿ ಎರಡು ಪಳಗಿದ ಅಶ್ವಗಳನ್ನು ಯಜಮಾನನಿಗೆ ಒಪ್ಪಿಸಿದ್ದಾನೆ. ಅದನ್ನು ಪಡೆದಿದ್ದಾರೆ.

**ಅತ್ರಿ ಋಷಿಗಳು : ಮಂಡಲ ಐದು**

ಅಗ್ನಿ ಅತಿಶಯ ಪ್ರಕಾಶಿ, ಪತಿ- ಪತ್ನಿಯರನ್ನು ಒಂದುಗೂಡಿಸಿ ಸತ್ಕರಿಸುತ್ತಾನೆ. ಇಚ್ಛಿಸಿದಾಗಲೆಲ್ಲ ಹವಿರರ್ಪಣೆಗೊಂಡು ತಾನು ವೃದ್ಧಿಹೊಂದಿ ಯಜಮಾನನಿಗೂ ಸುಖ ಉಂಟುಮಾಡುತ್ತಾನೆ. ಅಗ್ನಿಯನ್ನು ಸಮೀಪಿಸಿ ಮಂತ್ರ ಪೂರ್ವಕ ಹವಿಸ್ಸು ಅರ್ಪಿಸುತ್ತಾರೆ. ಅತ್ರಿ ಋಷಿ ಪರಂಪರೆಯ ಯಜಮಾನರು ಅಗ್ನಿಗೆ ಹವಿರರ್ಪಣೆ ಅದೋಮುಖ ಆಜ್ಯಧಾರೆ ಮಾಡುತ್ತಾರೆ. ಪ್ರಜ್ವಲಿಸುವಂತೆ ಮಾಡುತ್ತಾರೆ. ★ಅಗ್ನಿ ಕರ್ಮಗಳಿಗೆ ವಿಘ್ನ ಮಾಡುವುದಿಲ್ಲ. ಅಗ್ನಿಯನ್ನು ಯಜಮಾನರು ಸಾಕ್ಷಾತ್ಕರಿಸಿಕೊಳ್ಳಲಿ. ಅಸುರರಿಗೂ ಹೊಂದಲು ಅಸಾಧ್ಯವಾದ ಹವಿಸ್ಸನ್ನು ಪ್ರಧಾನ ಅಗ್ನಿಗೆ ಅರ್ಪಿಸಿದರು. ★ ಅಗ್ನಿಯು ಜನನಿ ಪೃಥ್ವಿಯ ಉತ್ತುಂಗದಲ್ಲಿ ಕುಳಿತು ಹವಿಸ್ಸು ಸ್ವೀಕರಿಸುತ್ತಾನೆ. ವೃದ್ಧಿ ಹೊಂದುತ್ತಾನೆ, ಶತ್ರು ನಾಶ ಮಾಡಿ ಯಾಜ್ಞಿಕರಿಗೆ ಅನುಗ್ರಹಿಸುತ್ತಾನೆ. ಅಗ್ನಿಯು ದರ್ಭಾಸೀನರಾಗಲಿ. ಪೂಜೆ ಸ್ತುತಿ ಅರ್ಪಿಸುತ್ತಾರೆ. ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ಸ್ತೋತ್ರ ಮಾಡುತ್ತಾರೆ. ಅಗ್ನಿಯ ಪೂರ್ಣ ಪಾತ್ರೆಯು 'ಸ್ರುಕ್' ಅಗ್ನಿಯನ್ನು ಸಮೀಪಿಸುತ್ತದೆ. ಆಗ ಯಜಮಾನರು ದೇವತೆಗಳನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

★ಇಂದ್ರನನ್ನು ಅಗ್ನಿಯು ರಥದಲ್ಲಿ ರಕ್ಷಣೆಗಾಗಿ ಕರೆತರುತ್ತಾನೆ. ಇದರಿಂದ ಅಗ್ನಿಯನ್ನು ಪೂಜಿಸದ, ಹವಿರರ್ಪಿಸದ ನಾಸ್ತಿಕರು ಯಜಮಾನನ್ನು ಹಿಂಸಿಸಲಾರರು, ಇಳಾ, ಭಾರತಿ, ಸರಸ್ವತಿಯರು ದಯ ಮಾಡಿಸಲಿ, ಅವರೂ ದರ್ಭಾಸೀನರಾಗಲಿ. ಋಷಿಗೆ ಅಗ್ನಿಯ ಹೊಂಬಣ್ಣ ಆದಿತ್ಯನಂತೆ ಕಾಣಿಸುತ್ತದೆ. ಋಷಿಯು ಅಗ್ನಿಗೆ ಅಮೃತತ್ವ ಸಾಧಕ, ಸರ್ವತ್ರ ವ್ಯಾಪ್ತ, ದರ್ಬೆಯನ್ನು ಮೃದುವಾಗಿ ವಿಸ್ತಾರವಾಗಿ ರತ್ನಕಂಬಳಿಯಂತೆ ಹರಡಲಿ. ದ್ವಾರಾಭಿಮಾನಿ ದೇವತೆಗಳು ಸಂಚಾರ ಸ್ವಭಾವದವರು, ದೇವತಾತ್ಮರು, ದ್ಯಾವಾ, ಪೃಥ್ವಿಗಳು ಅಗ್ನಿಯನ್ನು ಸುತ್ತುವರಿದು ನಿಂತಿವೆ. ದು:ಖ ರಹಿತ ಯಜಮಾನರು, ಋತ್ವಿಜರು ಎಲ್ಲರನ್ನೂ ಸ್ತುತಿಸುತ್ತಾರೆ. ದಾನ ಮಾಡುವ ಬುದ್ಧಿ ನೀಡಲಿ. ಸಂಪತ್ತನ್ನು ಕರುಣಿಸಲಿ.

ನೂತನ ಕಟ್ಟಿಗೆಗಳೆರಡರಿಂದ ಯಜಮಾನರು ಶಿಶುವಿನಂತೆ ಅಗ್ನಿಯನ್ನು ಉತ್ಪಾದಿಸುವರು. ಪರಮ ಐಶ್ವರ್ಯಯುಕ್ತ ಹವಿಸ್ಸು ಅರ್ಪಿಸುತ್ತಾರೆ. 'ಪುರು' ಋಷಿಯು ಸಕಲ ದೇವತೆಗಳಿಗೂ ನಿಯಮಿತ ಹವಿಸ್ಸು ಅರ್ಪಿಸುತ್ತಾರೆ. ★ಪ್ರಿಯಸ್ವಂತ ಆತ್ರೇಯ 'ಅಗ್ನಿಯನ್ನು' ಹೋತೃವಾಗಿ ಮಾಡಿಕೊಂಡಿದ್ದಾರೆ. ಸ್ತುತಿ ವಾಕ್ಯಗಳಿಂದ ಪ್ರಾರ್ಥಿಸಿದ್ದಾರೆ. ಪ್ರಜ್ವಲಿತನಾದೊಡನೆಯೇ ದೇವತೆಗಳನ್ನು ಕುರಿತು ಯಜ್ಞ ಮಾಡಲಿ. ಮಾನವರು ಕೀರ್ತಿ ಸಂಪಾದನೆಗಾಗಿ ಅಗ್ನಿಗೆ ಹವಿಸ್ಸು ಅರ್ಪಿಸಿ ಸ್ತುತಿಸಿ ದರ್ಭಾಸಿನ ಸಿದ್ಧಪಡಿಸಿ ಆಹ್ವಾನಿಸುತ್ತಾರೆ. ಮಾನವರು ಮಂಗಳಕಾರ್ಯದಲ್ಲಿತೊಡಗಿದ್ದಾರೆ. ಅಗ್ನಿದೇವತೆಯನ್ನು ಸುಸ್ರಾವ್ಯದಿಂದ ಪ್ರಶಂಶಿಸಿ ವೃದ್ಧಿಪಡಿಸುತ್ತಾರೆ. ಮಿತ್ರರರನ್ನು ಆದರಿಸುವಂತೆ ಉಪಚರಿಸುತ್ತಾರೆ.

ಯಜಮಾನ ಋಷಿಯು ಅಗ್ನಿಯನ್ನು ದೂರದಿಂದ, ಹತ್ತಿರದಿಂದ ಪ್ರಶಂಸೆ, ಪೂಜೆ, ಹವಿಸ್ಸು ಅರ್ಪಿಸುತ್ತಾನೆ. ಯಜ್ಞ ಫಲ ಅಪೇಕ್ಷಿಸುವ ಋತ್ವಿಜರು ಅಗ್ನಿಯನ್ನು ಪೋಷಿಸುತ್ತಾರೆ. ಅಗ್ನಿಗೆ ಶಸ್ತ್ರ ಮಂತ್ರ, ಸ್ತುತಿ ಅರ್ಪಿಸಿ ತುಷ್ಟಿಗೊಳಿಸುತ್ತಾರೆ. ಸಮಿತ್ತು, ಹವಿಸ್ಸು ಅರ್ಪಿಸುತ್ತಾರೆ. ಯಜ್ಞ ಕರ್ಮ ಪೂರ್ಣ ನೆರವೇರಿಸಲು ಅಗ್ನಿ ಪೂರ್ಣ ಸಹಾಯಕನಾಗಿರಲಿ. ರೂಪಾಭಿಮಾನಿ ದೇವತೆಗಳು ರಹಸ್ಯನಾಮ ಅರಿತವರು, ಯಾಜ್ಞಿಕರು ಇವರಿಗೆಲ್ಲ ಹವಿಸ್ಸು ಅರ್ಪಿಸಲಿ. ಯಜ್ಞಸಾಧನಗಳಿಂದ ಪೂಜಿಸಿ ಆರಾಧಿಸುತ್ತಾರೆ. ಯಜ್ಞ ಕರ್ಮಗಳಿಂದ ತೃಪ್ತಿ ಪಡಿಸುತ್ತಾರೆ. ಅಗ್ನಿಯನ್ನು ಪ್ರವೃದ್ಧ ಮಾಡಿ ಯಜ್ಞ ನಿರ್ವಹಿಸುತ್ತಾರೆ, ಸ್ತುತಿಸುತ್ತಾರೆ, ಪೂಜಿಸುತ್ತಾರೆ. ಯಜಮಾನರು ಕರ್ಮನಿಮಿತ್ತವಾಗಿ ಅಗ್ನಿಯನ್ನು ಉತ್ತರ ವೇದಿಕೆಯಲ್ಲಿ ಸ್ತುತಿ ಪೂರ್ವಕವಾಗಿ ಸ್ಥಾಪಿಸಿ ಶರೀರವನ್ನು ಪಾಪರಹಿತವನ್ನಾಗಿ ಮಾಡಿಕೊಂಡರು. ಯಜ್ಞಾಂಗ ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತಾರೆ.

★ ಯಾಜ್ಞಿಕರು ನಾನಾ ವಿಧ ಯಜ್ಞ ಕರ್ಮ ನಿರ್ವಹಿಸಲು ಸಮರ್ಥರು, ಯಜಮಾನನಿಗಾಗಿ ಸ್ವರ್ಗ ಸಾಧಕ ಯಜ್ಞದಲ್ಲಿ ಋತ್ವಿಜರು ಸ್ತುತಿಸಿ ಹರಡಿದ ದರ್ಭಾಸನದ ಮೇಲೆ ಹವಿಸ್ಸು ಇಡುತ್ತಾರೆ. ಉಷ :ಕಾಲದಲ್ಲೇ ಅಗ್ನಿಗೆ ಅರ್ಪಿಸುತ್ತಾರೆ. ★ ಯಜಮಾನರು, ಯಾಜ್ಞಿಕರು ಯಾವಾಗಲೂ ಹವಿಸ್ಸು ಹೊಂದಿರುತ್ತಾರೆ. ಯಜ್ಞಪ್ರಭಾವ ಅರಿತವರನ್ನು ಮಾತ್ರ ಆಹ್ವಾನಿಸುತ್ತಾರೆ. ಯಜ್ಞ ಮಾಡುತ್ತಾರೆ. ಯಜ್ಞ ಆರಂಭದಲ್ಲಿ ಅಗ್ನಿಯು ಹವಿರ್ವಾಹಕನಾಗಿ ದೂತನಾಗಿ ಪೂಜೆ, ಹವಿಸ್ಸು ಪಡೆಯಲಿ. ★ ಯಜಮಾನರು ಸಮಸ್ತ ಶಕ್ತಿಗಳಿಂದಲೂ (1) ಸ್ತುತಿ (2) ಸ್ತೋತ್ರ (3) ಆಜ್ಯಗಳಿಂದ ಅಗ್ನಿಯನ್ನು ಪ್ರವೃದ್ಧ ಮಾಡಿ ದೇವತೆಗಳಿಗೆ ಹವಿಸ್ಸು ಅರ್ಪಿಸುವವರಾಗಿರುತ್ತಾರೆ. ರಕ್ಷಣಾರ್ಥ ಕರೆಯುತ್ತಾರೆ. ವನ ಕಾಷ್ಟಗಳಲ್ಲಿಸ್ಥಾಪಿತ, ಯಾಗ ಫಲದಾಯಕ, ವಾಯುಮಾರ್ಗ ದೇವತೆಗಳನ್ನು ಯಜ್ಞಕ್ಕೆ ಕರೆತರಲಿ, ಆ ದೇವತೆಗಳು ದಯಮಾಡಿಸಲಿ.

ಶ್ರೇಷ್ಟ ಸ್ತುತಿ ಅರಿತ ಅಗ್ನಿಯು ಅತಿಶಯವಾದ ದೇಹ, ರೂಪ ಹೊಂದಿ ಇತರರನ್ನು ದಾಟಿ ಮಾನವರಿಗಾಗಿ ಅವರ ಯಜ್ಞಕ್ಕೆ ಬರುತ್ತಾನೆ. ಶ್ರದ್ಧೆಯಿಂದ ಅನೇಕ ಕರ್ಮಗಳನ್ನು ಯಜ್ಞದಲ್ಲಿ ಮಾಡುತ್ತಾರೆ. ಸಕಲವನ್ನು ತಿಳಿದಿರುವ ದೇವದೂತ, ಸ್ತೋತ್ರಗಳ ಸಕಲ ಪಾಪಗಳನ್ನು ಕೊನೆಗಾಣಿಸುತ್ತಾನೆ. ಸ್ವಾಹಾಕಾರ ಪೂರ್ವಕ ಕೊಟ್ಟ ಹವಿಸ್ಸನ್ನು ಅವರವರುಗಳಿಗೆ ತಲುಪಿಸುತ್ತಾನೆ. ಸ್ತೋತ್ರಗಳು ಸುಖವನ್ನುಂಟುಮಾಡುತ್ತವೆ. ಸುಖೇಚ್ಛೆಯಿಂದ ಘೃತಾರ್ಪಿತ ಅಗ್ನಿಯನ್ನು ಶ್ರೇಷ್ಟ ಇಧ್ಮಗಳಿಂದ ಪ್ರಜ್ವಲಿಸಿ ವೃದ್ಧಿಸುತ್ತಾರೆ.

ಹಗಲು ರಾತ್ರಿ ದೇವತೆಗಳನ್ನು ಸ್ತುತಿಸುತ್ತಾರೆ. ಹೋತೃ ರೂಪಿ ಅಗ್ನಿಯನ್ನು ಯಜಮಾನರು ಪೂಜಿಸಿ ಹವಿಸ್ಸಿನೊಂದಿಗೆ ಸ್ತುತಿಸುತ್ತಾರೆ. ಹವಿರ್ಯುಕ್ತ ಅಗ್ನಿಯು ಸಮಸ್ತರಿಂದ ಪ್ರಶಂಸಿಸಲ್ಪಟ್ಟು ಧನ ತುಂಬಿಕೊಳ್ಳುತ್ತಾನೆ. ★ ಹವಿಸ್ಸಿನಿಂದ ಅಗ್ನಿಯನ್ನು ತೃಪ್ತಿಪಡಿಸಿರಿ.

<u>ಭರಧ್ವಾಜ ಋಷಿಗಳು : ಮಂಡಲ ಆರು</u>

★ ಅಗ್ನಿಯನ್ನು ಸ್ತುತಿಸುವವರು ಶತ್ರುಗಳನ್ನು ಸೋಲಿಸಿ ಅನ್ನ ಪಡೆಯುತ್ತಾರೆ. ★ ಅಗ್ನಿಯನ್ನು ಆಗತಾನೆ ಹುಟ್ಟಿದ ಶಿಶುವಿನಂತೆ ಸ್ವೀಕರಿಸಿ ಪೂಜಿಸುತ್ತಾರೆ. ಅಗ್ನಿಯ ರಕ್ಷಣೆಯೊಂದಿಗೆ ಯಜಮಾನನು ಸಕಲ ಪಾಪಗಳನ್ನು, ಶತ್ರುಗಳನ್ನು ಜಯಿಸುತ್ತಾನೆ. ★ ಅವನಿಗೆ ಗೃಹದಲ್ಲಿ ಅನ್ನ ಸಂಪತ್ತು, ಪಶು ಸಂಪತ್ತು, ಪುತ್ರ, ಪೌತ್ರಾದಿಗಳು ಗೃಹ ಸಂಪತ್ತು ವೃದ್ಧಿಯಾಗುತ್ತದೆ. ಅಗ್ನಿಯನ್ನು ಪ್ರಜೆಗಳು ಯಜ್ಞಸಾಧಕ ಹವಿಸ್ಸುಗಳಿಂದ ಸೇವಿಸುತ್ತಾರೆ. ಅಗ್ನಿಗೆ ಹವಿರರ್ಪಿಸುವವರು ಸಕಲ ಯಜ್ಞ ಕರ್ಮ ನೆರವೇರಿಸಿ ಅದರ ಫಲ ಹಾಗೂ ಪ್ರಶಾಂತಚಿತ್ತರಾಗಿರುತ್ತಾರೆ. ಅಗ್ನಿಯನ್ನು ಸ್ತುತಿಸುತ್ತಾರೆ, ಅನ್ನವನ್ನು ಬೇಡುತ್ತಾರೆ. ★ ಅಗ್ನಿಯು ಇಂದ್ರನಂತೆ, ಸೂರ್ಯನಂತೆ ಪ್ರಕಾಶ ಮಾನಿ, ಜಾತವೇದೋರೂಪಿ. ಅಗ್ನಿಯನ್ನು ಸ್ತುತಿಸಿರಿ, ಹವಿರೂಪ ಅನ್ನದಿಂದ ತೃಪ್ತಿ ಪಡಿಸಿರಿ. ಅನರ್ಥವಾಗಲಿ, ದುರಭಿಮಾನವಾಗಲಿ, ಪಾಪವಾಗಲಿ ಅವರನ್ನು ಕಾಡುವುದಿಲ್ಲ. ★ ಅಗ್ನಿಯನ್ನು ಯಾಗಗಳಿಂದ, ಸಮಿತ್ತುಗಳಿಂದ, ಆಜ್ಯದಿಂದ, ಶಸ್ತ್ರ ಮಂತ್ರಗಳಿಂದ ಪ್ರಶಸ್ತ ಸ್ತುತಿಗಳಿಂದ ಯಜಮಾನರು ಉಪಚರಿಸುತ್ತಾರೆ. ★ ಯಜಮಾನನು ಯಜ್ಞದ ಬಗೆಗೆ ಪ್ರೀತಿಯಿಂದ ವೈಶ್ವಾನರ ಗುಣ ಕೇಳಲು ಸ್ವರೂಪ ತಿಳಿಯಲು ಹೃತ್ ಪುಂಡರೀಕದಲ್ಲಿ ತಿಳಿಯಲು ಅವನ ಮನಸ್ಸು ಕಾತುರದಿಂದಿದೆ. ಅಗ್ನಿಯನ್ನು ಸಕಲ ಮಾನವರು ಹವಿಸ್ಸು, ನಮಸ್ಕಾರಗಳಿಂದ ತೃಪ್ತಿಪಡಿಸುತ್ತಾರೆ. ★ ಅಗ್ನಿಯ ಪೂಜೆ, ಸ್ತುತಿ ಯಜ್ಞಕರ್ಮಗಳನ್ನು ಆಚರಿಸುವವರು ಕ್ಷಿಪ್ರವಾಗಿ ರಕ್ಷಣೆ, ಅನ್ನ ಪುತ್ರ ಪೌತ್ರಾದಿಗಳನ್ನು ಪಡೆಯುತ್ತಾರೆ. ಅಗ್ನಿಯ ಸ್ತುತಿ ಕರ್ತರು, ಯಜ್ಞ ಕರ್ತರು ತಮ್ಮ ಕರ್ಮಗಳಿಂದ ಹಾಲಿ ಶತ್ರುಗಳನ್ನು, ಭವಿಷ್ಯವನ್ನು ಎದುರಿಸಲು ಶಕ್ತರಾಗುತ್ತಾರೆ. ಅಗ್ನಿಯನ್ನು ಯಜಮಾನನ ಸಂಬಂಧಿಗಳು ಸ್ತುತಿಸುತ್ತಾರೆ. ಅಗ್ನಿ ರಾತ್ರಿಯ ಕತ್ತಲನ್ನು ಹೊರನೂಕುತ್ತಾನೆ.

ಆರಣಿ ಹೃದಯ ರೂಪ, ಗುಹೆಯಲ್ಲಿರುವ ಅಗ್ನಿಯನ್ನು ಪ್ರಜೆಗಳೆಲ್ಲ ಸ್ತುತಿಸಿ ರಕ್ಷಣಾರ್ಥ ಪ್ರಜ್ವಲಿಸುವಂತೆ ಮಾಡುತ್ತಾರೆ. ಆಸನಾರ್ಥ ದರ್ಭೆ ಕತ್ತರಿಸುತ್ತಾರೆ. ಇಂದ್ರಾದಿಗಳನ್ನು ಪೂಜಿಸಲು ಅಗ್ನಿಯು ಪ್ರಾದುರ್ಭವಿಸುತ್ತಾನೆ.

ಇತರೆ ಅಗ್ನಿಗಳೊಂದಿಗೆ ಪ್ರಜ್ವಲಿತನಾದ ಅಗ್ನಿಯು ಜ್ವಾಲೆಯ ಮೂಲಕ ಹವಿಸ್ಸಿನಿಂದ ದ್ಯಾವಾ ಪೃಥ್ವಿಗಳನ್ನು ತೃಪ್ತಿಪಡಿಸುತ್ತಾನೆ. ಋತ್ವಿಜರು ಅಗ್ನಿಯನ್ನು ದೇವಸ್ಥಾನದಲ್ಲಿ ಪ್ರಜ್ವಲಿಸುವಂತೆ ಮಾಡುತ್ತಾರೆ. ಋಷಿಗಳು ಯಜ್ಞದಲ್ಲಿ ಸಂತೋಷದಿಂದ ಸ್ತುತಿಸುತ್ತಾರೆ. ಅಗ್ನಿಯನ್ನು ಸಮೀಪಿಸಿ ಪೂಜಿಸುತ್ತಾರೆ. ದೇವತೆಗಳನ್ನೂ ಪೂಜಿಸಿ ಪ್ರಶಂಸಿಸಿ ಕರ್ಮಗಳನ್ನು ಮಾಡಿ ದೋಷರಹಿತರಾಗಿ ಅನ್ನವಂತರಾಗುತ್ತಾರೆ. ಎಲ್ಲಾ ಯಜ್ಞಸಾಧನಗಳಿಂದ ಯಜ್ಞ ಮಾಡುತ್ತಾರೆ. ಕೈ ಬೆರಳುಗಳ ಸಹಾಯದಿಂದ ಋತ್ವಿಜರು ಅಗ್ನಿಯನ್ನು ಉತ್ಪನ್ನ ಮಾಡಿದರು. ★ ಜಾತವೇದ, ಆಹವನೀಯವೆಂದು ಸ್ತುತಿಸುತ್ತಾರೆ. ಪೂಜೆಗಳಿಂದ, ಸಮಿತ್ತಿನಿಂದ, ಹವಿಸ್ಸಿನಿಂದ, ಆಜ್ಯದಿಂದ ಕರ್ಮ ಮಾಡಿ ನಮಸ್ಕರಿಸುತ್ತಾರೆ. ದ್ಯಾವಾ ಪೃಥ್ವಿ ವ್ಯಾಪಿಸಿ ಅಂಧಕಾರ ನಿವಾರಿಸುತ್ತಾರೆ. ದೋಷರಹಿತ ಘೃತ ಹವಿ ಪಾತ್ರೆಯನ್ನು ದರ್ಭೆಯ ಮೇಲಿಟ್ಟಾಗ ಯಜ್ಞವೇದಿ ಸ್ಥಾಪಿತವಾದಾಗ ಯಜ್ಞಪ್ರಾರಂಭವಾಗುತ್ತದೆ. ದ್ಯಾವಾ ಪೃಥ್ವಿಗಳು ಅಗ್ನಿಯನ್ನು ಯಜ್ಞದಲ್ಲಿಯ ಪೂಜೆಗೆ ದೇವತೆಗಳ ಪರವಾಗಿ ಇರುತ್ತಾರೆ. ದ್ಯಾವಾ ಪೃಥ್ವಿಗಳನ್ನು ಪೂಜಿಸಲು ಹೇಳಿದ್ದಾರೆ. ದ್ಯಾನಾತ್ಮಕ ಸ್ತುತಿಗಳಿಂದ ಸ್ತುತಿಸುತ್ತಾರೆ. ಪೂಜಾ ನಿರತರಾಗಿ ದ್ಯಾನಿಸುತ್ತಾ ಅಗ್ನಿಯನ್ನು ಸಮೀಪಿಸುತ್ತಾರೆ. ಪೂಜಿಸಲು ಇಚ್ಛಿಸಿದಾಗಲೇ ಮಿತ್ರಾ ವರುಣರೊಡಗೂಡಿ ಅಗ್ನಿಯು ಯಜಮಾನನ್ನು ರಕ್ಷಿಸುತ್ತಾನೆ. ಮಂಗಳಾತ್ಮಕ ಸ್ತುತಿಗಳಿಂದ ಸ್ತುತಿಸುತ್ತಾರೆ. ಮನಸ್ಸು ಅಗ್ನಿಯ ಅನಂತ ಗುಣ ಕೇಳಲು, ಸ್ವರೂಪ ತಿಳಿಯಲು, ಹೃತ್ ಪುಂಡಲೀಕದಲ್ಲಿ ತಿಳಿಯಲು ಮನಸ್ಸು ಎಲ್ಲೆಲ್ಲೂ ಸಂಚರಿಸುತ್ತದೆ. ಮಮತೆಯಿಂದ ಪರಿಶುದ್ಧ ಘೃತದಂತಿರುವ ಸ್ತೋತ್ರಗಳನ್ನು ಪಠಿಸುತ್ತಾರೆ. ಮಿತ್ರ, ವರುಣ, ಆದಿತ್ಯ, ಮರುತ್ ಗಣಗಳನ್ನು ಪೂಜಿಸಲು ಹೇಳಿದ್ದಾರೆ.

ಅಗ್ನಿಯು ಯಜಮಾನರನ್ನು ಸ್ವರ್ಗಕ್ಕೆ ಒಯ್ಯುವವನು. ಯಾಜ್ಞಿಕರು ಅಪಹರಿಸಲಾಗದ ಅನ್ನ ಸಿದ್ಧಪಡಿಸಿದ್ದಾರೆ. ★ ಯಜಮಾನರು ಅಗ್ನಿಯ ಕೃಪೆ ಪಡೆಯಲು ಸ್ತುತಿ, ಪ್ರಶಂಸೆ ಮಾಡಿದಾಗ ಅಗ್ನಿ ಸೂರ್ಯನಂತೆ ಪ್ರಕಾಶಿಸುತ್ತಾನೆ. ಯಜಮಾನರು ದೇವತೆಗಳ ಅಭಿಮುಖ ಸ್ತುತಿ, ಸ್ತೋತ್ರ ನಿರ್ಮಿಸಿ ಪಠಿಸಲಿ. ಯಶೋವಂತ ಪುತ್ರರನ್ನು ಪಡೆಯುತ್ತಾರೆ. ಯಜಮಾನನಿಂದ ಹವಿಸ್ಸು ಸ್ವೀಕರಿಸಿ ಅನ್ನ ಕೊಡುತ್ತಾನೆ. ಯಜಮಾನನು ಯಜ್ಞದ ಬಗ್ಗೆ ಅರಿತಿಲ್ಲ. ಮನಸ್ಸು ಎಲ್ಲೆಲ್ಲೋ ಸಂಚರಿಸುತ್ತಿದೆ. ಅಗ್ನಿಯನ್ನು ಉದ್ದೇಶಿಸಿ ಪುರೋಡಾಶ ಅರ್ಪಿಸುತ್ತಾನೆ. ಯಜ್ಞಗೃಹದಲ್ಲಿ ಯಾಜ್ಞಿಕರಿಂದ ಸುಖಕರ ಸ್ತುತಿಗಳಿಂದ ಸ್ತುತಿತನಾಗುತ್ತಾನೆ. ಯಜಮಾನಾಭಿಮುಖ ದೇವತೆಗಳನ್ನು ಹವಿಸ್ಸಿಗಭಿಮುಖವಾಗಿ, ಸೋಮ ಪಾನಾರ್ಥವಾಗಿ ಕರೆತರಲಿ. ಲೋಕ ಜನರೆಲ್ಲಾ ಅಗ್ನಿಯನ್ನು ಪ್ರಶಂಸಿಸುತ್ತಾರೆ. ವೈಶ್ವಾನರ ರೂಪವನ್ನು ಸಕಲ ಪ್ರಜೆಗಳು ಸ್ತುತಿಸಿದರು ★ (1) ಪ್ರಶಂಸೆ (2) ಸ್ತೋತ್ರಗಳು (3) ಸೋಮರಸ ಇವು ಅಖಂಡ ಪ್ರವಾಹದಂತೆ ಪ್ರವಹಿಸುತ್ತದೆ.

★ ದೇವತೆಗಳನ್ನು ಪೂಜಿಸಿ ಅನುಗ್ರಹ ಪಡೆಯಲು ಮೊದಲು ಅಗ್ನಿಯನ್ನು ಪೂಜಿಸಿ ಪ್ರಶಂಸಿಸುತ್ತಾರೆ.

ಶತ್ರು ನಾಶಕ ಮರುತ್ ಸಂಘವನ್ನು ಪೂಜಿಸುತ್ತಾರೆ. ಸ್ತುತಿ ಮಂತ್ರಗಳಿಂದ ಯಜ್ಞಸಾಧನಗಳಿಂದ ಯಜಮಾನರು ಅಗ್ನಿಯನ್ನು ತೃಪ್ತಿಪಡಿಸಿ ಸಮಸ್ತ ಧನವನ್ನು ಹೊಂದುತ್ತಾರೆ. ಹಗಲೂ ರಾತ್ರಿ ಹವಿಸ್ಸು ಅರ್ಪಿಸುತ್ತಾರೆ. ಮನು ಯಜ್ಞದಲ್ಲಿ ದೇವತೆಗಳನ್ನು ಪೂಜಿಸಿದಂತೆಯೇ ಅದೇ ಸಾಧನಗಳಿಂದ ಪೂಜಿಸಿರಿ. ಯಜ್ಞದಲ್ಲಿ ದೇವದೂತನಾಗಿದ್ದ ಅಗ್ನಿಯಂತೆಯೇ ಇಂದ್ರನೇ ಪ್ರಮುಖರಾದ ಎಲ್ಲಾ ದೇವತೆಗಳನ್ನು ಋತ್ವಿಜರು ಪೂಜಿಸಲಿ.

**ಮಂಡಲ ಏಳು - ವಸಿಷ್ಠ ಋಷಿಗಳು - ಅಗ್ನಿ ದೇವರು - ಆಶ್ರಮದಲ್ಲಿ**

ಅಗ್ನಿಯನ್ನು ಪ್ರಶಂಸಿಸುವ ಬ್ರಹ್ಮಾದಿ ಯಜಮಾನರು ಉತ್ತಮ ವೀರ ಪುತ್ರರಿಂದ ಶತ್ರು ಮರ್ಧನ ಶಕ್ತಿ ಹೊಂದಿದ್ದಾರೆ. ಅಗ್ನಿ ಇರುವಲ್ಲಿ ಸ್ತುತಿಗಳಿಂದ, ಆರಾಧನೆಗಳಿಂದ, ಪ್ರಶಂಸೆಗಳಿಂದ ಪೂಜಿಸಿ ಉಪಚರಿಸುವವರು ಕೀರ್ತಿವಂತರಾಗುತ್ತಾರೆ. ★ ಅಗ್ನಿಯ ಮಹತ್ವ ತಿಳಿದು ಯಜಮಾನರು ಅಗ್ನಿಯನ್ನು ಸ್ಥಾಪನೆ ಮಾಡಿ ಪ್ರಕಾಶಗೊಳಿಸಲಿ. ಅಗ್ನಿಯನ್ನು ಪ್ರಕಾಶಿಸುವವರಿಗೆ ಇತರರಿಗಿಂತ ಮಿಗಿಲಾಗಿ ಕಾಂತಿಯಿಂದ ಪ್ರಕಾಶಿಸುತ್ತಾನೆ.

ಅಗ್ನಿಯನ್ನು ಸಂಸ್ಕರಿಸುವ, ಪ್ರಜ್ವಲಿಸುವ, ಸ್ತುತಿಸುವವರು ಪೋಷಿಸಲ್ಪಡುತ್ತಾರೆ. ಯಜಮಾನರು ಸ್ತುತಿಸುತ್ತಾರೆ, ಅಗ್ನಿ ಅಂಧಕಾರವನ್ನು ಓಡಿಸುತ್ತಾ ಗೋಚರಿಸುತ್ತಾನೆ. ಸಹಾಯ ಅಪೇಕ್ಷಿಸುವ ಯಜಮಾನರು ಸ್ತುತಿಸುತ್ತಾ ಯಜ್ಞ ವಿಸ್ತರಿಸುತ್ತಾ ಸ್ತುತ್ಯ ದೇವತೆಗಳನ್ನು ಕರೆಯುತ್ತಾರೆ. ಅಧ್ವರ್ಯುವು ಮೇಧಾವಿ, ಯಜಮಾನರಿಗಾಗಿ ಅಗ್ನಿಯನ್ನು ಉತ್ತರ ವೇದಿಕೆಯಲ್ಲಿ ಸ್ಥಾಪಿಸುತ್ತಾನೆ. ಅಗ್ನಿಗೆ ಸಹಸ್ರಾರು ಸಂಖ್ಯೆಯ ನೂತನವಾಗಿ ನಿರ್ಮಿಸಿದ ಸ್ತುತಿಗಳನ್ನು, ಹವಿಸ್ಸನ್ನು ಅರ್ಪಿಸುತ್ತಾನೆ. ಅಗ್ನಿಯ ತೇಜಸ್ಸು ಮೇಲೆ ಎದ್ದು ವ್ಯಾಪಿಸಿ ಅಂತರಿಕ್ಷ ಮುಟ್ಟುವ ಆಕರ್ಷಕ ವರ್ಣದ ಧೂಮ ಮೇಲೆದ್ದು ಪ್ರಸರಿಸುತ್ತದೆ. ★ ಅಗ್ನಿ ವಸಿಷ್ಠೋತ್ಪನ್ನರಿಂದ ಹವಿರೂಪ ಅನ್ನ ಸ್ವೀಕರಿಸುತ್ತಾನೆ. ನಂತರ ರಥಕ್ಕೆ ಅಶ್ವಗಳನ್ನು ಕಟ್ಟಿ ಪ್ರಾರ್ಥನೆಯಂತೆ ದೇವತೆಗಳನ್ನು ಕರೆತರಲು ಓಡುತ್ತಾನೆ. ಅಧ್ವರ್ಯುವು ದರ್ಭಾಸೀನ ಹರಡಿ ಸಿದ್ಧಮಾಡಲಿ. ಅಗ್ನಿ ಉತ್ತಮ ಸಮಿತ್ತುಗಳಿಂದ ಪ್ರಜ್ವಲಿತನಾಗಲಿ ನಂತರ ದೇವತೆಗಳನ್ನು ಕರೆತರಲಿ.

ಆಗ ತಾನೆ ಉತ್ಪನ್ನನಾದ ಅಗ್ನಿಯ ಆಕರ್ಷಕ ಧೂಮವು ದ್ಯುಲೋಕಾಭಿಮುಖವಾಗಿ ಪ್ರಜ್ವಲಿಸಿ ಹರಡುತ್ತದೆ. ಅರಣಿಗಳಿಂದ ಉತ್ಪನ್ನನಾಗಿ, ಕಾಷ್ಟಾದಿಗಳಿಂದ ಆವಿರ್ಭವಿಸಿ ಇತರ ಅಗ್ನಿಗಳೊಂದಿಗೆ ಹೊಂದಿಕೊಂಡು ಪ್ರಕಾಶಿಸುತ್ತಾನೆ. ಆಹ್ವಾನ, ಸ್ತುತಿ, ಹವಿಸ್ಸು ಅರ್ಪಿಸಲು ಅಪೇಕ್ಷಿಸುತ್ತಾರೆ. ಉತ್ತಮ ಜನ್ಮವುಳ್ಳವರು ಒಟ್ಟಿಗೆ ಸೇರುವರು. ಒಂದೇ ರಥದಲ್ಲಿ ಸಮಸ್ತ ದೇವತೆಗಳೊಂದಿಗೆ ಅಗ್ನಿ ದಯಮಾಡಿ ಮುಖ್ಯ ಹೋತೃವಾಗಿ ದರ್ಭಾಸೀನನಾಗಲಿ. ★ಕೈ ಬೆರಳುಗಳ ಸಹಾಯದಿಂದ ಋತ್ವಿಜರು ಅಗ್ನಿಯನ್ನು ಉತ್ಪನ್ನ ಮಾಡುವರು. ★ಕರ್ಮ ನೇತೃಗಳಾದ ವಸಿಷ್ಠರ ಪಿತೃ ಪಿತಾಮಹರು ಅಗ್ನಿಯನ್ನು ಸ್ಥಾಪಿಸಿ, ಪೂಜಿಸಿ, ಸ್ತುತಿಸಿ ಅಗ್ನಿಯ ತೇಜಸ್ಸಿನ ಭಾಗ ಪಡೆದುಕೊಂಡರು, ಅನೇಕ ಪ್ರದೇಶಗಳಲ್ಲಿ ತಾವೂ ಪ್ರಜ್ವಲಿಸಿದರು. ಘೃತ ಯುಕ್ತ ಬರ್ಹಿಯನ್ನು ನಮ್ರತೆಯಿಂದ ಅರ್ಪಿಸಿ ಪ್ರಾರ್ಥಿಸುತ್ತಾರೆ. 'ಜುಹೂ' ಪಾತ್ರೆಯು ಹವಿಸ್ಸಿನಿಂದ, ತಾರುಣ್ಯದಿಂದ ಘೃತಪೂರ್ಣವಾಗಿದ್ದು ಧನ ಒದಗಿಸುವ ಇಚ್ಛೆಯಿಂದ ಸಮೀಪಿಸುತ್ತದೆ. ತೇಜಸ್ಸು ಭೂಮಿಯಲ್ಲೆಲ್ಲ ವ್ಯಾಪಿಸಿ ಜ್ವಾಲಾರೂಪ ದಂತಗಳಿಂದ ಭಕ್ಷಿಸುತ್ತಾ ಜ್ವಾಲೆಯಿಂದ ಮುನ್ನುಗ್ಗುತ್ತದೆ. ★ ಈ ದೇವತೆಗಳು ಬಂದು ದರ್ಭಾಸೀನರಾಗಲಿ ಎಂದು ಋಷಿಗಳು ಪ್ರಾರ್ಥಿಸಿದ್ದಾರೆ. 1) ಭಾರತೀ ದೇವಿಯರು - (ತನ್ನ ಸಂಬಂಧಿ ದೇವತೆಗಳೊಂದಿಗೆ)

2) ಇಳಾ ದೇವಿ (ಮಾನವರೊಂದಿಗೆ)

3) ಸರಸ್ವತಿ ದೇವಿಯರು (ಮಾಧ್ಯಮಿಕ ಸ್ಥಾನ ದೇವತೆಗಳೊಂದಿಗೆ)

4) ತ್ವಷ್ಟನು (ನಿರ್ಮಾತೃ) ಕರ್ಮ ಕುಶಲಿ ವೇಗ ಫಲದಾಯಕ, ಪುತ್ರೋತ್ಪಾದಕ, ತೇಜಸ್ಸು ತುಂಬಲಿ.

5) ವನಸ್ಪತಿ ದೇವನು (ದೇವತೆಗಳ ಉತ್ಪತ್ತಿ ತಿಳಿದವನು, ದೇವತಾ ಸ್ತುತಿಗಳಿಂದ ಒಡಗೂಡಿದ ಯಜ್ಞಕ್ಕೆ ದೇವತಾತ್ಮ ಅಗ್ನಿಯು ಈ ಎಲ್ಲಾ ದೇವತೆಗಳೊಳಗೂಡಿ ಆಗಮಿಸಲಿ.

ದೇವತೆಗಳ ಯಜ್ಞವಾಹಕ ಅಗ್ನಿಯನ್ನು ಕರ್ಮ ನೇತೃ ಯಜಮಾನರು ಪ್ರಾರ್ಥಿಸಿ ಕರೆಯುತ್ತಾರೆ. ಪ್ರಜ್ವಲಿಸುತ್ತಾರೆ. ದೇವತೆಗಳು ಬರುವಾಗ ದ್ವಾರಗಳು ಪೂರ್ಣ ತೆರೆಯಲ್ಪಟ್ಟಿರಲಿ. ಪುರು ರಾಜನಿಗೆ ಅಗ್ನಿಯ ಅನುಗ್ರಹದಿಂದ ಶತ್ರುಗಳು ಪರಾರಿಯಾಗಿ ಅವರ ಧನವೆಲ್ಲ ಪುರುವಿಗೆ ಸಿಕ್ಕುವಂತೆ ವಸಿಷ್ಟರು ಮಾಡಿದರು. ಯಜ್ಞಗೃಹ ದ್ವಾರವನ್ನು ಉತ್ತಮ ಕರ್ಮಗಳಿಂದ ರಥಾಪೇಕ್ಷಿಗಳಾಗಿ ಮಾಡುತ್ತಾರೆ.

ಯಜಮಾನರು ಅನೇಕ ವಿಧ ಪ್ರಜ್ಞೆಯ ದೇವತೆಗಳನ್ನು ಸ್ತುತಿಸಲಿ, ಪೂಜಿಸಲಿ ಎಂದು ವಸಿಷ್ಟರು ಹೇಳುತ್ತಾರೆ. ★ಯಾವ ಯಜಮಾನನ ಯಜ್ಞದಲ್ಲಿ ಅಗ್ನಿಯು ದೇವತೆಗಳೊಂದಿಗೆ ದರ್ಭಾಸೀನರಾಗುತ್ತಾರೋ ಅವನಿಗೆ ಉತ್ತಮ ದಿನಗಳು ಬರುತ್ತವೆ. ಯಜಮಾನರನ್ನು ರಕ್ಷಣೆ ಮಾಡುವವನು ಅಗ್ನಿಯೇ. ವನಸ್ಪತಿ ದೇವನು ಶಮಿ, ಪಶು ರೂಪ ಹವಿಸ್ಸು ಸೇವಿಸಿ ದೇವತೆಗಳನ್ನು ಯಜಮಾನನಲ್ಲಿ ಕರೆತಂದು ಪೂಜಿಸಲಿ. ಭಕ್ತಿಪೂರ್ವಕ ಆಹುತಿಗಳಿಂದ ತೃಪ್ತಿಗೊಳಿಸುತ್ತಾರೆ. ವಾಯುವು ಬೀಸಿದಾಗ ಅಗ್ನಿಯು ವೃಕ್ಷಾದಿಗಳನ್ನು ವ್ಯಾಪಿಸಿ, ದಹಿಸಿ ಕಾನನ ಮಾರ್ಗವನ್ನು ಕಪ್ಪು ಮಾಡುತ್ತಾನೆ.

★ವೈಶ್ವಾನರಾಗ್ನಿ ಪ್ರೀತಿ ಕರ್ಮಗಳನ್ನು ದ್ಯುಲೋಕ, ಅಂತರಿಕ್ಷ, ಪೃಥ್ವಿಗಳು ಸೇವಿಸುತ್ತವೆ. ಅವನ ಶ್ರೇಷ್ಠಕರ್ಮಗಳನ್ನು ಸಾಹಸಗಳನ್ನು (ಸ್ತುತಿ, ಪೂಜೆ, ನಮಸ್ಕಾರಗಳಿಂದ) ಪ್ರಶಂಸಿಸುತ್ತಾರೆ. ★ ವಸಿಷ್ಟರು ಜ್ಞಾನ ಕರ್ಮ ಎರಡಕ್ಕೂ ಆಶ್ರಯದಾತರು, ವಸಿಷ್ಟ ವಂಶೋತ್ಪನ್ನರು, ಅಗ್ನಿಯನ್ನು ಸ್ತುತಿಸಿ ಪೂಜಿಸುತ್ತಾರೆ. ವಸಿಷ್ಠ ಋಷಿಗಳು ಅಗ್ನಿಯನ್ನು ಪ್ರಜ್ವಲಗೊಳಿಸುತ್ತಾರೆ. ಹವಿರ್ವಾಹಕ ಅಗ್ನಿಯು ದೇವತಾಭಿಮುಖನಾಗಿ ಹೊರಟು ಅವರನ್ನು ಕರೆತರುತ್ತಾನೆ. ವಸಿಷ್ಟರಲ್ಲಿ ನೂರಾರು ಗೋವುಗಳಿವೆ. ಅವರು ಬಂಧುಗಳೊಡನೆ ಸುಖವಾಗಿ ಅಗ್ನಿಯನ್ನು ಸ್ತುತಿಸಿ ರೋಗ ಪರಿಹಾರಕ ರಾಕ್ಷಸ ನಾಶಕ ಸ್ತುತಿ ವಾಕ್ಯಗಳನ್ನು ನಿರ್ಮಿಸಿದ್ದಾರೆ. ಸಂಪತ್ ಪ್ರದರಾದ ಈ ದೇವತೆಗಳನ್ನು ಪೂಜಿಸಿರಿ ಎಂದಿದ್ದಾರೆ. ಸರಸ್ವತಿ, ಮರುತ್ ಅಬ್ ದೇವತೆಗಳು, ಅಶ್ವಿನಿ ದೇವತೆಗಳನ್ನು ಪೂಜಿಸಿರಿ. ಸ್ತುತಿ ವಾಕ್ಯಗಳು ಮನನಾತ್ಮಕವಾಗಿ ಇರಬೇಕು. ಅಗ್ನಿಯು ಅವುಗಳನ್ನು ದೇವತೆಗಳಿಗೆ ತಲುಪಿಸಬೇಕು. ಹೋತೃ ವಸಿಷ್ಟರು ತಮಗೆ ಸಂಬಂಧಿಸಬಹುದಾದ ಎಲ್ಲಾ ಅಪಾಯಗಳಿಂದ ರಕ್ಷಣೆ ಪಡೆಯಲು ಆಹವನೀಯಾಗ್ನಿಯನ್ನು ತಮ್ಮ ಗೃಹದಲ್ಲೇ ಪ್ರಜ್ವಲಿಸಿ ಪ್ರಕಾಶಿಸಿ ಸ್ತುತಿ, ಹವಿಸ್ಸು, ಆಹುತಿ ಪೂಜೆಗಳನ್ನು ಅರ್ಪಿಸುತ್ತಾರೆ. ಹವಿಸ್ಸನ್ನು ಅರ್ಪಿಸಿ ಪಾಪ ನಾಶಮಾಡಿಕೊಳುತ್ತಾರೆ. ಹೋತೃಗಳು ಅಗ್ನಿಗೆ ಎದುರಾಗಿ ಕುಳಿತಿರುತ್ತಾರೆ. ಆಗ್ನಿ ಉತ್ಪನ್ನನಾದಾಗ ದ್ಯಾವ ಪೃಥ್ವಿಯನ್ನು ಕರೆಯುತ್ತಾರೆ. ಹವಿಸ್ಸು ಹೊಂದಿರುವವರು ಅಗ್ನಿಯನ್ನು ಸದಾ, ಸರ್ವದಾ ದೂತ ಕಾರ್ಯಕ್ಕೆ ಪ್ರವರ್ತಿಸುವಂತೆ ಅಗ್ನಿಯನ್ನು ಪ್ರಾರ್ಥಿಸುತ್ತಾರೆ.

ವೈಶ್ವಾನರಾಗ್ನಿಗೆ ಅರ್ಪಿಸಲೆಂದೇ ಉತ್ತಮ ಸ್ತುತಿಗಳನ್ನು, ಹವಿಸ್ಸನ್ನು ಮಿತ್ರರು ಸಂಪಾದಿಸುತ್ತಾರೆ. ವಸಿಷ್ಟವಂಶಸ್ತರು ಹಗಲೂ ರಾತ್ರಿಗಳಲ್ಲಿ ಅಗ್ನಿಯನ್ನು ಪ್ರಕಾಶಗೊಳಿಸುತ್ತಾ ಅಗ್ನಿ ಪೂಜಕರಾಗಿದ್ದಾರೆ. ವಷಟ್ಕಾರ ಪೂರ್ವಕ ಅರ್ಪಿತ ಹವಿಸ್ಸನ್ನು ಅಗ್ನಿ ಸೇವಿಸುತ್ತಾನೆ. ★ಅಹಸ್ಸಿನ ಮೂರು ಕಾಲದಲ್ಲೂ ಋತ್ವಿಜರು ಯಜಮಾನನಿಗಾಗಿ ಅಗ್ನಿಯ ಮಧ್ಯಭಾಗದಲ್ಲಿ ಹವಿಸ್ಸು ಅರ್ಪಿಸುತ್ತಾರೆ.

**ವಸಿಷ್ಟರ ಬಗೆಗೆ – ಸೂಕ್ತ 33**

ಇವರು ಅಪ್ಸರ ಸ್ತ್ರೀ ಊರ್ವಸಿಯಲ್ಲಿ ಉತ್ಪನ್ನರಾದವರು. ಅಗ್ನಿ, ವಾಯು, ಆದಿತ್ಯ ಈ ಮೂರು ಲೋಕಗಳಲ್ಲಿ ಉದಕ ಉತ್ಪನ್ನವಾಗುವುದನ್ನು ತಿಳಿದಿದ್ದಾರೆ. ಇವರು ಪುರೋಹಿತರು, ಇಂದ್ರನನ್ನು ಪ್ರಕಾಶಗೊಳಿಸಿದರು, ಇಂದ್ರನು ವಸಿಷ್ಟರನ್ನು ಹಿಂಬಾಲಿಸಿದನು. ಬೇರೆಯವರ ಯಾಗದಲ್ಲಿ ಸೋಮಪಾನ ಮಾಡುತ್ತಿದ್ದ ಇಂದ್ರನು ಅಲ್ಲಿಂದ ವಸಿಷ್ಟರ ಪ್ರಭಾವದಿಂದ ಅವರ ಆಶ್ರಮಕ್ಕೆ ಬಂದು ಆಳವಾದ 'ಚಮಸ' ಪಾತ್ರೆಯಲ್ಲಿ ಸೋಮಪಾನ ಮಾಡುತ್ತಾನೆ. ಇವರು ಪ್ರಸಿದ್ಧ ಯಜ್ಞ ನೇತೃಗಳು, ಬ್ರಹ್ಮಜ್ಞಾನಿಗಳು, ಸಹಸ್ರ ಸಂಖ್ಯೆಯಲ್ಲಿ ವಸ್ತ್ರದಾನ ಮಾಡಿದವರು, ಯಜ್ಞ, ಕರ್ಮ ಹೇಳಿಕೊಡುವ ಮಾರ್ಗದರ್ಶಕ ನೇತೃಗಳು, ಸಮುದ್ರದಂತೆ ಗಂಭೀರ ಸ್ವಭಾವದವರು, ವಾಯುವಿನಂತೆ ವೇಗಗಾಮಿ, ಸೂರ್ಯ ಪ್ರಭೆಯಂತೆ ಕಂಗೊಳಿಸುವವರು. ಶ್ವೇತ ವರ್ಣದವರು, ಬಲಭಾಗದಲ್ಲಿ ಶಿಖೆವುಳ್ಳವರು, ವಸಿಷ್ಟರು ತಮ್ಮ ವಿದ್ಯೆಯಿಂದ ಪುತ್ರರನ್ನು ಸಂತೋಷಗೊಳಿಸುವ ಕರ್ಮ ನಿರ್ವಾಹಕರು, ಪುತ್ರರು ದೂರ ಹೋಗಲು ಬಿಡುತ್ತಿರಲಿಲ್ಲ. ಯಾಗಗಳಲ್ಲಿ ಇವರು ಮುಖ್ಯ ಹೋತೃಗಳು, ಮಿತ್ರಾ ವರುಣರು ವಸಿಷ್ಟರನ್ನು ನೋಡಿದ್ದಾರೆ. ಯಜ್ಞದಲ್ಲಿ (1) ಹೋತೃ (2) ಉದ್ಗಾತೃ (3) ಅಧ್ವರ್ಯು (4) ಬ್ರಹ್ಮ ಮುಖ್ಯ ಪುರೋಹಿತರು ಇರುತ್ತಾರೆ. ವಸಿಷ್ಟರು ಪಾಶದ್ಯುಮ್ನನನ್ನು ತಿರಸ್ಕರಿಸಿದರು. ಸುದಾಸನನ್ನು ರಕ್ಷಿಸಿದರು. ವಸಿಷ್ಟರ ಅಪ್ಪಣೆಯಂತೆ ಇಂದ್ರನು ರಾಜನಿಗೆ ಸಹಾಯ ಮಾಡಿದ್ದಾನೆ. ವಸು, ರುದ್ರ, ಆದಿತ್ಯರು ಉತ್ಪನ್ನರಾದುದನ್ನು ಉಷೋದೇವಿಯ ವಿಚಾರವನ್ನು ಯಥಾವತ್ತಾಗಿ ತಿಳಿದಿದ್ದಾರೆ. ರಹಸ್ಯಗಳಿಂದ ಕೂಡಿದ ಸಂಸಾರವನ್ನು ತಮ್ಮ ಉದಯ ಪ್ರಜ್ಞಾನದಿಂದ ಪ್ರವೇಶಿಸಿ ಎಲ್ಲೆಲ್ಲೂ ಸಂಚರಿಸುತ್ತಾರೆ.

## ಮಂಡಲ ಎಂಟು - ಕಾಣ್ವ ಋಷಿಗಳು - ಅಗ್ನಿ ದೇವರು - ಆಶ್ರಮದಲ್ಲಿ

ಅಗ್ನಿಯನ್ನು ಸ್ತುತಿ, ಸಾಧನಗಳಿಂದ ದಾನಾದಿ ಗುಣಗಳ ಗಣೆಯಾದ ಅವನನ್ನು ತೃಪ್ತಿಪಡಿಸುತ್ತಾರೆ. ಅಗ್ನಿ ಇರುವಲ್ಲಿ ಸ್ತುತಿಗಳಿಂದ, ಆರಾಧನೆಗಳಿಂದ, ಪ್ರಶಂಸೆಗಳಿಂದ ಪೂಜಿಸಿ ಉಪಚರಿಸುವವರು ಕೀರ್ತಿವಂತರಾಗುತ್ತಾರೆ. ★ ಅಗ್ನಿ 'ಪಲಾಶಾದಿ' ಸಮಿತ್ತುಗಳಿಂದ, ಆಜ್ಯದಿಂದ, ವೇದಾಧ್ಯಯನದ ಮೂಲಕ 'ಜ್ಯೋತಿಷ್ಟೋಮ' ಯಾಗದಿಂದ ಚರು, ಪುರೋಡಾಶಗಳಿಂದ ಪೂಜಿಸಿದ ಯಜಮಾನನ ಅಶ್ವಗಳು ಯುದ್ಧದಲ್ಲಿ ಮುನ್ನುಗ್ಗುವುವು. ನಂತರ ಅಶ್ವಿನಿ ದೇವತೆಗಳನ್ನು ಯಜಮಾನರು ಪೂಜಿಸುತ್ತಾರೆ, ಸ್ತುತಿಸುತ್ತಾರೆ. ಅಹಸ್ಸುಗಳಲ್ಲಿ 'ಸೋಮಾಭಿಶವಣ' ಮಾಡುತ್ತಾರೆ.

★ ಅಗ್ನಿಯು ಯಜಮಾನನಿಗೆ

1) ಶಾಪಕೊಡುವಂತಹ 2) ಪಾಪಾಚರಣೆ ಮಾಡುವಂತಹ 3) ಕ್ಷುದ್ರನಾಗುವಂತಹ ಕಾರ್ಯಗಳನ್ನು ಮಾಡಿಸುವುದಿಲ್ಲ. ★ ಅಧ್ವರ್ಯುಗಳು ಯಜಮಾನನ ಮುಂದೆ ಸಾಮರ್ಥ್ಯದಿಂದ ಅಗ್ನಿಯನ್ನು ಯಜ್ಞವೇದಿಕೆಯಲ್ಲಿ ಸ್ಥಾಪಿಸಿ, ಪ್ರಜ್ವಲಿಸಿ, ಸ್ತುತಿಗಳಿಂದ ತೃಪ್ತಿ ಪಡಿಸಿ ತಾವು ತೃಪ್ತರಾಗುತ್ತಾರೆ. ಈ ಋಷಿಗಳು ತಮ್ಮ ತಂದೆಯಂತೆಯೇ ಅಗ್ನಿಯನ್ನು ಸ್ತುತಿ, ಸ್ತೋತ್ರ, ಪೂಜೆಗಳಿಂದ ತೃಪ್ತಪಡಿಸುತ್ತಾರೆ. ಅಗ್ನಿಯು ಯಜ್ಞಕ್ಕೆ ದಯಮಾಡಿಸಲಿ, ಹವಿಸ್ಸು ಸ್ವೀಕರಿಸಲು ದರ್ಭಾಸೀನನಾಗಲಿ. ದೇವದೂತನಾಗಿ ಹವಿಸ್ಸನ್ನು ದೇವತೆಗಳಿಗೆ ಕೊಂಡೈಯ್ಯಲಿ. ಅಗ್ನಿಯು ಯಜಮಾನರ ಮಿತ್ರತ್ವ ಅರಿಯಲಿ, ಸ್ತುತಿ ಕೇಳಲಿ, ಶತ್ರುಗಳನ್ನು ನಾಶ ಮಾಡಲಿ, ಸುಖ ಉಂಟುಮಾಡಲಿ, ಅಗ್ನಿಯು ನಮ್ಮ ಸ್ಥಾನದಲ್ಲಿದ್ದಂತೆ ತಿಳಿದು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಲಿ. ಅಗ್ನಿಯ ತೀಕ್ಷ್ಣ ಜ್ವಾಲೆಗಳು ಸಕಲವನ್ನು ಭಕ್ಷಿಸುತ್ತವೆ ಮತ್ತು ಘೃತರೂಪ ಹವಿರರ್ಪಿಸುವ ಹೋಮ ಸಾಧಕ ಜುಹೂ ಪಾತ್ರೆಯ ಅಗ್ರ ಭಾಗದಲ್ಲಿ ಕಂಗೊಳಿಸುತ್ತವೆ. ಅಗ್ನಿಯು ಆಂಗೀರಸ್ಸುಗಳಲ್ಲಿ ಅತಿಮುಖ್ಯನಾದವನು. ಅಪ್ರತಿಹತ ಸಂಚಾರಿ, ಧನವಂತ, ಹೋಮ ಸಂಪಾದಕ.

★ ಅಜ ಮತ್ತು ಗೋವುಗಳ ಕ್ಷೀರಗಳು ಯಜ್ಞಕ್ಕೆ ಬೇಕಾದವು ಮತ್ತು ಫಲಪ್ರದವಾದವು. ಅಧ್ವರ್ಯುಗಳು ಇವನ್ನು ಮಿಶ್ರ ಮಾಡಿ ಅಗ್ನಿಯನ್ನು ಹಾಲಿನಿಂದ ಸ್ಥಾಪಿಸಲಿ. ಅಗ್ನಿಗೆ ಹವಿಸ್ಸು ಅರ್ಪಿತವಾಗಲಿ. ಅನ್ನಕ್ಕಾಗಿ, ಸುಖಕ್ಕಾಗಿ ಹೊಸ ಹೊಸ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ಅಗ್ನಿಯ ಅನುಗ್ರಹದಿಂದ ಬೆಲೆ ಬಾಳುವ ಶತ್ರು ಧನ ಮತ್ತು ಅಶ್ವಗಳನ್ನು ಪಡೆಯುತ್ತಾರೆ. ಅಗ್ನಿಯು ತಮ್ಮನ್ನು ಪಾಲಿಸುತ್ತಾನೆಂದು ಯಜಮಾನರು ನಂಬಿದ್ದಾರೆ. ಅಗ್ನಿ ದೇವತೆಗಳನ್ನು ಕರೆತರಲು ರಥಕ್ಕೆ ಅಶ್ವ ಹೂಡಲಿ. ಅಗ್ನಿ ಸಹಾಯದಿಂದ ದತ್ತವಾದ ಧನದಿಂದ ಶತ್ರುಗಳನ್ನು ಸೋಲಿಸಲು ಶಕ್ತರಾಗಿದ್ದಾರೆ. ಅಗ್ನಿಯು ಅನ್ನದೊಂದಿಗೆ ದಯಮಾಡಿಸಲಿ. ಅಗ್ನಿ ಆರಾಧಕರು ಅಧಿಕ ಧನ, ಪುತ್ರರನ್ನು ಪಡೆಯುತ್ತಾರೆ. ಅಗ್ನಿಯ ಸ್ನೇಹಕ್ಕಾಗಿ ಶ್ಲಾಘಿಸಿ ಸಂತೋಷದಿಂದ ಮಧುರ ಆಜ್ಯದಿಂದ ತೃಪ್ತಿಪಡಿಸುತ್ತಾರೆ. ಅಗ್ನಿಯು ಅನುಗ್ರಹಿಸಲು ಯಜಮಾನರ ಎದುರುಗಡೆ ಬಂದು ಸೇರಲಿ. ಇಂದ್ರ ಮರುತ್‌ಗಳು ಯಜ್ಞಕ್ಕೆ ಬರಲಿ, ಸೋಮಪಾನ ಮಾಡಲಿ. ಋತ್ವಿಜರು ಸ್ಥಿರ ಸಂಕಲ್ಪವುಳ್ಳವರು. ಅಗ್ನಿಯನ್ನು ಸ್ತುತಿಸಿ, ಪೂಜಿಸಿ, ಪ್ರಾರ್ಥಿಸಿ ಸಹಾಯಕ್ಕೆ ಕರೆಯುತ್ತಾರೆ. ಅಗ್ನಿಯನ್ನು ಪೂಜಿಸಿ ತೃಪ್ತಿ ಪಡಿಸುತ್ತಾರೆ. ಋಷಿಗಳು ಹಾಗು ಇತರರು ಪ್ರಶಂಸಿಸಿ ಹರಡಿರುವ ಅಗ್ನಿಯಿಂದ ಗೃಹ ಬೇಡುತ್ತಾರೆ. ★ ಋತ್ವಿಜರು ಏಳು ಜನರಿರುತ್ತಾರೆ (1) ಬ್ರಹ್ಮ (2) ಹೋತೃ ಉಳಿದ ಐದು ಜನರಿಗೂ ಇವರು ನಿರ್ದೇಶನ ಮಾಡುತ್ತಾರೆ. ಋತ್ವಿಜರು ಅಗ್ನಿಯನ್ನು ಸಮೀಪಸಲಿ, ಸ್ತುತಿಸಲಿ, ದೇವತೆಗಳನ್ನು ಕರೆಯಲಿ, ಭೃಗು ವಂಶೋತ್ಪನ್ನರಂತೆ ಸ್ತುತಿಸಿ, ಪೂಜಿಸಿ, ಹವಿಸ್ಸರ್ಪಿಸಿ ಗಾನಗಳಿಂದಲೂ ಸಂತೋಷಪಡಿಸುತ್ತಾರೆ. ಘೃತ ಅರ್ಪಿಸುವ ಸ್ರುಕ್ ಪಾತ್ರೆಯು ಯಜಮಾನನ ಸ್ತುತಿಗಳು, ಕರ್ಮಗಳು, ಅಗ್ನಿ ಅನುಗ್ರಹದಿಂದ ವೃದ್ಧಿ ಹೊಂದಲಿ. ಚಮಸ ಪಾತ್ರೆಯನ್ನು ಮೇಲೆತ್ತಿ ಹಿಡಿದು ಅಗ್ನಿಯನ್ನು ಪ್ರಾರ್ಥಿಸಿ ಕರೆಯುತ್ತಾರೆ. ಚಮಸ ಪಾತ್ರೆಗಳು ಸಂತೋಷಗೊಳ್ಳುತ್ತವೆ.

ಸ್ವಯಂ ಪ್ರೇರಿತರಾಗಿ ಅಗ್ನಿಯನ್ನು ಪೂಜಿಸಲಿ, ಜ್ವಾಲೆಗಳನ್ನು ಯಜಮಾನರು ನಮಸ್ಕರಿಸಿ ಆಜ್ಯದಿಂದ ಅಲಂಕರಿಸುತ್ತಾರೆ. ಜ್ವಾಲಾ ರೂಪಿ ಅಗ್ನಿಯ ಸಹಾಯದಿಂದ ಸಕಲ ಶತ್ರುಗಳನ್ನು ಜಯಿಸಲು ಯಜಮಾನರು ಸಮರ್ಥರಿರುತ್ತಾರೆ. ತಮ್ಮ ದಡವನ್ನು ತಾವೇ ನಿರ್ಮಿಸಿಕೊಂಡು ಪ್ರವಹಿಸುವ ನದಿಗಳಂತೆ ಯಜಮಾನರು ಅಗ್ನಿಯನ್ನು ಸ್ತುತಿಸುತ್ತಾರೆ. ತಮ್ಮ ತಮ್ಮ ಇಷ್ಟಾರ್ಥಗಳಿಗಾಗಿಯೇ ಕರ್ಮ ಮಾಡುತ್ತಾರೆ. ದೇವತೆಗಳಿಗೆ ಅಗ್ನಿಯು ಹೋಮ ಸಂಪಾದಕ, ದೇವತೆಗಳನ್ನು ಯಜ್ಞಕ್ಕೆ ಕರೆತರುವವನು.

★ ದರಿದ್ರ ಯಜಮಾನನು ಕ್ಷೀರವನ್ನಾಗಲಿ, ಸೋಮವನ್ನಾಗಲಿ ಅರ್ಪಿಸಲಾಗದೆ ಬರಿ ಸ್ತುತಿ ಮಾತ್ರ ಅರ್ಪಿಸುತ್ತಾನೆ. ಅಗ್ನಿ ಅದನ್ನು ಸ್ವೀಕರಿಸಿ ಅವನನ್ನು ಅನುಗ್ರಹಿಸುತ್ತಾನೆ. ನಮಸ್ಕಾರಪೂರ್ವಕ ಸ್ತುತಿಸಿ ಅಗ್ನಿಯನ್ನು ಸುಖ ಯಾಚಿಸುತ್ತಾರೆ. ಮೇಧಾವಿ ಮಾತ್ಸರ್ಯರಹಿತ ಯಜಮಾನರು ಅಗ್ನಿಯನ್ನು ರಕ್ಷಣಾರ್ಥವಾಗಿ ಸ್ತುತಿ ವಾಕ್ಯಗಳಿಂದ ಪ್ರಶಂಸಿಸುತ್ತಾರೆ, ಪೂಜಿಸುತ್ತಾರೆ, ಸ್ತುತಿಸುತ್ತಾರೆ. ಮಂತ್ರಮಯ ವಾಕ್ಯಗಳಿಂದ ಸ್ತುತಿಸುತ್ತಾರೆ. ಮಿತ್ರರನ್ನು ಹೊಗಳುವಂತೆ ಸ್ತುತಿ ವಾಕ್ಯಗಳಿಂದ ಹೊಗಳಿ ಘೃತ ಸಹಿತ ಹವಿಸ್ಸು ಅರ್ಪಿಸುತ್ತಾರೆ. ಮಧುರ ಆಜ್ಯದಿಂದ ತೃಪ್ತಿ ಪಡಿಸುತ್ತಾರೆ. ಮೂರು ಪದರದ ಅನೇಕ ಗ್ರಂಥಿಯುಕ್ತ ದರ್ಭಾಸನಗಳು ಇರಿಸಲ್ಪಟ್ಟು ಅಲ್ಲಿ ಅಗ್ನಿ ಕೂರುವಂತೆ ಮಾಡಿದ್ದಾರೆ. ಯಥಾರ್ಥ ಅಗ್ನಿಯನ್ನು ಸ್ಥಾಪಿಸುವವರು ಗಾನಾರ್ಹರಾಗುತ್ತಾರೆ. ಉತ್ತಮ ಧನ ಮತ್ತು ವೀರ ಪುತ್ರರನ್ನು ಪಡೆಯುತ್ತಾರೆ. ಯಾಜ್ಞಿಕರು, ಯಜಮಾನರು ಅಗ್ನಿಯನ್ನು ದೇವದೂತನನ್ನಾಗಿ ಮಾಡಿಕೊಂಡಿದ್ದಾರೆ. ಯಾಗಾರಂಭದಲ್ಲಿ ಯಜಮಾನನು ಅಗ್ನಿಯನ್ನು ಸಮೀಪಿಸುತ್ತಾರೆ. ಸುಖಕರ ಸ್ತೋತ್ರ ಅರ್ಘ್ಯಗಳನ್ನು ಅರ್ಪಿಸುತ್ತಾನೆ. ಅಗ್ನಿಯು ಸ್ತುತಿತನಾಗುತ್ತಾನೆ. ರಕ್ಷಣಾರ್ಥ ಉಪಚಾರ ಕರ್ಮಗಳಿಂದ ಅಗ್ನಿಯನ್ನು ಉಪಚರಿಸುತ್ತಾರೆ. ಸ್ತುತಿಸುತ್ತಾರೆ. ಅಂತಹವರು ಇಂದ್ರನಿಂದಲೂ ರಕ್ಷಿತರಾಗುತ್ತಾರೆ.

ವಂಸತಾದಿ ಋತುಗಳಲ್ಲಿ ಲಭಿಸುವ ಕಾಂತಿಯುತ ಸೋಮ ಅರ್ಪಿಸಿ ಗಾನ, ಆಹ್ವಾನಗಳಿಂದ ಹರ್ವಿರರ್ಪಿಸಿ ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ವಾಯುವು ಸಮೀಪದಲ್ಲಿ ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ಶುದ್ಧ ಅಗ್ನಿಯನ್ನು 'ಭೃಗು' ವು ಪ್ರಾರ್ಥಿಸಿ ಕರೆದಂತೆ ಕಾಣ್ವರು ಕರೆಯುತ್ತಾರೆ. ಸಮಸ್ತ ದೇವತೆಗಳು ಒಂದೇ ಮನಸ್ಸಿನಿಂದ ಅಗ್ನಿಯನ್ನು ಹರ್ವಿವಾಹಕನನ್ನಾಗಿ ಮಾಡಿದ್ದಾರೆ. ಸಂಗ್ರಾಮದಲ್ಲಿ ವಿಶೇಷ ಪೂಜೆ, ಪ್ರಾರ್ಥನೆಗಳನ್ನು ಮಾಡಿ ಇಷ್ಟಾರ್ಥ ಪಡೆದುಕೊಳ್ಳುತ್ತಾರೆ. ಕರ್ಮಗಳನ್ನು ಇದಕ್ಕಾಗಿಯೇ ಮಾಡುತ್ತಾರೆ. ಸದಾ, ಸರ್ವದಾ ಯಜಮಾನನ ಗೃಹದಲ್ಲೆ ಇರುತ್ತಾನೆ. ಸುಪ್ತವಾಗಿರುವ ಅಗ್ನಿಯನ್ನು ಪ್ರಭೆಯಿಂದ ಮುಂಭಾಗದಲ್ಲಿ ಸ್ಥಾಪಿಸಲು ಇಚ್ಛಿಸಿ ಸ್ತುತಿಗಳೊಂದಿಗೆ ಆಧರಿಸಿ ಪೂಜಿಸುತ್ತಾರೆ. ಸ್ವಗೃಹದಲ್ಲೇ ಅಲಂಕರಿಸಿ ಪೂಜಿಸುತ್ತಾರೆ. ★ ಅಗ್ನಿಯು ಒಮ್ಮೆ ಭೂಮಿಯಲ್ಲಿ, ಒಮ್ಮೆ ಅಂತರಿಕ್ಷದಲ್ಲಿ ಕಾಣುವಂತೆ ಮಾಡಿದರು. ಈ ಹಿಂದೆ ಭೃಗು, ಮನು, ಆಂಗೀರಸ ಋಷಿಗಳು ಪರಿಶುದ್ಧ ಅಗ್ನಿಯನ್ನು ಆಹುತಿ ಸ್ವೀಕರಿಸಲು ಪೂಜಿಸಿದ್ದಾರೆ. ಮಾನವ ಆಂಗೀರ ನಾಮಕ ಮನುವಿನಂತೆ ಅಗ್ನಿಯನ್ನು ಪ್ರಜ್ವಲಿಸಿ ಹವಿಸ್ಸುಗಳಿಂದ ಚೈತನ್ಯಯುತನಾಗುವಂತೆ ಮಾಡಿದ್ದಾರೆ. ಕರ್ಮಾನುಷ್ಠಾನ ಮಾಡತಕ್ಕವರ ಸ್ತುತಿಗಳು ಅಗ್ನಿಗೆ ಅಭಿಮುಖವಾಗಿ (ಸಮುದ್ರಾಭಿಮುಖವಾಗಿ ಹರಿಯುವ ನದಿಯಂತೆ) ಚಲಿಸುತ್ತವೆ.

## ಅಗ್ನಿದೇವರಲ್ಲಿ ಪ್ರಭೇದಗಳು

1) ಅಪಾಂನಪಾತ್ - ನಮ್ಮಲ್ಲಿದ್ದಾನೆ (ಸಂತಾನಕ್ಕಾಗಿ ಹಾಗು ಅನ್ನಕ್ಕಾಗಿ ಪ್ರಾರ್ಥಿಸುತ್ತಾರೆ)
2) ಆಂಗೀರಾ ರೂಪಿನಲ್ಲಿ - ಆಜ್ಯ ಆಹುತಿಯಿಂದ ಪ್ರಸಿದ್ಧನಾಗಿದ್ದಾನೆ. ಉಷಸ್‌ನಿಂದ ಅಗ್ನಿ ಉತ್ಪನ್ನ ಮಾಡಿದ್ದಾನೆ.
3) ಆದಿತ್ಯ ರೂಪಿನಲ್ಲಿ(ಪವಿತ್ರಾಗ್ನಿ) - ಮರಣರಾಹಿತ್ಯಕ್ಕಾಗಿ ಬೇಡಿದ್ದಾರೆ
4) ಗೃಹಪತಿ - ಪುರೋಹಿತರ ರೂಪಿನಲ್ಲಿ ಇರುತ್ತಾನೆ. 5) ಗಾರ್ಹಪತ್ಯಾಗ್ನಿ - ಸುಖ ನೀಡುವವನು
6) ಜಾತವೇದ - ಯುದ್ಧದಲ್ಲಿ ಆರಾಧಿಸುತ್ತಾರೆ. 7) ತನೂನಪಾತ್ - ಯಜ್ಞದಲ್ಲಿ ಮಧುರ ಆಜ್ಯ ದ್ರವ್ಯಗಳ ಹವಿಸ್ಸು ಸೇವಿಸುತ್ತಾನೆ 8) ದ್ರವಿಣೋದ - ಶ್ರೇಯಸ್ಸಿಗಾಗಿ 9) ದಾವಾನಲಾಗ್ನಿ - ವೃಕ್ಷಗಳಲ್ಲಿ ಇರುತ್ತದೆ.
10) ವೈಶ್ವಾನರಾಗ್ನಿ - ಓಷಧಿಗಳಲ್ಲಿ ಸರ್ವವ್ಯಾಪಿ, ಜ್ಯೋತಿರೂಪಿ, ನಮಗೆ ತಿಳುವಳಿಕೆ ನೀಡಲಿ.
11) ಸೂರ್ಯರೂಪಿನಲ್ಲಿ - ರೋಗಹರ / ಆರೋಗ್ಯದಾಯಕ (ಅಂಧಕಾರ ನಾಶಮಾಡಲಿ)

# ಅಗ್ನಿದೇವರು

## ಮಂಡಲ ಹತ್ತರಿಂದ ತೆಗೆದ ಆಶ್ರಮ ವಿಭಾಗದ ವಿಷಯಗಳು

ಅಗ್ನಿಯ ಸ್ವರೂಪವನ್ನು ಮಾನವ ಋಷಿ ತಿಳಿಯಲಾರದವನಾಗಿದ್ದಾನೆ. **ಅಂತರಿಕ್ಷ ಮಧ್ಯ ಭಾಗದಲ್ಲಿ ಆದಿತ್ಯ ರಶ್ಮಿಗಳು ಅಗ್ನಿಯ ಉತ್ಪತ್ತಿ ಸ್ಥಾನಗಳು.** ಯಜಮಾನರು ಅಗ್ನಿಯನ್ನು ಸ್ತುತಿಸಿ, ಆಹ್ವಾನಿಸಿ, ಹವಿರರ್ಪಿಸಿ ಇಂದ್ರನನ್ನು ಯಜ್ಞಕ್ಕೆ ಕರೆಯಲು ಪ್ರಾರ್ಥಿಸುತ್ತಾರೆ. ಯಾಜ್ಞಿಕರು ತೋಳು ಬಲದಿಂದ ಕಡೆದು ಉತ್ಪನ್ನ ಮಾಡಿ ನಿರ್ವಾಹಕ ಹೋತೃವನ್ನಾಗಿ ಮಾಡಿದ್ದಾರೆ. ಅಗ್ನಿಯನ್ನು ಪಿತೃ, ಮಿತ್ರ, ಬಂಧು, ಸಹೋದರ ಎಂದೆಲ್ಲಾ ತಿಳಿದು ಸ್ತೋತ್ರ ಮಾಡಿ ಹವಿಸ್ಸು ಅರ್ಪಿಸುತ್ತಾರೆ. **ಅಗ್ನಿಯು ಹವಿಸ್ಸು ಸ್ವೀಕರಿಸುವುದನ್ನು ಯಾರೂ ಅರಿಯಲಾರರು.** ಅಗ್ನಿಯೇ ಹವಿಸ್ಸು, ಪುರೋಡಾಶ ಆಗಿರುತ್ತಾನೆ. ಉತ್ತಮ ಯಜ್ಞದಲ್ಲಿ ಅಗ್ನಿ ಮತ್ತಿತರ ದೇವತೆಗಳು ಸ್ತೋತ್ರದಿಂದ, ಹವಿಸ್ಸಿನಿಂದ ತೃಪ್ತರಾಗುತ್ತಾರೆ. ಅಗ್ನಿಯನ್ನು ಆರಾಧಿಸಿ, ಸ್ತುತಿಸಿ ಪಾತ್ರೆಗಳಿಂದ ಆಹುತಿಗಳನ್ನು ಸುರಿದು ಅಗ್ನಿ ಶ್ರೇಷ್ಠನೆಂದು ತಿಳಿದಿದ್ದಾರೆ. ಅಗ್ನಿ ಮೊದಲು (1) ದ್ಯುಲೋಕದಲ್ಲಿ ಅಗ್ನಿ ರೂಪದಲ್ಲಿದ್ದಾನೆ. (2) ಎರಡನೇಯ ಸಲ ಪೃಥ್ವಿಯಲ್ಲಿ ಜಾತವೇದೋರೂಪಿನಲ್ಲಿದ್ದಾನೆ. ಮೂರನೆಯ ಸಲ (3) ಅಂತರಿಕ್ಷದಲ್ಲಿ ವಿದ್ಯುತ್ ರೂಪಿನಲ್ಲಿದ್ದಾನೆ. ಮೂರೂ ಲೋಕಗಳಲ್ಲೂ ಆಹವನೀಯ ಸ್ಥಾನದಲ್ಲಿರುವ ಅಗ್ನಿಯ ರಹಸ್ಯ ಉತ್ಪತ್ತಿ ಸ್ಥಾನಗಳನ್ನು ಯಜ್ಞ ಯಜಮಾನರು ತಿಳಿದಿದ್ದಾರೆ. ಇಂದ್ರ, ಮರುತ್, ವರುಣರನ್ನು ಆಹ್ವಾನಿಸಿ ಹವಿಸ್ಸು ಅರ್ಪಿಸಲು ಹೇಳಿದ್ದಾರೆ. ಅನ್ನರೂಪ ಹವಿಸ್ಸು ಸ್ವೀಕರಿಸಿ ದೇವತೆಗಳು ಸಂತೋಷಗೊಳ್ಳಲು ಪ್ರಾರ್ಥಿಸಿದ್ದಾರೆ. ಯಜ್ಞಕರ್ತರು ಆಜ್ಯದಿಂದ ಸಂಸ್ಕರಿಸಿ ಪೂಜಿಸುತ್ತಾರೆ. ದಾನಗಳಿಂದ, ಸ್ತುತಿಗಳಿಂದ ಶಸ್ತ್ರಮಂತ್ರಗಳಿಂದ ಆರಾಧಿಸುತ್ತಾರೆ. ಯಜ್ಞದಲ್ಲಿ ಉತ್ತರ ವೇದಿಕೆಯಲ್ಲಿ ಅಗ್ನಿ ಇರುತ್ತಾನೆ. ಜ್ವಾಲಾರೂಪಿ ನಾಲಿಗೆಯಿಂದ ಹವಿಸ್ಸು ಪಡೆದು ದೇವತೆಗಳಿಗೆ ತಲುಪಿಸುತ್ತಾನೆ. ಸಣ್ಣ ಯಜ್ಞಗಳಲ್ಲೂ ದೊಡ್ಡ ದೊಡ್ಡ ಸೋಮಾರ್ಪಣೆ ಮಾಡುವ ಯಜ್ಞಗಳಲ್ಲೂ ಋತ್ವಿಜರು ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ಉತ್ತಮ ಕರ್ಮಗಳನ್ನು ಮಾಡಿ ಹವಿಸ್ಸನ್ನು ಅರ್ಪಿಸಿ ಪ್ರಶಂಸಿಸುತ್ತಾರೆ. ಅಗ್ನಿಯು ದೇವತೆಗಳೊಂದಿಗೆ ಯಜ್ಞಕ್ಕೆ ದಯಮಾಡಿಸಲಿ, ಬರ್ಹಿಯನ್ನು ಪ್ರಾತ:ಕಾಲದಲ್ಲೇ ಹರಡಿರಲಿ, ಬಾಗಿಲುಗಳನ್ನು ವಿಶಾಲವಾಗಿ ತೆರೆದಿಡಲಿ. ಯಜ್ಞ ನಿರ್ವಹಿಸುವವರು, ಋತ್ವಿಜರು, ಪ್ರೇಕ್ಷಕರು, ಆಹವನೀಯ ಅಗ್ನಿಯನ್ನು ನಿರ್ದೇಶಿಸುವವರು ಎಲ್ಲರೂ ಬಂದು ಕೂಡಲಿ. ಇಳಾ, ಭಾರತಿ, ಸರಸ್ವತಿಯರು ಬಂದು ಕೂಡಲಿ, ದ್ಯಾವಾ, ಪೃಥ್ವಿ, ತ್ವಷ್ಟನನ್ನು ಪೂಜಿಸಲಿ. ಅಗ್ನಿ ದೇವತೆಗಳ ಬಳಿಗೆ ಹೋಗುವಾಗ ಶುಭ್ರವರ್ಣ ಪ್ರಭೆಯನ್ನು ಬೇರೆ ಮಾಡುತ್ತಾ ರಾತ್ರಿಯನ್ನು ಸೇರುತ್ತಾನೆ. ದ್ಯಾವಾ ಪೃಥ್ವಿಗಳ ನಡುವೆ ಸಪ್ತ ಸಂಖ್ಯಾತ ಜ್ವಾಲೆಗಳಲ್ಲಿ ನಾನಾ ವರ್ಣಗಳಲ್ಲಿ ಇರುತ್ತಾನೆ. ದೇವತೆಗಳಿಗಿಂತ ಮೊದಲು ಹೋಮ ವೇದಿಕೆಯಲ್ಲಿ ಅಗ್ನಿ ಸ್ಥಾಪಿತನಾಗುತ್ತಾನೆ. ಉತ್ತಮ ಚರು, ಪುರೋಡಾಶ ಅರ್ಪಿಸುತ್ತಾರೆ. ಅಗ್ನಿಯನ್ನು ಮನಮುಟ್ಟುವಂತೆ ಧ್ಯಾನಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸಿಸುತ್ತಾರೆ. ಇಂದ್ರಾದಿ ದೇವತೆಗಳನ್ನು ಕರೆತಂದು ಪೂಜಿಸಲಿ, ಅವರು ಹವಿಸ್ಸು ಸ್ವೀಕರಿಸಲಿ. ಋತ್ವಿಜರು ಅಗ್ನಿಯನ್ನು ಆಶ್ರಯಿಸಿ ಇಷ್ಟಾರ್ಥ ಪಡೆಯುತ್ತಾರೆ. **ಋಷಿಗಳಿಗೆ ಪಾಪಿಷ್ಟ ಆಚರಣೆ, ಸುರಾಪಾನ, ದ್ಯೂತಾದಿಗಳನ್ನು** ವಿರೋಧಿಸಲು ಹೇಳಿದ್ದಾರೆ. ಋತ್ವಿಜರು ಶುದ್ಧ ಮನಸ್ಸಿನವರು, ಉತ್ತಮ ದೃಷ್ಟಿಯ ಪುತ್ರಯುಕ್ತರು, ರೋಗರುಜಿನ ರಹಿತರು, ಪಾಪರಹಿತರು. ಅಗ್ನಿಯನ್ನು ಯಾವಾಗಲೂ ಪ್ರಜ್ವಲಿಸುವಂತೆ ಮಾಡುತ್ತಾ ಸ್ತುತಿಸುತ್ತಿರುತ್ತಾರೆ. ದೇವತೆಗಳ ಉತ್ತಮ ಮಾರ್ಗ ಅನುಸರಿಸೋಣ. ಭೃಗು ಮೊದಲಾದ ಋಷಿಗಳು ನೀರಿನಲ್ಲಿ ಅಡಗಿದ್ದ ಅಗ್ನಿಯ ಬಳಿ ಸ್ತೋತ್ರ ನಮಸ್ಕಾರಗಳಿಂದ ಸಮೀಪಿಸುತ್ತಿದ್ದರು. ದೇವತೆಗಳು ಯಜ್ಞಕ್ಕೆ ಅಶ್ವಾರೂಢರಾಗಿ ಬರಲಿ, ಯಜಮಾನನ ಸಮೀಪವೇ ಇದ್ದು ಸ್ತುತಿ, ಹವಿಸ್ಸು ಪಡೆಯಲಿ. **ಯಜಮಾನರು ಮೇಧಾವಿಗಳು,** (ವೈಶ್ವಾನರಾಗ್ನಿಯನ್ನು ಹೃದಯದಲ್ಲಿ ಧರಿಸಿ ಮನಸ್ಸಿನಲ್ಲಿ ಧ್ಯಾನಿಸಿ ಆಹುತಿ ಮಂತ್ರಗಳಿಂದ ಯಜ್ಞಕ್ಕೆ ಆಹ್ವಾನಿಸುತ್ತಾರೆ). ಅಗ್ನಿ ಹವಿಸ್ಸು ಸ್ವೀಕರಿಸಿ ದೇವತೆಗಳಿಗೆ ತಲುಪಿಸಲು ನಿರ್ಗಮಿಸುತ್ತಾನೆ. ಶಸ್ತ್ರಮಂತ್ರಗಳಿಂದ ಅನೇಕ ರೀತಿ ಅಗ್ನಿಯನ್ನು ಆಹ್ವಾನಿಸುತ್ತಾರೆ. ಉಷೋದಯದಲ್ಲೇ ಯಜಮಾನನನ್ನು ಸೇರುತ್ತಾನೆ. ಸೂರ್ಯನು ಸಾಗರದ ಮೇಲ್ಭಾಗದಲ್ಲಿ ಇರುವವನು.

ದ್ಯುಲೋಕ ಉತ್ಪನ್ನ. ಸೂರ್ಯದೇವನಿಗೆ ಪ್ರಥಮ ವಂದನೆ. ನಂತರ ಋತ್ವಿಜರು ವಿಹಿತ ಕರ್ಮಗಳಲ್ಲಿ ತೊಡಗುತ್ತಾರೆ. ಸಮಿತ್ತು, ಘೃತಗಳಿಂದ ಉತ್ತರ ವೇದಿಕೆಯಲ್ಲಿ ಸ್ಥಾಪಿತ ಅಗ್ನಿಯು ಸಕಲ ಶ್ರೇಯಸ್ಸಿಗಾಗಿ ಯಜ್ಞದಲ್ಲಿ ಪ್ರಜ್ವಲಿತನಾಗುತ್ತಾನೆ. ಆರ್ಜ್ಯ ತೋಯಿಸಿದ ಯಜ್ಞದಲ್ಲಿ ಎಲ್ಲೆಲ್ಲೂ ವ್ಯಾಪಿಸಿರುತ್ತಾನೆ.**(ಸ್ರುಕ್ ಪಾತ್ರೆಯಲ್ಲಿ ಆಜ್ಯವನ್ನೂ, ಚಮು ಪಾತ್ರೆಯಲ್ಲಿ ಸೋಮವನ್ನೂ ಯಾಜ್ಞಿಕರು ಇಟ್ಟಿರುತ್ತಾರೆ)** ಯಾಜ್ಞಿಕರಿಗೆ ತಾವು ಮಾಡಿದ ಪಾಪ ಕಾರ್ಯಗಳ ಬಗೆಗೆ ಅರಿವು ಇರುವುದಿಲ್ಲ, ಅಗ್ನಿಗೆ ಕೈ ಮುಗಿದು ನಮಸ್ಕರಿಸಿ ಹವಿಸ್ಸು ಅರ್ಪಿಸುತ್ತಿರುತ್ತಾರೆ. ಯಾಜ್ಞಿಕರು ಯಾವಾಗಲೂ ದೇವತೆಗಳನ್ನು ಬಯಸುವವರು, ಸಂಸ್ಕರಿಸಿದ ದರ್ಭೆ ಮತ್ತು ಹವಿಸ್ಸು ಹೊಂದಿರುವವರು, ಹೊಗೆ ಹರಡಿ ಆಕರ್ಷಕ ರೂಪ ಧರಿಸಿ ಶುಭ್ರ ಕಾಂತಿಯಿಂದ ಹವಿಸ್ಸು ಪುರೋಡಾಶಗಳನ್ನು ಯಜಮಾನನಿಂದ ದೇವತೆಗಳಿಗಾಗಿ ಅಗ್ನಿಯು ಸ್ವೀಕರಿಸುತ್ತಾನೆ. ಪ್ರಶಸ್ತ ಕರ್ಮಿ, ಬ್ರಹ್ಮ ರೂಪ, ಋತ್ವಿಕರೂಪ, ಯಜ್ಞ ಮಾಡಲು ಇಚ್ಛಿಸುವವನು, ಅಧ್ವರ್ಯು, ಯಜ್ಞ ಪಾಲಕ ಎಲ್ಲವೂ ಅಗ್ನಿಯೇ. ಯಜ್ಞ ನಿರ್ವಹಣೆಗಾಗಿ (1) ಗಾರ್ಹಪಥ್ಯ (2) ಆಹವನೀಯ (3) ದಕ್ಷಿಣಾತ್ಯಾ ರೂಪದಲ್ಲಿ ಯಜ್ಞಕುಂಡದಲ್ಲಿರುವವನಾಗಿದ್ದಾನೆ ಅಗ್ನಿ. ಹವಿಸ್ಸನ್ನು ಸೇವಿಸಿ ಅತ್ಯಧಿಕ ಜ್ವಾಲೆಯಿಂದ ಊರ್ಧ್ವಮುಖಿ ಸಂಚರಿಸುತ್ತಾನೆ. ಯಜಮಾನನಿಗಾಗಿಯೇ ಯಜ್ಞಕ್ಕೆ ದೇವತೆಗಳನ್ನು ಕರೆತರುತ್ತಾನೆ. ಯಾಜ್ಞಿಕರು ಅರ್ಪಿಸುವ ಹವಿಸ್ಸು ಮುಂತಾದವುಗಳನ್ನು ದೇವಯೋಗ್ಯವನ್ನಾಗಿ ಮಾಡುತ್ತಾರೆ. ಹವಿಸ್ಸು, ಘೃತಗಳಿಂದ ಹರ್ಷಿತನಾಗುತ್ತಾನೆ. ಧಗ ಧಗನೇ ಉರಿಯುತ್ತಾ ಅಧಿಕವಾಗಿ ಪ್ರಜ್ವಲಿಸುತ್ತಾನೆ. ಯಜ್ಞ ಕುಂಡದಲ್ಲಿ ಆಹವನೀಯಾಗ್ನಿಯನ್ನು ಸ್ಥಾಪಿಸಿ ಪ್ರಜ್ವಲಿಸುತ್ತಾರೆ. ಮಂತ್ರ ದಂಷ್ಟ್ರಾರರು ಅಗ್ನಿಯನ್ನು ಸ್ತುತಿಸುತ್ತಾರೆ. ಇದರಿಂದ (1) ಆದಿ ದೈವಿಕ (2) ಆದಿ ಬೌತಿಕ (3) ಆದಿ ಆತ್ಮಿಕ ಎಂಬ ಮೂರು ವಿಧ ದುಖ:ಗಳು ಪರಿಹರಿಸಲ್ಪಡುತ್ತವೆ. ಋತ್ವಿಜರು ಪ್ರಜ್ವಲಿಸುವ ಅಗ್ನಿಯು (1) ವಸು (2) ರುದ್ರ (3) ಆದಿತ್ಯ ರೂಪಿಗಳು ಆದ್ದರಿಂದ ಯಜ್ಞಕ್ಕೆ ದಯಮಾಡಿಸಲು ಅವರನ್ನು ಪ್ರಾರ್ಥಿಸಿದ್ದಾರೆ. ಶುಭ್ರ ವರ್ಣದಿಂದ ಆವಿರ್ಭವಿಸುವ ಸೂರ್ಯರೂಪಿನಿಂದ ಸಮಸ್ತವನ್ನು ನೋಡಬಲ್ಲ ಅಗ್ನಿಯನ್ನು ಸ್ತೋತ್ರಗಳಿಂದ ತೃಪ್ತಿಪಡಿಸುತ್ತಾರೆ. ನಿತ್ಯ ಯಜ್ಞ ಮಾಡುವವರಿಗೆ ಅಗ್ನಿ ಒಡೆಯ, ತನ್ನ ಕರ್ಮಗಳಿಂದ ಧನ ವಾಹಕನಾಗಿದ್ದಾನೆ. **★ ಕರ್ಮಗಳನ್ನು ಮಾಡಿಯೇ ಇಷ್ಟಾರ್ಥಗಳನ್ನು ಬೇಡಿ ಎಂದಿದ್ದಾರೆ. ★** ಸೋಮದಿಂದ ಆರಾಧಿಸುವವರಿಗೆ ಅಪೇಕ್ಷಿತ ಪ್ರಶಸ್ತ ಧನ ವೃದ್ಧಿಸಿ ಕರ್ಮ ಪೂರ್ಣಗೊಳಿಸುತ್ತಾನೆ. ಯಾರೂ ಕರ್ಮ ರಹಿತರಾಗದಿರಲಿ, ದೇವತೆಗಳು ಅಗ್ನಿಯನ್ನು ತಮ್ಮ ದೂತನನ್ನಾಗಿ (ಹವಿರ್ವಾಹಕನನ್ನಾಗಿ ಮಾಡಿಕೊಳ್ಳಲಿ) ಈ ಹಿಂದಿನವರು ಉತ್ಪಾದಿಸಿದಂತೆಯೇ ಏಳು ಜನ ಹೋತೃಗಳು ಸನಾತನ ಅಗ್ನಿಯನ್ನು ತಮ್ಮ ಹತ್ತೂ ಬೆರಳುಗಳಿಂದ ಮಥನ ಮಾಡಿ ಉತ್ಪಾದಿಸಿದ್ದಾರೆ. ಅಗ್ನಿಯ ಉತ್ಪನ್ನವನ್ನು ಪುತ್ರೋತ್ಸವದಂತೆ ಮಾಡಿದ್ದಾರೆ. ಶಸ್ತ್ರಮಂತ್ರಗಳನ್ನು ಪಠಿಸುತ್ತಾರೆ. ನ್ಯೂನತೆಗಳಿಲ್ಲದೆ ಕರ್ಮಗಳನ್ನು ಮಾಡುತ್ತಾರೆ. ನಾಲ್ಕು ದಿಕ್ಕಿನಲ್ಲೂ ನಾಲ್ಕು ಜನ ಋತ್ವಿಜರು ಇರುತ್ತಾರೆ. ಅಗ್ನಿಷ್ಟೋಮ ಯಾಗವನ್ನು ಮಾಡುತ್ತಾರೆ. ಇಂದ್ರಾಗ್ನಿಗಳು ಭೂಲೋಕ, ಅಂತರಿಕ್ಷ ದ್ಯುಲೋಕ ಎಲ್ಲೇ ಇರಲಿ ಯಾಗಕ್ಕೆ ಬರಲಿ, ಸೋಮ ಸ್ವೀಕರಿಸಲಿ, ಧನದಾತರಾಗಲಿ. ಶತ್ರು ನಾಶಕ್ಕಾಗಿ, ಪಾಪ ಪರಿಹಾರಕ್ಕಾಗಿ ಯಾಗಳನ್ನು ಮಾಡಿ ಹವಿಸ್ಸನ್ನು ಅರ್ಪಿಸುತ್ತಾರೆ. ಋಷಿಗಳು ಮಥಿಸಿ ಉತ್ಪನ್ನ ಮಾಡಿದುದರಿಂದ ಅಗ್ನಿ ಋಷಿ ಪುತ್ರ.

ಹವಿರ್ದಾನ ಮಾಡದವರನ್ನು ಅಗ್ನಿ ನಾಶಮಾಡಲಿ, ಅರ್ಪಿಸಿದ ಹವಿಸ್ಸನ್ನು ಕ್ಷಿಪ್ರವಾಗಿ ದೇವತೆಗಳಿಗೆ ತಲುಪಿಸಲಿ, ಸತ್ಯಾತ್ಮಕ ದಿಕ್ಕುಗಳು ಈ ಲೋಕ, ಮೇಲಿನ ಲೋಕ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರಗಳಿಂದ ಅಹೋ ರಾತ್ರಿಗಳಲ್ಲಿ ರಕ್ಷಿಸಲಿ, ಸವಿತೃವು ಅಸುರರನ್ನು ದುಷ್ಟ ಮೃಗಗಳಿಗೆ ಕೊಡಲಿ. ಅಗ್ನಿ ನಮ್ಮ ಸ್ತಿತಿಗಳನ್ನು ಕೇಳಲಿ, ಹವಿಸ್ಸನ್ನು ಸ್ವೀಕರಿಸಲಿ, ಹಿಂದಿನವರಿಗೆ ಅನುಗ್ರಹಿಸಿದಂತೆ ನಮಗೂ ಅಭೀಷ್ಟಗಳನ್ನು ಈಡೇರಿಸಲಿ. ಇತರೇ ದೇವತೆಗಳಿಗೆ ಅರ್ಪಿಸಿದ ಹವಿಸ್ಸನ್ನು ಅವರವರುಗಳಿಗೆ ತಲುಪಿಸಲಿ, ಅಗ್ನಿಗೆ ಅರ್ಪಿಸಿದ ಹೋಮ ದೂಮವು ಅಂತರಿಕ್ಷದ ಮೂಲಕ ಸೂರ್ಯನ ತೇಜಸ್ಸಿನಲ್ಲಿ ಐಕ್ಯವಾಗಲಿ. ಅಗ್ನಿಯಲ್ಲಿ ಸಕಲವೂ ಇದೆ. ಕರ್ಮ ಮಾಡಿ ಅರ್ಥ ಕಾಮಗಳನ್ನು ಪಡೆಯಿರಿ. ಭಕ್ತರಾಗಿರಲಿ, ಇಲ್ಲದಿರಲಿ, ಅಗ್ನಿ ರಕ್ಷಿಸುತ್ತಾನೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಗ್ನಿದೇವರು

ಅತ್ರಿ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು :

(ಋಗ್ವೇದ 5ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಯಾಗಕ್ಕೆ ಅವಶ್ಯಕವಾದ ಸಾಮಾನುಗಳೆಲ್ಲವೂ ಸಿದ್ಧವಾಗಿರುತ್ತದೆ.

2) ಉಷ ಕಾಲದಿಂದಲೇ ಕರ್ಮಗಳನ್ನು ಆರಂಭಿಸುತ್ತಾರೆ.

3) ದ್ವಾರ ದೇವತೆಗಳನ್ನು ಪೂಜಿಸುತ್ತಾರೆ.

4) ಹಗಲು ರಾತ್ರಿ ದೇವತೆಗಳನ್ನು ಪೂಜಿಸುತ್ತಾರೆ.

5) ಯಜ್ಞ ಪ್ರಭಾವ ಅರಿತ ಯಾಜ್ಞಿಕರು ಯಾಗ ಮಾಡುತ್ತಾರೆ.

6) ಯಾಜ್ಞಿಕರು ವಿವಿಧ ಯಜ್ಞ ಕರ್ಮ ನಿರ್ವಹಿಸಲು ಸಮರ್ಥರಿದ್ದಾರೆ.

7) ಯಜಮಾನರುಗಳಿಗಾಗಿ ಸ್ವರ್ಗಸಾಧಕ ಯಜ್ಞವನ್ನು ಮಾಡಬಲ್ಲರು.

8) ನೂತನ ಕಟ್ಟಿಗೆಗಳೆರಡರಿಂದ ಅಗ್ನಿಯನ್ನು ಉತ್ಪಾದಿಸುವರು.

9) ಜನನಿ ಆರಣೆಯಿಂದ ಅಭಾದಿತ ಮಥನದಿಂದ ಅಗ್ನಿ ಉತ್ಪನ್ನನಾಗುತ್ತಾನೆ.

10) ಋತ್ವಿಜರೆಲ್ಲರೂ ಅಗ್ನಿಯನ್ನು ಸ್ತುತಿಸುತ್ತಾರೆ.

11) ಅಗ್ನಿಯು

| | |
|---|---|
| ಉತ್ಪತ್ತಿಯಾದಾಗ | 1) ವರುಣನಾಗಿರುತ್ತಾನೆ |
| ಪ್ರಜ್ವಲಿಸಿದಾಗ | 2) ಮಿತ್ರನಾಗಿರುತ್ತಾನೆ |
| ಯಜಮಾನನಿಗೆ | 3) ಇಂದ್ರನೇ ಆಗಿರುತ್ತಾನೆ. |

12) ಅಗ್ನಿಯು (1) ಆಹವನೀಯ (2) ಗಾರ್ಹಪತ್ಯ (3) ದಕ್ಷಿಣಾಗ್ನಿ ಸ್ಥಾನಗಳಲ್ಲಿ ಪ್ರಜ್ವಲಿತನಾಗುತ್ತಾನೆ.

13) ಅಗ್ನಿಯು ಜನನಿ ಪೃಥ್ವಿಯ ಉತ್ತುಂಗದಲ್ಲಿ ಕುಳಿತು ಹವಿಸ್ಸನ್ನು ಸ್ವೀಕರಿಸುತ್ತಾನೆ.

14) ಅಗ್ನಿಯನ್ನು ಉತ್ತರ ವೇದಿಕೆಯಲ್ಲಿ ಸ್ತುತಿ ಪೂರ್ವಕವಾಗಿ ಸ್ಥಾಪಿಸಿ, ಪ್ರಾರ್ಥಿಸಿ ಕರೆಯುತ್ತಾರೆ.

15) ದರ್ಭೆಯನ್ನು ನೀರು, ತುಪ್ಪಗಳಿಂದ ಮೃದು ಮಾಡಿ ರತ್ನ ಕಂಬಳಿಯಂತೆ ಹರಡಿರುತ್ತಾರೆ. ದರ್ಭಾಸೀನರಾಗಲು ದೇವತೆಗಳನ್ನು ಪ್ರಾರ್ಥಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಗ್ನಿದೇವರು

ವಸಿಷ್ಟ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು :

(ಋಗ್ವೇದ 7ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಅಗ್ನಿಯು ಎಲ್ಲಾ ದೇವತೆಗಳೊಂದಿಗೆ ಬರಲಿ. ದರ್ಭಾಸೀನನಾಗಲಿ.

2) ಆಹವನೀಯ ಅಗ್ನಿಯನ್ನು ಪ್ರಜ್ವಲಿಸಿದ್ದಾರೆ.

3) ಅಗ್ನಿಯನ್ನು ಪ್ರಶಂಸಿಸಿ ವೃದ್ಧಿಪಡಿಸುತ್ತಾರೆ.

4) ಆಹ್ವಾನಿಸಿದ ದೇವತೆಗಳೆಲ್ಲರೂ ದರ್ಭಾಸೀನರಾಗಲು ಋಷಿಗಳು ಪ್ರಾರ್ಥಿಸುತ್ತಾರೆ.

5) ಹವಿಸ್ಸು ಹೊಂದಿರುವವರು ಅಗ್ನಿಯನ್ನು ಕರೆಯುತ್ತಾರೆ.

6) ಯಾಗದಲ್ಲಿ ಮಿತ್ರರನ್ನು ಆದರಿಸುವಂತೆ ಅಗ್ನಿಯನ್ನು ಆದರಿಸುತ್ತಾರೆ.

7) ಹೋತೃಗಳು ಅಗ್ನಿಗೆ ಎದುರಾಗಿ ಕುಳಿತುಕೊಳ್ಳುತ್ತಾರೆ.

8) ಋತ್ವಿಜರು ಏಳು ಜನರಿರುತ್ತಾರೆ.

1) ಬ್ರಹ್ಮ (2) ಹೋತೃ (3) ಉಳಿದ ಐದು ಜನರು ಬ್ರಹ್ಮ ಮತ್ತು ಹೋತೃಗಳ ನಿರ್ದೇಶನದಂತೆ ಕೆಲಸಗಳನ್ನು ಮಾಡುತ್ತಾರೆ. ಎಲ್ಲವೂ ಮೊದಲು ಅಗ್ನಿಗೆ ನಂತರ ಇತರೇ ದೇವತೆಗಳಿಗೆ ಸಲ್ಲುತ್ತವೆ.

9) ಅಗ್ನಿಯನ್ನು ಸ್ತುತಿಸಿ ದೇವತೆಗಳನ್ನು ಕರೆಯಲು ಹೇಳುತ್ತಾರೆ.

10) ಹವಿಸ್ಸು ಅರ್ಪಿಸಿ ಗಾನಗಳಿಂದಲೂ ಸಂತೋಷಗೊಳಿಸುತ್ತಾರೆ.

11) ವಸಿಷ್ಟರು ಜ್ಞಾನ ಕರ್ಮಗಳೆರಡಕ್ಕೂ ಆಶ್ರಯದಾತರು.

12) ಭಕ್ತಿ ಪೂರ್ವಕ ಅಗ್ನಿ ಮತ್ತು ದೇವತೆಗಳನ್ನು ಆಹುತಿಗಳಿಂದ ತೃಪ್ತಿಪಡಿಸುತ್ತಾರೆ.

13) ಸ್ತುತಿ ವಾಕ್ಯಗಳು ಮನನಾತ್ಮಕವಾಗಿರಬೇಕೆಂದು ಹೇಳಿದ್ದಾರೆ.

14) ಆಹ್ವಾನಿಸಿದ ದೇವತೆಗಳೆಲ್ಲರನ್ನು ಸ್ವಾಗತಿಸುತ್ತಾರೆ. ಅಗ್ನಿ ಪ್ರಜ್ವಲಿತನಾದಾಗ ದ್ಯಾವಾ ಪೃಥ್ವಿಯನ್ನು ಕರೆಯುತ್ತಾರೆ. ಮಾನವರು ಮಂಗಳ ಕಾರ್ಯಗಳನ್ನು ಮಾಡುತ್ತಿರುತ್ತಾರೆ. ಸ್ತುತಿ ವಾಕ್ಯಗಳಿಂದ ಪ್ರಶಂಸಿಸುತ್ತಾರೆ. ಮಂತ್ರಮಯ ವಾಕ್ಯಗಳಿಂದ ಸ್ತುತಿಸುತ್ತಾರೆ.

**ಅತ್ರಿ ಋಷಿಗಳ ಆಶ್ರಮ**

16) ಅಗ್ನಿಯನ್ನು ಸಮೀಪಿಸುತ್ತಾರೆ. ಯಜ್ಞ ಕರ್ಮಗಳಿಂದ ಮಿತ್ರರನ್ನು ಆದರಿಸುವಂತೆ ಆದರಿಸುತ್ತಾರೆ.

17) ಅಗ್ನಿಯನ್ನು ಯಜ್ಞ ಕರ್ಮಗಳಿಂದ ತೃಪ್ತಿಪಡಿಸುತ್ತಾರೆ.

18) ಪ್ರಜ್ವಲಿತನಾದೊಡನೆಯೇ ಹವಿಸ್ಸು ಅರ್ಪಿಸುತ್ತಾರೆ.

19) ಪ್ರಧಾನ ಅಗ್ನಿಗೆ ಹವಿಸ್ಸಿನೊಂದಿಗೆ ಅಧೋಮುಖ ಆಜ್ಯ ಧಾರೆ ಅರ್ಪಿಸುತ್ತಾರೆ. ಪ್ರಜ್ವಲಿಸುತ್ತಾರೆ.

20) ಅಗ್ನಿಗೆ ಸಮಿತ್ತು, ಹವಿಸ್ಸು, ಶಸ್ತ್ರ ಮಂತ್ರ, ಪುರೋಡಾಶ, ಅಧೋಮುಖ ಆಜ್ಯ ಧಾರೆ ಅರ್ಪಿಸಿ ತೃಪ್ತಿಪಡಿಸುತ್ತಾರೆ.

21) ಯಾಜ್ಞಿಕರು ಅಗ್ನಿಯು ವಾಯುಮಾರ್ಗದಲ್ಲಿ ದೇವತೆಗಳನ್ನು ಯಾಗಕ್ಕೆ ಕರೆತರಲು ಪ್ರಾರ್ಥಿಸುತ್ತಾರೆ.

22) ಆಹ್ವಾನಿತ, ಆಗಮಿತ ದೇವತೆಗಳನ್ನು ದರ್ಭಾಸನದಲ್ಲಿ ಕೂಡಲು ಹೇಳುತ್ತಾರೆ.

23) ಅಗ್ನಿ ಮತ್ತು ದೇವತೆಗಳೆಲ್ಲರನ್ನು ಯಾಜ್ಞಿಕರು ಸ್ತುತಿಸುತ್ತಾರೆ. ಸಾಮೂಹಿಕ ಪೂಜೆ ಪ್ರಶಂಸೆಗಳನ್ನು ಮಾಡುತ್ತಾರೆ.

24) ಹವಿರ್ವಾಹಕ ಅಗ್ನಿಯ ಮೂಲಕ ಆಹ್ವಾನಿತ ದೇವತೆಗಳಿಗೆಲ್ಲ ನಿಯಮಿತ ಹವಿಸ್ಸು ಅರ್ಪಿಸುತ್ತಾರೆ.

25) ಸಮಿತ್ತು, ಹವಿಸ್ಸು, ಪುರೋಡಾಶ, ಸೋಮಾರ್ಪಣೆ ಎಲ್ಲವನ್ನು ಸ್ವಾಹಾಕಾರಪೂರ್ವಕ ಅರ್ಪಿಸುತ್ತಾರೆ.

26) ಋತ್ವಿಜರು ಶ್ರದ್ಧಾ ಭಕ್ತಿಯಿಂದ ಈ ಎಲ್ಲಾ ಯಜ್ಞ ಕಾರ್ಯಗಳನ್ನು ಮಾಡುತ್ತಾರೆ.

27) ಅಗ್ನಿ ಪೂರ್ಣ ಪ್ರಜ್ವಲಿತನಾದಾಗ ಪೂರ್ಣಾಹುತಿಯನ್ನು ಅಗ್ನಿ ಮತ್ತು ಆಹ್ವಾನಿತ ದೇವತೆಗಳಿಗೆ ಅರ್ಪಿಸಿ ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡುತ್ತಾರೆ.

28) ಅಗ್ನಿಯು ಅಂದಿನ ಎಲ್ಲಾ ಕರ್ಮಗಳನ್ನು, ಹವಿಸ್ಸು, ಪುರೋಡಾಶ, ಸೋಮವನ್ನು ತಾನು ಸ್ವೀಕರಿಸಿ ಆಹ್ವಾನಿತ ದೇವತೆಗಳಿಗೆ ಅವರವರ ಭಾಗ ಅವರವರಿಗೇ ತಲುಪಿಸಲು ಪ್ರಾರ್ಥಿಸುತ್ತಾರೆ.

**ಅತ್ರಿ ಋಷಿಗಳ ಪ್ರಕಾರ ಅಗ್ನಿಯ ಜೊತೆಗೆ ಅವರು ಕರೆದ ಇತರೇ ದೇವತೆಗಳು :**

1) ದ್ವಾರಾಭಿಮಾನಿ ದೇವತೆಗಳು 2) ಹಗಲು ರಾತ್ರಿ ದೇವತೆಗಳು 3) ದ್ಯಾವಾ ಪೃಥ್ವಿಗಳು 4) ಮಿತ್ರಾವರುಣರು 5) ಇಂದ್ರ, ಮರುತ್, ವಾಯು ದೇವರು 6) ಇಳಾ, ಭಾರತಿ, ಸರಸ್ವತಿಯರುಗಳು

**ವಸಿಷ್ಠ ಋಷಿಗಳ ಆಶ್ರಮ**

15) ಮಿತ್ರರನ್ನು ಹೊಗಳುವಂತೆ ಸ್ತುತಿವಾಕ್ಯಗಳಿಂದ ಹೊಗಳಿ ನಂತರ ಘೃತ ಸಹಿತ ಹವಿಸ್ಸು ಅರ್ಪಿಸುತ್ತಾರೆ.

16) ಹವಿಸ್ಸಿನೊಂದಿಗೆ ಮಧುರ ಆಜ್ಯದಿಂದ ದೇವತೆಗಳನ್ನು ತೃಪ್ತಿಪಡಿಸಿ ತಮ್ಮ ಪಾಪಗಳನ್ನು ನಾಶಮಾಡಿಕೊಳ್ಳುತ್ತಾರೆ.

17) ಅಗ್ನಿಯನ್ನು ತೃಪ್ತಿಪಡಿಸಿದಂತೆಯೇ ಇತರೆ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಅವರನ್ನು ಆಹ್ವಾನಿಸಿ ಸ್ತೋತ್ರಗಳಿಂದ ಪ್ರಶಂಸಿಸುತ್ತಾರೆ.

18) ನಾನಾ ಪೂಜೆಗಳನ್ನು ಅಗ್ನಿ ಮತ್ತು ಇತರೆ ದೇವತೆಗಳಿಗೆ ಮಾಡುತ್ತಾರೆ.

19) ಸಮಿತ್ತು, ಹವಿಸ್ಸು, ಪುರೋಡಾಶ ದಾರಾಕಾರ ಆಜ್ಯಧಾರೆಗಳಿಂದ ತೃಪ್ತಿಗೊಳಿಸುತ್ತಾರೆ.

20) ಪೂರ್ಣಾಹುತಿ, ಪ್ರದಕ್ಷಿಣೆ, ನಮಸ್ಕಾರಗಳನ್ನು ಅಗ್ನಿ ಮತ್ತು ಎಲ್ಲಾ ದೇವತೆಗಳಿಗೂ ಮಾಡುತ್ತಾರೆ.

21) ಅಗ್ನಿಯನ್ನು ತಾವು ಅರ್ಪಿಸಿದ ಕರ್ಮಗಳು ಮತ್ತು ಹವಿಸ್ಸನ್ನು ಆಯಾಯ ದೇವತೆಗಳಿಗೆ ತಲುಪಿಸಲು ಹಾಗೂ ಆ ದೇವತೆಗಳು ಅವನ್ನು ಸ್ವೀಕರಿಸಲು ಪ್ರಾರ್ಥಿಸುತ್ತಾರೆ.

22) ಋಷಿಗಳು, ಋತ್ವಿಜರು, ಯಜಮಾನರುಗಳು ಯಜ್ಞ ಕರ್ಮಗಳನ್ನು ಮುಗಿಸಿ ಅಗ್ನಿ ದೇವನಿಗೆ ಮತ್ತು ದೇವತೆಗಳಿಗೆ ನಮಸ್ಕಾರಗಳನ್ನು ಮಾಡಿ ತಮಗೆ ಇರುವ ಹಿಂದಿನ ಪಾಪಗಳು ಅಂದಿನ ತೊಂದರೆಗಳನ್ನು ಪರಿಹರಿಸುವಂತೆ ಪ್ರಾರ್ಥಿಸುತ್ತಾರೆ.

23) ನಾನಾ ಪ್ರಯೋಜನಗಳಿಗಾಗಿ ಪ್ರಾರ್ಥಿಸಿದ್ದಾರೆ. (ಪ್ರತಿಯೊಬ್ಬ ಋಷಿಗಳ ಪ್ರಾರ್ಥನೆಗಳ ಪಟ್ಟಿ ಬೇರೆ ಇದೆ)

ವಷಿಸ್ಟ ಋಷಿಗಳು ತಮ್ಮ ಆಶ್ರಮದಲ್ಲಿ ಅಗ್ನಿ ದೇವನ ಜೊತೆಗೆ ಬರಲು ಆಹ್ವಾನಿಸಿದ ದೇವತೆಗಳು

1) ದ್ಯಾವಾ ಪೃಥ್ವಿ(2) ತ್ವಷ್ಟ ಮತ್ತು ವನಸ್ಪತಿ ದೇವ

1) ಭಾರತಿ ದೇವಿಯರು ತನ್ನ ಸಂಬಂಧಿ ದೇವತೆಗಳೊಂದಿಗೆ

2) ಸರಸ್ವತಿ ದೇವಿಯರು ಮಾಧ್ಯಮಿಕ ಸ್ಥಾನದ ದೇವತೆಗಳೊಂದಿಗೆ.

3) ಇಳಾ ದೇವಿ – ಮಾನವರೊಂದಿಗೆ

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಅಗ್ನಿದೇವರು

### ವಿಶ್ವಾಮಿತ್ರ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ 3ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಯಜ್ಞಕ್ಕೆ ಬೇಕಾಗುವ ಸಾಮಾನುಗಳೆಲ್ಲ ಸಿದ್ಧವಾಗಿರುತ್ತದೆ.
2) ಅಗ್ನಿ ಕುಂಡದ ಸುತ್ತ ಋತ್ವಿಜರು ಇರುತ್ತಾರೆ.
3) 4 ದಿಕ್ಕಿನಲ್ಲೂ 4 ಜನ ಋತ್ವಿಜರು ಇರುತ್ತಾರೆ.
4) ಪ್ರಯೋಗ ಸ್ವರೂಪ ತಿಳಿದ ಯಾಜ್ಞಿಕರು ಇರುತ್ತಾರೆ. ಅ) ಅಧ್ವರ್ಯುಗಳು 5 ಜನ ಆ) ಹೋತೃಗಳು 7 ಜನ ಒಟ್ಟು 12 ಜನರಿರುತ್ತಾರೆ.
5) ಉತ್ತರ ವೇದಿಕೆಯಲ್ಲಿ ಅಗ್ನಿಯನ್ನು ಸ್ಥಾಪಿಸುತ್ತಾರೆ. ★ ಋತ್ವಿಜರು ತಮ್ಮ 10 ಬೆರಳುಗಳಿಂದ ಮಥನ ಮಾಡಿ ಅಗ್ನಿಯನ್ನು ಉತ್ಪಾದಿಸಿದರು.
7) ಶಾಂತಿಯಿಂದ, ಶ್ರದ್ಧಾಭಕ್ತಿಯಿಂದ ಕರ್ಮ ಮಾಡುತ್ತಾರೆ.
8) ಉಷಃ ಕಾಲದಿಂದಲೇ ಕರ್ಮಗಳನ್ನು ಆರಂಭಿಸುತ್ತಾರೆ.
9) ಅಗ್ನಿ ಉತ್ಪನ್ನವನ್ನು ಪುತ್ರೋತ್ಸವದಂತೆ ಆಚರಿಸುತ್ತಾರೆ.
10) ದೇವತೆಗಳಿಗೆ ದರ್ಭಾಸನವು ಸಿದ್ಧವಾಗಿರುತ್ತದೆ.
11) 33 ದೇವತೆಗಳನ್ನು ಅವರ ಪತ್ನಿಯರನ್ನು ಆಹ್ವಾನಿಸಿದ್ದಾರೆ.
12) ಪಿತೃದೇವತೆಗಳನ್ನು ಆಹ್ವಾನಿಸಿರುತ್ತಾರೆ.
13) ಎಲ್ಲರನ್ನೂ ಸ್ವಾಗತಿಸುತ್ತಾರೆ, ಸ್ತುತಿಸುತ್ತಾರೆ ಹಾಗೂ ಪ್ರಶಂಸಿಸುತ್ತಾರೆ.
14) ಉದ್ದೇಶಿತ ದೇವತೆಗಳನ್ನು ಆಹ್ವಾನಿಸುತ್ತಾರೆ.
15) ಆಹ್ವಾನಿತ ದೇವತೆಗಳಿಗೆಲ್ಲಾ ಪೂಜೆಗಳನ್ನು ಮಾಡುತ್ತಾರೆ.
16) ಋತ್ವಿಜರು ಶಸ್ತ್ರ ಮಂತ್ರಗಳನ್ನು ಪಠಿಸುತ್ತಾರೆ.
17) ಯಾಗಗಳನ್ನು ಮಾಡಿ ಆಹ್ವಾನಿಸಿದ ದೇವತೆಗಳಿಗೆಲ್ಲಾ ನಿಯಮಿತ ಹವಿಸ್ಸು, ಸಮಿತ್ತು, ಪುರೋಡಾಶಗಳನ್ನು ಆಜ್ಯ ಧಾರೆಯೊಂದಿಗೆ ಸ್ವಾಹಾಕಾರಪೂರ್ವಕ ಅರ್ಪಿಸುತ್ತಾರೆ.
18) ಯಜ್ಞ ನಿರ್ವಹಿಸಿ ಹವಿಸ್ಸು ಅರ್ಪಿಸುತ್ತಾರೆ.
19) ಆವಾಹಿತ ದೇವತೆಗಳಿಗೆ ರಮಣೀಯ ಸ್ತೋತ್ರಗಳನ್ನು ಮಾಡುತ್ತಾರೆ.
20) ಲೋಪ ದೋಷಗಳಿಲ್ಲದೆ 3 ಸವನಗಳಲ್ಲೂ ಕರ್ಮಗಳನ್ನು ಮಾಡುತ್ತಾರೆ.
21) ಸೋಮಸೇಚನ ಮಾಡಿ ಅಗ್ನಿ ಮತ್ತಿತರ ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ಎಲ್ಲಾ ದೇವತೆಗಳನ್ನು ಒಟ್ಟಿಗೆ ಪೂಜಿಸುತ್ತಾರೆ.
22) ಅಗ್ನಿಯು ಕರ್ಮಗಳನ್ನು, ಯಜ್ಞವನ್ನು ಸ್ವೀಕರಿಸಿ ದೇವತೆಗಳಿಗೆ ಅವರವರ ಭಾಗ ಅವರವರಿಗೆ ತಲುಪಿಸಲಿ. ಅವರುಗಳು ಅವರವರ ಭಾಗವನ್ನು ಸ್ವೀಕರಿಸಲಿ.
23) ಪ್ರದಕ್ಷಿಣೆ, ನಮಸ್ಕಾರಗಳ ನಂತರ ಪುನಹ ಕರೆದಾಗ ಕರ್ಮಗಳನ್ನು ಪ್ರಾರಂಭಿಸಿದಾಗ ಬರಲು ದೇವತೆಗಳಿಗೆ ಪ್ರಾರ್ಥಿಸುತ್ತಾರೆ. ಕಡೆಯಲ್ಲಿ ಪೂಜಿಸಿದ ದೇವತೆಗಳಿಂದ ಅಭೀಷ್ಟಗಳನ್ನು ಈಡೇರಿಸಿಕೊಳ್ಳುತ್ತಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಅಗ್ನಿದೇವರು

### ಗೃತ್ಸಮದರು ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ 2ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಯಜಮಾನರು, ಯಾಜ್ಞಿಕರು, ಋತ್ವಿಜರು ಎಲ್ಲರೂ ಅವರವರ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಶುಚಿರ್ಭೂತರಾಗಿ ಯಜ್ಞಶಾಲೆ ಸೇರುತ್ತಾರೆ.
2) ಸುತ್ತಲೂ ಋತ್ವಿಜರು ಇರುತ್ತಾರೆ.
3) ಯಜಮಾನರು ಪುತ್ರರೊಂದಿಗೆ ಕರ್ಮ ಮಾಡುತ್ತಾರೆ.
4) ಪ್ರಯೋಗ ಸ್ವರೂಪ ಚೆನ್ನಾಗಿ ಬಲ್ಲವರು ಸುತ್ತಲೂ ಇರುತ್ತಾರೆ.
5) ನ್ಯೂನತೆ ಇಲ್ಲದೆ ಮಂತ್ರಗಳಿಂದ ಕರ್ಮ ನೆರವೇರಿಸುತ್ತಾರೆ.
6) ಅಧ್ವರ್ಯುಗಳು ಉಷಃಕಾಲದಿಂದಲೇ ಕರ್ಮಗಳನ್ನು ಪ್ರಾರಂಭಿಸುತ್ತಾರೆ.
7) ಅಗ್ನಿಯ ಸ್ತೋತ್ರವನ್ನು ಮಾಡುತ್ತಾರೆ, ಆಹ್ವಾನಿಸುತ್ತಾರೆ.
8) ಉತ್ತರ ವೇದಿಕೆಯಲ್ಲಿ ಸ್ಥಾಪಿಸಿ ಆರಾಧಿಸುತ್ತಾರೆ.
9) ಅಗ್ನಿ ಮತ್ತು ದೇವತೆಗಳಿಗೆ ಕೂಡಲು ದರ್ಭಾಸನವಿರುತ್ತದೆ.
10) ದರ್ಭೆಯನ್ನು ನೀರು ಮತ್ತು ತುಪ್ಪದಿಂದ ಮೃದು ಮಾಡಿ ರತ್ನಕಂಬಳಿಯಂತೆ ಹರಡಿರುತ್ತಾರೆ.
11) ಅಗ್ನಿಯನ್ನು ಪ್ರಜ್ವಲಿಸಿ ಯಜ್ಞ ಕರ್ಮ ಮಾಡುತ್ತಾರೆ.
12) ಹವಿಸ್ಸು, ಸಮಿತ್ತು, ಪುರೋಡಾಶ, ಶಸ್ತ್ರ ಮಂತ್ರ, ಸಹಿತ ಸ್ವಾಹಾಕಾರದೊಂದಿಗೆ ಘೃತ ಧಾರೆ ಅರ್ಪಿಸುತ್ತಾರೆ.
13) ಅಗ್ನಿ ಪ್ರಜ್ವಲಿಸಿದ ನಂತರ ಇತರೆ ಅಪೇಕ್ಷಿತ ದೇವತೆಗಳನ್ನು ಅವರವರ ಪತ್ನಿಯರ ಸಹಿತ ಆಹ್ವಾನಿಸುತ್ತಾರೆ.
14) ದೇವತೆಗಳಿಗೂ ದರ್ಭಾಸನ ಸಿದ್ಧವಾಗಿರುತ್ತದೆ.
15) ಎಲ್ಲಾ ದೇವತೆಗಳನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ.
16) ಅಗ್ನಿಗೆ ಮಾಡಿದಂತೆಯೇ ಎಲ್ಲಾ ಉಪಚಾರಗಳನ್ನು ಪೂಜೆಗಳನ್ನು ಒಟ್ಟಾಗಿ ಮಾಡುತ್ತಾರೆ.
17) ದೇವತೆಗಳಿಗೂ ಸಮಿತ್ತು, ಹವಿಸ್ಸು, ಶಸ್ತ್ರಮಂತ್ರಗಳೊಂದಿಗೆ, ಸ್ವಾಹಾಕಾರ ಪೂರ್ವಕ ಘೃತಧಾರೆ ಅರ್ಪಿಸುತ್ತಾರೆ (ನಿಯಮಿತ ಸಂಖ್ಯೆಯಲ್ಲಿ)
18) ಆಹ್ವಾನಿತ ದೇವತೆಗಳೆಲ್ಲರ ಪರವಾಗಿ ಅಗ್ನಿದೇವನಿಗೆ ಪೂರ್ಣಾಹುತಿಯನ್ನು ಅರ್ಪಿಸುತ್ತಾರೆ ಘೃತಧಾರೆಯೊಂದಿಗೆ.
19) ಪ್ರದಕ್ಷಿಣೆ, ನಮಸ್ಕಾರಗಳು, ಪ್ರಾರ್ಥನೆಗಳನ್ನು ಮಾಡುತ್ತಾರೆ.
20) ದೇವತೆಗಳಿಗೆ ಅರ್ಪಿಸಿದ 'ಹವಿಸ್ಸು'ಗಳನ್ನು ಅವರವರುಗಳಿಗೆ ತಲುಪಿಸಲು ಅಗ್ನಿಯನ್ನು ಪ್ರಾರ್ಥಿಸುತ್ತಾರೆ.
21) ಋಷಿಗಳು, ಯಾಜ್ಞಿಕರು, ಋತ್ವಿಜರು, ಯಜಮಾನರು, ಧಾನಿಗಳು, ಭಕ್ತಾದಿಗಳು, ಎಲ್ಲರೂ ಅವರವರ ಅಪೇಕ್ಷೆಗಳನ್ನು ಈಡೇರಿಸುವಂತೆ ದೇವತೆಗಳಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ.

<u>ಗೃತ್ಸಮದರಿಂದ ಆಹ್ವಾನಿಸಿ ಆರಾಧಿಸಿದ ಇತರೆ ದೇವತೆಗಳು</u>

1) ಅಹೋರಾತ್ರಿ ದೇವತೆಗಳು (2) ಇಂದ್ರ (3) ದ್ವಾರ ದೇವತೆಗಳು (4) ಮರುತ್‌ಗಳು (5) ದ್ಯಾವಾ ಪೃಥ್ವಿ (6) ಆದಿತ್ಯ (7) ವಿಶ್ವೇ ದೇವತೆಗಳು ★ ಸ್ವಲ್ಪ ಹವಿಸ್ಸನ್ನೇ ಅಧಿಕವೆಂದು ಅರಿಯುತ್ತಾ ಕೃಷ್ಣವರ್ಣದ ಮಾರ್ಗದಲ್ಲಿ ದೇವಲೋಕ ಅವರೋಹಣ ಸ್ಥಾನವನ್ನು ಅಗ್ನಿ ಹತ್ತುತ್ತಾನೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಅಗ್ನಿದೇವರು

ಭರದ್ವಾಜ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ 6ನೆಯ ಮಂಡಲದಿಂದ ಆಯ್ದುತೆಗೆದದ್ದು)

1) ಅಗ್ನಿಯು ದೇವತೆಗಳ ಪರವಾಗಿ ಯಜ್ಞದಲ್ಲಿ ಪೂಜೆಗೊಳ್ಳುವಂತೆ ದ್ಯಾವಾಪೃಥ್ವಿಗಳು ಹೇಳಿದ್ದಾರೆ.

2) ಯಜ್ಞಕ್ಕಾಗಿ ಯಾರಿಂದಲೂ ಅಪಹರಿಸಲಾಗದ ಅನ್ನವನ್ನು ಸಿದ್ಧಪಡಿಸಿದ್ದಾರೆ.

3) ಅಗ್ನಿಯು ಪ್ರಶಂಸಿಸಿದಾಗ ಸೂರ್ಯನಂತೆ ಪ್ರಕಾಶಿಸುತ್ತಾನೆ.

4) ಅಗ್ನಿಯನ್ನು ಆಹ್ವಾನಿಸಿ, ಸ್ತುತಿಸಿ, ಪೂಜಿಸಿ, ಪ್ರಜ್ವಲಿಸುತ್ತಾರೆ

5) ಅಗ್ನಿಯ ನಂತರ ದೇವತೆಗಳನ್ನು ಆಹ್ವಾನಿಸುತ್ತಾರೆ.

6) ದೇವತೆಗಳ ಅಭಿಮುಖ ಸ್ತುತಿಸಿ ಸ್ತೋತ್ರಮಾಡುತ್ತಾರೆ.

7) ದೋಷರಹಿತ ಘೃತ, ಹವಿಸ್ಸು ಪಾತ್ರೆಯನ್ನು ದರ್ಭೆಯ ಮೇಲಿಟ್ಟಾಗ ಯಜ್ಞ ವೇದಿಕೆ ಸ್ಥಾಪಿತವಾದಾಗ ಯಜ್ಞ ಕಾರ್ಯಗಳು ಪ್ರಾರಂಭವಾಗುತ್ತವೆ.

8) ಯಜ್ಞ ಕರ್ತರು, ಸ್ತುತಿಕರ್ತರು, ಸ್ತೋತ್ರಗಳು, ಪೂಜೆಗಳು, ಯಜ್ಞಗಳಲ್ಲಿ ಹವಿಸ್ಸು ಪುರೋಡಾಶ, ಶಸ್ತ್ರ ಮಂತ್ರಗಳ ಸಹಿತ ಸಮಿತ್ತು ಘೃತಧಾರೆಯನ್ನು ಅರ್ಪಿಸುತ್ತಾರೆ.

9) ದೇವತೆಗಳೆಲ್ಲರನ್ನೂ ಪ್ರಶಂಸಿಸಿ, ಸ್ತುತಿಸಿ ಎಲ್ಲರಿಗೂ ಒಟ್ಟಿಗೆ ನಿಯಮಿತ ಕರ್ಮಗಳನ್ನು ಮಾಡುತ್ತಾರೆ.

10) ಪ್ರಶಂಸೆಗಳು, ಸ್ತೋತ್ರಗಳು, ಸೋಮರಸ ಇವು ಪ್ರವಾಹದಂತೆ ನಡೆಯುತ್ತಿರುತ್ತದೆ.

11) ದೇವಸ್ಥಾನಗಳಲ್ಲೂ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ.

12) ಋಷಿಗಳು ಸಂತೋಷದಿಂದ ಸ್ತುತಿಸುತ್ತಾರೆ, ಅಗ್ನಿಯನ್ನು ಸಮೀಪಿಸಿ ಪೂಜಿಸುತ್ತಾರೆ.

13) ಅಗ್ನಿಯನ್ನು ಯಾಗಗಳಲ್ಲಿ ಶಸ್ತ್ರ ಮಂತ್ರಗಳಿಂದ ಸಮಿತ್ತುಗಳ ಸಹಿತ ಹವಿಸ್ಸು ಆರ್ಘ್ಯವನ್ನು ಅರ್ಪಿಸುತ್ತಾರೆ.

14) ಅಗ್ನಿಯನ್ನು ಬಂಧು-ಬಾಂದವರೊಡನೆ ಸ್ತುತಿಸುತ್ತಾರೆ.

15) ಸೋಮಪಾನಕ್ಕೆ ಅಗ್ನಿಯನ್ನೂ, ದೇವತೆಗಳನ್ನೂ ಆಹ್ವಾನಿಸುತ್ತಾರೆ.

16) ಸಕಲ ಯಜ್ಞಕರ್ಮಗಳನ್ನು ಸಂತೋಷದಿಂದ ನೆರವೇರಿಸಿ ನಮಸ್ಕರಿಸುತ್ತಾರೆ.

17) ಇಂದ್ರ, ದ್ಯಾವಾ, ಪೃಥ್ವಿ, ಮಿತ್ರಾ ವರುಣರು, ಆದಿತ್ಯ, ಮರುತ್‌ಗಳು ಇವರುಗಳನ್ನು ಆರಾಧಿಸಲು ಹೇಳಿದ್ದಾರೆ.

18) ಅಗ್ನಿಯು ಜಾತವೇದೋರೂಪಿ.

19) ಆರಾಧಕರು ಪ್ರಶಾಂತಚಿತ್ತರಾಗಿ ಇರುತ್ತಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಅಗ್ನಿದೇವರು

ವಾಮನ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ 4ನೆಯ ಮಂಡಲದಿಂದ ಆಯ್ದುತೆಗೆದದ್ದು)

1) ಅಗ್ನಿಯನ್ನು ಯಜ್ಞ ದ್ವಾರಕ್ಕೆ ಬರಲು ಪ್ರಾರ್ಥಿಸುತ್ತಾರೆ.

2) ಅಗ್ನಿಯು ಮನೋವೇಗದ ಅಶ್ವದಲ್ಲಿ ಬರುತ್ತಾನೆ.

3) ಯಜಮಾನರಿಗೆ ನೇತೃವಾಗಿ ಇರುತ್ತಾನೆ, ಮಿತ್ರನೂ ಸಹ

4) ಋಷಿಗಳು ಅಗ್ನಿಯನ್ನು ಆಹ್ವಾನಿಸುತ್ತಾರೆ.

5) ಕರ್ಮಕರ್ತರು ಅಗ್ನಿಯನ್ನು ಉಪಚರಿಸುತ್ತಾರೆ.

6) ಉತ್ತರವೇದಿಕೆಯಲ್ಲಿ ಸ್ಥಾಪಿಸುತ್ತಾರೆ.

7) ಋತ್ವಿಜರು ಪ್ರತಿದಿನವೂ ಅತಿಶಯವಾಗಿ ಸ್ತುತಿಸುತ್ತಾರೆ.

8) ಯಜಮಾನರು ಶ್ರದ್ಧಾ ಭಕ್ತಿಯಿಂದ, ಶಾಂತಿಯಿಂದ ಎಲ್ಲ ಕರ್ಮಗಳನ್ನು ನೆರವೇರಿಸುತ್ತಾರೆ.

9) ಅಗ್ನಿಯು ದೇವತೆಗಳ ಯಜ್ಞದಲ್ಲಿ ಬಂಧುವಾಗಿ ಇರುತ್ತಾನೆ.

10) ಯಾಗಾದಿಗಳು ಮಾನವ ಜನ್ಮ ಸಂಸ್ಕಾರಕ್ಕಾಗಿಯೇ ಇವೆ.

11) ಹೋತೃಗಳು ಏಳು ಜನ, ಸ್ತುತಿ ನಿರ್ಮಿಸುತ್ತಾರೆ.

12) ಬ್ರಹ್ಮ ನಾಲ್ಕು ವೇದಗಳನ್ನು ಬಲ್ಲವನು.

13) ಅಧ್ವರ್ಯುಗಳು ನೇರವಾಗಿ ಹೋಮ ಮಾಡುವವರು.

14) ಯಜಮಾನರು ಶ್ರೇಷ್ಟ ಕರ್ಮಕರ್ತರು, ಶಾಂತಿಯುತರು.

15) ಸತ್‌ಕರ್ಮಗಳನ್ನು ಮಾಡಿಯೇ ರಕ್ಷಣೆ ಪಡೆಯಲು ಹೇಳಿದ್ದಾರೆ.

16) ಅಗ್ನಿಮಹಿಮೆಯನ್ನು "ಶಸ್ತ್ರಮಂತ್ರ" ಪಠಣದ ಮೂಲಕ ಪಠಿಸುತ್ತಾರೆ.

17) ಯಜ್ಞ ಕುಂಡದ ಸುತ್ತಲೂ ಋತ್ವಿಜರು ಇರುತ್ತಾರೆ.

18) ಅಧ್ವರ್ಯುಗಳು ಅನ್ನ, ಹವಿಸ್ಸು, ಪುರೋಡಾಶ ಅರ್ಪಿಸುತ್ತಾರೆ. ಸಮಿತ್ತು ಘೃತಗಳಿಂದಲೂ ಅಗ್ನಿಯನ್ನು ಪೋಷಿಸುತ್ತಾರೆ.

19) ಸವನತ್ರಯಗಳಲ್ಲೂ "ಸ್ರುಕ್" ಪಾತ್ರೆ ಹಿಡಿದು ಅಗ್ನಿಯನ್ನು ಪ್ರಕಾಶಿಸುತ್ತಾರೆ.

20) ಯಾಜ್ಞಿಕರು ಶ್ರದ್ಧಾ ಭಕ್ತಿಯಿಂದ ಎಲ್ಲ ಕರ್ಮಗಳನ್ನೂ ನೆರವೇರಿಸುತ್ತಾರೆ.

21) ಅಗ್ನಿಗೆ ತಾವು ಮಾಡಿದ ಕರ್ಮಗಳನ್ನು ಸ್ವೀಕರಿಸಲು ಮತ್ತು ಅವನ್ನು ಸಂಬಂಧಪಟ್ಟ ದೇವತೆಗಳಿಗೆ ತಲುಪಿಸಲು ಪ್ರಾರ್ಥಿಸುತ್ತಾರೆ.

22) ಭಕ್ತಿಪೂರ್ವಕ ನಮಸ್ಕರಿಸಿ ರಕ್ಷಣೆ ಬೇಡಿದ್ದಾರೆ.

23) ಸತ್ಕರ್ಮಗಳನ್ನೇ ಯಾವಾಗಲೂ ಮಾಡುತ್ತಿರಲು ವಾಮನ ಋಷಿಗಳು ಹೇಳಿದ್ದಾರೆ.

II ಓಂ ಶ್ರೀ ಮಹಾಗಣಾಧಿಪತಯೇ ನಮ: II

## ಅಗ್ನಿದೇವರು

### ಕಾಣ್ವ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ 8ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಉತ್ತರವೇದಿಕೆಯಲ್ಲಿ ಸ್ತೋತ್ರಗಳು, ಭಜನೆಗಳು, ಪೂಜೆಗಳು ನಡೆದು ಅಲ್ಲಿ ಅಗ್ನಿ ವ್ಯಾಪಕನಾಗಿ ಇರುತ್ತಾನೆ. ಉತ್ತಮ ಕೆಲಸ ಮಾಡಲು ಶ್ರೇಷ್ಠ ಜ್ಞಾನಿ, ಮೇಧಾವಿ ಪುರುಷರನ್ನೇ ನೇಮಿಸುತ್ತಾರೆ.

2) ಅನಿಷ್ಟ ನಿವಾರಣೆಗಾಗಿ, ಇಷ್ಟಾರ್ಥಸಿದ್ಧಿಗಾಗಿ ಅಗ್ನಿಪೂಜೆ ಮಾಡುತ್ತಾರೆ.

3) ಆಶ್ರಮದಲ್ಲಿ ಯಜಮಾನರು, ಯಾಜ್ಞಿಕರು, ಯಜ್ಞಕರ್ತರು ಎಲ್ಲರೂ ದಕ್ಷರಾಗಿರುತ್ತಾರೆ.

4) ಋತ್ವಿಜರು ಏಳು ಜನರಿರುತ್ತಾರೆ. (1) ಬ್ರಹ್ಮ (2)ಹೋತೃ (3) ಉಳಿತ ಐದು ಜನರು ಬ್ರಹ್ಮನ ನಿರ್ದೇಶನದಂತೆ ಕೆಲಸಗಳನ್ನು ಮಾಡುತ್ತಿರುತ್ತಾರೆ.

5) ಅಗ್ನಿಗೆ ಅರ್ಪಿಸಲು ಯೋಗ್ಯವಾದುದೆಲ್ಲವೂ ಸಿದ್ಧವಿರುತ್ತದೆ.

7) ಅಗ್ನಿಯನ್ನು ಯಜ್ಞವೇದಿಕೆಯಲ್ಲಿ ಸ್ಥಾಪಿಸುತ್ತಾರೆ.

8) ಅಜ ಮತ್ತು ಗೋವುಗಳ ಕ್ಷೀರವನ್ನು ಮಿಶ್ರ ಮಾಡಿ ಅಧ್ವರ್ಯುಗಳು ಅಗ್ನಿಯನ್ನು ಸ್ಥಾಪಿಸುತ್ತಾರೆ.

9) ಅಗ್ನಿಯ ಸ್ನೇಹಕ್ಕಾಗಿ ಶ್ಲಾಘಿಸಿ, ಸ್ತುತಿಸಿ, ಪೂಜಿಸಿ, ಪ್ರಶಂಸಿಸಿ, ಉಪಚರಿಸಿ ಆಹ್ವಾನಿಸುತ್ತಾರೆ.

10) ಅಧ್ವರ್ಯುಗಳು ಯಜಮಾನನ ಮುಂದೆ ಅಗ್ನಿಯನ್ನು ಯಜ್ಞವೇದಿಕೆಯಲ್ಲಿ ಸ್ಥಾಪಿಸಿ ಪ್ರಜ್ವಲಿಸುತ್ತಾರೆ.

11) ಅಗ್ನಿಯು ಪೂಜೆಗಳಿಗೆ ಮತ್ತು ಯಜ್ಞಕ್ಕೆ ದಯಮಾಡಲಿ.

12) ಹವಿಸ್ಸು ಸ್ವೀಕರಿಸಲು ದರ್ಭಾಸೀನನಾಗಲಿ.

13) ಹೊಸ ಹೊಸ ಮಂತ್ರ ಮಯ ಸ್ತೋತ್ರಗಳಿಂದ ಸ್ತುತಿಸುತ್ತಾರೆ.

14) ವಾಯುವು ಸಮೀಪದಲ್ಲಿದ್ದು ಅಗ್ನಿಯನ್ನು ಪ್ರಜ್ವಲಿಸುತ್ತಾನೆ.

15) ಅಗ್ನಿಯನ್ನು ಸಮಸ್ತ ದೇವತೆಗಳು ಒಂದೇ ಮನಸ್ಸಿನಿಂದ ತಮ್ಮ ಹವಿರ್ವಾಹಕನನ್ನಾಗಿ ಮಾಡಿಕೊಂಡಿದ್ದಾರೆ.

16) ಯಾಜ್ಞಿಕರು ಯೋಗ್ಯ ಕರ್ಮಗಳನ್ನು ಮಾಡುವುದರೊಂದಿಗೆ ಹವಿಸ್ಸನ್ನು ವೈಶ್ವಾನರಾಗ್ನಿಗೆ ಅರ್ಪಿಸುತ್ತಾರೆ.

II ಓಂ ಶ್ರೀ ಮಹಾಗಣಾಧಿಪತಯೇ ನಮ: II

## ಅಗ್ನಿದೇವರು

### ಅಗಸ್ತ್ಯ ಋಷಿಗಳ ಆಶ್ರಮದಲ್ಲಿಯ ಕಾರ್ಯಕ್ರಮಗಳು

(ಋಗ್ವೇದ ಪ್ರಥಮ ಮಂಡಲದಿಂದ ಆಯ್ದು ತೆಗೆದದ್ದು)

1) ಯಜ್ಞದ್ವಾರಗಳು ಶೋಭಿತವಾಗಿವೆ. ಪ್ರಕಾಶಮಾನವಾಗಿವೆ. ಉದಕ ಪ್ರೋಕ್ಷಿತವಾಗಿವೆ.

2) ಅಗ್ನಿಯು ಮಂತ್ರ ರೂಪ ಬಲದ ದರ್ಭಾಸನದಲ್ಲಿ ಕುಳಿತು ದೇವತೆಗಳಿಗೆ ಹವಿಸ್ಸು ವಹಿಸಲಿ.

3) ಅಗ್ನಿ ದೇವತೆಗಳನ್ನು ಯಜ್ಞಕ್ಕೆ ಕರೆತರಲಿ, ದೇವತೆಗಳು ದರ್ಭಾಸೀನರಾಗಲಿ. ಮೇಧಾವಿಗಳಾದ ಋಷಿಗಳು, ಋತ್ವಿಜರು, ಪ್ರಸಿದ್ಧ ಸ್ತೋತ್ರಗಳನ್ನು, ಪೂಜೆಗಳನ್ನು ಮಾಡುತ್ತಾರೆ.

4) ಅಗ್ನಿಗೆ ಮತ್ತು ದೇವತೆಗಳಿಗೆ ಹವಿಸ್ಸು ಆಜ್ಯಧಾರೆ ಅರ್ಪಿಸಿ ಯಜ್ಞನೆರವೇರಿಸಿ ನಮಸ್ಕರಿಸುತ್ತಾರೆ.

<u>ಅಗಸ್ತ್ಯರು ಆಹ್ವಾನಿಸಿದ ದೇವತೆಗಳು.</u>

ಯೂಪಾಭಿಮಾನಿ, ಅಹೋರಾತ್ರಿ, ತ್ವಷ್ಟ ದೇವ, ಲೋಕತ್ರಯ ದೇವತೆಗಳು

★★★★★★★★★★★★★★★★★★

### ಗೌತಮಾ ರಹೂ ಗಣರು

1) ಅಗ್ನಿ, ಸೋಮ ಇವರಿಬ್ಬರೂ ದೇವತೆಗಳಲ್ಲೆಲ್ಲಾ ಅತ್ಯಂತ ಪೂಜ್ಯರು.

2) ಯಾಗಗಳಲ್ಲಿ ಇಬ್ಬರಿಗೂ ಒಂದೇ ವಿಧವಾದ ಪೂಜೆ ಆಜ್ಯ ಆಹುತಿ ಅರ್ಪಿಸುತ್ತಾರೆ. ಇಬ್ಬರನ್ನೂ ಒಟ್ಟಾಗಿ ಯಾಗಕ್ಕೆ ಕರೆಯುತ್ತಾರೆ.

3) ಏಳು ಜನ ಹೋತೃಗಳನ್ನು ಆಹ್ವಾನಿಸುತ್ತಾರೆ.

4) ಒಣಗಿದ ಕಟ್ಟಿಗೆಯನ್ನು ಜ್ವಲಿಸಿ ಗಂಭೀರ ಶಬ್ದದಿಂದ ಇರುವ ಅಗ್ನಿಯನ್ನು ಹವಿಸ್ಸಿನಿಂದ ತೃಪ್ತಿಪಡಿಸುತ್ತಾರೆ.

5) ಯಾಜ್ಞಿಕರಿಗೆ ಅಗ್ನಿ ಜ್ಯೋತಿರೂಪದಲ್ಲಿರುತ್ತಾನೆ.

6) ಸೂರ್ಯೋದಯಕ್ಕೆ ಮೊದಲೇ ಅಗ್ನಿಯನ್ನು ಪ್ರತಿಷ್ಠಿಸುತ್ತಾರೆ.

7) ಯಾಜ್ಞಿಕರು ಗುಣಗಾನ ಮಾಡುತ್ತಾರೆ.

8) ಸ್ತೋತ್ರಗಳಿಂದ ವೇದಿಕೆಗೆ ಬರಲು ಪ್ರಾರ್ಥಿಸುತ್ತಾರೆ.

9) ಪ್ರಥಮ ಪೂಜೆಯಲ್ಲಿ ಅಗ್ನಿಯನ್ನು ಅಭಿಮುಖ ಮಾಡಿಕೊಳ್ಳುತ್ತಾರೆ. ಮಧುರ ಮಂತ್ರಗಳಿಂದ ಹೊಗಳಿ ನಾನಾ ಯಜ್ಞ ಕರ್ಮಗಳನ್ನು ಆಚರಿಸಿಕೊಂಡು ಬರುತ್ತಾರೆ. ಅಗ್ನಿಯ ಜೊತೆಗೆ ಇಂದ್ರ, ಮಿತ್ರ, ವರುಣರನ್ನು ಆಹ್ವಾನಿಸುತ್ತಾರೆ.

10) ಋಷಿಗಳು, ಯಾಜ್ಞಿಕರು, ಯಜಮಾನರು ಯಾರೂ ಅಗ್ನಿಯ ನಿಜರೂಪ ತಿಳಿಯಲು ಅಸಮರ್ಥರಿದ್ದಾರೆ.

★★★★★★★★★★★★★★★★★★

### ಮಧುಚ್ಛಂದ್ರರು

★ ವಾಯುವು ಅಗ್ನಿಯನ್ನು ದ್ಯುಲೋಕದಿಂದ ಭೂಮಿಗೆ ತಂದಿತು.

★ ಶ್ಯೇನಪಕ್ಷಿ ರೂಪದಿಂದ 'ಗಾಯತ್ರಿ' ಯು ಸೋಮನನ್ನು ಯಜ್ಞಕರ್ತರಿಗಾಗಿ ಭೂಮಿಗೆ ತಂದಿತು.

1) ಆಶ್ರಮದಲ್ಲಿ (1) ಬ್ರಹ್ಮ (2) ಹೋತೃ (3) ಅಧ್ವರ್ಯು (4) ಉದ್ಗಾತೃ ಎಂಬ ನಾಲ್ಕು ಜನ ಋತ್ವಿಜರು ಇರುತ್ತಾರೆ.

2) ಪುರೋಹಿತ : ಯಜ್ಞದ ಬಗೆಗೆ ಚೆನ್ನಾಗಿ ತಿಳಿದಿರುತ್ತಾನೆ. ದೇವತೆಗಳನ್ನು ಯಜ್ಞಕ್ಕೆ ಕರೆತರುತ್ತಾನೆ.

3) ಹೋಮಕುಂಡದಲ್ಲಿ ಆಜ್ಯದಿಂದ ಅಗ್ನಿಯನ್ನು ಪ್ರಜ್ವಲಿಸುತ್ತಾರೆ.

4) ಅಗ್ನಿಯ ನಾಲ್ಕು ರೂಪಗಳು ಹೀಗಿವೆ :- (ಅ)ಆಹವನೀಯ (ಆ) ಮಾರ್ಜಾಲೀಯ (ಇ)ಗಾರ್ಹಪತ್ಯ (ಈ) ಅಗ್ನಿಧ್ರಯ

ಕಾಣ್ವ ಋಷಿಗಳ ಆಶ್ರಮ

17) ಮಾಡಿದ ಸ್ತೋತ್ರಗಳು, ಪೂಜೆಗಳು ಎಲ್ಲವೂ ಅಗ್ನಿಗೆ ಅಭಿಮುಖವಾಗಿ ಚಲಿಸುತ್ತವೆ (ಸಮುದ್ರಾಭಿಮುಖವಾಗಿ ಹರಿಯುವ ನದಿಗಳಂತೆ)

18) ಪಲಾಶಾದಿ ಸಮಿತ್ತುಗಳಿಂದ, ಆಜ್ಯದಿಂದ, ವೇದಾಧ್ಯಯನದ ಮೂಲಕ ಚರು, ಪುರೋಡಾಶಗಳ ಮೂಲಕ ತೃಪ್ತಿಪಡಿಸುತ್ತಾರೆ.

19) ಅಹಸ್ಸುಗಳಲ್ಲಿ ಸೋಮಾಭಿಶವಣ ಮಾಡುತ್ತಾರೆ ಹಾಗೂ ಗಾನ ಮಾಡುತ್ತಾರೆ.

20) ಸಾಧಕರು ಘೃತ ರೂಪ ಹವಿಸ್ಸು ಅರ್ಪಿಸುತ್ತಾರೆ.

21) ಅಗ್ನಿ ಮತ್ತು ಆಹ್ವಾನಿತ ದೇವತೆಗಳು ಸೋಮಪಾನ ಮಾಡಲಿ.

22) ಅಗ್ನಿ ಜ್ವಾಲೆಗಳು ಘೃತರೂಪ ಹವಿರರ್ಪಿಸುವ ''ಜುಹೂ'' ಪಾತ್ರೆಯ ಅಗ್ರಭಾಗದಲ್ಲಿ ಕಂಗೊಳಿಸುತ್ತವೆ.

23) ದೇವದೂತನಾಗಿ ದೇವತೆಗಳಿಗೆ ಹವಿಸ್ಸನ್ನು ತಲುಪಿಸಲಿ.

24) ಅಗ್ನಿಯು ರಥದಲ್ಲಿ ದೇವತೆಗಳನ್ನು ಕರೆದುಕೊಂಡು ಬರುವಾಗ ಅನ್ನ ಧನದೊಂದಿಗೆ ದಯಮಾಡಿಸಲಿ ಎಂದು ಪ್ರಾರ್ಥಿಸುತ್ತಾರೆ.

ಕಾಣ್ವ ಋಷಿಗಳು ಸೋಮದ ಬಗೆಗೆ ಹೀಗೆ ಹೇಳಿದ್ದಾರೆ.

1) ಇದು ಬ್ರಹ್ಮ ನಿರ್ಮಿತವಾದದ್ದು.
2) ಅಗ್ನಿಯ ಪಾನಕ್ಕೆ ಇರುವುದು.
3) ಉದಕ ಸಾರಭೂತವಾದದ್ದು
4) ದೇವತೆಗಳನ್ನು ಯಜ್ಞಕ್ಕೆ ಕರೆತರುವಂತಹುದು.
5) ಇಳಾ, ಭಾರತಿ, ಸರಸ್ವತಿಯರಿಂದ ಪ್ರವಹಿಸುತ್ತದೆ.

<u>ಕಾಣ್ವರು ಅಗ್ನಿಯ ಜೊತೆಗೆ ಕರೆದು ಆರಾಧಿಸಿದ ಇತರೇ ದೇವತೆಗಳು</u>

ಇಂದ್ರ, ದ್ಯಾವಾ ಪೃಥ್ವಿ, ವಿಷ್ಣು, ಆರ್ಯಮ, ಮಿತ್ರಾ ವರುಣರು, ಅದಿತಿ, ಅಂಶುಮಾನ್, ಅಶ್ವಿನಿ, ಯೂಪ, ಭಗ, ಇಳಾ, ಭಾರತಿ ಮತ್ತು ಸರಸ್ವತಿಯರು.

<u>ಅಗ್ನಿಯ ಮಹತ್ವ ತಿಳಿದವರು</u> ಯಜ್ಞ ಸಾಧನಗಳಿಂದ ಪೂಜಿಸಿರಿ, ಆರಾಧಿಸಿರಿ, ತೃಪ್ತಿ ಪಡಿಸಿರಿ, ಆನಂದ ಪಡೆಯಿರಿ.

<u>ಮಧುಚ್ಛಂದ್ರರು</u>

ಎಂದು ಎಲ್ಲಾ ಕಾಲದಲ್ಲೂ ಋಷಿಗಳಿಂದ ಸ್ತೋತ್ರಮಾಡಲಾಗುತ್ತಿದೆ.

5) ಅಗ್ನಿಯನ್ನು ಉತ್ತರ ವೇದಿಕೆಯಲ್ಲಿ ಸಕಾಲದಲ್ಲಿ ಸ್ಥಾಪಿಸಿ ಪ್ರಜ್ವಲಿಸುತ್ತಾರೆ.
6) ಋತ್ವಿಜರು ಕರ್ಮಬಲ ಶಕ್ತಿಗಳಿಂದ ಪೂಜಿಸುತ್ತಾರೆ. ವಿಶೇಷ ಅನುಭವದಿಂದ ಕರ್ಮಗಳನ್ನು ಆಚರಿಸುತ್ತಾರೆ. ವಾಯುವಿನ ಸಹಾಯದಿಂದ ಹವಿಸ್ಸು, ಅನ್ನ, ಆಜ್ಯದೊಂದಿಗೆ ತೃಪ್ತಿಗೊಳಿಸುತ್ತಾರೆ.
7) ಯಜಮಾನ, ಅವನ ಪತ್ನಿ ಇಬ್ಬರೂ ಎಲ್ಲಾ ಕಾರ್ಯಗಳಲ್ಲೂ ಭಾಗವಹಿಸಿ ಅಗ್ನಿಯನ್ನೂ, ದೇವತೆಗಳನ್ನೂ ಸಂತೋಷಗೊಳಿಸುತ್ತಾರೆ.

★★★★★★★★★★★★★★★★★★

<u>ಹಿರಣ್ಯಸ್ತೂಪ ಆಂಗೀರಸರು</u>

1) ಯಜ್ಞಭೂಮಿಯ ಪೂರ್ವದಲ್ಲಿ ಆಹವನೀಯಾಗ್ನಿ, ಯಜ್ಞಭೂಮಿಯ ಪಶ್ಚಿಮದಲ್ಲಿ ಗಾರ್ಹಪಥ್ಯಾಗ್ನಿ.
2) ಉತ್ತಮ ವರ್ಗದ ಕರ್ಮಕರ್ತರು ಇರುತ್ತಾರೆ. ಯಜಮಾನರು 'ವಷಟ್ಕಾರ' ಪೂರ್ವಕ ಆಹುತಿಗಳನ್ನು ಅಗ್ನಿಗೆ ಅರ್ಪಿಸುತ್ತಾರೆ.
3) ಅಗ್ನಿ ಅನುಗ್ರಹಿಸುವಂತಹ ಎಲ್ಲಾ ಕರ್ಮಗಳನ್ನು ಮಾಡಿ ನಮಸ್ಕರಿಸಿ ಪ್ರಾರ್ಥಿಸುತ್ತಾರೆ.

★★★★★★★★★★★★★★★★★

<u>ಮೇದಾತಿಥಿ ಕಾಣ್ವರು</u>

1) ಅಗ್ನಿ ಆರಣಿಯಲ್ಲಿ ಉತ್ಪನ್ನನಾಗಿ ಆಹವನೀಯ ಗಾರ್ಹಪಥ್ಯದಲ್ಲಿ ಪ್ರಕಟನಾಗುತ್ತಾನೆ.
2) ಅಗ್ನಿ ಮುಖ ''ಜುಹೂ'' ಮೂಲಕ ಆಜ್ಯ, ಹವಿಸ್ಸು ಸ್ವೀಕರಿಸುತ್ತಾನೆ.
3) ಇಂದ್ರನ ಸಂತೋಷಕ್ಕಾಗಿ ಅಗ್ನಿಯನ್ನು ಯಜ್ಞದಲ್ಲಿ ''ಹೋತೃವಾಗಿ'' ಮಾಡಿದ್ದಾರೆ.
4) ಮನು ಪ್ರಜಾಪತಿ ಅಗ್ನಿಯನ್ನು ಭೂಮಿಯಲ್ಲಿ ನಿಲ್ಲಿಸಿದನು.
5) ಯಜ್ಞಕರ್ತರು ಅಗ್ನಿಗೆ ಪುರೋಹಿತ ಸ್ಥಾನ ಕೊಟ್ಟರು
6) ಅಗ್ನಿಯನ್ನು ಸ್ತೋತ್ರ ಮಾಡುತ್ತಾರೆ.
7) ದರ್ಭಾಸನದಲ್ಲಿ ಕುಳಿತುಕೊಳ್ಳಲು ಪ್ರಾರ್ಥಿಸುತ್ತಾರೆ.
8) ಯೂಪದಲ್ಲಿ ''ಅಗ್ನಿ''. ಆದ್ದರಿಂದ ಮೊದಲು ಯೂಪವನ್ನು ಪೂಜೆ ಮಾಡಲು ಹೇಳಿದ್ದಾರೆ.
9) ಉಷ: ಕಾಲದಲ್ಲೇ 33 ದೇವತೆಗಳು ಅವರವರ ಪತ್ನಿಯರೊಡಗೂಡಿ ಬರಲು ಪ್ರಾರ್ಥಿಸಿದ್ದಾರೆ.
10) ಹಿಂದಿನ ದಿನವೇ ಸಿದ್ಧಪಡಿಸಿದ ಸೋಮವನ್ನು ಅಗ್ನಿ ದೇವತೆಗಳೊಂದಿಗೆ ಸೇವಿಸಲು ಪ್ರಾರ್ಥಿಸುತ್ತಾರೆ.

★★★★★★★★★★★★★★★★★★

<u>ಪರಾಶರ ಶಾಕ್ತರು</u>

1) ವಾಯುವು ಅಗ್ನಿಯನ್ನು ಶುಭ್ರವರ್ಣದವನನ್ನಾಗಿ ಮಾಡಿದನು.
2) ಯಾಜ್ಞಿಕರು, ಯಜಮಾನರು ಮಾನವರ, ದೇವತೆಗಳ ಹಿತರಕ್ಷಣೆಗಾಗಿ ಯಜ್ಞಗಳನ್ನು ಮಾಡುತ್ತಾರೆ.
3) ಯಾಜ್ಞಿಕರು, ಯಜಮಾನರು ವಿಷಯಾಸಕ್ತ ರಹಿತರು.
4) ಮಿತ್ರಾವರುಣರು ಗೋಕ್ಷೀರವನ್ನು ಅಮೃತದಂತೆ ಮಾಡಿದರು.
5) ಅಗ್ನಿ ಜ್ವಾಲೆಗಳು ಶುಭ್ರವರ್ಣದಿಂದ ನಾನಾ ದಿಕ್ಕುಗಳಿಗೆ ಪ್ರಸರಿಸಿದಾಗ ಇದು ಹೋಮಸಮಯವೆಂದು ತಿಳಿಯುತ್ತಾರೆ.
6) ಇವರು ಅದಿತಿ, ಸಾಗರದೇವತೆ, ಭೂದೇವಿ, ದ್ಯುಲೋಕ ದೇವತೆಗಳನ್ನು ಅಗ್ನಿಯ ಜೊತೆಗೆ ಯಾಗಕ್ಕೆ ಆಹ್ವಾನಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮಃ ||

# ಅಗ್ನಿದೇವರು

## ಆಶ್ರಮವಿಭಾಗ

(ಋಗ್ವೇದ 10ನೆಯ ಮಂಡಲದಿಂದ ಆಯ್ದುತೆಗೆದದ್ದು)

ಅಂತರಿಕ್ಷ ಮಧ್ಯಭಾಗದಲ್ಲಿ ಆದಿತ್ಯ ರಶ್ಮಿಗಳು ಅಗ್ನಿಯ ಉತ್ಪತ್ತಿ ಸ್ಥಾನಗಳು. ಸ್ತುತಿಸಿ, ಆಹ್ವಾನಿಸಿ, ಹವಿರರ್ಪಿಸಿ ಇಂದ್ರನನ್ನು ಯಜ್ಞಕ್ಕೆ ಕರೆಯುತ್ತಾರೆ. ಯಾಜ್ಞಿಕರು ತೋಳುಬಲದಿಂದ ಕಡೆದು ಅಗ್ನಿಯನ್ನು ಉತ್ಪನ್ನ ಮಾಡುತ್ತಾರೆ. ಪಿತೃವು, ಮಿತ್ರ, ಬಂಧು, ಸಹೋದರ ಎಂದೆಲ್ಲಾ ತಿಳಿದು ಹವಿಸ್ಸು ಅರ್ಪಿಸುತ್ತಾರೆ. ಅಗ್ನಿಯನ್ನು ಮೇಲೆ ದ್ಯುಲೋಕದಲ್ಲಿ ಕೆಳಗೆ ಪೃಥ್ವಿವಲ್ಲಿ ಜಾತವೇದೋ ರೂಪಿನಲ್ಲಿ, ಮಧ್ಯದಲ್ಲಿ ಅಂತರಿಕ್ಷದಲ್ಲಿ ''ವಿದ್ಯುತ್'' ರೂಪಿನಲ್ಲಿ ಆಹವನೀಯ ಸ್ಥಾನದಲ್ಲಿ ಇದ್ದಾನೆಂದು ಯಜಮಾನರು ತಿಳಿಸಿದ್ದಾರೆ.

ಆಜ್ಯದಿಂದ ಸಂಸ್ಕರಿಸಿ ಪೂಜಿಸುತ್ತಾರೆ. ಸ್ತುತಿಗಳಿಂದ, ಶಸ್ತ್ರಮಂತ್ರಗಳಿಂದ ಸ್ತುತಿಸಿ ಆರಾಧಿಸುತ್ತಾರೆ. ಯಜ್ಞದಲ್ಲಿ ಅಗ್ನಿ ಉತ್ತರ ವೇದಿಕೆಯಲ್ಲಿ ಇರುತ್ತಾನೆ. ಜ್ವಾಲಾರೂಪಿ ನಾಲಿಗೆಯಿಂದ ಹವಿಸ್ಸು ಪಡೆದು ದೇವತೆಗಳಿಗೆ ತಲುಪಿಸುತ್ತಾನೆ. ಉತ್ತಮ ಕರ್ಮಗಳನ್ನು ಮಾಡಿ ಹವಿಸ್ಸು ಅರ್ಪಿಸಿ ಪ್ರಶಂಸಿಸುತ್ತಾರೆ. ಬರ್ಹಿಯನ್ನು ಪ್ರಾತಃ ಕಾಲದಿಂದಲ್ಲೇ ಹರಡಿರುತ್ತಾರೆ.

ಬಾಗಿಲು ವಿಶಾಲವಾಗಿ ತೆರೆದಿರುತ್ತದೆ. ಯಜ್ಞ ನಿರ್ವಹಿಸುವವರು ನಿರ್ದೇಶಕರು, ಋತ್ವಿಜರು, ಪ್ರೇಕ್ಷಕರು ಎಲ್ಲರೂ ಹಾಜರಿರುತ್ತಾರೆ. ಅಗ್ನಿ ಶುಭ್ರ ವರ್ಣದ ಪ್ರಭೆಯೊಂದಿಗೆ ದೇವತೆಗಳ ಬಳಿಗೆ ಹೋಗುತ್ತಾನೆ. ಉತ್ತಮ ಚರು, ಪುರೋಡಾಶ ಅರ್ಪಿಸುತ್ತಾರೆ (ದೇವಯೋಗ್ಯವಾದುದನ್ನು) ಧ್ಯಾನಿಸುತ್ತಾರೆ, ಸ್ತುತಿಸುತ್ತಾರೆ, ಪ್ರಶಂಸಿಸುತ್ತಾರೆ, ಸೂರ್ಯನು ಸಾಗರದ ಮೇಲ್ಭಾಗದಲ್ಲಿ ಇರುವವನು. ಪ್ರಥಮ ವಂದನೆ ಅರ್ಪಿಸುತ್ತಾರೆ. ಅನಂತರ ಯಜ್ಞ ಕರ್ಮಗಳಲ್ಲಿ ತೊಡಗುತ್ತಾರೆ. ಸಂಸ್ಕರಿಸಿದ ದರ್ಭೆ ಹವಿಸ್ಸಿನಿಂದ ಅಗ್ನಿಗೆ ಕೈ ಮುಗಿದು ನಮಸ್ಕರಿಸಿ ಆಜ್ಯದಿಂದ ತೋಯಿಸಿ ಪ್ರಜ್ವಲಿಸುತ್ತಾರೆ. ಹವಿಸ್ಸನ್ನು ಸೇವಿಸಿ ಅತ್ಯಧಿಕ ಜ್ವಾಲೆಯಿಂದ ಊರ್ಧ್ವ ಮುಖ ಸಂಚರಿಸುತ್ತಾನೆ. ''ಸೃಕ್'' ಪಾತ್ರೆಯಲ್ಲಿ ಆಜ್ಯವನ್ನು ''ಚಮು'' ಪಾತ್ರೆಯಲ್ಲಿ ಸೋಮವನ್ನು ಯಾಜ್ಞಿಕರು ಇಟ್ಟಿರುತ್ತಾರೆ.

ಕರ್ಮಗಳನ್ನು ಮಾಡಿಯೇ ಇಷ್ಟಾರ್ಥಗಳನ್ನು ಪಡೆಯಲು ಹೇಳಿದ್ದಾರೆ. ಅಗ್ನಿ ಗಾರ್ಹಪತ್ಯ, ಆಹವನೀಯ, ದಕ್ಷಿಣಾತ್ಯ ರೂಪಗಳಲ್ಲಿ ಯಜ್ಞಕುಂಡದಲ್ಲಿ ಇರುತ್ತಾನೆ. ಅಗ್ನಿಯು (1)ಪ್ರಶಸ್ತ ಕರ್ಮಿ (2) ಬ್ರಹ್ಮರೂಪಿ (3) ಋತ್ವಿಕ್ ರೂಪಿ (4) ಯಜ್ಞ ಮಾಡಲು ಇಚ್ಛಿಸುವವನು (5) ಅಧ್ವರ್ಯು (6) ಯಜ್ಞ ಪಾಲಕ ಎಲ್ಲವೂ ಆಗಿರುತ್ತಾನೆ. ಸೋಮದಿಂದ ಆರಾಧಿಸುವವರಿಗೆ ವಿಶೇಷ ಇಷ್ಟಾರ್ಥಗಳನ್ನು ನೀಡುತ್ತಾನೆ.

ಕರ್ಮಗಳನ್ನು ಆಚರಣೆ ಮಾಡುವವರು (1) ಪಾಪಿಷ್ಟ ಆಚರಣೆ (2) ಸುರಾಪಾನ (3) ದ್ಯೂತಾದಿಗಳನ್ನು ತ್ಯಜಿಸಲು ಋಷಿಗಳು ಹೇಳಿದ್ದಾರೆ.

ಅಗ್ನಿಯಲ್ಲಿ ಸಕಲವೂ ಇದೆ. ಕರ್ಮಗಳನ್ನು ಮಾಡಿ ಅರ್ಥ ಕಾಮಗಳನ್ನು ಪಡೆಯಿರಿ. ಭಕ್ತರಾಗಿರಿ, ಅಗ್ನಿ ರಕ್ಷಿಸುತ್ತಾನೆ ಎಂಬ ಭರವಸೆಯನ್ನು ಋಷಿಗಳೆಲ್ಲರೂ ಕೊಟ್ಟಿರುತ್ತಾರೆ.

10ನೇ ಮಂಡಲದಲ್ಲಿ ಋಷಿಗಳೆಲ್ಲರೂ ಅಗ್ನಿಯ ಜೊತೆಯಲ್ಲಿ ಆರಾಧಿಸಿದ ದೇವತೆಗಳು ಈ ಕೆಳಗಿನಂತಿದ್ದಾರೆ. (1) ಇಂದ್ರ (2) ಮರುತ್ (3) ವರುಣ (4) ವಸು (5) ರುದ್ರ (6) ಆದಿತ್ಯ (7) ಇಳಾ (8) ಭಾರತಿ (9) ಸರಸ್ವತಿ (10)ತ್ವಷ್ಟಾ (11) ದ್ಯಾವಾಪೃಥ್ವಿ

ಸ್ವಲ್ಪ ಹವಿಸ್ಸನ್ನೇ ಅಧಿಕವೆಂದು ಅರಿತು ಕೃಷ್ಣವರ್ಣ ಮಾರ್ಗದಲ್ಲಿ ದೇವಲೋಕ ಅವರೋಹಣ ಸ್ಥಾನವನ್ನು ಅಗ್ನಿ ಹತ್ತುತ್ತಾನೆ.

ಅರ್ಥ ತಿಳಿಯದೇ ಪಠಿಸಿದರೂ, ಅವರೂ ನಮ್ಮವರೆಂದು ತಿಳಿದು ರಕ್ಷಿಸುತ್ತಾನೆ.

ಬಡಗಿಯು ಮರವನ್ನು ಸಂಸ್ಕರಿಸಿ, ಸುಂದರ ರೂಪ ನಿರ್ಮಿಸುವಂತೆ ಅಗ್ನಿಯು ಯಜಮಾನನನ್ನು ಶುದ್ಧಿ ಮಾಡುತ್ತಾನೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಗ್ನಿದೇವರು

## (ಪ್ರಾರ್ಥನಾ ವಿಭಾಗ)

ನೋಧಾ ಗೌತಮರು : ದೇವತ್ವ ಪಡೆಯಲು ಭೃಗು ಋಷಿಗಳು ಅಗ್ನಿಯನ್ನು ಪ್ರಾರ್ಥಿಸಿದರು. ಅವಿಚ್ಛಿನ್ನ ಸುಃಖ, ಐಶ್ವರ್ಯ, ರಕ್ಷಣೆಗಳಿಗಾಗಿ ಬೇಡಿದ್ದಾರೆ. ಪಾಪಗಳನ್ನು ಪರಿಹರಿಸಲು ಕೋರಿದ್ದಾರೆ. ನಮ್ಮಲ್ಲಿ ಐಕ್ಯನಾಗಿರುವ ಈ ವೈಶ್ವಾನರಾಗ್ನಿಯು ನಮ್ಮ ಪ್ರಾರ್ಥನೆಗಳನ್ನು ಬಿಡದೇ ಮನ್ನಿಸಲಿ.

ಗೌತಮಾ ರಹೂ ಗಣರು: ಯಜಮಾನರಿಗೆ ಧನ ಅನುಗ್ರಹಿಸಲೆಂದು ಪ್ರಾರ್ಥಿಸಿದ್ದಾರೆ. ಭೂಮಿ, ಆಕಾಶಗಳು ಅಗ್ನಿಯನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ. ಮನುವು ಯಜ್ಞದಲ್ಲಿ ದೇವತೆಗಳನ್ನು ತೃಪ್ತಿಪಡಿಸಿದಂತೆ ಈಗಲೂ ಇಂದ್ರನನ್ನು ಅಗ್ನಿಯು ಯಜ್ಞಕ್ಕೆ ಕರೆತರಲು ಯಾಜ್ಞಿಕರು ಪ್ರಾರ್ಥಿಸಿದ್ದಾರೆ. ಯಜ್ಞಕರ್ತರಿಗೆ ಧನಾದಿಗಳನ್ನು ಅನುಗ್ರಹಿಸಲಿ. ಅಗ್ನಿಯು ಯಜ್ಞ ಹಿಂಸಕ ರಾಕ್ಷಸರನ್ನು ನಾಶಗೊಳಿಸಲಿ.

ಯಜ್ಞಕರ್ತರಿಗೆ ಶತ್ರುಗಳು ಅಪಹರಿಸಲಾಗದಂತಹ ಧನ, ದ್ರವ್ಯ, ಅನ್ನ ಆಹಾರ, ಸುಜ್ಞಾನ, ಸುಖ ಜೀವನ ದಯಪಾಲಿಸಲಿ. ಪುತ್ರ, ಪೌತ್ರರೊಡಗೂಡಿ ★ ಉತ್ತಮ ಶಕ್ತಿ, ಪೂರ್ಣ ಆಯುಸ್ಸು ಕೊಡಲಿ. ಸಮರ್ಥ ಕುದುರೆ, ಪುಷ್ಟವಾಗಿರುವ ಗೋವುಗಳನ್ನೂ ಬೇಡಿದ್ದಾರೆ. ಪುತ್ರ, ಪೌತ್ರರು, ಭೃತ್ಯರು, ಅಶ್ವಗಳು, ಗೋವುಗಳು ರೋಗರಹಿತರಾಗಿ, ಭಯರಹಿತರಾಗಿ ಇರಲು ಕೇಳಿಕೊಂಡಿದ್ದಾರೆ. ಪಾಪಗಳಿಂದ ಬಿಡುಗಡೆ ಮಾಡಲಿ.

ಅಗಸ್ತ್ಯರು : ಯುದ್ಧ ಮತ್ತು ಯಜ್ಞದಲ್ಲಿ ಅಗ್ನಿಯು "ಗಾಯತ್ರಿ" ಆದಿ ಮಂತ್ರ "ಸ್ವಾಹಾಕಾರ" ರೂಪದಿಂದ ಪ್ರಕಾಶಿಸಲಿ. ಯಜಮಾನನನ್ನು ಹಿಂಸಿಸುವ ರೋಗವನ್ನು ನಾಶಮಾಡಲಿ. ಪುತ್ರ, ಪೌತ್ರರು ರೋಗ, ಭಯ ರಹಿತರಾಗಿರಲಿ.

ಇವರಿಂದ ಪ್ರಾರ್ಥಿತರಾದ ಇತರೇ ದೇವತೆಗಳು

1) ಅಹೋರಾತ್ರಿ ದೇವತೆಗಳು : ಇವರು ಅಧಿಕ, ಆಕರ್ಷಕ ಸೌಂದರ್ಯಯುತರು, ಯಜ್ಞನೆರವೇರಿಸಲಿ.

2) ಲೋಕತ್ರಯ ದೇವತೆಗಳು : "ಇಳಾ, ಭಾರತಿ, ಸರಸ್ವತಿ, ಯಾಜ್ಞಿಕರಿಗೆ ಸಂಪತ್ತು ಕರುಣಿಸಲಿ.

3) ಯೂಪಾಭಿಮಾನಿಗಳು : ಅನ್ನಸೃಷ್ಟಿಸಲಿ, ಹವಿಸ್ಸು ಸೇವಿಸಲಿ.

4) ತ್ವಷ್ಟ (ನಿರ್ಮಾತೃ) : ಯಜ್ಞ ನೆರವೇರಿಸಲಿ, ಹೆಚ್ಚಾಗಿ ಅಶ್ವ ನೀಡಲಿ.

ಕುತ್ಸ ಆಂಗೀರಸರು: ಹಿರಿಯರನ್ನು ಅನುಗ್ರಹಿಸಿದಂತೆಯೇ ನಮ್ಮನ್ನು ಅನುಗ್ರಹಿಸಲಿ ಎಂದು ಕೇಳಿಕೊಂಡಿದ್ದಾರೆ. ಅಪರಾಧಗಳನ್ನು ಕ್ಷಮಿಸಲಿ, ಯಜ್ಞಾನುಷ್ಠಾನಕ್ಕೆ ಸತ್‌ಬುದ್ಧಿ ಕೊಡಲಿ, ಯಾಜ್ಞಿಕರನ್ನು ಶುದ್ಧರೆಂದು ಸಾರಲಿ. ಯಜ್ಞಕ್ಕೆ ಬರಲಿ, ಶತ್ರು ಭಾದೆ ನಿವಾರಿಸಲಿ, ನಿಶ್ಚಿಂತತೆಯಿಂದ ಇರುವಂತಾಗಲಿ. ಪಾಪ ರಹಿತ ಕರ್ಮಗಳನ್ನೇ ಮಾಡುವಂತಾಗಲಿ, ಪುತ್ರ ಪೌತ್ರರನ್ನು ಕೊಡಲಿ. ಇಷ್ಟಾರ್ಥಗಳನ್ನು ಈಡೇರಿಸಲಿ, ಆಯಸ್ಸನ್ನು ಬೇಡಿದ್ದಾರೆ. ಅಗ್ನಿಯು ಸಕಲ ಹೋಮದ್ರವ್ಯಗಳೊಂದಿಗೆ ವೃದ್ಧಿಗೊಳ್ಳಲಿ. ಎಲ್ಲರನ್ನೂ ಶುದ್ಧ ಮಾಡಲಿ, ತೇಜಸ್ಸಿನಿಂದ ರಾಕ್ಷಸರ ವಿರುದ್ಧ ಯಾಜ್ಞಿಕರಿಗೆ ರಕ್ಷಣೆ ಕೊಡಲಿ, ಧನಯುಕ್ತ ಅನ್ನವನ್ನು ಕೊಡಲಿ. ಗೃಹಕ್ಕಾಗಿ ಬೇಡಿದ್ದಾರೆ, ವ್ಯವಸಾಯ ಅಭಿವೃದ್ಧಿಗಾಗಿ ಯಜ್ಞಾನುಷ್ಠಾನಕ್ಕಾಗಿ, ವಂಶವೃದ್ಧಿಗಾಗಿ ಪ್ರಾರ್ಥಿಸಿದ್ದಾರೆ, ಎಲ್ಲಾ ದಿಕ್ಕುಗಳಿಂದಲೂ ರಕ್ಷಿಸಲಿ. ಪುತ್ರ ಪೌತ್ರರಿಗೆ ಭಾಗ್ಯ ತರಲಿ. ಸಂಪತ್ತು ಮತ್ತು ಪುತ್ರರುಗಳಿಗಾಗಿ ಬೇಡಿದ್ದಾರೆ.

ಕಶ್ಯಪರು, ಮಾರೀಚರು: ಕೇಡು ಬಯಸುವ ಶತ್ರು ಧನವನ್ನು ಅಗ್ನಿಯು ಭಸ್ಮ ಮಾಡಲಿ, ಮೊಸಳೆ ಮುಂತಾದ ದುಷ್ಟ ಪ್ರಾಣಿಗಳಿರುವ ನದಿಯನ್ನು ಅಂಬಿಗನು ದೋಣಿಯ ಮೂಲಕ ಸುಲಭವಾಗಿ ದಾಟಿಸುವಂತೆ ನಮಗೆ ಕಷ್ಟ ದುಃಖ, ಪಾಪ, ಕೃತ್ಯಗಳು ತಟ್ಟದಿರುವಂತೆ ಅಗ್ನಿಯು ನಮ್ಮನ್ನು ಸಂಸಾರ ಸಾಗರದ ದಡಕ್ಕೆ ಕೊಂಡ್ಯೊಯಲಿ.

ಮೇದಾತಿಥಿ ಕಾಣ್ವರು : ಯಜ್ಞ ಭಾಗಿಗಳಿಗೆ ಅನ್ನ, ಆಹಾರ, ಧನ, ಸುಖ ಮತ್ತು ಶೂರ ಸಹಾಯಕರನ್ನು ಕೊಡಲಿ. ಅಗ್ನಿಯು ಉತ್ತಮ ಜ್ಞಾನ ನೀಡಲಿ. ★ ಅಗ್ನಿ ಮತ್ತು ಮರುತ್‌ಗಳು ಪ್ರಥಮ ರುಚಿಕರ ಸೋಮಪಾನ

ಮಾಡಲು ಪ್ರಾರ್ಥಿಸುತ್ತಾರೆ. ಬೇಕಾದ ಅನ್ನ, ಧನ, ಶಕ್ತಿ ಮಂಗಳಕರವಾದವುಗಳನ್ನು ಅನುಗ್ರಹಿಸಲು ಪ್ರಾರ್ಥಿಸುತ್ತಾರೆ. ★**ವರುಣ, ಅಶ್ವಿನಿ ದೇವತೆಗಳು ಸೋಮ ಪಾನ ಮಾಡಲಿ**, ಅಗ್ನಿಯೊಂದಿಗೆ 33 ದೇವತೆಗಳು ಯಜಮಾನನಿಗೆ ಉಪಕಾರ ಮಾಡಲಿ ಎಂದು ಪ್ರಾರ್ಥಿಸುತ್ತಾರೆ.

**ಪರಾಶರ ಶಾಕ್ಯರು** : ಪಶುಗಳು ಹುಲ್ಲು, ನೀರು ಇರುವ ಪ್ರದೇಶದಲ್ಲಿ ಇರುವುದರಿಂದ ಅಗ್ನಿ ದೂರ ಗುಹೆಗಳಲ್ಲಿ ಹೋಗಿ ವಾಸಿಸಲಿ. ಯಜ್ಞ ಕಾರ್ಯವನ್ನು ಮಂಗಳಕರವನ್ನಾಗಿಸಲು ಪ್ರಾರ್ಥಿಸಿದ್ದಾರೆ. ಧನ ದಾನ್ಯ ಬೇಡಿದ್ದಾರೆ. ಅಭೀಷ್ಟಗಳನ್ನು ಅನುಗ್ರಹಿಸಲಿ, ಸತ್ವಲವನ್ನು ನೀಡಲಿ, ಭೂತ ಜಾತಗಳಿಂದ, ಶತ್ರುಗಳಿಂದ ರಕ್ಷಿಸಲಿ, ಯಥೇಚ್ಛ ಅನ್ನ ಧನಗಳು, ಉಪಾಯನ ರೂಪದಲ್ಲಿ (ದಾನ ರೂಪದಲ್ಲಿ) ಸಿಕ್ಕುವಂತಾಗಲಿ. ಯಾಜ್ಞಿಕರ ಹಸಿವು ನಿವಾರಿಸಲಿ. ದೇವತೆಗಳಿಗೆ ಹವಿಸ್ಸು ತಲುಪಿಸಲಿ. ಯಾಜ್ಞಿಕರು ಬಹುಕಾಲ ಬಾಳುವಂತೆ ಆಯಸ್ಸು ಕೊಡಲಿ. ಶತ್ರುಗಳು, ಅವರ ಪುತ್ರರು, ಭಟರುಗಳು ಎಲ್ಲರನ್ನೂ ನಾಶಮಾಡಲಿ, ಮನಪೂರ್ವಕವಾಗಿ ಸ್ತೋತ್ರ ಮಾಡುವವರಿಗೆ, ಹವಿಸ್ಸು ಅರ್ಪಿಸುವವರಿಗೆ ತೃಪ್ತಿಯಾಗುವಷ್ಟು ಐಶ್ವರ್ಯವನ್ನು ಅನುಗ್ರಹಿಸಲಿ.

**ಮದುಶ್ಚಂದ್ರರು** : ಆಹ್ವಾನಿತ ದೇವತೆಗಳೊಂದಿಗೆ ಯಜ್ಞ ಭೂಮಿಗೆ ಬರಲು ಅಗ್ನಿಯನ್ನು ಯಜಮಾನನು ಪ್ರಾರ್ಥಿಸುತ್ತಾನೆ. ಅಗ್ನಿಯು ಯಾಜ್ಞಿಕರನ್ನು ವಾತ್ಸಲ್ಯದಿಂದ ಪ್ರಸನ್ನನಾಗಿ ಮಗನಂತೆ ನೋಡಿಕೊಳ್ಳಲು ಪ್ರಾರ್ಥಿಸುತ್ತಾರೆ.

**ದೇವರಾತ :** ಪ್ರಾಣ ದಾನ, ಆಯುಸ್ಸು, ಧನ, ರಕ್ಷಣೆಗಳನ್ನು ಬೇಡಿದ್ದಾರೆ. ಅನ್ನ, ಆಹಾರ, ಅಭಿಷ್ಟ ಸೌಖ್ಯಗಳಿಗಾಗಿ ಕೋರಿದ್ದಾರೆ. ಸ್ವರ್ಗ ಲೋಕ, ಮಧ್ಯಲೋಕ, ಅನ್ನವನ್ನು ಭೂಲೋಕದ ಐಶ್ವರ್ಯವನ್ನು ಅಪೇಕ್ಷಿಸಿದ್ದಾರೆ. ಯುದ್ಧದಲ್ಲಿ ಜಯಕ್ಕಾಗಿ ಪ್ರಾರ್ಥಿಸಿದ್ದಾರೆ. ಅಖಂಡ ಹಿರಿಯ, ಕಿರಿಯ ದೇವತೆಗಳಿಗೆಲ್ಲ ನಮಿಸಿ ಪ್ರಾರ್ಥಿಸಿದ್ದಾರೆ.

**ದೀರ್ಘತಮ ಔಚಿತ್ಯರು :** ಅಗ್ನಿಯು ತಮ್ಮನ್ನು ಸ್ವರ್ಗಾಭಿಮುಖ ಕರೆದುಕೊಂಡು ಹೋಗಲು ಪ್ರಾರ್ಥಿಸಿದ್ದಾರೆ. ವನ ಕಾಷ್ಟಾದಿಗಳನ್ನು ನಾಶಮಾಡುವಂತೆ ಯಜಮಾನರು ಮತ್ತು ಅವರ ಅನುಯಾಯಿಗಳನ್ನು ಶತ್ರು ಬಾಧೆಗಳಿಂದ ಬಿಡಿಸಲಿ, ಇಷ್ಟಾರ್ಥ ಸಕಲ ಧನ, ಗವಾದಿ ಧನ ಪೂರೈಸಿ ಯಾಜ್ಞಿಕರಿಗೆ ದಾತನಾಗಿರಲಿ, ಪುತ್ರ ಪೌತ್ರರನ್ನು ಕಲ್ಯಾಣಗಳಿಂದ ರಕ್ಷಿಸಲಿ, ಎಲ್ಲರಿಗೂ ಆಶ್ರಯದಾತನಾಗಿ ರಕ್ಷಕನಾಗಿರಲಿ, ಹವಿಸ್ಸನ್ನು ದೇವತೆಗಳಿಗೆ ಮಾನವರಿಗೆ ಧನವನ್ನು ಅಗ್ನಿಯು ಅನುಗ್ರಹಿಸಲಿ, ಅಗ್ನಿಯು ತನ್ನನ್ನು ಸ್ತುತಿಸುವವರನ್ನು ಮಾಂತ್ರಿಕರಿಂದ ರಕ್ಷಿಸಿ ಅಭಯ ಕೊಡಲು ಪ್ರಾರ್ಥಿಸಿದ್ದಾರೆ. ಪುತ್ರರು, ಧನ, ಚಂದ್ರ ಸ್ಥಾನ ಪ್ರಾರ್ಥಿಸುತ್ತಾರೆ. ★ ಒಳ್ಳೆಯದು, ಕೆಟ್ಟದು ವಿಂಗಡಿಸಿ ಪ್ರಶಸ್ತ ಕೆಲಸದಲ್ಲಿ ತೊಡಗಿರುವಂತೆ ಒಳ್ಳೆಯ ಮನಸ್ಸನ್ನೇ ಕೊಡಲು ಪ್ರಾರ್ಥಿಸಿಕೊಂಡಿದ್ದಾರೆ.

ಇಂದ್ರಾಗ್ನಿಗಳು ಭೂಲೋಕ, ಅಂತರಿಕ್ಷ, ದ್ಯುಲೋಕ ಎಲ್ಲೆ ಇರಲಿ ನಮ್ಮಲ್ಲಿಗೆ ಬರಲಿ, ಹವಿಸ್ಸು ಸೋಮ ಸ್ವೀಕರಿಸಲಿ, ಧನ ರಕ್ಷಿಸಲಿ. **ವಾಯುವು ದ್ಯುಲೋಕದಿಂದ ಅಗ್ನಿಯನ್ನು ಭೂಮಿಗೆ ತಂದನು, ಶ್ಯೇನಪಕ್ಷಿ ರೂಪದಿಂದ ಗಾಯತ್ರಿಯು ಸೋಮನನ್ನು ಯಜ್ಞ ಕರ್ತರಿಗಾಗಿ ಭೂಮಿಗೆ ತಂದರು.** ಅಗ್ನಿ ಮರುತ್‌ಗಳಂತೆ **49** ಶಾಖೆಗಳುಳ್ಳವನು, ಸಜ್ಜನರ ಪಾಲಕ. ಪ್ರತಿ ಯುಗದಲ್ಲೂ ದೇವತೆಗಳು ಅಗ್ನಿಯನ್ನೇ ತಮ್ಮ ಪ್ರತಿನಿಧಿಯನ್ನಾಗಿ ಮಾಡಿಕೊಂಡಿದ್ದಾರೆ. ಅವನು ಮರಣಧರ್ಮ ರಹಿತ, ಜ್ಞಾನ ದಾಯಕ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ಅತ್ರಿ ಋಷಿಗಳ ಆಶ್ರಮ - ಪ್ರಾರ್ಥನಾ ವಿಭಾಗ

### ಮಂಡಲ 5

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ :

1) ಯಜಮಾನನ ಸ್ತುತಿ, ಆಹ್ವಾನ, ಪೂಜೆ ಸ್ವೀಕರಿಸಲಿ.

2) ನಾವು ಆಹ್ವಾನಿಸಿದ ದೇವತೆಗಳನ್ನು ಹವಿಸ್ಸು ಸ್ವೀಕರಿಸಲು ತನ್ನ ರಥದಲ್ಲಿ ಕರೆತರಲಿ.

3) ನಮ್ಮ ಕರ್ಮಗಳಿಂದ ತೃಪ್ತರಾಗಿ ವೃಷ್ಟಿ ಸುರಿಸಲಿ.

4) ದಾರಾಕಾರವಾಗಿ ಮಳೆ ಸುರಿಸಲಿ.

5) ಅನ್ನ ಮತ್ತು ಧನಗಳಿಗಾಗಿ ಬೇಡಿದ್ದಾರೆ.

6) ಧನ ಸಂಪತ್ತನ್ನು ನೀಡಲಿ, ಪಶುಗಳಿಗಾಗಿ ಮತ್ತು ಅಶ್ವಗಳಿಗಾಗಿ ಬೇಡಿದ್ದಾರೆ.

7) ಗೃಹಗಳಿಗಾಗಿ ಮತ್ತು ಗೋವುಗಳಿಗಾಗಿ ಬೇಡಿದ್ದಾರೆ.

8) ಕರ್ಮಗಳನ್ನು ಮಾಡಲು ನಮ್ಮನ್ನು ಬಲಶಾಲಿಗಳನ್ನಾಗಿ ಇರಿಸಿರಲಿ ಎಂದಿದ್ದಾರೆ.

9) ಮಾಡಿದ ಕರ್ಮಗಳನ್ನು ಆಯಾಯ ದೇವತೆಗಳಿಗೆ ತಲುಪಿಸಲಿ. ತನ್ನ ಭಕ್ತರೆಂದು ತಿಳಿದು ವೈಶ್ವಾನರಾಗಿಯು ರಕ್ಷಿಸಲಿ.

10) ಪುತ್ರರಿಗಾಗಿ ಬೇಡಿದ್ದಾರೆ ಹಾಗೂ ಸಂಪತ್ತಿಗಾಗಿ ಪ್ರಾರ್ಥಿಸಿದ್ದಾರೆ

11) ಸ್ತುತಿಸುವ ಯಜಮಾನರು, ಯಾಜ್ಞಿಕರುಗಳಿಗೆ ಸುಖ ಬೇಡಿದ್ದಾರೆ.

12) ಯಜಮಾನನನ್ನು ಎಲ್ಲಾ ರೀತಿಯಿಂದಲೂ ರಕ್ಷಿಸಲು ಬೇಡಿಕೊಂಡಿದ್ದಾರೆ.

13) ಗೋವುಗಳನ್ನು ಹಿಂಸಕರಿಂದ ರಕ್ಷಿಸಲಿ.

14) ರಾಕ್ಷಸರನ್ನು ನಾಶಮಾಡಿ ಸಂತೋಷ ತರಲಿ.

15) ಯಜಮಾನನ ಪಾಪಗಳನ್ನು ಪರಿಹರಿಸಿ ರಕ್ಷಿಸಲಿ

16) ದು:ಖಗಳನ್ನು ನಾಶಮಾಡಲಿ

17) ದಾರಿದ್ರ್ಯ ನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ.

18) ಸರ್ವಜ್ಞನಾದ ಅಗ್ನಿಯು ಆಪತ್ತುಗಳಿಂದ ರಕ್ಷಿಸಲು ಬೇಡಿದ್ದಾರೆ.

19) ಶತ್ರುಗಳನ್ನು ನಿಗ್ರಹ ಮಾಡಬಲ್ಲ ಪುತ್ರರಿಗಾಗಿ ಬೇಡಿದ್ದಾರೆ.

20) ಮರಣರಾಹಿತ್ಯವನ್ನು ಕೃಪೆಮಾಡಲು ಬೇಡಿದ್ದಾರೆ

21) ಪಿತೃ ಪಿತಾಮಹರಿಗೆ ಕೀರ್ತಿ ತರಬಲ್ಲ ಮಕ್ಕಳಿಗಾಗಿ ಬೇಡಿದ್ದಾರೆ.

22) ದಾತೃಗಳು (ಉದಾರ ದಾನಿಗಳು) ಶಾಶ್ವತ ಧನ ನೀಡಲಿ, ದಾನ ಬುದ್ದಿ ಹೊಂದಿರಲಿ.

23) ದಂಪತಿಗಳು ಅನ್ಯೋನ್ಯ ದೇವತಾ ಕರ್ಮಗಳನ್ನು ಮಾಡುತ್ತಿರುವಂತೆ ಅನುಗ್ರಹಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ವಸಿಷ್ಟ ಋಷಿಗಳ ಆಶ್ರಮ - ಪ್ರಾರ್ಥನಾ ವಿಭಾಗ

### ಮಂಡಲ - 7

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ :

1) ಸ್ವಂತ ಸಂಪತ್ಭರಿತ ಗೃಹದಲ್ಲಿ ಇರಿಸಿರಲಿ.

2) ಧನ, ಅನ್ನ, ಸಂಪತ್, ದೀರ್ಘಾಯಸ್ಸು ಬೇಡಿದ್ದಾರೆ.

3) ವೀರಪುತ್ರ, ಪೌತ್ರರಿಂದ ಒಡಗೂಡಿರುವಂತಾಗಲಿ.

4) ಹವಿಸ್ಸು ಹೊಂದಿರುವವರನ್ನು ಸ್ತುತಿಸುವವರನ್ನು ರಕ್ಷಿಸಲಿ.

5) ಯಜಮಾನರು ಯಾಜ್ಞಿಕರಿಗೆ ನಿರ್ದಿಷ್ಟ ಸಂಪತ್ತು ಕೊಡಲಿ.

6) ಸಮಸ್ತ ಭೋಗ ಸಾಧನಗಳನ್ನೂ ಒದಗಿಸಲಿ.

7) ಪುತ್ರರು ಶತ್ರುಗಳನ್ನು ಜಯಿಸಲು ಸಮರ್ಥರಾಗಿರಲಿ.

8) ಅಗ್ನಿ ಮತ್ತು ಪರಿವಾರ ದೇವತೆಗಳು ಕಲ್ಯಾಣಗಳಿಂದ ರಕ್ಷಿಸಲಿ.

9) ಸ್ತೋತ್ರ ಮಾಡಿ ಸಕಲ ವಿಧದಿಂದಲೂ ಅಗ್ನಿ ರಕ್ಷಿಸಲು ಪ್ರಾರ್ಥಿಸಿದ್ದಾರೆ.

10) ಯಾಚಿಸಿದವರಿಗೆ ಅಗ್ನಿಯು ಧನವನ್ನು ಅನುಗ್ರಹಿಸಲಿ.

11) ಪಾಪಗಳನ್ನು ಪರಿಹರಿಸಿ ರಕ್ಷಿಸಲಿ

12) ಅಸುರರನ್ನು, ಕೇಡಿಗರನ್ನು, ವಂಚಕರನ್ನು ನಾಶ ಮಾಡಲಿ.

13) ರಾಕ್ಷಸರಿಂದ ಹಿಂಸೆಗಳಾಗದಂತೆ ರಕ್ಷಣೆ ಬೇಡಿದ್ದಾರೆ.

14) ತಡೆಯಲಾಗದಂತಹ ಕಠಿಣ ಸಮಸ್ಯೆಗಳು ಬರುವುದೇ ಬೇಡ ಎಂದಿದ್ದಾರೆ.

15) ಬೇರೆಯವರಿಂದ ಶಾಪ ಬರುವ ಸ್ಥಿತಿ ಬೇಡವೇ ಬೇಡ

16) ಮಾನವಾರ್ಪಿತ ದೋಷರಹಿತ ಅನ್ನವು ಅಗ್ನಿಯನ್ನು ಸೇರಲಿ.

17) ಹವಿಸ್ಸನ್ನು ಆಯಾಯ ದೇವತೆಗಳಿಗೆ ತಲುಪಿಸಲಿ ಅವರು ಅದನ್ನು ಸ್ವೀಕರಿಸಲಿ.

18) ವೈಶ್ವಾನರಾಗ್ನಿಯನ್ನು ಸ್ತುತಿಸಿರಿ, ಆರಾದಿಸಿರಿ ಎಂದು ವಸಿಷ್ಟರು ಹೇಳಿದ್ದಾರೆ.

19) ಉತ್ತಮ ಸಾಮರ್ಥ್ಯವುಳ್ಳ ಋತ್ವಿಜರನ್ನು ಧನವಂತರನ್ನಾಗಿ ಮಾಡಲಿ.

20) ಸಮರ್ಥ ಋತ್ವಿಜರಿಗೆ ಅಶ್ವ,ಗೋವು, ಧನ, ಅನರ್ಘ್ಯ ವಸ್ತುಗಳನ್ನು ದಾನಮಾಡಲಿ.

21) ವಸಿಷ್ಟರು ಪುತ್ರರನ್ನು ದತ್ತು ತೆಗೆದುಕೊಳ್ಳುವುದು ಬೇಡ, ಅವರು ಪುನಹ ಹುಟ್ಟಿದ ಮನೆಗೆ ಹೋಗುತ್ತಾರೆ ಎಂದಿದ್ದಾರೆ.

22) ವಿಧಿತ ಕರ್ಮಾನುಷ್ಠಾನ ತ್ಯಜಿಸದಿರಲು ವಸಿಷ್ಟರು ಹೇಳಿದ್ದಾರೆ.

23) ಅಗ್ನಿಯು ಯಾಜ್ಞಿಕರು, ಯಜಮಾನರು ಹಾಗು ಎಲ್ಲರಿಗೂ ಎಲ್ಲ ರೀತಿಯಿಂದಲೂ ಅನುಗ್ರಹಿಸಲು ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ವಾಮ ದೇವ - ಪ್ರಾರ್ಥನಾ ವಿಭಾಗ

## ಮಂಡಲ 4

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ:

1) ನೂರು ವರ್ಷ ಆಯಸ್ಸನ್ನು ಪ್ರತಿದಿನವೂ ಮಂಗಳ ಬೇಡಿದ್ದಾರೆ.

2) ಕರ್ಮಗಳನ್ನು ತ್ಯಜಿಸದಿರುವ ಯಜಮಾನನಿಗೆ ಸಪ್ತ ಧಾತುಗಳಿಂದ ಕೂಡಿದ ಧನ, ಅನ್ನವನ್ನು ಕೊಡಲು ಹೇಳಿದ್ದಾರೆ.

3) ಯಜಮಾನನು ಎಂದೂ ರಿಕ್ತ ಹಸ್ತದವನಾಗದಿರಲಿ.

4) ವೀರ್ಯವಂತ ಪುತ್ರರಿಗಾಗಿ ಪ್ರಾರ್ಥಿಸಿದ್ದಾರೆ.

5) ಪಶು ಸಂಪತ್ತಿಗಾಗಿ ಬೇಡಿದ್ದಾರೆ.

6) ತಿಳಿಯ ಬೇಕಾದುದ್ದನ್ನು ಅಗ್ನಿ ತಿಳಿಯುವಂತೆ ಹೇಳಲಿ ಎಂದಿದ್ದಾರೆ.

7) ಶ್ರದ್ಧಾ ಭಕ್ತಿಗಳಿಂದ ಯಜ್ಞ ಕರ್ಮ ಮಾಡಲು ಅನುಗ್ರಹಿಸಲಿ.

8) ಯಜಮಾನನತ್ತ ಗೋವುಗಳು, ಆಡುಗಳು, ಅಶ್ವಗಳು, ದಾನಿಗಳಿಂದ ಬಂದು ಸೇರಲಿ. ದಾನಿಗಳು ಮುಂದಾಗಲಿ.

9) ಪ್ರಬಲವಾದ ಶತ್ರುಗಳನ್ನು ನಾಶಮಾಡಲಿ. ಶತ್ರುಗಳನ್ನು ಪ್ರೋತ್ಸಾಹಿಸುವವರನ್ನು ನಾಶಮಾಡಲಿ.

10) ದೂರದ, ಹತ್ತಿರದ ನಿಂದಕರನ್ನು, ದ್ರೋಹಿಗಳನ್ನು, ದೂಷಕರನ್ನು ದೂರ ಓಡಿಸಿ ರಕ್ಷಣೆ ನೀಡಲಿ.

11) ಪಾಪಗಳನ್ನು ಅಗ್ನಿ ನಾಶಮಾಡಲಿ. ವರುಣನ ಕ್ರೋಧವನ್ನು ಯಜಮಾನನಿಂದ ದೂರಮಾಡಲಿ.

12) ವರುಣ ಕೃತ ರೋಗ ನಾಶಮಾಡಲಿ.

13) ದಾರಿದ್ರ್ಯ ಹಿಂಸೆಗಳು ಇಲ್ಲದಂತಾಗಲಿ.

14) ಸಕಲ ರೀತಿಯಿಂದಲೂ ಅಗ್ನಿ ತನ್ನ ಭಕ್ತರನ್ನು ರಕ್ಷಿಸಲಿ.

15) ಸಕಲ ದಿಕ್ಕುಗಳಿಂದಲೂ ಹವಿರ್ವಾಹಕ ಅಗ್ನಿ ಯಜಮಾನನನ್ನು ರಕ್ಷಿಸಲಿ. ಸುಖ ಶಾಂತಿ ನೀಡಲಿ, ಪ್ರಶಸ್ತ ಧನ ನೀಡಲಿ, ದರಿದ್ರ ಯಜಮಾನನ ಸ್ತೋತ್ರವನ್ನೇ ಹವಿಸ್ಸೆಂದು ತಿಳಿದು ರಕ್ಷಿಸಲಿ.

**16) ಉದಾರ ದಾನಿಗಳು, ಆಸ್ತಿಕರು ದಿನದಿನವೂ ಹೆಚ್ಚಲಿ.**

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ಭರಧ್ವಾಜರು - ಪ್ರಾರ್ಥನಾ ವಿಭಾಗ

## ಮಂಡಲ 6

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ:

1) ಅಗ್ನಿಯು ಯಜ್ಞ ಸ್ಥಾನದಲ್ಲಿ ಕುಳಿತುಕೊಳ್ಳಲಿ.

2) ಶತ್ರುಗಳನ್ನು ಪ್ರತಿಭಟಿಸುವ ಶಕ್ತಿ ನೀಡಲಿ.

3) ಯಜಮಾನನಿಗೆ ಪುತ್ರ, ಪೌತ್ರರಿಗೆ ಧನ ಬೇಡಿದ್ದಾರೆ.

4) ಪಶುಗಳನ್ನು, ಅಶ್ವಗಳನ್ನು ಬೇಡಿದ್ದಾರೆ.

5) ಶ್ರೇಷ್ಠಗೃಹ ಸಂಪತ್ತಿಗಾಗಿ ಬೇಡಿದ್ದಾರೆ.

6) ಪ್ರಶಾಂತಚಿತ್ತದಿಂದಿರಲು ಪ್ರಾರ್ಥಿಸಿದ್ದಾರೆ.

7) ಶ್ರೇಯಸ್ಸನ್ನು, ಯಶಸ್ಸನ್ನು ಕೋರಿದ್ದಾರೆ.

8) ಧನದ ಬಳಿಗೆ ಯಜಮಾನನ್ನು ಕರೆದೊಯ್ಯಲು ಕೇಳಿಕೊಂಡಿದ್ದಾರೆ.

9) ಭರಧ್ವಾಜ ವಂಶಜರು ಅಗ್ನಿಯನ್ನು ಸ್ತೋತ್ರಗಳಿಂದ, ಸೋಮಾರ್ಪಣೆಯಿಂದ ಪ್ರಸಿದ್ಧ ಮಾಡಿದ್ದಾರೆ.

10) ಅಗ್ನಿಯು ನಾವು ಆಹ್ವಾನಿಸಿದ ದೇವತೆಗಳನ್ನು ಕರೆತರಲಿ.

11) ಆಹ್ವಾನಿಸಿದ ದೇವತೆಗಳು ಹವಿಸ್ಸು ಸೋಮವನ್ನು ಸ್ವೀಕರಿಸಿ ಅನುಗ್ರಹಿಸಲಿ.

12) ಕ್ಷೀರಕ್ಕಾಗಿ ಗೋವುಗಳನ್ನು ಬೇಡಿದ್ದಾರೆ.

13) ದು:ಖಗಳನ್ನು ನಾಶಮಾಡಲಿ

14) ಪಾಪಗಳಿಂದ ಪಾರುಮಾಡಲಿ

15) ರಾಕ್ಷಸ ಬಾಧೆ ತಪ್ಪಿಸಲು ಪ್ರಾರ್ಥಿಸಿದ್ದಾರೆ.

16) ಎದುರು ಬೀಳುವ ಶತ್ರುಗಳನ್ನು ನಾಶಮಾಡಲಿ.

17) ನಿಂದಕರನ್ನು ದೂರ ಅಟ್ಟಲಿ

18) ಸಮಸ್ತ ದು:ಖಗಳನ್ನು ನಾಶಮಾಡಲಿ.

19) ಯಾಜ್ಞಿಕರು, ಯಜಮಾನರುಗಳನ್ನು ಕೊಲ್ಲಲು ಇಚ್ಛಿಸುವ ಶತ್ರುಗಳನ್ನು ಅಗ್ನಿಯು ಜ್ವಾಲೆಗಳಿಂದ ನಾಶಮಾಡಲಿ.

20) ಹವಿರ್ದಾನ ಮಾಡದವರನ್ನು ಅಗ್ನಿಯು ನಾಶಮಾಡಲಿ.

21) ಅಗ್ನಿದತ್ತ ಧನವನ್ನು ಒಡನೆಯೇ ಅನುಭವಿಸುವಂತಾಗಲಿ.

22) ಭರಧ್ವಾಜ ವಂಶಜರಿಗೆ ಗೃಹ, ಅನ್ನ ಧನ, ಸಂಪತ್ತುಗಳನ್ನು ಬೇಡಿದ್ದಾರೆ. ವೈಶಾನರಾಗ್ನಿಯ ಅನುಗ್ರಹಕ್ಕಾಗಿ ಕಾತುರರಾಗಿದ್ದಾರೆ.

23) ಯಾರೂ ಕದಿಯಲಾಗದ ಸಂಪತ್ತನ್ನು ಬೇಡಿದ್ದಾರೆ.

24) ಅರ್ಪಿಸಿದ ಹವಿಸ್ಸನ್ನು ಅಗ್ನಿಯು ಕ್ಷಿಪ್ರವಾಗಿ ಆಯಾಯ ದೇವತೆಗಳಿಗೆ ತಲುಪಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ಕಾಣ್ವ ಋಷಿಗಳು - ಪ್ರಾರ್ಥನಾ ವಿಭಾಗ

## ಮಂಡಲ 8

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ:

1) ಅಗ್ನಿಯು ನಮ್ಮ ಮಿತ್ರನಾಗಿರಲಿ.
2) ಅನ್ನ ಮತ್ತು ಶಕ್ತಿ ಹೊಂದುವಂತಾಗಲಿ.
3) ದೇವತೆಗಳೊಂದಿಗೆ ಸಮೀಪದ ಯಜ್ಞಕ್ಕೆ ಬರಲಿ
4) ನಾವು ಅಗ್ನಿ ಪೂಜಕರಾಗಿರುವಂತೆ ಅನುಗ್ರಹಿಸಲಿ.
5) ಸಂಪತ್ಭರಿತ ವಾಸಯೋಗ್ಯ ಗೃಹಕ್ಕಾಗಿ ಪ್ರಾರ್ಥಿಸಿದ್ದಾರೆ
6) ದಾನಯೋಗ್ಯ ಅಪೇಕ್ಷಿತ ಧನವನ್ನು ಬೇಡಿದ್ದಾರೆ.
7) ರಥ ಮತ್ತು ಅಶ್ವಗಳಿಗಾಗಿ ಬೇಡಿದ್ದಾರೆ
8) ಪಶುಗಳು ಮತ್ತು ಪುತ್ರರಿಗಾಗಿ ಬೇಡಿದ್ದಾರೆ.
9) ಆರೋಗ್ಯ ಭಾಗ್ಯ ನೀಡಲಿ ಎಂದು ಬೇಡಿದ್ದಾರೆ.
10) ಅಗ್ನಿ ಸ್ತೋತ್ರಗಳನ್ನು, ಪೂಜೆಗಳನ್ನು, ಹವಿಸ್ಸುಗಳನ್ನು ಆಯಾಯ ದೇವತೆಗಳಿಗೆ ತಲುಪಿಸಲಿ.
11) ಸಮಸ್ತ ಧನ ಇಷ್ಟಾರ್ಥಗಳನ್ನು ಬೇಡಿದ್ದಾರೆ.
12) ದಾರಿದ್ರ್ಯ, ಹಸಿವಿನ ಬಾಧೆಗಳಿಂದ ಬಿಡುಗಡೆ ಮಾಡಲಿ.
13) ರೋಗ ದಾರಿದ್ರ್ಯಗಳನ್ನು ನಾಶಮಾಡಲಿ.
14) ಬಂದ ಕಷ್ಟಗಳನ್ನು ದು:ಖಗಳನ್ನು ನಿವಾರಿಸಲಿ.
15) ದ್ವೇಷಿಗಳಿಂದ, ಅಸುರರಿಂದ ರಕ್ಷಣೆ ಮಾಡಲಿ.
16) ದುಷ್ಟ ಬುದ್ಧಿಯು ಸುಳಿಯದಿರಲಿ, ಪಾಪಗಳನ್ನು ಪರಿಹರಿಸಲಿ.
17) ಮರಣರಾಹಿತ್ಯಕ್ಕಾಗಿ ಬೇಡಿದ್ದಾರೆ.
18) ಭಕ್ತರಿಗೆ ಬೇಕು ಬೇಕಾದುದನ್ನು ಕೊಡಲಿ.
19) ಮೇಧಾವಿಗಳ ಜೊತೆ ಇರುವಂತೆ ಅನುಗ್ರಹಿಸಲಿ.
20) ಯಜಮಾನರು, ಯಾಜ್ಞಿಕರು ಧನವಂತರೂ, ಗಣ್ಯರೂ ಆಗುವಂತೆ ಅನುಗ್ರಹಿಸಲಿ.
21) ಅಗ್ನಿಯು ನಮಗೆಲ್ಲಾ ಸ್ತುತಿಸುವ, ಪೂಜಿಸುವ, ಯಾಗಮಾಡುವ ಸತ್ ಬುದ್ಧಿಯನ್ನು ನೀಡಲಿ.
22) ಕ್ಷೀರ ಅರ್ಪಿಸಲು ಗೋವುಗಳು ಇಲ್ಲ, ಅಂತಹವನ್ನು ಬರೀ ಸ್ತೋತ್ರವನ್ನೇ ಮಾಡುತ್ತಾನೆ. ಅಗ್ನಿಯು ಅಂತಹವನನ್ನೂ ಕೈ ಬಿಡದೇ ಅವನ ಇಷ್ಟಾರ್ಥಗಳನ್ನೂ ಅನುಗ್ರಹಿಸಲಿ ಎಂದು ಕಾಣ್ವಋಷಿಗಳು ಕೇಳಿಕೊಂಡಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಅಗ್ನಿದೇವರು

## ಗೃತ್ಸಮದರು - ಪ್ರಾರ್ಥನಾ ವಿಭಾಗ

## ಮಂಡಲ 2

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ:

1) ಅನ್ನ ಆಹಾರಗಳಿಗಾಗಿ ಪ್ರಾರ್ಥಿಸಿದ್ದಾರೆ.
2) ಸಂಪದ್ಭರಿತ ಗೃಹಕ್ಕಾಗಿ ಬೇಡಿದ್ದಾರೆ.
3) ಗೋವುಗಳಿಗಾಗಿ ಪ್ರಾರ್ಥಿಸಿದ್ದಾರೆ.
4) ಅಶ್ವಗಳಿಗಾಗಿ ಕೇಳಿಕೊಂಡಿದ್ದಾರೆ.
5) ನಮ್ಮ ಸ್ತೋತ್ರಗಳನ್ನು ಸ್ವೀಕರಿಸಲಿ.
6) ಹವಿಸ್ಸು ಮತ್ತು ಸೋಮವನ್ನು ಸ್ವೀಕರಿಸಲಿ.
7) ಪುತ್ರ, ಪೌತ್ರರುಗಳಿಗಾಗಿ ಬೇಡಿದ್ದಾರೆ.
8) ಕರ್ಮಗಳನ್ನು ಮಾಡಲು ದೇವತೆಗಳು ಅನುಗ್ರಹಿಸಲಿ.
9) ಭೃತ್ಯರನ್ನು ನೀಡಲಿ.
10) ಶತ್ರುಗಳನ್ನು ನಾಶಮಾಡಲಿ.
11) ಪಾಪಗಳನ್ನು ಪರಿಹರಿಸಲಿ.
12) ಅಸುರರಿಂದ, ಅದಾತೃಗಳಿಂದ (ಜಿಪುಣರು) ರಕ್ಷಿಸಲಿ.
13) ಅಹಿಂಸಕರಿಂದ, ನಿಂದಕರಿಂದ ರಕ್ಷಿಸಲಿ, ಭಯರಹಿತರಾಗಿರುವಂತೆ ಮಾಡಲಿ.
14) ಜಯ, ಅಪಜಯ, ಮಾನ, ಅಪಮಾನಗಳಲ್ಲಿ ಭಕ್ತರನ್ನು ರಕ್ಷಿಸಲಿ.
15) ಆರಾಧಿಸುವವರನ್ನು ತಪ್ಪದೇ ಕಾಪಾಡಲಿ.
16) ನಮ್ಮ ವಿರೋಧಿಗಳನ್ನು ನಾಶಮಾಡಲಿ.
17) ಇತರರಿಂದ ಪಡೆಯಲಾಗದಂತಹ ಧನಕ್ಕಾಗಿ ಪ್ರಾರ್ಥಿಸಿದ್ದಾರೆ.
18) ಮನೋ ಅಭೀಷ್ಟಗಳನ್ನು ಈಡೇರಿಸಲಿ ಎಂದು ಕೇಳಿಕೊಂಡಿದಾರೆ.
19) ಅನವರತವೂ ಆರಾಧಿಸಿ ಯಜ್ಞ ಯಾಗಾದಿಗಳನ್ನು ಮಾಡಿದವರನ್ನು ಸ್ವರ್ಗಕ್ಕೆ ಕರೆದೊಯ್ಯಲಿ.
20) ದೇವತೆಗಳ ಆರಾಧನೆಯನ್ನು ಮಾಡಿಯೇ ಇಷ್ಟಾರ್ಥಗಳನ್ನು ಪಡೆಯಲು ಗೃತ್ಸಮದರು ಹೇಳಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಗ್ನಿದೇವರು

## ನಾನಾ ಋಷಿಗಳು - ಪ್ರಾರ್ಥನಾ ವಿಭಾಗ

## ಮಂಡಲ 1

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ :

1) ಅನ್ನಕ್ಕಾಗಿ ಪ್ರಾರ್ಥಿಸಿದ್ದಾರೆ.

2) ಆಹಾರಕ್ಕಾಗಿ ಪ್ರಾರ್ಥಿಸಿದ್ದಾರೆ.

3) ಗೃಹಕ್ಕಾಗಿ ಬೇಡಿಕೊಂಡಿದ್ದಾರೆ.

4) ವ್ಯವಸಾಯ ಅಭಿವೃದ್ಧಿಗಾಗಿ

5) ಗೋವುಗಳಿಗಾಗಿ ಹಾಗೂ ಗೋವುಗಳ ರಕ್ಷಣೆಗಾಗಿ

6) ಸುಖ ಸಂಪತ್ತಿಗಾಗಿ ಪ್ರಾರ್ಥಿಸಿದ್ದಾರೆ.

7) ಆಯಸ್ಸಿಗಾಗಿ ಪ್ರಾರ್ಥಿಸಿದ್ದಾರೆ.

8) ಪುತ್ರ, ಪೌತ್ರರುಗಳಿಗಾಗಿ ಪ್ರಾರ್ಥಿಸಿದ್ದಾರೆ.

9) ಐಶ್ವರ್ಯಕ್ಕಾಗಿ ಪ್ರಾರ್ಥಿಸಿದ್ದಾರೆ.

10) ಶತ್ರುಗಳ ನಾಶಕ್ಕಾಗಿ ಬೇಡಿದ್ದಾರೆ.

11) ಪಾಪಪರಿಹಾರಕ್ಕಾಗಿ ಪ್ರಾರ್ಥಿಸಿದ್ದಾರೆ.

12) ರೋಗನಾಶಕ್ಕಾಗಿ ಪ್ರಾರ್ಥಿಸಿದ್ದಾರೆ.

13) ಭಯನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ.

14) ಕಷ್ಟಗಳಿಂದ ಪಾರುಮಾಡಲು ಪ್ರಾರ್ಥಿಸಿದ್ದಾರೆ.

15) ರಾಕ್ಷಸರು, ನಿಂದಕರು, ಚೋರರಿಂದ ರಕ್ಷಣೆಗಾಗಿ ಬೇಡಿದ್ದಾರೆ.

16) ನಾಸ್ತಿಕರು, ತೊಂದರೆ ಕೊಡದಂತೆ ರಕ್ಷಿಸಲು ಬೇಡಿದ್ದಾರೆ.

17) ಉತ್ತಮ ಜ್ಞಾನಕ್ಕಾಗಿ ಪ್ರಾರ್ಥಿಸಿದ್ದಾರೆ.

18) ದೈವತ್ವಪಡೆಯಲು ದಾರಿತೋರಿಸಲಿ

19) ಸ್ವರ್ಗ ಸುಖಕ್ಕಾಗಿ ಕೇಳಿಕೊಂಡಿದ್ದಾರೆ.

20) ಯಜ್ಞ ಯಗಾದಿಗಳನ್ನು ಸದಾ ನಡೆಸುತ್ತಿರುವಂತೆ ನಮಗೆ ಸದ್ಬುದ್ಧಿ ನೀಡಲಿ.

21) ನಾವು ಮಾಡಿದ ಯಜ್ಞ ಯಾಗಾದಿ ಕರ್ಮಗಳ ಬಲದಿಂದ ನಮ್ಮ ಇಷ್ಟಾರ್ಥಗಳನ್ನು ನೀಡಲು ಪ್ರಾರ್ಥಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಗ್ನಿದೇವರು

## ವಿಶ್ವಾಮಿತ್ರರು ಮತ್ತು ಪರಂಪರೆ

## ಪ್ರಾರ್ಥನಾ ವಿಭಾಗ - ಮಂಡಲ 3

ವೇದದ ಕಾಲದಲ್ಲಿ ನಾನಾ ಋಷಿಗಳು ತಮ್ಮ ತಮ್ಮ ಆಶ್ರಮಗಳಲ್ಲಿ 'ಕರ್ಮ'ಗಳನ್ನು ಮಾಡಿ ನಾನಾ ಯಜ್ಞ ಯಾಗಗಳನ್ನು ಮಾಡಿ ಅನಂತರ ತಮಗೆ ಇದ್ದ ನಾನಾ ತೊಂದರೆಗಳ ಪರಿಹಾರಕ್ಕಾಗಿ ಅಂದಿನ ಅವಶ್ಯಕತೆಗಳಿಗಾಗಿ ಹಾಗೂ ಮುಂದಿನ ದಿನಗಳಲ್ಲಿ ಎಲ್ಲರೂ ಸುಖವಾಗಿರಲು ತಾವು ಆರಾಧಿಸಿದ ದೇವತೆಗಳಲ್ಲಿ ಮಾಡಿಕೊಂಡಿರುವ ಪ್ರಾರ್ಥನೆಗಳು ಈ ಕೆಳಗಿನಂತಿವೆ :

1) ಪ್ರಭೂತ ಧನಕ್ಕಾಗಿ ಬೇಡಿದ್ದಾರೆ.

2) ಗೃಹಕ್ಕಾಗಿ ಬೇಡಿದ್ದಾರೆ.

3) ಪಶುಗಳಿಗಾಗಿ ಬೇಡಿದ್ದಾರೆ

4) ವೀರ ಪುತ್ರರಿಗಾಗಿ ಪ್ರಾರ್ಥಿಸಿದ್ದಾರೆ.

5) ಅನ್ನ, ಧನಗಳಿಗಾಗಿ ಬೇಡಿದ್ದಾರೆ.

6) ಶತ್ರುಗಳನ್ನು ಜಯಿಸಲು ಶಕ್ತಿ ಸಹಾಯ ರಕ್ಷಣೆ ನೀಡಲಿ.

7) ದುಷ್ಟರಿಂದ ಕೆಡಕು ಬಾರದಂತೆ ರಕ್ಷಣೆ ನೀಡಲಿ.

8) ದುಃಸ್ವಪ್ನ ನಾಶಮಾಡಲಿ.

9) ಆಪತ್ತುಗಳಿಂದ ಪಾರುಮಾಡಲಿ.

10) ನಮ್ಮನ್ನು ನಮ್ಮ ಪಾಪಗಳಿಂದ ಪರಿಹರಿಸಲಿ.

11) ಯಜಮಾನನ ಎಲ್ಲಾ ತೊಂದರೆಗಳನ್ನು ನಿವಾರಿಸಲಿ.

12) ಪರಸ್ಪರ ದ್ವೇಷಾಸೂಯೆಗಳನ್ನು ನಾಶಮಾಡಲಿ.

13) ನಮ್ಮ ವಂಶಜರನ್ನು ಅನ್ನವಂತರನ್ನಾಗಿರಿಸಲು ಪ್ರಾರ್ಥಿಸಿದ್ದಾರೆ.

14) ಯಾಜ್ಞಿಕರಿಗೆ, ಯಜ್ಞಕರ್ತರಿಗೆ ಪ್ರತಿದಿನವೂ ದಾನಿಗಳು ಅನ್ನ, ಧನ ತರುತ್ತಿರಲಿ.

15) ವ್ಯವವಾದಷ್ಟು ಧನ ವೃದ್ಧಿಯಾಗಲಿ.

16) ದೇವತೆಗಳು ಯಜ್ಞಕಾರ್ಯ ಮಾಡಿಸುತ್ತಿರಲಿ, ರಕ್ಷಿಸಲಿ.

17) ಅರ್ಪಿಸಿದ ಆಹುತಿಗಳನ್ನು ಆಯಾ ದೇವತೆಗಳಿಗೆ ತಲುಪಿಸಲಿ.

18) ಅಗ್ನಿಯು ತತ್ವವಿಷಯ ದಾತನಾಗಿರಲಿ.

19) ಜ್ಞಾನಿಗಳನ್ನು ಸತ್ಯಾರ್ಥ ಹೇಳುವವರನ್ನು ತೃಪ್ತಿಪಡಿಸಲಿ.

20) ಅಪರಿಮಿತ ಅಕ್ಷಯ ರತ್ನ, ಕನಕಗಳನ್ನು ಬೇಡಿದ್ದಾರೆ.

21) ಯಜ್ಞಯಾಗಾದಿಗಳನ್ನು ಮಾಡುತ್ತಿರುವುದರಿಂದ ತಮ್ಮ ಬೇಡಿಕೆಗಳನ್ನು ಈಡೇರಿಸಲು ಅಗ್ನಿ ಮತ್ತು ಆಹ್ವಾನಿಸಿ ಆರಾಧಿಸಿದ ಇತರೇ ದೇವತೆಗಳೆಲ್ಲರಲ್ಲೂ ಪ್ರಾರ್ಥಿಸಿಕೊಂಡಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಗ್ನಿದೇವರು

## ಪ್ರಾರ್ಥನಾ ವಿಭಾಗ

(ನಾನಾ ಋಷಿಗಳಿಂದ ಋಗ್ವೇದ 10ನೆಯ ಮಂಡಲದಿಂದ ಆಯ್ದು ತೆಗೆದದ್ದು)

1) ಅಗ್ನಿ ಧನಪ್ರದನಾಗಿರಲಿ (ಪ್ರಭೂತ ಧನಕ್ಕಾಗಿ ಬೇಡಿದ್ದಾರೆ)
2) ಗೃಹಕ್ಕಾಗಿ ಹಾಗು ರಕ್ಷಣೆಗಾಗಿ ಪ್ರಾರ್ಥಿಸಿದ್ದಾರೆ.
3) ಭಕ್ತರ ಪಾಲಿಗೆ ಅಂಗರಕ್ಷಕನಾಗಿ ಇರಲು ಪ್ರಾರ್ಥಿಸಿದ್ದಾರೆ.
4) ಕೀರ್ತಿವಂತ ಪುತ್ರರಿಗಾಗಿ ಬೇಡಿದ್ದಾರೆ.
5) ಶರೀರ ರಕ್ಷಣೆ, ಹವಿರ್ದಾನ ಯೋಗ್ಯತೆ ನೀಡಲು ಬೇಡಿದ್ದಾರೆ.
6) ಯಾಜ್ಞಿಕರಿಗೆ ಅನ್ನ, ಧನ ನೀಡಲು ಕೇಳಿದ್ದಾರೆ.
7) ಯಜಮಾನನನ್ನು ಅನ್ನವಂತ, ಅಶ್ವವಂತ, ಯಜ್ಞವಂತನನ್ನಾಗಿ ಮಾಡಲಿ.
8) ದೇವ ಪೂಜಾರ್ಥ ಗೋವು, ಪುತ್ರ ಸಂಪತ್ತು ನೀಡಲಿ.
9) ನ್ಯೂನಾತಿರಿಕ್ತವಿಲ್ಲದ ಕರ್ಮದಿಂದ ಪೂಜಾಯೋಗ್ಯ ಜನರ ಉತ್ಪಾದನೆಯಾಗಲಿ.
10) ಪಾಪಗಳನ್ನು ಪರಿಹರಿಸಲು ಕೇಳಿಕೊಂಡಿದ್ದಾರೆ.
11) ಆಪತ್ತುಗಳ ನಿವಾರಣೆಗಾಗಿ ಪ್ರಾರ್ಥಿಸಿದ್ದಾರೆ.
12) ಉದಕಕ್ಕಾಗಿ ಪ್ರಾರ್ಥಿಸಿದ್ದಾರೆ.
13) ಪಾಪವನ್ನು ನಾಶಮಾಡಿ ಸುಖವನ್ನು ಕೊಡಲಿ.
14) ನೀರಿನಲ್ಲಿಳಿದಾಗ (ಸ್ನಾನ ಮಾಡುವಾಗ) ನೀರಿನ ಸಾರ ಶರೀರ ಸೇರಲಿ.
15) ಸ್ನಾನಾ ನಂತರ ತೇಜಸ್ವಿಯನ್ನಾಗಿ ಮಾಡಲಿ.
16) ನಿರೋಗಿಯನ್ನಾಗಿ ಮಾಡಲಿ.
17) ಆಯಸ್ಸು ಬೇಡಿದ್ದಾರೆ.
18) ಬಹುಕಾಲ ಸೂರ್ಯನನ್ನು ನೋಡುವಂತಾಗಲಿ
19) ಯಜ್ಞ ಕರ್ಮ ಆಚರಣೆ ಲೋಪವಾದರೂ ಅಗ್ನಿಯು ಯಜ್ಞವನ್ನು ಸಫಲಗೊಳಿಸಲಿ
20) ಅನ್ನ ಲಾಭಕ್ಕೆ, ಆಕರ್ಷಕ ಧನಕ್ಕೆ ಪ್ರಾರ್ಥಿಸಿದ್ದರೆ.
21) ಋಷಿಗಳು (1) ಅನ್ನಕ್ಕಾಗಿ (2) ಯಶಸ್ಸಿಗಾಗಿ (3) ಅಭೀಷ್ಟಪ್ರಾಪ್ತಿಗಾಗಿ (4) ಸಂಪತ್ತಿಗಾಗಿ (5) ದು:ಖ ನಿವಾರಣೆಗಾಗಿ (6) ಯಜ್ಞಗಳನ್ನು, ಯಾಗಗಳನ್ನು ಮಾಡುತ್ತಿರಲು ಹೇಳಿದ್ದಾರೆ.
22) ಪಶು ಪುತ್ರರಿಗಾಗಿ ಪ್ರಾರ್ಥಿಸಿದ್ದಾರೆ.
23) ಆರೋಗ್ಯ ಭಾಗ್ಯವನ್ನು ಬೇಡಿದ್ದಾರೆ.
24) ಪಶುಗಳು, ಪುತ್ರರು ಆರೋಗ್ಯವಂತರಾಗಿರುವಂತಾಗಲಿ.
25) ಆಹಾರ ತಿನ್ನುವಾಗ, ನೀರು ಕುಡಿಯುವಾಗ ಶಕ್ತಿಯುತರಾಗಿರುವಂತಾಗಲಿ.
26) ಮುಪ್ಪಿನವರೆಗೆ ಕಲ್ಯಾಣ ಹೊಂದುತ್ತಿರುವಂತಾಗಲಿ.
27) ಈಗ ಇರುವ ಮುಂದೆ ಬರುವ ಪುತ್ರರೊಂದಿಗೆ ಇಷ್ಟಾರ್ಥ ಸುಖ ಹೊಂದುವಂತಾಗಲಿ.
28) ಸಮಸ್ತ ರಾಕ್ಷಸ ಗಣಗಳೆಲ್ಲವನ್ನು ಅಗ್ನಿ ದಹಿಸಿ ರಕ್ಷಿಸಲಿ. ಋತ್ವಿಜರು, ಋಷಿಗಳು ಜ್ಞಾನಕ್ಕಾಗಿ, ರಕ್ಷಣೆಗಾಗಿ ಬೇಡಿದ್ದಾರೆ.
29) ಸಸ್ಯಗಳು, ಹೂವುಗಳಿಂದ ಕಂಗೊಳಿಸಲಿ.
30) ಜಲಾಶಯಗಳು ನೀರಿನಿಂದ ತುಂಬಿರಲಿ, ಕಮಲಗಳಿಂದ ಕಂಗೊಳಿಸಲಿ.

ದೇವತಾ ಸ್ತೋತ್ರಗಳನ್ನು, ಪೂಜೆಗಳನ್ನು, ಯಜ್ಞಯಾಗಾದಿಗಳನ್ನು ಮಾಡಿಯೇ ಮೇಲಿನ ಇಷ್ಟಾರ್ಥಗಳೆಲ್ಲವನ್ನು ಪಡೆಯಲು ಸಾಧ್ಯ ಎಂಬುದು ಎಲ್ಲಾ ಋಷಿಗಳ ಒಟ್ಟಾರೆ ಅಭಿಪ್ರಾಯ.

# ಅಗ್ನಿದೇವ

## ಮಂಡಲ ಹತ್ತರಿಂದ ತೆಗೆದಪ್ರಾರ್ಥನಾ ವಿಭಾಗದ ವಿಷಯಗಳು

ಅಗ್ನಿಯ ಅನುಗ್ರಹಾತ್ಮಕ , ಕಲ್ಯಾಣಾತ್ಮಕ ಮನಸ್ಸು ಯಜಮಾನನ ಕಡೆಗೆ ತಿರುಗಿ ಅವನನ್ನು ಅನುಗ್ರಹಿಸಲಿ, ಅಗ್ನಿ ಸೂರ್ಯನನ್ನು ಅನುಸರಿಸಿ ಯಜ್ಞವನ್ನು ವಿಸ್ತರಿಸಿ ನ್ಯೂನಾತಿರಿಕ್ತ ವಿಲ್ಲದ ಕರ್ಮದಿಂದ. ಯಾಜ್ಞಿಕರಿಗೆ ಅನ್ನ ಧನ ಕೊಡಲಿ. **ಅಗ್ನಿಯ ಕ್ರೂರ ಜ್ವಾಲೆಗಳು, ದುಷ್ಟರಾಕ್ಷಸರು, ಪಿಶಾಚಿಗಳು ಮುಂತಾದ ಆ ಗುಂಪಿನವರನ್ನು ಸೀಳಿ, ಕತ್ತರಿಸಿ ದೇಹವನ್ನು ಪಕ್ಷಿಗಳಿಗೆ ತಿನ್ನಲು ಬಿಡಲಿ.** ಅಗ್ರಭಾಗವುಳ್ಳ ಅಗ್ನಿ ರಕ್ಷೋಹ ದುರಭಿಮಾನಿ ಅಸುರರನ್ನು ದಹಿಸಲಿ, ರಾಕ್ಷಸ ನಾಶ ಮಾಡಲಿ, ಸೂರ್ಯ ಜ್ವಾಲೆ ಚಂದ್ರ ರೂಪಿನಲ್ಲಿ. ದ್ಯಾವಾ ಪೃಥ್ವಿ, ಅಗ್ನಿ ಇವರು ದೇವತೆಗಳನ್ನು ಯಜ್ಞಕ್ಕೆ ಕರೆತರಲಿ. ಪಾಪ ಪರಿಹಾರಗಳಿಗಾಗಿಯೇ ಋತ್ವಿಜರು ಕರ್ಮಗಳನ್ನು ಮಾಡುತ್ತಾರೆ. ಆಹುತಿ ರೂಪಳಾದ (ಗಂಧರ್ವ ಸ್ತ್ರೀ) ಯಜಮಾನನ ಮನಸ್ಸು, ಸ್ಮತಿಗಳು ಕ್ರಿಯೆಯಲ್ಲಿರುವಂತೆ ಮಾಡಲಿ. ಕೀರ್ತಿವಂತ ಪುತ್ರನನ್ನು ಪ್ರಭೂತ ಧನವನ್ನು ಅಗ್ನಿಯು ಕೊಡಲು ಬೇಡಿದ್ದಾರೆ. ಋಷಿಗಳು ಉದಕಕ್ಕಾಗಿ, ರಕ್ಷಣೆಗಳಿಗಾಗಿ ಬೇಡಿದ್ದಾರೆ. ಯಜಮಾನನನ್ನು ಅನ್ನವಂತ, ಅಶ್ವವಂತ, ಯಜ್ಞವಂತನನ್ನಾಗಿ ಮಾಡಲಿ, ದೇವ ಪೂಜಾರ್ಥ ಗೋವು, ಪುತ್ರ ಸಂಪತ್ತು ಆಪತ್ತು ನಿವಾರಣೆ, ಶರೀರ ರಕ್ಷಣೆ, ಹವಿರ್ಧಾನಕ್ಕೆ ಅರ್ಹತೆ ಕೊಡಲು ಪ್ರಾರ್ಥಿಸಿದ್ದಾರೆ. ದೇವತಾತ್ಮ ಉದಕಗಳು ಪಾಪನಾಶ ಮಾಡಿ ಸುಖಕೊಡಲಿ. ನೀರನ್ನು ಪ್ರವೇಶಿಸಿದಾಗ ಯಜಮಾನನಿಗೆ ನೀರಿನ ಸಾರ ಎಲ್ಲಾ ಸೇರಲಿ. ಸ್ನಾನ ನಂತರ ಯಜಮಾನನನ್ನು ತೇಜಸ್ವಿಯನ್ನಾಗಿರಿಸಲಿ. ಶರೀರವು ನಿರೋಗಿಯಾಗಿರುವಂತೆ ಮಾಡಲಿ, ಬಹುಕಾಲ ಸೂರ್ಯನನ್ನು ನೋಡುವ ಭಾಗ್ಯ ಕರುಣಿಸಲಿ, ಪುತ್ರ, ಪೌತ್ರಾದಿಗಳಿಗೂ ಉತ್ಕೃಷ್ಟ ಸಂಪತ್ತನ್ನು ಕೊಡಲಿ, **ಸತ್ಯಾತ್ಮಕ ವಾಕ್ಕುಗಳು ಎಲ್ಲ ಕಡೆಯಿಂದಲೂ ಯಜಮಾನನ್ನು ರಕ್ಷಿಸಲಿ, ಯಜ್ಞ ಕರ್ಮಾಚರಣೆ ಲೋಪವಾದರೂ ಅಗ್ನಿ ಯಜ್ಞವನ್ನು ಸಫಲಗೊಳಿಸಲಿ.** ಋಷಿಗಳು ಅನ್ನಕ್ಕಾಗಿ, ಯಶಸ್ಸಿಗಾಗಿ, ಅಭೀಷ್ಟಗಳ ಪ್ರಾಪ್ತಿಗಾಗಿ ಯಜ್ಞ ಮಾಡಲು ಹೇಳಿದ್ದಾರೆ. ಶತ್ರುವು ಬಂಧುವೇ ಆಗಿರಲಿ, ಇಲ್ಲದಿರಲಿ, ಅವರ ಬಲವನ್ನು ಅಗ್ನಿ ನಾಶಮಾಡಲಿ, ದುಃಖಗಳಿಂದ ಪಾರಾಗಿ ಮಂಗಳಕರವಾದುದನ್ನು ಹೊಂದಲು ಅಪೇಕ್ಷಿಸಿದ್ದಾರೆ. ಸ್ತೋತ್ರಗಳನ್ನು ಆಲಿಸಿ ಅನ್ನ ಸಂಪತ್ತನ್ನು ಕರುಣಿಸಲಿ. ★ ತಿನ್ನುವಾಗ, ಕುಡಿಯುವಾಗ ಶಕ್ತಿವಂತರಂತಾಗಲಿ. ಇಂದ್ರರು ನಮ್ಮ ಪ್ರಾರ್ಥನೆಗಳನ್ನು ಕೇಳಲಿ, ಪಶುಗಳು, ಪುತ್ರರು ಆರೋಗ್ಯವಂತರಾಗಿರಲಿ, ಮುಪ್ಪಿನವರೆಗೂ ಕಲ್ಯಾಣವಂತರಾಗಲಿ. ಸೂರ್ಯನು ಆರೋಗ್ಯಕ್ಕಾಗಿ ಪ್ರತಿದಿನವೂ ಉದಿಸುತ್ತಿರಲಿ, ಧನನೀಡಲಿ.★ ಯಾಜ್ಞಿಕರಿಂದ ಶಾಪ ಪಡೆದವರು ತೊಂದರೆಗೆ ಒಳಗಾಗಲಿ, ಅವರಿಗೆ ಯಾವ ಸಹಾಯವು ಸಿಗದಿರಲಿ. ಜ್ಞಾನಕ್ಕಾಗಿ ಬೇಡಿದ್ದಾರೆ. ಉತ್ತಮ ಪುತ್ರರಿಗಾಗಿ ಬೇಡಿದ್ದಾರೆ. ಸಮಸ್ತ ರಾಕ್ಷಸ ಗಣವನ್ನು ದಹಿಸಿ ಅಗ್ನಿ ಯಜ್ಞವನ್ನು ರಕ್ಷಿಸಲಿ. ಆಹವನೀಯಾಗ್ನಿಯನ್ನು ಕುಂಡದಲ್ಲಿ ಸ್ಥಾಪಿಸುತ್ತಾರೆ. ಅಗ್ನಿಗೆ ಪ್ರಶಸ್ತವಾದ ಹವಿರನ್ನವನ್ನು ಅರ್ಪಿಸುತ್ತಾರೆ. ಅಗ್ನಿ ತೃಪ್ತನಾಗಲಿ, ಯಜಮಾನರ ಸ್ತೋತ್ರಗಳನ್ನು ಕೇಳಲಿ, ಅನುಗ್ರಹಿಸಲಿ, ಅಗ್ನಿಯ ಆಗಮನದಿಂದ ಗೃಹಗಳಿಗೆ ಯಾವ ತೊಂದರೆಯು ಆಗದಿರಲಿ, ಸಸ್ಯಗಳು ಹೂವುಗಳಿಂದ ಕಂಗೊಳಿಸಲಿ, ಜಲಾಶಯಗಳು ನೀರಿನಿಂದ ತುಂಬಿ ಕಮಲಗಳಿಂದ ಕಂಗೊಳಿಸಲಿ, ಅತ್ರಿ, ವಸಿಷ್ಟ, ಭರದ್ವಾಜ ಮುಂತಾದವರಿಗೆ ಅನುಗ್ರಹಿಸುವಂತೆ ಉಳಿದವರಿಗೂ ಧನ ಸುಖಗಳನ್ನು ಕೊಟ್ಟು ಅನುಗ್ರಹಿಸಲು ಪ್ರಾರ್ಥಿಸುತ್ತಾರೆ. ಯಾಜ್ಞಿಕರ ಮನೆಗೆ ಎಂದೂ ಅಗ್ನಿ ಭಯ ಇಲ್ಲದಿರಲಿ. ಅಗ್ನಿಯು ಅಂತರಿಕ್ಷವನ್ನು ಮೇಘದಿಂದ ತುಂಬಲಿ, ಲೋಭಿಗೆ ದಾನ ಮಾಡುವ ಬುದ್ಧಿ ಕೊಡಲಿ, ಸಮಸ್ತ ಪ್ರಾಣಿಗಳು ತಮ್ಮ ತಮ್ಮ ಕರ್ಮಗಳಲ್ಲಿ ನಿರತವಾಗಿರುವಂತೆ ಅನುಗ್ರಹಿಸಲಿ. ದೇವತೆಗಳು ತಮ್ಮ ಹವಿರ್ಭಾಗವನ್ನು ಐಕ್ಯಮತ್ಯದಿಂದ ಸ್ವೀಕರಿಸುವಂತಾಗಲಿ.

**191 :** ಉದ್ದೇಶ, ಅಪೇಕ್ಷೆ, ಅಂತರಂಗ ಆಲೋಚನೆ, ಅಭಿಪ್ರಾಯಗಳು ಪರಸ್ಪರ ವಿರೋಧವಿಲ್ಲದೆ ಒಂದೇ ವಿಧವಾಗಿ ಇರುವಂತೆ ಅಗ್ನಿಯ ಅನುಗ್ರಹವನ್ನು ಅಪೇಕ್ಷಿಸುತ್ತಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಗ್ನಿಯ ಪ್ರಭೇದಗಳು (ಶಾಖೆಗಳು)

ಋಗ್ವೇದದಲ್ಲಿ ಆಶ್ವಲಾಯನ ಸೂತ್ರದಲ್ಲಿ ಕಂಡುಬಂದಂತೆ ಅಗ್ನಿಯಲ್ಲಿ ನಾನಾ ಪ್ರಬೇಧಗಳಿವೆ. ಅವುಗಳಲ್ಲಿ ಬಹುಮುಖ್ಯವಾದವನು ವೈಶ್ವಾನರಾಗ್ನಿ, ಉಳಿದುದೆಲ್ಲವು ವೈಶ್ವಾನರಾಗ್ನಿಯ ಶಾಖೆಗಳೇ ಎಂದು ಋಷಿಗಳೇ ಹೇಳಿದ್ದಾರೆ. ಶಾಖೆಗಳು ಈ ಕೆಳಗಿನಂತಿವೆ :

1) ಆದಿತ್ಯ (ಪವಿತ್ರಾಗ್ನಿ) : ದ್ಯುಲೋಕದಲ್ಲಿ ಆದಿತ್ಯ ರೂಪಿನಲ್ಲಿ ಇದ್ದಾನೆ. ಆದಿತ್ಯನು ಉದಯನಾಗಿ ಮಾನವರ ಸತ್ಯ ಅಸತ್ಯ ಕರ್ಮಗಳನ್ನು, ಮೋಸಗಳನ್ನು ವೀಕ್ಷಿಸುತ್ತಾನೆ. ಆದಿತ್ಯ ಮಹಾತ್ಮದಿಂದ ಅಗ್ನಿಯ ಸಂಚಾರ ಸರಣಿಗಳು ಗೋಚರವಾಗುತ್ತವೆ. ಯಜ್ಞದಲ್ಲಿ ಸ್ಥಾಪಿತನಾಗುತ್ತಾನೆ. ಅಧ್ವರ್ಯು ಯಜ್ಞ ಆಚರಿಸುತ್ತಾನೆ. ಇಂದ್ರಾದಿಗಳಿಗೆ ಹವಿಸ್ಸು ಅರ್ಪಿಸಲಾಗುತ್ತದೆ. ಮರಣರಾಹಿತ್ಯಕ್ಕಾಗಿ ಬೇಡಿದ್ದಾರೆ. ಧನ ನೀಡಲು ಪ್ರಾರ್ಥಿಸಿದ್ದಾರೆ.

2) ಆಹವನೀಯಾಗ್ನಿ : ಯಜ್ಞವರ್ಧಕನಾಗಿದ್ದಾನೆ, ಸಕಲರನ್ನೂ ಸ್ವಪ್ರೇರಣೆಯಿಂದ ಪರಿಗ್ರಹಿಸುತ್ತಾ ಸಕಲವನ್ನು ವ್ಯಾಪಿಸಿ ಯಜ್ಞಗೃಹದಲ್ಲಿ ಇರುತ್ತಾನೆ. ಆಹವನೀಯ – ಗಾರ್ಹಪತ್ಯ ಎರಡು ರೂಪಗಳಿಂದ ಅಗ್ನಿಯನ್ನು ದೇವತೆಗಳು ಮಾನವರಲ್ಲಿ ಸ್ಥಾಪಿಸಿದ್ದಾರೆ. ಗೃಹದಲ್ಲಿ ಅಗ್ನಿಯನ್ನು ಪೂಜಿಸುತ್ತಾರೆ.

3) ಅಪಾಂನಪಾತ್ : ನಮ್ಮಲ್ಲಿದ್ದಾನೆ, ಉದಕಗಳ ಮೊಮ್ಮಗ, ಈ ಶಾಖೆಯ ಅಗ್ನಿಯಿಂದ ಫಲ ಪುಷ್ಪಗಳಾಗುವವು. ಕರ್ಮ ಭ್ರಷ್ಟರು, ಅಸತ್ಯಾತ್ಮರು, ಸಮೀಪಿಸಲಾರರು, ಸಮಸ್ತ ಭೂತ ಜಾತಗಳನ್ನು ಸೃಷ್ಟಿಸುವವನು, ದೇವತೆಗಳ ಆಪ್ತಸಖಿ, ಮನೋಹರ ರೂಪಿ, ಸಮಸ್ತ ದಿನಗಳಲ್ಲೂ ಪ್ರಕಾಶಿತ, ತೇಜಸ್ವಿ ★ ಉದಕಗಳ ಮಧ್ಯೆ ಮೇಘಗಳಲ್ಲಿ ಅಂತರಿಕ್ಷಸ್ಥನಾಗಿ ವೃಷ್ಟಿಕಾರಕನಾಗಿ ನದಿ ಪ್ರವಹಿಸುವಂತೆ ಮಾಡುತ್ತಾನೆ. ಅಂತಃಕರಣ ಪೂರ್ವಕವಾಗಿ ನಮ್ಮನ್ನು ಅರಿಯಲಿ, ಅನ್ನ ಸಂತಾನಕ್ಕಾಗಿ ಬೇಡಿದ್ದಾರೆ. ಆಂಗೀರಾರೂಪಿ, ಉಷಸ್‌ನಿಂದ ದೇವತೆಗಳು ಅಗ್ನಿ ಉತ್ಪನ್ನ ಮಾಡಿದ್ದಾರೆ. ಈ ಅಗ್ನಿಗೆ ಆಜ್ಯ ಆಹುತಿಯನ್ನು ಅರ್ಪಿಸುತ್ತಾರೆ ಮರಣರಾಹಿತ್ಯವನ್ನು ಬೇಡಿದ್ದಾರೆ.

4) ಗಾರ್ಹಪತ್ಯಾಗ್ನಿ : ಭೂಲೋಕದಲ್ಲಿ ಈ ರೂಪಿನಲ್ಲಿದ್ದಾನೆ, ಸ್ಥಿರನಾಗಿದ್ದಾನೆ, ಸುಖ ನೀಡುತ್ತಾನೆ, ಸ್ತೋತ್ರ ಮಾಡುವವರ ಅಭಿವೃದ್ಧಿ ಕಾರಕ, ಯಜ್ಞಶಾಲೆಯಲ್ಲೂ ಎಲ್ಲರನ್ನೂ ರಕ್ಷಿಸುತ್ತಾನೆ, ಇವರ ಅನುಗ್ರಹದಿಂದ ಹಸುಗಳು ಹಾಲು ಕೊಡುತ್ತವೆ. ನದಿಗಳಲ್ಲಿ ನೀರು ಹರಿದು ಬರುತ್ತವೆ. ಹಗಲು ರಾತ್ರಿಗಳು, ಬೆಳಕು ಕತ್ತಲೆಗಳು ಆಗುತ್ತವೆ. ಯಾಜ್ಞಿಕರಿಗೆ ಅನ್ನ ಒದಗಿಸುತ್ತಾನೆ. ನಮ್ಮ ಆಹ್ವಾನ ಸ್ತೋತ್ರ ಪೂಜೆಗಳನ್ನು ಸ್ವೀಕರಿಸಲಿ, ದೇವತೆಗಳಿಗೆ ಹವಿಸ್ಸು ತಲುಪಿಸಲಿ, ಧನ ಮತ್ತು ಸುಖವನ್ನು ನಮಗೆ ಅನುಗ್ರಹಿಸಲಿ.

5) ದ್ರವಿಣೋದಾ : ಮಾನವರಿಗೆ ಹಿತ ಉಂಟುಮಾಡುವವನು, ಹುಟ್ಟಿದೊಡನೆಯೇ ಕರ್ಮಗಳನ್ನು ತನ್ನ ಅಧೀನ ಮಾಡಿಕೊಳ್ಳುತ್ತಾನೆ. ಭೂತ, ಭವಿಷ್ಯತ್, ವರ್ತಮಾನ ಕಾಲ, ಸಕಲ ಭೂತ ಜಾತಗಳಲ್ಲೂ ಇದ್ದಾನೆ. ಇವನು ವನಸ್ಪತಿ <u>ದೇವನೇ.</u> ಇಷ್ಟಾರ್ಥಪ್ರದ, ಸೋಮಯಾಗವನ್ನು ಇಚ್ಛಿಸುತ್ತಾನೆ, ಈ ಅಗ್ನಿಯನ್ನು ಸ್ತೋತ್ರ, ಸಮಿತ್ತು, ಆಹುತಿಗಳಿಂದ ತೃಪ್ತಿ ಪಡಿಸಲು ಕಾಣ್ವರು ಹೇಳಿದ್ದಾರೆ. ಶ್ರೇಯಸ್ಸಿಗಾಗಿ ಪ್ರಾರ್ಥನೆ ಮಾಡಿದ್ದಾರೆ.

6) ದಾವಾಗ್ನಿ : ವೃಕ್ಷಗಳಲ್ಲಿ ಅಡಗಿದ್ದಾನೆ, ಸಪ್ತಸಂಖ್ಯಾತ, ತೇಜಸ್ವಿ ಯಜಮಾನನ ದೂತ, ಭೃಗು ವಂಶದ ಋಷಿಗಳನ್ನು ಹುಡುಕ್ಕಿ ಮಥನದಿಂದ ತೇಜಸ್ಸು ಕಾಣಿಸಿಕೊಳ್ಳುತ್ತದೆ. ಇಂದ್ರಾದಿಗಳ ಮಹತ್ವ ಮಾಡಿದವನು, ಯಜಮಾನರು ಆರಣಿ ಹಿಡಿದ ಕೂಡಲೇ ತಿಳಿದವನು, ದೇವದೂತ.

7) ವೈಶ್ವಾನರಾಗ್ನಿ : ದ್ಯಾವಾ ಪೃಥ್ವಿಗಳ ಮಧ್ಯೆ ಪ್ರವೇಶಿಸಿದಾಗ ಯಾಗಾದಿ ಕರ್ಮಗಳಿಂದ ಯಜಮಾನರು ಮರಣ ರಾಹಿತ್ಯ ಹೊಂದುತ್ತಾರೆ. ಈ ಅಗ್ನಿಗೆ ಪ್ರೀತಿ ಪಾತ್ರರಾಗುತ್ತಾರೆ. ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾರೆ. ಇವರ ತೇಜಸ್ಸಿಂದ ದ್ಯುಲೋಕ ಸಮುಚ್ಚಯ ಪ್ರದೇಶಗಳು ನಿರ್ಮಿತವಾಗಿವೆ. ಲೋಕಪಾಲಕರು.

8) ತನೂನಪಾತ್ : ಮಧುರ, ಆಜ್ಯ ದ್ರವ್ಯಗಳ ಹವಿಸ್ಸು ಯಜ್ಞದಲ್ಲಿ ಸೇವಿಸುತ್ತಾನೆ. ಯಜ್ಞದಲ್ಲಿ ಶೀಘ್ರ ಸೇವಿಸ್ತು ಯಜ್ಞ ಯಾರ ಹಿಂಸೆಗೂ ಒಳಗಾಗದವನು. ಮೋಸ ಮಾಡದವರನ್ನು ಅಪೇಕ್ಷಿಸುವುದಿಲ್ಲ.

9) ನರಾಂಶ : ಅಗ್ನಿಯು ಯಜ್ಞವನ್ನು ಉತ್ತಮ ರೀತಿಯಲ್ಲಿ ಪ್ರೇರಿಸುತ್ತಾನೆ, ಯಜಮಾನನ ಹಿತಕಾರಿ, ಸತ್ಯಾತ್ಮಕ ವಾಕ್ ಉಳ್ಳವನು, ಕರ್ಮದ ಪಕ್ಷವುಳ್ಳವನು, ಆಹ್ಲಾದಕರ ಹಸ್ತದವನು, ಆಕರ್ಷಕ ರೂಪಿ, ''ಜುಹೂಪಾತ್ರೆಗಳು'' ಪೂರ್ವಾಭಿಮುಖವಾಗಿ ಅಗ್ನಿಯನ್ನು ಸ್ಪರ್ಶಿಸುತ್ತಾ ಆಜ್ಯದಿಂದ ಅಲಂಕರಿಸುತ್ತಾರೆ ತ್ರಿವಿಧಗಾಮಿ, ತ್ರಿಲೋಕಗಳನ್ನು ಪ್ರಕಾಶಿಸುವವನು. ಯಜಮಾನನಲ್ಲಿ ಸ್ಥಿರವಾಗಿರುತ್ತಾನೆ. ಮರಣಧರ್ಮರಹಿತ, ಶ್ರೇಷ್ಟ ಜ್ವಾಲೆಯವನು, ಮಾನವರಿಂದ ದೇವತೆಗಳೆಲ್ಲರಿಗೂ ಸ್ನೇಹಿತ.

★ ಅಪಾಂನಪಾತ್ ಅಗ್ನಿಯ ಸಂಬಂಧಿ. ಮೇಘಸ್ಥ ಮೇಘಗಳ ಮಧ್ಯೆ ಪ್ರಕಾಶಿತನಾಗಿ ಇರುತ್ತಾನೆ

10) ಮಾಧ್ಯಮಿಕಾಪಾತ್ : ದ್ರೋಹಿಗಳಿಂದ, ಹಿಂಸಕರಿಂದ ರಕ್ಷಿಸುತ್ತಾನೆ.

11) ಪಾರ್ಥಿವಾಗ್ನಿ: ಉದಕ ರಕ್ಷಣೆಗಾಗಿ ಭೂಲೋಕದಲ್ಲಿ ಸಂಚರಿಸುತ್ತಾ ದ್ಯುಲೋಕದಲ್ಲಿ ಸೂರ್ಯನಿಂದ ಸಕಲ ಭೂತ ಜಾತಗಳ ಎಲ್ಲಾ ವಿಚಾರಗಳನ್ನು ತಿಳಿಯುತ್ತಾನೆ.

12) **ಶ್ವೇತಾನರಾಗ್ನಿ :** ಲೋಕಪಾಲಕ, ದ್ಯಾವಾ ಪೃಥ್ವಿಗಳ ಮಧ್ಯೆ ಪ್ರವೇಶಿಸಿದಾಗ ಯಾಗಾದಿ ಕರ್ಮಗಳಿಂದ ಯಜಮಾನರು ಮರಣರಾಹಿತ್ಯ ಪಡೆಯುತ್ತಾರೆ. ಈ ಅಗ್ನಿಗೆ ಪ್ರೀತಿಪಾತ್ರರಾಗುತ್ತಾರೆ.

13) **ಶುಚಿರ್ವಾ :** ಅಗ್ನಿಜ್ವಾಲೆ ಶತ್ರುಗಳನ್ನು ಸೋಲಿಸುವಂತಹದು. ಸರ್ವತೋಮುಖ ಹರಡುತ್ತದೆ.

14) **ಸುಸಮಿದ್ಧ (ಜಾತವೇದ) :** ಋತ್ವಿಜರು ಹೆಚ್ಚಾಗಿ ಅರ್ಘ್ಯ ಅರ್ಪಿಸುತ್ತಾರೆ. ತ್ರಿಲೋಕ ಸ್ಥಿತ, ದ್ಯಾವಾ ಪೃಥ್ವಿಗಳನ್ನು ಎತ್ತಿ ಹಿಡಿದಿರುವವನು, ಮರಣ ರಹಿತ, ಸರ್ವ ವ್ಯಾಪಿ, ವಜ್ರಾಯುಧದಂತೆ ಯುದ್ಧದಲ್ಲಿ ಪ್ರಸಿದ್ಧ.

15) **ವಡವಾನಲಾಗ್ನಿ :** ಸಮುದ್ರದಲ್ಲಿ ವಡವಾನಲಾಗ್ನಿ ರೂಪದಲ್ಲಿ ಇದ್ದಾನೆ. ವೃಷ್ಟಿ, ಉದಕವು ಭೂಮಿಯ ಮೇಲಿನ ಉದಕದೊಂದಿಗೆ ಸೇರಿ ಸತತವಾಗಿ ನದಿಯಾಗಿ ಹರಿದು ಈ ಅಗ್ನಿಯನ್ನು ಸುತ್ತುವರಿದು ತೃಪ್ತಿಪಡಿಸುತ್ತದೆ.

16) **ವೈದ್ಯುತಾಗ್ನಿ :** ಪ್ರವಾಹ ಮಧ್ಯದಲ್ಲಿ ಅಗ್ನಿ ವೈದುತಾಗ್ನಿ ರೂಪದಲ್ಲಿ ಸ್ಥಾಪಿತನಾಗಿದ್ದಾನೆ.

17) **ವಿಶ್ವಾಯು ಅಗ್ನಿ :** ಅರಣಿಯಿಂದ ಮಥನನಾದ ಅಗ್ನಿಯ ಹೆಸರು ಇದು. ಯಜಮಾನನಿಗಾಗಿಯೇ ದೇವತೆಗಳನ್ನು ಕರೆತರುತ್ತಾನೆ.

18) **ರಕ್ಷೋಹ :** ಅಗ್ನಿ ರಶ್ಮಿಗಳು ಯಾರಿಂದಲೂ ಹಿಂಸಿತವಾಗಲಾರವು, ಶತ್ರುಗಳಿಂದ ತಡೆಯಲ್ಪಡದವು, ಸತತ ಚಲನೆಯಲ್ಲಿ ದಿವ್ಯ ತೇಜಸ್ಸಿನಿಂದ ಶೀಘ್ರ ಸಂಚರಿಸುವುವು. ಸರ್ವತ್ರ ಪ್ರಸರಿಸುವುವು. ಶತ್ರುಗಳನ್ನು ಚದುರಿಸಿ ರಾಕ್ಷಸರನ್ನು ನಾಶ ಮಾಡುವುದು. ಮಾನವ ವ್ಯವಹಾರಗಳನ್ನೆಲ್ಲಾ ನೋಡಬಲ್ಲದು. ಪ್ರಜ್ವಲಿತ ಅಗ್ರ ಭಾಗವುಳ್ಳ ಎಚ್ಚರವಂತ ಭಯಂಕರ ರೂಪದವನು, ಉಕ್ಕಿನಂತಹ ಎರಡು ಹರಿತ ದವಡೆಯವನು, ರಾಕ್ಷಸ ನಾಶಕ, ಎಲ್ಲಾ ತರಹ ದುಷ್ಟರನ್ನು ದಹಿಸಿ ನಾಶಮಾಡುತ್ತಾನೆ. ರಾಕ್ಷಸರು, ಪಿಶಾಚಿಗಳು, ಹಿಂಸಿಸುವ ಶತ್ರುಗಳನ್ನು ಜ್ವಾಲೆಯಿಂದ ನಾಶಮಾಡುತ್ತಾನೆ.

19) **ರುದ್ರನಾಮಕ ಅಗ್ನಿ :** ಭೂಮಿ ಆಕಾಶಗಳಲ್ಲಿ ರುದ್ರನಾಮಕ ಅಗ್ನಿ ಇದೆ. ಅರ್ಧ ಹವಿಸ್ಸನ್ನು ಈ ಅಗ್ನಿಯಿಂದ ಇಂದ್ರ ಮರುತ್‌ಗಳು ಪಡೆದರು.

20) **ಲೌಕಿಕಾಗ್ನಿ (ಯಜ್ಞಾಗ್ನಿ) :** ಯಜ್ಞವನ್ನು, ಧನವನ್ನು ಪೋಷಿಸುತ್ತಾನೆ.

★★★★★★★★★★★★★★★★★★★★★★★★★★★★★★★★★★★★★★

**ಆಶ್ರಮಗಳಲ್ಲಿ ಋಷಿಗಳು ಅಗ್ನಿಯೊಂದಿಗೆ ಆರಾಧಿಸಿದ ಇತರೇ ದೇವತೆಗಳು**

## ಆದಿತ್ಯ

ಆದಿತ್ಯ ರೂಪಿನಲ್ಲಿ ಅಗ್ನಿಯು ವಸಂತಾದಿ ಆರು ಋತುಗಳು, ಪೂರ್ವಾದಿ ದಶ ದಿಕ್ಕುಗಳಿಗೂ ಸೃಷ್ಟಿಕರ್ತ. ಆದಿತ್ಯನಿಂದ ಪ್ರಕಾಶ ಕರ್ಮಗಳು ನಡೆಯುತ್ತವೆ. ಪೃಥ್ವಿಯ ಕ್ಷೀರವನ್ನು ದೇವಲೋಕ ಅಮೃತವಾಗಿಸುವವನು, ಆದಿತ್ಯ ಸೂರ್ಯರ ಅನುಗ್ರಹದಿಂದ ಉದಕಗಳು ಅದೋಮುಖ ಹರಿದು ನದಿ ಪ್ರವಾಹ ಉಂಟಾಯಿತು. ಉದಯನಾಗಿ ಮಾನವರ ಸತ್ಯಾಸತ್ಯ ಕರ್ಮಗಳನ್ನು ಮೋಸಗಳನ್ನು ಆದಿತ್ಯನು ವೀಕ್ಷಿಸುತ್ತಾನೆ. ಯಜ್ಞ ಸ್ಥಾನದಲ್ಲಿದ್ದು ಅನ್ನ, ಗೃಹ, ಧನ, ರಕ್ಷಣೆ, ಗೋವು, ಪುತ್ರ ಪೌತ್ರರನ್ನು ಅನುಗ್ರಹಿಸುತ್ತಾನೆ. ಆದಿತ್ಯ ಮಹಾತ್ಮ್ಯದಿಂದ ಅಗ್ನಿಯ ಸಂಚಾರ ಸರಣಿಗಳು ಗೋಚರವಾಗುತ್ತವೆ. ಯಜ್ಞದಲ್ಲಿ ಸ್ಥಾಪಿತನಾಗಿರುತ್ತಾನೆ. (1) ಮರಣರಾಹಿತ್ಯವನ್ನು ಬೇಡಿದ್ದಾರೆ. ಪೂಜಿಸಿ, ಸ್ತುತಿಸಿ ಧನ ಬೇಡಿದ್ದಾರೆ.

## ಸೂರ್ಯದೇವ

ದೇವತೆಗಳು ಸೂರ್ಯನನ್ನು ಸೃಷ್ಟಿಸಿದರು. ಸಪ್ತ ಸಂಖ್ಯಾತ ಅಶ್ವಯುಕ್ತನಾದವನು, ಸಮೀಪ ಸಂಚಾರಿ, ಕ್ಷಯ ರಹಿತ, ಸರ್ವಜ್ಞ, ಆಲಸ್ಯ ರಹಿತ, ಸ್ವರ್ಗರಕ್ಷಕ, ಪ್ರಾಣಿ ಸಮೂಹಕ್ಕೆ ಪ್ರೇರಕ, ಊರ್ಧ್ವ ಮುಖ ಅಂತರಿಕ್ಷಸ್ಥ, ದ್ಯಾವಾ ಪೃಥ್ವಿ, ಅಂತರಿಕ್ಷಗಳನ್ನು ತನ್ನ ಕಿರಣಗಳಿಂದ ತುಂಬುತ್ತಾನೆ. ಅಗ್ನಿ ಜ್ವಾಲೆ ಪ್ರಸರಣದಿಂದ ಸೂರ್ಯ ಕಿರಣ ಸೇರಿ ಸಸ್ಯ, ಗಿಡ ಮೂಲಿಕೆಗಳನ್ನು ಪ್ರವೇಶಿಸಿ ಅನುಗ್ರಹಿಸುತ್ತಾನೆ. ಜಗತ್ ರಕ್ಷಕ, ★ ಅಂತರಿಕ್ಷದಿಂದ ಪ್ರೇತಗಳನ್ನು ಯಮಲೋಕಕ್ಕೆ ಓಡಿಸುತ್ತಾ ಬರುತ್ತಾನೆ. ಗಂಗಾದಿ ಸಪ್ತ ನದಿಗಳು, ಸಪ್ತ ಸರೋವರಗಳು ಸೂರ್ಯನಿಂದ ಬೆಳಗುತ್ತವೆ. ಸೂರ್ಯನ ಉತ್ಪತ್ತಿ ಸ್ಥಾನ ರಹಸ್ಯವಾದದು. **ಸೂರ್ಯನ ಗಡಿಯನ್ನು ಯಾರೂ ಅರಿಯಲಾರರು.** ನೀರಿನಲ್ಲಿ ಇರುವ ವಿಷದಿಂದ ರಕ್ಷಿಸುತ್ತಾನೆ. ವಿಷಧರ ಪ್ರಾಣಿಗಳಿಂದಲೂ ರಕ್ಷಿಸುತ್ತಾನೆ. ತನ್ನ ರಶ್ಮಿಗಳಿಂದ ರಸಾಕರ್ಷಿಸುತ್ತಾನೆ. ಹಾಗು ಉದಕ ಸುರಿಯುವಂತೆ ಮಾಡುತ್ತಾನೆ. ನದಿ ನಿರ್ಮಾತೃವೂ ಹೌದು. 10 ದಿಕ್ಕುಗಳೂ ಸೂರ್ಯನನ್ನು ಪ್ರಚೋದಿಸುತ್ತವೆ. **ಸತ್ಯಾತ್ಮಕ ದಿಕ್ಕುಗಳು ಮಾತೃರೂಪಿ. ಅಂತರಿಕ್ಷವು ಪಿತೃರೂಪಿ.**

ಪ್ರಾರ್ಥನೆ : ಅಂಧಕಾರವನ್ನು ನಾಶಮಾಡಲಿ, ಪ್ರಕಾಶ, ಆಹ್ಲಾದ ನೀಡಲಿ, ಯಜ್ಞ ಫಲ ಕರುಣಿಸಲಿ, ವೀರ ಪುತ್ರರನ್ನು ಅನುಗ್ರಹಿಸಲಿ. ಸೂರ್ಯನು ರೋಗ ನಾಶವನ್ನು ಮಾಡಿ ಆರೋಗ್ಯವನ್ನು ಅನುಗ್ರಹಿಸಲಿ.

**ಮಿತ್ರಾವರುಣರು :** ಕಾಂತಿದಾಯಕರು ಆಯಸ್ಸನ್ನು ನೀಡಲಿ, ಸತ್ಯಾತ್ಮಕ ಜೀವನ ನಡೆಸುವಂತಾಗಲಿ, ಶತ್ರುಗಳನ್ನು ನಾಶಮಾಡಲಿ, ರಕ್ಷಣೆ ನೀಡಲಿ, ಇವರಿಂದ ಧನ ಸಂಪತ್ತು ಬೇಡಿದ್ದಾರೆ. ಅನ್ನ, ಧನ, ಸಂಪತ್ತು, ರಕ್ಷಣೆ ದುಖ ನಿವಾರಣೆಗಾಗಿ ಬೇಡಿದ್ದಾರೆ. ಉದಾರ ದಾನಿಗಳನ್ನು ದಶ ದಿಕ್ಕುಗಳಿಂದಲೂ ಪ್ರೇರೆಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ವೈಶ್ವಾನರಾಗ್ನಿ

**ವಾಮನರು :** ಅಗ್ನಿ ಉತ್ತರ ವೇದಿಕೆಯಲ್ಲಿರುತ್ತಾನೆ. ಘೃತವು ದೇವತೆಗಳಿಗೆ ಅಮೃತವಾಗಿದೆ. ಅಗ್ನಿಯು ನಮ್ಮ ಪಾಪಗಳನ್ನು ನಾಶಮಾಡಿಯೇ ತೀರುತ್ತಾನೆ. ನಮ್ಮಿಂದ ಯಾಗಕರ್ಮಗಳನ್ನು ಇಚ್ಛಿಸುತ್ತಾನೆ. ಮಧುರ ಉದಕವು ಇಂದ್ರ, ಅಗ್ನಿ, ಸೂರ್ಯರಿಂದ ನೂರಾರು ಧಾರಗಳಲ್ಲಿ ನದಿಗಳ ಮೂಲಕ ಹರಿದು ಬರುತ್ತದೆ. ವರುಣನ ಭ್ರಾತೃ ರೂಪಿ ಅಗ್ನಿ, ಮಂತ್ರ, ಕಲ್ಪ ಬ್ರಾಹ್ಮಣ ಈ ಮೂರರ ಪ್ರಕಾರ ಮಾನವರಲ್ಲಿ ಇದ್ದಾನೆ. ಸ್ವರ್ಗದ ಬಾಗಿಲು ತೆಗೆಸಿ ಕರೆದೊಯ್ಯುತ್ತಾನೆ. ಸಜ್ಜನರ ಕಲ್ಯಾಣವನ್ನು ಮಾಡಿ ಅವರ ಶತ್ರುಗಳನ್ನು ನಾಶಮಾಡಿ ರಕ್ಷಣೆಯನ್ನು ನೀಡುತ್ತಾನೆ.

**ಅತ್ರಿ ಋಷಿ :** ಅಗ್ನಿಯು ಸೂರ್ಯರೂಪಿ, ಅಂತರಿಕ್ಷದಲ್ಲಿದ್ದಾನೆ. ಮಾನವರ ಮಧ್ಯೆ ಸ್ಥಿರನಾಗಿದ್ದಾನೆ. ಚಕ್ರದ ಹೊರವಲಯದಂತೆ ದೇವತೆಗಳನ್ನು ಸುತ್ತುವರಿದಿದ್ದಾನೆ. ಸರ್ವರಿಂದಲೂ ಆರಾಧಿತನಾಗಿದ್ದಾನೆ. ಘೃತದಿಂದ, ಹವಿಸ್ಸಿನಿಂದ ತೃಪ್ತಿಹೊಂದುತ್ತಾನೆ. ನಾನಾ ರೂಪಿನಿಂದ ಸಕಲವನ್ನು ವ್ಯಾಪಿಸಿದ್ದಾನೆ. ಸಮಸ್ತ ಅನ್ನವನ್ನು ಪಕ್ವಮಾಡುತ್ತಾನೆ. ಉತ್ಪನ್ನ ಕಾಲದಲ್ಲಿ ''ವರುಣ''ನಾಗಿರುತ್ತಾನೆ. ಪ್ರಜ್ವಲಿಸಿದಾಗ ''ಮಿತ್ರ''ನಾಗಿರುತ್ತಾನೆ. ಯಜಮಾನನ ಪಾಲಿಗೆ ಸ್ವಯಂ ''ಇಂದ್ರ''ನೇ ಆಗಿರುತ್ತಾನೆ. ಸುಖ – ಧನ ನೀಡುತ್ತಾ ನೆ.

**ಭರಧ್ವಾಜರು :** ವೈಶ್ವಾನರಾಗ್ನಿಯು ಸ್ವಮಹಾತ್ಮ್ಯದಿಂದಲೇ ಅಂತರಿಕ್ಷವನ್ನು ಆಕ್ರಮಿಸಿದ್ದಾನೆ. ಮಾನವ, ವೈದಿಕ ಕರ್ಮಗಳನ್ನು ಸಂರಕ್ಷಿಸಿ ಅಂತರಿಕ್ಷ ನಿರ್ಮಾಣ ಮಾಡಿದ್ದಾನೆ. ಕ್ರಾಂತಿದರ್ಶಿ, ಪೂರ್ಣ ಪ್ರಕಾಶಿ, ಮಹತ್‌ರೂಪಿ, ಯಜ್ಞ ನಿರ್ವಾಹಕ, ಆರಣೀಯಿಂದ ಉತ್ಪನ್ನನಾದವನು, ಮಾನವರ ಅತಿಥಿ, ಎಲ್ಲಾ ದೇವತೆಗಳು ವೈಶ್ವಾನರಾಗ್ನಿಯನ್ನು ಸೇವಿಸುತ್ತಾರೆ. ಅಂಧಕಾರದಲ್ಲಿ ಅಡಗಿರುವ ಈ ಅಗ್ನಿಗೆ ಸಕಲ ದೇವತೆಗಳು ಬೆದರಿ ನಡಗುತ್ತಾರೆ. ಇತರೇ ಎಲ್ಲಾ ಅಗ್ನಿಗಳು ವೈಶ್ವಾಗ್ನರಾಗ್ನಿಯ ಅವಯವಗಳೇ ಆಗಿವೆ. ಯಜ್ಞಾರ್ಹರು, ರಕ್ಷಕರು, ಕರ್ಮಕರ್ತರು, ಕರ್ಮಪಾಲಕರು, ಕಾಮವರ್ಷಕರು, ಮರಣ ರಹಿತರು, ಅಂಧಕಾರವನ್ನು ನಾಶ ಮಾಡುತ್ತಾರೆ. ಮನಸ್ಸಿಗಿಂತಲೂ ವೇಗಶಾಲಿಗಳು, ಜಂಗಮಾತ್ಮಕ ಪ್ರಾಣಿಗಳ ನಡುವೆ ದರ್ಶನಾರ್ಹ ಹಗಲೂ ರಾತ್ರಿಗಳಿಂದ ಎಲ್ಲರಿಗೂ ಕತ್ತಲನ್ನು ಹೋಗಲಾಡಿಸುತ್ತಾರೆ. ಋಷಿಗಳಿಗೂ ಅಗ್ನಿಯ ಸ್ವರೂಪ, ಗುಣಗಳು ಸರಿಯಾಗಿ ತಿಳಿದಿಲ್ಲ, ತಿಳಿಯಲು ಅವರ ಮನಸ್ಸುಗಳು ಯಾವಾಗಲೂ ಕಾತುರತೆಯಿಂದಿರುತ್ತದೆ.

**ವಸಿಷ್ಟರು :** ವೈಶ್ವಾನರಾಗ್ನಿಯು ಯಾರಿಗೂ ಬಗ್ಗದವನು, ಶತ್ರುಗಳನ್ನು ಸದೆಬಡಿದು ಅವರ ಪಟ್ಟಣವನ್ನು ನಾಶಮಾಡುತ್ತಾನೆ. ಅಂತರಿಕ್ಷದಲ್ಲಿ ಸೂರ್ಯರೂಪಿನಲ್ಲಿದ್ದಾನೆ. ಸೂರ್ಯೋದಯವಾದೊಡನೆ ಕತ್ತಲನ್ನು ಓಡಿಸಿ ದ್ಯುಲೋಕ, ಅಂತರಿಕ್ಷ ಭೂಲೋಕಗಳನ್ನು ಪ್ರಕಾಶಗೊಳಿಸಿ ಅಂತರಿಕ್ಷದಲ್ಲಿ ಅಲಂಕೃತನಾಗಿರುತ್ತಾನೆ. ಕತ್ತಲಲ್ಲಿ ಮಲಗಿದ್ದವರು ಸ್ತುತಿಸಿದಾಗ ಅವರನ್ನು ಪ್ರಜ್ಞಾವಂತರನ್ನಾಗಿ ಮಾಡಿ ಅವರು ತಮ್ಮ ಕಾರ್ಯಗಳನ್ನು ನಿರ್ವಹಿಸುವಂತೆ ಮಾಡುತ್ತಾನೆ. ಸಕಲ ಭೂತ ಜಾತಗಳನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಾ ಶತ್ರುಗಳಿಂದ ಕೇಡು ಬಯಸುವವರಿಂದ ರಕ್ಷಣೆ ನೀಡುತ್ತಾನೆ. ಉಷೋ ದೇವಿಯನ್ನು ಸೂರ್ಯ ಪತ್ನಿಯನ್ನಾಗಿಸಿದ್ದು ವೈಶ್ವಾನರಾಗ್ನಿಯೇ. ಸಕಲ ಕಲ್ಯಾಣಗಳಿಗಾಗಿ ವೈಶ್ವಾನರಾಗ್ನಿಯನ್ನು ಪ್ರಾರ್ಥಿಸಿದ್ದಾರೆ.

**ಕಾಣ್ವರು :** ಇಂದ್ರ, ಆದಿತ್ಯ, ವಾಯು ಇವರೊಡನೆ ಸೇರಿ ವೈಶ್ವಾನರ ಎಂಬ ಹೆಸರಿನಿಂದ ತೇಜಸ್ಸು ಉತ್ಪತ್ತಿ ಮಾಡುತ್ತಾನೆ. ಕಂದು, ಕುಂಕುಮ ವರ್ಣದ ಕುದುರೆ ಅಗ್ನಿಯದು. ನಾನಾ ಓಷದಿಗಳಲ್ಲಿ ಸುಪ್ತನಾಗಿ ಅಡಗಿದ್ದಾನೆ. ಜ್ಞಾನ ತೇಜಸ್ಸಿನಿಂದ ಋಷಿಗಳಲ್ಲಿ, ಯಾಜ್ಞಿಕರಲ್ಲಿ ಪ್ರಕಾಶಿಸುತ್ತಾನೆ.

**ಮಂಡಲ ಹತ್ತರಿಂದ :** ಓಷಧಿಗಳಲ್ಲಿ ಸರ್ವವ್ಯಾಪಿ, ಜ್ಯೋತಿರೂಪಿನಲ್ಲಿದ್ದಾನೆ. ಆರಾಧಿಸಿ, ಸ್ತುತಿಸಿರಿ ಎಂದು ಹೇಳಿದ್ದಾರೆ. ಆರಣಿಯಿಂದ ಉತ್ಪನ್ನನಾದವನು, ಸಕಲ ಮಾನವರಿಗೂ ಒಡೆಯ, ಸಕಲ ಭೂತ ಜಾತಗಳಿಗೆ ಪ್ರಭು, ಆದಿತ್ಯ ಮಂಡಲವೇ ದೇವತೆಗಳ ಸಮೂಹರೂಪ, ಗೋವುಗಳಿಂದ ಸೇವಿತ, ಉದಕ ಸ್ಥಾನೀಯ, ಸ್ತಂಭದಂತೆ ಅಂತರಿಕ್ಷವನ್ನು ಎತ್ತಿ ಹಿಡಿದಿದ್ದಾನೆ. ದೇವ ಮಾನವರಿಗೆ ಸಮಾನ, ಸರ್ವತ್ರ ಸಂಚಾರಿ, ಪ್ರಕಾಶಮಾನಿ, ಸ್ತೋತ್ರಗಳಿಂದ ತೃಪ್ತನಾಗುತ್ತಾನೆ. ಹೃದಯದಲ್ಲಿ ವೈಶ್ವಾನರಾಗ್ನಿಯಾಗಿದ್ದಾನೆ. ಹೊಟ್ಟೆಯಲ್ಲಿ ಜಠರಾಗ್ನಿಯಾಗಿ ಆಹಾರ ಪಚನವನ್ನು ಮಾಡುತ್ತಾನೆ. ಮುಖದಲ್ಲಿ ತೇಜೋರೂಪಿನಲ್ಲಿದ್ದಾನೆ. ಈ ವೈಶ್ವಾನರಾಗ್ನಿಯನ್ನು ''ವಾಯು''ವು ತಂದಿದ್ದಾರೆ. ಸಜ್ಜನರ ಪಾಲಕ, ಧನದಾತ, ದೇವತೆಗಳು ಮೊದಲು ದ್ಯಾವಾಪೃಥ್ವಿಗಳನ್ನು ನಂತರ ಅಗ್ನಿ ಅನಂತರ ಹವಿಸ್ಸು ಇವುಗಳನ್ನು ಸ್ತುತಿಪೂರ್ವಕವಾಗಿ ಉತ್ಪನ್ನ ಮಾಡಿದರು. ದೇವತೆಗಳಾದಿಯಾಗಿ ಸಮಸ್ತ ಲೋಕಗಳು ಸಂತೋಷಗೊಳ್ಳುತ್ತವೆ. ಔಷಧಿಗಳು ಪಕ್ವಗೊಳ್ಳುತ್ತವೆ. ಪಕ್ಷಿ ಪ್ರಾಣಿಗಳು, ವೃಕ್ಷಗಳು ತೃಪ್ತಿ ಹೊಂದುತ್ತವೆ. ವೈಶ್ವಾನರಾಗ್ನಿಯನ್ನು ಸ್ತುತಿಸಿ, ಪೂಜಿಸಿ, ಹವಿಸ್ಸನ್ನು ಅರ್ಪಿಸಿ ಮನೋಭಿಷ್ಟಗಳನ್ನು ಪಡೆಯಲು ಋಷಿಗಳೆಲ್ಲರು ಒಮ್ಮತದಿಂದ ಅಪ್ಪಣೆ ಕೊಡಿಸಿದ್ದಾರೆ.

**ಸವಿತೃ:** ಅಂಧಕಾರವನ್ನು ಕಳೆಯುವ ದೇವತೆ. ಧನ ರಕ್ಷಣೆ ಮಾಡುವವರು, ಭೂತ, ಭವಿಷ್ಯತ್, ವರ್ತಮಾನವನ್ನು ತಿಳಿದಿರುವ ಸವಿತೃವಿನ ಸ್ವರೂಪ ಯಾರಿಗೂ ತಿಳಿಯದು. ನಾಶರಹಿತ, ಚಂದ್ರ, ನಕ್ಷತ್ರಗಳ ಪ್ರಕಾಶಕ್ಕೆ ಸವಿತೃವೇ ಕಾರಣ. ಸವಿತೃ ವರ್ಗಕ್ಕೆ ಹಸು ಕರುಗಳು ಸೇರಿವೆ. ತೃಣವನ್ನು ಭಕ್ಷಿಸಿ ಉದಕವನ್ನು ಕುಡಿದು ಹಾಲನ್ನು ಕೊಡುತ್ತಾ ಯಾಜ್ಞಿಕರನ್ನು ಧನವಂತರನ್ನಾಗಿ ಮಾಡುತ್ತವೆ. ನಾಲ್ಕು ದಿಕ್ಕಿನಿಂದಲೂ ಧನದಾತಳು, ಆಯಸ್ಸು ಅನುಗ್ರಹಿಸುವವಳು, ನಮ್ಮ ಸಕಲ ರೋಗಗಳನ್ನು ನಾಶಮಾಡುವ ದೇವತಾತ್ಮಳು.

**ವರುಣ :** ಮಹಾ ಪರಾಕ್ರಮಿ, ಅದಿತಿಯ ಪುತ್ರ, ಯಾರೂ ಎದುರಿಸಲಾರರು, ಸೂರ್ಯನಿಗೆ ಉತ್ತರಾಯಣ, ದಕ್ಷಿಣಾಯನ ಮಾರ್ಗಗಳನ್ನು ಕಲ್ಪಿಸಿದವನು ವರುಣನೇ. ಚಂದ್ರನನ್ನು ರಾತ್ರಿಯಲ್ಲಿ ಪ್ರಕಾಶಿಸುವಂತೆ ಮಾಡಿದವನು ವರುಣನೇ. ಅನಿಷ್ಟಪಾಪ ದೇವತೆಗಳನ್ನು ದೂರಮಾಡುತ್ತಾನೆ. ಅಗ್ನಿಯು ವರುಣನಿಗೆ ಹೇಳಿ ನಮ್ಮ ಪಾಪಗಳನ್ನು ಪರಿಹರಿಸಲಿ, ಕ್ರೋಧವನ್ನು ಬಿಟ್ಟು ರೋಗ ಪರಿಹರಿಸಲಿ, ಧನದ ಉತ್ಕೃರ್ಷಣೆಗೆ, ರಕ್ಷಣೆಗೆ ಆಯಸ್ಸಿಗಾಗಿ ಬೇಡಿದ್ದಾರೆ.

**ಆರ್ಯಮ :** ಅಹಿಂಸಕರು, ಆಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ, ಧನಸಂಪತ್ತನ್ನು ನೀಡುತ್ತಾರೆ. ಬಂದು-ರೂಪರು, ಈ ರಹಸ್ಯ ಹೆಸರು ಹೊಂದಿರುವ ಅಗ್ನಿಯು ಕನ್ಯೆಯೊಡನೆ ಸಂಬಂಧ ಹೊಂದಿದಾಗ ''ಆರ್ಯಮ'' ಆಗುತ್ತಾನೆ. ಎಲ್ಲಾ ದೇವತೆಗಳಿಗೂ ಸಾಮೂಹಿಕ ಪೂಜೆ ಮಾಡಲು ಇವರು ಹೇಳಿದ್ದಾರೆ. ನಮ್ಮ ಅಪೇಕ್ಷೆಗಳನ್ನು ಈಡೇರಿಸಲು ಪ್ರಾರ್ಥಿಸಿದ್ದಾರೆ.

**ಅದಿತಿ :** ಮಿತ್ರಾವರುಣರ ಮಾತೆ. ಅಸುರರ ನಾಶಕರು, ಸುಖ ಸಂತೋಷ ನೀಡುವವಳು, ಸಂಪತ್ತನ್ನು ರಕ್ಷಿಸುವವಳು, ಅದಿತಿಯು ಅಗ್ನಿಯು ಅನುಗ್ರಹಿಸಿದ ಧನವನ್ನು ರಕ್ಷಿಸಲು ಕೇಳಿದ್ದಾರೆ.

**ಅಹೋರಾತ್ರಿ ದೇವತೆಗಳು :** ಯಜ್ಞ ನಿರ್ಮಾಣಕಾರರು, ಹವಿರಪೇಕ್ಷಿಗಳು. ಇವರು ಆಗಮಿಸಲಿ, ಯಜ್ಞ ಭಾಗಿಗಳಾಗಲಿ, ಇವರು ಧನವತಿಯರು, ಪೂಜಾರ್ಹರು, ಅಪೇಕ್ಷಿತಗಳನ್ನು ಈಡೇರಿಸುತ್ತಾರೆ. ದೇವತೆಗಳ ಪಕ್ಕದಲ್ಲಿ ಇರುತ್ತಾರೆ. ಇವರು ಬೇರೆ ಬೇರೆ ಸಂಚರಿಸುತ್ತಾರೆ. ಹೊಂಬಣ್ಣದ ಸೂರ್ಯಪುತ್ರಿಯರು, ಹಗಲಿನಲ್ಲಿ ಸೂರ್ಯನೊಂದಿಗೆ, ರಾತ್ರಿಯಲ್ಲಿ ನಕ್ಷತ್ರಗಳಿಂದ ಶೋಭಿಸುತ್ತಾರೆ. ಇವರನ್ನು ಆಹ್ವಾನಿಸುತ್ತಾರೆ. ಅಗ್ನಿಯ ಪೂಜೆ, ಸ್ತುತಿ, ಯಜ್ಞ ಕರ್ಮಗಳನ್ನು ಆಚರಿಸುವವರು ಕ್ಷಿಪ್ರವಾಗಿ ರಕ್ಷಣೆ, ಅನ್ನ ಪುತ್ರ, ಪೌತ್ರರನ್ನು ಪಡೆಯುತ್ತಾರೆ. ★ **ಅಗ್ನಿಯ ಅನುಗ್ರಹ ಪಡೆಯುವುದು ಮಹಾ ಕಷ್ಟಕರವಾದದ್ದು. ವಕ್ರಗಮನಿ ಸರ್ಪವನ್ನು ಹಿಡಿದಂತೆ ಪ್ರಯಾಸಕರವಾದದು.**

**ಇಂದ್ರ :** ಅಂತರಿಕ್ಷ ಬೀಳದಂತೆ ಹಿಡಿದಿದ್ದಾನೆ. ಮಾನವರ ಇಷ್ಟಾರ್ಥಗಳನ್ನು ಪೂರೈಸುತ್ತಾನೆ. ಮರುತ್‌ಗಳಿಗಿಂತ ವೇಗವುಗಳ್ಳವನು, ಸೂರ್ಯನನ್ನು ಸ್ತುತಿಸುವವರು ಇಂದ್ರನ ರಕ್ಷಣೆ ಪಡೆಯುತ್ತಾರೆ. ಮಳೆ ಸುರಿಸುವವನು ಇಂದ್ರನೇ. ಓಷದಿಗಳು ರಸಪೂರ್ಣವಾಗಿರುವುದು ಇಂದ್ರನಿಂದಲೇ. ಸೋಮದಿಂದ ಉತ್ತೇಜಿತನಾಗಿ ರಾಕ್ಷಸರ, ವಂಚಕರ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತಾನೆ. ಅಹಿಂಸಾತ್ಮಕ ಯಜ್ಞಕ್ಕೆ ಇಂದ್ರನು ಬರಲಿ, ಗಾಯತ್ರಿ ರೂಪಿ ಸೋಮವನ್ನು ಸ್ವೀಕರಿಸಲಿ. ಇಂದ್ರನು ಅನ್ನದಾತ, ಧನದಾತ, ಸುಖದಾತ, ರಕ್ಷಕ, ಬಾಹುಗಳಿಂದ ಧನ ಹಂಚುವನು, ವೃಷ್ಟಿಧಾರೆ ಸುರಿಸುವವನು, ಪಾಪನಾಶಕರು, ವಸತಿ ದಾಯಕರು ಹಾಗೂ ಧನಾದಿಪತಿ. ಇವನಲ್ಲಿ ಮೇಲಿನವುಗಳೆಲ್ಲವನ್ನು ಬೇಡಿದ್ದಾರೆ.

**ಅಬ್ ದೇವತೆಗಳು :** ಸುಖದಾತೃಗಳು, ವಸತಿ ದಾಯಕರು, ಅನ್ನಕ್ಕೆ ಯಜಮಾನನನ್ನು ಪಾತ್ರರನ್ನಾಗಿ ಮಾಡುತ್ತಾ ಮಾನವರನ್ನು ರಮಣೀಯ ದರ್ಶನ ಯೋಗ್ಯರನ್ನಾಗಿ ಮಾಡುತ್ತಾನೆ. ಅಜ್ಞಾನದಿಂದ ಮಾಡಿದ ಪಾಪಗಳನ್ನು ದ್ರೋಹವನ್ನು, ಕೆಟ್ಟ ಮಾತುಗಳನ್ನು, ಎಲ್ಲವನ್ನೂ ಹರಿಯುವ ನೀರಿನ ಪ್ರವಾಹದಲ್ಲಿ ಕೊಚ್ಚಿ ಹೋಗುವಂತೆ ಮಾಡುತ್ತಾರೆ. ಅಬ್ ದೇವತೆಗಳು ಯಜಮಾನನನ್ನು ರೋಗ ರಹಿತರನ್ನಾಗಿ ಮಾಡಲಿ.

**ಯೂಪ :** ಯೂಪ ಸ್ತಂಭದಲ್ಲಿ ಅಗ್ನಿಯು ಅಡಗಿದ್ದಾನೆ. ಮೊದಲು ಯೂಪಸ್ತಂಭಕ್ಕೆ ಪೂಜೆ ಸಲ್ಲಿಸಲು ಹೇಳಿದ್ದಾರೆ. ಸಮೀಪದಲ್ಲಿರಲಿ ಮೊದಲು ಪೂಜೆ ಸಲ್ಲಿಸಲು ಹೇಳಿದ್ದಾರೆ. ಯೂಪಾಭಿಮಾನಿ ಅಗ್ನಿಯು ಸಮೀಪದಲ್ಲಿರಲಿ, ಕರ್ಮವನ್ನು ಅನುಮೋದಿಸಲಿ, ಚೋರರು, ನಿಂಧಕರು, ವಂಚಕರು, ಶತ್ರುಗಳು, ಕಚ್ಚಿ ಹಿಂಸೆ ಮಾಡತಕ್ಕ ಪ್ರಾಣಿಗಳು ಇವೆಲ್ಲರಿಂದ ಅಗ್ನಿ ಪಾರುಮಾಡುತ್ತಾನೆ. ಯೂಪ ರೂಪಿನಿಂದ ವನಸ್ಪತಿ ದೇವನು ದೇವತೆಗಳಿಗೆ ಅನ್ನವನ್ನು ತೆಗೆದುಕೊಂಡು ಹೋಗುತ್ತಾನೆ. ಯಜ್ಞ ಕಾಲದಲ್ಲಿ ಅಲ್ಲಿ ವ್ಯಾಪಕನಾಗಿ ಇರುತ್ತಾನೆ.

**ಧ್ವಾರಾಭಿಮಾನಿ ದೇವತೆಗಳು :** ಇವರು ಸಂಚಾರ ಧನವುಳ್ಳವರು, ಯಜ್ಞಕರ್ಮ ಪೂರ್ಣ ನೆರವೇರಿಸಲು ದಾರಿ ಮಾಡಿಕೊಡಲಿ.

**ಬರ್ಹಿ :** ಸುಂಗಧಯುಕ್ತ ಪ್ರಕಾಶಮಾನ, ಕ್ರೋಧರಹಿತ, ಹವಿಸ್ಸು ಇಚ್ಛಿಸುವವನು, ಇಂದ್ರಾದಿಗಳನ್ನು ಪೂಜಿಸುವವನು, ಸಂಪತನ್ನು ವೃದ್ಧಿಸುವವನು, ಇಷ್ಟಾರ್ಥವನ್ನು ಕರುಣಿಸುವವನು, ಆಗಿದ್ದಾನೆ. ಯಜ್ಞವನ್ನು ಅನುಮೋದಿಸಲಿ, ದೇವತೆಗಳಿಗೆ ತಲುಪಿಸಲಿ, ಧನದಾತನಾಗಲಿ.

**ದ್ಯಾವಾಪೃಥ್ವಿ :** ಮಳೆಗೆರೆದು ಯಜ್ಞ ಸುಗಮಗೊಳಿಸುತ್ತಾರೆ. ದೇವ ಮಾನವ ಪೋಷಕರು, ಉದಕ ಪ್ರವಹಿಸುವಂತೆ ಮಾಡುವವರು, ಜಗತ್ತಿಗೆ ಮಾತಾಪಿತೃಗಳು, ಯಜ್ಞ ಸ್ಥಾನದಲ್ಲಿ ಇರುವವರು, ಲೋಕ ಪಾಲಕರು, ಅಂತರಿಕ್ಷವು ಸ್ತಂಭದಂತೆ ನಿಂತಿದೆ. ಗೋಮಾತೆಯ ಪೂಜೆ ಮಾಡಿ ಅನ್ನ ರಕ್ಷಣೆ, ಧನ, ಸಂಪತ್ತು ಅಶ್ವ ಗೋವು, ಪುತ್ರ, ಪೌತ್ರರನ್ನು ಪಡೆಯುತ್ತಾರೆ. ಶಾಪ ಪಡೆಯುವಂತಹ, ಪಾಪ ಕರ್ಮ ಮಾಡುವಂತಹ, ಕ್ಷುದ್ರನಾಗುವಂತಹ ಕಾರ್ಯಗಳನ್ನು ಅಗ್ನಿಯು ಯಜಮಾನನಿಂದ ಮಾಡಿಸುವುದಿಲ್ಲ.

**ಸರಸ್ವತಿ:** ಮಾತೃರೂಪಿ, ಆದಿತ್ಯ ಸಂಬಂಧಿ, ನಮ್ಮ ಬುದ್ಧಿ ಪರಿಷ್ಕರಿಸಲಿ, ಯಾಜ್ಞಿಕರು, ಸಂಪತ್ತು ಪಡೆಯುವಂತೆ ಪ್ರೇರಿಸಲಿ, ಮಾಧ್ಯಮಿಕ ಸ್ಥಾನ ದೇವತೆಗಳೊಂದಿಗೆ ಯಜ್ಞಕ್ಕೆ ಬರಲಿ, ದರ್ಭಾಸೀನಳಾಗಲಿ, ಸರಸ್ವತಿಯು ನದಿಗಳಲ್ಲಿ ಮಾತೃಪ್ರಾಯಳು, ಇಷ್ಟಾರ್ಥ ಪ್ರದಳು, ಋತ್ವಿಕರಿಗೆ ಸುಖದಾಯಿ, ಮರುತ್‌ಗಳಿಂದ ಒಡಗೂಡಿದವಳು, ಎಲ್ಲಿದ್ದರೂ ಉದಕ ಸೇಚನ ಮಾಡಲಿ.

**ಭಾರತಿ :** ಯಾಗ ರಕ್ಷಿಸಲಿ, ಹವಿಸ್ಸು ಸ್ವೀಕರಿಸಲಿ, ಭಕ್ತರಿಗೆ ಧನ ನೀಡಲಿ.

**ಇಳಾ :** ದೇವತಾತ್ಮಳು, ನಮ್ಮನ್ನು ರಕ್ಷಿಸಲಿ, ಸಂಪತ್ತನ್ನು ಅನುಗ್ರಹಿಸಲಿ.

**ಮರುತ್ :** ಪ್ರೇತಗಳನ್ನು ಯಮಲೋಕಕ್ಕೆ ಅಟ್ಟುತ್ತಾರೆ. ಅಗ್ನಿಯಿಂದ ಮರುತ್ ದೇವತೆಗಳು ಹುಟ್ಟಿದರು. ಸೂರ್ಯಮಂಡಲದ ಮೇಲ್ಭಾಗದಲ್ಲಿ ಇರುವವರು, ಧನವಂತರು, ರುದ್ರ ಪೃಷ್ಣಿ ಪುತ್ರರು, ಜಿಂಕೆ ವಾಹನದವರು, ಉದಕ ಉತ್ಪನ್ನರು, ಬಲಶಾಲಿಗಳು, ಆಕಾಶಗಮನವುಳ್ಳವರು, ಮರುತ್‌ಗಳು ಬರುವಾಗ ಸಕಲ ಭೂತ ಜಾತಗಳು ಕಂಪಿಸುತ್ತವೆ. ವಾಸಗೃಹ, ಧನ, ಪುತ್ರ ಪೌತ್ರರು ರಕ್ಷಣೆಗಳನ್ನು ಬೇಡಿದ್ದಾರೆ.

**ಅಶ್ವಿನಿ ದೇವತೆಗಳು :** ರುದ್ರ ಪುತ್ರರು, ರಾಕ್ಷಸ-ನಿವಾಸ, ಭೂತ ರಾತ್ರಿ ಕೊನೆಗಾಣಿಸಲಿ, ಇವರು ಕಾಮವರ್ಷಕರು, ಉಷೋದಯದಲ್ಲಿ ಸೋಮ ಸೇವಿಸಿ ಹರ್ಷಿಸಿ ಅಶ್ವರಥದಲ್ಲಿ ಯಜ್ಞ ಭೂಮಿಗೆ ಬರುತ್ತಾರೆ. ದೇವ ಸಂಚಾರ ಮಾರ್ಗದಲ್ಲಿ ಯಜ್ಞಕ್ಕೆ ಬರುವವರು, ಮರಣ ಧರ್ಮ ರಹಿತರು, ಅಂಧಕಾರ ನಾಶಕರು, ಇವರನ್ನು ರೋಗನಿವಾರಣೆಗೆ, ರಕ್ಷಣೆಗಳಿಗೆ ಬೇಡಿದ್ದಾರೆ. ಆಯುಸ್ಸನ್ನು ಕರುಣಿಸಲಿ ಎಂದು ಕೇಳಿಕೊಂಡಿದ್ದಾರೆ.

**ತ್ವಷ್ಟ :** ದೇವತೆಗಳ ಮಧ್ಯೆ ಕುಳಿತಿರುತ್ತಾರೆ. ಪ್ರಜೆಗಳನ್ನು ಸೃಷ್ಟಿಸಿ ಪೋಷಿಸುವರು, ಆಂಗೀರಾ ವಂಶಸ್ಥರೊಡನೆ ಸೇರಿದ್ದಾರೆ. ಸುಂದರರು, ಧನಪ್ರದರು. ಅನೇಕ ವಸ್ತುಗಳ ನಿರ್ಮಾತೃ ಅನ್ನಕ್ಕಾಗಿ ಇವರನ್ನು ಬೇಡಿದ್ದಾರೆ.

ಋಷಿಗಳು ಒಂದೊಂದು ಆಶ್ರಮದಲ್ಲಿ ಒಂದೊಂದು ಸಲ ಅವರಿಗೆ ಅವಶ್ಯಕತೆ ಇದ್ದಷ್ಟು ದೇವತೆಗಳನ್ನು ಆಹ್ವಾನಿಸಿ, ಪೂಜಿಸಿ, ಹವಿಸ್ಸು, ಸೋಮಾದಿಗಳನ್ನು ಅರ್ಪಿಸಿ, ತೃಪ್ತಿಪಡಿಸಿ ಅವರಿಂದ ತಮಗೆ ಬೇಕಾದುದನ್ನು ಪಡೆಯುತ್ತಿದ್ದರು. ಕೆಲವು ಋಷಿಗಳು 33 ದೇವತೆಗಳನ್ನೂ ಅವರ ಪತ್ನಿಯರೊಂದಿಗೆ ಆಹ್ವಾನಿಸಿದ್ದಾರೆ.

★★★★★★★★★★★★★★★★★★★★★★★★★★★★★★★★★★★★★

# ಅಗ್ನಿದೇವರು

## ಮಂಡಲ ಹತ್ತು : 51, 52 ಮತ್ತು 124ನೇ ಸೂಕ್ತಗಳಿಂದ

51 : ಅಗ್ನಿಯು ಮೃತ್ಯುವಿಗೆ ಹೆದರಿ ಜಲದಲ್ಲಿ ಅಡಗಿದ್ದಾನೆ. ದೇವತೆಗಳು ಹವಿಸ್ಸಿಲ್ಲದೆ ಅಗ್ನಿಯನ್ನು ಹುಡುಕಿ ಪತ್ತೆ ಮಾಡಿ ವರುಣನನ್ನು ಬೇಟಿ ಮಾಡುತ್ತಾರೆ.

ವರುಣ : ಅಗ್ನಿಯನ್ನು ದೇವತೆಗಳಿಗೆ ಒಳ್ಳೆಯದನ್ನು ಮಾಡಲು, ಹವಿಸ್ಸನ್ನು ವಹಿಸಲು ಪ್ರಾರ್ಥಿಸುತ್ತಾನೆ.

(1) ಅಗ್ನಿಯು ಹವಿಸ್ಸಿನ ಸಾರಭೂತ ಭಾಗ ತನಗೆ ಸೇರಬೇಕೆನ್ನುತ್ತಾನೆ. (2) ಉದಕಗಳಲ್ಲಿ ಸಾರಭೂತ ಆಜ್ಯ ತನಗೆ ಸೇರಬೇಕೆನ್ನುತ್ತಾನೆ. (3) ಓಷಧಿಗಳಲ್ಲಿ ಪುರುಷ ಭಾಗ ತನಗೆ ಸೇರಬೇಕೆನ್ನುತ್ತಾನೆ. (4) ಮರಣರಾಹಿತ್ಯವು ತನಗೆ ಸಿಕ್ಕಿ ಬಹುಕಾಲ ಬದುಕುವಂತಾಗಿ ಶಕ್ತಿಯನ್ನೂ ನೀಡಲು ಆಶಿಸುತ್ತಾನೆ.

ದೇವತೆಗಳು : ದೇವತೆಗಳೆಲ್ಲರೂ ಭರವಸೆ ಕೊಟ್ಟು ಮರಣ ರಾಹಿತ್ಯ ಸಕಲ ಯಜ್ಞವು ಅರ್ಪಿತವಾಗಲೆಂದು ವರವನ್ನಿತ್ತರು. ನಾಲ್ಕು ದಿಕ್ಕುಗಳು ಅಗ್ನಿಗೆ ನಮಸ್ಕರಿಸುವಂತೆಯೂ ಅನುಗ್ರಹಿಸುತ್ತಾರೆ. ಅಗ್ನಿಯ ರಹಸ್ಯ ಸ್ಥಾನಗಳು ಹೀಗಿವೆ : (1) ಪೃಥ್ವಿಯಲ್ಲಿ ಜಾತವೇದೋ ರೂಪಿ (1) ಅಂತರಿಕ್ಷ - ಸ್ವರ್ಗ, ವಾಯು, ಆದಿತ್ಯ, ಆಪ, ಓಷಧಿ, ವನಸ್ಪತಿ, ಪ್ರಾಣಿ, ಶರೀರ, ಇವುಗಳಲ್ಲಿರುವುದು ಯಮದೇವರಿಗೆ ಮಾತ್ರ ಗೊತ್ತು ಎಂದಿದ್ದಾರೆ.

52 : ಸಕಲ ಮರುತ್‌ಗಳ ಪ್ರೇರಣೆಯಂತೆ ಹವಿರ್ವಾಹನ ಕಾರ್ಯಕ್ಕೆ ಯಜ್ಞಾರ್ಥ ಹೋತೃ ಸ್ಥಾನಕ್ಕೆ ಅಗ್ನಿ ಆರಿಸಲ್ಪಟ್ಟಿದ್ದಾನೆ. ಅಶ್ವಿನಿ ದೇವತೆಗಳು ಅಧ್ವರ್ಯು ಆಗಿ, ಸೋಮನು ಬ್ರಹ್ಮನಾಗಿ - ದೇವತೆಗಳಿಗೆ ಆಹುತಿಯಾಗಲೆಂದು ನಿರ್ಣಯವಾಯಿತು. ಅನಂತರ 3339 ದೇವತೆಗಳು ಅಗ್ನಿಯನ್ನು ಗೌರವದಿಂದ ಪೂಜಿಸಿ ಆಜ್ಯ ಚುಮುಕಿಸಿ ದರ್ಭಾಸನದಲ್ಲಿ ಹೋತೃ ಕಾರ್ಯಕ್ಕೆ ಕೂರಿಸಿದ್ದಾರೆ. ಅಗ್ನಿ ಹವಿಸ್ಸನ್ನು ಸ್ವೀಕರಿಸಿ ವಹಿಸುತ್ತಾನೆ. ಅನಂತರ ಯಜಮಾನರು ದೇವತೆಗಳಿಗೆ ಪೂಜೆ, ಹವಿಸ್ಸು ಅರ್ಪಿಸಲು ಮರಣ ರಾಹಿತ್ಯಕ್ಕಾಗಿ ಉತ್ತಮ ಪುತ್ರರಿಗಾಗಿ, ಶತ್ರು ನಾಶಕ್ಕಾಗಿ ಯಜ್ಞ ನಿರತರಾಗುತ್ತಾರೆ.

124 : ಅಗ್ನಿ ರಹಸ್ಯ ಸ್ಥಳ ನೀರಿನಲ್ಲಿ ಅಡಗಿರುತ್ತಾನೆ. ಇದರಿಂದ ವರುಣ ಸೋಮ ಅಗ್ನಿಯರು ಅವಿಭಾಗವಿಲ್ಲದೆ ತಮ್ಮ ಸ್ಥಾನ ಚ್ಯುತರಾಗುತ್ತಾರೆ. ಅಗ್ನಿಯನ್ನು ಯಾಜ್ಞಿಕರ ಯಜ್ಞಕ್ಕೆ ಬಂದು ಅಮರತ್ವ ಪಡೆದು ಯಜ್ಞ ಸಾಮಿಪ್ಯ ನಂತರ ಆರಣಿಯಲ್ಲಿ ಸೇರಿಕೊಳ್ಳುವುದಾಗಿ ದೇವತೆಗಳಿಗೆ ಹೇಳಿದನು. ದೇವ ಜನರಿಗೆ ಹಿತ ಉಂಟುಮಾಡಲು ಹೋತೃವಾಗಿ ನಾನಾ ಯಜ್ಞದಲ್ಲಿ ಭಾಗಿಯಾಗುವುದಾಗಿ ಅಗ್ನಿ ತಿಳಿಸಿದನು, ಇಂದ್ರ ಪ್ರೀತ್ಯರ್ಥವಾಗಿ ಅಸುರರ ಮಾಯೆ ನಾಶ ಮಾಡುವುದಾಗಿ ಹೇಳಿದ್ದಾನೆ. ಮೇಘಗಳ ಸ್ನೇಹಿತ ಇಂದ್ರನನ್ನು ಋಷಿಗಳು ಸ್ತುತಿಸುತ್ತಾರೆ. ಜಗತ್ತಿಗೆ ಕ್ಷೇಮ ಉಂಟು ಮಾಡಲು ಅಗ್ನಿ ಮುಂತಾದ ದೇವತೆಗಳೆಲ್ಲೆಲ್ಲಾ ಇಂದ್ರನು ಪ್ರಕಾಶಿಸುತ್ತಾನೆ. ಶತ್ರು ವದಾರ್ಥವಾಗಿ ವಿಸ್ತಾರ ಅಂತರಿಕ್ಷವನ್ನು ಸೂರ್ಯನು ಪ್ರಕಾಶದಿಂದ ತುಂಬುತ್ತಾನೆ. ಸೋಮನು ಸರ್ವಾಪೇಕ್ಷೆಯಾಗಿ ಲತಾ ರೂಪಿನಿಂತ ಸ್ವಂತ ಹವಿಸ್ಸಾಗುತ್ತಾನೆ. ವರುಣನು ಸತ್ಯ ಅಸತ್ಯಗಳನ್ನು ಬೇರೆ ಮಾಡಿ ರಾಜ್ಯದಲ್ಲಿ ಆದಿಪತ್ಯವನ್ನು ಪಡೆಯುತ್ತಾನೆ. ವರುಣ ಪತ್ನಿ ವೃಷ್ಟಿಯು ವೃಷ್ಟಿಯೊಂದಿಗೆ ಉದಕ ವೃಷ್ಟಿ ತರುತ್ತಾಳೆ. ಮಿತ್ರನು ಅಂತರಿಕ್ಷದಲ್ಲಿ ಸ್ಥಿರನಾಗುತ್ತಾನೆ. ಭಯದಿಂದರುವವರಿಗೆ ಮಿತ್ರನು (ಸೂರ್ಯನು) ಸ್ನೇಹಿತನಂತಿರುತ್ತಾನೆ.

ವಿಶೇಷಗಳು : ಉತ್ತಮ ಜ್ಞಾನವಿಲ್ಲದವರು ದೇವತೆಗಳನ್ನು ಉತ್ತಮವಾಗಿ ಪೂಜಿಸಲಾರರು, ಆದುದರಿಂದ ಮೊದಲು ದ್ಯುಲೋಕ, ದೇವತೆಗಳನ್ನು ಪೂಜಿಸಿ ನಂತರ ತಮ್ಮನ್ನು ಪೂಜಸಿಕೊಳ್ಳಲಿ (2) ಯಜ್ಞದಲ್ಲಿ, ಯಾಜ್ಞಿಕರಲ್ಲಿ, ಯಾಜಮಾನರಲ್ಲಿ ಸೂಚನೆ ನೀಡುತ್ತಾ ಅಗ್ನಿ ವ್ಯಾಪಕನಾಗಿ ಇರುತ್ತಾನೆ. ಮಾನವರಿಗಿಂತಲೂ, ಜಗತ್ ಸೃಷ್ಟಿಗಿಂತಲೂ ಮೊದಲು ಅಗ್ನಿ ಉತ್ಪನ್ನನಾಗಿದ್ದಾನೆ. ಸೋಮಭಕ್ಷಕ ದೇವತೆಗಳು ಎಂಟೂ ದಿಕ್ಕುಗಳಿಂದ ಸಂಪತ್ತನ್ನು ಅಲಂಕೃತ ಅಶ್ವ ರಥದಲ್ಲಿ ಯಾಜ್ಞಿಕರಿಗಾಗಿ ತರಲಿ, ವರುಣನು ಸಮುದ್ರ ಮಧ್ಯದಲ್ಲಿ ''ಬಡವಾನಲ'' ಅಗ್ನಿಯನ್ನು ಮಾನವರ ಹಿತಕ್ಕಾಗಿ ಪ್ರಜ್ವಲಿಸುವಂತೆ ಮಾಡಲಿ. ಶ್ವೇನ ಪಕ್ಷಿಯು ''ಸೋಮ''ವನ್ನು ತಂದಾಗ ಹೋತೃವು ಅಗ್ನಿಯನ್ನು ಪ್ರಾರ್ಥಿಸಿದಾಗ ಯಾಗವು ಪ್ರಾರಂಭವಾಗುತ್ತದೆ. ಯಮನನ್ನು ಪೂಜಿಸುವವರನ್ನು ಅಗ್ನಿಯು ಆಲಸ್ಯ ರಹಿತರನ್ನಾಗಿ ಮಾಡಲಿ. ಅಗ್ನಿ ಕೊಟ್ಟದ್ದನ್ನು ಅಗ್ನಿಗೆ ಅರ್ಪಿಸಿದರೆ ಅವು ವೃದ್ಧಿಯಾಗುತ್ತದೆ. ಅಹಂಕಾರ ರಹಿತರು, ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಅಗ್ನಿಯು ತನ್ನನ್ನು ಸ್ತುತಿಸಿದವರಿಗೆ ಧನ ನೀಡುತ್ತಾನೆ.

## ಮಂಡಲ ಹತ್ತರಲ್ಲಿ 191ನೇ ಸೂಕ್ತದಲ್ಲಿ ಸಂವನನ ಋಷಿಗಳು ಹೀಗೆ ಹೇಳಿದ್ದಾರೆ

ಋಷಿಗಳು ಎಲ್ಲ ದೇವತೆಗಳಿಗೂ ಸಮನಾದ ಒಂದೇ ಮಂತ್ರ, ಒಂದೇ ವಿಧವಾದ ಚರು, ಪುರೋಡಾಶ, ಹವಿಸ್ಸುಗಳನ್ನು ಅರ್ಪಿಸುತ್ತಾರೆ. ಸ್ತೋತ್ರ ಜನರ ಐಕ್ಯಮತ್ಯವೇ ಇದರ ಗುರಿ. ಸ್ತೋತ್ರ ಜನರು ಯಾವಾಗಲೂ ಐಕ್ಯಮಥ್ಯದಿಂದರಲಿ, ಎಲ್ಲೆಡೆಯಲ್ಲೂ ಜೊತೆ ಜೊತೆಯಲ್ಲೇ ಹೋಗಲಿ, ಪರಸ್ಪರ ವಿರೋಧ ಬಿಟ್ಟು ಏಕಾಭಿಪ್ರಾಯದಿಂದ ಮಾತಾಡಲಿ, ಭಿನಾಭಿಪ್ರಾಯಕ್ಕೆ ಎಡೆಗೊಡದೆ ಮನಸ್ಸುಗಳಿಂದಲೂ ಒಂದಾಗಿರಲಿ, ಜನರ ಮಂತ್ರೋಚ್ಚಾರಣ, ಸ್ತುತಿ ಒಂದೇ ವಿಧವಾಗಿ ಇರಲಿ, ಲಭಿಸುವ ಫಲವು ಎಲ್ಲರಿಗೂ ಸಮನಾಗಿರಲಿ, ಮನೋವೃತ್ತಿ, ವಿವೇಕ, ಜ್ಞಾನ, ವ್ಯತ್ಯಾಸವಾಗಿರದೇ ಒಂದೇ ವಿಧವಾಗಿ ಇರಲಿ ಎಂದು ವಿನಂತಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ವಿಶ್ವಾಮಿತ್ರರು ಅಗ್ನಿ ದೇವರಲ್ಲಿ ಮಾಡಿಕೊಂಡ ನಾನಾ ಪ್ರಾರ್ಥನೆಗಳು

ಅಗ್ನಿಯನ್ನು ಪ್ರಜ್ವಲಿಸಿ ಆಹುತಿ ಅರ್ಪಿಸುವುದರಿಂದ ಯಜಮಾನನಿಗೆ ಪಶು, ಪುತ್ರಾದಿಗಳು ಲಭಿಸುತ್ತವೆ. ಉಷಸ್ ಧನದಾಯಕರು, ಗೃಹಕ್ಕಾಗಿ ಬೇಡಿದ್ದಾರೆ, ಅಗ್ನಿಯು ದ್ಯಾವಾ ಪೃಥ್ವಿಗಳನ್ನು ಯಜ್ಞಕ್ಕೆ ಕರೆತರಲಿ. ಯಜಮಾನನ ತೊಂದರೆಗಳನ್ನು ನಿವಾರಿಸಲಿ. ಅಗ್ನಿಯು ಕರೆತಂದ ದೇವತೆಗಳು ದರ್ಭಾಸೀನರಾಗಲಿ. ಅರ್ಪಿಸಿದ ಆಹುತಿಗಳನ್ನು ಆಯಾಯ ದೇವತೆಗಳಿಗೇ ತಲುಪಿಸಲಿ. ಅಗ್ನಿ ಜ್ವಾಲೆಗಳು ನಮ್ಮ ಪಾಪಗಳನ್ನು ನಾಶಮಾಡಲಿ. ಅಗ್ನಿತತ್ವವಿಷಯ ದಾತನಾಗಿರಲಿ. ಅಪರಿಮಿತ ಅಕ್ಷಯ, ರತ್ನ, ಕನಕಗಳನ್ನು ಸಹಸ್ರಾರು ರಥಗಳನ್ನು, ಗೋವುಗಳನ್ನು ಬೇಡಿದ್ದಾರೆ. ಸ್ತೋತ್ರಗಳಿಂದ ತೃಪ್ತನಾಗಲಿ. ಆಪತ್ತುಗಳಿಂದ ಪಾರುಮಾಡಲಿ. ವೈಶ್ವಾನರಾಗ್ನಿಯು ಯಜ್ಞ ರಕ್ಷಣೆ ಮಾಡಲಿ. ಅನ್ನವಂತರಾಗಿರುವಂತೆ ಅನುಗ್ರಹಿಸಲಿ. ದೇವತೆಗಳು ಯಜ್ಞಕಾರ್ಯ ಮಾಡಿಸುತ್ತಿರಲಿ. ದ್ಯಾವಾ ಪೃಥ್ವಿಗಳು ಯಜಮಾನನ ತೊಂದರೆ ದು:ಖಗಳನ್ನು ನಿವಾರಿಸಲಿ. ಪರಸ್ಪರ ದ್ವೇಷ ಅಸೂಯೆಗಳು ನಾಶವಾಗಲಿ. ಅಗ್ನಿಯು ದು:ಸ್ವಪ್ನ ನಾಶಮಾಡಲಿ. ಮೇಧಾವಿಗಳನ್ನು ಜ್ಞಾನಿಗಳನ್ನು , ಸತ್ಯಾರ್ಥ ಹೇಳುವವನನ್ನು ವೇದಾರ್ಥ ಸಮನ್ವಯಕಾರನನ್ನು, ಶಿಷ್ಯರನ್ನು ಪಾಲಿಸುವವರನ್ನು ತೃಪ್ತಿಪಡಿಸಲಿ. ಪ್ರಭೂತ ಧನ, ಬೇಡಿದ್ದಾರೆ. ಪುತ್ರ, ಪೌತ್ರರನ್ನು ಕೊಡಲಿ. ಪಶು, ಪುತ್ರಾದಿಗಳನ್ನು ರಕ್ಷಿಸಲಿ, ಭೂದೇವಿಯು ಅನುಕೂಲಕರಳಾಗಿರಲಿ. ಯಜಮಾನರು ಅರ್ಪಿಸುತ್ತಿರುವ ಸ್ತುತಿ ವಾಕ್ಯಗಳನ್ನು ಇನ್ನೂ ವೃದ್ಧಿಸಲಿ. ವ್ಯಯವಾದಷ್ಟು ಧನ, ವೃದ್ಧಿಯಾಗುವಂತೆ ಮಾಡಲಿ. ಅಗ್ನಿಯು ವಿಶ್ವಾಮಿತ್ರರ ವಂಶದಲ್ಲಿ ಪ್ರಜ್ವಲಿತನಾಗಲಿ, ವನಸ್ಪತಿಯು ಸಮೀಪ ಇರುವಂತಾಗಲಿ. ವೀರಪುತ್ರರನ್ನು ಕರುಣಿಸಲಿ, ಯಜಮಾನರು ಯಾಜ್ಞಿಕರು, ಯಜ್ಞಕರ್ತರು ವಿಶೇಷವಾಗಿ ಸಂಚರಿಸುವ ದೃಷದ್ವತಿ, ಅಪಯಾ, ಸರಸ್ವತಿ, ನದೀ ದಡಗಳ ಮೇಲೆ ಅಗ್ನಿಯು ಧನಯುಕ್ತನಾಗಿ ಸಂಚರಿಸಿ ಪ್ರತಿದಿನವೂ ಅನ್ನ, ಧನ ತರುವವನಾಗಲಿ. ಯಜ್ಞ, ಯಾಗಾದಿಗಳನ್ನು ಮಾಡುತ್ತಿರುವ ಹವಿಸ್ಸು ಅರ್ಪಿಸುತ್ತಿರುವ ಕಾರಣಗಳಿಂದ ತಮ್ಮ ಬೇಡಿಕೆಗಳನ್ನು ಈಡೇರಿಸಲು ಪ್ರಾರ್ಥಿಸಿದ್ದಾರೆ. ಶತ್ರುಗಳನ್ನು ಜಯಿಸಲು ಸಹಾಯಕನಾಗಿರಲಿ ಹಾಗೂ ಅವರಿಂದ ರಕ್ಷಣೆ ಮಾಡಲಿ. ಸ್ತೋತ್ರಗಳನ್ನು ಮಾಡಲು ಶಕ್ತಿ ನೀಡಲಿ. (1) ದ್ರಾರಿದ್ರ (2) ಪುತ್ರ ಹೀನತ್ವ(3) ಪಶು ಹೀನತ್ವ(4) ಇತರರಿಂದ ತೊಂದರೆ (5) ದುಷ್ಟರಿಂದ ಕೆಡುಕು ಯಾವುದೂ ಇರದಂತೆ ಅಥವಾ ಬಾರದಂತೆ ನಮ್ಮನ್ನು ರಕ್ಷಿಸಲಿ.

**ಋಷಿಗಳು - ನೋಧಾ ಗೌತಮರು : (ಸ್ತೋತ್ರ, ವಿಭಾಗ)**

ಅಗ್ನಿಯು ರುದ್ರ, ವಸುಗಳಿಂದ ಪೂಜಿತ. ಅಗ್ರ ಆಸನಿ, ಪುರೋಹಿತ ಮಾನವರಿಂದ ಸ್ತುತಿತನಾಗುತ್ತಾನೆ. ಮಾರ್ಗವನ್ನು ಕಪ್ಪಾಗಿಸುತ್ತಾನೆ. ಸ್ಥಾವರ, ಜಂಗಮಗಳು ಅಗ್ನಿಗೆ ಭಯ ಬೀಳುತ್ತವೆ. ದ್ಯಾವಾ ಪೃಥ್ವಿಗಳ ಪುತ್ರ. ಸಕಲರಿಗೂ ಅದಿಪತಿಯಾಗಿದ್ದಾನೆ. ವಿಶ್ವದಲ್ಲಿರುವ ಎಲ್ಲಾ ಅಗ್ನಿಗಳೂ ''ವೈಶ್ವಾನರಾಗ್ನಿಯ'' ಶಾಖೆಗಳೇ ಆಗಿವೆ. ಪರ್ವತ, ಮೂಲಿಕೆ (ಓಷಧಿ), ನೀರು ಮಾನವರ ಧನ, ಎಲ್ಲಕ್ಕೂ ವೈಶ್ವಾನರಾಗ್ನಿಯೇ ಅದಿಪತಿ. ಮಾನವರ ನಾಭಿಯಲ್ಲಿ ಜಠರ ರೂಪಿನಲ್ಲಿದ್ದು ಮಾನವರಿಗೆ ರಕ್ಷಣೆ ನೀಡುತ್ತಾನೆ ವೈಶ್ವಾನರಾಗ್ನಿ ಮೇಲೆ ದ್ಯುಲೋಕಕ್ಕೆ ಶಿಖರಪ್ರಾಯನಾಗಿದ್ದಾನೆ. ಕೆಳಗೆ ಭೂಲೋಕಕ್ಕೆ ನಾಭಿಯಂತಿದ್ದಾನೆ. ದ್ಯಾವಾ ಪೃಥ್ವಿಗಳಿಗೂ ಅಧಿಪತಿ. ಹೃದಯದ ಪ್ರಾಣದಿಂದ ಉತ್ಪನ್ನನಾಗುವವನು ಅಗ್ನಿ. ಹರ್ಷದಾಯಕ ಜ್ವಾಲೆಯುಳ್ಳವನು, ದೇವತೆಗಳು, ದಾನವರು ಇಬ್ಬರಿಂದಲೂ ಸೇವಿತನಾದವನು, ವಾಯುವು ವೈಶ್ವಾನರಾಗ್ನಿಯನ್ನು ಭೃಗು ಮಹರ್ಷಿಗಳ ಸ್ನೇಹಿತನನ್ನಾಗಿ ಮಾಡಿದರು. ಮನುವಿನ ಪುತ್ರ - ಅಗ್ನಿ.

ಆಂಗೀರಸಾಗ್ನಿಯು ಬಲದ ಪುತ್ರ. ಯಜ್ಞಗಳಿಗೆಲ್ಲಾ ಅದೃಷ್ಟಶಾಲಿ, ಬಹುದೂರದಲ್ಲಿದ್ದರೂ ನಮ್ಮ ವಿಚಾರಗಳನ್ನು ಕೇಳಬಲ್ಲವನು, ಆದರೆ ಅಗ್ನಿಯ ರಥ, ಅಶ್ವಗಳ ಸದ್ದು ನಮಗೆ ಕೇಳಿಸುವುದಿಲ್ಲ.

**ಋಷಿಗಳು - ಗೌತಮಾರಹೂಗಣರು**

ಅರ್ಚನೆಗಳಿಂದ ಅಗ್ನಿಯು ಬಲಿಷ್ಠನಾಗುತ್ತಾನೆ. ಋಷಿಗಳು, ಯಾಜ್ಞಿಕರು, ಯಜಮಾನರು ಯಾರೂ ಅಗ್ನಿಯ ನಿಜ ರೂಪ ಮಹಿಮಾದಿಗಳನ್ನು ತಿಳಿಯಲು ಅಸಮರ್ಥರಾಗಿದ್ದಾರೆ. ಯಜ್ಞಕರ್ತರಿಗೆ ಸಮಸ್ತ ಪದಾರ್ಥಗಳನ್ನು ಅಗ್ನಿ ಒದಗಿಸುತ್ತಾನೆ. ಅಗ್ನಿಯು ತಾನು ಯಜಮಾನರ ಪರವಾಗಿ ಯಾರು ಯಾರು ದೇವತೆಗಳನ್ನು ಹೇಗೆ ಹೇಗೆ ಹಾಗೆ ಸ್ತುತಿಸಿ ತೃಪ್ತಿಪಡಿಸುತ್ತಾನೆ. ಗೌತಮ ವಂಶಸ್ಥರು ಅಗ್ನಿಯನ್ನು ಸ್ತುತಿಸುತ್ತಾರೆ. ಹಗಲಾಗಲೀ ರಾತ್ರಿಯಾಗಲೀ ಯಜಮಾನರ ಭಕ್ತರ ಶತ್ರುಗಳನ್ನು ತಾನೇ ನಾಶಮಾಡುತ್ತಾನೆ ಅಥವಾ ತನ್ನ ಕಡೆಯವರಿಂದ ನಾಶಮಾಡಿಸುತ್ತಾನೆ ಅನಂತರ ದೇವತೆಗಳನ್ನು ಯಜಮಾನರ ಪರವಾಗಿ ಆಹ್ವಾನಿಸುತ್ತಾನೆ. ವಾಯು ಮತ್ತು ಪ್ರಕಾಶಮಾನ ಕಿರಣಗಳು ಕಪ್ಪು ಮೋಡವನ್ನು ಕರಗಿಸಿ ಗುಡುಗು ಸಹಿತ ಮಳೆ ತರುತ್ತವೆ. ಅಗ್ನಿ ಅಸಾರಯುತ ಮಳೆ ನೀರನ್ನು ಸಾರಯುತ್ತವನ್ನಾಗಿ ಮಾಡಿ ಮಾನವರು ಅದನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುವಂತೆ ಮಾಡಿದ್ದಾರೆ. ಆಗ್ನಿ ಸೋಮರಿಬ್ಬರೂ ದೇವತೆಗಳಲ್ಲೆಲ್ಲಾ ಅತ್ಯಂತ ಪೂಜ್ಯರು, ಸಮಾನ ಶಕ್ತಿಯುತರು, ಇಷ್ಟಾರ್ಥಪ್ರದರು. ಯಾಗಗಳಲ್ಲಿ ಇಬ್ಬರಿಗೂ ಒಂದೇ ವಿಧವಾದ ಪೂಜೆ, ಆಜ್ಯ, ಆಹುತಿ ಅರ್ಪಿಸುತ್ತಾರೆ. ಇಬ್ಬರನ್ನೂ ಒಟ್ಟಾಗಿ ಯಜ್ಞಕ್ಕೂ ಆಹ್ವಾನಿಸುತ್ತಾರೆ. ನಕ್ಷತ್ರ ಮಂಡಳಗಳನ್ನು ದ್ಯುಲೋಕದಲ್ಲಿ ಎತ್ತಿ ಹಿಡಿದವರು ಇವರೇ. ಸೂರ್ಯನನ್ನು ಮಾನವ ಕುಲ ಉದ್ಧಾರಕ್ಕಾಗಿ ಅಂತರಿಕ್ಷದಲ್ಲಿ ಸಂಚರಿಸುವಂತೆ ಮಾಡಿದವರು ಇವರೇ.

**ಆಶ್ರಮ ವಿಭಾಗ - ನೋಧಾ ಗೌತಮರು**

ಏಳು ಜನ ಹೋತೃಗಳು ಆಹ್ವಾನಿಸುತ್ತಾರೆ. ಪೂಜಿಸುತ್ತಾರೆ ಮತ್ತು ಹವಿಸ್ಸನ್ನು ಅರ್ಪಿಸುತ್ತಾರೆ. ಒಣಗಿದ ಕಟ್ಟಿಗೆಯನ್ನು ಜ್ವಲಿಸಿ ಗಂಭೀರ ಶಬ್ದದಿಂದ ಇರುವ ಅಗ್ನಿಗೆ ಹವಿಸ್ಸಿನಿಂದ ತೃಪ್ತಿಪಡಿಸುತ್ತಾರೆ. ಯಜ್ಞಕರ್ತರಿಗೆ ಜ್ಯೋತಿ ರೂಪದಲ್ಲಿರುತ್ತಾನೆ. ಯಾಜ್ಞಿಕರು ಗುಣ ಗಾನದಿಂದ, ಸ್ತೋತ್ರಗಳಿಂದ ಅಗ್ನಿಯನ್ನು ವೇದಿಕೆಗೆ ಬರಲು ಪ್ರಾರ್ಥಿಸುತ್ತಾರೆ. ಸೂರ್ಯೋದಯಕ್ಕೆ ಮೊದಲೇ ಅಗ್ನಿಯನ್ನು ಪ್ರತಿಷ್ಟಿಸುತ್ತಾರೆ.

**ಗೋತಮಾ ರಹೂ ಗಣರು**

ಸ್ತೋತ್ರಗಳನ್ನು ಮಾಡುತ್ತಾರೆ. ಯಜ್ಞಕ್ಕೆ ಬರಲು ಪ್ರಾರ್ಥಿಸುತ್ತಾರೆ. ಹವಿಸ್ಸು ಅರ್ಪಿಸಿ ಸ್ವೀಕರಿಸಲು ಪ್ರಾರ್ಥಿಸಿದ್ದಾರೆ. ಅಗ್ನಿಯನ್ನು ಒಲಿಸಿಕೊಳ್ಳಲು ಯಜ್ಞಕರ್ತರು ಮೊದಲು ಇಂದ್ರ, ಮಿತ್ರಾ, ವರುಣರನ್ನು ಪೂಜಿಸಲು ಋಷಿಗಳು ಹೇಳಿದ್ದಾರೆ. ಅಗ್ನಿಯು ಹವಿರಾದಿಗಳನ್ನು ಅಂಗೀಕರಿಸಲಿ. ಅಗ್ನಿಯನ್ನು ಪ್ರಥಮ ಪೂಜೆಯಲ್ಲಿ ಅಭಿಮುಖ ಮಾಡಿಕೊಳ್ಳಬೇಕು. ಗೌತಮರು ಅರ್ಚಿಸಿದಂತೆಯೇ ಇವರು ಅರ್ಚಿಸುತ್ತಿದ್ದಾರೆ. ಅಗ್ನಿದ್ಯೋತಕ ಮಂತ್ರಗಳಿಂದ ಅಭಿಮುಖ ಮಾಡಿಕೊಳ್ಳುತ್ತಾರೆ. ಮಧುರ ಮಂತ್ರಗಳಿಂದ ಗುಣಗಳನ್ನು ಹೊಗಳಿ ಸ್ತುತಿಸುತ್ತಾರೆ. ಯಜ್ಞಯಾಗಾದಿ ನಾನಾ ಕರ್ಮಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ.

**ಪ್ರಾರ್ಥನೆಗಳು : ನೋಧಾ ಗೌತಮರು**

ದೇವತ್ವ ಪಡೆಯಲು ಭೃಗು ಋಷಿಗಳು ಅಗ್ನಿಯನ್ನು ಪ್ರಾರ್ಥಿಸಿದರು. ಅವಿಚ್ಛಿನ್ನ ಸು:ಖ, ಐಶ್ವರ್ಯ, ರಕ್ಷಣೆಗಳಿಗಾಗಿ ಬೇಡಿದ್ದಾರೆ. ಪಾಪಗಳನ್ನು ಪರಿಹರಿಸಲು ಕೋರಿದ್ದಾರೆ. ನಮ್ಮಲ್ಲಿ ಐಕ್ಯನಾಗಿರುವ ಈ ವೈಶ್ವಾನರಾಗ್ನಿಯು ನಮ್ಮ ಪ್ರಾರ್ಥನೆಗಳನ್ನು ಬಿಡದೇ ಮನ್ನಿಸಲಿ.

**ಗೌತಮಾ ರಹೂ ಗಣರು :** ಯಜಮಾನರಿಗೆ ಧನ ಅನುಗ್ರಹಿಸಲೆಂದು ಪ್ರಾರ್ಥಿಸಿದ್ದಾರೆ. ಭೂಮಿ, ಆಕಾಶಗಳು ಅಗ್ನಿಯನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ. ಮನುವು ಯಜ್ಞದಲ್ಲಿ ದೇವತೆಗಳನ್ನು ತೃಪ್ತಿಪಡಿಸಿದಂತೆ ಈಗಲೂ ಇಂದ್ರನನ್ನು ಅಗ್ನಿಯು ಯಜ್ಞಕ್ಕೆ ಕರೆತರಲು ಯಾಜ್ಞಿಕರು ಪ್ರಾರ್ಥಿಸಿದ್ದಾರೆ. ಯಜ್ಞಕರ್ತರಿಗೆ ಧನಾದಿಗಳನ್ನು ಅನುಗ್ರಹಿಸಲಿ. ಅಗ್ನಿಯು ಯಜ್ಞಹಿಂಸಕ ರಾಕ್ಷಸರನ್ನು ನಾಶಗೊಳಿಸಲಿ.

ಯಜ್ಞಕರ್ತರಿಗೆ ಶತ್ರುಗಳು ಅಪಹರಿಸಲಾಗದಂತಹ ಧನ, ದ್ರವ್ಯ, ಅನ್ನ, ಆಹಾರ, ಸುಜ್ಞಾನ, ಸುಖ ಜೀವನ ದಯಪಾಲಿಸಲಿ. ಪುತ್ರ, ಪೌತ್ರರೊಡಗೂಡಿ ★ ಉತ್ತಮ ಶಕ್ತಿ ಪೂರ್ಣ ಆಯುಸ್ಸು ಕೊಡಲಿ. ಸಮರ್ಥ ಕುದುರೆ, ಪುಷ್ಟವಾಗಿರುವ ಗೋವುಗಳನ್ನೂ ಬೇಡಿದ್ದಾರೆ. ಪುತ್ರ, ಪೌತ್ರರು, ಭೃತ್ಯರು, ಅಶ್ವಗಳು, ಗೋವುಗಳು ರೋಗರಹಿತರಾಗಿ, ಭಯರಹಿತರಾಗಿ ಇರಲು ಕೇಳಿಕೊಂಡಿದ್ದಾರೆ. ಪಾಪಗಳಿಂದ ಬಿಡುಗಡೆ ಮಾಡಲಿ.

ಅಗಸ್ತ್ಯರು : (ತನೂನಪಾತ್) : ಅಗ್ನಿಯು ಮಧುರ, ಆಜ್ಯಾದಿ ದ್ರವ್ಯಗಳ ಹವಿಸ್ಸನ್ನು ಯಜ್ಞದಲ್ಲಿ ಸೇವಿಸುತ್ತಾನೆ. ಮಂದ್ರ ಪುತ್ರ ಅಗ್ನಿ, ವರುಣ ಮತ್ತು ಧರ್ಮ ದೇವತೆ ಹಾಗು ಆಹ್ವಾನಿತ ಇತರ ದೇವತೆಗಳು ಬರುತ್ತಾರೆ. ಯಜ್ಞ ಮಾಡದವರನ್ನು ಅಪೇಕ್ಷಿಸುವುದಿಲ್ಲ. ಅಗ್ನಿಯು ಚೋರರು, ನಿಂದಕರು, ವಂಚಕರು, ಶತ್ರುಗಳು, ಕಚ್ಚತಕ್ಕ, ಹಿಂಸೆ ಮಾಡತಕ್ಕ ಪ್ರಾಣಿಗಳು, ಹೊಟ್ಟೆಬಾಕಗಳು, ಇವರೆಲ್ಲರಿಂದ ಪಾರುಮಾಡುತ್ತಾನೆ. ಜಯ, ಅಪಜಯ, ಮಾನ, ಅಪಮಾನಗಳಿಂದ ಕುಟಿಲ ಮಾರ್ಗಗಳಿಂದ ದೂರಮಾಡಿ ಪಾಪ ನಾಶಮಾಡಿ ಕಾಪಾಡುತ್ತಾನೆ.

ಆಶ್ರಮ : ಯಜ್ಞದ್ವಾರಗಳು ವಿಶಾಲ, ಶೋಭಿತ, ಪೂಜ್ಯ, ಪ್ರಕಾಶಮಾನವಾಗಿ ಉದಕ, ಪ್ರೋಕ್ಷಿತವಾಗಿದೆ. ಅಗ್ನಿ ದೇವತೆಗಳು ಮಂತ್ರ ರೂಪ ಬಲದ ದರ್ಭಾಸನದಲ್ಲಿ ಕುಳಿತು ದೇವತೆಗಳಿಗೆ ಹವಿಸ್ಸು ವಹಿಸಲಿ. ಅವರನ್ನು ಯಜ್ಞಕ್ಕೆ ಕರೆತರಲಿ, ಎಲ್ಲ ದೇವತೆಗಳು ದರ್ಭಾಸೀನರಾಗಲಿ, ಪ್ರಸಿದ್ಧ ಸ್ತೋತ್ರಗಳಿಂದ, ನಮಸ್ಕಾರಗಳಿಂದ ಅವರುಗಳನ್ನು ಯಾಜ್ಞಿಕರು ಸ್ತುತಿಸುತ್ತಾರೆ. ಅಗಸ್ತ್ಯರು ಪ್ರಸಿದ್ಧರು, ಮೇಧಾವಿಗಳು, ಇವರು ಅಗ್ನಿ ಮತ್ತಿತರ ಆಹ್ವಾನಿತ ದೇವತೆಗಳಿಗೆಲ್ಲಾ ಹವಿಸ್ಸು ಅರ್ಪಿಸಿ ಯಜ್ಞನೆರವೇರಿಸುತ್ತಾರೆ.

ಪ್ರಾರ್ಥನೆಗಳು : ಯುದ್ಧ ಮತ್ತು ಯಜ್ಞದಲ್ಲಿ ಅಗ್ನಿಯು ''ಗಾಯತ್ರಿ'' ಆದಿ ಮಂತ್ರ ''ಸ್ವಾಹಾಕಾರ'' ರೂಪದಿಂದ ಪ್ರಕಾಶಿಸಲಿ. ಯಜಮಾನನನ್ನು ಹಿಂಸಿಸುವ ರೋಗವನ್ನು ನಾಶಮಾಡಲಿ. ಪುತ್ರ, ಪೌತ್ರರು ರೋಗ, ಭಯ ರಹಿತರಾಗಿರಲಿ.

ಇವರಿಂದ ಪ್ರಾರ್ಥಿತರಾದ ಇತರೇ ದೇವತೆಗಳು

1) ಅಹೋರಾತ್ರಿ ದೇವತೆಗಳು : ಇವರು ಅಧಿಕ, ಆಕರ್ಷಕ ಸೌಂದರ್ಯಯುತರು, ಯಜ್ಞನೆರವೇರಿಸಲಿ.

2) ಲೋಕತ್ರಯ ದೇವತೆಗಳು : ''ಇಳಾ, ಭಾರತಿ, ಸರಸ್ವತಿ, ಯಾಜ್ಞಿಕರಿಗೆ ಸಂಪತ್ತು ಕರುಣಿಸಲಿ.

3) ಯೂಪಾಭಿಮಾನಿಗಳು : ಅನ್ನ ಸೃಷ್ಟಿಸಲಿ, ಹವಿಸ್ಸು ಸೇವಿಸಲಿ.

4) ತ್ವಷ್ಟ (ನಿರ್ಮಾತೃ) : ಯಜ್ಞನೆರವೇರಿಸಲಿ, ಹೆಚ್ಚಾಗಿ ಅಶ್ವ ನೀಡಲಿ.

ಹಿರಣ್ಯಸ್ತೂಪ ಆಂಗೀರಸರು - ಸ್ತೋತ್ರ, ವಿಭಾಗ :

ಅಗ್ನಿಯು ಆಂಗಿರೋನಾಮಕ ಋಷಿಗಳಿಗಿಂತ ಮೊದಲಿಗ, ಅರಣಿ ದೇವತೆಗಳು ತಾಯಿಯರು. ವೇಗವಾಗಿ ಕಡೆಯುವುದರಿಂದ ಅಗ್ನಿ ಉತ್ಪನ್ನನಾಗುತ್ತಾನೆ. ಅಸನ್ ಮಾರ್ಗಗಳನ್ನು ಸನ್ಮಾರ್ಗಕ್ಕೆ ತರುತ್ತಾನೆ. ನೇರವಾಗಿ ಹೋಮ ಮಾಡುವವರಿಗೆ ಶಿಕ್ಷಣ ನೀಡುತ್ತಾನೆ. ಧನ, ಅನ್ನ, ಪಶು, ಪುತ್ರರು, ಸ್ವರ್ಗಗಳನ್ನು ನೀಡುತ್ತಾನೆ. ಯಜಮಾನನ್ನು ಮರಣರಾಹಿತ್ಯನನ್ನಾಗಿ ಮಾಡುತ್ತಾನೆ. ಅವರ ಮಕ್ಕಳಿಂದಲೂ ಕರ್ಮ ಮಾಡಿಸುತ್ತಾನೆ. ಅಗ್ನಿಯಿಂದ ಮರುತ್ ದೇವತೆಗಳು ಹುಟ್ಟಿದರು. ವಾಯುವಿಗೆ ಅಗ್ನಿ ಪ್ರಧಾನ. ದ್ಯಾವಾ / ಪೃಥ್ವಿಗಳು ಅಗ್ನಿ ಮಹಿಮೆಯಿಂದ ಕಂಪಿಸುತ್ತವೆ. ಅಗ್ನಿ ಕ್ಷೇಮಪಾಲಕ, ನಮ್ಮ ರಕ್ಷಕನಾಗಿದ್ದಾನೆ.

ಕುತ್ಸ ಆಂಗೀರಸರು : ಅಗ್ನಿಯು ಜ್ಞಾನಿ, ಅಗ್ನಿಯು ಪೂಜ್ಯ, ಶಾಸ್ತ್ರವಿಹಿತ ಸ್ಥಳಗಳಲ್ಲಿ ಪ್ರಜ್ವಲಿತ ಯಾಗಗಳಿಂದ ಪ್ರೀತನಾಗಿ ಯಾಜ್ಞಿಕರನ್ನು ಪಾಪಗಳಿಂದ ಮತ್ತು ಶತ್ರುಗಳಿಂದ ಹಿಂಸಿತರಾಗದಂತೆ ರಕ್ಷಿಸುತ್ತಾನೆ. ಅಗ್ನಿಗೆ ಮೂರು ಸ್ಥಾನಗಳು : (1) ಸಮುದ್ರದಲ್ಲಿ ಒಡವಾನಲ (2) ದ್ಯುಲೋಕದಲ್ಲಿ ಆದಿತ್ಯನಾಗಿ (3) ಅಂತರಿಕ್ಷದಲ್ಲಿ ವಿದ್ಯುತ್ ರೂಪಿನಲ್ಲಿ ಅಹಸ್ಸಿನ (ಹಗಲು) ಪುತ್ರ ಅಗ್ನಿ. ರಾತ್ರಿಯ ಪುತ್ರ (ಸೂರ್ಯ).

ಅಹೋ ರಾತ್ರಿಗಳೆರಡೂ ಅಗ್ನಿಯನ್ನು ಎರಡೂ ಪಕ್ಕಗಳಿಂದ ಸೇವಿಸುತ್ತವೆ. ತೇಜಸ್ಸಿನಿಂದ ತುಂಬಿದ ನೀರು ಯಜ್ಞಾರ್ಹವಾಯಿತು. ಭೂಮಿಯನ್ನು ಸಂಪೂರ್ಣ ತೋಯಿಸಿ ನಂತರ ಅನ್ನಾದಿಗಳನ್ನು ಸಸ್ಯದಲ್ಲಿರಿಸಿ ಅವನ್ನು ಮಳೆಯಿಂದ ಪಕ್ವವಾಗಿಸಿ ಅಗ್ನಿ ಅಲ್ಲಿ ಅಂತರ್ಗತನಾಗಿದ್ದಾನೆ. ಸಕಲ ವಸ್ತುಗಳಲ್ಲೂ ಅಗ್ನಿಯು ಯಾವುದಾದರೂ ಒಂದು ರೂಪದಲ್ಲಿ ಅಡಗಿದ್ದಾನೆ. (1)ಮೇಘದ ನೀರಿನಲ್ಲಿ ಮಿಂಚಿನಂತೆ (2) ಹವಿಸ್ಸಿನ ರೂಪದಲ್ಲಿ ಅನ್ನದಂತೆ (3) ಸಮುದ್ರ ಮಧ್ಯದಲ್ಲಿ ಆದಿತ್ಯ ಔಷದಾಗ್ನಿ (ಆದಿತ್ಯ) ಸಕಲ ಭೂತ ಜಾತಗಳಿಂದಲೂ ಸಾರಭೂತ ರಸ ಹೀರಿ ಅಂತರಿಕ್ಷದಲ್ಲಿ ಜಗತ್ತಿಗೆ ಹೊದಿಕೆಯಾಗುವಂತೆ ಮಾಡಿದ್ದಾನೆ. ಅಗ್ನಿ ಹುಟ್ಟಿದ್ದು ಆರಣಿಯಲ್ಲಿ. ಅಹೋ ರಾತ್ರಿಗಳು ಹುಟ್ಟಿದ ಕೂಡಲೇ ಪುತ್ರ ರೂಪದ ಅಗ್ನಿಗೆ ಹವಿಸ್ಸು ಕೊಡಿಸುತ್ತಾರೆ. ದ್ಯಾವಾ ಪೃಥ್ವಿಗಳು ಅಗ್ನಿಯನ್ನು ಪ್ರಕಾಶಿಸುತ್ತವೆ. ಅಗ್ನಿ ಸಕಲ ಮಾನವ ಪ್ರಜೆಗಳನ್ನು ಸೃಷ್ಟಿಸಿದನು. ಪಾಪಿಗಳನ್ನು ನಾಶಮಾಡುತ್ತಾನೆ. ದೇವತೆಗಳಿಗೆ ಮಿಂಚಿನಂತೆ ಹವಿಸ್ಸು ಹಂಚುತ್ತಾನೆ. ನಾನಾ ರೂಪಿನಲ್ಲಿ ಅಗ್ನಿ ಇದ್ದಾನೆ.

<u>ಆಶ್ರಮದಲ್ಲಿ</u> : ಯಜ್ಞ ಭೂಮಿಯ ಪೂರ್ವದಲ್ಲಿ ಆಹವನೀಯ ಪಶ್ಚಿಮದಲ್ಲಿ ಗಾರ್ಹಪತ್ಯ. ''ವಷಟ್ಕಾರ'' ಸಹಿತ ಆಹುತಿ ಅರ್ಪಿಸುವ ಯಜಮಾನನ ಮನಸ್ಸಿಗೆ ಅಗ್ನಿಯೇ ಕಾರಣ. ದೇವ ಯಜ್ಞ ಮಾಡುವವರಿಗೆ ಸವಿತೃವು ಐಶ್ವರ್ಯ ಕೊಡುತ್ತಾನೆ. ಸವಿತೃವನ್ನು ಯಜ್ಞಕ್ಕೆ ಆಹ್ವಾನಿಸುತ್ತಾರೆ. ಯಾಗಕ್ಕೆ ಬೇಕಾದ ಧನವನ್ನು ಹೊಂದಿಸುತ್ತಾನೆ. ಕರ್ಮಕರ್ತರು ಉತ್ತಮ ವರ್ಗದವರು. ಅಗ್ನಿ ಅನುಗ್ರಹಿಸುವಂತೆ ನಾವು ನಡೆದುಕೊಳ್ಳೋಣ.

<u>ಪ್ರಾರ್ಥನೆ :</u> ಹಿರಿಯರನ್ನು ಅನುಗ್ರಹಿಸಿದಂತೆಯೇ ನಮ್ಮನ್ನು ಅನುಗ್ರಹಿಸಲಿ ಎಂದು ಕೇಳಿಕೊಂಡಿದ್ದಾರೆ. ಅಪರಾಧಗಳನ್ನು ಕ್ಷಮಿಸಲಿ, ಯಜ್ಞಾನುಷ್ಠಾನಕ್ಕೆ ಸತ್‌ಬುದ್ಧಿ ಕೊಡಲಿ, ಯಾಜ್ಞಿಕರನ್ನು ಶುದ್ಧರೆಂದು ಸಾರಲಿ. ಯಜ್ಞಕ್ಕೆ ಬರಲಿ, ಶತ್ರು ಭಾದೆ ನಿವಾರಿಸಲಿ, ನಿಶ್ಚಿಂತತೆಯಿಂದ ಇರುವಂತಾಗಲಿ. ಪಾಪ ರಹಿತ ಕರ್ಮಗಳನ್ನೇ ಮಾಡುವಂತಾಗಲಿ, ಪುತ್ರ ಪೌತ್ರರನ್ನು ಕೊಡಲಿ. ಇಷ್ಟಾರ್ಥಗಳನ್ನು ಈಡೇರಿಸಲಿ, ಆಯಸ್ಸನ್ನು ಬೇಡಿದ್ದಾರೆ. ಅಗ್ನಿಯು ಸಕಲ ಹೋಮದ್ರವ್ಯಗಳೊಂದಿಗೆ ವೃದ್ಧಿಗೊಳ್ಳಲಿ. ಎಲ್ಲರನ್ನೂ ಶುದ್ಧ ಮಾಡಲಿ, ತೇಜಸ್ಸಿನಿಂದ ರಾಕ್ಷಸರ ವಿರುದ್ಧ ಯಾಜ್ಞಿಕರಿಗೆ ರಕ್ಷಣೆ ಕೊಡಲಿ, ಧನಯುಕ್ತ ಅನ್ನವನ್ನು ಕೊಡಲಿ. ಗೃಹಕ್ಕಾಗಿ ಬೇಡಿದ್ದಾರೆ, ವ್ಯವಸಾಯ ಅಭಿವೃದ್ಧಿಗಾಗಿ ಯಜ್ಞಾನುಷ್ಠಾನಕ್ಕಾಗಿ, ವಂಶವೃದ್ಧಿಗಾಗಿ ಪ್ರಾರ್ಥಿಸಿದ್ದಾರೆ, ಎಲ್ಲಾ ದಿಕ್ಕುಗಳಿಂದಲೂ ರಕ್ಷಿಸಲಿ. ಪುತ್ರ ಪೌತ್ರರಿಗೆ ಭಾಗ್ಯ ತರಲಿ. ಸಂಪತ್ತು ಮತ್ತು ಪುತ್ರರುಗಳಿಗಾಗಿ ಬೇಡಿದ್ದಾರೆ.

<u>ಋಷಿಗಳು : ಕಶ್ಯಪರು, ಮಾರೀಚರು :</u> ಅಗ್ನಿಯು ಜಾತೋವೇದೋ ರೂಪಿ. ಯಜ್ಞದಲ್ಲಿ ಅಗ್ನಿಗೆ ಸೋಮರಸ ಹಿಂಡಿ ಅರ್ಪಿಸಿರಿ ಎಂದು ಕಶ್ಯಪರು ಯಾಜ್ಞಿಕರಿಗೆ ಹೇಳಿದ್ದಾರೆ.

<u>ಪ್ರಾರ್ಥನೆ</u>: ಕೇಡು ಬಯಸುವ ಶತ್ರು ಧನವನ್ನು ಅಗ್ನಿಯು ಭಸ್ಮ ಮಾಡಲಿ, ಮೊಸಳೆ ಮುಂತಾದ ದುಷ್ಟಪ್ರಾಣಿಗಳಿರುವ ನದಿಯನ್ನು ಅಂಬಿಗನು ದೋಣಿಯ ಮೂಲಕ ಸುಲಭವಾಗಿ ದಾಟಿಸುವಂತೆ ನಮಗೆ ಕಷ್ಟ, ದು:ಖ, ಪಾಪ, ಕೃತ್ಯಗಳು ತಟ್ಟದಿರುವಂತೆ ಅಗ್ನಿಯು ನಮ್ಮನ್ನು ಸಂಸಾರ ಸಾಗರದ ದಡಕ್ಕೆ ಕೊಂಡ್ಯೊಯಲಿ.

<u>ಋಷಿಗಳು : ಮೇದಾತಿಥಿ ಕಾಣ್ವರು : ಆಶ್ರಮ ವಿಭಾಗ :</u> ಆಗ್ನಿಯು ಮೇಧಾವಿ, ಸತ್ಯಧರ್ಮ ಸ್ವರೂಪಿ, ಆರಣಿಯಲ್ಲಿ ಉತ್ಪನ್ನನಾಗಿ ಆಹವನೀಯ ಗಾರ್ಹಪತ್ಯದಲ್ಲಿ ಪ್ರಕಟಗೊಳ್ಳುತ್ತಾನೆ. ಅಗ್ನಿಯ ಮುಖ ''ಜುಹೂ'' ಮೂಲಕ ಆಜ್ಯ, ಹವಿಸ್ಸು ಸ್ವೀಕರಿಸುತ್ತಾನೆ. ಯಜ್ಞ ವಿರೋಧಿಗಳನ್ನು, ರೋಗಾದಿ ಉಪದ್ರವಗಳನ್ನು ನಾಶ ಮಾಡುತ್ತಾನೆ. ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾದವನು. ಅಗ್ನಿಯ ಇತರ ಹೆಸರುಗಳು ಹೀಗಿವೆ : (1) ಸುಸಮಿದ್ಧ (2) ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರ (8) ವನಸ್ಪತಿ (9) ಸ್ವಾಹ (10) ಇಳಾ (11) ಭಾರತಿ (12) ಸರಸ್ವತಿ ಇವರುಗಳು ಎಲ್ಲರೂ ಸು:ಖ ನೀಡುವ ಅಗ್ನಿ ಮೂರ್ತಿ ಸ್ವರೂಪರು.

ಅಗ್ನಿ ಸಂಬಂಧ ಯಜ್ಞವನ್ನು ಅತಿಕ್ರಮಿಸಲು ದೇವ ದಾನವರಿಗೂ ಸಾಧ್ಯವಿಲ್ಲ. ದೇವ ಮಾನವರಿಗೆ ಸಮಾನ ಹರ್ಷ ದಾಯಕ, ಯಜ್ಞದಲ್ಲಿ ಹವಿಸ್ಸು ಪಡೆದು ದೇವತೆಗಳಿಗೆ ಅವರವರ ಭಾಗ ಹಂಚುತ್ತಾನೆ. ಮನು ಪ್ರಜಾಪತಿ ಅಗ್ನಿಯನ್ನು ಭೂಮಿಯಲ್ಲಿ ನಿಲ್ಲಿಸಿದನು. ವರುಣ, ಮಿತ್ರಾ, ಆರ್ಯಮರು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದರು. ಲೋಕದಲ್ಲೆಲ್ಲ ಅಗೋಚರ ಜ್ವಾಲೆಯನ್ನು ಹರಡಿದರು. ಯೂಪ ಸ್ತಂಭದಲ್ಲಿ ಅಗ್ನಿ ಅಡಗಿದ್ದಾನೆ. ಯಾಜ್ಞಿಕರ ಉದ್ದೇಶ ತಿಳಿದು ಫಲ ನೀಡುತ್ತಾನೆ. ಯಜ್ಞ ಕರ್ತರು ಅಗ್ನಿಗೆ ಪುರೋಹಿತ ಸ್ಥಾನ ಕೊಟ್ಟರು, ಘರ್ಷಣೆಯಿಂದ ಉತ್ಪನ್ನನಾದ ಅಗ್ನಿ ಜ್ವಾಲೆಗಳಿಂದ ಪ್ರಜ್ವಲಿಸುತ್ತಾನೆ.

<u>ಆಶ್ರಮ :</u> ಯಜಮಾನರು, ಯಾಜ್ಞಿಕರು ಸ್ತೋತ್ರಗಳನ್ನು ಮಾಡುತ್ತಾರೆ. ಹವಿಸ್ಸನ್ನು ಅರ್ಪಿಸುತ್ತಾರೆ. ದೇವತೆಗಳನ್ನು ಕರೆತರುತ್ತಾರೆ.

<u>ಋಗ್ವೇದಿ :</u> ಗಾನವಿಲ್ಲದೆ ಮಂತ್ರಗಳನ್ನು , ದೇವತಾ ಗುಣಗಳನ್ನು ಹೇಳುವವನು, ದೇವತೆಗಳಿಗೆ ನೀರು ಮತ್ತು ತುಪ್ಪದಿಂದ ಮೆದು ಮಾಡಿದ ದರ್ಭಾಸನವನ್ನು ಕುಳಿತುಕೊಳ್ಳಲು ನೀಡುತ್ತಾರೆ.

★ ಲೋಪಮೋಷಗಳಿಲ್ಲದ ನ್ಯೂನಾತಿರಿಕ್ತ ಉತ್ತಮ ಯಜ್ಞಕ್ಕೆ ಅಗ್ನಿ ಬರಲಿ, ಮರುತ್‌ಗಳನ್ನು ಜೊತೆಯಲ್ಲಿ ಕರೆತರಲಿ. ಭೂಮಿಯಲ್ಲಿ ವೃಷ್ಟಿಗೆ ದೇವತೆಗಳ ಸ್ಥಿರತೆಗೆ ಕರ್ಮಗಳು ಸುಗಮವಾಗಿ ನಡೆಯಲು ಅಗ್ನಿಯೇ ಕಾರಣ

★ ಮೊದಲು ಯೂಪ ಸ್ತಂಭವನ್ನು ಪೂಜಿಸಲು ಹೇಳಿದ್ದಾರೆ. ಅಗ್ನಿ ಮಹಿಮೆ ಇಷ್ಟೆ ಎಂದು ಹೇಳಲು ಸಾಧ್ಯವಿಲ್ಲ. ಅಗ್ನಿಯ ಅನುಗ್ರಹ ಮೊದಲು ಬೇಕು. ಅಗ್ನಿಯು ಹೋಮವನ್ನು ಸ್ವೀಕರಿಸಲಿ, ಆಕರ್ಷಕ ಜ್ವಾಲೆಯಿಂದ ಎಲ್ಲರನ್ನೂ ಸಂತೋಷಪಡಿಸಲಿ. ಅಗ್ನಿಯು ಉಷ ಕಾಲದಲ್ಲಿ ಉಷ, ಅಶ್ವಿನಿ ಮತ್ತಿತರ ಎಲ್ಲಾ ದೇವತೆಗಳೊಡನೆ ಯಜ್ಞ ಭೂಮಿಗೆ ಬರಲು ಆಹ್ವಾನಿಸುತ್ತಾರೆ. ಇಂತಹ ಆಹವನೀಯ ರೂಪದಲ್ಲಿ ಸಂಚರಿಸುವ ಅಗ್ನಿಯು ಯಜಮಾನನ ಆಯುರ್ವರ್ಧಕ, ಶತ್ರುನಾಶಕ, ಮಿತ್ರ ಪೋಷಕ.

★ ವಸು, ರುದ್ರ, ಆದಿತ್ಯ, ಮನುವನ್ನು ಪೂಜಿಸಲು ಹೇಳುತ್ತಾರೆ. ಹಿಂದಿನ ದಿನವೇ ಸಿದ್ಧಪಡಿಸಿದ ಸೋಮವನ್ನು ದೇವತೆಗಳೊಂದಿಗೆ ಅಗ್ನಿಯು ಸೇವಿಸಲಿ.

<u>ಪ್ರಾರ್ಥನೆ</u> : ಯಜ್ಞ ಭಾಗಿಗಳಿಗೆ ಅನ್ನ, ಆಹಾರ, ಧನ, ಸುಖ ಮತ್ತು ಶೂರ ಸಹಾಯಕರನ್ನು ಕೊಡಲಿ. ಅಗ್ನಿಯು ಉತ್ತಮ ಜ್ಞಾನ ನೀಡಲಿ. ★ ಅಗ್ನಿ ಮತ್ತು ಮರುತ್‌ಗಳು ಪ್ರಥಮ ರುಚಿಕರ ಸೋಮಪಾನ ಮಾಡಲು ಪ್ರಾರ್ಥಿಸುತ್ತಾರೆ. ಬೇಕಾದ ಅನ್ನ, ಧನ, ಶಕ್ತಿ ಮಂಗಳಕರವಾದವುಗಳನ್ನು ಅನುಗ್ರಹಿಸಲು ಪ್ರಾರ್ಥಿಸುತ್ತಾರೆ.

★ ವರುಣ , ಅಶ್ವಿನಿ ದೇವತೆಗಳು ಸೋಮ ಪಾನ ಮಾಡಲಿ, ಅಗ್ನಿಯೊಂದಿಗೆ 33 ದೇವತೆಗಳು ಯಜಮಾನನಿಗೆ ಉಪಕಾರ ಮಾಡಲಿ ಎಂದು ಪ್ರಾರ್ಥಿಸುತ್ತಾರೆ.

<u>ಪರಾಶರ ಶಾಕ್ತರು</u> : ಸ್ತೋತ್ರ ವಿಭಾಗ : ಅಗ್ನಿಯು ಜಠರದಲ್ಲಿ ಆಹಾರ ಪಚನ ಮಾಡುತ್ತಾನೆ. ತನಗಾಗಿ ಇತರೇ ದೇವತೆಗಳಿಗಾಗಿ ಯಜ್ಞದಲ್ಲಿ ಹವಿಸ್ಸು ಸ್ವೀಕರಿಸುತ್ತಾನೆ. ದೇವತೆಗಳು ಭೂಮಿಗೆ ಅಗ್ನಿಯನ್ನು ಹುಡುಕಿಕೊಂಡು ಬರುತ್ತಾರೆ. ಭೂಮಿಯು ಅಗ್ನಿಯಿಂದ ಸ್ವರ್ಗವಾಗಿದೆ. ಅಗ್ನಿ ಅನ್ನಕ್ಕೂ ಕಾರಣ, ಜಲದ ಮಧ್ಯೆ ಇದ್ದಾನೆ. ಉದಕಕ್ಕೆ ಸಹೋದರ, ವಾಯುವಿನ ಸ್ನೇಹಿತ. ಕೋಪ ಬಂದರೆ ಓಷದಿಗಳ ಸಹಿತ ಕಾಡನ್ನು ಸುಡುತ್ತಾನೆ. ತನ್ನನ್ನು ಸ್ತುತಿಸುವವರನ್ನು ಶತ್ರು ಬಾಧೆಯಿಂದ ರಕ್ಷಿಸುತ್ತಾನೆ. ★ ಕನ್ಯೆಯ ಕನ್ಯಾತ್ವವನ್ನು ಹೋಗಲಾಡಿಸುತ್ತಾನೆ. ಸ್ತ್ರೀಯರಿಗೆ ಪತಿದಾತ, ಯಜ್ಞನಾಶಕರನ್ನು ಧ್ವಂಸ ಮಾಡುತ್ತಾನೆ. ಅಗ್ನಿ ಹವಿಸ್ಸಿನೊಂದಿಗೆ ಉದಕದಲ್ಲಿ ಅಡಗಿದ್ದರಿಂದ ಭಯ ಭೀತರಾಗಿ ಅಗ್ನಿ ಮಂತ್ರದಿಂದ ಇರುವ ಸ್ಥಳ ತಿಳಿದು ಸಮೀಪಿಸಿದರು. ವನಸ್ಪತಿ, ಓಷದಿ, ಹಲವು ವೃಕ್ಷಗಳಿಗೆ ಅಗ್ನಿಯೆ ಕಾರಣ. ಭೂಮಿಯ ಮೇಲಿರುವುದೆಲ್ಲಾ ಅಗ್ನಿಗೆ ಆಹಾರವೇ. ರಾಕ್ಷಸ ಭಾದೆಯಾದಾಗ ಅಗ್ನಿ ಮರುತ್‌ಗಳೊಂದಿಗೆ ಸೇರಿ ರಾಕ್ಷಸರನ್ನು ನಾಶ ಮಾಡಿ ಯಜ್ಞ ರಕ್ಷಣೆ ಮಾಡುತ್ತಾನೆ. ದೇವತೆಗಳಿಂದ ಪುತ್ರನಂತೆ. ರಶ್ಮಿಯಿಂದಲೇ ದೇವತೆಗಳಿಗೆ ಹವಿಸ್ಸನ್ನು ಒಯ್ಯುತ್ತಾನೆ. ★ ದೇವತೆಗಳ ಜನನಾದಿ ವಿಷಯಗಳನ್ನು ತಿಳಿದ ಸರ್ವಜ್ಞ ಮೂರ್ತಿ ಅಗ್ನಿದೇವ.

ಆಶ್ರಮ : ಅಗ್ನಿ ಇಂದ್ರನೊಂದಿಗೆ ಆಶ್ರಮದಲ್ಲಿ ಹವಿಸ್ಸು ಸ್ವೀಕರಿಸಲಿ, ತುಪ್ಪ ಮತ್ತು ಹೋಮದ್ರವ್ಯಗಳಿಂದ ಸಂತೋಷದಿಂದ ಇರುತ್ತಾನೆ. ಯಾಗಗಳಲ್ಲಿ ಅಗ್ನಿಗೆ ಮೊದಲ ಪೂಜೆ. ಅಗ್ನಿಯನ್ನು ಉದ್ದೇಶಿಸಿ ಮಾಡಿದ ಕರ್ಮಗಳಿಂದ ದೇವತ್ವ ಪಡೆಯಬಹುದು. ಪುತ್ರ ಸಂತಾನ ಪಡೆಯಬಹುದು. ಅನ್ನ, ಆಹಾರಾದಿಗಳನ್ನು ಪಚನ ಮಾಡಿ ಅದನ್ನು ರುಚಿಕರವನ್ನಾಗಿ ಮಾಡಿಸುತ್ತಾನೆ ಅಗ್ನಿ. ಯಜ್ಞ ಗೃಹವನ್ನು ಸುಖವಾಗಿ ಇಟ್ಟಿರುತ್ತಾನೆ. ★ ಯಾಜ್ಞಿಕರು, ಯಜಮಾನರು, ವಿಷಯಾಸಕ್ತ ರಹಿತರಾಗಿ ದೇವತೆಗಳ ಹಾಗೂ ಮಾನವರ ರಕ್ಷಣೆಗಾಗಿ, ಪೋಷಣೆಗಾಗಿ ಅಗ್ನಿ ಹೋತ್ರಾದಿ ಯಜ್ಞಗಳನ್ನು ಮಾಡುತ್ತಾರೆ. ಮಿತ್ರಾ ವರುಣರು ಗೋವು ಕ್ಷೀರವನ್ನು ಅಮೃತದಂತೆ ಮಾಡಿದರು. ನೂರು ವರ್ಷಗಳು ಆಜ್ಯ ಹೋಮ ಮಾಡಿದ ನಂತರವೇ ಮರುತ್ ದೇವತೆಗಳು ಯಜ್ಞಾರ್ಹರಾದುದು. ಆದಿತ್ಯರು ಪುರೋಡಾಶ ಅರ್ಪಿಸಿದರು. ಬ್ರಹ್ಮನನ್ನು ಉದ್ದೇಶಿಸಿ ಮಾಡಿದ ಸ್ತೋತ್ರಗಳನ್ನು ಅಗ್ನಿಯು ಸ್ವೀಕರಿಸುತ್ತಾನೆ. ★ ಅಗ್ನಿ ಜ್ವಾಲೆಗಳು ಶುಭ್ರ ವರ್ಣದಿಂದ ನಾನಾ ದಿಕ್ಕುಗಳಿಗೆ ಪ್ರಸರಿಸಿದಾಗ ಯಾಜ್ಞಿಕರು ಇದು ಹೋಮ ಸಮಯವೆಂದು ತಿಳಿಯುತ್ತಾರೆ. ಅದಿತಿ, ಸಾಗರ ದೇವತೆ, ಭೂದೇವಿ, ದ್ಯುಲೋಕ ದೇವತೆಗಳು ಪೃಥ್ವಿ ಎಲ್ಲರೂ ಯಾಜ್ಞಿಕರಿಗೆ ಅಭಿವೃದ್ಧಿ ರಕ್ಷಣೆಗಳನ್ನು ನೀಡಲಿ.

ಪ್ರಾರ್ಥನೆಗಳು : ಪಶುಗಳು ಹುಲ್ಲು, ನೀರು ಇರುವ ಪ್ರದೇಶದಲ್ಲಿ ಇರುವುದರಿಂದ ಅಗ್ನಿ ದೂರ ಗುಹೆಗಳಲ್ಲಿ ಹೋಗಿ ವಾಸಿಸಲಿ. ಯಜ್ಞ ಕಾರ್ಯವನ್ನು ಮಂಗಳಕರವನ್ನಾಗಿಸಲು ಪ್ರಾರ್ಥಿಸಿದ್ದಾರೆ. ಧನ ದಾನ್ಯ ಬೇಡಿದ್ದಾರೆ. ಅಭೀಷ್ಟಗಳನ್ನು ಅನುಗ್ರಹಿಸಲಿ, ಸತ್ಫಲವನ್ನು ನೀಡಲಿ, ಭೂತ ಜಾತಗಳಿಂದ, ಶತ್ರುಗಳಿಂದ ರಕ್ಷಿಸಲಿ, ಯಥೇಚ್ಛ ಅನ್ನಧನಗಳು, ಉಪಾಯನ ರೂಪದಲ್ಲಿ (ದಾನ ರೂಪದಲ್ಲಿ) ಸಿಕ್ಕುವಂತಾಗಲಿ. ಯಾಜ್ಞಿಕರ ಹಸಿವು ನಿವಾರಿಸಲಿ. ದೇವತೆಗಳಿಗೆ ಹವಿಸ್ಸು ತಲುಪಿಸಲಿ. ಯಾಜ್ಞಿಕರು ಬಹುಕಾಲ ಬಾಳುವಂತೆ ಆಯಸ್ಸು ಕೊಡಲಿ. ಶತ್ರುಗಳು, ಅವರ ಪುತ್ರರು, ಭಟರುಗಳು ಎಲ್ಲರನ್ನೂ ನಾಶಮಾಡಲಿ, ಮನಪೂರ್ವಕವಾಗಿ ಸ್ತೋತ್ರ ಮಾಡುವವರಿಗೆ, ಹವಿಸ್ಸು ಅರ್ಪಿಸುವವರಿಗೆ ತೃಪ್ತಿಯಾಗುವಷ್ಟು ಐಶ್ವರ್ಯವನ್ನು ಅನುಗ್ರಹಿಸಲಿ.

★ ಆಂಗೀರಸರು ಅಗ್ನಿ ಸ್ಥಾಪನೆ ಮಾಡಿದರು. ವಸಿಷ್ಟರ ಕಾಲದಿಂದಲೂ ಅಗ್ನಿ ಮತ್ತು ಯಾಜ್ಞಿಕರ ನಡುವೆ ಸ್ನೇಹ ಏರ್ಪಟ್ಟಿದೆ ಹಾಗೂ ಮುಂದುವರಿದಿದೆ. ಬಲಿಷ್ಟ ಅಗ್ನಿಯಿಂದ ಫಣಿಯು ನಾಶವಾಗಿ ಗೋವುಗಳು ರಕ್ಷಿಸಲ್ಪಟ್ಟವು. ವಾಯುವು ಅಗ್ನಿಯನ್ನು ಶುಭ್ರ ವರ್ಣದವನನ್ನಾಗಿಸಿದನು. ರಾಕ್ಷಸರು ಹವಿಸ್ಸನ್ನು ಪಡೆಯಲು ಬಂದವರು ಅಗ್ನಿಗೆ ಹೆದರಿ ಓಡಿ ಹೋದರು. ಸಪತ್ನೀಕರಾಗಿ ಎಲ್ಲ ದೇವತೆಗಳು ಅಗ್ನಿಯಿಂದ ಸ್ವೀಕರಿಸಲ್ಪಟ್ಟ ಆಹುತಿಗಾಗಿ ಅಗ್ನಿಯನ್ನು ಹುಡುಕುತ್ತಾರೆ.

ಋಷಿಗಳು - ಮದುಶ್ಚಂದ್ರರು : ಅಗ್ನಿಯ ನಾಲ್ಕು ರೂಪಗಳು ಹೀಗಿವೆ (1) ಆಹವನೀಯ (2) ಮಾರ್ಜಾಲೀಯ (3) ಗಾರ್ಹಪತ್ಯ (4) ಅಗ್ನಿದ್ರಯ. ಅಗ್ನಿಯು ಭೂತಕಾಲದಲ್ಲಿ, ವರ್ತಮಾನ ಕಾಲದಲ್ಲಿ ಎಲ್ಲಾ ಋಷಿಗಳಿಂದಲೂ ಸ್ತುತಿಸಲ್ಪಟ್ಟವನು. ಈಗಲೂ ಸಹ ಸ್ತೋತ್ರಗಳನ್ನು ಪಡೆಯುತ್ತಾ ಇದ್ದಾನೆ. ★ ಅಗ್ನಿಯು ಕೊಟ್ಟ ವಸ್ತುಗಳನ್ನು ಅಗ್ನಿಗೆ ಅರ್ಪಿಸುವುದರಿಂದ ಅವು ವೃದ್ಧಿಯಾಗುತ್ತವೆ. ಅಗ್ನಿಯು ಇಂದ್ರನ ಸಂತೋಷಕ್ಕಾಗಿ ಯಜ್ಞದಲ್ಲಿ ಹೋತೃವಾಗಿ ನೇಮಿತನಾಗಿದ್ದಾನೆ. ಅಗ್ನಿಗೆ (1) ಸುಸಮಿದ್ಧ (2) ತನೂನಪಾತ್ (3) ನರಾಂಶ (4) ಇಳಾ (5) ಬರ್ಹಿ (6) ದೇವ್ಯ (7) ಹೋತಾರ (8) ವನಸ್ಪತಿ (9) ಸ್ವಾಹಾ ಎಂದೆಲ್ಲಾ ಕರೆಯುತ್ತಾರೆ. ಅಗ್ನಿ ಅತೀ ಶ್ರೇಷ್ಟ ಗುಣಗಳಿಂದ ದೊಡ್ಡವನು, ಪ್ರಕಾಶಮಾನ ಕಿರಣಗಳಿಂದ ಕೇಡು ಬಯಸುವವರನ್ನು ಹಿಂಸಿಸಿ ರಕ್ಷಿಸುತ್ತಾನೆ. ★ ಅಗ್ನಿಯು ಶುನಃಶ್ಯೇಪನಿಗೆ ಅಶ್ವಿನಿ ದೇವತೆಗಳನ್ನು ಪ್ರಾರ್ಥಿಸುವಂತೆ ಹೇಳುತ್ತಾನೆ.

ಆಶ್ರಮ : ಆಶ್ರಮದಲ್ಲಿ ಬ್ರಹ್ಮ, ಹೋತೃ, ಅಧ್ವರ್ಯು, ಉದ್ಗಾತೃ ಎಂಬ ನಾಲ್ಕು ಜನ ಋತ್ವಿಕರು ಯಜ್ಞ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಯಜ್ಞದ ಬಗೆಗೆ ಚೆನ್ನಾಗಿ ಬಲ್ಲವನು ಪುರೋಹಿತ. ದೇವತೆಗಳನ್ನು ಯಜ್ಞಕ್ಕೆ ಕರೆತರುವವನು. ಹೋಮಕುಂಡದಲ್ಲಿ ಆಜ್ಯದಿಂದ ಅಗ್ನಿಯನ್ನು ಪ್ರಜ್ವಲಿಸುವವನು.

ಆಹ್ವಾನಿತ ದೇವತೆಗಳೊಂದಿಗೆ ಯಜ್ಞ ಭೂಮಿಗೆ ಬರಲು ಅಗ್ನಿಯನ್ನು ಯಜಮಾನನು ಪ್ರಾರ್ಥಿಸುತ್ತಾನೆ. ಅಗ್ನಿಯು ಯಾಜ್ಞಿಕರನ್ನು ವಾತ್ಸಲ್ಯದಿಂದ ಪ್ರಸನ್ನನಾಗಿ ಮಗನಂತೆ ನೋಡಿಕೊಳ್ಳಲು ಪ್ರಾರ್ಥಿಸುತ್ತಾರೆ.

ದೇವರಾತ : ಅಗ್ನಿಯು ಯಜ್ಞ ಸಂಪಾದಕ, ಅದಿತಿ ಪುತ್ರ, ವರುಣ ದೇವರ ಕ್ರೋಧ ಶಮನಕ್ಕೆ ಯಜ್ಞ ಹೋಮ ಸ್ತೋತ್ರಗಳನ್ನು ನಮಸ್ಕಾರಗಳನ್ನು ಹಗಲೂ ರಾತ್ರಿ ಅರ್ಪಿಸುತ್ತಾರೆ. ಲೋಕ ಕಲ್ಯಾಣಕ್ಕಾಗಿ ಇಂದ್ರ ವರುಣರಿಗೆ ಹವಿಸ್ಸು ಅರ್ಪಿಸುತ್ತಾರೆ. ಸಮಸ್ತ ಅಗ್ನಿಗಳೊಂದಿಗೆ ಅಗ್ನಿಯು ಆಸೀನನಾಗಲಿ. ದೇವತೆಗಳು ಪ್ರಾರ್ಥನೆಗಳನ್ನು ಸ್ವೀಕರಿಸಲಿ.

ಪ್ರಾರ್ಥನೆ : ಪ್ರಾಣ ದಾನ, ಆಯುಸ್ಸು, ಧನ, ರಕ್ಷಣೆಗಳನ್ನು ಬೇಡಿದ್ದಾರೆ. ಅನ್ನ, ಆಹಾರ, ಅಭೀಷ್ಟ ಸೌಖ್ಯಗಳಿಗಾಗಿ ಕೋರಿದ್ದಾರೆ. ಸ್ವರ್ಗ ಲೋಕ, ಮಧ್ಯಲೋಕ, ಅನ್ನವನ್ನು ಭೂಲೋಕದ ಐಶ್ವರ್ಯವನ್ನು ಅಪೇಕ್ಷಿಸಿದ್ದಾರೆ. ಯುದ್ಧದಲ್ಲಿ ಜಯಕ್ಕಾಗಿ ಪ್ರಾರ್ಥಿಸಿದ್ದಾರೆ. ಅಖಂಡ ಹಿರಿಯ, ಕಿರಿಯ ದೇವತೆಗಳಿಗೆಲ್ಲ ನಮಿಸಿ ಪ್ರಾರ್ಥಿಸಿದ್ದಾರೆ.

ದೀರ್ಘತಮ ಔಚಿತ್ಯರು : ಅಗ್ನಿಯು ಎಲ್ಲಾ ಪ್ರಾಣಿಗಳ ಶರೀರಕ್ಕೆ ಆದಿತ್ಯ ತೇಜಸ್ಸು ಕೊಡುತ್ತಾನೆ. ಅಪ್ರತಿಹತ ಶಕ್ತ, ಸೌಮ್ಯ, ಸಾರ್ವಭೌಮ, ಪ್ರಭುವೂ ಆಗಿದ್ದಾನೆ. ಉತ್ತಮ ಧನ, ಪ್ರೀತಿ ಪಾತ್ರ ಪುತ್ರರನ್ನು ಕರುಣಿಸುತ್ತಾನೆ. ಪೂಜಾಯೋಗ್ಯ ಮಂತ್ರಗಳಿಂದ ಸ್ತುತಿಸುತ್ತಾರೆ. ಹರ್ಷ ಉಂಟುಮಾಡುವ ಜ್ವಾಲೆಯವನು. ಯಜಮಾನನನ್ನು ಅನುಗ್ರಹಿಸುವವನು, ಈ ಎರಡೂ ಅಗ್ನಿಯ ಫಲರೂಪಗಳು. ರೂಪಾಭಿಮಾನಿ, ದೇವತೆಗಳು ಅವರವರ ಕರ್ತವ್ಯ ನಿರತರಾಗಿರುವಂತೆ ಮಾಡಿ ಹವಿಸ್ಸನ್ನು ಹಂಚುತ್ತಾನೆ.

ಉತ್ಪನ್ನನಾದೊಡನೆಯೇ ವಾಯುವಿನೆದುರು ಪ್ರತ್ಯಕ್ಷನಾಗುತ್ತಾನೆ. ಜ್ವಲನದಿಂದ ದ್ಯುಲೋಕ, ಪೃಥ್ವಿಯನ್ನು ಬೆಳಗುತ್ತಾನೆ. ತಡೆಯಲಾಗದ ಪ್ರಸರಣವುಳ್ಳವನು, ಅಗ್ನಿ , ನೀರು ಸೇರಿ ವೃಷ್ಟಿ ಉಂಟುಮಾಡುತ್ತಾರೆ. ಸ್ವ ಸಾಮರ್ಥ್ಯದಿಂದ ಅಗ್ನಿಯು ದೇವ ಮಾನವರಿಗೆ ಈಶ್ವರನಾಗಿದ್ದಾನೆ. ದ್ಯಾವಾ ಪೃಥ್ವಿಗಳನ್ನು ವ್ಯಾಪಿಸುತ್ತಾ ನೂತನ ಸ್ತೋತ್ರಗಳನ್ನು ಸ್ವೀಕರಿಸುತ್ತಾ ಮನೋಹರನಾಗಿ ಎಲ್ಲರಿಗೂ ಗೋಚರಿಸುತ್ತಾನೆ. ಸಕಲ ದೇವತೆಗಳಿಗೂ ಏಕಮಾತ್ರ ಪ್ರತಿನಿಧಿ.

★ಅಹಂಕಾರ ರಹಿತರು ಮಾತ್ರ ಕೃಪೆಗೆ ಪಾತ್ರರಾಗುತ್ತಾರೆ. ಇಂತಹವರು ಕೇಳುವ ಯೋಗ್ಯ ಪ್ರಶ್ನೆಗೆ ಉತ್ತರಿಸುತ್ತಾನೆ. ಪ್ರತ್ಯುತ್ತರವನ್ನು ಅಗ್ನಿ ಸಹಿಸನು. ಬಳಲಿದ್ದರೂ ಯಜಮಾನನಿಗಾಗಿ ಕರ್ಮಗಳಲ್ಲಿ ತೇಜಸ್ಸಿನಿಂದ ಸಂಯುಕ್ತನಾಗುತ್ತಾನೆ. ಜ್ವಾಲೆಗಳಿಂದ ಸರ್ವತ್ರ ಸಂಚರಿಸುತ್ತಾ ಎತ್ತರ ವೇದಿಕೆಯಲ್ಲಿ ಪಾದವಿರಿಸಿದ್ದಾನೆ. ಸೂರ್ಯರೂಪಿ, ನಾಶರಹಿತ, ದಶ ದಿಕ್ಕುಗಳಲ್ಲೂ ಕಾಣಿಸಿಕೊಳ್ಳುತ್ತಾನೆ. ಪೂಜ್ಯನಾಗುತ್ತಾನೆ. ಆದಿತ್ಯನು ದೇವತೆಗಳಿಗಿದ್ದಂತೆ ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆತರುವ ದೇವಪ್ರತಿನಿಧಿ. ಗಾರ್ಹಪತ್ಯ ಸ್ಥಾನದಲ್ಲಿ ಶಾಶ್ವತವಾಗಿ ಜಾಗರೂಕತೆಯಿಂದ ರಕ್ಷಿತನಾಗಿ ಹಿಡಿಯಲ್ಪಟ್ಟಿದ್ದಾನೆ. ಯಜಮಾನನನ್ನು ಯಾರೂ ಹಿಂಸಿಸಲಾರರು. ಏಕೆಂದರೆ ಶ್ರದ್ಧಾ ಭಕ್ತಿಗಳಿಂದ, ಸ್ತೋತ್ರ ಕೀರ್ತನೆಗಳಿಂದ ಅಗ್ನಿ ದೇವತೆಗಳು ತೃಪ್ತರಾಗಿರುತ್ತಾರೆ.

★ ಅಜ್ಞಾನಿಗಳು, ಅವಿದ್ವಾಂಸರು ಅಗ್ನಿಯನ್ನು ಅವನ ಮಹತ್ತನ್ನು ತಿಳಿಯಲಾರರು. ವಾಯುವಿನ ಸಹಾಯದಿಂದ ಕಾಡನ್ನು ಸುಡುತ್ತಾನೆ. ಪ್ರಭುಗಳಿಗೆ ಪ್ರಭು, ಸೂರ್ಯನಂತೆ ಬೆಳಗುತ್ತಾನೆ. ವಾಯುವಿನಂತೆ ಆಕಾಶಸ್ತ ಇಷ್ಟಾರ್ಥ ಧನದಾತ. ಸೋಮರಸ ತಯಾರಿಕೆಯ ಶಬ್ದದಿಂದಲೇ ಸಂತೋಷಪಡುತ್ತಾನೆ. ಉದಕಯುಕ್ತ ಯಾಗಪ್ರದೇಶವಾದ ಧನ ಹೊಂದಿರುವವನು, ಜೀವರಾಶಿಗಳ ಸೃಷ್ಟಿದಾತ. ಅಗ್ನಿಯನ್ನು ಪೂಜಿಸುವವರು ಚಂದ್ರ ಸ್ಥಾನ ಪಡೆಯುತ್ತಾರೆ. ದೇವತೆಗಳಿಗೂ ಅಧಿಕನಾಗುತ್ತಾನೆ. ಮಿತ್ರಾ ವರುಣರ ಉಪಚಾರಗಳಿಂದ ಮಳೆ ಉಂಟಾಗುತ್ತದೆ. ಮೂರು ಲೋಕದಲ್ಲೂ ಮಿತ್ರಾ ವರುಣರು, ಅನ್ನ, ಧನ ಹೊಂದಿರುತ್ತಾರೆ. ದನ ಕರುಗಳು ರಕ್ಷಿತವಾಗಿ ಕೊಟ್ಟಿಗೆ ಸೇರುವುವು.

ಆಶ್ರಮ ವಿಭಾಗ : ಯಾಜ್ಞಿಕರು ಮಂತ್ರ ರೂಪ ಶಕ್ತಿ, ಶರೀರ ಸಾಮರ್ಥ್ಯ ಸ್ತೋತ್ರಗಳಿಂದ ಅಗ್ನಿಯನ್ನು ಉತ್ಪಾದಿಸಿ ಕಟ್ಟಿಗೆಯಲ್ಲಿ ಸೂಕ್ಷ್ಮನಾಗಿದ್ದ ಅಗ್ನಿಯನ್ನು ಜಾಗೃತಗೊಳಿಸಿ ವಾಯುವಿನ ಸಹಾಯದಿಂದ ಮೂಲಿಕೆಗಳನ್ನು ದಶ ದಿಕ್ಕುಗಳಿಂದಲೂ ಆಕ್ರಮಿಸುತ್ತಾರೆ.

ಅಗ್ನಿ ಜ್ವಾಲೆಗಳು ಊರ್ಧ್ವ ಮುಖವಾಗಿ ಅಂತರಿಕ್ಷ ಸೇರುತ್ತವೆ. ಜ್ವಲಿಸುವ ಅಗ್ನಿಯಿಂದ ಕಾಷ್ಟಗಳು ಕಪ್ಪಾಗಿ ಮೃಗ ಪಕ್ಷಿಗಳು ಓಡಿಹೋಗುತ್ತವೆ. ಕರ್ತವ್ಯ ನಿರತ ವರುಣ, ಉದಾರ ದಾನಿ ಮಿತ್ರ, ಇವರು ಅಗ್ನಿಯಿಂದ ತೀಕ್ಷ್ಣ ಚೈತನ್ಯ ಪಡೆಯುತ್ತಾರೆ. ಋತ್ವಿಜರು ದೇವತೆಗಳನ್ನು ತೃಪ್ತಿಪಡಿಸುವ ಅಗ್ನಿಯನ್ನು ಶರೀರ ಬಲ ಕರ್ಮಗಳಿಂದ ಪೂಜಿಸುತ್ತಾರೆ. ಪ್ರಜ್ವಲಿಸುವ ಅಗ್ನಿ ಯಜ್ಞವನ್ನು ವಿಸ್ತರಿಸಿ ಯಜಮಾನನ ಹವಿಸ್ಸನ್ನು ಸ್ವೀಕರಿಸಲು ದೇವತೆಗಳನ್ನು ಕರೆತರಲಿ. ಫಲದಾಯಕ ಯಜ್ಞ ನೆರವೇರಿಸಲು ಹೇಳುತ್ತಾರೆ. ಭೃಗು ವಂಶದಲ್ಲಿ ರಾಜರೆಲ್ಲರಿಂದಲೂ ಯಜ್ಞದಲ್ಲಿ ಸ್ಥಾಪಿತನಾದಂತೆ ಈ ಯಜ್ಞದಲ್ಲೂ ಉತ್ತರ ವೇದಿಕೆಯಲ್ಲಿ ಸಕಾಲದಲ್ಲಿ ಸ್ಥಾಪಿತನಾಗಲಿ. ಪ್ರಜ್ವಲಿಸಲಿ. ಹೋತೃ ಅಧ್ವರ್ಯು ಒಂದೇ ಶ್ರಮದಿಂದ ಕರ್ಮ ನಿರ್ವಹಿಸುತ್ತಾರೆ. ಇವರು ವಿಶೇಷ ಅನುಭವದಿಂದ ಯಜ್ಞ ಕರ್ಮ ಆಚರಿಸುತ್ತಾರೆ. ಹವಿಸ್ಸು, ಅನ್ನ ಆಜ್ಯಗಳಿಂದ ಅಗ್ನಿಯನ್ನು ತರುಣನಂತೆ ಮಾಡುತ್ತಾರೆ. ಅಗ್ನಿಯು ಸ್ತೋತ್ರ, ಹವಿಸ್ಸುಗಳಿಂದ ತೃಪ್ತನಾಗಲಿ.

★ ಯಾಜ್ಞಿಕರಿಗೆ ಯಜ್ಞಾನುಷ್ಟಾನ ಕರ್ಮಗಳಿಗೆ ಕರ್ತವ್ಯ ಜ್ಞಾನ ಉಪದೇಶಿಸುತ್ತಾನೆ. ★ ಮೇಧಾವಿ, ಪ್ರಯೋಗ ಕುಶಲರು, ಹೋತೃ, ಅಧ್ವರ್ಯು, ಯಜಮಾನ ಅವನ ಪತ್ನಿ ಯಜ್ಞ ಸಿದ್ಧ ಮಾಡಿ ಅಗ್ನಿಯನ್ನು ಸಂತೋಷಗೊಳಿಸುತ್ತಾರೆ. ಹೃತ್ಪೂರ್ವಕವಾಗಿ ಆರಾದಿಸುತ್ತಾರೆ. ಸಾಕ್ಷಾತ್‌ಕರಿಸಿಕೊಳ್ಳುತ್ತಾರೆ. ★ ದೇವಭಕ್ತರಲ್ಲದವರು ಎರಡು ಬಗೆ (1) ಧನಿಕರಾಗಿದ್ದು ಅಗ್ನಿಯನ್ನು ಪೂಜಿಸದವರು, ದಕ್ಷಿಣೆ ಕೊಡದವರು (2) ದೈವಭಕ್ತರಲ್ಲದವರು, ಸ್ತುತಿಸದವರು, ನಾಸ್ತಿಕರು ಈ ಇಬ್ಬರನ್ನು ಅಗ್ನಿಯು ಅನುಗ್ರಹಿಸಬಾರದು.
ಅಗ್ನಿಯನ್ನು ಪೂಜಿಸುವವರು. ಅಗ್ನಿ ಮೂರ್ತಿಯನ್ನು ಸ್ತೋತ್ರ ಸ್ತುತಿಗಳಿಂದ ಪೂಜಿಸುತ್ತಾರೆ. ಅಗ್ನಿಯ ಪ್ರಕಾಶ ರಶ್ಮಿಗಳು ವಾಯುವಿನಲ್ಲಿ ಆವಿಯಾಗಿ ವ್ಯಾಪಿಸಿ ಅನ್ನ, ಆಯಸ್ಸು, ಯಜ್ಞಕರ್ತರಿಗೆ ಹಾಗೂ ಅವರ ಪುತ್ರ, ಪೌತ್ರರಿಗೆ ಸಂತೋಷ ಸೂಚಿಸುವರು, ತಮ್ಮ ಕರ್ಮಗಳಿಂದ ತಮ್ಮನ್ನು ತಾವೇ ರಕ್ಷಿಸಿಕೊಳ್ಳಬಲ್ಲವರು, ಗಾರ್ಹಪತ್ಯದಿಂದ ಆಹವನೀಯಾರ್ಥ ಅಲ್ಲೇ ನಿಲ್ಲಿಸಿಕೊಂಡಿದ್ದಾರೆ. ನಂತರ ಯಜ್ಞ ಸ್ಥಾನಕ್ಕೆ ಕರೆದ್ಯೊಯುತ್ತಾರೆ. ಯಾಜ್ಞಿಕರು ಭಕ್ತಿ ಶ್ರದ್ದೆಗಳಿಂದ ಯಜ್ಞಾದಿಗಳಿಂದ ಕರ್ಮನಿರತರಾಗಿರುತ್ತಾರೆ. ಹವಿಸ್ಸು ಅರ್ಪಿಸುವವರಿಗೆ ಸಂಪತ್ ಪ್ರದಾತ. ಮಾನವರು ಯಜ್ಞಾದಿಗಳಲ್ಲಿ ಮಿತ್ರಾ ವರುಣರನ್ನು ಶ್ಲಾಘಿಸುತ್ತಾರೆ, ಪೂಜಿಸುತ್ತಾರೆ, ಆತ್ಮ ಸಂತೋಷದಿಂದ ಸೋಮಾಹುತಿ ಅರ್ಪಿಸುತ್ತಾರೆ. ಅಗ್ನಿ ಮತ್ತು ಆಹ್ವಾನಿತ ದೇವತೆಗಳು ಯಾಗಕ್ಕೆ ಬರಲಿ, ನಮ್ಮ ಸ್ತುತಿಗಳನ್ನು ಕೇಳಲಿ, ಹವಿಸ್ಸನ್ನು ಸ್ವೀಕರಿಸಲಿ, ಯಾಗ ಕರ್ಮಗಳನ್ನು ನಿರ್ವಿಘ್ನವಾಗಿ, ಯಶಸ್ವಿಯಾಗಿ ನಡೆಸಿಕೊಡಲಿ.

ಅಗ್ನಿಯು ತಮ್ಮನ್ನು ಸ್ವರ್ಗಾಭಿಮುಖಿ ಕರೆದುಕೊಂಡು ಹೋಗಲು ಪ್ರಾರ್ಥಿಸಿದ್ದಾರೆ. ವನ ಕಾಷ್ಟಾದಿಗಳನ್ನು ನಾಶಮಾಡುವಂತೆ ಯಜಮಾನರು ಮತ್ತು ಅವರ ಅನುಯಾಯಿಗಳನ್ನು ಶತ್ರು ಬಾಧೆಗಳಿಂದ ಬಿಡಿಸಲಿ, ಇಷ್ಟಾರ್ಥ ಸಕಲ ಧನ, ಗವಾದಿ ಧನ ಪೂರೈಸಿ ಯಾಜ್ಞಿಕರಿಗೆ ದಾತನಾಗಿರಲಿ, ಪುತ್ರ ಪೌತ್ರರನ್ನು ಕಲ್ಯಾಣಗಳಿಂದ ರಕ್ಷಿಸಲಿ, ಎಲ್ಲರಿಗೂ ಆಶ್ರಯದಾತನಾಗಿ ರಕ್ಷಕನಾಗಿರಲಿ, ಹವಿಸ್ಸನ್ನು ದೇವತೆಗಳಿಗೆ ಮಾನವರಿಗೆ ಧನವನ್ನು ಅಗ್ನಿಯು ಅನುಗ್ರಹಿಸಲಿ, ಅಗ್ನಿಯು ತನ್ನನ್ನು ಸ್ತುತಿಸುವವರನ್ನು ಮಾಂತ್ರಿಕರಿಂದ ರಕ್ಷಿಸಿ ಅಭಯ ಕೊಡಲು ಪ್ರಾರ್ಥಿಸಿದ್ದಾರೆ. ಪುತ್ರರು, ಧನ, ಚಂದ್ರ ಸ್ಥಾನ ಪ್ರಾರ್ಥಿಸುತ್ತಾರೆ. ★ ಒಳ್ಳೆಯದು, ಕೆಟ್ಟದು ವಿಂಗಡಿಸಿ ಪ್ರಶಸ್ತ ಕೆಲಸದಲ್ಲಿ ತೊಡಗಿರುವಂತೆ ಒಳ್ಳೆಯ ಮನಸ್ಸನ್ನೇ ಕೊಡಲು ಪ್ರಾರ್ಥಿಸಿಕೊಂಡಿದ್ದಾರೆ.

ಇಂದ್ರಾಗ್ನಿಗಳು ಭೂಲೋಕ, ಅಂತರಿಕ್ಷ, ದ್ಯುಲೋಕ ಎಲ್ಲೆ ಇರಲಿ ನಮ್ಮಲ್ಲಿಗೆ ಬರಲಿ, ಹವಿಸ್ಸು ಸೋಮ ಸ್ವೀಕರಿಸಲಿ, ಧನ ರಕ್ಷಿಸಲಿ. ವಾಯುವು ದ್ಯುಲೋಕದಿಂದ ಅಗ್ನಿಯನ್ನು ಭೂಮಿಗೆ ತಂದನು, ಶ್ಯೇನಪಕ್ಷಿ ರೂಪದಿಂದ ಗಾಯತ್ರಿಯು ಸೋಮನನ್ನು ಯಜ್ಞ ಕರ್ತರಿಗಾಗಿ ಭೂಮಿಗೆ ತಂದರು. ಅಗ್ನಿ ಮರುತ್‌ಗಳಂತೆ 49 ಶಾಖೆಗಳುಳ್ಳವನು, ಸಜ್ಜನರ ಪಾಲಕ. ಪ್ರತಿ ಯುಗದಲ್ಲೂ ದೇವತೆಗಳು ಅಗ್ನಿಯನ್ನೇ ತಮ್ಮ ಪ್ರತಿನಿಧಿಯನ್ನಾಗಿ ಮಾಡಿಕೊಂಡಿದ್ದಾರೆ. ಅವನು ಮರಣಧರ್ಮ ರಹಿತ, ಜ್ಞಾನ ದಾಯಕ.

## ಋಷಿಗಳು ಅಗ್ನಿದೇವನಲ್ಲಿ ಮಾಡಿದ ನಾನಾ ಪ್ರಾರ್ಥನೆಗಳು

★ಅಗ್ನಿಯ ಸ್ತೋತ್ರ, ಪೂಜೆ, ಯಾಗಗಳನ್ನು ಮಾಡುವ ಸತ್ ಬುದ್ಧಿ ಕರುಣಿಸಲಿ. ಅಗ್ನಿ ಪೂಜಿತರಾಗಿರುವಂತೆ ಅನುಗ್ರಹಿಸಲಿ. ಅಗ್ನಿಯು ನಮ್ಮ ಸ್ತೋತ್ರಗಳನ್ನು, ಪೂಜೆಗಳನ್ನು ಆಯಾಯ ದೇವತೆಗಳಿಗೆ ತಲುಪಿಸಲಿ, ಅಗ್ನಿಯು ದೇವತೆಗಳೊಡಗೂಡಿ ಸಮೀಪದ ಯಜ್ಞಕ್ಕೆ ಬರಲಿ, ಅಗ್ನಿ ದೂಮವು ಅಂತರಿಕ್ಷದಲ್ಲಿ ಧ್ವಜದಂತಿರಲಿ. ಅಗ್ನಿಯಿಂದ ಹವಿಸ್ಸು ಸ್ವೀಕರಿಸಿದ ದೇವತೆಗಳು ಅನುಗ್ರಹಿಸಲಿ, ಅಗ್ನಿಯನ್ನು ಸ್ತುತಿಸಿ ಬಲವಂತರಾಗುವಂತಾಗಲಿ. ಅನ್ನ, ಶಕ್ತಿ ಹೊಂದುವಂತಾಗಲಿ, ಅಗ್ನಿ ಭಕ್ತರಿಗೆ ಮಿತ್ರರಿಗೆ, ಬೇಕು ಬೇಕಾದುದನ್ನು ಕೊಡಲಿ. ಅಗ್ನಿ ಎಲ್ಲಾ ರೀತಿಯಿಂದಲೂ ಸಹಾಯಕನಾಗಿರಲಿ, ಅಗ್ನಿ ಪರಿವಾರ ದೇವತೆಗಳು, ಕಲ್ಯಾಣಗಳಿಂದ ರಕ್ಷಿಸಲಿ, ಅಸುರರನ್ನು, ಹಿಂಸಿಸುವವರನ್ನು ಅಗ್ನಿಯು ಹಿಂಸಿಸಲಿ, ಅಶ್ವಗಳಿಗಾಗಿ ಋಷಿಗಳು ಪ್ರಾರ್ಥಿಸಿದ್ದಾರೆ. ಅಗ್ನಿಯು ದಾರಾಕಾರ ಮಳೆ ಸುರಿಸಲಿ, ಅಗ್ನಿ ನಮ್ಮನ್ನು ಭಕ್ತರೆಂದು ತಿಳಿದು ರಕ್ಷಿಸಲಿ, ಅಗ್ನಿಯು ಧನ ನೀಡಬೇಕಲ್ಲವೆ, ಅಪೇಕ್ಷಿತ ಧನ ನೀಡಲಿ. ಅಗ್ನಿಯ ಸ್ನೇಹವನ್ನು ಬಯಸುತ್ತಾರೆ. ಅಗ್ನಿಯು ನಮ್ಮ ವಿಶೇಷ ಇಷ್ಟಾರ್ಥಗಳನ್ನು ತಿಳಿದು ಅವನ್ನು ಅನುಗ್ರಹಿಸಲಿ. ಅಗ್ನಿಯ ಬಗ್ಗೆ ನಮಗೇನು ಗೊತ್ತಿಲ್ಲದೆ ಇದ್ದರೂ ಸ್ತೋತ್ರ ಮಾಡಿದರೂ ಅವರೂ ನಮ್ಮವರೆಂದು ರಕ್ಷಿಸಲಿ. ಅಗ್ನಿ ಜ್ವಾಲೆಗಳು, ಪಾಪ ನಾಶಮಾಡಲಿ. ಅಗ್ನಿ ತತ್ವಜ್ಞಾನ ವಿಷಯ ದಾತನಾಗಿರಲಿ. ಅಪರಿಮಿತ ಅಕ್ಷಯ ರತ್ನ ಕನಕಗಳನ್ನು ಬೇಡಿದ್ದಾರೆ.

★ ಆಶ್ರಿತರನ್ನು ರಕ್ಷಿಸಲಿ, ಆಯಸ್ಸು ನೂರು ಸಂವತ್ಸರಗಳು ಸಂತೋಷದಿಂದ ಕಳೆಯುವಂತಾಗಲಿ. ಆಪತ್ತುಗಳಿಂದ ರಕ್ಷಿಸಲಿ, ಆಡುಗಳಿಗಾಗಿ ಬೇಡಿದ್ದಾರೆ. ಆಸ್ತಿಕರು ದಿನ ದಿನವೂ ಹೆಚ್ಚಲಿ. ಆಕರ್ಷಕ ಧನ ನೀಡಲಿ, ಆಪತ್ತುಗಳನ್ನು ನಿವಾರಣೆ ಮಾಡಲಿ, ಆರೋಗ್ಯ ಕರುಣಿಸಲಿ ಎಂದು ಬೇಡಿದ್ದಾರೆ.

★ಇಷ್ಟಾರ್ಥಗಳನ್ನು ಪೂರ್ಣಮಾಡಲಿ, ಇತರರಿಂದ ಪಡೆಯಲಾಗದಂತಹ ಧನ ನೀಡಲಿ.

★ ಉಷ :ಕಾಲದಲ್ಲಿ ಅಗ್ನಿಯು ಸಾನಿಧ್ಯ ನೀಡಲಿ, ಉದಾರ ದಾನಿಗಳು, ಆಸ್ತಿಕರು ದಿನದಿನವೂ ಹೆಚ್ಚಲಿ.

★ ಉಪಚರಿಸುವವರನ್ನು ಕಾಪಾಡಲಿ

★ ಋತ್ವಿಜರ ಭಯ ನಿವಾರಣೆ ಮಾಡಲಿ, ಋತ್ವಿಜರನ್ನು ಧನವಂತರನ್ನಾಗಿ ಮಾಡಲಿ.

★ ಎಲ್ಲ ರೀತಿಯಿಂದಲೂ ಅಗ್ನಿ ಸಹಾಯಕನಾಗಿರಲಿ.

★ ಕಳ್ಳರು ಕದಿಯಲಾಗದಂತಹ ಧನ ಮತ್ತು ಹವಿರೂಪ ಅನ್ನಗಳಿಗಾಗಿ ಬೇಡಿದ್ದಾರೆ. ಕ್ಷೀರಕ್ಕಾಗಿ ಗೋವುಗಳನ್ನು ಪ್ರಾರ್ಥಿಸಿದ್ದಾರೆ. ಕೇಡು ಬಯಸುವವರನ್ನು ತಡೆಹಿಡಿಯಲಿ. ಕರ್ಮ ತ್ಯಜಿಸದಿರುವ ಯಜಮಾನನಿಗೆ ಸಪ್ತ ಧಾತುಗಳಿಂದ ಕೂಡಿದ ಧನ, ಅನ್ನವನ್ನು ಕೊಡಲಿ. ಕರ್ಮ ಮಾಡಲು ಅನುಗ್ರಹಿಸಿ ಸ್ವರ್ಗಕ್ಕೆ ಕರೆದೊಯ್ಯಲಿ. ಕೇಡಿಗಳಿಂದ ರಕ್ಷಣೆ ಮಾಡಲಿ, ಕೆಟ್ಟ ಬುದ್ಧಿಯವರು ದೇವತೆಗಳನ್ನು ದೂಷಿಸುವವರು ಯಜಮಾನನ ಮನೆಗೆ ಪ್ರವೇಶಿಸದಂತೆ ಮಾಡಲಿ. ಕರ್ಮಗಳನ್ನು ಮಾಡಿಯೇ ಇಷ್ಟಾರ್ಥಗಳನ್ನು ಪಡೆದುಕೊಳ್ಳಲು ಹೇಳಿದ್ದಾರೆ.

★ ಗೋವುಗಳನ್ನು ಅಧಿಕ ಧನವನ್ನು ಬೇಡಿದ್ದಾರೆ, ಗೋವುಗಳನ್ನು ಹಿಂಸಕರಿಂದ ರಕ್ಷಿಸಲಿ, ಗೃಹವು ಸಂಪತ್ಭರಿತವಾಗಿರುವಂತೆ ಮಾಡಲಿ. ಗಣ್ಯರಾಗಿರುವಂತೆಯೇ ಅನುಗ್ರಹಿಸಲಿ.

★ ಚೋರರನ್ನು, ಕೇಡು ಬಯಸುವವರನ್ನು ಹಿಂಸಿಸಲಿ, ಚೋರರು, ನಿಂದಕರು, ವಂಚಕರು, ಕಚ್ಚುತಕ್ಕ ಪ್ರಾಣಿಗಳು, ತೊಂದರೆ ಮಾಡದಂತೆ ಭಯ ನಿವಾರಣೆ ಮಾಡಲು ಪ್ರಾರ್ಥಿಸಿದ್ದಾರೆ.

★ ಜಯ, ಅಪಜಯ, ಮಾನ, ಅಪಮಾನಗಳಿಂದ ರಕ್ಷಿಸಲಿ.

★ ತೇಜೋಯುಕ್ತರನ್ನಾಗಿ ಮಾಡಲಿ, ತಡೆಯಲಾಗದಂತಹ ಕಠಿಣ ಸಮಸ್ಯೆಗಳು ಬರುವುದೇ ಬೇಡ.

★ ದೇವತೆಗಳು ನಮ್ಮಿಂದ ಯಜ್ಞ ಕಾರ್ಯ ನೆರವೇರಿಸುತ್ತಿರಲಿ. ದೇವತೆಗಳನ್ನು ಒಂದೇ ಅಥವಾ ಅವರವರ ರಥಗಳಲ್ಲಿ ಯಜ್ಞಕ್ಕೆ ಅಗ್ನಿ ಕರೆತರಲಿ, ಅವರೆಲ್ಲರೂ ದರ್ಭಾಸೀನರಾಗಲಿ, ದೇವತೆಗಳಿಗೆ ಅಗ್ನಿಯು ಹವಿಸ್ಸನ್ನು ತಲುಪಿಸಲಿ, ದೇವತೆಗಳನ್ನು ಉದ್ದೇಶಿಸಿ ಮಾಡುವ ಕರ್ಮಗಳಿಗೆ ಅವರನ್ನೇ ಕರೆತರಲಿ.

ದೇವತೆಗಳಿಂದ ಹಾಗು ಮಾನವರಿಂದ ಕೇಡು ಸಂಭವಿಸದಿರಲಿ. ಧನವಂತರಾಗಿ ಗಣ್ಯರಾಗಿರುವಂತೆ ಅನುಗ್ರಹಿಸಲಿ, ದ್ವೇಶಿಗಳನ್ನು ದೂರ ಓಡಿಸಿ ನಾಶಮಾಡಲಿ, ದುಷ್ಟಬುದ್ದಿಯು ಎಂದೂ ನಮ್ಮ ಮುಂದೆ ಬರದಿರಲಿ, ದಾರಿದ್ರ್ಯ, ಹಸಿವಿನ ಬಾಧೆಗಳು ಬೇಡವೇ ಬೇಡ. ಧನ, ಅನ್ನ, ದೀರ್ಘಾಯುಸ್ಸುಗಳಿಗಾಗಿ ಬೇಡಿದ್ದಾರೆ. ದು:ಖಗಳಿಂದ, ಪಾಪಗಳಿಂದ ಪಾರುಮಾಡಲಿ. ಧನದ ಬಳಿಗೆ ಯಜಮಾನನ್ನು ಕರೆದೊಯ್ಯಲಿ. ದಾತೃಗಳಿಗೆ ಶಾಶ್ವತ ಧನ ನೀಡಲಿ, ಅವರು ದಾನ ಮನಸ್ಕರಾಗಿರಲಿ. ದಂಪತಿಗಳು ಅನ್ಯೋನ್ಯ ಕರ್ಮ ನಿರ್ವಹಿಸುವಂತಾಗಲಿ. ದಾತೃಗಳು ತಮ್ಮಲ್ಲಿಯ ಧನ, ಧಾನ್ಯಗಳನ್ನು ದಾನ ಮಾಡಲಿ. ದಾನಿಗಳು ಋತ್ವಿಜರಿಗೆ ಅನರ್ಘ್ಯ ವಸ್ತುಗಳನ್ನು ಧಾನ ಮಾಡಲಿ.

★ ನಿಂದಕರನ್ನು ದೂರ ಅಟ್ಟಲಿ (ಓಡಿಸಲಿ)

★ ಪಶುಗಳಿಗಾಗಿ ಪ್ರಾರ್ಥಿಸಿದ್ದಾರೆ., ಪುತ್ರ, ಪೌತ್ರರುಗಳಿಗಾಗಿ ಹಾಗು ಅವರು ಬಲಶಾಲಿಗಳಾಗಿಯು ಇರುವಂತೆ ಅನುಗ್ರಹಿಸಲಿ, ಪಿತೃ ಪಿತಾಮಹರಿಗೆ ಕೀರ್ತಿ ತರಬಲ್ಲ ಪುತ್ರರನ್ನು ಬೇಡಿದ್ದಾರೆ. ಪಾಪ, ಪುಣ್ಯಗಳನ್ನು ಬೇರೆ ಮಾಡಲಿ, ಅವು ಭೂಲೋಕದ್ದಾಗಲಿ, ದ್ಯುಲೋಕದ್ದಾಗಲಿ ತಮಗೆ ಅಂಟದಿರಲಿ. ಪೂಜಿಸುವವರಿಗೆ ಧನ, ರಕ್ಷಣೆ, ಇಷ್ಟಾರ್ಥಗಳನ್ನು ಬೇಡಿದ್ದಾರೆ. ಪ್ರತಿಸಲ ಪೂಜಿಸಿದಾಗಲೂ ಧನ, ರಕ್ಷಣೆ ಒದಗಿಸಲಿ, ಪೂಜಕರಾಗಿರುವಂತೆಯೇ ಅನುಗ್ರಹಿಸಲಿ. <u>ಪುತ್ರರನ್ನು ದತ್ತು ತೆಗೆದುಕೊಳ್ಳುವುದು ಬೇಡವೇ ಬೇಡ ಅವರು ಪುನಹ ಹುಟ್ಟಿದ ಮನೆಗೆ ಹೋಗಿ ಸೇರುತ್ತಾರೆ.</u> ಪ್ರಶಾಂತ ಚಿತ್ತರಾಗಿರುವಂತೆ ಅನುಗ್ರಹಿಸಲಿ.

★ ಭೃಗು ಋಷಿಗಳು ಸ್ಥಾಪಿಸಿದ ಅಗ್ನಿಯ ಅನುಗ್ರಹ ಬೇಡಿದ್ದಾರೆ. ಭೃತ್ಯರಿಗಾಗಿಯೂ ಕೇಳಿದ್ದಾರೆ. ಭಯ ರಹಿತರನ್ನಾಗಿರಿಸಲಿ. ಭರಧ್ವಾಜ ಋಷಿಗಳು ಅಗ್ನಿಯನ್ನು ಪ್ರಸಿದ್ಧ ಪಡಿಸಿದ್ದಾರೆ.

★ ಮೇಧಾವಿಗಳೊಂದಿಗೆ ಇರುವಂತೆ ಮಾಡಲಿ, ಮಿತ್ರನಾಗಿ ಇರಲಿ, ಮಾನವರಿಂದ ಕೇಡು ಸಂಭವಿಸದಿರಲಿ, ಮಾನವಾರ್ಜಿತ ದೋಷರಹಿತ ಅನ್ನವು ಅಗ್ನಿಯನ್ನು ಸೇರಲಿ, ಮಂಗಳಕರ ಸಂಪತ್ತು ನಾಶರಹಿತ ಧನ ನೀಡಲಿ, ಮರಣರಾಹಿತ್ಯವನ್ನು ಅನುಗ್ರಹಿಸಲಿ, ಮಳೆ ಧಾರಾಕಾರವಾಗಿ ಸುರಿಯಲಿ.

★ ಯಜ್ಞ ಸ್ಥಾನದಲ್ಲಿ ಅಗ್ನಿ ಆಸೀನನಾಗಲಿ, ಯಜ್ಞ ಕರ್ಮ ನಿರತರಾಗಿರುವಂತೆ ಅನುಗ್ರಹಿಸಲಿ, ಯಜ್ಞ ನಿರ್ವಹಣೆಗೆ ಬೇಕು ಬೇಕಾದುದ್ದನ್ನು ಕೊಡಲಿ, ಯಜಮಾನಾರ್ಜಿತ ಹವಿಸ್ಸನ್ನು ಆಯಾಯ ದೇವತೆಗಳಿಗೆ ತಲುಪಿಸಲಿ. ಯುದ್ಧ ಕಾಲದಲ್ಲಿ ಅಸುರರನ್ನು, ವಂಚಕರನ್ನು ನಾಶಮಾಡಲಿ, ಯಜಮಾನನಿಗೆ ಕೇಡು ಬಯಸುವವರನ್ನು ನಾಶಮಾಡಲಿ, ಯಾಚಿಸಿದವರಿಗೆ ಆಶೀರ್ವಾದ, ಧನ ಲಭಿಸಲಿ, ಯಜಮಾನರಿಗೆ ಪುತ್ರ, ಪೌತ್ರರು, ಅಶ್ವ, ಗೋವು, ಧನ ನೀಡಲಿ. ಯಜಮಾನನನ್ನು ಕೊಲ್ಲಲು ಬಯಸುವವನ್ನು ಜ್ವಾಲೆಯಿಂದ ಧಹಿಸಲಿ, ಎಲ್ಲಾ ಪಾಪಗಳಿಂದ ಬಿಡುಗಡೆ ಮಾಡಲಿ, ಯಜ್ಞ ಕರ್ತರಲ್ಲದವರಿಂದ ದಾನ ಮಾಡದವರಿಂದ , ಕೃಪಣರಿಂದ ರಕ್ಷಿಸಲಿ, ಯಜಮಾನರು ರಿಕ್ತ ಹಸ್ತದವರಾಗದಿರಲಿ, ಯಜಮಾನನ ಮನೋಭಿಲಾಷೆ ಅರಿತು ಅವನನ್ನು ಅಗ್ನಿಯು ಅನುಗ್ರಹಿಸಲಿ.

★ ರೋಗ ನಾಶ ಮಾಡಿ ಆರೋಗ್ಯವಂತರನ್ನಾಗಿಸಲಿ. ರಾಕ್ಷಸರಿಂದ ಶರೀರ ರಕ್ಷಣೆ ಮಾಡಲಿ, ರಥಕ್ಕಾಗಿ ಹಾಗು ದಾತೃಗಳ ರಥವು ಯಾರಿಂದಲೂ ತಡೆಗಟ್ಟಲಾಗದಿರಲಿ. ರೋಗವು ತಮ್ಮನ್ನು ಪುತ್ರ, ಪೌತ್ರರನ್ನು, ಭೃತ್ಯರನ್ನು ಕಾಡದಿರಲಿ, ಎಲ್ಲರೂ ಆರೋಗ್ಯವಾಗಿರುವಂತೆ ಅನುಗ್ರಹಿಸಲಿ.

★ ವೈಶ್ವಾನರಾಗ್ನಿಯು ಯಜ್ಞ ರಕ್ಷಣೆ ಮಾಡಲಿ, ವಿರೋಧಿಗಳನ್ನು ಸೋಲಿಸಿ ನಾಶಮಾಡಲಿ, ವಸತಿಗಾಗಿ ಸ್ವಂತ ಸಂಪತ್ಪೂರಿತ ಯೋಗ್ಯ ಗೃಹಕ್ಕಾಗಿ ಬೇಡಿದ್ದಾರೆ.

★ ಶ್ರೇಷ್ಟ ನಿವಾಸ, ಶಾಖವು ಹಿಂಸಿಸದಿರಲಿ, ಶತ್ರುಗಳಿಂದ ರಕ್ಷಣೆ, ಶಕ್ತ ಪುತ್ರರಿಗಾಗಿ ಶತ್ರುಗಳನ್ನು ಪ್ರತಿಭಟಿಸುವ ಶಕ್ತಿಗಾಗಿ, ಶಕ್ತಿ ಪುತ್ರ ಅಗ್ನಿಯು ಧನನೀಡಲಿ, ಶ್ರದ್ಧಾ ಭಕ್ತಿಗಳಿಂದ ಯಜ್ಞಮಾಡಿ ಹವಿಸ್ಸು ಅರ್ಪಿಸಲು ಶಕ್ತಿ ನೀಡಲಿ. ಶಾಪ ಹೊಂದುವ ಸ್ಥಿತಿಗೆ ಬರುವುದೇ ಬೇಡ.

★ ಸ್ತೋತ್ರಗಳಿಂದ ಅಗ್ನಿಯು ಪ್ರೀತನಾಗಲಿ, ಸೂರ್ಯರೂಪಿನಿಂದ ಅಗ್ನಿಯು ನಮ್ಮ ಕೈಯಿಂದ ಕರ್ಮಗಳನ್ನು ಮಾಡಿಸಲಿ, ಹವಿಸ್ಸನ್ನು ಸ್ವೀಕರಿಸಲಿ, ಸಂಪತ್ತನ್ನು ಯಾಜ್ಞಿಕರಿಗೆ, ಯಾಜಮಾನರಿಗೆ ಭೋಗ ಯೋಗ್ಯ ಸಾಧನಗಳನ್ನು ಒದಗಿಸಲಿ, ಸಮಸ್ತ ದು:ಖಗಳನ್ನು ನಾಶ ಮಾಡಲಿ, ಸ್ತುತಿಸುವ ಯಜ್ಞಮಾಡುವವರಿಗೆ ಸುಖ ಕೊಡಲಿ, ಸ್ತೋತ್ರಗಳಿಂದ ಪ್ರೀತನಾಗಿ ರಾಕ್ಷಸರನ್ನು ಜ್ವಾಲೆಗಳಿಂದ ನಾಶ ಮಾಡಲಿ, ಸೋಮ ಹಿಂಡುವ ಶಕ್ತಿ ನೀಡಲಿ, ಸ್ವಂತ ಸಂಪದ್ಭರಿತ ಗೃಹದಲ್ಲಿ ಇರಿಸಿ ರಕ್ಷಿಸಲಿ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಸೋಮದೇವರು

★ ಯಜ್ಞಗಳ ನಡುವೆ ಉತ್ಪನ್ನರಾದವರು, ಎಲ್ಲವನ್ನೂ ಶುದ್ಧಿ ಮಾಡುವ ಔಷಧಗಳ ಪತಿ, ತನ್ನ ಪ್ರಭು ವರುಣನಂತೆ ಲೋಕ ಹಿತಕರ. ಸೋಮನು ಅಗ್ನಿಷ್ಟೋಮ ಯಾಗವನ್ನು ಅಪೇಕ್ಷಿಸುತ್ತಾನೆ. ಯಜ್ಞ ಮಾಡುವ ಸಜ್ಜನರ ಒಡೆಯನಾಗಿದ್ದಾನೆ. ಮಾರ್ಗದರ್ಶನದಿಂದಲೇ ಇಂದ್ರಾದಿಗಳು ದೇವತೆಗಳ ನಡುವೆ ಇರಲು ಸಾಧ್ಯವಾಯಿತು. ಸೋಮನು ಯಾಜ್ಞಿಕರಿಗಾಗಿ ಅನ್ನ ಸಂಪಾದಿಸುತ್ತಾನೆ.

★ ಅಗ್ನಿಸೋಮ ಇಬ್ಬರೂ ದೇವತೆಗಳಲ್ಲೆಲ್ಲ ಅತ್ಯಂತ ಪೂಜ್ಯರು. ಸೋಮವು ಸುಸಂಸ್ಕೃತ ಯಜ್ಞವೇದಿಕೆ ಸೇರಿ ಹವಿರೂಪದಿಂದ ದೇವಾರ್ಪಿತವಾಗುತ್ತದೆ. ಸೋಮ ಇಂದ್ರರು ಸ್ನೇಹಿತರು, ಶಕ್ತಿ ಪಾಲಕರು, ವೀರ್ಯವಂತರು, ನೇತೃಗಳು, ಒಂದೇ ರಥದಲ್ಲಿ ಬರುವವರು.

★ ಸಿದ್ಧಪಡಿಸಿದ ಸೋಮಪಾನ ಮಾಡಲು ಯೋಗ್ಯರು, ಸೋಮರಸವು ಕಾಮವರ್ಷಕ, ಇಷ್ಟಾರ್ಥಪ್ರದ, ಅಪೇಕ್ಷಿತ ವಸ್ತುಗಳನ್ನು ಕೊಡತಕ್ಕದ್ದು. **ಓಷಧಿಗಳಲ್ಲಿ, ಉದಕಗಳಲ್ಲಿ, ಗೋವುಗಳಲ್ಲಿ, ಸೂರ್ಯ ಜ್ಯೋತಿಯನ್ನು ಸೋಮನು ಪ್ರಶಂಸಿಸುತ್ತಾನೆ.**

★ ಇಂದ್ರ ಸೋಮರು ಎಲ್ಲ ಭೂತ ಜಾತಗಳ ನಿರ್ಮಾಪಕರು, ಉದಕ ನಿರ್ಮಾಪಕರು. ಸೂರ್ಯನ ಪ್ರಭೆಯೊಡನೆ ಉಷಸ್ಸಿನ ಕಾಂತಿಯನ್ನು ಸೇರುವಂತೆ ಮಾಡಿದರು, ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿ ಎಲ್ಲರಿಗೂ ಗೋಚರಿಸುವಂತೆ ಮಾಡಿದರು. ಗೋವುಗಳ ಕೆಚ್ಚಲಿನಲ್ಲಿ ಮಧ್ಯ ಪ್ರದೇಶದಲ್ಲಿ

★ ಕ್ಷೀರ ತುಂಬಿದರು. ನಾನಾ ವರ್ಣದ ಗೋವುಗಳಲ್ಲಿ ಶುಕ್ಲ ವರ್ಣದ ಕ್ಷೀರ ಬರುವಂತೆ ಮಾಡಿದರು. ಪಾಪ ಕಾರಿ ಅಸುರರನ್ನು ಅಸತ್ಯ ಹೇಳುವವರನ್ನು ಅವರು ಎಷ್ಟೇ ಶಕ್ತಿಯುತರಾದರೂ ಹಿಂಸಿಸದೇ ಬಿಡುವುದಿಲ್ಲ. ಇಂದ್ರ ಬಂಧನಕ್ಕೆ ಸಿಕ್ಕಿ ಕೊಲ್ಲಲ್ಪಡುತ್ತಾರೆ.

★ ಪೂಜಾರ್ಹರು, ದೇವತಾತ್ಮರು, ಅನ್ನರೂಪ ಧನವಂತರು, ಮರಣ ರಹಿತರು, ಸ್ವರ್ಗ ವೀಕ್ಷಕರು, ದ್ಯಾವಾ ಪೃಥ್ವಿಗಳನ್ನು ವಿಸ್ತೃತ ಮಾಡಿದವರು, ಸೋಮ ಅತ್ಯಂತ ರುಚಿಕರ, ಪ್ರವಾಹ ರೂಪಿ. ದೇವತೆಗಳ ಹೃದಯ ಪ್ರವೇಶಿಸಿ ಅವರ ಕೋಪ ದೂರ ಮಾಡುತ್ತದೆ. ಉದರ ಪೂರ್ಣ ಪಾನ ಮಾಡಿದರೂ ಹಿಂಸೆ ಆಗದಿರಲಿ ಸೋಮನು ಮಿತ್ರನಾಗಿರಲಿ ಎಂದು ಇಂದ್ರನನ್ನು ಪ್ರಾರ್ಥಿಸುತ್ತಾರೆ.

★ ಸೋಮನು ಯಜಮಾನನ ರಕ್ಷಕ. ದೇಹದ ಪ್ರತಿ ಅಂಗದಲ್ಲೂ ಆಕ್ರಮಿಸಿ ಯಜಮಾನನ ವ್ಯವಹಾರಗಳನ್ನು ವೀಕ್ಷಿಸುತ್ತಾನೆ. ಮಾನವರು ಮೃತರಾಗಿ ಸ್ವರ್ಗ ಸೇರಿ ದೇವತೆಗಳನ್ನು ಅರಿಯುತ್ತಾರೆ. ಆಯುಸ್ಸು ವೃದ್ಧಿಸುತ್ತದೆ. ಸೋಮನು ಸಖನಾಗಿರುತ್ತಾನೆ.

★ ಸೋಮ ಹಿಂಡುವಲ್ಲೆಲ್ಲ ಹೋಗಿ ಏಕಕಾಲದಲ್ಲಿ ಸೋಮಪಾನ ಮಾಡುತ್ತಾನೆ. ಗೋ ರಕ್ಷಕ, ವೇಗವಂತ, ಪುತ್ರಪ್ರದ, ಹರ್ಷಕಾರಕ, ಇಂದ್ರನ ಮಿತ್ರ, ಇಂತಹ ಮಹಾಮಹಿಮನಾದ ಎಲ್ಲರಿಂದಲೂ ಅಪೇಕ್ಷಿತನಾದ ಸೋಮನನ್ನು ಸ್ತುತಿಸುತ್ತಾರೆ.

## ಆಶ್ರಮದಲ್ಲಿ

★ ಸೋಮನನ್ನು ಸ್ತುತಿಸುವ ಕ್ರಮ ಯಜ್ಞಕರ್ತರಿಗೆ ತಿಳಿದಿದೆ. ಅವರು ಸ್ತುತಿಸುತ್ತಾರೆ. ಯಾಗಕರ್ತನು ಇಬ್ಬರಿಗೂ ಒಂದೇ ವಿಧವಾದ ಪೂಜೆ, ಆಜ್ಯ ಆಹುತಿ ಅರ್ಪಿಸುತ್ತಾನೆ. ಅಗ್ನಿ ಸೋಮರಿಬ್ಬರನ್ನೂ ಆಹ್ವಾನಿಸುತ್ತಾರೆ. ಸೋಮನು ಯಜ್ಞವೇದಿಕೆಗೆ ಬಂದು ಕೂಡಲಿ.

★ ಕಲ್ಲುಗಳಿಂದ ಜಜ್ಜಿ ಹಿಂಡಿ ಪರಿಷ್ಕರಿಸಿದ ಸೋಮರಸವನ್ನು ಸೇವಿಸಲಿ, ಎಲ್ಲಿ ಸಂತೋಷದಿಂದ ಸೋಮನನ್ನು ಪುತ್ರರೊಂದಿಗೆ ಪ್ರಾರ್ಥಿಸುತ್ತಾರೆ, ಹವಿಸ್ಸು ಅರ್ಪಿಸುತ್ತಾರೆ ಅಲ್ಲಿ ಸೋಮನು ಬರುತ್ತಾನೆ. ಸೋಮಕ್ಕೆ ಸಂಬಂಧಿಸಿದ ಕರ್ಮಗಳು ಕುಂಠಿತವಾದರೂ ಉತ್ತಮ ಮಿತ್ರನಾಗಿರುತ್ತಾನೆ.

★ ಕೊನೆಯ ದಿನ ಅವಬೃತ ನಂತರ ಒಟ್ಟಾಗಿ ಎಲ್ಲ ದೇವತೆಗಳು ಅವರವರ ಸ್ಥಾನಗಳಿಗೆ ಹೋಗುತ್ತಾರೆ. ವೇದಾರ್ಥಗಳು ಹೃದಯದಿಂದ ಮಾನಸಿಕ ಶಕ್ತಿಯಿಂದ ನಿಷ್ಕರ್ಷಿತ. **ಬ್ರಹ್ಮ ಜ್ಞಾನಿಗಳಿಗೆ ಏಕಾಭಿಪ್ರಾಯವಿದೆ.** ಜ್ಞಾನ ರಹಿತರನ್ನು ದೂರಮಾಡುತ್ತಾರೆ.

★ ಯಜ್ಞದಲ್ಲಿ (1) ಹೋತೃ = ಕರ್ಮ ಉಪಯುಕ್ತ ಮಂತ್ರಗಳನ್ನು ಪಠಿಸುತ್ತಾನೆ. (2) ಉದ್ಗಾತೃ = ಶಕ್ವರೀ ಸಂಜ್ಞಿಕ ಋಕ್ಕುಗಳನ್ನು ಸಾಮಗಾನದೊಂದಿಗೆ ಪಠಿಸುತ್ತಾನೆ. (3)ಬ್ರಹ್ಮನು ಪ್ರಾಯಶ್ಚಿತ್ತ ಕರ್ಮ ಬೋಧಕ ವಾಕ್ಯಗಳನ್ನು ಪಠಿಸುತ್ತಾನೆ. (4) ಅಧ್ವರ್ಯು = ಯಾಗಕ್ಕೆ ಒಂದು ರೂಪ ಕೊಟ್ಟು ಅದನ್ನು ನಿರ್ವಹಿಸುತ್ತಾನೆ.

★ ಚಂದ್ರನು ಋತುಗಳ ನಿಯಾಮಕ, ಉಷಸ್ಸಿನ ಮುಂಭಾಗದಲ್ಲಿ ಆವಿರ್ಭವಿಸಿ ದೇವತೆಗಳ ಯಜ್ಞಭಾಗ ನಿಯಮಿಸುತ್ತಾನೆ. ನಕ್ಷತ್ರಗಳ ಸಮೀಪದಲ್ಲಿ ಸೋಮನು ಸ್ಥಿತನಾಗಿದ್ದಾನೆ. ಏಳು ಸೋಮ ಪಾಲಕರಿಂದ ಹಾಗು ಹೊದ್ದಿಕೆಯಿಂದ ರಕ್ಷಿಸಲ್ಪಟ್ಟಿದ್ದಾನೆ. ದೇವತೆಗಳು ರಹಸ್ಯಾತ್ಮಕ ಸೋಮನ ಪ್ರಭಾವ ಅರಿತಿದ್ದಾರೆ.

★ ಯಾಜ್ಞಿಕರು ಯಾಗ ಯೋಗ್ಯ ಸ್ವರೂಪ ತಿಳಿದಿದ್ದಾರೆ. ವಾಯುವು ಸೋಮನ ರಕ್ಷಣೆಗೆ ಇದ್ದಾನೆ. ಸೋಮನು ಸಂವತ್ಸರಗಳಿಗೆ ಕಾಲ ವ್ಯವಸ್ಥೆ ಮಾಡುತ್ತಾನೆ.

ಪ್ರಾರ್ಥನೆಗಳು

★ ಯಜ್ಞ ಗೃಹವನ್ನು ತೇಜಸ್ಸಿನಿಂದ ತುಂಬಲಿ, ಯಾಜ್ಞಿಕರಿಗೆ ಶಕ್ತಿ, ಧನ ಸುಖ ಸಾಧನಗಳನ್ನು ನೀಡಲಿ, ಹಿಂದೆ ಅವರ ಪಿತೃಗಳಿಗೆ ಕೊಟ್ಟಂತೆಯೇ ತಮಗೂ ಎಲ್ಲ ಸೌಖ್ಯಗಳನ್ನು ಕೊಡಲಿ, ಶತ್ರುಗಳನ್ನು ನಾಶಮಾಡಿ ಕಳಂಕಗಳಿಂದ ಪಾರುಮಾಡಲಿ.

★ ಮುಂದೆ ಮಾಡಬಹುದಾದ ಪಾಪಗಳಿಂದಲೂ ಯಜಮಾನನನ್ನು ರಕ್ಷಿಸಲಿ, ಆಯಸ್ಸನ್ನು ಹೆಚ್ಚಿಸಲಿ, ಶತ್ರುಗಳನ್ನು ಹೊಡೆದೋಡಿಸಲಿ, ಯಜಮಾನನಿಗೆ, ಪುತ್ರರಿಗೆ, ಪ್ರಾಣಿಗಳಿಗೆ ರೋಗರುಜಿನಗಳು ಬರದಂತೆ ಕಾಪಾಡಲಿ. ಇಂದ್ರ, ಅಗ್ನಿ, ಸೋಮರು ಶತ್ರುಗಳನ್ನು ನಾಶಮಾಡಲಿ.

★ ಮರುತ್‌ಗಳೊಡನೆ ಇಂದ್ರನು ಬಂದು ಸೋಮಪಾನ ಮಾಡಲಿ. ಸೋಮನು ಧನದಾತ, ಧನಕ್ಕಾಗಿ ಬೇಡಿದ್ದಾರೆ. ಸೋಮರುದ್ರರು ಪ್ರತಿ ಯಜ್ಞದಲ್ಲೂ ಸಮೀಪಿಸಿ ವ್ಯಾಪಿಸಲಿ, ಅನ್ನ, ಯಶಸ್ಸು, ಸಂಪತ್ತು, ಮಂಗಳಗಳನ್ನು ಅನುಗ್ರಹಿಸಲಿ. **ದೌರ್ಭಾಗ್ಯ ದೇವತೆಯನ್ನು ದೂರ ಓಡಿಸಲಿ.**

★ ರೋಗ ನಾಶಮಾಡಿ ರೋಗ ನಿರೋಧಕ ತುಂಬಲಿ. ಪಾಪಗಳಿಂದ ಬಿಡುಗಡೆ ಮಾಡಲಿ. ಸೋಮನು ಧನಯುಕ್ತನನ್ನಾಗಿ ಮಾಡಲಿ, ಪ್ರಕಾಶಯುಕ್ತ ಕಣ್ಣುಗಳುಳ್ಳವನನ್ನಾಗಿ ಮಾಡಲಿ, ಕ್ರೋಧ ಪ್ರಕಟಿಸುವ ಶತ್ರುವಿಗೆ ಬಿಟ್ಟುಕೊಡದಿರಲಿ, ದುಃಸ್ವಪ್ನ ಉಂಟಾಗದಿರಲಿ. ನಿಂದಕರು ನಿಂದಿಸದಿರಸಲಿ.

★ ವ್ಯಾದಿಗಳನ್ನು ದೂರಮಾಡಿ ಗುಣಪಡಿಸಲಿ, ಪ್ರಬಲ ರೋಗಗಳು ಸೋಮನಿಗೆ ಹೆದರಿ ಹೋಗಲಿ. ಯಜಮಾನನು ಸೋಮನನ್ನು ಭಜಿಸುವಂತಾಗಲಿ. ಪ್ರೀತಿಯಿಂದ ಹಿಂದಿನಂತೆ ಮುಂದೆಯೂ ರಕ್ಷಿಸಲಿ. ಯಜಮಾನರು ತಮಗಾಗಿ, ಋತ್ವಿಕರಿಗಾಗಿ ಬಹು ಧನ ಯಾಚಿಸುತ್ತಾರೆ.

★ ಜಜ್ಜಿದ ಲತೆಗಳಿಂದ ತೊಟ್ಟಿಕ್ಕುತ್ತಿರುವ ಹವಿರ್ಲಕ್ಷಣ ರೂಪ ಮದಕರ ಸೋಮವನ್ನು ನೀರು ಕುಡಿದಂತೆ ಪಾನಮಾಡಲಿ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ವಾಯುದೇವರು

★ ಸಮಸ್ತ ಜಗತ್ತಿನಲ್ಲಿ ಮೊದಲು ಉತ್ಪನ್ನರಾದವರು ವಾಯುದೇವರು, ಜೀವರೂಪಿನಿಂದ ದೇವತೆಗಳಲ್ಲಿ ಇದ್ದಾರೆ. ಪ್ರಾಣರೂಪಿನಿಂದ ಸಮಸ್ತ ಪ್ರಾಣಿಗಳಲ್ಲಿದ್ದಾರೆ. ಶಬ್ದದಿಂದ ಮಾತ್ರ ಗುರುತಿಸಬಹುದು. ರೂಪಿನಿಂದ ನೋಡಲಾಗುವುದಿಲ್ಲ. ವನ, ಪರ್ವತಗಳಲ್ಲಿ ಘರ್ಜಿಸುತ್ತಾ ಚಲಿಸುತ್ತಾರೆ.

★ ವೃಕ್ಷಗಳು ಕಂಪಿಸುತ್ತವೆ. ಅಮಂಗಳಗಳನ್ನು ತಡೆಹಿಡಿಯುತ್ತಾರೆ. ಸಂಪತ್ ಪೋಷಕರು, ದ್ಯಾವಾ ಪೃಥ್ವಿಗಳ ಪೋಷಕರು, ಮನೋವೇಗದ ಅಶ್ವಗಳು ಇವರನ್ನು ವಹಿಸುತ್ತವೆ. ನೂರು ಸಾವಿರ ಅಶ್ವಗಳ ರಥದಲ್ಲಿ ವಾಯು ಬರುತ್ತಾನೆ. ರೋಗನಾಶಕರು, ಮನಸಂತೋಷದಾಯಕರು.

★ **ವಾಯುವು ಗೋವುಗಳಲ್ಲಿ ಕ್ಷೀರ ಸುರಿಸುತ್ತಾನೆ.** ''ನಿಯುತ್ಸು'' ವಾಯುವಿನ ಕುದುರೆಯ ಹೆಸರು. ಮರುತ್‌ಗಳನ್ನು ಉಂಟುಮಾಡುತ್ತಾನೆ. ಉಷಸ್‌ಗಳನ್ನು ಪ್ರಕಾಶಿಸುತ್ತಾನೆ. ಜ್ಞಾನಿಯಾದ ಯಜಮಾನನ ಅಜಾಗರೂಕತೆಯನ್ನು ನಾಶಮಾಡಿ ಜಾಗೃತಿ ಉಂಟುಮಾಡುತ್ತಾನೆ. ಭಯನಾಶಕನೂ ವಾಯುವೇ.

★ ವಾಯು ಸರ್ವೇಶ್ವರ, ಶುಭ್ರವರ್ಣ, ಧನದಾತ, ಯಜಮಾನನನ್ನು ದಾರಿದ್ರ್ಯದಿಂದ ಪಾರುಮಾಡಿ ಉತ್ಕೃಷ್ಟ ಪ್ರದೇಶಕ್ಕೆ ಕರೆದೊಯ್ಯುತ್ತಾನೆ. ಅನ್ನವಂತ, ಧನ ಸಂಪತ್ತು ನೀಡುತ್ತಾನೆ.

★ ಇಂದ್ರ ವಾಯುಗಳು ಪೂಜಾ ಅಪೇಕ್ಷಿಗಳು, ಸಂಪತ್ಪ್ರದರು, ಜಗತ್ ರಕ್ಷಕರು, ಶುದ್ಧ ಸೋಮಪಾನಿಗಳು, ಸಹಸ್ರಾರು ಸಂಖ್ಯಾತ ಮಾನವ ಸಂರಕ್ಷಕರು, ದೇವತಾತ್ಮರು, ದೇವತೆಗಳೆಲ್ಲರಿಗಿಂತ ಮುಂಚೆಯೇ ಸೋಮಪಾನ ಮಾಡುವವರು. ಅಶ್ವ, ಒಂಟೆ, ನಾಯಿಗಳಿಂದ ಎಳೆಯುವ ಆಹಾರವನ್ನು ದಾನ ಮಾಡುವವರು, ಅಧಿಕ ಧನ ನೀಡುತ್ತಾರೆ.

★ ಘೃತದಂತೆ ಪರಿಶುದ್ಧ ಸೋಮಪಾನಿಗಳು, ಸ್ವಯಂ ಪ್ರಕಾಶಿತರು, ಸರ್ವದಾ ಸಂಚಾರಿ, ಉದಕ ಮಿತ್ರ, ಮೊದಲೇ ಉತ್ಪನ್ನನಾದವನು, ಪರ್ವತ ಗುಹೆಗಳಲ್ಲಿ ಘರ್ಜಿಸುತ್ತಾ ಎದುರಾದ ಶತ್ರುಗಳನ್ನು ನಾಶಮಾಡುತ್ತಾ ಆಕಾಶವೆಲ್ಲ ಕೆಂಪಿನ ದೂಳಿನಿಂದ ತುಂಬುತ್ತಾ ಚಲಿಸುತ್ತಾನೆ.

★ ಸ್ವಂತ ಅಶ್ವರಥದಲ್ಲಿ ಬರುವಾಗ ವೃಕ್ಷಗಳು ಕಂಪಿಸುತ್ತವೆ. ತರು, ಲತಾದಿಗಳು ಬಳಕುತ್ತವೆ. ಸ್ವಾಗತಿಸುತ್ತವೆ.

## ವಾಯುದೇವರಿಗಾಗಿ ಆಶ್ರಮದಲ್ಲಿ

★ ಸೋಮಾರ್ಪಣೆ ಮಾಡುತ್ತಾರೆ, ಚರು, ಪುರೋಡಾಶಗಳಿಂದ ಸೇವಿಸುತ್ತಾರೆ. ಯಜಮಾನರು ತಮ್ಮ ತಮ್ಮ ಕರ್ತವ್ಯಗಳನ್ನು ತಿಳಿದಿದ್ದಾರೆ. ಸ್ತೋತ್ರಗಳು, ಸೋಮಾರ್ಪಣೆಗಳನ್ನು ಮಾಡುತ್ತಾರೆ. ಯಜ್ಞದಲ್ಲಿ ಇಂದ್ರ, ವಾಯುಗಳಿಗೆ ಆಹ್ವಾನಿಸುತ್ತಾರೆ.

★ ರಾಜ ವಂಶೀಯರು ತಮ್ಮ ಕೊಳ್ಳೆಯಲ್ಲಿ ಕಾಲು ಭಾಗ ಯಾಗಕ್ಕಾಗಿ ಕೊಡುತ್ತಿದ್ದರು. ವಾಯುವು **ಸೋಮಪಾನಕ್ಕೆ ಪ್ರಥಮಾರ್ಹನೆಂದು ದೇವತೆಗಳು ನಿಯಮಿಸಿದ್ದಾರೆ.** ವಾಯುವಿನ ರಥ ದ್ಯಾವಾ, ಪೃಥ್ವಿಗಳ ಮಧ್ಯೆ ನಿರಾತಂಕವಾಗಿ ಆಕಾಶದಲ್ಲಿ ಸೂರ್ಯರಶ್ಮಿಗಳಂತೆ ಸ್ವತಂತ್ರವಾಗಿವೆ.

★ ವಾಯು ತೃಪ್ತಿಗಾಗಿ ಯಜ್ಞವು ನಡೆಯುತ್ತದೆ. ದರ್ಭಾಸನಕ್ಕೆ ವಾಯುವನ್ನು ಬರಲು ಆಹ್ವಾನಿಸುತ್ತಾರೆ. ತೃಪ್ತಿಯಾಗುವಷ್ಟು ಸೋಮ ನೀಡುತ್ತಾರೆ. ಸೋಮಾಹುತಿಗಳನ್ನು ಭಕ್ಷಿಸಲಿ. ಯಜ್ಞಸತ್ವ ಉಳಿದಿರುವುದು ವಾಯುವಿನಿಂದಲೇ, ವಾಯುವಿಗಾಗಿ ಶುದ್ಧ, ಮಧುರ ಹಿಂಡಿ ಸಿದ್ಧ ಮಾಡಿದ ಸೋಮರಸ ಅಧ್ವರ್ಯುವಿನಿಂದ ಅರ್ಪಿತವಾಗುತ್ತದೆ.

# ವಾಯುದೇವರು

★ ವಾಯು ತೃಪ್ತಿಗಾಗಿ ಯಜ್ಞವು ನಡೆಯುತ್ತದೆ. ದರ್ಭಾಸನಕ್ಕೆ ವಾಯುವನ್ನು ಬರಲು ಆಹ್ವಾನಿಸುತ್ತಾರೆ. ತೃಪ್ತಿಯಾಗುವಷ್ಟು ಸೋಮ ನೀಡುತ್ತಾರೆ. ಸೋಮಾಹುತಿಗಳನ್ನು ಭಕ್ಷಿಸಲಿ. ಯಜ್ಞ ಸತ್ವ ಉಳಿದಿರುವುದು ವಾಯುವಿನಿಂದಲೇ, ವಾಯುವಿಗಾಗಿ ಶುದ್ಧ ಮಧುರ ಹಿಂಡಿ ಸಿದ್ಧ ಮಾಡಿದ ಸೋಮರಸ ಅಧ್ವರ್ಯುವಿನಿಂದ ಅರ್ಪಿತವಾಗುತ್ತದೆ.

★ ಪುರೋಡಾಶ, ಆಹುತಿ, ಶುದ್ಧ ಸೋಮ ಅರ್ಪಿಸುವ ಯಜಮಾನನನ್ನು ಪ್ರಸಿದ್ಧನನ್ನಾಗಿ ಮಾಡುತ್ತಾನೆ. ವಾಯುವು ತನ್ನ ಭಾಗ ಹವಿಸ್ಸನ್ನು ಸ್ವೀಕರಿಸಲಿ, ಧ್ಯಾನಾತ್ಮಕ ಸ್ತುತಿಗಳಿಂದ ವಿಹಿತ ಕರ್ಮಗಳಿಂದ ಸ್ತುತಿಸಿದ್ದಾರೆ. ಹವಿರರ್ಪಿಸುತ್ತಾರೆ. ಏಕ ಮನಸ್ಸಿನಿಂದ ಕರ್ಮನೇತೃಗಳು ಕರ್ಮ ನೆರವೇರಿಸುತ್ತಾರೆ.

★ ಇಂದ್ರ, ವಾಯುಗಳಿಬ್ಬರೂ ಒಂದೇ ರಥದಲ್ಲಿ ಯಜಮಾನಾಭಿಮುಖವಾಗಿ ಬರುವಂತೆ ವಸಿಷ್ಟ ವಂಶಜರು ಪ್ರಾರ್ಥಿಸಿದ್ದಾರೆ. ಇಂದ್ರ ವಾಯುಗಳು ದರ್ಭಾಸೀನರಾಗಲಿ, ಸೋಮಪಾನ ಮಾಡಲಿ, ಮೊದಲರ್ಪಿತ ಸೋಮದಿಂದ ತೃಪ್ತರಾಗಿ ಪಾಪಗಳಿಂದ ನಮ್ಮನ್ನು ಬಿಡುಗಡೆ ಮಾಡಲಿ, ಮದಕಾರಕ ಸೋಮವನ್ನು ವಾಯು ಸಮೀಪಕ್ಕೆ ತಂದು ಅರ್ಪಿಸುತ್ತಾರೆ. ಯಜಮಾನನ ಸಮೀಪದಲ್ಲಿ ಕುಳಿತುಕೊಳ್ಳಲಿ.

★ ಪ್ರಾತ: ಸವನ ಸೋಮದಿಂದ ಹರ್ಷಿತರಾಗಲಿ, ವಾಯುವು ಅತ್ಯಂತ ಮನೋಹರ ರೂಪಿ, ದೇವತೆಗಳಲ್ಲಿ ಪ್ರಸಿದ್ಧ, ಸ್ವ ಮಹಾತ್ಮ್ಯದಿಂದ ಸರ್ವವ್ಯಾಪಿ.

## ಪ್ರಾರ್ಥನೆಗಳು

★ ಧನ ಬೇಡಿದ್ದಾರೆ, ಓಷಧಿಗಳನ್ನು ನಮ್ಮ ಕಡೆಗೆ ತರಲಿ, ವಾಯುವು ಅಮೃತದ ಸ್ವಲ್ಪ ಭಾಗ ನಮಗೆ ಕೊಟ್ಟು ಆರೋಗ್ಯ, ಆಯುಸ್ಸು ಕರುಣಿಸಲಿ, ಇಷ್ಟಾರ್ಥಗಳನ್ನು ಈಡೇರಿಸಲಿ, ಅನ್ನ, ಗೋವು, ಸುವರ್ಣಗಳಿಗಾಗಿ ಕೇಳಿದ್ದಾರೆ. ಉಣ್ಣೆಯ ಮೂಲಕ ಶೋಧಿತವಾಗಿ ಹರಿವ ಸೋಮವು ಇಂದ್ರ, ವಾಯುಗಳಿಗಾಗಿ ಹರಿಯಲಿ. ಅನ್ನ, ಧನ, ಶಕ್ತಿಗಳಿಗಾಗಿ ಇಂದ್ರ, ವಾಯುಗಳನ್ನು ಪ್ರಾರ್ಥಿಸಿದ್ದಾರೆ.

★ ಉತ್ತಮ ಜೀವನಕ್ಕಾಗಿ, ಶತ್ರುಗಳಿಂದ ರಕ್ಷಣೆಗಾಗಿ ಬೇಡಿದ್ದಾರೆ. ಅಶ್ವ ಗೋವುಗಳನ್ನು ಪುತ್ರರಿಗೆ ರಕ್ಷಣೆಯನ್ನು ನೀಡಲಿ. ವಾಯುವಿನ ಸ್ಥಾನ ಸ್ವರ್ಗ. ಸ್ವರ್ಗದಿಂದ ಸೋಮ ತರುವವನು ಪೂಷದೇವ, ಅತಿ ರಹಸ್ಯ ಪ್ರದೇಶದಲ್ಲಿ ಇರುವವನು. **ಉದಕ ದೇವತೆಗಳು ಸೂರ್ಯನ ಸಮೀಪದಲ್ಲಿರುವವರು. ವಿಶ್ವೇ ದೇವತೆಗಳು ಮಿಂಚಿನ ಮೇಲ್ಭಾಗದಲ್ಲಿರುವವರು.**

★ ಅಗ್ನಿ ದೇವ ಉದಕದಲ್ಲೇ ಅಡಗಿದ್ದಾನೆ. ವಾಯುವಿನ ಜೊತೆಗೆ ಇಂದ್ರ, ಮಿತ್ರ ವರುಣರನ್ನು ಆಹ್ವಾನಿಸಿದ್ದಾರೆ. ★ **ಪ್ರಾಣ ವಾಯುವು ವೇದದ ಉಚ್ಚಾರಣೆಗೆ ಪ್ರೇರೇಪಿಸುತ್ತದೆ. ಪ್ರಾಣಗಳ ಶರೀರದಲ್ಲಿ ಜೀವಾತ್ಮನೂ, ಪ್ರಣವ ರೂಪಿನಲ್ಲಿ ಆತ್ಮನೂ ಇರುವುದನ್ನು ಋಷಿಗಳು ತಿಳಿದಿದ್ದಾರೆ.**

॥ ಓಂ ಶ್ರೀ ಮಹಾಗಣಪತಯೇ ನಮ: ॥







ವೇದ: ಶಿವ: ಶಿವೋವೇದೋ ವೇದಾಧ್ಯಾಯೀ ಸದಾಶಿವ: ।ತಸ್ಮಾತ್ ಸರ್ವ ಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಛಂದೋಭಿಮಾನಿ ದೇವತೆಗಳು ಮಹಾಲಕ್ಷ್ಮಿ ಸರಸ್ವತಿ ಭಾರತಿ, ಉಮಾ ಗಾಯತ್ರಿ,ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:

ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞ ನಿರ್ವಾಹಕ ಯಜಮಾನರು ಅವರ ಪರಿವಾರದವರಿಗೆ ನಮೋ ನಮ: ।

ಋಗ್ವೇದ ದಂಷ್ಟ್ರಾರರಾದ ಇಂದ್ರ, ಅಗ್ನಿ, ಶ್ರೀಮನ್ ನಾರಾಯಣ ಇವರುಗಳಿಗೆ ನಮಸ್ಕಾರಗಳು

ಋಷಿಗಳ ಅಮೃತವಾಣಿ ಋಗ್ವೇದ ದಿಂದ ಪರಿಚಯ

## ಇತರೇ ದೇವತೆಗಳು

| | |
|---|---|
| ಸರಸ್ವತಿ–ನದಿ | 1 |
| ಪರ್ಜನ್ಯ | 2 |
| ದ್ಯಾವಾಪೃಥ್ವಿ | 3 |
| ಅಬ್‌ದೇವತೆ | 4 |
| ಇಂದ್ರಾಣಿ | 5 |
| ಅರಣ್ಯ, ಗೋವು, ತ್ವಷ್ಟ | 6 |
| ಪೂಷನ್ | 7 |
| ಜ್ಞಾನದೇವತೆ | 8 |
| ಬ್ರಹ್ಮಣಸ್ಪತಿ | 9 |
| ಬ್ರಹಸ್ಪತಿ | 10 |
| ರುದ್ರರು | 11 |
| ಋಭುಗಳು | 12-13 |
| ಓಷಧಿ | 14 |
| ವಾಚಸ್ಪತಿ, ವಾಸ್ತೋಷ್ಪತಿ, ವಾಗಂಭ್ರಣಿ, ವಾಗ್ದೇವಿ | 15 |
| ದಧಿಕ್ರಾ, ವೇನ, ರಾತ್ರಿ ದೇವತೆ, ಸುಪರ್ಣ | 16 |

258



ಯೋ ವೇದಾದೌಸ್ವರ:ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತ: ।

ತಸ್ಯ ಪ್ರಕೃತಿಲೀನಸ್ಯ ಯ: ಪರಸ್ಸಮಹೇಶ್ವರ : ॥

| | |
|---|---|
| ಹಿರಣ್ಯಗರ್ಭ | 17 |
| ಭಾವವೃತ್ತಂ, ವಿಷ್ಣು | 18 |
| ಲಿಂಗೋಕ್ತ | 19 |
| ಶಕಟ, ನಿರ್ಋತಿ, ದುಃಸ್ವಪ್ನ ಅಲಕ್ಷ್ಮಿ | 20 |
| ಪಿತರ ದೇವತೆಗಳು | 21 |
| ಶರಣ್ಯು | 22 |
| ಮೃತ್ಯುದಾತ | 23 |
| ಜಮದಗ್ನಿ ಭಾರ್ಗವರು, ಯಜಮಾನ ದಂಪತಿಗಳು | 24 |
| ನಚಿಕೇತ ಯಮರು | 25 |
| ಆಶೀರ್ವಾದಗಳು | 26 |
| ದಾನಸ್ತುತಿ | 27 |
| ವಿಶ್ವಕರ್ಮ | 28 |
| ಆದಿಪುರುಷ | 29 |
| ಪುರೂರವ, ಊರ್ವಶಿ | 30 |
| ಯಾಜ್ಞಿಕರು, ರೋಗಗಳು | 31 |
| ಅಶ್ವಸ್ತುತಿ | 32 |
| ಗ್ರಾವಗಳು | 33 |

300

ಪ್ರತಿ ದೇವತೆಯಡಿಯಲ್ಲೂ ಹಿಂದಿನಂತೆಯೇ ಸ್ತೋತ್ರಗಳು, ಆಶ್ರಮದಲ್ಲಿ ಮತ್ತು ಪ್ರಾರ್ಥನೆಗಳು ಒಳಗೊಂಡಿದೆ. ಋಷಿಗಳ ಅಮೃತವಾಣಿ ಎಂಬ ಹೆಸರಿನ ಈ ಭಾಗವನ್ನು ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಗ್ರಂಥಕರ್ತರ ಅಪ್ಪಣೆ, ಸಲಹೆಗಳೊಂದಿಗೆ ಹಾಗೂ ಗುರುಹಿರಿಯರ ಅನುಗ್ರಹ ಆಶೀರ್ವಾದಗಳೊಂದಿಗೆ ತಯಾರಿಸಲಾಗಿದೆ.

ಶ್ರೀ ಶ್ರೀ ಶ್ರೀ ಶಂಕರ ಭಾರತೀ ಮಹಾಸ್ವಾಮಿಗಳವರ

ದಿವ್ಯ ಚರಣಾರವಿಂದಗಳಲ್ಲಿ ಅನಂತಾನಂತ ಸಾಷ್ಟಾಂಗ ನಮಸ್ಕಾರಗಳು

ದಿನಾಂಕ : 20.01.2004

ಎನ್.ಆರ್. ನಂಜುಂಡಯ್ಯ

॥ ಹರ ನಮ: ಪಾರ್ವತಿ ಪತಯೇ ಹರಹರ ಮಹಾದೇವ ॥

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಸರಸ್ವತಿ

ಸರಸ್ವತಿಯು ದೇವತಾತ್ಮಳು, ಕಾಂತಿಯುಕ್ತಳು, ಶಕ್ತಿಯುಕ್ತಳು, ಅನ್ನಯುಕ್ತಳು, ದಾನ ಯುಕ್ತಳು, ಸ್ತುತಿಕರ್ತರ ರಕ್ಷಕಿ, ಸುವರ್ಣ ನಿರ್ಮಿತ ರಥದವಳು, ಪೃಥ್ವಿಲೋಕಕ್ಕೆ ಸೇರಿದ ಅಂತರಿಕ್ಷ ವ್ಯಾಪಿ. ಪಂಚಜನ ಪೋಷಕಿ, ಮಹಾತ್ಮರಲ್ಲಿ ಉತ್ತಮ ಸ್ವರೂಪಿಣಿ, ಉದಕ ಭರಿತಳು, ಅಧಿಕ ಶಬ್ದದಿಂದ ಚಲಿಸುವವಳು, ಪ್ರಜಾಪತಿ ನಿರ್ಮಿತ ಸರಸ್ವತಿ ಸರ್ವವ್ಯಾಪಕಳು. ಅತ್ಯತಿಶಯ ಪ್ರವಾಹ ತಿಳಿಯಲ್ಪಡುವವಳು, ಪ್ರೀತಿ ಪಾತ್ರರಾದ ಗಂಗಾಧಿ ಸಪ್ತ ಸಹೋದರಿಯರಲ್ಲಿ ಸರಸ್ವತಿಯು ಅತಿಶಯ ಪ್ರೀತಿ ಪಾತ್ರಳು, ತನ್ನ ಅಲೆಗಳಿಂದ ಪರ್ವತ ಉನ್ನತ ಪ್ರದೇಶಗಳನ್ನು ಸುಲಭವಾಗಿ ಭೇದಿಸುತ್ತಾ ವೃಕ್ಷಾದಿಗಳನ್ನು ದಡಗಳನ್ನು ಕೆಳಗೆ ಉರುಳಿಸುತ್ತಾಳೆ. ಮಾನವರಿಗಾಗಿಯೇ ಉದಕ ಪ್ರವಹಿಸುತ್ತಾಳೆ.

ಸೂರ್ಯನು ಕತ್ತಲೆ ಹೋಗಲಾಡಿಸುವಂತೆ ಸರಸ್ವತಿ ಹಾಗೂ ಸಹೋದರಿ ನದಿಗಳು ಶತ್ರುಗಳನ್ನು ಕೊನೆಗಾಣಿಸುತ್ತಾರೆ. ಶುಭ್ರವರ್ಣೆ, ಅನ್ನಯುಕ್ತಳು, ಕಲ್ಯಾಣಾತ್ಮಕಳು. ಮಾಧ್ಯಮಿಕ ಸ್ಥಾನದ, ದೇವಗಣದ ಸಖಿಯಾದ ನದಿಗಳ ಮಧ್ಯದಲ್ಲೆಲ್ಲಾ ಅತಿಶಯ ಶಕ್ತಳಾದ ಸರಸ್ವತಿಯು ದ್ಯಾವಾ ಪೃಥ್ವಿಗಳೆರಡರಲ್ಲೂ ವ್ಯಾಪಿಸಿರುವವಳು. ಉದಕಗಳು ಪರಿಶುದ್ಧ, ಪಾಪರಹಿತ, ಪ್ರವಾಹಾತ್ಮಕ, ವೃಷ್ಟಿ ಸುರಿಸುವಂತಹ ರುಚಿಕರ, ಶುದ್ಧಿಕಾರಕ, ಮಧುರ ರಸೋಪೇತ ಉದಕಗಳು ಸೂರ್ಯ ಕಿರಣಗಳಿಂದ ವಿಸ್ತೃತವಾದವು. ಇಂದ್ರನು ಮಾರ್ಗ ನಿರ್ಮಿಸಿದನು.

### ಆಶ್ರಮದಲ್ಲಿ

ಸರಸ್ವತಿಯನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ, ಉತ್ತಮ ಸ್ತುತಿಗಳಿಂದ, ಕರ್ಮಗಳಿಂದ ರಕ್ಷಣಾರ್ಥ ಯಜಮಾನರು ಸ್ತುತಿಸಿ ಪೂಜಿಸುತ್ತಾರೆ. ಜಮದಗ್ನಿಗಳು ಸ್ತುತಿಸಿದಂತೆಯೇ ವಸಿಷ್ಠರಿಂದಲೂ ಸರಸ್ವತಿಯು ಸ್ತುತಿತಳಾಗಿದ್ದಾಳೆ. ಮಹಾ ಶಕ್ತಿಯುಕ್ತ ಉತ್ತಮ ಸ್ತೋತ್ರ ಪಠಿಸಿ ಪೂಜಿಸುತ್ತಾರೆ. ಹವಿರೂಪ ಅನ್ನ ಹೊಂದಿರುವ ಯಜಮಾನನ ಪ್ರಾರ್ಥನೆ ಅರಿತು ಧನ, ಕಲ್ಯಾಣಗಳನ್ನು ಒದಗಿಸುತ್ತಾಳೆ.

### ಪ್ರಾರ್ಥನೆ

ಇಂದ್ರನನ್ನು ಸ್ತುತಿಸಿದಂತೆಯೇ ಸರಸ್ವತಿಯನ್ನು ಸ್ತುತಿಸಿ ರಕ್ಷಿಸಲಿ, ಭಕ್ತರ ರಕ್ಷಿಣಿಯಾದ ಸರಸ್ವತಿಯು ಶತ್ರುಗಳಿಂದ ನಮ್ಮನ್ನು ರಕ್ಷಿಸಲಿ. ಅನ್ನದಿಂದ, ಉದಕದಿಂದ ಯಜಮಾನನನ್ನು ತೃಪ್ತಿಪಡಿಸಲಿ, ತಡೆಯಲಾಗದ ಪ್ರವಾಹದಿಂದ ಹಿಂಸೆಯಾಗದಂತೆ ಮತ್ತು ಹರ್ಷ ರಹಿತ ಕ್ಷೇತ್ರದಲ್ಲಿ ತೊಂದರೆ ಆಗದಂತೆ ಸರಸ್ವತಿಯು ನಮಗೆ ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ. ಉತ್ತಮ ಪತ್ನಿ ಪುತ್ರರನ್ನು ಅಪೇಕ್ಷಿಸುವ ಯಜಮಾನನು ಅವುಗಳಿಗಾಗಿ ಸರಸ್ವತಿಯನ್ನು ಪ್ರಾರ್ಥಿಸುತ್ತಾರೆ.

## ನದೀ ದೇವತೆಗಳು

ಗಂಗೆ, ಯಮುನೆ, ಸರಸ್ವತಿ, ಶತುದ್ರಿ, ಪರುಷ್ಣಿ, ಅಸಿಕ್ನಿ, ಮರುದ್ವೃಧಿ, ವಿತಸಿ, ಸುಶೋಮ, ಆರ್ಜಿಕಾ ಇವು ಮಹತ್ವದ ನದಿಗಳು. ಸಿಂಧೂ ನದಿ ಗೋಮತಿ, ಕೃಷ್ಣಮಾ, ಸುತರ್ಕ, ರಸಾಶ್ವೇತ, ಕಂಭ, ಮಾಹಂತು ನದಿಗಳೊಡನೆ ಸೇರಿ ಪ್ರಕಾಶಿಸುತ್ತದೆ. ವೇಗ ಗಮನದ ಶುಭ್ರವರ್ಣದ ಪ್ರಕಾಶಮಾನ, ಆಕರ್ಷಕ ದರ್ಶನೀಯ ಸಿಂಧೂ ನದಿಯು ಹೆಚ್ಚು ಮಹಿಮಾನ್ವಿತವಾಗಿದೆ. ಅಹಿಂಸಕ, ಸ್ವಯಂ ಸಂಪಾದಿತ, ಕೀರ್ತಿವಂತ, ಸಿಂಧೂ ನದಿಯು ರಾಜನಂತೆ ಎರಡೂ ದಡಗಳನ್ನು ಮೀರಿ ಪ್ರವಹಿಸುತ್ತದೆ. ಪೃಥ್ವಿಯ ಮೇಲ್ಭಾಗದಲ್ಲಿ ಹರಿಯುವ ನದಿಯು ಅಂತರಿಕ್ಷ ಸೇರಿ ವೇಗವು ವೃಷ್ಟಿ ಸುರಿಯುವಂತೆ ಮಾಡುತ್ತದೆ. ನದಿ ಉದಕಗಳು ಅನೇಕ ಕವಲುಗಳಾಗಿ ಒಡೆದು ಮೂರು ಲೋಕದಲ್ಲೂ ಪ್ರವಹಿಸಿ ತಮ್ಮ ತಮ್ಮ ಮಹತ್ವವನ್ನು ಅಧಿಕವಾಗಿ ಪ್ರಕಾಶಗೊಳಿಸುತ್ತದೆ. ಪ್ರತ್ಯಕ್ಷವಾಗಿ ಪೃಥ್ವಿಯು ಇಳಿಜಾರು ತಪ್ಪಲು ಪ್ರದೇಶಗಳಲ್ಲಿ ಹರಿಯುವಂತೆ ಮಾರ್ಗಗಳನ್ನು ಸೀಳಿ ನಿರ್ಮಿತವಾಗಿದೆ.

ಆಶ್ರಮ : ಅಧ್ವರ್ಯುಗಳು ಆಜ್ಯ ಪೂರಿತವಾದ ಹವಿಸ್ಸನ್ನು ಉದಕಗಳಿಗೆ ಆಹುತಿ ರೂಪದಲ್ಲಿ ಅರ್ಪಿಸುವರು, ಸೋಮನನ್ನು ಯಜಮಾನರು ಯಾಗದಲ್ಲಿ ಆರಾಧಿಸುವಂತಾಯಿತು. ಇಂದ್ರನು ತನಗೆ ಪ್ರಿಯವಾದ ಕರ್ಮಗಳನ್ನು ಹಿಂಸಿಸುವುದಿಲ್ಲ. ಪ್ರಾರ್ಥನೆ : ಸುಖಕರವಾಗಿ ರಥವೇರಿ ನದಿಗಳು ಪ್ರವಹಿಸುತ್ತವೆ. ಇಂತಹ ನದಿಗಳು ಅದೇ ರಥದಲ್ಲಿ ಅನ್ನ ಒದಗಿಸುವಂತೆ ಋಷಿಗಳು ಪ್ರಾರ್ಥಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ಪರ್ಜನ್ಯ

ವೃಷ್ಟಿ ಸುರಿಸುವವನು, ಇಷ್ಟಾರ್ಥಪ್ರದ, ಶಕ್ತಿಯುತ, ಮಾನವ ಪಾಲಕ, ಬೃಹತ್‌ರೂಪ ಮೇಘಗಳನ್ನು ಮರುತ್‌ಗಳು ವೃದ್ಧಿಪಡಿಸುತ್ತಾರೆ. ಪರ್ಜನ್ಯನನ್ನು ಎಲ್ಲರಿಗೂ ಗೋಚರಿಸುವಂತೆ ಮಾಡಿದಾಗ ಮೇಘ ಘರ್ಜನೆ ದೂರದಿಂದಲೇ ಕೇಳುತ್ತದೆ. ಪರ್ಜನ್ಯನು ವೃಕ್ಷಗಳನ್ನು ಕೆಳಗುರುಳಿಸುತ್ತಾ ರಾಕ್ಷಸ ನಾಶಮಾಡುತ್ತಾ ಲೋಕವನ್ನೆಲ್ಲಾ ಗದರಿಸುತ್ತಾ ಪಾಪಿಗಳನ್ನು ಕೊಲ್ಲುವಾಗ ನಿರಪರಾಧಿಗಳು ಹೆದರುತ್ತಾರೆ. ಪೃಥ್ವಿಯ ಮೇಲಿನ ಸಕಲ ಚೇತನವು ಸಂತೋಷಗೊಳ್ಳುತ್ತದೆ. ತಗ್ಗು ಉನ್ನತ ಪ್ರದೇಶಗಳಲ್ಲಿ ಒಂದೇ ಸಮನಾಗಿ ಉದಕ ಸುರಿಸಿ ಘರ್ಜಿಸುತ್ತಾ ರಥದಲ್ಲಿ ಸಂಚರಿಸುತ್ತಾನೆ. ಪೂರ್ವಾಭಿಮುಖ ಹರಿದು ಪೃಥ್ವಿಯನ್ನು ತೋಯಿಸುತ್ತಾನೆ. ಪಾನಯೋಗ್ಯ ಉದಕದಿಂದ ಪೃಥ್ವಿಯನ್ನು ಫಲವತ್ತಾಗಿ ಮಾಡಿದಾಗ ವಾಯುವು ಪ್ರಬಲವಾಗಿ ಬೀಸುತ್ತದೆ. ಮಿಂಚು ಸಿಡಿಯುತ್ತದೆ. ಪೃಥ್ವಿಯು ಸಕಲ ಲೋಕಕ್ಕೂ ಯೋಗ್ಯ ಸ್ಥಾನವಾಗಿದೆ. ಓಷಧಿಗಳು ವೃದ್ಧಿಯಾಗಿ ಇಲ್ಲಿ (ಪೃಥ್ವಿ) ಇವೆ. ದೇವತಾತ್ಮ, ಸಮಸ್ತ ಜಗತ್ತಿಗೂ ಪ್ರಭು, ಓಷಧಿಗಳಿಗೂ, ಉದಕಗಳಿಗೂ ವೃದ್ಧಿಕಾರಕ.

ಒಡನೆಯೇ ಉತ್ಪನ್ನನಾಗಿ, ವೃಷ್ಟಿಕಾರಕನಾಗಿ ಸಿಡಿಲು ರೂಪದಿಂದ ಘರ್ಜಿಸಿ ಶಬ್ದ ಉಂಟುಮಾಡುತ್ತಾ ತನ್ನ ಜೊತೆಯಲ್ಲಿರುವ ''ವೈದ್ಯುತಾಗ್ನಿ'' ''ಓಷದ್ಯಾದಿಗಳು'' ಗರ್ಭ ಉಂಟುವಮಾಡುತ್ತಾನೆ. ಪೂರ್ವ, ಪಶ್ಚಿಮ, ಉತ್ತರ, ಮೇಗಗಳು ಪರ್ಜನ್ಯನನ್ನು ಸುತ್ತುವರಿದು ಉದಕ ಸುರಿಸುತ್ತವೆ. ಒಂದು ರೂಪವು ಬಂಜೆ ಹಸುವಿನಂತೆ ವೃಷ್ಟಿ ಸುರಿಸುವುದಿಲ್ಲ ಮತ್ತೊಂದು ವೃಷ್ಟಿ ಸುರಿಸುತ್ತದೆ. ಸಕಲ ಭೂತ ಜಾತಗಳು ಪರ್ಜನ್ಯನಲ್ಲಿ ಆಶ್ರಯ ಹೊಂದಿದೆ. ಅಂತರಿಕ್ಷ ಪುತ್ರರೂಪಿ, ವೃಷ್ಟಿಸೇಚಕ, ಓಷಧಿಗಳಿಗೂ, ಗೋವುಗಳಿಗೂ, ಅಶ್ವಗಳಿಗೂ, ಸ್ತ್ರೀಯರಿಗೂ ಗರ್ಭರೂಪ ಉದಕವನ್ನು ಉತ್ಪತ್ತಿಮಾಡುತ್ತಾನೆ.

## ಆಶ್ರಮ ವಿಭಾಗ

ಋತ್ವಿಜರು ಸ್ತುತಿಸುವುದರಿಂದ, ಕರ್ಮಗಳನ್ನು ಮಾಡುವುದರಿಂದ ಪೃಥ್ವಿಯು ನಮ್ರವಾಗಿದೆ. ಪಶುಗಳು ಪುಷ್ಟವಾಗಿ ಬೆಳೆದಿವೆ. ಯಜಮಾನನು ಪೂಜಿಸಿ, ಪ್ರಾರ್ಥಿಸಿ ಪ್ರಶಂಸಿಸುತ್ತಾನೆ. ಹವಿರೂಪ ಅನ್ನದಿಂದ ಉಪಚರಿಸುತ್ತಾನೆ. ಹವಿರೂಪ ಪರಿಣಾಮ ಉದಕದಿಂದ ದ್ಯುಲೋಕವು ವೃದ್ಧಿ ಹೊಂದುತ್ತದೆ. ಪಿತೃರೂಪಿ ದ್ಯುಲೋಕದಿಂದ ಪೃಥ್ವಿಯು ವೃಷ್ಟಿ ಉದಕ ಸ್ವೀಕರಿಸುತ್ತದೆ. ಆ ಉದಕದಿಂದ ಪೃಥ್ವಿ ಉತ್ಪನ್ನ ಸಕಲ ಪ್ರಾಣಿಗಳು ಬೆಳೆಯುತ್ತದೆ. ಋಷಿಗಳು ಪರ್ಜನ್ಯನಿಗೆ ವೇದ ಮಂತ್ರಗಳು ಪರ್ಜನ್ಯನ ಹೃದಯಾಂತರಾ ಳ ಸೇರಲಿ, ತೃಪ್ತನಾಗಲಿ ಎಂದು ಬಯಸುತ್ತಾರೆ. ಉತ್ತಮ ಗಾನ, ಸ್ತುತಿ ಪಠನ ಮಾಡಿ ದೇವತೆಗಳ ಮುಖರೂಪನಾದ ಅಗ್ನಿಯಲ್ಲಿ ಅತ್ಯಂತ ಮಧುರ ಹವಿಸ್ಸನ್ನು ಅರ್ಪಿಸುತ್ತಾರೆ.

## ಪ್ರಾರ್ಥನೆ

ಓಷಧಿಗಳನ್ನು ಮಾನವ ಯೋಗ್ಯವಾಗುವಂತೆ ಉತ್ಪಾದಿಸಿ ಗರ್ಭರೂಪ ಉದಕ ತುಂಬಿ ಸುಖ ಕೊಡಲು ಪ್ರಾರ್ಥಿಸುತ್ತಾರೆ. ವೃಷ್ಟಿ ಉಂಟುಮಾಡಲಿ, ಪರ್ಜನ್ಯನು ರಕ್ಷಿತ ಓಷಧಿಗಳು ಯಜಮಾನನಿಗೆ ಸತ್‌ಫಲದಾಯಕವಾಗಿರಲಿ, ಆದಿತ್ಯ ತೇಜಸ್ಸನ್ನು ಪರ್ಜನ್ಯನು ಅನುಗ್ರಹಿಸಲಿ, ಶತ ಸಂವತ್ಸರ ಪರ್ಯಂತ ರಕ್ಷಿಸಲಿ, ಪರ್ಜನ್ಯನು ಯಜಮಾನನಿಗೆ ಪುಷ್ಕಳವಾಗಿ ಓಷದ್ಯಾದಿ ರೂಪ ಅನ್ನ ಕೊಡಲು ಪ್ರಾರ್ಥಿಸಿದ್ದಾರೆ. ವೃಷ್ಟಿಯು ತೊಂದರೆ ಆಗದಂತೆ ಅನುಕೂಲವಾಗಿರಲಿ ಎಂದು ಪರ್ಜನ್ಯನನ್ನು ಪ್ರಾರ್ಥಿಸುತ್ತಾರೆ. ಓಷಧಿಗಳು ಯಜಮಾನನಿಗೆ ಸತ್‌ಫಲದಾಯಕವಾಗಲಿ, ಮೂರು ಋತುಗಳಲ್ಲಿ ಆದಿತ್ಯ ತೇಜಸ್ಸನ್ನು ಪರ್ಜನ್ಯನು ಅನುಗ್ರಹಿಸಲಿ, ಯಜಮಾನನನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಲಿ. ಯಜಮಾನನ್ನು ಶತ ಸಂವತ್ಸರ ಜೀವಿಸುವಂತೆ ರಕ್ಷಿಸಲಿ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ದ್ಯಾವಾ ಪೃಥ್ವಿಗಳು

ದ್ಯಾವಾಪೃಥ್ವಿಗಳು ಯಜ್ಞವನ್ನು ವೃದ್ಧಿಮಾಡುವ ಮಹಾನ್ ರೂಪಿಗಳು. ಕೆಡುಕನ್ನು ಮಾಡದ ಪಿತೃ ರೂಪಿಗಳು, ದೇವತೆಗಳನ್ನು ಪುತ್ರರನ್ನಾಗಿ ಹೊಂದಿರುವವರು, ಯಜಮಾನ ರೂಪಿ ಪ್ರಜೆಗಳಿಗೆ ಶಾಶ್ವತ ರಕ್ಷಣೆ, ಸಹಾಯ ಮಾಡುವವರು. ಆದಿತ್ಯನು ಸಕಲ ಇಷ್ಟಾರ್ಥಪ್ರದ ದೇವತಾತ್ಮ. ಲೋಕ ಕಲ್ಯಾಣ ಪರ್ಜನ್ಯ ನಿರ್ವಹಣೆಗಾಗಿ ಒಂದೇ ಮಾರ್ಗದಲ್ಲಿ ಸಂಚರಿಸುವವನು. ಚೈತನ್ಯ ಪ್ರದಾನ ಶಕ್ತಿಯಿಂದ, ರಶ್ಮಿಗಳಿಂದ ತನ್ನ ಪ್ರಭೆಯನ್ನು ಸುತ್ತಲೂ ಪ್ರಸರಿಸುತ್ತಾನೆ. ಕಿರಣಗಳಿಂದ ಎಚ್ಚೆತ್ತು ಆದಿತ್ಯ ಮಾರ್ಗವನ್ನು ದ್ಯಾವಾ ಪೃಥ್ವಿಗಳು ಅನುಸರಿಸುತ್ತಾ ರಕ್ಷಿಸುತ್ತಾರೆ. ದ್ಯುಲೋಕಕ್ಕೆ ಅಭಿಮಾನಿ ದೇವತೆ ಭೂದೇವಿ. ಶುಕ್ಲ ವರ್ಣದವಳು, ಹರ್ಷದಾಯಕಳು, ಸಕಲ ಲೋಕವನ್ನು ರಕ್ಷಿಸಿ ಕಾಪಾಡುವವಳು, ಸೂರ್ಯ ರಶ್ಮಿಯಿಂದ ಪವಿತ್ರಗೊಳ್ಳುವವಳು, ದೇವೋತ್ತಮನಾದ ಆದಿತ್ಯನು ಪವಿತ್ರ ರಶ್ಮಿವಂತ, ಆದಿತ್ಯನು ದ್ಯಾವಾ ಪೃಥ್ವಿಗಳ ಪುತ್ರ, ಉದಕ ಹರಿಯುವುದು, ಲೋಕ ಪವಿತ್ರವಾಗುವುದು, ಲೋಕ ಸಂಚಾರಿಯಾದ ಸೂರ್ಯದೇವನಿಂದಲೇ. ಸೂರ್ಯದೇವನ ಸಿಹಿ ಉದಕ ವೃಷ್ಟಿಯನ್ನು ದ್ಯುಲೋಕದಿಂದ ಅನುಗ್ರಹಿಸುತ್ತಾ ಪಿತೃಸ್ಥಾನಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ.

ದ್ಯಾವಾ ಪೃಥ್ವಿಗಳು ಪರಸ್ಪರ ಪ್ರೀತಿಯ ಅಕ್ಕತಂಗಿಯರು, ದೇವತೆಗಳನ್ನು, ಮಾನವರನ್ನು ಪುತ್ರರನ್ನಾಗಿ ಪಡೆದವರು, ಚಲನಯುಕ್ತ ಸಕಲ ಪ್ರಾಣಿಗಳನ್ನು ಧರಿಸಿರುವವರು, ಇವರ ಉನ್ನತ ರಹಸ್ಯ ಎಲ್ಲವೂ ದ್ಯಾವಾ ಪೃಥ್ವಿಗಳಲ್ಲಿ ಅಡಗಿರುವ ಪದಾರ್ಥಗಳ ಸಮೂಹದಲ್ಲಿಯೇ ಅಡಗಿದೆ. ಇದಕ್ಕೆ ಸಂಬಂಧಿಸಿದಂತೆ ಅಹೋ ರಾತ್ರಿಗಳು ಒಚಕ್ರದಂತೆ ಭ್ರಮಿಸುತ್ತವೆ. ಸಸ್ಯಾದಿಗಳಿಗೆ ಸಕಲ ಜಗತ್ತಿಗೂ ಜನನಿಯಂತಿದ್ದಾಳೆ. ಶ್ರೇಷ್ಠ ಪ್ರಜ್ಞೆಯ ಪಾಲಕರಾಗಿದ್ದಾರೆ. ಇವರು ಪ್ರಭಾವಂತರು, ಸಕಲ ಭುವನಗಳಿಗೂ ಆಶ್ರಯದಾತರು, ಉತ್ತಮ ಸ್ವರೂಪರು, ನಾನಾ ಸತ್ವಧಾರಿಗಳು. ಸಕಲ ಭೂತಜಾತಗಳಿಗೂ ಒಡೆಯರು, ದ್ಯುಲೋಕ ದೇವತೆ ಪಿತೃರೂಪಿ. ಪೃಥ್ವಿ ಮಾತೃರೂಪಿ, ಉದಕ ಕರೆಯುವರು, ಪುತ್ರ ಪೌತ್ರಾದಿಗಳೊಂದಿಗೆ ವೃದ್ಧಿ ಹೊಂದುತ್ತಾರೆ. ಶತ್ರು ಸಂಹಾರಕ್ಕಾಗಿ "ದಧಿಕ್ರಾ" ದೇವನನ್ನು ಸ್ತುತಿಸಿದ್ದಾರೆ. ಅಸುರರನ್ನು, ದಸ್ಯುಗಳನ್ನು, ಶತ್ರುಗಳನ್ನು ನಾಶಮಾಡುತ್ತಾರೆ. ಇವರು ಅಗಾಧರು, ಸುಂದರರು, ಯಜ್ಞಾರ್ಹರು, ಸತ್ಯಾತ್ಮರು, ಪವಿತ್ರರು, ಇಷ್ಟಾರ್ಥಸುರಿಸುವವರು, ದ್ರೋಹ ಬುದ್ಧಿ ಇಲ್ಲದವರು, ಯಜ್ಞ ನಿರ್ವಾಹಕರು, ದೇವತೆಗಳನ್ನು ಪುತ್ರರನ್ನಾಗಿ ಹೊಂದಿ ಒಟ್ಟಿಗೆ ಸೇರಿಕೊಂಡಿರುವವರು. ಪ್ರಜಾಪತಿಯು ದ್ಯಾವಾ ಪೃಥ್ವಿಗಳನ್ನು ಉತ್ಪನ್ನ ಮಾಡಿದನು. ಉತ್ತಮ ಕರ್ಮಗಳಿಂದ ಪ್ರಜಾಪತಿಯು ಸ್ತುತಿತನಾಗಿದ್ದಾನೆ. ಪರ್ಜನ್ಯನು ದ್ಯಾವಾ ಪೃಥ್ವಿಗಳನ್ನು ಪ್ರತ್ಯೇಕ ಮಾಡಿದನು. ಪರ್ಜನ್ಯನು ಮರುತ್, ಮೇಘದೊಡಗೂಡಿ ವೃಷ್ಟಿ ಸೇಚಕನಾಗಿದ್ದಾನೆ. ಸರ್ವಕಾಲದಲ್ಲಿಯೂ ಯಜ್ಞ ನಿರ್ವಹಿಸುತ್ತಾರೆ.

ಆಶ್ರಮ : ಸ್ತುತಿಸುತ್ತಾರೆ, ಹವಿರರ್ಪಿಸುತ್ತಾರೆ, ಕರ್ಮಯುಕ್ತರಿಂದ ಶ್ರೇಷ್ಠಕರ್ಮ ಮಾಡಿಸುತ್ತಾರೆ. ದ್ಯಾವಾ ಪೃಥ್ವಿಗಳನ್ನು ನಡುವೆ ಇರುವ ದೇವತೆಗಳನ್ನು ಭಕ್ತಿಯಿಂದ ಪೂಜಿಸಿ ನಮಸ್ಕರಿಸುತ್ತಾರೆ. ಹವಿಸ್ಸಿನಿಂದಲೂ ತೃಪ್ತಿಪಡಿಸುತ್ತಾರೆ.

ಧನವೂ, ಅನ್ನವೂ ಪೃಥ್ವಿ ಅಂತರಿಕ್ಷಗಳಿಗೆ ಸೇರಿದ್ದು, ಸ್ತುತಿಸಿ ಸತ್ಫಲ ಅಪೇಕ್ಷಿಸಿದ್ದಾರೆ. ಆಶ್ರಮಗಳಲ್ಲಿ ಯಾಜ್ಞಿಕರು ದ್ಯಾವಾ ಪೃಥ್ವಿಗಳ ನಡುವೆ ಇರುವ ಎಲ್ಲ ದೇವತೆಗಳನ್ನು ಪ್ರೀತಿಯಿಂದ, ಭಕ್ತಿಯಿಂದ, ಸ್ತೋತ್ರಗಳಿಂದ ಹವಿಸ್ಸು ಅರ್ಪಿಸಿ ನಮಸ್ಕರಿಸುತ್ತಾರೆ. ಉದಕಾರ್ಥ ಕರ್ಮಗಳನ್ನು ಮಾಡುತ್ತಾರೆ. ಇಷ್ಟಾರ್ಥಗಳನ್ನು ಪಡೆಯಲು ಹವಿಸ್ಸನ್ನು ಅರ್ಪಿಸುತ್ತಾರೆ. ಯಜ್ಞದಲ್ಲಿ ಪ್ರಥಮ ಪುರಸ್ಕಾರವನ್ನು ನೀಡುತ್ತಾರೆ. ಸ್ತುತಿಸುವವರು ಸ್ತುತಿಗಳನ್ನು ಪಠಿಸುತ್ತಾರೆ. ಯಜ್ಞದ ಸುತ್ತಲೂ ದ್ಯಾವಾ ಪೃಥ್ವಿಗಳು ಆಸೀನರಾಗಲಿ ಎಂದು ಪ್ರಾರ್ಥಿಸಿದ್ದಾರೆ.

ಪ್ರಾರ್ಥನಾ ವಿಭಾಗ : ಆದಿತ್ಯ ದ್ಯಾವಾ ಪೃಥ್ವಿಗಳಿಂದ ಇಷ್ಟಾರ್ಥ, ಧನ, ಗೃಹ, ಗೋ ಸಂಪತನ್ನು ಬೇಡಿದ್ದಾರೆ. ದ್ಯಾವಾ ಪೃಥ್ವಿ, ಸೂರ್ಯರು ಯಾಜ್ಞಿಕರಿಗೆ ಪ್ರಭೂತ ಅನ್ನ, ಧನ, ಬಲ, ಸಂತಾನಗಳನ್ನು ಅಪೇಕ್ಷಿಸಿದ್ದಾರೆ. ಮಹಾವಿಪತ್ತಿನಿಂದ ರಕ್ಷಿಸಲಿ, ಭಯಂಕರ ಪಾಪಗಳನ್ನು ಪರಿಹರಿಸಲಿ, ಧೀರ್ಘಾಯುಸ್ಸನ್ನು ಬೇಡಿದ್ದಾರೆ. ಉದಕಗಳಿಗಾಗಿ ವೃಷ್ಟಿಯನ್ನು ಬೇಡಿದ್ದಾರೆ. ದಧಿಕ್ರಾ ದೇವನು ದಸ್ಯುಗಳನ್ನು, ಶತ್ರುಗಳನ್ನು ನಾಶಮಾಡಲಿ ಎಂದು ಪ್ರಾರ್ಥಿಸಿದ್ದಾನೆ. ಗೃಹ, ಪತ್ನಿ, ಧನ, ಅನ್ನ, ರಥ, ಸೇವಕರುಗಳನ್ನು ಅನುಗ್ರಹಿಸಲು ದ್ಯಾವಾ ಪೃಥ್ವಿಗಳಲ್ಲಿ ಪ್ರಾರ್ಥಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅಬ್ ದೇವತೆ

ಸಮಸ್ತ ಭೂತ ಜಾತಗಳನ್ನೂ ಸೃಷ್ಟಿಸುವ ಅಗ್ನಿ ಮೊಮ್ಮಗ, ಉದಕಗಳ ಮಧ್ಯೆ ಮೇಘಗಳಲ್ಲಿ ಅಂತರಿಕ್ಷಸ್ಥನಾಗಿ ವೃಷ್ಟಿಕಾರಕನಾಗಿ ನದಿ ಪ್ರವಹಿಸುವಂತೆ ಮಾಡುತ್ತಾನೆ. ಉದಕಗಳು ಪರಿಶುದ್ಧ, ಪ್ರಸಿದ್ಧ, ಪಾಪರಹಿತ, ಪ್ರವಾಹಾತ್ಮಕ, ವೃಷ್ಟಿಸುರಿಸುವಂತಹ ಶುದ್ಧಿಕಾರಕ, ರುಚಿಕರ, ಶೀಘ್ರಗಾಮಿ, ಮಧುರ ರಸೋಪೇತ ಉದಕಗಳು ಸೂರ್ಯ ಕಿರಣಗಳಿಂದ ವಿಸ್ತೃತವಾದವು. ಇಂದ್ರನು ಮೇಘ ಸಂಚಾರಯೋಗ್ಯ ಮಾರ್ಗ ನಿರ್ಮಿಸಿದನು. ಪ್ರಭು, ವರುಣ ದೇವನು ಮಧ್ಯಮ ಲೋಕಸ್ಥದೇವ. ಪ್ರಜೆಗಳ ಸತ್ಯ, ಅಸತ್ಯ ಜೀವನಗಳನ್ನು ನೋಡುತ್ತಿರುತ್ತಾನೆ, ಉದಕಗಳಿಗೆ ಪ್ರಭು, ಮಧುರರಸ ಹಿಂಡುತ್ತಾನೆ, ಇಂದ್ರನು ವಜ್ರಾಯುಧದಿಂದ ಮೇಘವನ್ನು ಸೀಳಿ ಉದಕ ಬಿಡಿಸಿದನು, ಉದಕಗಳು ತಡೆ ಸೀಳಿಕೊಂಡು ಜಗತ್ತನ್ನು ಶುದ್ಧಿಗೊಳಿಸುವ ಶುದ್ಧಿಕಾರಕಗಳಾಗಿ ಹರಿದು ಸಮುದ್ರಾಭಿಮುಖ ಹರಿದು ಸಮುದ್ರವನ್ನು ಸೇರುತ್ತದೆ. ಯಜಮಾನರನ್ನು ಅನ್ನ ಪಾತ್ರರನ್ನಾಗಿ ಮಾಡುತ್ತಾ ಮಾನವರನ್ನು ಯೋಗ್ಯರನ್ನಾಗಿ ಮಾಡುತ್ತಾಳೆ. ಸುಖಕಾರಕಳು ಆಗಿರುತ್ತಾಳೆ. ಉದಕಗಳು ದೇವತೆಗಳು ಅಗ್ನಿಯ ಮಧ್ಯವರ್ತಿಗಳು ಎಂದು ಸೋಮದೇವನಿಂದ ಯಜಮಾನನು ತಿಳಿದಿದ್ದಾನೆ. ಇಷ್ಟಾರ್ಥ ಸಿದ್ಧಿಕಾರಕ, ಪಾನಯೋಗ್ಯ ಉದಕ ದೇವತೆಗಳು ಸಕಲ ರೋಗನಾಶಕ ಓಷದಿಗಳು ರೋಗ ಪರಿಹಾರ ಮಾಡಿ ಪುತ್ರ, ಪೌತ್ರರು ಉತ್ಪನ್ನವಾಗುವಂತೆ ಮಾಡುತ್ತಾರೆ. ಯಜಮಾನರು ಮಾಡಿದ ಪಾಪಗಳನ್ನು ಹರಿಯುವ ಉದಕ ಪ್ರವಾಹದಲ್ಲಿ ಕೊಚ್ಚಿಹೋಗುವಂತೆ ಮಾಡುತ್ತಾಳೆ. ಉದಕಗಳು ಸೋಮ ಸಹೋತ್ಪನ್ನರು. ಸೋಮ ಪುಷ್ಟಿ ಮಾಡುವವರು, ಜಲ ಸಮೂಹವು ಹರ್ಷಕಾರಕ, ಮದಕಾರಕ, ಇಂದ್ರಪಾನಯೋಗ್ಯ, ಅಂತರಿಕ್ಷ ಉತ್ಪನ್ನ, ಸೋಮಾಪೇಕ್ಷಿ, ಧನ ದೇವತೆಗಳು, ಮಂಗಳ ಕರ್ಮಿಗಳು, ಧನ ಮತ್ತು ಪೃಥ್ವಿ ಪಾಲಕರು, ಆರ್ಜ್ಯ ಮತ್ತು ಸೋಮರಸದೊಂದಿಗೆ ಸೇರಿ ಇಂದ್ರ ಪಾನಾರ್ಥ ಯಜ್ಞ ಗೃಹಕ್ಕೆ ಬಂದಾಗ ಅಬ್ ದೇವತೆಯು ಯಜಮಾನನನ್ನು ನೋಡುತ್ತಾಳೆ. ಪಾಪ ನಾಶಕ್ಕೆ ಇರುವವಳು, ಮಾನವರಿಗೆ ವಸತಿದಾಯಕಳು, ರೋಗ ನಾಶಕಳು, ಸುಖಕಾರಕಳು ಆಗಿದ್ದಾರೆ.

ಆಶ್ರಮ : ಅಧ್ವರ್ಯುಗಳು ಆರ್ಜ್ಯಪೂರಿತ ಉದಕಗಳಿಗೆ ಹವಿಸ್ಸನ್ನು ಆಹುತಿ ರೂಪಿನಲ್ಲಿ ಅರ್ಪಿಸುತ್ತಾರೆ. ಯಜಮಾನನು ಯಾಗ ಮಾಡುತ್ತಾನೆ. ಇಂದ್ರನು ಯಜ್ಞ ಕರ್ಮಗಳನ್ನು ಹಿಂಸಿಸುವುದಿಲ್ಲ. ಋತ್ವಿಜರು ಯಜ್ಞನಿರತರಾಗಿರುತ್ತಾರೆ. ಹವಿಸ್ಸನ್ನು ಸಮಸ್ತ ದೇವತೆಗಳಿಗೂ ಅರ್ಪಿಸುತ್ತಿರುತ್ತಾರೆ. ಸೋಮನನ್ನು ಮೊದಲು ಉತ್ಪನ್ನ ಮಾಡುತ್ತಾರೆ (ಅಭಿಶವಣಾದಿಗಳಿಂದ). ಅಪಾಂನಪಾತ್ ದೇವನು ಸೋಮ ರಕ್ಷಿಸಿದನು. ಉದಕಾಭಿಮಾನಿ ದೇವತೆಗಳಿಗೆ ಯಜ್ಞ ಕರ್ಮಗಳನ್ನು ಮಾಡುತ್ತಾರೆ. ಇವರು ಜೀವಿಗಳ ಪಾಲಕರು, ಅಧ್ವರ್ಯುಗಳು ಇವರನ್ನು ಆಸನದಮೇಲೆ ಕೂಡಲು ಪ್ರಾರ್ಥಿಸುತ್ತಾರೆ. ಸಮುದ್ರದಿಂದ ಉದಕ ತಂದು ಸೋಮಲತೆಯನ್ನು ವೃದ್ಧಿಗೊಳಿಸುತ್ತಾರೆ. ಅಧ್ವರ್ಯುಗಳು ಕೆಂಪುಬಣ್ಣದ ಸೋಮವನ್ನು ಹಿಂಡಿ ಮೇಘಸ್ಥ ಉದಕ ಹಾಗೂ ವಸತೀವರಿಗಳೊಂದಿಗೆ ಸೇರಿಸುತ್ತಾರೆ. ಇಂದ್ರಾರ್ಥ ಸೋಮ ಹಿಂಡಿದಾಗ ದೇವ ಪೂಜೆ ಆಗುತ್ತದೆ. ತಮ್ಮ ಪ್ರಾರ್ಥನೆಗಳನ್ನು ಮನ್ನಿಸಲು ಕೇಳಿಕೊಂಡಿದ್ದಾರೆ.

ಪ್ರಾರ್ಥನೆ : ಅಬ್ ದೇವತೆಗಳು ಧನ ಕೊಡಲಿ, ದೇವತೆಗಳು ಯಜಮಾನನನ್ನು ಕಲ್ಯಾಣಗಳಿಂದ ರಕ್ಷಿಸಲಿ, ನಿರಂತರವಾಗಿ ಯಜಮಾನನ ಪಾಪಗಳನ್ನು ನಾಶಮಾಡಿ ಸುಖವನ್ನು ಕೊಡಲಿ. ನೀರನ್ನು ಪ್ರವೇಶಿಸಿದಾಗ ನೀರಿನಸಾರವೆಲ್ಲಾ ಯಜಮಾನನ ಶರೀರವನ್ನು ಸೇರಲಿ. ಅಗ್ನಿಯು ಸ್ನಾನ ನಂತರ ಯಜಮಾನನನ್ನು ತೇಜಸ್ವಿಯನ್ನಾಗಿ ಮಾಡಲಿ. ಬಹುಕಾಲ ಸೂರ್ಯನನ್ನು ನೋಡುವಂತಾಗಲಿ. ಶರೀರವನ್ನು ನಿರೋಗಿಯನ್ನಾಗಿಸಲಿ. ಸರಸ್ವತಿ ದೇವಿಯರು ಸ್ತುತಿಸುವ ಯಜಮಾನರಿಗೆ ಧನ ಅನುಗ್ರಹಿಸಲಿ. ಉದಕಗಳು ಧೇನುಗಳಿಂದ ಕ್ಷೀರ ಸುರಿಸಲಿ. ಅಬ್ ದೇವತಾ ಅಭಿಮಾನಿಗಳು ಸರಸ್ವತಿ ದೇವಿಯರು ಎಲ್ಲಾ ರೀತಿಯಿಂದಲೂ ರಕ್ಷಿಸಲಿ. ಆರೋಗ್ಯ ಕರುಣಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಇಂದ್ರಾಣಿಯ ಬಗೆಗೆ

(ಋಗ್ವೇದದಲ್ಲಿ ಋಷಿಗಳಿಂದ)

ಇಂದ್ರ ಪತ್ನಿ ಇಂದ್ರಾಣಿ ಸ್ತ್ರೀಯರಲ್ಲೇ ಸೌಭಾಗ್ಯವತಿ. ಇವಳನ್ನು ಮೀರಿಸುವವರು ಯಾರೂ ಇಲ್ಲ. ಉತ್ತಮ ಬಾಹುಗಳು, ಮುಪ್ಪಿನಿಂದ ಸಾಯುವವಳಲ್ಲ. ಶ್ರೇಷ್ಟ ಬೆರಳುಗಳು. ಶ್ರೇಷ್ಟ ಕೇಶರಾಶಿ, ವೀರಪುತ್ರಿ, ಶುಭದಾಯಕಳು, ಪತಿಯೊಡನೆ ಒಂದಾಗಿ ಹೊಂದಿಕೊಂಡು ಅವನ ಇಚ್ಛೆಯನ್ನು ಅನುಸರಿಸುವವಳು. ಇಪ್ಪತ್ತು ಮಕ್ಕಳನ್ನು ಪಡೆದಳು ಎಂದಿದ್ದಾರೆ ವೃಷಾಕಪಿರ್ಯೆಂದ್ರರು. ಶ್ರೇಷ್ಟ ಸೊಸೆವುಳ್ಳವರು ಇಂದ್ರಾಣಿ. ಶೂರ ಪುತ್ರರನ್ನು ಹೊಂದಿರುವವಳು, ಪತಿಗೆ ಹರ್ಷವುಂಟುಮಾಡುವವಳು. (ವೀರ ಮರುತ್‌ಗಳು ಇವರ ಸಖರು. ಸಂಗ್ರಾಮದಲ್ಲಿ ಮುಂದಾಳುಗಳು) ಸ್ತುತಿಕರ್ತರಿಂದ ಸ್ತುತಿಸಲ್ಪಡುವವಳು. ಕೆಟ್ಟ ಕೆಲಸ ಮಾಡುವವನಿಗೆ ಸುಖ ಉಂಟುಮಾಡಲು ಇಂದ್ರಾಣಿ ಎಂದಿಗೂ ಅವಕಾಶಕೊಡುವವಳಲ್ಲ. ಶಚೀದೇವಿಯು ಕೀರ್ತಿಯುತಳು, ಶತ್ರುನಾಶಕಳು. ಇಂದ್ರನು ಸೂರ್ಯನಂತೆ ಆಕೆಗೆ (ಶಚೀದೇವಿಗೆ) ಸೌಭಾಗ್ಯ ತಂದಿದ್ದಾನೆ. ಸರ್ವಸ್ವವನ್ನೂ ತಿಳಿದವಳು, ಇಂದ್ರನನ್ನು ಒಲಿಸಿಕೊಂಡು ತನ್ನಲ್ಲಿಯೇ ಇರುವಂತೆ ಮಾಡಿಕೊಂಡವಳು.

## ಪಾತಾಲಿಕೆ (ಲತಾರೂಪಿ ಮೂಲಿಕೆ)

ಮೇಲ್‌ಮುಖ ಬೆಳೆಯುತ್ತದೆ. ಅತಿಶಯ ಶಕ್ತಿಯುತವಾದುದು.

ಈ ಮೂಲಕೆಯನ್ನು ಇಂದ್ರಾಣಿಯ ತಲೆಗೆ ಶರೀರಕ್ಕೆಲ್ಲಾ ಲೇಪಿಸಿಕೊಂಡಿದ್ದಾಳೆ. ಪ್ರಬಲಶಕ್ತಿಯ ಔಷಧಿ ಇದು ಎನ್ನುತ್ತಾಳೆ ಇಂದ್ರಾಣಿ. ತನ್ನ ಪತಿ ಇಂದ್ರನ ಹೆಸರು ಹೇಳದ ಇನ್ನೊಬ್ಬಸ್ತ್ರಿ (ಸವತಿ)ಯನ್ನು ಪತಿಯಿಂದ ದೂರಮಾಡುವ ಉದ್ದೇಶವಾಗಿದೆ. ಇಂದ್ರಾಣಿ ಪಾತಾಲಿಕೆಯನ್ನು ಹೀಗೆ ಪ್ರಾರ್ಥಿಸಿದ್ದಾರೆ.

1) ಸವತಿಯನ್ನು ಪತಿಯಿಂದ ದೂರ ಓಡಿಸಲಿ.

2) ಪತಿಯು ಬೇರೊಬ್ಬ ಸ್ತ್ರೀಯಲ್ಲಿ ಅನುರಕ್ತನಾಗದಿರಲಿ.

3) ತನ್ನನ್ನು ಮಾತ್ರ ಪ್ರೀತಿಸಲಿ

4) ತಾನು ಲೋಕದಲ್ಲಿ ಎಲ್ಲರಿಗಿಂತ ಉತ್ಕೃಷ್ಟಳಾಗಿರುವಂತಾಗಲಿ.

5) ಸವತಿಯು ನಿಕೃಷ್ಟಳಾಗಿರುವಂತಾಗಲಿ

6) ಪತಿಯ ಮನಸ್ಸು ವೇಗವಾಗಿ ತನ್ನ ಕಡೆಗೆ ಹರಿಯಲಿ

ಇಂದ್ರನ ಸಾಹಸ, ಕೀರ್ತಿ, ಗಣ್ಯತೆಗೆ ಸಾಧಕವಾದ ಹವಿಸ್ಸನ್ನು "ಶಾಪಿಯು" ಸಿದ್ಧಪಡಿಸುತ್ತಾಳೆ. ಅಡಿಗೆಯವಳು ಇಂದ್ರನಿಗೆ ಬಹುಪ್ರಿಯವಾದ ಹವಿಸ್ಸನ್ನು ಸಿದ್ಧಪಡಿಸುತ್ತಾಳೆ. ತನ್ನ ಶತ್ರುಗಳಾದ ಸವತಿಯರ ಬಳಿಗೆ ಇಂದ್ರನು ಹೋಗದಂತೆ ಮಾಡಿ ಅವರ ತೇಜಸ್ಸು, ಧನ ನಾಶಮಾಡಿದ್ದಾಳೆ.

## ಇಂದ್ರನ ಸೊಸೆಯ ಬಗೆಗೆ (ಮಂಡಳ 10ರಿಂದ)

ಇಂದ್ರನ ಸೊಸೆ "ವಸುಕ್ರನ ಪತ್ನಿ" ಒಂದು ಸಲ ಯಾಗವು ನಡೆಯುತ್ತಲಿದ್ದಾಗ ದೇವತೆಗಳೆಲ್ಲರೂ ಬಂದಿದ್ದರು. ಆದರೆ ಇಂದ್ರನು ಮಾತ್ರ ಬಂದಿರಲಿಲ್ಲ. ಮರುತ್‌ಗಳೊಡನೆ ಶತ್ರು ಸಂಹಾರ, ಯಜಮಾನನ ರಕ್ಷಣೆಗಾಗಿ ಇಂದ್ರನು ದ್ಯುಲೋಕದಿಂದ ಎಲ್ಲಿಗೋ ಹೋಗಿದ್ದನು. ಆಗ ಇಂದ್ರನ ಪರಾಕ್ರಮವನ್ನು ಸ್ತುತಿಸಿ ಇಂದ್ರನನ್ನು ಆಹ್ವಾನಿಸುತ್ತಾರೆ.

1)ನದಿಗಳು ಹಿಮ್ಮುಖ ಹರಿಯಬಹುದು 2) ತೃಣ ಭಕ್ಷಕ ಮೃಗವು ಸಿಂಹವನ್ನು ಸೀಳಬಹುದು.

3) ಮೊಲವು ಸಿಂಹವನ್ನು ಹಿಡಿಯಬಹುದು 4) ನರಿಯ ಕಾಡುಹಂದಿಯನ್ನು ಪೊದೆಯಿಂದ ಓಡಿಸಬಹುದು.

5) ಚಿಕ್ಕ ಕರು ವೃಷಭವನ್ನು ಎದುರಿಸಿ ಹೋರಾಡಬಲ್ಲದು 6) ದೊಡ್ಡಪ್ರಾಣಿಯನ್ನು ಸಣ್ಣದು ವಶಪಡಿಸಿಕೊಳ್ಳಬಹುದು

7) ಸೋಮಾಭಾವದಿಂದ ಇಂದ್ರನು ನರಳಿದಾಗ ಪಕ್ಷಿರೂಪ ಗಾಯಿತ್ರಿ ತನ್ನ ನಖಗಳಿಂದ ಸೋಮವನ್ನು ಅಪಹರಿಸಿ ದ್ಯುಲೋಕದಲ್ಲಿಟ್ಟಿತ್ತು. ಇಂದ್ರನು ಪಾನ ಮಾಡಿ ನಂತರ ಶತ್ರುಗಳನ್ನು ಸಂಹರಿಸಿದನು. ಸೋಮಯಾಗದಿಂದ ಯಜಮಾನರು ಉತ್ತಮ ಕರ್ಮಫಲ ಹೊಂದುತ್ತಾರೆ. ಇಂದ್ರನು ಕಾಲಕಾಲಕ್ಕೆ ವಿವೇಕ ಹೇಳಲಿ. ಆಹ್ವಾನಿಸಿದಾಗ ಬರಲಿ, ಸ್ತುತಿ ಕೇಳಲಿ, ಯಜಮಾನನಿಗೆ ಅನ್ನ, ಧನ ನೀಡಲಿ, ಇಂದ್ರನ ಸೊಸೆಯು ಮೇಲಿನಂತೆ ಇಂದ್ರನನ್ನು ಯಾಗಕ್ಕೆ ಬಂದು ಆತಿಥ್ಯವನ್ನು ಸ್ವೀಕರಿಸಿ ಯಾಜ್ಞಿಕರನ್ನು ಅನುಗ್ರಹಿಸಿ ಹಿಂದಿರುಗಲು ಅಪೇಕ್ಷಿಸಿದ್ದಾಳೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

# ಅರಣ್ಯಾನಿ

(ಋಗ್ವೇದದಲ್ಲಿ ಋಷಿಗಳಿಂದ)

ಅರಣ್ಯದಲ್ಲಿ ಸಣ್ಣ ಸಣ್ಣ ಪ್ರಾಣಿಗಳ ಕರ್ಣ ಕಠೋರ ಶಬ್ದವು ವೀಣಾ ವಾದನದಂತೆ ಅರಣ್ಯದಲ್ಲಿ ಶೋಭಿಸುತ್ತದೆ. ಹುಲ್ಲು ಮೇಯುವ ಜಿಂಕೆಗಳು ಋತುಗಳಂತೆಯೂ ಗಿಡ, ಬಳ್ಳಿ, ಪೊದೆಗಳು, ಮನೆಯಂತೆಯೂ ಕಾಷ್ಟಗಳನ್ನು ಹೊತ್ತು ತರುವ ಗಾಡಿಗಳು ಮನೆಯ ಮುಂದೆ ಬಿಟ್ಟಿರುವ ಹೊರೆಗಳಂತೆಯೂ ಬಾಸವಾಗಿ ಅರಣ್ಯವೇ ಗ್ರಾಮವಾಗಿ ಬಾಸವಾಗುತ್ತದೆ. ಅರಣ್ಯ ಜನರು ಗೋಧನ ಮೇಯಿಸುತ್ತಾ, ಮರ ಕಡಿಯುತ್ತಾ ಕಾರ್ಯನಿರತರಾಗಿರುತ್ತಾರೆ. ಕಾಡುಮೃಗಗಳ ಘರ್ಜನೆಯು ಕಳ್ಳರು ಪ್ರಯಾಣೀಕರನ್ನು ಹೆದರಿಸುವ ಘರ್ಜನೆಯಂತೆ ಕಾಣುತ್ತದೆ. ಅರಣ್ಯವು ಯಾರನ್ನೂ ಹಿಂಸಿಸುವುದಿಲ್ಲ. ಅದಕ್ಕೆ ಬದಲಾಗಿ ಮನುಷ್ಯರು ರುಚಿಕರ ಫಲ ತಿನ್ನುತ್ತಾ ಸ್ವೇಚ್ಛೆಯಾಗಿ ತಿರುಗಾಡಬಹುದು. ದುಷ್ಟ ಜಂತುಗಳಾಗಲೀ, ಕಳ್ಳರಾಗಲೀ ಸಮೀಪ ಬರುವುದಿಲ್ಲ. ಇನ್ನೂ ಎಲ್ಲಾ ಪ್ರಾಣಿಗಳು, ಪಕ್ಷಿಗಳು ಆಹಾರ ತಿಂದು ನೀರು ಕುಡಿದು ವಿಶ್ರಾಂತಿ ಪಡೆಯುತ್ತವೆ. ಪುಷ್ಪಗಳಿಂದ ಘಮಘಮ ಪರಿಮಳ ಬೀರುತ್ತಾ ನಾನಾ ವಿಧ ಫಲ ಮೂಲಾದಿಗಳಿಂದ ವನವು (ಅರಣ್ಯವು) ವನ್ಯ ಮೃಗಗಳಿಗೆ ಜನನಿಯಂತಿದೆ. ಇಂತಹ ಅರಣ್ಯ ದೇವತೆಯನ್ನು ಋಷಿಗಳು ಸ್ತುತಿಸಿದ್ದಾರೆ.ಅರಣ್ಯವನ್ನು ರಕ್ಷಿಸುವುದು ಎಲ್ಲರ ಅತಿಮುಖ್ಯ ಕರ್ತವ್ಯ ಎನ್ನುವುದನ್ನು ಋಷಿಗಳು ಒತ್ತಿ ಹೇಳುತ್ತಾರೆ.

## ಗೋವುಗಳು

ಗೋವುಗಳು ಹಲವು ಬಣ್ಣದವು, ಹಲವು ಗಾತ್ರದವು, ಹಲವು ಆಕಾರದವು, ಇಂತಹ ಗೋವುಗಳನ್ನು ಆಂಗೀರಸ ಋಷಿಗಳು ತಮ್ಮ ತಪ:ಪ್ರಭಾವದಿಂದ ಸೃಷ್ಟಿಸಿದರು. ಇದನ್ನು ಅಗ್ನಿ ಸಮರ್ಥವಾಗಿ ತಿಳಿದವನು, ಇಂದ್ರ ಮತ್ತು ಪರ್ಜನ್ಯರು ಸುಖ ಉಂಟುಮಾಡಿದರು, ಗೋವುಗಳು ಹಿತಕರ, ಪುಷ್ಟಿದಾಯಕ ಹುಲ್ಲು ತಿಂದು ಯಾಜ್ಞಿಕರಿಗೆ ರಸಪ್ರದ ಹಾಲಿನ ರೂಪದ ಆಹಾರ ಒದಗಿಸುತ್ತವೆ. ಯಜ್ಞಾರ್ಹ ಹಾಲು, ಮೊಸರು, ಆಜ್ಯವೆಂಬ ಗೋಕ್ಷೀರಜನ್ಯ ದ್ರವ್ಯಗಳನ್ನು ಸೋಮನು ತಿಳಿದಿದ್ದಾನೆ. ಪ್ರಜಾಪತಿ ಇಂದ್ರಾದಿ ಸಮಸ್ತ ದೇವತೆಗಳು, ಪಿತೃಗಳು ಇಂತಹ ಗೋವು, ತಮ್ಮ ಕರುಗಳನ್ನು ಯಜ್ಞ ಯಜಮಾನರಿಗೆ ಕೊಡಲಿ ಎಂದು ಪ್ರಾರ್ಥಿಸುತ್ತಾರೆ. ಅನೇಕರು ಗೋಪೂಜೆಗಳನ್ನು ಮಾಡುತ್ತಾರೆ ಮತ್ತನೇಕರು ಕರು ಸಹಿತ ಗೋವುಗಳನ್ನು ದಾನ ಮಾಡುತ್ತಾರೆ. ಇದರಿಂದ ನಮ್ಮ ಪಾಪಗಳು ನಾಶವಾಗಿ ಪುಣ್ಯವು ಲಭಿಸುತ್ತವೆ ಎಂದು ನಂಬಿದ್ದಾರೆ ಋಷಿಗಳು ಹೇಳಿದ್ದಾರೆ. ಗೋಸಂತತಿ ಬೆಳೆದು ಅವು ಸುಖವಾಗಿರಲಿ, ನಮ್ಮನ್ನು ತೃಪ್ತಿಪಡಿಸಲಿ ಎಂದು ಋಷಿಗಳು ಅಪೇಕ್ಷಿಸಿದ್ದಾರೆ.

## ತ್ವಷ್ಟ

ಸರ್ವಜ್ಞ, ಹೋಮಸಂಪಾದಕ, ಮಂತ್ರರೂಪ, ವಾಕ್ಕುಗಳಿಗೆ ಒಡೆಯ, ಜಗನ್ನಿರ್ಮಾಪಕ, ಮನೋವೇಗದವನು, ಎಲ್ಲರಿಗೂ ಮಂಗಳ ಉಂಟುಮಾಡುವವನು, ಧನವಂತ, ಸರ್ವಭೂತಗಳಲ್ಲಿ ಅಗ್ನಿರೂಪಿನಿಂದ ವ್ಯಾಪಿಸಿರುವವನು, ಸರ್ವತ್ರ ಪ್ರಸರಿತ ಕಣ್ಣುಗಳಿಂದ ನೋಡುವವನು, ಬಾಹುಗಳಿಂದ ದ್ಯುಲೋಕವನ್ನು, ಪಾದಗಳಿಂದ ದ್ಯಾವಾ ಪೃಥ್ವಿಗಳನ್ನು ಉತ್ಪನ್ನ ಮಾಡಿದವನು, ಋಷಿಗಳು ಧ್ಯಾನರೂಪದಿಂದ ಅರಿಯಲು ತಿಳಿಸಿದ್ದಾರೆ. ಆತ್ಮಾಭಿಮಾನಿ, ವಿಶೇಷ ಪ್ರಜ್ಞೆಯವನು, ಪಾಲಕ, ಸಪ್ತ ಋಷಿಗಳು ಆದಿತ್ಯನೆಂದೇ ಭಾವಿಸಿದ್ದಾರೆ. ಸಮಸ್ತ ದೇವತೆಗಳಿಗೂ, ಮಾನವರಿಗೂ ಯೋನಿಯು ಉತ್ಪತ್ತಿ ಸ್ಥಾನವಾಗಿಯೇ ಇದೆ.

ಆಶ್ರಮ : ಹವಿಸ್ಸು ಸ್ವೀಕರಿಸುವ ಕಾಲದಲ್ಲಿ ತಾನೂ ವೃದ್ಧಿಹೊಂದಲಿ, ಕರ್ಮಾಸಕ್ತ ಯಾಜ್ಞಿಕರಿಗೆ ಸ್ವರ್ಗ ಪ್ರೇರಕನಾಗಿ ಯಜ್ಞ ರಕ್ಷಿಸಲು ಪ್ರಾರ್ಥಿಸಿದ್ದಾರೆ. ಪ್ರಾಚೀನ ಋಷಿಗಳು ಸ್ತುತಿಸುವಂತೆ ಅಧಿಕವಾಗಿ ಪೂಜಿಸುವಂತೆ ಯಾಜ್ಞಿಕರಿಗೆ ಸೂಚಿಸಿದ್ದಾರೆ. ರಹಸ್ಯ ತತ್ವ ತಿಳಿಯಲು ಭೂತಜಾತಗಳು ವಿಶ್ವಕರ್ಮನನ್ನು ಸಮೀಪಿಸುತ್ತವೆ. ಸಕಲ ದೇವತೆಗಳು ಕೂಡಿಕೊಂಡಿರುವ ವಿಶ್ವಕರ್ಮ ರೂಪದ ಅಂಡವು ಗರ್ಭವನ್ನು ಸೃಷ್ಟಿಪೂರ್ವದಲ್ಲಿ ಧರಿಸಿ ಉದಕ ಸ್ಥಾಪಿತವಾಯಿತು. ಅತ್ಯಂತ ಪ್ರಾಚೀನವಾದ ಆ ಉದಕದಲ್ಲಿ ದ್ಯಾವಾ ಪೃಥ್ವಿಗಳು ವಿಸ್ತಾರವಾಗಿ ತೇಲುತ್ತವೆ ನಂತರ ದಿಗಂತಗಳು ಜ್ಯೋತಿ ಸ್ವರೂಪಗಳು (ಸಂಕಲ್ಪಗಳು) ತೃಪ್ತಿಗೊಂಡವು, ಸಕಲ ಭೂತಗಳು ಸ್ಥಾಪಿತವಾದವು. ಈ ಅದ್ವಿತೀಯ ಬ್ರಹ್ಮಾಂಡವು ಜನ್ಮರಹಿತವಾದ ಮೂಲ ತತ್ವದ ನಾಭಿಯಲ್ಲಿ ಸ್ಥಾಪಿತವಾಗಿದೆ.

ಸ್ತೋತ್ರ : ಕರ್ಮರಹಿತರನ್ನು ಮೋಹ ಪಾಶದಿಂದ ನಿವೃತ್ತರಾಗುವಂತೆ ಮಾಡಲಿ. ತ್ವಷ್ಟನು ಸ್ತ್ರೀ ಪುರುಷರ ಅವಯವಗಳನ್ನು ಉಂಟುಮಾಡಲಿ, ರೇತಸ್ಸು ಸ್ಥಾಪಿಸಲಿ, ಗರ್ಭಕರ್ತ ತ್ವಷ್ಟನನ್ನು ಸಂತಾನಕ್ಕಾಗಿ ಹಾಗೂ 10ನೆಯ ತಿಂಗಳಲ್ಲಿ ಪ್ರಸವು ಸುಖವಾಗಿ ಆಗಲು ಪ್ರಾರ್ಥಿಸುತ್ತಾರೆ. ತತ್ವ ತಿಳಿದುಕೊಂಡು ಧ್ಯಾನಿಸಿ, ಪೂಜಿಸಿ, ಅಪೇಕ್ಷೆಗಳನ್ನು ಪಡೆಯಬಹುದು ಆದರೆ, ಭೋಗಾಸಕ್ತರಾಗಬಾರದು ಎನ್ನುತ್ತಾರೆ ಋಷಿಗಳು.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಪೂಷನ್

ಗೋರಕ್ಷಕ, ಆಶ್ರಯದಾತ, ಮಾರ್ಗರಕ್ಷಕ, ಅನ್ನ ಪ್ರೇರಕ, ಶತ್ರು ಭಯಂಕರ, ದಾರಿದ್ರ್ಯನಾಶಕ, ಗುಣವಂತ, ಕಳ್ಳರನ್ನು ಓಡಿಸುವವನು, ಅನ್ನ ಒದಗಿಸುವವನು, ಜಿಪುಣರನ್ನು ದಾನವಂತರನ್ನಾಗಿ ಮಾಡುವವನು. ನಾಶರಹಿತ ಧನಿ. ಸ್ತುತಿ ಕೇಳುವವನು, ಇಂತಹ ಕೆಲಸವನ್ನು ಹೀಗೆಯೇ ಮಾಡಬೇಕೆಂದು ತಿಳಿಸುವವನು. ಪ್ರಜಾಪತಿಯು ಪೃಥ್ವಿರೂಪ ಸೃಷ್ಟಿಯ ಕಾಲದಲ್ಲಿ ತನ್ನಲ್ಲಿ ಅಡಗಿರುವ ಸಕಲ ಭೂತಜಾತಗಳನ್ನು ಪ್ರಕಾಶಕ್ಕೆ ಬಿಡುತ್ತಾನೆ. ಪೂಷನ್‌ನು ಧನ ಪ್ರವಾಹರೂಪಿ, ಅಜರೂಪಿ ಅಶ್ವವುಳ್ಳವನು, ಸಕಲ ಹೋತೃವಿಗೂ ಮಿತ್ರ. ಪಾಪರಹಿತ, ಆಕರ್ಷಕ ರೂಪಿ, ಅಧಿಕ ಜ್ಞಾನಿ. ಅನೇಕ ಯಜಮಾನರಿಂದ ಸ್ತುತಿತನಾದವನು, ಶತ್ರುನಾಶಕ, ಮಹಾರಥಿ, ಸಜ್ಜನರಕ್ಷಕ, ಇಂದ್ರನ ಸ್ನೇಹಿತ. ಪ್ರವಾಹ ಕಾಲದಲ್ಲಿ ಪೂಷನ್‌ನನು ಇಂದ್ರನೊಡನೆ ಇರುವನು, ರಥಿಕನು ಲಗಾಮು ಎಳೆದುಕೊಳ್ಳುವಂತೆ ಪೂಷನ್‌ನು ಯಜಮಾನನನ್ನು ಆಕರ್ಷಿಸಿ ಬರಮಾಡಿಕೊಳ್ಳುತ್ತಾನೆ. ಇಂದ್ರನು ಸೋಮಾಪೇಕ್ಷಿಯಾದರೆ, ಪೂಷನ್‌ನು ಹವಿಸ್ಸನ್ನು ಅಪೇಕ್ಷಿಸುತ್ತಾನೆ. ಇಂದ್ರನು ಅಶ್ವ ವಾಹನನಾದರೆ, ಪೂಷನ್‌ನು ಅಜ ವಾಹನ. ಇವನು ಮೇಘರಾಜನ ಪುತ್ರ.

ಮಳೆ ಸುರಿಸಿ ಯಾಗ ಭೂಮಿಯನ್ನು ತಂಪಾಗಿ ಇರಿಸುವವನು. ಶತ್ರುಗಳನ್ನು ದಾರಿತಪ್ಪಿಸಿ ನಾಶಮಾಡುತ್ತಾನೆ. ಸುಖಕಾರಿ ಪ್ರಕಾಶಮಾನ ರಕ್ಷಕ, ದೇವತಾತ್ಮ, ವೃಷ್ಟಿಕಾರಕ, ಯಾಜ್ಞಿಕರ ಮನಸ್ಸನ್ನು ಒಂದುಗೂಡಿಸುವವನು. ಆಡಿನ ರೂಪದ ಕುದುರೆವುಳ್ಳವನು, ಸಂಗ್ರಾಮದಲ್ಲಿ ಮುಂಭಾಗದಲ್ಲಿದ್ದು ಶತ್ರುನಾಶ ಮಾಡುತ್ತಾನೆ. ಅನ್ನಪಾಲಕ, ಇಷ್ಟಾರ್ಥಪ್ರದ, ಮಾನವರ ಹಿತಕಾರಿ, ಸಕಲ ಪ್ರಾಣಿಗಳಿಗೂ ರಕ್ಷಕನಾಗಿದ್ದಾನೆ. ಇವನ ರಥವನ್ನು ಆಡುಗಳು ವಹಿಸುತ್ತವೆ. ಸೋಮಪಾನದಿಂದ ಮೆಚ್ಚುಗೆಯನ್ನು ಮುಖದ ಕೂದಲನ್ನು ಅಲ್ಲಾಡಿಸುವುದರ ಮೂಲಕ ವ್ಯಕ್ತಪಡಿಸುತ್ತಾನೆ.

## ಆಶ್ರವಮ

ಯಜ್ಞಭೂಮಿಯ ಸಂಚಾರಮಾರ್ಗ ನಿರ್ವಿಘ್ನವಾಗಿ ಇರಲಿ, ಯಜ್ಞಕರ್ತರಿಂದ ಯಾರೂ ದೂಷಿತರಾಗದಿರಲಿ. ಯಜ್ಞಾಂತದವರೆಗೂ ಪೂಷನ್‌ನು ಭಾಗಿಯಾಗುತ್ತಾನೆ. ಕೋಪರಹಿತನಾಗಿ, ಸುಮನಸ್ಕನಾಗಿ ಯಾಗಕ್ಕೆ ಬರಲು ಪ್ರಾರ್ಥಿಸುತ್ತಾರೆ. ಮೇಧಾವಿ ಯಜಮಾನರು ಯಾಗ ಕರ್ಮಗಳಿಂದ ಭಜಿಸಿ ಪೂಜಿಸುತ್ತಾರೆ. ಕರ್ಮ ರಕ್ಷಣಾರ್ಥ ಪ್ರಾರ್ಥಿಸುತ್ತಾರೆ. ಗೋಮಾತೆ ಹಾಗೂ ಪೂಷನ್‌ನಿಗೆ ನಮಸ್ಕರಿಸಿ ಶತ್ರು ಬಾಧೆಗಳಿಲ್ಲದೆ ಸುಖವಾಗಿ ಹಿಂದಿರುಗುವಂತಾಗಲಿ ಎಂದಿದ್ದಾರೆ. ಪೂಜಾನಿರತರಾಗಿರುತ್ತಾರೆ, ಸ್ತುತಿಸುತ್ತಾರೆ. ಅಜರೂಪಿ ಅಶ್ವಗಳು ಪೂಷನ್‌ನನ್ನು ರಥದಲ್ಲಿ ಕೂರಿಸಿಕೊಂಡು ಬರಲಿ ಎಂದು ಯಾಜ್ಞಿಕರು ಆಹ್ವಾನಿಸುತ್ತಾರೆ. ಯಜಮಾನನ ಸಮೀಪವೇ ಇರಲಿ, ಯಜ್ಞ ನೇತೃವಾಗಿರಲಿ, ಯಾಜ್ಞಿಕರು ನಡೆಸುವ ಯಜ್ಞಗಳು ನಿರ್ವಿಘ್ನವಾಗಿ ಆಗಲಿ ಎಂದು ಪೂಷನ್‌ನನ್ನು ಪ್ರಾರ್ಥಿಸುತ್ತಾರೆ. ಹವಿಸ್ಸನ್ನು ಅರ್ಪಿಸಿ ಪ್ರಾರ್ಥಿಸುತ್ತಾರೆ.

## ಪ್ರಾರ್ಥನೆ

ಕೆಟ್ಟ ಕೆಲಸಗಳಲ್ಲಿ ಸಂತೋಷಪಡುವವರನ್ನು ಪ್ರತ್ಯಕ್ಷ, ಪರೋಕ್ಷ ಚೋರರನ್ನು, ಮೋಸಗಾರರನ್ನು, ಕೇಡು ಬಯಸುವವರನ್ನು ದೂರ ಓಡಿಸಲಿ, ಯಜಮಾನರಿಗೆ, ಯಾಜ್ಞಿಕರಿಗೆ ಸುವರ್ಣ, ವಜ್ರಾ, ಧನ, ಧಾನ್ಯ, ಬ್ರಷ್ಟಾನ್ನ ಭೋಜನ, ರಕ್ಷಣೆಗಳನ್ನು ಕರುಣಿಸಲಿ ಎಂದು ಬೇಡಿದ್ದಾರೆ. ಅಸಂಖ್ಯ ಧನ ಉದಾರವಾಗಿ ದಾನ ಮಾಡಲಿ. ಪೂಷನ್‌ನು ರಥವನ್ನು ರಕ್ಷಿಸಲಿ, ಅನ್ನಗಳ ವೃದ್ಧಿಕಾರಕನಾಗಿರಲಿ, ಆಹ್ವಾನವನ್ನು ಕೇಳಿ ಯಜಮಾನನನ್ನು ರಕ್ಷಿಸಲಿ ಸಂಧ್ಯಾಕಾಲದಲ್ಲಿ ಗೋ ಸಂಪತ್ತು ಸುಖವಾಗಿ ಮನೆ ಸೇರಲಿ ಎಂದು ಪ್ರಾರ್ಥಿಸಿದ್ದಾರೆ. ಅಪಹೃತ ಗೋಸಂಪತ್ತು ಅರಣ್ಯಗಳಲ್ಲಿಗೆ ಮೇಯಲು ಹೋದ ಸಂಚರಿಸಲು ಹೋದ ಎಲ್ಲಾ ಗೋವುಗಳು ತಮ್ಮ ತಮ್ಮ ಜಾಗಗಳಿಗೆ ಬಂದ ಸೇರಲಿ.

ಧನ ಯಾಚಿಸಿದ್ದಾರೆ. ಧನದ ಅನುಗ್ರಹ ಕಲ್ಯಾಣಗಳನ್ನು ಬೇಡುತ್ತಾರೆ. ಸ್ತುತಿಸುವವರನ ಧನವಂತರಾಗುವಂತೆ ಪ್ರಖ್ಯಾತರಾಗುವಂತೆ ಮಾಡಲಿ ಎಂದು ಪ್ರಾರ್ಥಿಸಿದ್ದಾರೆ. ಯಜ್ಞಗಳನ ನಿರ್ವಿಘ್ನವಾಗಿ ನೆರವೇರಿಸಿಕೊಡಲು ಪ್ರಾರ್ಥಿಸಿದ್ದಾರೆ. ಪೂಷನ್‌ನ ಮಿತ್ರತ್ವವನ್ನು ಬಯಸಿದಾ' ಅನ್ನಲಾಭ, ಕಲ್ಯಾಣಗಳಿಗಾಗಿ ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಜ್ಞಾನ ದೇವತೆ

ಬ್ರಹ್ಮಜ್ಞಾನಿಗಳು ತಮ್ಮ ತಮ್ಮ ಶಕ್ತ್ಯಾನುಸಾರ ವೇದದ ಅರ್ಥ ಮಾಡುತ್ತಾರೆ. ಜ್ಞಾನ ವಿರೋಧಿ ಸನ್ನಿವೇಶಗಳಲ್ಲಿ ಜ್ಞಾನರಹಿತರನ್ನು ದೂರ ಮಾಡುತ್ತಾರೆ. ಅಜ್ಞಾನಿಗಳು ಜ್ಞಾನಿಗಳೊಂದಿಗೆ ಪರದಲ್ಲಿರುವ ದೇವತೆಗಳೊಂದಿಗೆ ಸಂಪರ್ಕ ಪ್ರಯೋಜನ ಪಡೆಯರು. ಅವಿದ್ಯಾವಂತ ಅಜ್ಞಾನಿಗಳಾಗಿಯೇ ಇರುತ್ತಾರೆ. ಬ್ರಹ್ಮಜ್ಞಾನ ಪಡೆಯದೇ ಲೌಕಿಕ ಜ್ಞಾನದಿಂದ ಅಶುದ್ಧ ವ್ಯಾಪಾರ, ವ್ಯವಹಾರ ಮಾಡುತ್ತಿರುತ್ತಾರೆ. ಹಿಂದಿನ, ಇಂದಿನ, ಮುಂದಿನ ಯುಗಗಳಲ್ಲಿಯೂ ಪ್ರಕಾಶದಿಂದಿರುವ ಮಾನವರನ್ನು ಆದಿತ್ಯನು ಅನುಗ್ರಹಿಸುತ್ತಾನೆ. ಆದಿತ್ಯ ಉತ್ಪತ್ತಿ ಕ್ರಮವನ್ನು ಋಷಿಗಳು ಪಠಿಸುತ್ತಾರೆ. ಅಮೂರ್ತ ತತ್ವದಿಂದ ಪೂರ್ವಬಾವಿಯಾಗಿ ದೇವಾದಿಗಳು ಉತ್ಪನ್ನರಾದರು.

ಅನಂತರ ನಾಮರೂಪ ದೇವತೆಗಳು ಉತ್ಪನ್ನರಾದರು, ಬ್ರಹಸ್ಪತಿಯು ದೇವತೆಗಳಲ್ಲಿ ಚೈತನ್ಯವನ್ನು ಮೂಡಿಸಿದನು, ಸೃಷ್ಟಿಪ್ರಾರಂಭವಾದ ಕಾಲದಲ್ಲಿ ನಾಮರೂಪರಹಿತ ತತ್ವದಿಂದ ನಾಮರೂಪದಿಂದ ಕೂಡಿದ ಜಗತ್ತು ಉತ್ಪನ್ನವಾಯಿತು. ಅನಂತರ ದಿಕ್ಕುಗಳಾಯಿತು. ಅನಂತರ ಊರ್ಧ್ವಮುಖಿ ಬೆಳೆದ ವೃಕ್ಷಗಳು ಉತ್ಪನ್ನವಾದವು. ಅದಿತಿಯಿಂದ ದಕ್ಷ, ದಕ್ಷನಿಂದ ಪುನಹ ಅದಿತಿ, ದಕ್ಷ ಪುತ್ರಿ ಅದಿತಿಯಿಂದ ಮಿತ್ರ, ಆದಿತ್ಯಾದಿ ಅಷ್ಟ ಪುತ್ರರು ಮಂಗಳಕರ, ಮರಣರಹಿತ ಬುಧನಿಂದ ಇತರ ದೇವತೆಗಳು ಉತ್ಪನ್ನರಾದರು.ವಾಕ್‌ಗಳು ರಹಸ್ಯ ಸ್ಥಾನದಲ್ಲಿ ಸ್ಥಾಪಿತವಾಗಿವೆ ಹಾಗೂ ಪಾದರಹಿತವಾದದ್ದು. ಸರಸ್ವತಿಯು ಪ್ರೀತಿಯಿಂದ ವಾಕ್‌ಅನ್ನು ಪ್ರವೇಶಿಸುತ್ತಾಳೆ. ವಾಕು ಪೂರ್ವಬಾವಿಯಾಗಿ ಇರುತ್ತದೆ. ಶ್ರೇಯಸ್ಕರ ವಾಕ್‌ನಿಂದ ಮಿತ್ರರು ತಮ್ಮ ಮಿತ್ರತ್ವ ಅರಿಯುತ್ತಾರೆ. ಮಿತ್ರರು ಹೀಗೆ ಅರಿಯಬಲ್ಲವರಿಗೆ ಮಾತ್ರ ವಾಗ್ದೇವಿಯ ಸುಂದರ ಸ್ವರೂಪ ಪರಿಚಯ ಆಗುತ್ತದೆ. ಇತರರಿಗಲ್ಲಾ.

ವಿದ್ವಾಂಸರ ಗುಂಪಿನಲ್ಲಿ ವಾಕ್ ತತ್ವ ಪ್ರಕಾಶಿಸುವವನೇ ವಿಶೇಷ ಜ್ಞಾನಿ. ಅಂತಹವರನ್ನು ಯಾರೂ ಲಕ್ಷ್ಯ ಮಾಡರು, ಪ್ರತಿಭಟಿಸರು. ವಾಕ್ಕಿನ ಬೆಲೆ ಅರಿತವನು ವೇದ ಮಂತ್ರಗಳ ಬೆಲೆ ತಿಳಿದವನಾಗುತ್ತಾನೆ. ಜ್ಞಾನ ರಹಿತರು ವಾಕ್‌ಅನ್ನು ಕೇಳಿಯೂ ಅಜ್ಞಾನಯುತರಾಗಿಯೇ ಇರುತ್ತಾರೆ. ಇಂತಹವರ ಮಾತು ಅರ್ಥವಿಲ್ಲದ್ದು, ವ್ಯರ್ಥವಾದದ್ದು. ಕಣ್ಣು, ಕಿವಿ ಮುಂತಾದ ಅವಯವಗಳಿಂದ ಮಾನವರೆಲ್ಲರೂ ಸಮಾನರೇ, ಆದರೆ, ಮಾನಸಿಕ ಶಕ್ತಿಯಿಂದ ಅಲ್ಲ. ★ ಕೆಲವರಿಗೆ ಅತ್ಯಧಿಕ ಗಂಭೀರ ಪ್ರಜ್ಞೆ ಇರುತ್ತದೆ. ★ ಇನ್ನು ಕೆಲವರಿಗೆ ಸ್ವಲ್ಪ ಕಡಿಮೆ ಪ್ರಜ್ಞೆ ಇರುತ್ತದೆ. ★ ಮತ್ತೂ ಕೆಲವರಿಗೆ ಬಹಳ ಕಡಿಮೆ ಇರುತ್ತದೆ. ವೇದದ ಅರ್ಥಗಳು ಧ್ಯಾನಾತ್ಮಕ, ಹೃದಯದಿಂದ ಪರಿಕಲ್ಪಿತವಾದುದು, ಮಾನಸಿಕ ಶಕ್ತಿಯಿಂದ ನಿಷ್ಕರ್ಷಿತವಾದುದು, ಇದರ ಬಗ್ಗೆ ಬ್ರಹ್ಮಜ್ಞಾನಿಗಳಿಗೆ ಏಕಾಭಿಪ್ರಾಯವಿದೆ.

ದೇವತೆಗಳು ತೇಜಸ್ಸಿನಿಂದ ಸರಸ್ಸಿನಲ್ಲಿ ಸ್ಥಿತರಾದರು, ತೀಕ್ಷ್ಣವಾದ ತೇಜಸ್ಸು ಉದ್ಭೂತವಾಯಿತು ಮತ್ತು ಲೋಕವೆಲ್ಲಾ ಆ ತೇಜಸ್ಸಿನಿಂದ ತುಂಬಿತು. ಉಪಯುಕ್ತ ಮೇಘ ತುಂಬಿತು. ಅದಿತಿಯು ಸೂರ್ಯನನ್ನು ಮೇಲಿನ ಲೋಕಕ್ಕೆ ಕಳುಹಿಸಿ ಉಳಿದ ಏಳು ಜನರೊಂದಿಗೆ ಹಿಂದಿನ ಯುಗಕ್ಕೆ ಹೋಗಿ ದೇವತೆಗಳನ್ನು ಸೇರಿಸಿದರು. ದ್ಯುಲೋಕದಿಂದ, ಮೇಘ ಮಧ್ಯದಿಂದ ಆದಿತ್ಯನು ಹೊರಬಂದನು, ಅನಂತರ ಪ್ರಾಣಿಗಳ ಉತ್ಪನ್ನ ಹಾಗೂ ಕ್ಷಯಕ್ಕಾಗಿ ದ್ಯುಲೋಕವನ್ನು ಸ್ಥಾಪಿಸಿದಳು.

## ಆಶ್ರಮ

ಋತ್ವಿಜರು ಸಮಾನ ಜ್ಞಾನಿಗಳು, ಮಿತ್ರರು, ವಿದ್ವತ್ ಸಭೆ ನಡೆಸುವವರು, ಶಕ್ತರು, ಮಿತ್ರರೂಪಿ ಸೋಮದಿಂದ ಸಂತೋಷಗೊಳ್ಳುತ್ತಾರೆ. ಸೋಮನ ಪಾಪರೂಪಿ ಶತ್ರುಗಳನ್ನು ನಾಶಮಾಡುತ್ತಾರೆ. ಯಜ್ಞದಲ್ಲಿ ಹೋತೃವು ಕರ್ಮ ಉಪಯುಕ್ತ ಋಕ್‌ಮಂತ್ರಗಳನ್ನು ಪಠಿಸುತ್ತಾನೆ. ಬ್ರಹ್ಮನು ಪ್ರಾಯಶ್ಚಿತ ಕರ್ಮ ಬೋಧಕ ವಾಕ್‌ಅನ್ನು ಪಠಿಸುತ್ತಾನೆ. ಅಧ್ವರ್ಯುವು ಯಾಗಕ್ಕೆ ಒಂದು ರೂಪವನ್ನು ಕೊಟ್ಟು ಕರ್ಮಗಳನ್ನು ಸುಗಮವಾಗಿ ನೆರವೇರಿಸುತ್ತಾನೆ.

## ಪ್ರಾರ್ಥನೆ

ಜ್ಞಾನ ದೇವತೆಯು ಸಜ್ಜನರ ಸಹವಾಸ, ಸದ್ಬುದ್ಧಿ, ಸತ್‌ವಾಕ್ಯ, ಸುಜ್ಞಾನಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮಃ ||

## ಬ್ರಹ್ಮಣಸ್ಪತಿ

ಬ್ರಹ್ಮಣಸ್ಪತಿ ಇಂದ್ರ ಸೋಮರು ಅಭಿವೃದ್ಧಿಕಾರಕರು. ಇವರ ಅನುಗ್ರಹದಿಂದ ಮನುಷ್ಯರು [illegible]ಗಿ ಬಾಳುವರು. ಯಜಮಾನರನ್ನು ಪಾಪಕರ್ಮ ಮಾಡದಂತೆ ರಕ್ಷಿಸುವವರು. "ಸದಸಸ್ಪತಿ" [illegible] ಕಾಂತಿಯುತರು, ಪರಾಕ್ರಮಿಗಳು. ಬ್ರಹ್ಮಣಸ್ಪತಿ ಇಂದ್ರನಿಗೆ ಪ್ರೀತಿ ಪಾತ್ರನಾದವನು. ಮಹಾ ಧನಾಢ್ಯ. ಶೀಘ್ರ ಫಲದಾಯಕ. ಪುಷ್ಟಿದಾಯಕ, ಸುಂದರ, ಅದ್ಭುತ ಸಾಹಸಿ. ಮನಸ್ಸಿನಲ್ಲಿರುವ ವಿಷಯಗಳಿಗೂ ಮಾಡಬೇಕಾದ ಕರ್ಮಗಳಿಗೂ ಸಂಬಂಧ ಕಲ್ಪಿಸುವವರು ಇವರೇ. ದೇವ ಸಂಬಂಧಿ, ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟವರು. ಜಗನ್ನಿಯಾಮಕ, ಸ್ವರ್ಗದೊಡೆಯ. ಅತ್ಯುತ್ತಮ ಕ್ರಾಂತಿ ಕವಿ, ಅಪರಿಮಿತ ಅನ್ನವುಳ್ಳವರು. ಮಂತ್ರಗಳಿಗೆ ಒಡೆಯರು, ಸಾಮವೇದಕರ್ತರು. ಯಜಮಾನನಿಗೆ ಉಪಕಾರ ಮಾಡುವವರು, ಸ್ತುತಿಸುವವರನ್ನು ಪಾಪದಿಂದ ಪರಿಹರಿಸಿಕೊಡುವವರು. ಇವರು ಆಂಗೀರಸ ವಂಶೋತ್ಪನ್ನರು. ಶತ್ರು ಎಷ್ಟೇ ಪ್ರಬಲನಾಗಿದ್ದರೂ ಅವರನ್ನು ನಾಶಮಾಡುತ್ತಾರೆ. ಮಾರ್ಗದರ್ಶಕರು. ಸಮಸ್ತ ಮಂತ್ರಗಳ ನಿರ್ಮಾತೃ. ದೇವತೆಗಳಿಗೆ ಯಜ್ಞಾರ್ಹ ಭಾಗ ದೊರಕಿಸಿಕೊಡುವವರು. ಪದೇ ಪದೇ ಧನದಾತರು. ಕತ್ತಲನ್ನು ತೇಜಸ್ಸಿನಿಂದ ದೂರ ಮಾಡುವವರು. ಮಂತ್ರ ದ್ವೇಷಿಗಳನ್ನು ದಹಿಸುವವರು. ವೃತ್ರಾಸುರ ವಧೆ ಹಾಗೂ ತಡೆಹಿಡಿದ ಉದಕ ಹರಿಯುವಂತಾಗಲು ಇಂದ್ರನೊಂದಿಗೆ ಇದ್ದವರು. ವಲಲನಿಂದ ಗೋವುಗಳನ್ನು ಬಂಧನದಿಂದ ಬಿಡಿಸಿದವರು. ಆಶ್ರಯಿಸಿದವರನ್ನು ಚೈತನ್ಯಯುಕ್ತರನ್ನಾಗಿ ಮತ್ತು ಬ್ರಹ್ಮವರ್ಚಸ್ವಿಗಳನ್ನಾಗಿ ಮಾಡುತ್ತಾರೆ. ಬ್ರಹ್ಮಣಸ್ಪತಿ ಹಾಗೂ ಸಮಾನ ದೇವತೆಗಳು ಸ್ತುತಿಸುವ ಯಜಮಾನನನ್ನು ಪುತ್ರ ಪೌತ್ರರನ್ನು ರಕ್ಷಿಸುತ್ತಾರೆ. ಯಜಮಾನನಲ್ಲಿದ್ದು ಸದುಪದೇಶವನ್ನು ನೀಡಿ ಸಹಾಯವನ್ನು ಮಾಡುತ್ತಾರೆ. ದೇವ ಪುರೋಹಿತರು, ಬೇಕಾದಾಗ ಒಟ್ಟುಗೂಡಿಸುವವರು ಅಥವಾ ಬೇರೆ ಮಾಡುವವರು. ಭಕ್ತರನ್ನು ಉದ್ಧರಿಸುವವರು, ವೃಷ್ಟಿ ಸುರಿಸುತ್ತಾರೆ. ಆದಿತ್ಯನನ್ನು ಪ್ರಕಾಶಗೊಳಿಸುತ್ತಾರೆ.

ಉದಕವು ಬೇಸಿಗೆಯಲ್ಲಿ ರಶ್ಮಿಗಳಿಂದ ಹೀರಲ್ಪಟ್ಟು ವರ್ಷಾಕಾಲದಲ್ಲಿ ಪುನಃ ವೃಷ್ಟಿ ರೂಪದಲ್ಲಿ ಸುರಿಯುವಂತೆ ಮಾಡುತ್ತಾರೆ. ಸಕಲ ಭೂತ ಜಾತಗಳಿಗೂ ಒಡೆಯರು ಬ್ರಹ್ಮಣಸ್ಪತಿಗಳು. ಇವರಿಂದ ಕೊಡಲ್ಪಟ್ಟ ಅನ್ನ, ಧನವನ್ನು ದೇವತೆಗಳು, ಮಾನವರು ಉಪಭೋಗಿಸುವವರು. ಆಂಗೀರಸರು ಪರ್ವತದ ಮೇಲೆ ಅಗ್ನಿಯನ್ನು ಸ್ಥಾಪಿಸಿದರು. ಬ್ರಹ್ಮಣಸ್ಪತಿಯು ನದಿ ಪ್ರವಾಹವನ್ನು ಹರಿಸುತ್ತಾರೆ. ಗೋಧನ, ಗೃಹ ಅಭಿವೃದ್ಧಿಪಡಿಸುತ್ತಾರೆ. ಶತ್ರುಗಳನ್ನು ಸೋಲಿಸುವ ಶಕ್ತಿಯನ್ನು ನೀಡುತ್ತಾರೆ. ಯಾಗರಹಿತರ ಧನ ಯಾಗಮಾಡುವವರಿಗೆ ಸಿಗುವಂತೆ ಮಾಡುತ್ತಾರೆ. ಬ್ರಹ್ಮಣಸ್ಪತಿಯು ಕರ್ಮಗಳನ್ನು ಮಾಡಿಸಿ ಫಲ ಪಡೆಯುವಂತೆ ಮಾಡುತ್ತಾರೆ. ಪಾಪ ಪರಿಹರಿಸಿ ದಾರಿದ್ರ್ಯ ಕಳೆದು ಶತ್ರುಗಳಿಂದ ರಕ್ಷಿಸಿ ಕಾಪಾಡುವವರು. ಇವರು ಋತ್ವಿಜರ ಸಮ್ಮುಖದಲ್ಲಿ ಇದ್ದು ಶಕ್ತಿ ನೀಡುವ ಶಕ್ತಿಪಾಲಕರು. ಮಿತ್ರಾವರುಣರು ಯಜ್ಞಗಳನ್ನು ರಕ್ಷಿಸುತ್ತಾರೆ. ವಾಗ್ದೇವಿಯು ವಿಘ್ನ ಕಾರ್ಯಗಳನ್ನು, ಬಲಶಾಲಿ ಶತ್ರುಗಳನ್ನು ದೂರ ಓಡಿಸುತ್ತಾಳೆ. ಇಳಾ ದೇವಿಯು ವೀರಪಡೆಯ ಭಯದಿಂದಲೇ ಶತ್ರುಗಳು ಪಲಾಯನ ಮಾಡುತ್ತಾರೆ. ನಾಶರಹಿತ ಅನ್ನವನ್ನು ಅನುಗ್ರಹಿಸುತ್ತಾರೆ. ಇದೇ ವರ್ಷ ಪೃಥ್ವಿಯಿಂದ ದ್ಯುಲೋಕವು ಹವಿರೂಪ ಅನ್ನವನ್ನೂ, ದ್ಯುಲೋಕದಿಂದ ಪೃಥ್ವಿಯು ಉದಕವನ್ನೂ ಪರಸ್ಪರ ಪಡೆಯುತ್ತಾರೆ.

<u>ಆಶ್ರಮ</u> : ಸೋಮಯಾಗವನ್ನು ಮಾಡುತ್ತಾರೆ. ಯಜ್ಞಗಳಲ್ಲಿ ಆಹ್ವಾನಿಸುತ್ತಾರೆ. ಸ್ತುತಿಸುತ್ತಾರೆ. ಹವಿಸ್ಸನ್ನು ನೀಡುತ್ತಾರೆ. ಯಜಮಾನರು ಅವರ ಪುತ್ರರು ಸ್ತೋತ್ರಗಳಿಂದ ಸ್ತುತಿಸಿ ಪ್ರಾರ್ಥಿಸಿ ಆಹ್ವಾನಿಸುತ್ತಾರೆ. ಜ್ಞಾನ ಕರ್ಮಗಳನ್ನು ನೆರವೇರಿಸಿ ಮಂತ್ರ ಪಠನ ಮಾಡುತ್ತಾರೆ. ಇಂದ್ರನನ್ನು ಆಹ್ವಾನಿಸುತ್ತಾರೆ. ಶ್ರದ್ಧಾ ಭಕ್ತಿಗಳಿಂದ, ಚರು ಪುರೋಡಾಶಗಳಿಂದ ಆಜ್ಯಯುಕ್ತ ಹವಿಸ್ಸುಗಳಿಂದ ಬ್ರಹ್ಮಣಸ್ಪತಿಯನ್ನು ಉಪಚರಿಸಿ ಪ್ರಾರ್ಥಿಸುತ್ತಾರೆ.

<u>ಪ್ರಾರ್ಥನೆ</u> : ಬ್ರಹ್ಮಣಸ್ಪತಿಯು ನಿರ್ವಿಘ್ನವಾಗಿ ಕರ್ಮಗಳನ್ನು ನೆರವೇರಿಸಿ ಮೇಧಾಶಕ್ತಿ ಯಶಸ್ಸು ಕೊಡಲಿ. ಪುತ್ರ ಪೌತ್ರರನ್ನು ರಕ್ಷಿಸಲಿ, ಸಂತೋಷಗೊಳಿಸಲಿ, ಉಪದ್ರವಗಳಿಂದ, ಆಪತ್ತುಗಳಿಂದ ರಕ್ಷಿಸಲಿ. ಚೋರರು, ದ್ರೋಹಿಗಳು, ನಾಸ್ತಿಕರು, ಮೋಸಗಾರರನ್ನು ನಾಶಮಾಡಲಿ. ಶ್ರೇಷ್ಠ ಧನಾಧಿಪತಿಗಳಾಗುವಂತೆ ಕಲ್ಯಾಣಗಳಿಗಾಗಿ ಪ್ರಾರ್ಥಿಸಿದ್ದಾರೆ. ವೀರ ಪುತ್ರರು, ಸಂತೋಷ, ದೀರ್ಘಾಯುಸ್ಸುಗಳಿಗಾಗಿ ಪ್ರಾರ್ಥಿಸಿದ್ದಾರೆ.

!! ಓಂ ಶ್ರೀ ಮಹಾಗಣಾಧಿಪತಯೇ ನಮ: !!

# ಬೃಹಸ್ಪತಿ

ಇಂದ್ರ ಬೃಹಸ್ಪತಿಗಳಿಗೆ ಶಸ್ತ್ರಮಂತ್ರ ಪಠಣ ಪ್ರಿಯವಾದುದು. ಪ್ರಸಿದ್ಧ, ಪ್ರಕಾಶಮಾನ, ಹವಿಸ್ವಾತ, ಸತ್ಯಪಾಲಕರು. ಆಂಗೀರಸ ವಂಶೋತ್ಪನ್ನರು. ಸಕಲ ಭೂತ ಜಾತಗಳಿಗೂ ಮೊದಲೇ ಉತ್ಪನ್ನರಾದವರು. ದ್ಯಾವಾ ಪೃಥ್ವಿಗಳೆರಡರಲ್ಲೂ ಸಂಚಾರ ಮಾರ್ಗವುಳ್ಳವರು. ಕತ್ತಲನ್ನು ನಾಶಪಡಿಸಿ ಶತ್ರುಗಳನ್ನು ಜಯಿಸಿ ಅವರ ಪಟ್ಟಣಗಳನ್ನು ನಾಶಮಾಡುತ್ತಾ ದ್ಯಾವಾ ಪೃಥ್ವಿಗಳ ನಡುವೆ ಘರ್ಜಿಸುತ್ತಾರೆ. ಇಷ್ಟಾರ್ಥಪ್ರದರು ಮತ್ತು ಪಾಲಕರು. ಯಾಜ್ಞಿಕರಿಗೆ ಉತ್ತಮ ಸ್ಥಾನ ನೀಡುವವರು. ಶತ್ರುಗಳ ಗೋಭರಿತ ಕೊಟ್ಟಿಗೆ ವಶಪಡಿಸಿಕೊಳ್ಳುತ್ತಾರೆ. ಅಂತರಿಕ್ಷ, ಉದಕ, ಅಧೀನ ಮಾಡಿಕೊಂಡು ಶತ್ರುಗಳನ್ನು ಮಂತ್ರ ಸಹಾಯದಿಂದಲೇ ನಾಶಮಾಡುತ್ತಾರೆ. ಆಂಗೀರಸ್ಸುಗಳ ಮೊಮ್ಮಕ್ಕಳು. ಹಿತಕರರಾದವರು, ಯಜ್ಞಾರ್ಥರಾಗಿ ಇರುವವರು, ಸತ್ಯವಂತರು, ಲೋಕಕಲ್ಯಾಣಾರ್ಥವಾಗಿ ಸ್ತುತಿಸಲ್ಪಡುವವರು. ತಮ್ಮ ತಮ್ಮ ಕರ್ಮಗಳಿಂದಲೇ ತಮ್ಮ ತಮ್ಮ ಸ್ಥಾನಗಳನ್ನು ಪಡೆದಿದ್ದಾರೆ. (ಮರುತ್‌ಗಳು ಇಷ್ಟಾರ್ಥಪ್ರದರು, ಉದಕ ವೃಷ್ಟಿ ಸುರಿಸುವವರು, ಪ್ರಾಮಾಣಿಕ ಮನಸ್ಕರು). ಶತ್ರುಗಳನ್ನು ನಾಶಮಾಡಿ ಜಗತ್ತನ್ನು ಸಂತೋಷಗೊಳಿಸುವವರು, ಏಳು ನದಿಗಳು ಸಮುದ್ರ ಸೇರುವಂತೆ ಮಾಡಿದವರು. ವಲಲನು ನಿರ್ಮಿಸಿದ್ದ ಮೂರು ಬಾಗಿಲುಗಳನ್ನು ಸೀಳಿ ಅವನನ್ನು ನಾಶ ಮಾಡಿದವರು. ಉಷಸ್ ಸೂರ್ಯ ಗೋವುಗಳನ್ನು ಹೊರತಂದು ಅವು ಪ್ರಕಾಶಿಸುವಂತೆ ಮಾಡಿದರು. ದ್ಯುಲೋಕವನ್ನು ಅಶ್ವಿನ್ಯಾದಿ ನಕ್ಷತ್ರಗಳಿಂದ ಅಲಂಕರಿಸಿ ಅದರಲ್ಲಿ ಬೆಳಕು, ರಾತ್ರಿಯಲ್ಲಿ ಕತ್ತಲನ್ನು ಸ್ಥಾಪಿಸಿದ್ದಾರೆ. ಬೃಹಸ್ಪತಿ, ಉಷಸ್ಸು, ಆದಿತ್ಯ, ಅಗ್ನಿಗಳು ತಮ್ಮ ತೇಜಸ್ಸಿನಿಂದ ಕತ್ತಲ್ಲನ್ನು ನಾಶಮಾಡುತ್ತಾರೆ.

ಈ ತೇಜಸ್ಸು ಅಪಹೃತ ಗೋವುಗಳನ್ನು ಬಿಡಿಸಿ ಅವು ಸಿಗುವಂತಾಯಿತು. ಸೂರ್ಯ ಚಂದ್ರರು ಪರ್ಯಾಯ ಕ್ರಮದಲ್ಲಿ ಸಂಚರಿಸುವಂತೆ ಮಾಡುತ್ತಾ ಯಾರೂ ಮಾಡಲಾಗದಂತಹ ಕೆಲಸ ಮಾಡುತ್ತಾರೆ. ಭೂಮಿಯನ್ನು ಉದಕದಿಂದ ತೋಯಿಸುತ್ತಾ ಮೇಘಗಳನ್ನು ಚದುರಿಸುತ್ತಾ ಉಲ್ಕಾಪಾತ ಮಾಡಿಸುತ್ತಾ ಅಂತರಿಕ್ಷದ ಕತ್ತಲನ್ನು ಓಡಿಸುತ್ತಾರೆ. ದೇವತೆಗಳ ಪಾಲಕರು, ಕಷ್ಟಪರಿಹಾರಕರು, ಋಷಿಗಳ ತಂದೆ, ಮಂತ್ರ ಪಾಲಕರು, ಇಷ್ಟಾರ್ಥಪ್ರದರು, ಕೀರ್ತಿವಂತರು, ದ್ಯುಲೋಕ ಪೃಥ್ವಿಲೋಕ ವ್ಯಾಪ್ತ ಶಾಶ್ವತ ಸಂಚಾರಿಗಳು. ವಾಯುವಿನೊಂದಿಗೆ ಸೇರಿ ಜಲಾಭಾವವನ್ನು ನಿವಾರಿಸುತ್ತಾರೆ. ಕರ್ಮಗಳನ್ನು ಸುಗಮಗೊಳಿಸುತ್ತಾರೆ. ತಮ್ಮನ್ನು ವಿರೋಧಿಸುವವರಿಗೆ ಫಲ ನೀಡುವುದಿಲ್ಲ. ವಂಚಕರನ್ನು ಹಿಂಸಿಸಿ ನಾಶಮಾಡುತ್ತಾರೆ.

ಆಶ್ರಮ: ಯಜಮಾನರು ಹಿತಕರ ಸೋಮ ಸಿದ್ಧಪಡಿಸುತ್ತಾರೆ. ಸ್ತುತಿ ವಾಕ್ಯಗಳಿಂದ ಸ್ತುತಿಸುತ್ತಾರೆ. ಹವಿಸ್ಸು ಸ್ವೀಕರಿಸಲು, ಸೋಮಪಾನ ಮಾಡಲು ಇಂದ್ರ ಮತ್ತು ಬ್ರಹಸ್ಪತಿಯವರನ್ನು ಆಹ್ವಾನಿಸುತ್ತಾರೆ. ಯಜ್ಞ ನಿರತರು ಸ್ತುತಿಸುತ್ತಿರುತ್ತಾರೆ. ಇಂದ್ರನು ದಧಿ ಮಿಶ್ರಿತ ಸೋಮಾಪೇಕ್ಷಿ ಯಜ್ಞಕರ್ತರು ಇಂದ್ರನಿಗೆ ಸತ್ಯಾತ್ಮಕ, ಹವಿರೂಪ ಅನ್ನ, ಸ್ತುತಿ ಅರ್ಪಿಸುತ್ತಾರೆ. ಅಗಸ್ತ್ಯರು : ನದಿಗಳು ಏಕಮುಖ ಸಂಚರಿಸಿ ಸಮುದ್ರ ಸೇರುವಂತೆ ಸಕಲ ಸ್ತುತಿಗಳು ಬೃಹಸ್ಪತಿಯನ್ನು ಸೇರಲಿ, ಬೃಹಸ್ಪತಿಯು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ.

ಪ್ರಾರ್ಥನೆ : ನೂರಾರು ಗೋವುಗಳನ್ನು ಸಹಸ್ರಾರು ಅಶ್ವಗಳನ್ನು, ಧನವನ್ನು ಕೊಡಲಿ ಎಂದು ಪ್ರಾರ್ಥಿಸಿದ್ದಾರೆ. ಮಂತ್ರ ಸಹಾಯದಿಂದಲೇ ಶತ್ರುಗಳನ್ನು ನಾಶಪಡಿಸಿ ವೃಷ್ಟಿ ಕರುಣಿಸಲು ಪ್ರಾರ್ಥಿಸಿದ್ದಾರೆ. ಅಂತರಿಕ್ಷಸ್ಥ ಬೃಹಸ್ಪತಿಯನ್ನು ಗೋವುಗಳಿಗಾಗಿ, ಅಶ್ವಗಳಿಗಾಗಿ, ವೀರ ಪುತ್ರರಿಗಾಗಿ, ಅನ್ನಕ್ಕಾಗಿ ಪ್ರಾರ್ಥಿಸಿದ್ದಾರೆ. ಬ್ರಹ್ಮ ದ್ವೇಷಿಗಳನ್ನು, ರಾಕ್ಷಸರನ್ನು ಅವರ ಕುಟುಂಬದವರನ್ನು ನಾಶಮಾಡಲಿ. ತಮ್ಮ ವಿಷಯಗಳಲ್ಲಿ ಕೆಟ್ಟ ಮಾತನಾಡುವವರನ್ನು ಆಯುಧಗಳಿಂದ ಶಿಕ್ಷಿಸಲಿ. ನರಾಂಶ ಅಗ್ನಿಯು ನಮಗೆ ಸುಖವುಂಟುಮಾಡಲಿ, ರಕ್ಷಿಸಲಿ. ನಮ್ಮ ದುರ್ಬುದ್ಧಿಯನ್ನು, ರೋಗಗಳನ್ನು, ಭಯಗಳನ್ನು ನಾಶಮಾಡಲಿ. ಬೃಹಸ್ಪತಿಯು ರಾಜನಿಗೆ ಮಂತ್ರಿಯಂತೆ ಯಜಮಾನನಿಗೆ ವೀರ ಪುತ್ರರು ಅನ್ನ, ಗೋವು, ಬಲ, ದೀರ್ಘಾಯುಸ್ಸು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ರುದ್ರಂ

ಯಜ್ಞ ಪಾಲಕರು, ಜ್ಞಾನಯುಕ್ತರು, ಬಲಶಾಲಿಗಳು, ಇಷ್ಟಾರ್ಥದಾಯಿಗಳು, ಉದಕಗೂಪ ಒಷಧಿದಾತರು. ಸೋಮದೇವನು ಭಕ್ತರಿಂದ ಆವೃತನಾದವನು. ಮಹಾಶಕ್ತ, ಜಟಾಧಾರಿ, ಶತ್ರುನಾಶಕ, ಪ್ರತಿಪಕ್ಷ ಧ್ವಂಸಕ, ಉಜ್ವಲ ಕಾಂತಿಯುತ, ತೇಜಸ್ವಿ, ಯಜ್ಞ ಸಾಧಕ, ವಕ್ರಗತಿಯುಳ್ಳವನು, ಭೂತ, ಭವಿಷ್ಯತ್ ಜ್ಞಾನಿ, ಉತ್ಕಷ್ಟಆಹಾರಯುಕ್ತ, ಪೃಥ್ವಿ ಅಂತರಿಕ್ಷಗಳಿಗೆ, ಜ್ಞಾನ ಕರ್ಮಗಳಿಗೆ ರುದ್ರನೇ ಸ್ವಾಮಿ. (ಮೂಲಪುರುಷ ಮನುವು ರುದ್ರನಿಂದಲೇ ರೋಗಾದ್ಯುಪದ್ರವ ಶಮನ, ಭಯರಾಹಿತ್ಯಗಳನ್ನು ಪಡೆದನು). ರುದ್ರ ಸ್ತೋತ್ರಗಳಿಂದ ಗ್ರಾಮದಲ್ಲೇ ರೋಗಾದಿ ಉಪದ್ರವಗಳು ಇಲ್ಲದಂತಾಗುತ್ತವೆ. ಮನುಷ್ಯ ಪ್ರಾಣಿವರ್ಗ ಎಲ್ಲರೂ ಪುಷ್ಟಿಸುಖವನ್ನು ಹೊಂದುತ್ತಾರೆ.

ರುದ್ರದೇವರು ಇಷ್ಟಾರ್ಥಪ್ರದರು, ಜಗದುದ್ಧಾರಕರು, ಲೋಕ ರಕ್ಷಕರು, ನಿತ್ಯ ತರುಣರು, ಸಜ್ಜನ ಪಾಲಕರು, ಪ್ರಕಾಶಮಾನರು, ಸ್ತುತ್ಯಾರ್ಹರು, ಪೂಜಾರ್ಹರು, ಸರ್ವಜ್ಞರು, ಧನದಾತೃ, ವೈದ್ಯಶ್ರೇಷ್ಟರು, ಕಾಮರೂಪಿ, ಪಾಪನಾಶಕರು, ಶತ್ರುನಾಶಕರು. ರುದ್ರನು ತನ್ನ ರೋಗನಾಶಕ ಕ್ಷಮಿಸುವ ಹಸ್ತದಿಂದ ಅಪರಾಧಿ ಯಜಮಾನನನ್ನು ಕ್ಷಿಪ್ರವಾಗಿ ಕ್ಷಮಿಸುತ್ತಾನೆ. ಪಾಪದ ಕೊನೆಯನ್ನು ಸುರಕ್ಷಿತವಾಗಿ ದಾಟಿಸುತ್ತಾನೆ. ಪಾಪಪರಿಹಾರಕರು. (ರೋದಸಿ ರುದ್ರರ ಪುತ್ರರು ಮರುತ್‌ಗಳು). ಇವರ ಅನುಗ್ರಹದಿಂದ ಮನಸ್ಸು ದೇವತೆಗಳ ಬಗ್ಗೆ ಪ್ರಜ್ಞೆ ಹೊಂದುತ್ತದೆ. ಜೊತೆಯಲ್ಲಿ ಮಿತ್ರಾ ವರುಣರು, ಸೋಮರು ಶ್ರೇಷ್ಟ ಸ್ಥಾನಗಳನ್ನು ಪಡೆದಿದ್ದಾರೆ.

ಆಶ್ರಮ: ರುದ್ರನು ಯಜ್ಞಕರ್ತರಿಗೆ ಅಶ್ವ, ಗೋವು, ಅಜಗಳನ್ನು ಸ್ತ್ರೀಪುರುಷರಿಗೆ ಸುಖಗಳನ್ನು ಕರುಣಿಸುತ್ತಾನೆ. ಯಾಜ್ಞಿಕರು ಮತ್ತು ಯಜಮಾನರು ರುದ್ರನನ್ನು ಹವಿಸ್ಸು, ಸ್ತೋತ್ರ ಮಂತ್ರಗಳಿಂದ ಆಹ್ವಾನಿಸುತ್ತಾರೆ. ರುದ್ರನಿಂದ ಪಡೆದುದನ್ನು ರುದ್ರನಿಗೆ ಅರ್ಪಿಸಿ ಪ್ರಸನ್ನೀಕರಿಸಿಕೊಳ್ಳುತ್ತಾರೆ. ಸಮಾಧಾನಚಿತ್ತನನ್ನಾಗಿಸಲು ಯಜ್ಞ ಯಾಗಗಳನ್ನು ಮಾಡಿ ಸ್ತುತಿಸಿ ಸಮಾಧಾನ ಪಡಿಸುತ್ತಾರೆ. ಉತ್ತಮೋತ್ತಮ ಸ್ತುತಿ ಸ್ತೋತ್ರಗಳನ್ನು ಅರ್ಪಿಸುತ್ತಾರೆ. ವೀರ ಪುತ್ರ ಪೌತ್ರರೊಂದಿಗೆ ರುದ್ರನಿಗೆ ನಮಸ್ಕರಿಸಿ ತಮ್ಮ ಪ್ರಾರ್ಥನೆಗಳನ್ನು ಮನ್ನಿಸಲು ಬೇಡುತ್ತಾರೆ.

ಪ್ರಾರ್ಥನೆ: ★ ಸೋಮನ ವೈರಿಗಳಿಂದ ತೊಂದರೆ ಹಿಂಸೆಗಳಾಗದಿರಲಿ ★ ಅಧಿಕ ಅನ್ನ, ಐಶ್ವರ್ಯ, ಶಕ್ತಿಯನ್ನು ಕರುಣಿಸಲಿ. ★ ರುದ್ರನು ಕ್ರೋಧವನ್ನು ದೂರಮಾಡಲಿ. ★ ಅನ್ನ, ಔಷಧ, ಆರೋಗ್ಯ, ವಾಸಗೃಹ ಅನುಗ್ರಹಿಸಲಿ.

★ ಯಾಜ್ಞಿಕರು, ಯಜಮಾನರು, ಮಕ್ಕಳು, ಮೊಮ್ಮಕ್ಕಳು ಎಲ್ಲರಿಗೂ ಸುಖ ಸೌಖ್ಯ ಉಂಟುಮಾಡಲಿ.

★ ವೃದ್ಧರು, ಯುವಕರು, ಬಾಲಕರು, ಗರ್ಭಿಣಿಯರು, ಪುತ್ರ, ಪೌತ್ರರು, ಇಷ್ಟ ಮಿತ್ರರು, ಅಶ್ವ ವೀರರು ಇವರ ವಧೆ ಆಗುವುದು ಬೇಡ ಎಂದು ಕೇಳಿಕೊಂಡಿದ್ದಾರೆ.

★ ಯಾಜ್ಞಿಕರು ತಮ್ಮ ಬೇಡಿಕೆಗಳನ್ನು ಮಿತ್ರಾವರುಣರು, ಅದಿತಿ, ಸಾಗರ ದೇವತೆ, ಪೃಥ್ವಿ ಅಂತರಿಕ್ಷ ದೇವತೆಗಳು ಅನುಮೋದಿಸಲಿ ಎಂದು ಪ್ರಾರ್ಥಿಸಿದ್ದಾರೆ.

★ ಮನುವು ರೋಗ ಪರಿಹಾರ ಪಡೆದಂತೆ ತಮಗೂ ಪರಿಹರಿಸಲಿ ಎಂದು ಪ್ರಾರ್ಥಿಸಿದ್ದಾರೆ.

★ ಪೂಜೆಯಲ್ಲಿಯ ನ್ಯೂನತೆ, ಅಮಂಗಲ ಸ್ತುತಿಗಳಿಂದ ಕೋಪ ಉಂಟಾಗದಿರಲಿ ಎಂದು ಕೇಳಿಕೊಂಡಿದ್ದಾರೆ.

★ ರುದ್ರನು ಕ್ರೋಧವನ್ನು, ಆಯುಧವನ್ನು, ಧನಸ್ಸುಗಳನ್ನು ಬೇರೆ ಕಡೆ ತಿರುಗಿಸಲಿ. ಕೋಪಿಸದೆ, ಹಿಂಸಿಸದೆ ಯಜಮಾನನ ಯಜ್ಞ ಆಹ್ವಾನ ಸ್ವೀಕರಿಸಲಿ.

★ ಮರುತ್‌ಗಳೊಡಗೂಡಿ ಒಷಧಿ ಕರುಣಿಸಲಿ. ರೋಗಗಳು, ಪಾಪಗಳು ನಾಶವಾಗಿ ಶತ ಸಂವತ್ಸರ ಸುಖಜೀವನ ಅನುಭವಿಸುವಂತಾಗಲಿ. ★ ದೈನ್ಯಯಾಚಕ ಯಜಮಾನನನ್ನು ಅನ್ನದಿಂದ ತೃಪ್ತಿಗೊಳಿಸಿ ಸುಖವಾಗಿ ಇರಿಸಲಿ.

★ ಕತ್ತಲನ್ನು ನಾಶಮಾಡಿ ಸೂರ್ಯದರ್ಶನ ಮಾಡಿಸಿ ನೆಮ್ಮದಿಯನ್ನು ಕರುಣಿಸಲು ರುದ್ರನಲ್ಲಿ ಪ್ರಾರ್ಥಿಸಿದ್ದಾರೆ.

ಮಾಧ್ಯಮಿಕ : ದೇವತೆಗಳು ಮಾಧ್ಯಮಿಕ ದೇವಿಯನ್ನು ಉತ್ಪನ್ನ ಮಾಡಿದರು. ಆಕೆ ಸ್ವ ಪ್ರಭುತ್ವದಿಂದ ಪ್ರಕಾಶಯುತಳಾಗಿ ಸಂತೋಷಕಾರಕಳಾದಳು, ಮಾನವರಿಗೆ ಅರ್ಥವಾಗದ ವಾಕ್ ಉಚ್ಚರಿಸುತ್ತಾ ಭೂಮಿಯಲ್ಲಿ ಕುಳಿತಾಗ ನಾಲ್ಕು ದಿಕ್ಕುಗಳಿಂದಲೂ ಅನ್ನ ಉದಕ ಕರೆದಳು. ಪಶುಗಳು ವಾಗ್ದೇವಿಯನ್ನು ಪ್ರಶಂಸಿಸುತ್ತವೆ. ವಾಗ್ದೇವಿಯು ಧೇನುರೂಪ ಆಶ್ರಯಿಸಿ ಸ್ತುತಿಸಲ್ಪಡುತ್ತಾ ಯಜಮಾನನಲ್ಲಿಗೆ ದಯಮಾಡಿಸಲಿ ಎಂದು ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಋಭುಗಳು – (ಸ್ತೋತ್ರ ವಿಭಾಗ)

ಇಂದ್ರನಿಗೆ ''ಹರಿ'' ಎಂಬ ಎರಡು ಕುದುರೆಗಳನ್ನು ತಂದವರು. ಇಂದ್ರನ ರಥ ಅಶ್ವಿನಿಗಳಿಂದ ತಯಾರಿಸಲ್ಪಟ್ಟದ್ದು. ಒಳ್ಳೆಯ ಹಸುಗಳನ್ನು ಕೊಟ್ಟವರು. ವೃದ್ಧರಾದ ತಂದೆತಾಯಿಗಳಿಗೆ ತಾರುಣ್ಯವನ್ನು ಕೊಟ್ಟವರು. ಯಜ್ಞ ಸಾಧಕಗಳನ್ನು ನಿರ್ಮಾಣ ಮಾಡಿದವರು. ವಸಂತಾದಿ ಋತುಗಳೊಂದಿಗೆ ಸೂರ್ಯ ರಶ್ಮಿ ರೂಪದಲ್ಲಿ ಸೇರಿಕೊಂಡು ಸೂರ್ಯ ವೇಗದ ಸಾಮರ್ಥ್ಯವನ್ನು ಪಡೆದವರು. ಸೋಮರೂಪ ಅನ್ನ ಅಪೇಕ್ಷೆಯಿಂದ ಚಮಸ ಪಾತ್ರೆಯನ್ನು ನಾಲ್ಕು ಭಾಗ ಮಾಡಿದರು. ಮೃತ ಹಸುವಿನ ಬದಲಿಗೆ ಬೇರೆ ನಿರ್ಮಿಸಿ ಚರ್ಮ ಹೊದಿಸಿ ಕರುವಿಗೆ ಸಮಾಧಾನ ತಂದರು. ಅಗ್ನಿಷ್ಟೋಮ ಕರ್ಮಕರ್ತ ಯಜಮಾನರಿಗೆ ಋಭುಗಳು ಅಣ್ಣ ತಮ್ಮಂದಿರು. ದೇವತೆಗಳಿಗೆ ಉತ್ತಮ ರಥ, ಇಂದ್ರನಿಗೆ ಕುದುರೆಗಳನ್ನು ಕೊಟ್ಟವರು. ರಾತ್ರಿಯಲ್ಲಿ ಸೂರ್ಯ ಮಂಡಲದಲ್ಲಿ ವಿಶ್ರಮಿಸಿ ಹಗಲಲ್ಲಿ ಕರ್ತವ್ಯ ನಿರತರಾಗಿ ಇದ್ದು ವಾಯು ಪ್ರೇರಣೆಯಿಂದ ವರ್ಷಿಸಿ ಜಗತ್ತು ವಿವಿಧ ಪ್ರಕಾರಗಳಲ್ಲಿ ಪ್ರಕಾಶಿಸುವಂತೆ ಮಾಡುತ್ತಾರೆ. ಅಗ್ನಿ, ಉದಕ, ಪೃಥ್ವಿಯಲ್ಲೆಲ್ಲ ಇವರ ವ್ಯಾಪ್ತಿ ಇದೆ. ಒಂದಾಗಿದ್ದ ಚಮಸ ಪಾತ್ರೆಯನ್ನು ಎರಡಾಗಿ, ಮೂರಾಗಿ, ನಾಲ್ಕಾಗಿ ಮಾಡುವ ಕುಶಲತೆ ನೋಡಿ ತ್ವಷ್ಟನು ತೃಪ್ತನಾಗಿ ಪ್ರಶಂಸಿಸಿದನು. ತ್ರಿತೀಯ ಸವನದಲ್ಲಿ ದೇವತೆಗಳು ಋಭುಗಳಿಗೆ ಸೋಮಪಾನ, ಹರ್ಷ ಮಾಡಿಸಿದರು. ಇದು ಅವರ (ಋಭುಗಳ) ತಪಸ್ಸಿನ ಫಲ. 1) ಜೇಷ್ಠ ಋಭುವು ಇಂದ್ರನ ಕುಶಲಕರ್ಮಿ. 2) ಮಧ್ಯಮ ವಿಭುವು ವರುಣನಿಗೆ ಬೇಕಾದವನಾದನು. 3)ಮೂರನೆಯವನಾದ ವಾಜನು ದೇವತೆಗಳಿಗೆ ಬೇಕಾದ ಉತ್ತಮ ಕರ್ಮಗಳಿಗೆ ಬೇಕಾದವನು.

ದೇವತೆಗಳಿಗೆ ಕವಚವನ್ನು ನಿರ್ಮಿಸಿದವರು. ದ್ಯಾವಾ ಪೃಥ್ವಿಗಳನ್ನು ಪ್ರತ್ಯೇಕ ಮಾಡಿದರು. ಋಭು, ವಾಜ, ವಿಭು ಇವರು ಪ್ರಜಾಪತಿಯ ಅನುಗ್ರಹದಿಂದ ಇಂದ್ರನೊಂದಿಗೆ ಸೋಮ ಸೇವಿಸಿ ಹರ್ಷಗೊಂಡರು. ಅಹಸ್ಸಿನ ಸಮಾಪ್ತಿ ಕಾಲ ತ್ರಿತೀಯ ಸವನದಲ್ಲಿ ಇವರಿಗಾಗಿ ಸಿದ್ಧವಿರುವ ಸೋಮರಸವು ಇವರನ್ನು ಎದುರುಗೊಳ್ಳುತ್ತದೆ. ಋಭುಗಳು ಅಶ್ವಿನಿ ದೇವತೆಗಳಿಗೆ ತಯಾರಿಸಿಕೊಟ್ಟ ರಥದ ಬಗೆಗೆ ಮೂರು ಉತ್ತಮ ಚಕ್ರಗಳಿವೆ. ಸರ್ವತ್ರ ಸಂಚರಿಸುತ್ತವೆ. ಅದಕ್ಕೆ ಅಶ್ವಗಳಾಗಲಿ, ಅಶ್ವ ಸಂಬಂಧಿಗಳಾಗಲಿ ಇಲ್ಲ. ಇಂತಹ ರಥ ನಿರ್ಮಿಸಿದ ಕಲಾ ಕೌಶಲ್ಯದಿಂದ ಋಭುಗಳು ದೇವತ್ವ ಪಡೆದಿದ್ದಾರೆ. ಸ್ವರ್ಗ ಭೂಮಿಯಲ್ಲಿ ಖ್ಯಾತಿಯ ಜ್ಯೋತಕವಾಗಿದೆ. ಋಭುಗಳು ದೇವತೆಗಳಿಂದ ಅಮೃತತ್ವ ಪಡೆದರು. ಅಗ್ನಿಯು ದೇವತೆಗಳಿಗೆ ಯಜ್ಞಕ್ಕೆ ಆಹ್ವಾನ ನೀಡುವವನು ಹಾಗು ಹವಿಸ್ಸನ್ನು ನೀಡುವವನು. ಆಯಾಯ ದೇವತೆಗಳನ್ನು ಅರ್ಚಿಸುವ ಕ್ರಮ ತಾನಾಗಿಯೇ ಹೊಳೆಯುತ್ತದೆ.

ಇವರು ಮನುಷ್ಯರಾಗಿದ್ದವರು, ಸತತ ಸನ್ಮಾರ್ಗದಲ್ಲಿ ನಡೆದು ಸತ್ಕರ್ಮಗಳನ್ನು ಆಚರಿಸಿ ದೇವತ್ವ ಪಡೆದವರು, ಇವರು ಸುದನ್ವ ಪುತ್ರರು, ಮಾನವರಾಗಿದ್ದು ಅರಣ್ಯದಲ್ಲಿ ತಪಸ್ಸು ಮಾಡಿ ಸವಿತೃವಿನಿಂದ ಸೋಮವನ್ನು ಪಡೆದರು. ಮರಣ ರಹಿತ ದೇವತಾ ಸ್ಥಿತಿಯನ್ನು ಪಡೆದರು. ಸೂರ್ಯ ಸಮಾನ ಪ್ರಕಾಶ, ಪರಿಪಕ್ವಜ್ಞಾನವನ್ನು ಪಡೆದು ಅಂತರಿಕ್ಷವನ್ನು ಸೇರಿದರು. ಹವಿಸ್ಸಿಗೆ ಅರ್ಹರು, ಪ್ರಭಾವಶಾಲಿಗಳು, ರಥ, ಅಶ್ವ ಪೋಷಣೆಗೆ ಧನ ಒದಗಿಸುತ್ತಾರೆ. ಶತ್ರುಗಳನ್ನು ಜಯಿಸಲು ಸಾಮರ್ಥ್ಯ ನೀಡುತ್ತಾರೆ. ಯಾಜ್ಞಿಕರು ಕರ್ಮಾನುಷ್ಠಾನ ಮಾಡಲು, ಜಯ ಸಂಪಾದಿಸಲು, ಗೌರವಾನ್ವಿತರಾಗಲು ಹಾರೈಸುತ್ತಾರೆ. ಇವರು ಶಕ್ತಿ ಪುತ್ರರು. ಅಗ್ನಿಯ ಮೂಲಕ ಇವರ ಪರಿಚಯ ಆಗುತ್ತದೆ. ಸೂರ್ಯ ರಶ್ಮಿರೂಪರು. ಪ್ರಾಣಿಗಳ ಹಿತಕ್ಕಾಗಿ ಸಸ್ಯಗಳನ್ನು ಸೃಷ್ಟಿಸಿದವರು, ತಗ್ಗು ಪ್ರದೇಶದಲ್ಲಿ ನೀರನ್ನು ಹರಿಸಿದವರು. ನಿಂತ ನೀರು ಉಪಯೋಗವಾಗುವಂತೆ ಮಾಡಿದವರು. ಅವಹೇಳನ ಮಾಡಿದವರನ್ನು ಓಡಿಸುತ್ತಾರೆ. ಋಭುಗಳು ಕುಶಲ ಕಾರ್ಯಹಸ್ತರು. ಅಸಾಧಾರಣ ಕರ್ಮಗಳಿಂದ ದೇವತ್ವ ಪಡೆದವರು. ಇಂದ್ರನೂ ಸಹ ಇವರ ಕಾರ್ಯಗಳನ್ನು ಮೆಚ್ಚಿದ್ದಾನೆ. ಋಭುಗಳು ಆದಿತ್ಯನಲ್ಲಿ ಹನ್ನೆರಡು ದಿನ ಸಂತೋಷವಾಗಿದ್ದು ಬಂಜರು ಭೂಮಿಯನ್ನು ಫಲವತ್ತಾಗಿಯೂ, ಬೆಂಗಾಡಿನಲ್ಲಿ ಓಷಧಿ ಬೆಳೆಯುವಂತೆಯೂ, ನದಿಗಳು ಪ್ರವಹಿಸುವಂತೆಯೂ ತಗ್ಗು ಪ್ರದೇಶದಲ್ಲಿ ಹರಿಯುವಂತೆ ಮಾಡಿದರು. ಋಭುಗಳು ಗೋವು, ಅನ್ನ, ನಿವಾಸಯೋಗ್ಯ ಗೃಹ, ಧನಯುಕ್ತರಾಗಿದ್ದಾರೆ. ಪ್ರಜಾಪತಿಯಿಂದ ಸೋಮ ಪಡೆದರು. ಅಗ್ನಿಯಿಂದ ಸೋಮಪಾನಕ್ಕೆ ಅನುಜ್ಞೆ ಪಡೆದರು. ಋಭುಗಳ ರಕ್ಷಣೆಯಲ್ಲಿ, ಸಂಗ್ರಾಮದಲ್ಲಿ ಅಪ್ರತಿಹತರಾಗುತ್ತಾರೆ. ಉತ್ತಮ ವೀರ್ಯ, ಸಂಪತ್ತು ಪಡೆಯುತ್ತಾರೆ. ಪ್ರಶಸ್ತರು, ಅನ್ನವಂತರು, ಧನವಂತರು, ದೇವತಾತ್ಮರು, ಸಂಪತ್ ಯುಕ್ತರು, ಕರ್ಮನೇತ್ರರು, ಸಮರ್ಥರು, ಅಶ್ವಗಳ ಹಿತಕರ ರಥದಲ್ಲಿ ಬರುವವರು. ಭೂಮಿಯನ್ನು ಸರ್ವತ್ರ ವ್ಯಾಪಿಸಿದ್ದಾರೆ. ಸೂರ್ಯರಶ್ಮಿ ರೂಪದಿಂದ ರಸರೂಪ ಜಲವನ್ನು ಆಕರ್ಷಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಇಂದ್ರ, ಮರುತ್, ಆದಿತ್ಯರೊಡನೆ ಹವಿರ್ಭಾಗ ಸ್ವೀಕರಿಸಲು ಋಭುಗಳನ್ನು ಕಾಣ್ವರು ಪ್ರಾರ್ಥಿಸಿದ್ದಾರೆ.

ಸೋಮರಸ ನೀಡುತ್ತಾರೆ, ಶಾಸ್ತ್ರೋಕ್ತ ಸ್ತುತಿಗಳಿಂದ ಸ್ತುತಿಸಿ ತೃಪ್ತಿಪಡಿಸುತ್ತಾರೆ. ಸೋಮಪಾನಕ್ಕೂ ಆಹ್ವಾನಿಸುತ್ತಾರೆ. ಯಜ್ಞ ಕರ್ಮಗಳನ್ನು ನಿರ್ವಹಿಸುತ್ತಾರೆ. ಮೂರು ಸವನಗಳಲ್ಲಿಯೂ ಸೋಮಪಾನಕ್ಕೆ ಬರಲು ಪ್ರಾರ್ಥಿಸಿದ್ದಾರೆ. ಇತರೇ ದೇವತೆಗಳನ್ನು ಇವರ ಜೊತೆಯಲ್ಲಿ ಆಹ್ವಾನಿಸುತ್ತಾರೆ. ಪ್ರಾತ:ಸವನ, ಮಾಧ್ಯಂದಿನ ಸವನ ಇಂದ್ರನಿಗೇ ಇರಲಿ. ತೃತೀಯ ಸವನದಲ್ಲಿ ಋಭುಗಳಿಗೆ ಸೋಮಪಾನ ಇರಲಿ. ಇದಕ್ಕಾಗಿ ಇಂದ್ರನನ್ನು ಅನುಸರಿಸಿ ಯಜಮಾನನನ್ನು ದೂರಮಾಡದೇ ಸೋಮಪಾನಕ್ಕೆ ಬರಲಿ ಎಂದು ಆಹ್ವಾನಿಸಿದ್ದಾರೆ. ಸ್ತುತಿಗಳಿಂದ, ವಿಜ್ಞಾಪನೆಯಿಂದ ಇವರನ್ನು ಸೋಮಪಾನಕ್ಕೆ ಆಹ್ವಾನಿಸಿದ್ದಾರೆ. ತೃತೀಯ ಸವನದ ಸೋಮವು ಋಭುಗಳಿಗೆ ಹರ್ಷಕಾರಕ, ಕರ್ಮಸಿದ್ಧ, ಶಕ್ತಿ ವರ್ಧಕ, ಘೃತ ಮಿಶ್ರಿತ, ಯಜ್ಞಸಾಧಕ ಹಾಗೂ ಉತ್ಸಾಹಕಾರಕವಾದುದು. ದೇವಮಾನವರ ನಡುವೆ ಯಜಮಾನರು ಋಭು ಸಂಘವನ್ನು ಆಹ್ವಾನಿಸಿ ಸೋಮವನ್ನು ಅರ್ಪಿಸುತ್ತಾರೆ. ದೇವ ಮಾರ್ಗದಿಂದ ಋಭುಗಳು ಯಜ್ಞಕ್ಕೆ ಬರಲು ಆಹ್ವಾನಿಸಿದ್ದಾರೆ. ಸೋಮ ಸ್ವೀಕರಿಸಿ ತೃಪ್ತಿ ಹೊಂದಲಿ ಎಂದು ಪ್ರಾರ್ಥಿಸುತ್ತಾರೆ.

ಪ್ರಾರ್ಥನೆಗಳು : ಗೃಹ, ಚಮಸಾದಿಗಳು ಉತ್ತಮ, ಮಧ್ಯಮ, ಅಧಮ ವಿವಿಧ ಏಳೇಳು ಕರ್ಮಗಳು ರತ್ನಾದಿಗಳ ಅನುಗ್ರಹ ಬೇಡಿ ಪಡೆದಿದ್ದಾರೆ. ಯಜ್ಞ ಶತ್ರುಗಳನ್ನು ನಾಶಮಾಡಲಿ. ಯಜ್ಞ ರಕ್ಷಿಸಲಿ. ಅಗ್ನಿಷ್ಟೋಮ ಕರ್ಮಕರ್ತ ಯಜಮಾನರಿಗೆ ಅನ್ನ ಧನ ಕೊಡಲು ಮನಸ್ಸು ಮಾಡಲಿ. ಕರ್ಮ ಮಾಡಲು ಬಲ, ಶ್ರೇಷ್ಠ ಪುತ್ರರು, ಸುಖ ನಿವಾಸ, ಅನ್ನ ಕರುಣಿಸಲು ಪ್ರಾರ್ಥಿಸಿದ್ದಾರೆ. ಇಂದ್ರನೊಡನೆ ಸೋಮಪಾನ ಮಾಡಿ ರಕ್ಷಿಸಲಿ. ಧನ ಒದಗಿಸಲಿ, ಗವಾದಿ ಸಂಪತ್ತು, ಧನ ಸಂಪತ್ತು, ವೃಷ್ಟಿಗಾಗಿ ಬೇಡಿದ್ದಾರೆ. ಮಾನವ ಯಜಮಾನರರನ್ನು ತ್ಯಜಿಸದಿರಲಿ, ಬಾಯಾರಿಕೆ ತಪ್ಪಿಸಲಿ, ನಿಂದಾ ರಹಿತರಾಗಿರುವಂತಾಗಲಿ. ವೀರ ಪುತ್ರರಿಗಾಗಿ ಬೇಡಿದ್ದಾರೆ. ಹರ್ಷಚಿತ್ತರಾಗಿರುವಂತೆ ಅನುಗ್ರಹಿಸಲಿ. ಯೋಗ್ಯತಾನುಸಾರ ಪ್ರತಿಫಲ ಕೊಡಲಿ. ಶತ್ರುಗಳಿಗಿಂತ ಸಂಪತ್ತಿನಲ್ಲಿ ಅಧಿಕರಾಗಿರುವಂತೆ ಮಾಡಲಿ. ಪುತ್ರರು, ಪೌತ್ರರು, ಭೃತ್ಯರನ್ನು ಕೊಡಲಿ, ಅವರು ಶಕ್ತರಾಗಿರಲಿ, ಯಜಮಾನನಿಗೆ ಯುಕ್ತಿ ಮಾರ್ಗ ತೋರಿಸಲಿ. ಸಮಸ್ತ ದಿಕ್ಕುಗಳನ್ನು ದಾಟುವ ಶಕ್ತಿ ನೀಡಲಿ. ಮಾನವ ಶ್ರೇಷ್ಠನನ್ನಾಗಿ ಮಾಡಲಿ. ಉತ್ತಮ ಕರ್ಮಿಯನ್ನಾಗಿ ಮಾಡಲಿ. ಶತ್ರುಗಳನ್ನು ಸೋಲಿಸಿ ಯಜಮಾನನ್ನು ರಕ್ಷಿಸಲಿ. ದೇವತೆಗಳು ಕಲ್ಯಾಣಗಳಿಂದ ರಕ್ಷಿಸಲಿ. ಜೊತೆಯಲ್ಲಿ ಇತರೇ ದೇವತೆಗಳು : ಮಿತ್ರ, ವರುಣ, ಅದಿತಿ, ಸಾಗರ ದೇವತೆ, ಪೃಥ್ವಿ, ದ್ಯುಲೋಕ ದೇವತೆಗಳು, ಅಶ್ವಿನಿ, ಮರುತ್, ಇಂದ್ರ ಇವರುಗಳನ್ನು ಸೋಮಪಾನಕ್ಕೆ ಆಹ್ವಾನಿಸಿದ್ದಾರೆ. (1) ದ್ಯುಲೋಕದಿಂದ ಮರುತ್‌ಗಳು

(2) ಭೂಲೋಕದಿಂದ ಅಗ್ನಿ (3) ಅಂತರಿಕ್ಷದಿಂದ ವಾಯು ಮತ್ತು ವರುಣರು

ಆದಿತ್ಯ, ಸವಿತೃ, ಪರ್ವತ ದೇವತೆ. ಎಲ್ಲರೂ ಪತ್ನಿಯರೊಡಗೂಡಿ ಸಮಾನ ಪ್ರೀತಿಯಿಂದ ಸೋಮಪಾನ ಮಾಡಲಿ. ವಿಭು, ಋಭು, ವಾಜ ಮತ್ತು ಇಂದ್ರ ಶತ್ರುಗಳನ್ನು ನಾಶಪಡಿಸುತ್ತಾರೆ. ಅಗ್ನಿದಾನಾದಿ ಗುಣಯುಕ್ತ ಪ್ರಕಾಶಮಾನ, ಸರ್ವವನ್ನು ಬಲ್ಲವನು, ಸಮಸ್ತ ಧನವನ್ನು ಹೊಂದಿರುವವನು, ಯಾಗಾರ್ಥ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವನು, ಇಂತಹ ಅಗ್ನಿಯನ್ನು ಭೂಮಿಗೆ ಕರೆತಂದು ಹವಿಸ್ಸು ಅರ್ಪಿಸಿ ನಿರ್ದಿಷ್ಟವಾದ ದೇವತೆಗಳಿಗೆ ಸೇರುವಂತೆ ಮಾಡುತ್ತಾನೆ. ದೇವತೆಗಳಿಗೆ ಸಂಭವನೀಯ ಭಯದಿಂದ ರಕ್ಷಣೆ ದೊರೆಯುವಂತೆ ಮಾನವರಿಗೂ ಸಂಭವನೀಯ ಭಯದಿಂದ ರಕ್ಷಣೆ ಒದಗುತ್ತದೆ.

**ಮನ್ಯು (ಕ್ರೋಧಾಭಿಮಾನಿ)** : ಶರೀರರೂಪಿ, ಕರ್ಮದಲ್ಲಿ ಭಾಗವಹಿಸದೇ ಇರುವುದರಿಂದ ಸೋಲು ಉಂಟಾಗುತ್ತದೆ. ಶತ್ರು ಧನವನ್ನು ಯಾಜ್ಞಿಕರಿಗೆ ಹಂಚುತ್ತಾ ಸಹಾಯ ಮಾಡುತ್ತಾನೆ. ದೇವತೆಗಳು ಸಂತೋಷದಿಂದ ಪ್ರಭಾವಯುತರಾಗಿ ಆಯುಧ ಹೊಂದಿ "ಅಗ್ನಿ" ರೂಪ ಧರಿಸಿ ಮರುತ್‌ಗಳೊಡನೆ ಯಜಮಾನಾಭಿಮುಖ ಬರಲು ಪ್ರಾರ್ಥಿಸಿದ್ದಾರೆ. ಶಕ್ತಿವಂತರಿಗೆ ಶಕ್ತಿವಂತ, ತಾನಾಗಿಯೇ ಉತ್ಪನ್ನನಾದವನು, ಸಕಲವನ್ನೂ ನೋಡಬಲ್ಲವನು, ಕ್ರೋಧ ರೂಪಿ, ಶತ್ರುನಾಶಕ, ಉತ್ಕೃಷ್ಟಜ್ಞಾನಿ, ಸಹನಶೀಲ, ವಿಶ್ವಧಾರಕ, ಮಾನವ ಗುಂಪಿನವರೆಲ್ಲಾ (ಮನ್ಯುವನ್ನು) ಸ್ತುತಿಸುತ್ತಾರೆ. ವಜ್ರದಂತೆ ಕಠಿಣ, ಬಾಣದಂತೆ ಹಿಂಸಕ, ಶತ್ರು ಪರಾಭವಗೊಳಿಸುವನು, ಅಗ್ನಿಯಂತೆ ಪ್ರಕಾಶಯುತ, ಸಮರ್ಥ, ಪ್ರಭಾವಯುತ, ನಿಂದಾರಹಿತ.

**ಆಶ್ರಮ** : ಯುದ್ಧಕಾಲದಲ್ಲಿ ಎಲ್ಲರಿಂದಲೂ ಆಹ್ವಾನಿತನಾಗುತ್ತಾನೆ. ಯಾಜ್ಞಿಕರು ಸ್ತೋತ್ರಪಠಿಸುತ್ತಾರೆ, ಪೂಜಿಸುತ್ತಾರೆ. ಎಲ್ಲರಿಗಿಂತಲೂ ಮೊದಲು ಸೋಮರಸವನ್ನು ರಹಸ್ಯವಾಗಿ ಪಾನಮಾಡಲು ಯಜ್ಞ ಯಜಮಾನ ಋಷಿ ಮನ್ಯುವಿಗೆ ಪ್ರಾರ್ಥಿಸುತ್ತಾನೆ

ಪ್ರಾರ್ಥನೆ : ಶತ್ರುಗಳನ್ನು ನಾಶಮಾಡಲು ಮನ್ಯುವು ಬರಲಿ ಎಂದು ಯಜಮಾನನು ಅಪೇಕ್ಷಿಸುತ್ತಾನೆ. ಇಹ ಪರ ಎರಡೂ ವಿಧದ ಧನವನ್ನು ನಮಗೆ ಅನುಗ್ರಹಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಓಷಧಿ

ಸೋಮಾದಿ ನೂರಾರು ಸಂಖ್ಯೆಯ ಓಷಧಿಗಳು ದೇವತಾತ್ಮರು, ಜನರಿಗೆ ಮಾತೃರೂಪರು. ಅಧಿಕ ಪುಷ್ಪ ಫಲಯುಕ್ತರು. ಅನೇಕ ಕೊಂಬೆಗಳುಳ್ಳವರು, ಯುಗ ಯುಗಾಂತರಗಳಿಂದಲೂ ವಸಂತಾದಿ ನಾನಾ ಋತುಗಳಲ್ಲೆಲ್ಲ ಉತ್ಪನ್ನವಾಗುತ್ತಿದೆ. ನಾನಾ ಕರ್ಮಗಳಲ್ಲಿ ಉಪಯೋಗಿಸಲಾಗುತ್ತಿದೆ. ಓಷಧಿಗಳಿಗೆ ರಾಜ "ಸೋಮ". ಪೃಥ್ವಿಯಲ್ಲೆಲ್ಲಾ ವ್ಯಾಪಿಸಿದ್ದಾನೆ. ಬೃಹಸ್ಪತಿಯ ಅನುಗ್ರಹದಿಂದ ಬಹುಸಂಖ್ಯೆಯ ಬಹಳ ಕಾಲ ಇರುವ ಸಮರ್ಥವಾದವುಗಳಾಗಿವೆ. ರೋಗ ನಿವಾರಣೆ ಮಾಡಿ ಸುಖ ನೀಡುತ್ತವೆ. ರೋಗಿಯ ಶರೀರ ಪ್ರವೇಶಿಸಿ ಯಾವ ರೋಗವಿದ್ದರೂ ಸರಿ ಅಂಗ ಅಂಗ ಪಸರಿಸಿ ವ್ಯಾಧಿಯನ್ನು ನಾಶಪಡಿಸುತ್ತವೆ.

ಓಷಧಿಗಳು ಅಶ್ವತ್ಥವೃಕ್ಷ ಮತ್ತು ಮುತುತ್ತಗದ ವೃಕ್ಷಗಳಲ್ಲಿ ವಾಸಸ್ಥರು. ಸೋಮ ರೂಪ ಓಷಧಿಯು ಓಷಧಿಗಳಲ್ಲೆಲ್ಲಾ ಉತ್ತಮ. ಸಕಲ ವೃಕ್ಷಗಳು ತಲೆ ಬಾಗುತ್ತವೆ. ರೋಗ ನಾಶಕವಾದುದು. ಓಷಧಿಗಳು ಒಟ್ಟಾಗಿ ಸೇರಿದಲ್ಲಿ ವಿಪ್ರನು ವೈದ್ಯನೆಂದು ತಿಳಿಯುತ್ತಾರೆ. ಇವು ಇದ್ದಲ್ಲಿ ರಾಕ್ಷಸರು, ರೋಗಗಳು ನಾಶವಾಗುತ್ತವೆ. ಕೈಯಲ್ಲಿ ಹಿಡಿಯುತ್ತಿದ್ದಂತೆಯೇ ರೋಗ ಶಕ್ತಿ ನಾಶವಾಗಿ ಬಲಿಷ್ಟನಾಗುತ್ತಾನೆ. ಓಷಧಿ ಸೋಮರಾಜನಲ್ಲಿ ಹೀಗೆ ಪ್ರಾರ್ಥಿಸಿದ್ದಾರೆ :

1) ದೂರದಲ್ಲಿರುವ, ಹತ್ತಿರದಲ್ಲಿರುವ, ಮರೆಯಾಗಿರುವ ಎಲ್ಲ ಓಷಧಿಗಳು ಒಟ್ಟುಗೂಡಿ ಪರಸ್ಪರ ರೋಗಿಯ ಶರೀರಕ್ಕೆ ಶಕ್ತಿ ಒದಗಿಸಲಿ.

2) ರೋಗರೂಪ ಪಾಪ ನಾಶಮಾಡಲಿ. ಶಾಪಗಳಿಂದ ಬಂದ ಪಾಪಗಳನ್ನು ಪರಿಹರಿಸಲಿ.

3) ವರುಣ ಪಾಷ, ಯಮಪಾಷಗಳಿಂದ ಬಿಡಿಸಲಿ. ವ್ಯಾಧಿಪೀಡಿತರಾದವರನ್ನು ಗುಣಪಡಿಸಿ ಹರ್ಷದಾಯಕರನ್ನಾಗಿ ಮಾಡಲಿ.

4) ಪುತ್ರ, ಪೌತ್ರರು, ಪಶುಗಳು ಸಕಲ ಪ್ರಾಣಿಗಳನ್ನು ರೋಗರಹಿತರನ್ನಾಗಿ ಮಾಡಲಿ.

5) ದ್ಯುಲೋಕ ಓಷಧಿಗಳು ಯಾರನ್ನೂ ಪ್ರವೇಶಿಸುವುವೋ ಅವರಿಗೆ ಖಂಡಿತವಾಗಿ ನಾಶವಿಲ್ಲ.

6) ಪುತ್ರ, ಪೌತ್ರರು, ಪಶುಗಳು, ಸಕಲ ಪ್ರಾಣಿಗಳು, ರೋಗಗಳಿಂದ ಬಿಡುಗಡೆ ಹೊಂದಿ ಸುಖವಾಗಿರುವಂತೆ ಅನುಗ್ರಹಿಸಲಿ ಎಂದು ಬೇಡಿದ್ದಾರೆ.

7) ವೈದ್ಯರಿಗೆ ಹಿಂಸೆ ಆಗುವುದು ಬೇಡ ಅಂತಹವನು ಅವನಿಗೆ ಶರಣಾಗಲಿ. ಅಧಿಕ ಸೇವೆ ಮಾಡುವ ವೈದ್ಯನಿಗೆ ಅನ್ನ, ಅಶ್ವ ವಸ್ತ್ರಗಳು ಅರ್ಪಿತವಾಗಲಿ.

ಋತು ದೇವತೆಗಳು : ಇಂದ್ರನ ಶರೀರ ಎಲ್ಲರಿಂದಲೂ ಆದರಣೀಯ, ಇಂದ್ರ ಕರ್ಮಗಳು ಸ್ತೋತೃಗಳ ಶ್ರೇಯಸ್ಸಿಗೆ ಕಾರಣ. ಯಜಮಾನನ ಋಣ ಭಯವನ್ನು ದೂರ ತಳ್ಳಿ ರಕ್ಷಿಸುತ್ತಾನೆ. ಪೂಜಕರಲ್ಲದವರನ್ನು, ಹಿಂಸಕರನ್ನು, ದ್ರೋಹಿಗಳನ್ನು ರಾಕ್ಷಸರನ್ನು ಕೊಲ್ಲಲು ಆಯುಧ ಹರಿತಮಾಡಿಕೊಳ್ಳುತ್ತಾನೆ. ಋತು ದೇವತೆಗಳು ಉತ್ತಮ ರೂಪದವರು. ಆಹ್ಲಾದಕರರು, ಪಾಪನಾಶಕರು, ಕುರುಡನ ಕಿವಿ ತೆರಸಿ ಶ್ರವಣ ಶಕ್ತಿ ಕೊಡುವವರು. ಇವರ ಸಹಾಯದಿಂದ ಧೇನುಗಳು ಯಜ್ಞ ಪ್ರವೇಶಿಸುವುವು. ಯಜಮಾನನು ಅನ್ನ ಪಡೆಯುವನು. ಇಂದ್ರನ ಜೊತೆಯಲ್ಲಿ (1) ಸೋಮ (2) ಸರಸ್ವತಿ (3) ಮರುತ್‌ಗಳು ಚೈತನ್ಯ ಕೊಡುವವರು. ವೃಷ್ಟಿ ನಿರ್ಮಾತೃ ಇಂದ್ರನ ಶಕ್ತಿ ಅಗೋಚರ. ಉದಕಗಳು ವಿಶ್ರಾಂತಿ ಹೊಂದದೆ ತಮ್ಮ ಮಾರ್ಗಗಳನ್ನು ಹುಡುಕಿಕೊಂಡು ಪ್ರವಹಿಸಿ ಸಮುದ್ರ ಸೇರುತ್ತವೆ. ಭಟರೊಂದಿಗೆ ಶತ್ರುಗಳನ್ನು ಇಂದ್ರನು ನಾಶಮಾಡುತ್ತಾನೆ.

ಆಶ್ರಮ : ಋಷಿಗಳು ಸ್ತುತಿಗಳಿಂದ ಸ್ತುತಿಸುತ್ತಾರೆ. ಯಜಮಾನನ ಬಲವು ಬೆಳೆಯುತ್ತದೆ. ವೃಷ್ಟಿ ಅಪೇಕ್ಷೆಯಿಂದ ಸ್ತುತಿಸಿದ್ದಾರೆ. ವೃಷ್ಟಿ ಸುರಿಯುತ್ತದೆ. ಇಂದ್ರನು ಸ್ತೋತ್ರಗಳಿಂದ ತೃಪ್ತನಾಗುವವನು ಹಾಗೂ ಇಷ್ಟಾರ್ಥಗಳನ್ನು ನೆರವೇರಿಸುವವನು ಆಗಿದ್ದಾನೆ.

ಪ್ರಾರ್ಥನೆ : ಅನ್ನ ತುಂಬಿಕೊಡಲಿ, ಉಷ:ಕಾಲದಲ್ಲಿ ಸ್ತುತಿಸುವ, ಹವಿಸ್ಸು ಅರ್ಪಿಸುವ ಯಜಮಾನನು ಇಂದ್ರನನ್ನು ತಿಳಿಯುವಂತಾಗಲಿ. ಸೋಮ ಹಿಂಡುವವರನ್ನು ಕಾಪಾಡಿ ಅವರನ್ನು ರಕ್ಷಿಸಲಿ, ಇಂದ್ರ ಸೋಮರು ಯಜ್ಞ ವಿಘ್ನ ಕಾರ್ಯವನ್ನು ನಿರ್ಮೂಲ ಮಾಡಲಿ. ಬೃಹಸ್ಪತಿಯು ಕೇಡು ಬಯಸುವವರನ್ನು ಹಿಂಸಿಸಿ ಸಾಯಿಸಲಿ. ಸರಸ್ವತಿ ಮತ್ತು ಮರುತ್ ದೇವತೆಗಳು ಶತ್ರು ದಮನ ಮಾಡಿ ಸ್ತೋತೃಗಳನ್ನು ರಕ್ಷಿಸಲಿ. ಮರುತ್ ದೇವತೆಗಳ ಪೂಜೆಯಿಂದ ಯಜಮಾನನಿಗೆ ಪ್ರಖ್ಯಾತಿ, ಧನ ಸಿಗಲಿ. ಇಂದ್ರನು (1) ಯಜ್ಞ ಯಾಗಾದಿಗಳು ನಡೆಯುವ ಸ್ಥಳದಲ್ಲಿ ಇರುತ್ತಾನೆ (2) ಯುದ್ಧ ಭೂಮಿಯಲ್ಲಿ ಇರುತ್ತಾನೆ (3) ಪೃಥ್ವಿಯಲ್ಲಿ , ಅಂತರಿಕ್ಷದಲ್ಲಿ, ದ್ಯುಲೋಕದಲ್ಲಿ ಇರುತ್ತಾನೆ. ಅಹಿಂಸಕರ ಗುಂಪಿನಲ್ಲಿ, ಪರ್ವತದಲ್ಲಿ, ಗಿಡಮೂಲಿಕೆಗಳಲ್ಲಿ, ನೀರಿನಲ್ಲಿ ಇರುತ್ತಾನೆ. ಇಂದ್ರನು ಆರಾಧಿಸಿದಾಗಲ್ಲೆಲ್ಲ ನಮ್ಮ ಅಭೀಷ್ಟಗಳನ್ನು ಈಡೇರಿಸಲಿ, ಯಜಮಾನರನ್ನು, ಯಾಜ್ಞಿಕರನ್ನು ಹರ್ಷಚಿತ್ತರನ್ನಾಗಿ ಮಾಡಲಿ. ಎಲ್ಲರಿಗೂ ಗೋವುಗಳು, ಧನ, ರಕ್ಷಣೆ, ಹರ್ಷಗಳನ್ನು ಮತ್ತು ಇಷ್ಟಾರ್ಥಗಳನ್ನು ಈಡೇರಿಸಲು ಎಲ್ಲರೂ ಪ್ರಾರ್ಥಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ವಾಚಸ್ಪತಿ

ವಾಚಸ್ಪತಿ ದೇವನಲ್ಲಿ ಯಜಮಾನ ಋಷಿಯು ಈ ಕೆಳಕಂಡಂತೆ ಪ್ರಾರ್ಥಿಸಿದ್ದಾನೆ. ಮಂತ್ರ ದಂಷ್ಟ್ರಾರರು ಶತ್ರುಗಳ ಶಕ್ತಿಯನ್ನು ಧನ ಉತ್ಪಾದನಾ ಶಕ್ತಿಯನ್ನು ತಮ್ಮ ವಶ ಮಾಡಿಕೊಳ್ಳಲು ಬಯಸುತ್ತಾರೆ. ಶತ್ರುಗಳ ಹಿಂಸೆಗೆ ಒಳಗಾಗಲು ಬಯಸುವುದಿಲ್ಲ.

**ಪ್ರಾರ್ಥನೆ :** ವಾಚಸ್ಪತಿ ದೇವನಲ್ಲಿ ಯಾಜ್ಞಿಕರು ತಮ್ಮ ಸಮಾನರಲ್ಲಿ ಶ್ರೇಷ್ಟರೆಂದು ತಮ್ಮನ್ನು ಪರಿಗಣಿಸಬೇಕೆಂದು ಕೇಳಿಕೊಂಡಿದ್ದಾರೆ. ಶತ್ರುಗಳ ಹಿಂಸೆಗೆ ಒಳಗಾಗಲು ಬಯಸುವುದಿಲ್ಲವಾದ್ದರಿಂದ ತಮ್ಮ ಶತ್ರುಗಳನ್ನು ಸಂಹಾರ ಮಾಡಲು ಪ್ರಾರ್ಥಿಸಿದ್ದಾರೆ.

## ವಾಸ್ತೋಷ್ಪತಿ

ಆಹ್ಲಾದಕರ, ಗೃಹಕಾರಕ, ತಂದೆ ಮಕ್ಕಳನ್ನು ಆಧರಿಸಿ ಕಾಪಾಡುವಂತೆ ಆದರದಿಂದ ಯಜಮಾನನನ್ನು ಸಲಹುವನು. ಯಜಮಾನರು ಆರಾಧಕರೆಂದು ತಿಳಿದು ಅವರಿಗೆ ಉತ್ತಮ ವಸತಿದಾಯಕ ಹಾಗೂ ವೃದ್ಧಿಕಾರಕ ಆರೋಗ್ಯದಾತನು ಆಗಿದ್ದಾನೆ. ರಕ್ಷಣೆ, ಧನ ಮತ್ತು ಅಪೇಕ್ಷಿತ್ತಗಳನ್ನು ಹೊಂದಿಸುತ್ತಾನೆ. ಯಜಮಾನ ಮಿತ್ರನಾಗಿ ಸುಖಕಾರಕನಾಗಿ, ರೋಗ ನಾಶಕನಾಗಿ ವಿವಿಧ ರೂಪಗಳನ್ನು ಹೊಂದುತ್ತಾ ಇದ್ದು ಇಂದ್ರನು ವಾಸ್ತೋಷ್ಪತಿಯು ರಕ್ಷಿಸಲಿ.

**ಪ್ರಾರ್ಥನೆ :** ಯಜಮಾನರಿಗೆ ಧನ, ಪುತ್ರ, ಪೌತ್ರಾದಿಗಳನ್ನು ಕರುಣಿಸಿ ಸುಖವಾಗಿಡಲಿ. ಕ್ಷಯರಹಿತರಾಗಿ ಇರುವಂತಾಗಲಿ. ಗೋವು, ಅಶ್ವಗಳನ್ನು ಅನುಗ್ರಹಿಸಲಿ, ಬಂಧುಜನ, ಪರಿವಾರ ಜನ ಎಲ್ಲರೂ ಸದ್ದಿಲ್ಲದೆ ನಿದ್ರೆ ಮಾಡುವಂತಾಗಲಿ. (ಇಂದ್ರನ ನಾಯಿ ಸರಿಮಾ ಪುತ್ರ ಸೌರಮೆಯು ಶ್ವೇತ ವರ್ಣದ್ದು. ಕೆಲವು ಅಂಗಗಳು ಹೊಂಬಣ್ಣದ್ದು. ಅದು ಕಚ್ಚಲು ಬಾಯಿ ತೆರೆದಾಗ ಸೌರಮೆಯ ದಂತಗಳು ಆಯುಧದಂತೆ ಪ್ರಕಾಶಿಸುತ್ತವೆ).

## ವಾಗಂಭ್ರಣಿ

ಆಂಭ್ರಣಿಯು ಋಷಿಯ ಪುತ್ರಿ.ಪರಬ್ರಹ್ಮನಲ್ಲಿ ತಾದಾತ್ಮ ಪಡೆದವಳು. ಪರಬ್ರಹ್ಮ ವಸ್ತುವನ್ನು ಚೆನ್ನಾಗಿ ತಿಳಿದುಕೊಂಡು ಸಾಕ್ಷಾತ್ಕರಿಸಿಕೊಂಡು ಸಮಸ್ತ ಧನ ಸಂಗ್ರಹಿಸಿಕೊಂಡು ಒಡತಿಯಾಗಿದ್ದಾಳೆ. ವಾಗಂಭ್ರಣಿ ಮತ್ತು ಸಮಸ್ತ ದೇವತೆಗಳು ಪರಸ್ಪರಾವಲಂಬನೆಯಿಂದ ಕರ್ತವ್ಯ ನಿರತರಾಗಿದ್ದಾರೆ. ಇಂದ್ರ, ಅಗ್ನಿ, ಮಿತ್ರ, ವರುಣ, ಅಶ್ವಿನಿ ಇವರು ತಮ್ಮ ತಮ್ಮ ಕೆಲಸ ನಿರ್ವಹಣೆಗೆ ಇವಳನ್ನು ಅವಲಂಬಿಸಿದ್ದಾರೆ. ತ್ವಷ್ಟ, ಪೂಷ, ಭಗರನ್ನು ಧರಿಸಿರುವವಳು ವಾಗಂಭ್ರಣಿ, ತ್ರಿಪುರಾಸುರ ಸಂಹಾರ ಕಾಲದಲ್ಲಿ ಶಿವ ಧನಸ್ಸನ್ನು ಬಗ್ಗಿಸಿದವಳು ಇವಳೇ. ಸ್ವರ್ಗ ಲೋಕ, ದೇವತಾತ್ಮ, ಸೋಮಲತೆ ಧರಿಸಿರುವವಳು ಇವಳೇ. ಯಜ್ಞಾರ್ಹ ದೇವತೆಗಳಿಗೆ ಮುಖ್ಯಳು, ಪ್ರಪಂಚದ ನಾನಾ ವಸ್ತುಗಳ ರೂಪದಿಂದ ಪ್ರಾಣಿಗಳಲ್ಲಿ ಚೈತನ್ಯದಂತೆ ಅಂತರ್ಯಾಮಿಯಾಗಿ ಸಮಸ್ತ ಜಗತ್ತನ್ನು ಆವರಿಸಿದ್ದಾಳೆ. ಸರ್ವ ಕಾಲದಲ್ಲೂ, ಸರ್ವ ಪ್ರದೇಶದಲ್ಲೂ ಸ್ವರ್ಗ, ಆಕಾಶ, ಭೂಮಿಯೊಳಗೆ, ಹೊರಗೆ ವ್ಯಾಪಿಸಿದ್ದಾಳೆ. ಸೃಷ್ಟಿಗೆ ಕಾರಣ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಇದ್ದು ನಾನಾ ಆಕಾರಗಳಿಂದ ಗೋಚರಿಸುತ್ತಾ ಸ್ವರ್ಗವನ್ನು ಸೃಷ್ಟಿಸುತ್ತಾಳೆ. ಯಾವ ನಿಯಮಕ್ಕೂ ಒಳಗಾಗದೇ ತಾನು ಸ್ಥಿರವಾಗಿದ್ದು ಸ್ವಪ್ರೇರಣೆಯಿಂದ ಸಮಸ್ತ ಲೋಕದ ಪ್ರಾಣಿಗಳನ್ನು ಉತ್ಪನ್ನಮಾಡುವವಳಾಗಿದ್ದಾಳೆ. ಅಂತರ್ಯಾಮಿಯಾದ ಈಕೆಯ ಮೂಲಕವೇ ಮಾನವರ ಸಮಸ್ತ ವ್ಯಾಪಾರ, ಸಕಲ ಕರ್ಮಗಳು ನಡೆಯುತ್ತವೆ.

ತಾನು ರಕ್ಷಿಸಲು ಬಯಸಿದವರನ್ನು ಸರ್ವಾಧಿಕನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಜ್ಞಾನಿಯನ್ನಾಗಿ ಮಾಡಬಲ್ಲಳು. ಯುದ್ಧ ಸಮಯದಲ್ಲಿ ಧನದಾತಳು.

**ಪ್ರಾಥನೆ :** ವಾಗಂಭ್ರಣಿಯು ತಮ್ಮನ್ನು ಎಲ್ಲ ರೀತಿಯಿಂದಲೂ ರಕ್ಷಿಸಿ ಕಾಪಾಡಲು ಋಷಿಗಳು ಪ್ರಾರ್ಥಿಸಿದ್ದಾರೆ.

## ವಾಗ್ದೇವಿ

ಧನ ನಿರ್ಮಾಪಕಳು, ಬ್ರಹ್ಮನಿಂದ ಉತ್ಪನ್ನಳಾದವಳು, ಸತ್ಯ ಸ್ವರೂಪಳು, ಆನಂತರ ಸಕಲ ವಿಶ್ವವು ಉತ್ಪನ್ನವಾಯಿತು. ಸ್ಥಾನ ಆದಿತ್ಯ ಮಂಡಲ. ಸರ್ವವ್ಯಾಪಕಳು, ವಾಕ್‌ಶಕ್ತಿ, ಪ್ರಾಣಶಕ್ತಿ ಇರುವವರೆಗೂ ಸಹಕರಿಸುತ್ತದೆ. ವಾಕ್‌ಶಕ್ತಿಯ ತತ್ವವು ಜಗತ್‌ಕಾರಣ, ಬ್ರಹ್ಮದಷ್ಟೇ ಪ್ರಮಾಣವಾದದ್ದಾಗಿದೆ. ವಾಗ್ದೇವಿಯು ದೇವಪತ್ನಿಯರ ಒಡಗೂಡಿದವಳು, ಅನೇಕ ವಿಧ ಅನ್ನವಂತಳು, ಧನಪ್ರದಳು, ನಾಶರಹಿತಳು, ಜ್ಞಾನಾರ್ಮಿಳದೇವಿ, ಮಹಾತ್ಮಳು, ಸರ್ವ ವ್ಯಾಪಕಳು. ಮಾನವರಿಗೆ ಅರ್ಥವಾಗದ ವಾಕ್ ಉಚ್ಚರಿಸುತ್ತಾ ನಾಲ್ಕು ದಿಕ್ಕುಗಳಿಂದ ಅನ್ನ ಉದಕಗಳನ್ನು ಕರೆಯುತ್ತಾಳೆ. ವಾಗ್ದೇವಿಯು ಧೇನು ರೂಪ ಆಶ್ರಯಿಸಿದ್ದಾಳೆ.

**ಆಶ್ರಮ :** ವಾಗ್ದೇವಿಯನ್ನು ಪ್ರಶಂಸಿಸುತ್ತಾರೆ, ಸ್ತುತಿಸುತ್ತಾರೆ, ಹವಿಸ್ಸು ಅರ್ಪಿಸುತ್ತಾರೆ, ಅಗ್ನಿಯು ಅಭಿಮಾನದಿಂದ ಕರೆತರುತ್ತಾನೆ. ಸೋಮಪಾನ ಮಾಡಲು ಋಷಿಗಳು ಪ್ರಾರ್ಥಿಸುತ್ತಾರೆ.

**ಪ್ರಾಥನೆ :** ವಾಗ್ದೇವಿ ಧೇನುರೂಪ ಧರಿಸಿ ಸ್ತುತಿಸಲ್ಪಡುತ್ತಾ ಯಜಮಾನನಲ್ಲಿಗೆ ದಯಮಾಡಿಸಲಿ, ಅನುಗ್ರಹಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ದಧಿಕ್ರಾ ದೇವತೆ

ದಧಿಕ್ರಾ ದೇವತನು ಅಶ್ವರೂಪಿ, ನೇರ ಸಂಚಾರಿ, ಪ್ರಶಂಸಿತ, ಶೀಘ್ರಗಾಮಿ, ಪ್ರಧಾನ ನಾಯಕ, ಶತ್ರು ಹಿಂಸಕ, ಭಯಂಕರ, ಸರ್ವ ವ್ಯಾಪಕ, ಶತ್ರು ಶಿರ ಕತ್ತರಿಸುವವನು, ಆರ್ಭಟಕ್ಕೆ ಶತ್ರುಗಳು ಭಯಭೀತರಾಗುತ್ತಾರೆ. ದಧಿಕ್ರಾ ದೇವನಿಂದಲೇ ದ್ಯಾವಾ ಪೃಥ್ವಿಗಳು ಶತ್ರುಗಳನ್ನು ಎದುರಿಸುವ ಶಕ್ತಿ ಪಡೆದರು. ಅದೇ ರೂಪಿನ (ಅಶ್ವರೂಪ) ಸಾವಿರಾರು ಅನುಚರರು ಇರುತ್ತಾರೆ. ರಕ್ಷಕ, ಮಹಾತ್ಮ, ವೇಗವಂತ, ಕಾಮವರುಷಕ, ಮಾನವ ಪ್ರೇರಿತ, ಪಂಚ ಜನರನ್ನು ಆಯಾಯ ಪ್ರದೇಶದಲ್ಲಿ ವಿಸ್ತರಿಸಿ ಹರಡುತ್ತಾನೆ. ಮಿತ್ರಾ ವರುಣರು ಮಾನವ ಉಪಕಾರಕ್ಕಾಗಿ ದಧಿಕ್ರಾ ದೇವನನ್ನು ಒದಗಿಸಿದರು. ಅವರಿಗೆ ಸಮಾನ ಪ್ರೀತಿಯಿಂದ ಇರುವವನು, ದಧಿಕ್ರಾ ದೇವನು ಬಲಸಾಧಕ, ಅಗ್ರಗಾಮಿ ಸ್ತುತಿಕರ್ತರೊಂದಿಗೆ ಇರುತ್ತಾನೆ. ಸಪ್ಪಳ ಮಾಡುವವನು, ಗೋವುಗಳ ಧಾರಕ, ಸಕಲ ಮಾರ್ಗಗಳಲ್ಲೂ ಶಕ್ತಿಯಿಂದ ಸಂಚರಿಸುವ ಅಶ್ವರೂಪಿ ಅಂತರಿಕ್ಷ ಸಂಚಾರಿ.

ಆಶ್ರಮ : ಪ್ರಾರ್ಥನೆಗೆ ಪ್ರತಿಫಲವಾಗಿ ಇಷ್ಟಾರ್ಥ ಫಲ ಅನುಭವಿಸುತ್ತಾನೆ. ಯುದ್ಧಕ್ಕೆ, ಯಜ್ಞಕ್ಕೆ ಆಹ್ವಾನಿಸಿದಂತೆಯೇ ದಧಿಕ್ರಾ ದೇವನನ್ನು ಆಹ್ವಾನಿಸುತ್ತಾರೆ. ಹುಲ್ಲಿನ ಆಹಾರವನ್ನು ಕೊಟ್ಟು ಶೀಘ್ರ ಸ್ತುತಿ ಮಾಡುತ್ತಾರೆ. ದಧಿಕ್ರಾನೊಂದಿಗೆ ಅಗ್ನಿ, ಮಿತ್ರ, ವರುಣರನ್ನು ಆಹ್ವಾನಿಸುತ್ತಾರೆ. ಬಲನಿಮಿತ್ತ ಆಶ್ರಯಿಸುತ್ತಾರೆ. ಉಷ:ಕಾಲದಲ್ಲಿ ದಧಿಕ್ರಾ ದೇವನನ್ನು ಸ್ತುತಿಸುತ್ತಾರೆ, ಕರ್ಮಗಳನ್ನು ಮಾಡುತ್ತಾರೆ. ಸ್ವೀಕರಿಸಲು ಪ್ರಾರ್ಥಿಸುತ್ತಾರೆ.

ಪ್ರಾರ್ಥನೆ: ಅಶ್ವಗಳನ್ನು ಅನುಗ್ರಹಿಸಲು, ಉಷಸ್ ಪ್ರೇರಿಸಲಿ, ಹವಿಸ್ಸು ಅಪೇಕ್ಷಿಸಲಿ ಮತ್ತು ಸ್ವೀಕರಿಸಲಿ, ಪಾಪ ನಾಶ ಮಾಡಲಿ, ಉತ್ಕೃಷ್ಟ ಫಲ ನೀಡಲಿ, ಆಯಸ್ಸನ್ನು ವೃದ್ಧಿಸಲಿ, ಅನ್ನ, ಬಲ ಕರುಣಿಸಲಿ. ಪುತ್ರರನ್ನು ಅನುಗ್ರಹಿಸಲಿ.

1) ವಾಯುವು ಅಂತರಿಕ್ಷ ಸಂಚಾರಿ (2) ಅಗ್ನಿಯು ಯಜ್ಞ ಹೋತೃ (3) ಗೃಹಾಗ್ನಿಯು ಗೃಹದ ಪೂಜ್ಯ ಅತಿಥಿ ಹಾಗೂ ಚೈತನ್ಯ ಸ್ವರೂಪಿ. (4) ಆದಿತ್ಯ ಮಂಡಲಾವರ್ತಿ ಆದಿತ್ಯನು (ಪರಬ್ರಹ್ಮನ ವಿಭೂತಿ ವಿಶೇಷ ಪ್ರಕಟಿಸುವವನು) ಉದಕ ಉತ್ಪನ್ನ, ರಶ್ಮಿ ಸಂಚಾರಿ, ಉದಯಾದ್ರಿ ಉತ್ಪನ್ನ.

## ವೇನ ದೇವ

ಆಶ್ರಮ ಮತ್ತು ಪ್ರಾರ್ಥನೆ : ಸೂರ್ಯನಿಗೂ, ಮೇಘಗಳಿಗೂ ಮಧ್ಯದಲ್ಲಿ ವೇನನಿದ್ದಾನೆ. ಅಂತರಿಕ್ಷ ಸಂಚಾರಿ, ಸುವರ್ಣ ರೆಕ್ಕೆಗಳುಳ್ಳವನು, ವರುಣನ ದೂತ, ಉದಕಗಳಿಗೆ ಆಧಾರಭೂತ, ವಿಚಿತ್ರ ಆಯುಧಯುತ, ಸೂರ್ಯ ತೇಜಸ್ಸಿನಂತೆ ಪ್ರಕಾಶಮಾನಿ, ಸೂರ್ಯನು ಎದುರಾದಾಗ ವೇನ ದೇವನು ರಶ್ಮಿಗಳಿಂದ ಉದಕ ಉತ್ಪತ್ತಿಮಾಡುತ್ತಾನೆ. ಸೂರ್ಯ ರಶ್ಮಿಗಳು ಮೇಘ ಗರ್ಭಪ್ರಾಯ, ಉದಕಗಳನ್ನು ವೃಷ್ಟಿ ರೂಪದಲ್ಲಿ ಭೂಮಿಗೆ ಹರಡುತ್ತಾ ಆಕಾಶವು ಸ್ವಚ್ಛವಾಗಿ ಇರುವಂತೆ ಮಾಡುತ್ತವೆ. ಪ್ರಿಯಕರ ವೇನ ದೇವನು ಪ್ರಿಯ ಮಿಂಚು ಎಂಬ ಸ್ತ್ರೀಯೊಂದಿಗೆ ಅಂತರಿಕ್ಷದಲ್ಲಿ ಕ್ರೀಡಿಸುತ್ತಾನೆ. ಮೇಘಗಳಿಗೆ ಸಮಾನರು ಮರುತ್‌ಗಳು. ತಮ್ಮ ಶಬ್ದದಿಂದ ಚಲಿಸುವ ಮೇಘಗಳು ಗುಡುಗು ಮತ್ತು ಮಧುರವಾದ ಉದಕಗಳಿಂದ ವೇನನನ್ನು ಸ್ತುತಿಸುತ್ತವೆ. ಮೇಧಾವಿ ಜನರು ವೇನನನ್ನು ಸ್ತುತಿಸುತ್ತಾ ಮರಣಕ್ಕೆ ಈಡಾಗದಂತೆ ಶರೀರ ಪೋಷಣೆಗೆ ಅವಶ್ಯಕವೆನಿಸಿದ ಈ ಉದಕಗಳನ್ನು ಕರುಣಿಸುವಂತೆ ಪ್ರಾರ್ಥಿಸುತ್ತಾರೆ.

## ರಾತ್ರಿ ಸ್ತವ (ದೇವತೆ)

ಪ್ರಾರ್ಥನೆ : ರಾತ್ರಿ ದೇವಿಯು ಸೂರ್ಯಪುತ್ರಿ, ಶೋಭಾಯಮಾನಳು, ಮರಣ ರಹಿತಳು, ಅಂತರಿಕ್ಷವನ್ನೆಲ್ಲಾ ಕತ್ತಲಿನಿಂದ ತುಂಬಿದ್ದಾಳೆ. ಗಿಡ ವೃಕ್ಷಗಳೆಲ್ಲಾ ಕತ್ತಲೆಯಲಲ್ಲಿವೆ. ರಾತ್ರಿ ದೇವಿಯು ಪ್ರಕಾಶಮಾನ ನಕ್ಷತ್ರ ಕಣ್ಣುಗಳಿಂದ ನೋಡುತ್ತಾಳೆ. ಗ್ರಹ ನಕ್ಷತ್ರಾದಿ ತೇಜಸ್ಸಿನಿಂದ ಹಿಂಸಿಸುತ್ತಾಳೆ. ರಾತ್ರಿ ದೇವಿಯು ತನ್ನ ಸಹೋದರಿ ಉಷೆಯು ಬರುವುದಕ್ಕೆ ಅವಕಾಶ ಮಾಡಿಕೊಡುತ್ತಾಳೆ. ರಾತ್ರಿಯಲ್ಲಿ ಜನರು ತಮ್ಮ ತಮ್ಮ ಮನೆ ಸೇರುತ್ತಾರೆ. ಅಶ್ವಾದಿಗಳು ಕೊಟ್ಟಿಗೆಯನ್ನು ಸೇರುತ್ತವೆ. ಇತರ ಪಕ್ಷಿಗಳು ತಮ್ಮ ತಮ್ಮ ಗೂಡುಗಳನ್ನು ಸೇರುತ್ತವೆ.

ಆಶ್ರಮ : ಶತ್ರುಗಳನ್ನು ಜಯಿಸಲು ಇಚ್ಛಿಸುವ ಯಾಜ್ಞಿಕನ ಸ್ತೋತ್ರಗಳನ್ನು ಕೇಳಲಿ. ಪ್ರಿಯಕರ ಹವಿಸ್ಸು ಸೇವಿಸಲಿ, ರಾತ್ರಿ ದೇವಿಯು ಯಾಜ್ಞಿಕರಿಗೆ ಪ್ರಸನ್ನಳಾಗಲಿ. ರಾತ್ರಿ ಸುಖವಾಗಿ ಕಳೆಯುವಂತಾಗಲಿ, ನಿದ್ರಿಸುವ ಸಮಯದಲ್ಲಿ ಹಿಂಸಕ ಮೃಗಗಳು, ಪ್ರಾಣಿಗಳು, ಕಳ್ಳರು ಬಳಿಗೆ ಬಾರದಿರಲಿ, ಗಾಢಾಂಧಕಾರವನ್ನು ಉಷಾ ದೇವಿಯು ಕಳೆಯಲಿ.

## ಸುಪರ್ಣ

ಸುಪರ್ಣ ದೇವನು ತ್ವಷ್ಟ ಪುತ್ರ, ಅರಿಷ್ಟನೇಮಿಯ ತಂದೆ, ದೇವತೆಗಳಿಂದ ಸೋಮಹರಣಕ್ಕೆ ಪ್ರಾರ್ಥಿತನಾದವನು, ಪ್ರಸಿದ್ಧ ಶಕ್ತಿಯುತ, ತಡೆ ಇಲ್ಲದೆ ಶೀಘ್ರ ಗಮನ ಹೊಂದಿದವನು, ಶತ್ರುಗಳನ್ನು ಜಯಿಸುವವನು, ಇಂದ್ರನಂತೆಯೇ ಧನದಾತ, ಪಂಚವಿಧ ಜನತೆಗೆ ಉಪಯೋಗವಾಗಲು ಭೂಮಿಗೆ ಉದಕ ಹರಿಸುವವನು, ಸುಪರ್ಣನು ಅನುಗ್ರಹಿಸಿದ ಧನವನ್ನು / ದಾನವನ್ನು ಯಾರೂ ತಡೆಯಲಾರರು. ಪ್ರಾರ್ಥನೆ : ದು:ಖ:ದಿಂದ ದಾಟಿಸಲಿ, ಧನ ದಾನ ಮಾಡಲಿ, ಯಾಜ್ಞಿಕರಲ್ಲಿಗೆ ಬರುವಾಗ ದ್ಯಾವಾಪೃಥ್ವಿಗಳು ರಕ್ಷಿಸಲಿ, ಕ್ಷೇಮಾಭ್ಯುದಯ ಆಗುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತಾರೆ. ಒಮ್ಮೆ ಗರುತ್ಮಂತನು ವನೋವೇಗದಲ್ಲಿ ಸುವರ್ಣ ನಿರ್ಮಿತ ಪಟ್ಟಣಕ್ಕೆ ಹೋಗಿ ಸೋಮ ತಂದನು, ಯಜಮಾನರು ಸೋಮವನ್ನು ಭೋಗಾರ್ಥ ಮಾಡಿದರು. ಉಳಿದ ದೇವತೆಗಳಿಗೆ ಮುಂಚೆಯೇ ಇಂದ್ರನ ಜಠರ ಸೇರಲೆಂದು ಹಿಡಿದಿದ್ದರು.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಹಿರಣ್ಯಗರ್ಭ

ಪ್ರಪಂಚದ ಸೃಷ್ಟಿಗೆ ಪೂರ್ವದಲ್ಲಿ ಇದ್ದವ ಇವನೊಬ್ಬನೇ. ತನ್ನ ಆತ್ಮಶಕ್ತಿ ಅಂಶಗಳಿಂದ ಬ್ರಹ್ಮಾಂಡ ಭೂಮಂಡಲವನ್ನೆಲ್ಲಾ ಉತ್ಪಾದಿಸಿದನು. ಸ್ವರ್ಗಲೋಕ, ಭೂಲೋಕ, ಅಂತರಿಕ್ಷ, ಮರಣರಹಿತ ದೇವತೆಗಳು ಮರಣವಂತ ಪ್ರಾಣಿಗಳು ಜೀವಂತ ದ್ವಿಪಾದ, ಚತುಷ್ಪಾದಾದಿ ಎಲ್ಲಕ್ಕೂ ಅದ್ವಿತೀಯ ಪ್ರಭು.

ಎತ್ತರದ ಹಿಮವಂತ ಪರ್ವತಗಳು ಹರಿಯುವ ನದಿಗಳು, ಸಮುದ್ರ, ಅಷ್ಟ ದಿಕ್ಪಾಲಕರು ಇವನ ಐಶ್ವರ್ಯ ಭಾಗ್ಯಗಳು. ಪಂಚ ಮಹಾಭೂತಗಳನ್ನು ಸೃಷ್ಟಿಸಿ ಸ್ವರ್ಗವು ಕೆಳಗೆ ಬೀಳದಂತೆ ಭೂಮಿಯು ಅಲುಗಾಡದಂತೆ ಆಕಾಶವು ವಿಶೇಷ ಗಮನವುಳ್ಳದ್ದಾಗಿರುವಂತೆ ಸೂರ್ಯ ಮೋಡಗಳು ಆಕಾಶದಲ್ಲಿ ಸಂಚರಿಸುವಂತೆ ಮಾಡಿದನು. ಲೋಕ ರಕ್ಷಣಾರ್ಥ ದ್ಯಾವಾ ಪೃಥ್ವಿಗಳನ್ನು ಸ್ಥಾಪಿಸಿ ಸೂರ್ಯ, ಉದಕ ಪ್ರಕಾಶಿಸುವಂತೆ ಮಾಡಿದನು. ಅಗ್ನಿಯಾದಿ ಪಂಚಭೂತಗಳು, ದೇವತೆಗಳು, ಉದಕಗಳು, ''ಯಜ್ಞ'' ಎಲ್ಲಕ್ಕೂ ಪ್ರಾಣಭೂತ ಪ್ರಜಾಪತಿ.

ಋಷಿಗಳು ಇಂತಹ ಪ್ರಜಾಪತಿಯನ್ನು ಚರು, ಪುರೋಡಾಶ, ಹವಿಸ್ಸುಗಳಿಂದ ಉಪಚರಿಸುತ್ತಾರೆ. ಅಪೇಕ್ಷಿತ ಅಭೀಷ್ಟಗಳನ್ನು ಪಡೆಯಲು ಹಾಗೂ ಧನಕ್ಕೆ ಒಡೆಯರಾಗಲು ಪ್ರಾರ್ಥಿಸಿದ್ದಾರೆ. ಯಜ್ಞ ಯಜಮಾನರು ಯಜ್ಞಾಧಿ ಕರ್ಮಗಳನ್ನು ಚೆನ್ನಾಗಿ ತಿಳಿದಿರುವವರು. ಯಜ್ಞ ಕರ್ಮಮಾಡಿ ಪ್ರಸಿದ್ಧನಾದವ. ಜನ್ಮಾಂತರ ಸುಕೃತ ವಿಶೇಷಗಳಿಂದ ಉತ್ಪನ್ನರಾದವರು ಎಂದು ಋಷಿ ಪತ್ನಿ ತಿಳಿದಿದ್ದಾಳೆ. ಋತ್ವಿಜ ಹೋತೃವು ಲತಾ, ತರು, ಓಷಧ್ಯಾದಿ ವನಸ್ಪತಿಗಳಲ್ಲಿ ಸಮಸ್ತ ಪ್ರಾಣಿಗಳಲ್ಲಿ, ಸಮಸ್ತ ಮನುಷ್ಯರಲ್ಲಿ ಫಲಕ್ಕಾಗಿ ಗರ್ಭಾಧಾರಣೆ ಆಗುವಂತೆ ಮಾಡುತ್ತಾರೆ. (1) ಪುತ್ರನನ್ನು ಬಯಸುವ ಋಷಿಗೆ ಪುತ್ರನಾಗಲಿ ಎಂದು ಋಷಿ ಪತ್ನಿಯು ಬಯಸುತ್ತಾಳೆ. (2) ಪುತ್ರಾಪೇಕ್ಷೆಯಾದ ಪತ್ನಿ ಋತು ಸ್ನಾನಾನಂತರ ಅಪೇಕ್ಷಿಸಿದಾಗ ಆ ಬಯಕೆಯನ್ನು ಪೂರೈಸುತ್ತಾನೆ. ಸರ್ವವ್ಯಾಪಕನಾದ ವಿಷ್ಣುವು ಗರ್ಭಾಧಾನ ಸ್ಥಾನವಾದ ಸ್ತ್ರೀ ಯೋನಿಯನ್ನು ನಿರ್ಮಿಸಲಿ. ತ್ವಷ್ಟನು ಸ್ತ್ರೀ ಪುರುಷರ ಅವಯವ ಉಂಟುಮಾಡಲಿ. ಪ್ರಜಾಪತಿಯು ರೇತಸ್ಸು ಸ್ಥಾಪಿಸಲಿ. ದಾತೃ ದೇವನು ರೇತಸ್ಸು ಸ್ಥಾಪಿತವಾಗುವಂತೆ ಮಾಡಲಿ. ಸರಸ್ವತಿ, ಅಶ್ವಿನಿಯಾದಿ ದೇವತೆಗಳು ಗರ್ಭ ಧರಿಸುವಂತೆ ಮಾಡಿ ಆ ಗರ್ಭವನ್ನು ರಕ್ಷಿಸಲಿ. ಇಂತಹ ಗರ್ಭವನ್ನು 10ನೆಯ ತಿಂಗಳಲ್ಲಿ ಪ್ರಸವಾರ್ಥ ಅಪೇಕ್ಷಿಸಿ ಕರೆಯೋಣ.'

## ಆದಾತ್ಮಪರ ಅರ್ಥ

ಭಗವಂತನ ಮಹಿಮೆಯಿಂದ ಅಭಿವ್ಯಕ್ತನಾದ ಸೂರ್ಯನನ್ನು ವಿದ್ವಾಂಸರು ಮನಸ್ಸಿನ ಏಕಾಗ್ರತೆಯಿಂದ ತಿಳಿಯುತ್ತಾರೆ. ಹಿರಣ್ಮಯ ಪುರುಷನನ್ನು ಪರಬ್ರಹ್ಮನೆಂದು ತಿಳಿಯುತ್ತಾರೆ. ಸೂರ್ಯ ಉಪಾಸನೆ ಮಾಡುವವರು ಸೂರ್ಯ ಲೋಕವನ್ನು ಅಥವಾ ಪರಮ ಪದವಿಯನ್ನು ಪಡೆಯುತ್ತಾರೆ. ಸೂರ್ಯನು ಮೂರು ವೇದಗಳ ಮಹಿಮೆಯಿಂದ ತನ್ನ ಗತಿಯನ್ನು ನಿರ್ವಹಿಸುತ್ತಾನೆ. ಶರೀರದಲ್ಲಿ ಪ್ರಾಣ ವಾಯುವು ವೇದದ ಉಚ್ಚಾರಣೆಗೆ ಪ್ರೇರಿಸುತ್ತದೆ. ಸ್ವರ್ಗ ಪ್ರಾಪ್ತಿಗೆ ಸಾಧನವಾದುದು. ಋಷಿಗಳು ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಾ ನಾಶವಾಗದಂತೆ ವೇದವನ್ನು ರಕ್ಷಿಸಿದ್ದಾರೆ. ಆದಿತ್ಯನು ಅತಿ ಎತ್ತರದಲ್ಲಿ ಅಂತರಿಕ್ಷದಲ್ಲಿ ಎಲ್ಲಾ ದಿಕ್ಕುಗಳನ್ನು ಬೆಳಗುತ್ತಾ ಲೋಕಗಳ ಮಧ್ಯೆ ಪುನ: ಪುನ: ಸುತ್ತುತ್ತಲೇ ಸಕಲ ಪ್ರಾಣಿಗಳನ್ನು ಕಾಪಾಡುತ್ತಾ ಇದ್ದಾನೆ. ಜಗತ್ತು ಪರಮಾತ್ಮನ ಮಾಯೆಯಿಂದ ಆದುದು. ಪರಿಪಕ್ವ ಜ್ಞಾನದಿಂದ ವೇದಾಂತಿಗಳು ಸಮಸ್ತ ಪ್ರಾಣಿಗಳ ಆತ್ಮನು ಪರಮಾತ್ಮನು ಒಂದೇ. ಪರಮಾತ್ಮನು ಪ್ರಾಣಿಗಳ ಶರೀರದಲ್ಲಿ ಜೀವಾತ್ಮನಾಗಿ ವ್ಯವಹರಿಸುತ್ತಾನೆ ಎಂಬ ಜೀವಾತ್ಮ - ಪರಮಾತ್ಮ ತಾದಾತ್ಮತೆಯನ್ನು ತಿಳಿಸುತ್ತದೆ. ಅವ್ಯಾಕ್ತಾವಸ್ಥೆಯಲ್ಲಿ ಸಕಲವೂ ಪರಮಾತ್ಮನಲ್ಲಿ ಬೀಜರೂಪದಿಂದಿದ್ದು ಸೃಷಿಯ ಕಾಲದಲ್ಲಿ ರೂಪ ಹೊಂದಿ, ಪ್ರಳಯ ಕಾಲದಲ್ಲಿ ಪುನಃ ಪರಮಾತ್ಮನಲ್ಲಿ ಲೀನವಾಗುತ್ತದೆ. ಪರಬ್ರಹ್ಮ ವಸ್ತುವನ್ನು ಮಾತ್ರ ಪಡೆಯಲು ವೇದಾಂತಿಗಳು ಇಚ್ಛಿಸುತ್ತಾರೆ. ಬ್ರಹ್ಮೋಪಾಸನೆಯಿಂದ ಬ್ರಹ್ಮ ಪ್ರಾಪ್ತಿಯನ್ನೇ ಪಡೆಯುತ್ತಾರೆ. ಪರಮಾತ್ಮನು ಹೇಗೆ ಸೃಷ್ಟಿಸಬೇಕೆಂದು ಯೋಚಿಸಿದನೋ ಹಿರಣ್ಯಗರ್ಭನು ವೇದವನ್ನು ಮೊದಲು ಪಠಿಸಿ ನಂತರ ಸೃಷ್ಟಿ ಕ್ರಮವನ್ನು ಮುಂದುವರಿಸಿದನು. ಮನಸ್ಸಿನಲ್ಲಿ ಧ್ಯಾನಿಸಲ್ಪಡುವ ಸ್ವರ್ಗಸಾಧನವಾದ ಅರ್ಥ ಸಹಿತ ವೇದವನ್ನು ಋಷಿಗಳು ಬ್ರಹ್ಮಪದವಿಯಲ್ಲಿದ್ದುಕೊಂಡು ರಕ್ಷಿಸುತ್ತಾರೆ. ತಾವೇ ನೆಲೆಸಿರುವ ಶರೀರವನ್ನು ರಕ್ಷಿಸುತ್ತಾ ನಾಶರಹಿತ ಶರೀರದ ನಾಡಿಗಳಲ್ಲಿ ಸಂಚರಿಸುವ ''ಪ್ರಣವ'' ಸ್ವರೂಪ ಆತ್ಮನನ್ನು ಋಷಿಗಳು ತಿಳಿದಿದ್ದಾರೆ. ಆತ್ಮನು ಭೂಲೋಕ, ಸ್ವರ್ಗ ಲೋಕಗಳ ನಡುವೆ ★ ಉತ್ತಮ ಜನ್ಮ ಮನುಷ್ಯ ಜನ್ಮ ★ ಕನಿಷ್ಠ ಜನ್ಮ ಪಶ್ವಾದಿಗಳು ಮಧ್ಯೆ ಜನನ ಮರಣ ರೂಪದಲ್ಲಿ ಪುನ: ಪುನ: ಸುತ್ತುತ್ತಿರುತ್ತಾರೆ.

!! ಓಂ ಶ್ರೀ ಮಹಾಗಣಾಧಿಪತಯೇ ನಮ: !!

## ಭಾವವೃತ್ತಂ (ಪ್ರಳಯ ದೆಸೆ)

ಅವ್ಯಕ್ತಸ್ವರೂಪಿ, ಇಂದ್ರಿಯ ಜ್ಞಾನಕ್ಕೆ ಅಗೋಚರ, ಆಗ ಯಾವುದೂ ಇರಲಿಲ್ಲ. ಮರಣ, ಮರಣರಾಹಿತ್ಯ, ಹಗಲೂ, ರಾತ್ರಿಗಳ ಪರಿಜ್ಞಾನ ಇರಲಿಲ್ಲ. ''ಪರಬ್ರಹ್ಮ'' ತತ್ವಮಾತ್ರ ಇತ್ತು.

ಜೀವರಹಿತ ಜಡ ವಸ್ತುವನ್ನು ಸಚೇತನವನ್ನಾಗಿ ಮಾಡಿತು. ಸೃಷ್ಟಿಯ ಆರಂಭದಲ್ಲಿ ಎಲ್ಲೆಲ್ಲೂ ಕತ್ತಲೆಯು ಕವಿದಿತ್ತು. ಎಲ್ಲೆಲ್ಲೂ ಉದಕ ತುಂಬಿತ್ತು. ಯಾವ ಆಧಾರ, ಆವರಣ ಇಲ್ಲದ ಕಾರ್ಯ, ಕಾರಣ, ವಿಭಾಗ, ಪ್ರತ್ಯೇಕ ವಿಭಾಗಗಳಿಲ್ಲದ ಒಂದೇ ಆಗಿದ್ದ ಅವ್ಯಕ್ತ ರೂಪ, ''ಧ್ಯಾನ ರೂಪ ಮಹಿಮೆಯಿಂದ ಕಾರ್ಯರೂಪ ಜಗತ್ತಾಗಿ ಪರಿಣಮಿಸಿತು''. ಹಿಂದಿನ ಸೃಷ್ಟಿಯಲ್ಲಿ ಪ್ರಾಣಿಗಳಿಂದ ಗಳಿಸಲ್ಪಟ್ಟ ಪಾಪಪುಣ್ಯ ಕರ್ಮಗಳು ಇಂದಿನ ಸ್ಥಿತಿಗೆ ಬೀಜರೂಪ. ಈ ಅಂಶ ಪರಮೇಶ್ವನ ಮನಸ್ಸಿಗೆ ಬಂದಾಗ ಜಗತ್ತಿನ ಸೃಷ್ಟಿ ಮಾಡುವ ಮನಸ್ಸಾಯಿತು. ಯೋಗಿಗಳು, ಋಷಿಗಳು ತಮ್ಮ ತಮ್ಮ ಬುದ್ಧಿಯಿಂದ ಎಲ್ಲವೂ ಅವ್ಯಕ್ತ ಬೀಜರೂಪದಲ್ಲಿ ಇರುವವೆಂದು ತಿಳಿದಿದ್ದಾರೆ. (1) ಭೋಗ್ಯ ವಸ್ತುಗಳಾದ ಪಂಚಭೂತಗಳು, ಜಗದಾದಿಗಳು, ನಾನಾ ವಿಧ ವಸ್ತುಗಳು ಒಂದು ಭಾಗ (2) ಇವುಗಳನ್ನು ಉಪಯೋಗಿಸುವ ಭೋಕ್ತ ವಿಭಾಗ (3) ಜೀವ ಇರುವ ಸುಖ, ದುಖ ಅನುಭವಿಸುವ ದೇವತೆ, ಮನಷ್ಯ ಪ್ರಾಣಿ ಆದಿಗಳಲ್ಲಿ ಶ್ರೇಷ್ಟ ಚೈತನ್ಯಯುಕ್ತವಾದ ಭೋಗ್ಯ ವಸ್ತುಗಳಿಂದ ಮೇಲೆನಿಸಿದ್ದು.

ಪಂಚ ಭೂತಗಳ ಸೃಷ್ಟಿಯ ನಂತರವೇ ದೇವತೆಗಳು ಉತ್ಪನ್ನರಾದ್ದರಿಂದ ಜಗತ್ ಸೃಷ್ಟಿ ಯಾರಿಂದ ಹೇಗೆ ಆಯಿತೆಂದು ಆ ದೇವತೆಗಳಿಗೂ ತಿಳಿಯದು.

ಪ್ರಜಾಪತಿಯು ಯಜ್ಞವನ್ನು ಮೊದಲು ಸೃಷ್ಟಿಸಿ ಅದನ್ನು ಎಲ್ಲರೂ ಅನುಷ್ಠಾನ ಮಾಡುವಂತೆ ವಿಸ್ತಾರವಾಗಿ ಪ್ರಸಿದ್ಧಪಡಿಸುತ್ತಾನೆ. ನಂತರ ಸಮಾಪ್ತಿಗೊಳಿಸುತ್ತಾನೆ. ದೇವತೆಗಳ ಸೃಷ್ಟ್ಯರ್ಥ ಪ್ರಜಾಪತಿಯು ಪ್ರಾಣರೂಪಿ ''ಸಾಧ್ಯ''ರೆಂಬ ಪೂರ್ವ ದೇವತೆಗಳೂ ಯಜ್ಞ ಮಾಡಿದರು. ಇವರು ಯಜ್ಞ ಮಾಡಿದಾಗ ಪ್ರಪಂಚ ಸೃಷ್ಟಿ ಪೂರ್ತಿ ಆಗಿರಲಿಲ್ಲ. ದೇವತೆಗಳನ್ನು ಉದ್ದೇಶಿಸಿ ಮಾಡಿದ ನೂರು ವರುಷಗಳ ಯಜ್ಞ ವಿಯರಾಧಿಗಳಿಂದ ವಿಸ್ಕೃತವಾಗುತ್ತದೆ. ಮುಂದುವರಿಸಿದ ದೇವತೆಗಳು ಉತ್ಕೃಷ್ಟ ಹೋತೃವಿನಿಂದ ನಿಕೃಷ್ಟ ಭೋಗ್ಯ ವಸ್ತುಗಳನ್ನು ಸೃಷ್ಟಿಸುತ್ತಾರೆ. (1) ಅಗ್ನಿಗೆ ಗಾಯತ್ರಿ ಛಂದಸ್ಸು (2) ಸವಿತೃವಿಗೆ ಉಷ್ಣಿಕ್ ಛಂದಸ್ಸು (3) ಸೋಮನಿಗೆ ಉಕ್ತ ಮಂತ್ರಗಳು ಮತ್ತು ಅನುಷುಪ್ ಛಂದಸ್ಸು(4) ಬ್ರಹಸ್ಪತಿಗೆ ಬೃಹತೀ ಛಂದಸ್ಸು(5) ವಿಶ್ವೇ ದೇವತೆಗಳಿಗೆ ಜಗತ್ತೀ ಛಂದಸ್ಸು. ಆಯಾ ದೇವತೆಗಳನ್ನು ಸ್ತುತಿಸಲು ಛಂದಸ್ಸು ಸಹಾಯವಾಯಿತು. ಯಜ್ಞದಿಂದ ಋಷಿಗಳು,ಮಾನವರು ಉತ್ಪನ್ನರಾದರು. ಈ ಬಗೆಗೆ ಸಮರ್ಥವಾದ ಮನಸ್ಸು ಋಷಿಗಳಿಗಿದೆ. ಯಜ್ಞಾನುಷ್ಠಾನ ಪರಿಜ್ಞಾನವುಳ್ಳ ದೇವತೆಗಳಿಗೆ ಮರೀಚ್ಯಾದಿ ಸಪ್ತ ಋಷಿಗಳು ಸಪ್ತವಷಟ್ಕಾರಗಳು ಯಜ್ಞಾನುಷ್ಠಾನ ಮಾರ್ಗ ತಿಳಿದು ಬುದ್ಧಿವಂತರಾಗಿ ಯಜ್ಞಾನುಷ್ಠಾನ ಪ್ರವೃತ್ತರಾದರು. ಅವ್ಯಕ್ತ ರೂಪದಲ್ಲಿರುವ ಪರಮಾತ್ಮನ ಸಂಕಲ್ಪ ಋತುವೂ, ವ್ಯಕ್ತ ರೂಪದಿಂದ ಪರಮಾತ್ಮನ ಭಾಷಣದಿಂದ ಸತ್ಯವೂ, ಉತ್ಪನ್ನವಾದವು. ಬ್ರಹ್ಮನಿಂದ ಹಗಲೂ ರಾತ್ರಿಗಳು ಉದಕ ಪೂರ್ಣ ಸಮುದ್ರದಿಂದ ಸಂವತ್ಸರಾದಿ ಕಾಲ ವಿಭಾಗಗಳು ಬಳಿಕ ಅಹೋರಾತ್ರಿಗಳು ಸಮಸ್ತ ಪ್ರಾಣಿಗಳು ಉತ್ಪನ್ನವಾದವು. ಬ್ರಹ್ಮನು ಇದಕ್ಕೆ ಅದಿಪತಿಯಾದನು. ಹಿಂದಿನ ಕಲ್ಪದಲ್ಲಿ ಸೃಷ್ಟಿಸಿದಂತೆಯೇ ಈಗಲೂ ಸಹ ಕಾಲಕ್ಕೆ ಭೂಷಣವಾದ ಸೂರ್ಯ, ಚಂದ್ರರು ಸ್ವರ್ಗ, ಭೂಮಿ, ಅಂತರಿಕ್ಷ ಲೋಕಗಳು ಸೃಷ್ಟಿಗೊಂಡವು. ಮುಂದಿನ ಕಲ್ಪದಲ್ಲೂ ಇದೇ ರೀತಿ ಪರಮಾತ್ಮನು ಸೃಷ್ಟಿಸುತ್ತಾನೆ.

## ವಿಷ್ಣು

ಎಲ್ಲ ಲೋಕಗಳನ್ನು ಯಾರ ಸಹಾಯವೂ ಇಲ್ಲದೆ ಮೂರು ಪಾದಗಳೇ ಆದ ಮೇಲಿನ ಏಳು ಲೋಕಗಳು, ಕೆಳಗಿನ ಏಳು ಲೋಕಗಳು ಮಧ್ಯದಲ್ಲಿ ಪೃಥ್ವಿ, ಆಪ್, ತೇಜಸ್ಸು ಈ ಮೂರು ಧಾತುಗಳು ಸೇರಿಸಿ ಎತ್ತಿ ಹಿಡಿದಿದ್ದಾನೆ. ಜಗತ್ ಎಲ್ಲವನ್ನು ಆಕ್ರಮಿಸಿದ್ದಾನೆ. ಸಕಲ ಭಕ್ತರ ಬಂಧು, ಇಂದ್ರನ ಪುರುಷ ಶಕ್ತಿ ಆದಿತ್ಯ ಮಂಡಳದಲ್ಲಿ ಸ್ಥಾಪಿತವಾಗಿದೆ. ಇದನ್ನು ದ್ಯಾವಾ ಪೃಥ್ವಿಗಳಲ್ಲಿ ಸೇರಿಸಿದ್ದಾನೆ. ವಿಷ್ಣುವು ಆಧ್ಯಾತ್ಮಿಕ ಲೋಕದ ಸ್ವಾಮಿ, ಪಾಲಕ, ಅಹಿಂಸಕ, ಸತ್ಯವಂತ, ಪರಾಕ್ರಮಿ, ಮೂರು ಪಾದಗಳಿಂದ ಮೂರು ಲೋಕ ಸಂಚರಿಸುತ್ತಾನೆ. ಭೂಲೋಕ, ಅಂತರಿಕ್ಷ ಅಳೆಯುವ ವಿಷ್ಣುವಿನ ಎರಡು ಪಾದಗಳನ್ನು ಸ್ತುತಿ ಮಾಡಿ ತಿಳಿಯಬಹುದು ಆದರೆ, ದ್ಯುಲೋಕ ಅಳೆಯುವ ಪಾದವನ್ನು ಅಳೆಯಲು ಯಾರಿಂದಲೂ ಸಾಧ್ಯವಿಲ್ಲ. ಸ್ವರ್ಗೋತ್ಪಾದಕ ಶಕ್ತಿ ಹೊಂದಿದ್ದಾನೆ. ಮೇಘದಿಂದ ಮಳೆ ಕರೆಯುತ್ತಾನೆ. ಎಲ್ಲರೂ ಧ್ಯಾನಿಸಬೇಕಾದವನು. ಎಲ್ಲರ ಎಲ್ಲಾ ಇಷ್ಟಾರ್ಥಗಳನ್ನು ಅನುಗ್ರಹಿಸುವವನು. ಆಶ್ರಮ : ಯಾಜ್ಞಿಕರು ಲೋಕ ರಕ್ಷಣೆಗಾಗಿ ಯಾಚಿಸುತ್ತಾರೆ. ಪರಾಕ್ರಮಗಳನ್ನು ಸ್ತುತಿಸುತ್ತಾರೆ. ಸೋಮ, ಹವಿಸ್ಸುಗಳನ್ನು ಅಗ್ನಿಯ ಮೂಲಕ ವಿಷ್ಣುವಿಗೆ ಅರ್ಪಿಸಿ ಉಳಿದುದನ್ನು ಸೇವಿಸುತ್ತಾರೆ. ಪ್ರತಿಫಲಾಪೇಕ್ಷೆ ಇಲ್ಲದೆ ಪುನ: ಪುನ: ಸ್ತುತಿಸುತ್ತಿರುತ್ತಾರೆ. ವಿಷ್ಣುವು ಸಹಾಯಕ್ಕೆ ಬರುತ್ತಾನೆ. ಯಜ್ಞವನ್ನು ವರುಣಾ, ಅಶ್ವಿನೀ ದೇವತೆಗಳು ನಡೆಸುತ್ತಾರೆ. ಯಜಮಾನನನ್ನು ಫಲ ಅನುಭವಿಸಲು ಯೋಗ್ಯನನ್ನಾಗಿ ಮಾಡುತ್ತಾರೆ. ಪ್ರಾರ್ಥನೆ : ಮಧುರ ಆನಂದ ಅನುಗ್ರಹಕ್ಕಾಗಿ ಅಂತರಿಕ್ಷ ಮಾರ್ಗ ಹೊಂದಲು ಪ್ರಾರ್ಥಿಸುತ್ತಾರೆ. ಯಜ್ಞಕ್ಕೆ ವಿಷ್ಣುವನ್ನು ಆಹ್ವಾನಿಸುತ್ತಾರೆ. ವಿಷ್ಣುವು ರಕ್ಷಣೆ, ಯಶಸ್ಸು ಕೊಡಲಿ. ವಿಷ್ಣು ಸಾನಿಧ್ಯವನ್ನು ಕರುಣಿಸಲಿ ಎಂದು ಋಷಿಗಳು ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಲಿಂಗೋಕ್ತ ದೇವತೆಗಳು

ಮಂಡಲ 7ರಲ್ಲಿ 2, 10ರಲ್ಲಿ 4 ಒಟ್ಟು ಎಂಟು ಸೂಕ್ತಗಳು ಇವೆ.

ವಿಷ್ಣು ಗರ್ಭಾದಾನ ಸ್ಥಾನವಾದ ಯೋನಿಯನ್ನು ನಿರ್ಮಿಸಲಿ. ತ್ವಷ್ಟನು ಸ್ತ್ರೀ ಪುರುಷರ ಅವಯವ ಉಂಟುಮಾಡಲಿ. ಪ್ರಜಾಪತಿಯು ರೇತಸ್ಸನ್ನು ಸ್ಥಾಪಿಸಲಿ, ದಾತೃ ದೇವನು ರೇತಸ್ಸನ್ನು ಸ್ತ್ರೀ ಯೋನಿಯಲ್ಲಿ ಸ್ಥಾಪಿಸಲಿ.

**ಸಿನೀವಾಲಿ, ಸರಸ್ವತಿ, ಅಶ್ವಿನಿ ದೇವತೆಗಳು :** ಗರ್ಭ ಧರಿಸಿರುವಂತೆ ಮಾಡಿ ರಕ್ಷಿಸಲಿ ಮತ್ತು ಇಂತಹ ಗರ್ಭವನ್ನು ಹತ್ತನೇ ತಿಂಗಳಲ್ಲಿ ಪ್ರಸವಾರ್ತ ಕರೆಯೋಣ.

**ಪುರುಷ :** ಸಮಸ್ತ ಜ್ಞಾನಿಗಳನ್ನು ಅರಿಯುವ ಪುರುಷನು ಸರ್ವದಾ ಪೂರ್ಣವಾಗಿ ರಕ್ಷಿಸಲಿ.

**ಇಂದ್ರ :** ಅತಿಶಯ ಮಹತ್ವದಿಂದ ಸ್ವರ್ಗ ತುಂಬಿದವನು, ಸೋಮದಿಂದ ಹರ್ಷಿತನಾಗುವವನು, ಸಮಸ್ತ ಕಾರ್ಯಗಳಲ್ಲೂ ಅತಿ ಸಮರ್ಥ. ಶತ್ರು ಸೇನೆಗಳೊಂದಿಗೆ ಓಡಾಡುವವನು, ಹಣವಂತ, ನೂರು ಅಶ್ವಮೇಧ ಯಾಗಗಳನ್ನು ಮಾಡಿ, ತಪಸ್ಸು ಮಾಡಿ ಸ್ವರ್ಗದಲ್ಲಿ ಆದಿಪತ್ಯವನ್ನು ಪಡೆದವನು, ದ್ರೋಣ ಕಲಶದಲ್ಲಿ ಇರುವ ಸೋಮವು ಇಂದ್ರನಿಗಾಗಿಯೇ ಅಗ್ನಿಯಲ್ಲಿ ಸಮರ್ಪಿತವಾಗುತ್ತದೆ. ಯಾಜ್ಞಿಕರು ಉತ್ತಮ ಹವಿಸ್ಸನ್ನು ಸಿದ್ಧಪಡಿಸುತ್ತಾರೆ, ಯಜ್ಞಕ್ಕೆ ಆಹ್ವಾನಿಸುತ್ತಾರೆ.

**ಅಗ್ನಿ :** ಅಗ್ನಿಯು ದೇವತಾತ್ಮ, ಯುವಕ, ಧೂಮರೂಪಿ, ದ್ಯಾವಾಪೃಥ್ವಿ ಶುದ್ಧಿಕಾರಕ, ಕಾಮವರ್ಷಕ, ಕ್ಷಯರಹಿತ, ಅಧಿಕ ಗುಣಿ, ಅಂತರಿಕ್ಷ ಸಂಚಾರಿ, ಆಕರ್ಷಕ ಕೃಷ್ಣ ವರ್ಣದವನು ಹಾಗೂ ವಸತಿದಾಯಕ.

**ದ್ಯಾವಾ ಪೃಥ್ವಿ:** ಯಜ್ಞ ನಿರ್ಮಾಪಕರು, ಪಾಪ ಪರಿಹಾರಕರು, ಭೂಮಿಯಲ್ಲಿರುವ ಓಷದಿ, ವನಸ್ಪತಿಗಳು ಯಜಮಾನನ ಪಾಪಗಳನ್ನು ಪರಿಹಾರ ಮಾಡಿ ಅವನನ್ನು ಶುದ್ಧಿ ಮಾಡುತ್ತವೆ. ಇವರು ದೀರ್ಘಾಯಸ್ಸನ್ನು ಕೊಡಲಿ, ಯೌವನವನ್ನು ಕೊಡಲಿ, ನಮ್ಮಲ್ಲಿರುವ ಪೃಥ್ವಿ ಸಂಬಂಧ ರೋಗಗಳನ್ನು ನಾಶಮಾಡಿ ಜೀವದಾನ ಮಾಡಲಿ. ಯಾಜ್ಞಿಕರನ್ನು ಅವರ ಕರ್ಮಗಳಲ್ಲಿ ಪ್ರೇರಿಸಲಿ.

ಮಿತ್ರಾವರುಣರು : ಸರ್ವಜ್ಞರು, ವೃಷ್ಟಿ ಪ್ರಕಾಶ ಕರ್ಮ ಕರ್ತರು, ಭೂಮಿಯನ್ನು ಧರಿಸಿ ಪೋಷಿಸುವವರು. ಭೂಮಿಗೆ ಆಕಾರ ಕೊಡುವವರು, ಸೂರ್ಯ ಕಿರಣಗಳು ಶುದ್ಧಿಕಾರಕಗಳಾಗಿವೆ. ತಮೋ ನಿವಾರಕರು, ದ್ಯುಲೋಕ ಉತ್ಪನ್ನರು, ಸಕಲ ಪ್ರಾಣಿಗಳಿಗೂ ಪ್ರಭುಗಳು, ಯಜ್ಞಕ್ಕೆ ವಿಘ್ನ ಮಾಡುವ ರಾಕ್ಷಸರನ್ನು ಓಡಿಸಲು ಪ್ರಾರ್ಥಿಸಿದ್ದಾರೆ. ವನ ಸಮುದ್ರ ಮಧ್ಯೆ ನಿಂತಿರುವ ಇವರ ರಥದಿಂದ ಶತ್ರುಗಳು ಸೋಲಿಸಲ್ಪಡಲಿ ಎಂದು ಅಪೇಕ್ಷಿಸುತ್ತಾರೆ. ಮಿತ್ರನ ಆಯುಧವು ಯಾಜ್ಞಿಕರ ಶತ್ರುಗಳನ್ನು ಕೊಲ್ಲಲೆಂದು ಪೂಜಿಸಿದೊಡನೆಯೇ ಯಾರೂ ಕಸಿದುಕೊಳ್ಳಲಾಗದ ಪ್ರಿಯವಾದ ಧನವನ್ನು ಯಾಜ್ಞಿಕರು ಅಪೇಕ್ಷಿಸಿದ್ದಾರೆ. ವರುಣನು ಎಲ್ಲರಿಗೂ ಸುಖವನ್ನುಂಟುಮಾಡಲಿ.

**ಸೋಮದೇವ :** ಸೋಮನು ರಾಜನ ದೇಹದಲ್ಲಿ ಸೋಮ ತುಂಬಲಿ. ನಮ್ಮನ್ನು ಮೃತ್ಯುವಿಗೆ ಬಿಟ್ಟುಕೊಡದಿರಲಿ. ರಾಜನನ್ನು ಅಭಿವಂದಿಸಲಿ. **ಮರುತ್‌ಗಳು :** ವೃಕ್ಷಾದಿಗಳನ್ನು ಕಂಪಿಸುತ್ತಾ ಅಧಿಕ ಶಬ್ದ ಮಾಡುತ್ತವೆ. ಧನವನ್ನು ಪ್ರಾರ್ಥಿಸಿದ್ದಾರೆ. **ಪೂಷನ್ :** ಆಶ್ರಯದಾತರು, ಪೋಷಕರು, ಪೂಜಕರು, ಯಜಮಾನರುಗಳನ್ನು ರಕ್ಷಿಸಿ ಪುಷ್ಟಿಗೊಳಿಸಲಿ. ಬ್ರಹ್ಮಣಸ್ಪತಿಯು ರಕ್ಷಣೆ ಮಾಡಲಿ. ವಾಗ್ದೇವಿ : ವಾಗ್ದೇವಿಯು ಕಲ್ಯಾಣಗಳಿಂದ ರಕ್ಷಿಸಲಿ.

ನಿರ್ಋತಿ : ಆಯಸ್ಸು ವೃದ್ಧಿಗಾಗಿ ಸಾಮಗಾನ ಸ್ತೋತ್ರ ಮಾಡುತ್ತಾರೆ. ಹವಿಸ್ಸು ಅನ್ನವನ್ನು ನಿರ್ಋತಿಯು ಭಕ್ಷಿಸಲಿ ಎಂದಿದ್ದಾರೆ. ಕಳೆದುಕೊಂಡ ಚೇತನವನ್ನು ಪುನಹ ಕೊಟ್ಟು ಆಯಸ್ಸನ್ನು ಅಧಿಕವಾಗಿ ಬೆಳೆಸಲಿ ಎಂದು ಪ್ರಾರ್ಥಿಸಿದ್ದಾರೆ. ಅನೇಕಕಾಲ ಉದಯ ಸೂರ್ಯನನ್ನು ನೋಡುವಂತೆ ಮಾಡಿ ಪ್ರಾಪ್ತವಾದ ಮುಪ್ಪು ಸುಖಕರವಾಗಿ ಇರುವಂತೆ ಅನುಗ್ರಹಿಸಲಿ. ನಿರ್ಋತಿಯು ನಮ್ಮನ್ನು ಬಿಟ್ಟು ದೂರಹೋಗಲಿ ಎಂದು ಪ್ರಾರ್ಥಿಸಿದ್ದಾರೆ.

**ಅಶ್ವಿನಿ, ಇಳಾ, ಭಾರತಿ ಸರಸ್ವತಿಯರು :** ಈ ಐದು ಮಂದಿಯು ಒಂದಾಗಿ ಬಂದು ಔಷಧ ರೂಪದಿಂದ ರೋಗರೂಪ ಪಾಪವು ಹಿಂಸೆ ಮಾಡದಂತೆ ನಮ್ಮ ಪಾಪಗಳನ್ನು ನಾಶಮಾಡಲಿ. ಇದೇ ಲಿಂಗೋಕ್ತ ದೇವತೆಗಳಿಂದ 1) ಧನ, ದಾನ್ಯ ಸಂಪತ್ತಿಗಾಗಿ (2) ತಮೋ ನಿವಾರಣೆಗಾಗಿ (3) ಸಂತಾನಕ್ಕಾಗಿ (4) ವಸತಿಗಾಗಿ (5) ಆಯಸ್ಸಿಗಾಗಿ (6) ಧನಕ್ಕಾಗಿ (7) ಆರೋಗ್ಯಕ್ಕಾಗಿ (8) ಪಾಪ ಪರಿಹಾರಗಳಿಗಾಗಿ (9) ಶತ್ರು ನಾಶಕ್ಕಾಗಿ ಪ್ರಾರ್ಥಿಸಿದ್ದಾರೆ.

II ಓಂ ಶ್ರೀ ಮಹಾಗಣಾಧಿಪತಯೇ ನಮ: II

## ಶಕಟಸ್ತುತಿ

ಶಕಟನು ಪ್ರಣವ ಸ್ವರೂಪಿ, ಯಜ್ಞನಾಭಿರೂಪಿ, ಅವಳಿ ಮಕ್ಕಳಂತೆ ದೇವಕಾರ್ಯ ಮಾಡುವವನು, ಸೋಮನು ಶಕಟ ಕವಿಗೆ ಪುತ್ರರೂಪಿ. ಋತ್ವಿಜರಿಗೆ ಪಿತೃರೂಪಿ. ಯಜಮಾನನು ಬೃಹಸ್ಪತಿಯನ್ನು ಯಾಜ್ಞರೂಪಿಯಾಗಿ ಕಲ್ಪಿಸಿದ್ದಾನೆ. ದೇವಮಾನವರ ಪೋಷಣ ಕರ್ಮಾರ್ಥ ಪ್ರಯತ್ನಿಸುತ್ತಾ ಹವಿಸ್ಸಾನಕ್ಕೆ ದೇವತೆಗಳನ್ನು ಉಚಿತವಾಗಿ ಬರಮಾಡಿಕೊಳ್ಳುತ್ತಾನೆ. (1) ದಾನ (2) ಹೋಮ (3)ಪಶು (4) ಪುರೋಡಾಶ (5) ಅಶ್ವ ★ ಯಮನ ಪ್ರಿಯ ಶರೀರವನ್ನು ಸುರಕ್ಷಿತವಾಗಿ ಇಟ್ಟು ಪುತ್ರರೂಪಿ ಋತ್ವಿಜರು ಸಪ್ತ ಛಂದಸ್ಸಿನಲ್ಲಿ ಸ್ತುತಿ ಅರ್ಪಿಸುತ್ತಾರೆ. ಆಗ ದೇವತೆಗಳಿಗೆ ''ಶಕಟವು'' ಯಜಮಾನನ ಹವಿಸ್ಸು ಒಯ್ಯಲಿ ಎಂಬ ಶಕಟಧ್ವನಿಯನ್ನು ದೇವತೆಗಳು ಕೇಳಲಿ. ಸೋಮಕ್ಕೆ ಉತ್ತಮ ವಾಸ ಉಂಟುಮಾಡಲಿ.

**ನಿರ್ಋತಿ :** ಯಮನ ದೂತ. ಪಾಪದೇವತೆ, ನಿಋುತಿಯ ಪರವಾಗಿ ಪಾರಿವಾಳವು ಯಜಮಾನನ ಮನೆ ಹೊಕ್ಕು ಅತಿ ಹಿಂಸೆ ಮಾಡಿ ಅಗ್ನಿಯನ್ನು ಪ್ರವೇಶಿಸಿ ಯಜಮಾನನನ್ನು ಕೊಲ್ಲಲು ಬಂದಿದೆ.

ಗೂಬೆಯಂತೆ ಅಪಶಕುನದ ಪಾರಿವಾಳ ಅಗ್ನಿ ಪ್ರವೇಶದಿಂದ ಆಗುವ ಬಾದೆ ದೋಷ ನಿವಾರಣೆಗಾಗಿ ಅಗ್ನಿಯನ್ನು ಹವಿರಾದಿಗಳಿಂದ ಸ್ತುತಿಸಿ ಯಮನಿಗೂ ನಮಸ್ಕಾರಗಳನ್ನು ಯಜಮಾನನು ಅರ್ಪಿಸುತ್ತಾನೆ. ದೇವತೆಗಳು ತೃಪ್ತರಾಗಿ ಪಾರಿವಾಳವನ್ನು ಯಜಮಾನನ ಮನೆಯಿಂದ ಓಡಿಸಿ ತೊಂದರೆಯ ಬದಲು ಒಳ್ಳೆಯದನ್ನು ಮಾಡಲಿ ಎಂದು ಪ್ರಾರ್ಥಿಸಿದ್ದಾರೆ. ಪುತ್ರರು ಗೋವುಗಳು, ಅಶ್ವಗಳು ಮತ್ತು ರಕ್ಷಣೆ ನೀಡಲಿ ಎಂದು ಬೇಡಿದ್ದಾರೆ.

**ದ್ಯೂತ :** (M 10 - 135) ಸೋಮನು ಯಜಾವರ್ತಾ ಎಂಬ ಪರ್ವತದಲ್ಲಿ ಹುಟ್ಟಿದವನು, ದೇವತೆಗಳನ್ನು ಹರ್ಷಗೊಳಿಸುತ್ತಾನೆ. ದ್ಯೂತವು ರಾಜನಿಂದ ಸಮ್ಮತವಾಗಿದೆ. ಜೂಜುಗಾರರನ್ನು ಹರ್ಷಗೊಳಿಸುತ್ತದೆ. 53 ಸಂಖ್ಯೆಯ ದಾಳಗಳಿವೆ. ದಾಳಗಳಿಂದ ಹಾಸಿಗೆಯ ಮೇಲೆ ಆಡುತ್ತಾರೆ. ಯಾರ ಕ್ರೋಧಕ್ಕೂ ಬೆದರಿ ಬಗ್ಗುವುದಿಲ್ಲ, ಕೈಯಿಂದ ದಾಳಗಳು ಕೈಗಳಿರುವ ಆಟಗಾರರನ್ನು ಅವಲಂಬಿಸುತ್ತದೆ. ತಣ್ಣಗಿದ್ದರೂ ಹೃದಯವನ್ನು ಸುಡುತ್ತದೆ. ಕಟ್ಟಿಗೆ ಇಲ್ಲದಿದ್ದರೂ ಕೆಂಡದಂತೆ ಸುಡುತ್ತದೆ. ದಾಳಗಳು ಅಂಕುಶದಂತೆ ಇಕ್ಕಳದಂತೆ ಆಗುವ, ಆಗಬಹುದಾದ ಅನಾಹುತಗಳನ್ನು ಹೀಗೆ ಹೇಳಿದ್ದಾರೆ. : (1) ದ್ಯೂತದಿಂದ ಸಂಸಾರಕ್ಕೆ ದುಖ ಉಂಟಾಗುತ್ತದೆ. (2) ಗೆದ್ದವರು ಸೋತವರನ್ನು ತ್ಯಜಿಸುತ್ತಾರೆ. (3) ಹೆಂಡತಿಯನ್ನು ಹಿಡಿದೆಳೆಯುತ್ತಾರೆ (4) ದ್ಯೂತದ ಕಾರಣಕ್ಕಾಗಿ ಹೆಂಡತಿಯನ್ನು ತ್ಯಜಿಸುತ್ತಾರೆ. (5) ಕದ್ದಾದರೂ ಹಣ ಸಂಪಾದಿಸಲು ಗೃಹಕ್ಕೆ ಕದಿಯಲು ನುಗ್ಗುತ್ತಾರೆ.

**ಹಿತವಚನಗಳು :** ದ್ಯೂತ ಆಡುವುದು ಬೇಡ. ದಾಳಗಳು ನಮ್ಮೊಂದಿಗೆ ಮಿತ್ರತ್ವ ಬೆಳೆಸಿ ಸುಖ ಪಡಲಿ. ನಮ್ಮನ್ನು ಕೋಪದೊಡನೆ ಸಮೀಪಿಸುವುದು ಬೇಡ. ವ್ಯವಸಾಯ ಮಾಡಿ ಬಂದ ಧನದಿಂದ ಪಶು, ಪತ್ನಿಯರೊಡನೆ ಸುಖವಾಗಿ ಇರುವಂತಾಗಲಿ. ದ್ಯೂತಗಳಿಂದ ದೂರವೇ ಇರುವಂತೆ ಸವಿತೃ ದೇವನು ನಮಗೆ ಅನುಗ್ರಹಿಸಲಿ. ಸವಿತೃ ದೇವನಿಗೆ ನಮೋ ನಮ:.

**ದುಸ್ವಪ :** ಜೀವಿಸುವವರ ಮನಸ್ಸು ಅನೇಕ ವಿಷಯಗಳಲ್ಲಿ ಆಸಕ್ತವಾಗಿರುತ್ತದೆ. ಎಲ್ಲರೂ ಮಂಗಳಕರ ದುಸ್ವಪ್ನ ನಾಶಕ ರೂಪ ಫಲ ಬಯಸುತ್ತಾರೆ. ವಿವಸ್ವಂತನ ಪುತ್ರ ಯಮನು ಮಂಗಳಕರನಾಗಿರಲಿ. ಪಾಪ ದೇವತೆ ನಿರ್ಋತಿಯು ಸ್ವಪ್ನಾವಸ್ಥೆಯಲ್ಲಿರುವವರನ್ನು ಬಿಟ್ಟು ದೂರ ದೇಶಕ್ಕೆ ಇಷ್ಟ ಬಂದಂತೆ ಹೊರಟು ಹೋಗಲಿ. ಜಾಗ್ರತೆ ಮತ್ತು ಸ್ವಪ್ನ ಅವಸ್ಥೆಗಳಲ್ಲಿ ಇತರರಿಗೆ ನಮ್ಮಿಂದ ದುಷ್ಕಾರ್ಯ, ವಿರೋಧವಾದ ಮಾತುಗಳು, ಪಾಪಕರ ಇರಬಹುದು. ಅಗ್ನಿಯು ಆ ಪಾಪಗಳನ್ನು ದೂರ ಒಯ್ಯಲಿ. ತಾನು ಎಸಗುವ ಪಾಪ ಶತ್ರು ದ್ವೇಷದ ಪಾಪಗಳಿಂದ ಇಂದ್ರ, ಬ್ರಹಸ್ಪತಿ, ವರುಣರು ರಕ್ಷಿಸಲಿ. ಆಂಗೀರಸ ಪುತ್ರ, ಪ್ರಚೇತಸರು, ದುಸ್ವಪ್ನ ನಾಶದಿಂದ ಸಕಲರನ್ನು ಗೆದ್ದಂತಾಗಿ ಹೊಂದಬೇಕಾದದ್ದನ್ನು ಹೊಂದಿ ಪಾಪರಹಿತರಾಗಿ ನಿರಪರಾಧಿಗಳಾಗಿದ್ದಾರೆ. ತಾವು ದ್ವೇಷಿಸುವ ಅಥವಾ ನಮ್ಮನ್ನು ದ್ವೇಷಿಸುವ ಶತ್ರುವಿನ ಪಾಪ ಮತ್ತು ದ್ರೋಹ ಬುದ್ದಿಯು ಹೋಗಲಿ ಎಂದು ಅಪೇಕ್ಷಿಸಿದ್ದಾರೆ.

**ಅಲಕ್ಷ್ಮಿ :** ಅಲಕ್ಷ್ಮಿಯು ದುರ್ಭಿಕ್ಷ, ದರಿದ್ರ, ಕ್ಷಾಮ ದೇವತೆ. ದಾನ ವಿರೋದಿ, ಕುರೂಪಿ, ಏಕಾಂಗಿ, ಜನಹಿಂಸಕಿ, ಸದಾ ಅಳುತ್ತಿರುವವಳು, ವಿಕಾರಗಾಮಿನಿ, ಗರ್ಭಸ್ಥ ಶಿಶುಗಳನ್ನು, ಜೀವಾಂಕುರಗಳನ್ನು ನಾಶಮಾಡುವವಳು. ಇಂತಹ ಅಲಕ್ಷ್ಮಿಯು ಯಾಜ್ಞಿಕರಿಗೆ ತೊಂದರೆ ಮಾಡದೆ ದೂರ ನಿರ್ಜನ ಪ್ರದೇಶಕ್ಕೆ ಹೋಗಲಿ. ಬ್ರಹ್ಮಣಸ್ಪತಿಯು ಆಕೆಯನ್ನು ಸಮುದ್ರದ ಎದುರು ದಡದ ದೀಪಕ್ಕೆ ಕಳುಹಿಸಲಿ. ವೃಷ್ಟಿಯಿಂದ ಅಥವಾ ಋಷಿಯ ಯಜ್ಞಾನುಷ್ಠಾನದಿಂದ ಉಗ್ರತೆ ಶಾಂತವಾಗಲಿ. ಈಕೆಯ ನಿರ್ಗಮನದಿಂದ ಇಂದ್ರನ ಹಾಗೂ ಸಮಸ್ತರ ಶತ್ರುಗಳು ನಾಶವಾಗಲಿ. ಕೊಲ್ಲಲು ಅಸಾಧ್ಯವಾದ ಆತ್ಮನು ದೇವ ಶರೀರಕ್ಕೆ ವಿಷ್ಣು ಲೋಕಕ್ಕೆ ಹೋಗಿ ಸೇರಲಿ. ಶುಭವನ್ನುಂಟುಮಾಡುವ ವಿಶ್ವೇ ದೇವತೆಗಳಿಗೆ ನಮಸ್ಕರಿಸಿ ಅಲಕ್ಷ್ಮಿಯು ನಮ್ಮಿಂದ ದೂರ ಹೋಗುವಂತೆ ಪ್ರಾರ್ಥಿಸಿದ್ದಾಳೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

## ಪಿತರ ದೇವತೆಗಳು

ಯಮನು ವಿವಸ್ವಂತನ ಪುತ್ರ. ಸಕಲರ ಮುಖ್ಯ. ಪಿತೃಗಳಿಗೆ ಪ್ರಭು, ಪಾಪಿಗಳನ್ನು ಅವರವರ ಸ್ಥಾನಗಳಿಗೆ ಸೇರಿಸುವವನು, ಪುಣ್ಯ ಕರ್ಮಿಗಳನ್ನು ಹಿಂಸೆ ಇಲ್ಲದೆ ಸ್ವರ್ಗ ಸೇರಿಸುವವನು. ಪ್ರಾಚೀನ ಮಾರ್ಗದರ್ಶಕ. ಹಿಂದಿನ ಋಷಿಗಳಿಂದ ನಮಸ್ಕೃತನಾದವನು. ''ತ್ರಿಷ್ಟುಪ್'' ಮತ್ತು ''ಗ್ರಾಯತ್ರಿ'' ಛಂದಸ್ಸುಗಳಲ್ಲಿ ಸ್ಥಾಪಿತನಾಗಿದ್ದಾನೆ. ಮೂರು ಯಾಗಗಳಲ್ಲಿ ಭಾಗವಹಿಸುತ್ತಾನೆ. ವಿಸ್ತೃತವಾದ ಆರು ಪೃಥ್ವಿಗಳನ್ನು ಮಹದ್ರೂಪ ಜಗತ್ತನ್ನು ಆಶ್ರಯಿಸಿದ್ದಾನೆ.

ಚೈತನ್ಯದಾಯಕ, ಅನೇಕ ರೂಪಿ, ಅಥರ್ವ ಸಂಜ್ಞಕ ಆಂಗೀರಸರು ಸೋಮಾರ್ಪಣೆ ಪೂಜೆಗೆ ಅರ್ಹರು. ಆಂಗೀರಸ್ಸುಗಳು ವಿವಸ್ವಂತ ಮತ್ತು ಯಮರನ್ನು ಸ್ತುತಿ, ಮಂತ್ರಗಳೊಂದಿಗೆ ಯಜ್ಞಕ್ಕೆ ಕರೆಯಲಿ. ಇಂದ್ರನು ಪಿತೃಗಳೊಂದಿಗೂ, ಯಮನು ಆಂಗೀರಸ್ಸುಗಳೊಂದಿಗೂ, ಬೃಹಸ್ಪತಿಯು ಸ್ತುತಿಕರ್ತರೊಂದಿಗೂ ಕರ್ಮಭಾಗಿಗಳಾಗಿ ತೃಪ್ತಿಹೊಂದುತ್ತಾರೆ. ನಮ್ಮ ಪೂರ್ವಿಕರು ಪುರಾತನ ಪಿತಾಮಹರು ಅವರವರ ಮರಣಾನಂತರ ಕರ್ಮಕ್ಕೆ ಅನುಗುಣವಾಗಿ ಹೋದ ಅನಾದಿ ಮಾರ್ಗದಲ್ಲಿ ಅವರವರ ಕರ್ಮಕ್ಕೆ ಅನುಗುಣವಾಗಿ ಅನುಸರಿಸಿ ಆಯಾಯ ಉತ್ತಮ ಪ್ರದೇಶಕ್ಕೆ ಯಮನು ಒಯ್ಯುತ್ತಾನೆ. ಯಮನು ಮಾತ್ರ ಅರಿತಿರುವ ಈ ಮಾರ್ಗ ಯಾರೂ ಅರಿಯಲಾರರು. ನಮ್ಮ ಪಿತೃಗಳು ಆ ಮಾರ್ಗದಲ್ಲಿ ಹೋಗಲಿ. ಅಲ್ಲಿ ಯಮ ವರುಣರನ್ನು ಕಾಣಲಿ.

ಉದ್ದನೆಯ ಮೂತಿಯ ಇತರ ಪ್ರಾಣಿಗಳನ್ನು ಹಿಂಡಿ ತೃಪ್ತಿಪಡುವ ಪ್ರಾಣಿಗಳನ್ನು ಹುಡುಕುತ್ತಾ ಸಂಚರಿಸುವ ನಾಲ್ಕು ಕಣ್ಣುಗಳ್ಳುಳ್ಳ ವಿವಿಧ ವರ್ಣದ ''ಸುರಮೆ''ಯ ಎರಡು ನಾಯಿಗಳಿಂದ ಪ್ರೇತವು ತಪ್ಪಿಸಿಕೊಂಡು ಉತ್ತಮ ಜ್ಞಾನಿ ಪಿತೃಗಳೊಡನೆ ಹೋಗಿ ಸೇರಿಕೊಳ್ಳಲಿ. ಪಿತೃಗಳು ದೇವತ್ವ ಹೊಂದಿದವರು, ಸ್ತುತಿಗಳಿಂದ ಸೋಮ ಪರೀಕ್ಷರಿಸಿದವರು, ಯಾಗ ಕ್ರಮ ಅರಿತ ಯಾಜ್ಞಿಕರು, ದೇವ ಸಂಬಂಧ ಇಚ್ಛಿಸುವವರು, ಉತ್ತಮ ಜ್ಞಾನಿಗಳು, ಸತ್ಯಾತ್ಮಕ ಮೇಧಾವಿಗಳು, ಇಂದ್ರಾದಿ ದೇವತೆಗಳೊಂದಿಗೆ ಸಮಾನತ್ವ ಹೊಂದಿದವರು. ದೇವತೆಗಳೊಡನೆ ಇರುವವರು, ಪರ ಅಪರ ಕಾಲಕ್ಕೆ ಸೇರಿದವರು, ಸಹಸ್ರ ಸಂಖ್ಯಾತರು, ಮಾರ್ಗದರ್ಶಿಗಳು.

ಅಗ್ನಿ ನಮ್ಮ ಸಮೀಪದಲ್ಲಿರುವ ಇಲ್ಲದ, ನಾವು ಅರಿತಿರುವ, ನಾವು ಅರಿಯದಿರುವ ಪಿತೃಗಳ ಸಂಖ್ಯೆ ತಿಳಿದಿದ್ದಾನೆ. ಸ್ವಯಂ ಪ್ರಕಾಶಕ ಅಗ್ನಿಯು ತನ್ನ ಸಂಕಲ್ಪದಿಂದ ಪಿತೃ ಪ್ರಾಣವನ್ನು ಒಳಗೊಂಡ ದೇವತಾ ಶರೀರ ನಿರ್ಮಿಸಲಿ. ಪಾಪಮೂಲ ದೇಹವನ್ನು ತ್ಯಜಿಸಿ ಅತ್ಯುತ್ಕೃಷ್ಟ ಸ್ಥಾನ ಸೇರಿಸಲಿ. ಪುನಹ ಉತ್ತಮ ಶಾಂತಿಯುತ ದೇಹದೊಡನೆ ಸೇರಿಕೊಳ್ಳಲಿ. ಮೃತನಿಗಾಗಿ ಪಿತೃಗಳು ಸಿದ್ಧಪಡಿಸಿದ ದಹನ ಪ್ರದೇಶದಲ್ಲಿ ಯಮನು ಅಹಸ್ಸು ಉದಕ, ರಾತ್ರಿಗಳೊಂದಿಗೆ ಸೇರಿಕೊಂಡು ಇರುವವನು. ಯಾಗ ಕರ್ಮಗಳಲ್ಲಿ ಸೂರ್ಯ ದರ್ಶನ ಪಡೆದು ಆ ಪ್ರಾಣಗಳನ್ನು ಪುನಹ ನಮಗೆ ಕೊಡಲಿ.

ಪಿತೃಗಳು ''ಸ್ವಧಾ'' ರೂಪ ಕಾರ್ಯಗಳಿಂದ ವೃದ್ಧಿಹೊಂದುತ್ತಾರೆ. ಇಂದ್ರಾದಿಗಳು ಸ್ವಾಹಪೂರ್ವಕ ಹವಿಸ್ಸಿನಿಂದ ತೃಪ್ತರಾಗುತ್ತಾರೆ. ಸೋಮ ಸಹಿತ ಅನೇಕ ದ್ರವ್ಯದ ಉತ್ತಮ ಯಜ್ಞವು ದೇವತೆಗಳ ನಡುವೆ ಪ್ರಸಿದ್ಧನಾದ, ಅಗ್ನಿ ರೂಪನಾದ ಯಮನನ್ನು ಸಮೀಪಿಸುತ್ತದೆ. ಪಿಶಾಚಾದಿಗಳು ಈ ಪ್ರದೇಶದಿಂದ ನಾನಾ ದಿಕ್ಕುಗಳಿಗೆ ಹೊರಟುಹೋಗಲಿ. ಋತ್ವಿಜ ಯಜಮಾನರು ಸಮೀಪಿಸಿ ಆಜ್ಯೋಪೇತ ಹವಿರರ್ಪಿಸಿ ಉಪಚರಿಸಲಿ. ಅಗ್ನಿಯು ಪಿತೃ ದೇವತೆಗಳೊಂದಿಗೆ ಯಾಗ ಭೂಮಿಗೆ ಅಭಿಮುಖನಾಗಿ ಆಗಮಿಸಲಿ. ಪಿತೃ ಪಿತಾಮಹರು ಮೃತರಾದ ಕಿರಿಯರು, ಪಾರ್ಥೀವ ಲೋಕದಲ್ಲಿ ಹವಿಸ್ಸಿಗಾಗಿ ಕಾದಿರುವ ಉಳಿದ ಪಿತೃಗಳು ಎಲ್ಲರನ್ನೂ ಯಜಮಾನನು ನಮಸ್ಕರಿಸುತ್ತಾನೆ. ಯಜ್ಞಕ್ಕೆ ವಿವಸ್ವಂತ, ಯಮರನ್ನು ಸ್ತುತಿಗಳಿಂದ ಕರೆಯುತ್ತಾರೆ.

ಪಿತೃ ಲೋಕ ಸೇರಿದ ಹಿರಿಯರು ಪಿತೃ ಪಿತಾಮಹರು ಮೃತರಾದ ಹಿರಿಯರುಗಳನ್ನು ಯಜಮಾನನು ಸ್ಮರಿಸುತ್ತಾನೆ. ಪಾರ್ಥಿವ ಲೋಕದಲ್ಲಿ ಹವಿಸ್ಸಿಗಾಗಿ ಕಾದಿರುವ ಉಳಿದ ಎಲ್ಲಾ ಪಿತೃಗಳನ್ನು ಸ್ಮರಿಸುತ್ತಾನೆ. ಕರ್ಮ ಅರಿತು ಪ್ರಾಣ ರಕ್ಷಿಸಲು ಅನುಗ್ರಹ ಬುದ್ಧಿಯವರಾಗಿ ಆ ಪಿತೃಗಳು ಉತ್ತಮ, ಮಧ್ಯಮ, ಕೆಳ ಲೋಕಗಳಿಂದ ಆಹ್ವಾನ ಕಾಲದಲ್ಲಿ ಬರಲಿ. ಪಿತೃಯೋಗ ಕಾಲದಲ್ಲಿ ಯಜಮಾನನ ಪಠಿತ ಸ್ತುತಿ ಹೇಳುತ್ತಾ ಅನುಗ್ರಹ ಬುದ್ಧಿಯಿಂದ ದಕ್ಷಿಣ ಪಾರ್ಶ್ವದಲ್ಲಿ ಮೊಳಕಾಲೂರಿ ಕುಳಿತು ಪಿತೃಗಳು ಯಜ್ಞದಲ್ಲಿ ಯಜಮಾನಾರ್ಪಿತ ''ಸ್ವಧಾ'' ಸಂಜ್ಞಿಕ ಹವಿಸ್ಸನ್ನು ಅನ್ನದೊಡನೆ ಸೋಮವನ್ನು ಸೇವಿಸಲಿ. ಪೂರ್ವ, ಪಿತೃ ಯಜಮಾನರು ಯಮನಿಗೆ ಸೋಮ ಅರ್ಪಿಸುತ್ತಿದ್ದರು. ಯಮನು ಯಜಮಾನನ ಪಿತೃಗಳೊಂದಿಗೆ ಹರ್ಷಗೊಳ್ಳುತ್ತಿದ್ದನು. ಈಗ ಯಜಮಾನನಿಂದಲೂ ಹವಿಸ್ಸು ಸ್ವೀಕರಿಸಲಿ. ಯಜಮಾನನು ಉತ್ತಮವಾಗಿ ಸಂಪಾದಿಸಿದ ಹವಿಸ್ಸನ್ನು ಸುಗಂಧಯುಕ್ತ ಮಾಡಿ ಸ್ವಧಾ ಪೂರ್ವಕವಾಗಿ ಪಿತೃಗಳಿಗೆ ಅರ್ಪಿಸಿದ್ದಾನೆ. ಪಿತೃಗಳೂ ಅಗ್ನಿಯು ಭಕ್ಷಿಸಿ ಸುಸಂಸ್ಕೃತ ಯಜ್ಞ ಸೇವಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಪಿತರ ದೇವತೆಗಳು

ಹವಿಸ್ಸಿನಿಂದ ತೃಪ್ತರಾಗಲೀ. ಯಜಮಾನನ್ನು ಹರ್ಷಿಸಲಿ . ಪಿಶಾಚಾದಿಗಳು ಈ ಪ್ರದೇಶದಿಂದ ನಾನಾ ದಿಕ್ಕುಗಳಿಗೆ ಹೊರಟು ಹೋಗಲಿ ಯಮನ ಗೃಹ ರಕ್ಷಕಗಳಾದ ಆ ಎರಡು ನಾಯಿಗಳನ್ನು ಪ್ರೇತಗಳ ರಕ್ಷಣೆಗೆ ನಿಯಮಿಸಲಿ. ಪ್ರೇತಗಳಿಗೆ ರೋಗ, ರಾಹಿತ್ಯ, ದೇಹ ಉಂಟು ಮಾಡಲಿ. ಪಿತೃಗಳ ಕಲ್ಯಾಣಾತ್ಮಕ ಪ್ರೀತಿಗೆ ಪಾತ್ರಗಾಗಲಿ ಯಮನು ಯಜಮಾನನಿಗೆ ಉತ್ತಮ ಜೀವನ ದೀರ್ಘಾಯಸ್ಸು ಅನುಗ್ರಹಿಸಲಿ. ಯಜಮಾನರನ್ನು ಪಿತೃಗಳು ಹರ್ಷಗೊಳಿಸಲಿ. ಆಕರ್ಷಕ ಜ್ವಾಲೆಯ ಸಮೀಪ ಕುಳಿತ ಪಿತೃಗಳು ಯಜಮಾನನ ಭಕ್ತಿ ತಿಳಿದವರು ಸಹಜ ಮಾನವ ಅಜ್ಞಾನದಿಂದ ಪಿತೃಗಳಿಗೆ ಆದ ಯಾವುದೇ ಪಾಪಕ್ಕಾಗಿ ಹಿಂಸಿಸದಿರಲಿ. ಪಿತೃಗಳು ಹವಿಸ್ಸು ಸ್ವೀಕರಿಸಿ ಯಜಮಾನರನ್ನು ಪ್ರಶಂಸಿಸಿ ರಕ್ಷಿಸಲಿ ಅವನಿಗೆ ಪುತ್ರರಿಗೆ ಧನ ಕೊಟ್ಟು ಧನ ಸ್ಥಾಪಿಸಲಿ. ಅಗ್ನಿಯಿಂದ ದಹಿಸಲ್ಪಟ್ಟು , ದಹಿಸಲ್ಪಡದಿರುವ ದ್ಯೋಲೋಕ ಮಧ್ಯೆಯಿರುವ ಪಿತೃಗಳು (ಸ್ವಧಾ) ರೂಪ ಹವಿಸ್ಸಿನಿಂದ ತೃಪ್ತಿ ಪಡಲಿ.

## ಶರಣ್ಯು

ಅನೇಕ ರೂಪಿ ಯಮನ, ಸ್ವರೂಪ ತಿಳಿಯಲಾಗದು, ಆದರೆ ಅಗ್ನಿಯು ಯಮಸ್ವರೂಪವನ್ನು ತಿಳಿದಿದ್ದಾನೆ.

ಶರಣ್ಯು ತ್ವಷ್ಟ ದೇವನ ಮಗಳು ವಿವಾಹದ ಸುದ್ದಿ ತಿಳಿದು ಸಕಲ ಭೂತ ಜಾತಗಳು ಒಂದು ಗೂಡಿದವು. ಮರಣ ರಹಿತಳಾದ್ದರಿಂದ ದೇವತೆಗಳು ಶರಣ್ಯುವಿಗೆ ಬೇರೊಂದು ಸ್ತ್ರೀರೂಪ ಕೊಟ್ಟರು. ಅಶ್ವರೂಪ ಪಡೆದ ಅವಳು ವಿವಸ್ವಂತನನ್ನು ಸೇರಿ ಯಮ ಯಮಿಯ ತಾಯಿಯಾದಳು.

ಪೂಷನ್ : ದ್ಯಾವಾ ಪೃಥ್ವಿಗಳ ನಡುವೆ ಸಂಚರಿಸುತ್ತಾನೆ. ಸಕಲ ದಿಕ್ಕನ್ನು ಅರಿತವನು. ಕೊಂಚವೂ ಅಜಾಗರೂಕನಾಗದವನು. ಋತ್ವಿಜರಿಂದ ಕೂಡಿದ ಪ್ರಭಾವಯುತನಾದವನು. (1) ಕರ್ಮವಂತನಾಗಿದ್ದ ಮೃತನ ಅಭಿಮುಖ ಸಂಚರಿಸಲಿ. (2) ಕರ್ಮಭ್ರಷ್ಟನ ಮೃತನ ಪ್ರತಿಮುಖ ಸಂಚರಿಸಲಿ. ಸಕಲ ಭೂತಜಾತಗಳನ್ನು ರಕ್ಷಿಸಲಿ.

ಸವಿತೃ : ಉತ್ತಮ ಕರ್ಮಕರ್ತರು ಇರುವ ಪ್ರದೇಶ. ಅವರು ಹೋಗುವ ಸ್ಥಾನಗಳನ್ನು ಸವಿತೃವು ಪ್ರಕಾಶಮಾನ ಮಾಡಲಿ.

ವಾಯು : ಸರ್ವವ್ಯಾಪಕ ಯಜಮಾನನನ್ನು ರಕ್ಷಿಸಲಿ.

ಅಗ್ನಿ : ಅಗ್ನಿಯು ಪೂರ್ಣಜ್ಞಾನಿ, ಧನವುಳ್ಳ ದೇವತೆಗಳಿಗೂ, ಪಿತೃಗಳಿಗೂ ಪಶು, ಧನ ಅನುಗ್ರಹಿಸಲಿ.

ಸರಸ್ವತಿ : ದೇವತಾತ್ಮ ಮಾತೃರೂಪಳು, ಉದಕಗಳಿಂದ ಓಷಧಿಗಳು ಸಾರವಂತವಾಗುತ್ತವೆ. ಸಕಲ ಪಾಪಗಳನ್ನು ಉದಕಗಳು ಕೊಚ್ಚಿ ನಾಶಗೊಳಿಸಿದ ನಂತರ ಯಜಮಾನರು ಸ್ವರ್ಗ ಹತ್ತುತ್ತಾರೆ. ಯಜ್ಞಗಳಲ್ಲಿ ಕರೆದು ಪೂಜಿಸುತ್ತಾರೆ. ದೇವತೆಗಳ ಅಪೇಕ್ಷೆಗಳು ಫಲ ಪ್ರಾಪ್ತಿಗಾಗಿ ಕರೆಯುವ, ಹವಿಸ್ಸು ಅರ್ಪಿಸುವ ಯಜಮಾನರಿಗೆ ಅಪೇಕ್ಷಿತ ಫಲ ಕೊಡಲಿ. ಸ್ವಧಾ ರೂಪ ಹವಿಸ್ಸಿನಿಂದ, ಪಿತೃಗಳಿಂದ ಹರ್ಷ ಹೊಂದಿ ದರ್ಭಾಸೀನಳಾಗಿ ತೃಪ್ತಿ ಹೊಂದಲಿ. ಯಮನನ್ನು ಪೂಜಿಸುವವರನ್ನು ಅಗ್ನಿಯು ಆಲಸ್ಯ ರಹಿತನನ್ನಾಗಿ ಮಾಡಲಿ. ಪಾಪ ನಿವಾರಕ ಅಗ್ನಿಯ ಮುಂದೆ ಮಿತ್ರಾ, ಅದಿತಿ, ಸವಿತೃಗಳು ಯಜಮಾನನನ್ನು ಪಾಪರಹಿತ ಎಂದು ಪ್ರಕಟಿಸಲಿ.

ಪ್ರಾರ್ಥನೆಗಳು : ಯಜ್ಞವನ್ನು ಪ್ರದಕ್ಷಿಣಾಕಾರಣದಲ್ಲಿ ಸುತ್ತುತ್ತಾ ಸರಸ್ವತಿಯನ್ನು ಕರೆಯುವ ಪಿತೃಗಳಿಗೆ ಬೇಕಾದಷ್ಟು ಅನ್ನ, ಧನ, ವೃಷ್ಟಿ ನೀಡಲಿ. ಪುಷ್ಟಿಗಾಗಿ ಪ್ರಾರ್ಥಿಸಿದಾಗ ಆ ಉದಕಗಳು ಸಾರವಂತವಾಗಿ ನಮ್ಮನ್ನು ಶುದ್ಧಿಮಾಡಲಿ ಎಂದು ಪ್ರಾರ್ಥಿಸಿದ್ದಾರೆ.

ಯಮ ಯಮಿಯರ ಸಂವಾದ : ಅಂತರಿಕ್ಷಸ್ತ ಆದಿತ್ಯ ಮತ್ತು ಶರಣ್ಯುಗಳು ಯಮ ಯಮಿಯರಿಗೆ ಉತ್ಪನ್ನ ಸ್ಥಾನಗಳು. ಇವರು ಅಣ್ಣ ತಂಗಿಯರು. ಯಮನ ಪ್ರೇಮ ಸಂಪಾದನೆಗೆ ಪ್ರಜಾಪತಿಯನ್ನು ಯಮಿ ಪ್ರಾರ್ಥಿಸುತ್ತಾಳೆ. ಯಮನೊಂದಿಗೆ ವಿಸ್ತಾರ, ನಿರ್ಜನ ದ್ವೀಪಕ್ಕೆ ಬಂದಿದ್ದಾಳೆ.

ಯಮ : ದ್ಯುಲೋಕ ಧಾರಕ ಪುತ್ರರಾದ ದೇವತೆಗಳು ಏಕಾಯೋನಿ ಜಾತರಿಗೆ ''ಈ ಸಂಬಂಧ'' ನಿಷೇಧಿಸಿದ್ದಾರೆ.

ಯಮಿ : ಪ್ರೇಮಿಸಲು ಮುಂದಾಗುವಂತೆ ಪ್ರೇರಿಸುತ್ತಾಳೆ.

ಯಮ: ಈವರೆವಿಗೂ ಸತ್ಯ ವಾಕ್ಯವನ್ನೇ ಹೇಳುತ್ತಾ ಬಂದಿರುವುದರಿಂದ ಈಗ ಅಸತ್ಯ ಹೇಳಲಾಗುವುದಿಲ್ಲ. ದಾಂಪತ್ಯ ಸಾಧ್ಯವಿಲ್ಲ.

ಯಮಿ : ಈ ಪ್ರದೇಶದಲ್ಲಿ ಯಾರೂ ಅರಿಯಲಾರದೆಂದು ಪ್ರಕಟಿಸಲಾರರೆಂದು ದರ್ಮಾರ್ಥ ಕಾಮುಗಳನ್ನು ಇಬ್ಬರೂ ನಿರ್ವಹಿಸುವಂತಾಗಲಿ ಎಂದು ಪ್ರಕಟಿಸುತ್ತಾಳೆ.

ಯಮ : ದೇವ ನಿಯಮಿತ ಗೂಢಚಾರರು ಅವಿಶ್ರಾಂತವಾಗಿ ಸರ್ವತ್ರ ಸಂಚರಿಸುತ್ತಾ ಕಣ್ಣು ಮುಚ್ಚದೇ ಎಲ್ಲವನ್ನೂ ವೀಕ್ಷಿಸುತ್ತಿರುತ್ತಾರೆ. ಆದ್ದರಿಂದ ತನಗಿಂತ ಬೇರೆಯವರೊಡನೆ ಬೇಗ ಸಂಬಂಧ ಹೊಂದಿ ಕಾರ್ಯ ನಿರ್ವಹಿಸಲು ಸೂಚಿಸುತ್ತಾನೆ.

ಯಮಿ : ಅನೇಕ ರೀತಿಯಲ್ಲಿ ಪ್ರಾರ್ಥಿಸುತ್ತಾಳೆ.

ಯಮ : ಸೋದರಿಯನ್ನು ಕೂಡುವವನು ಪಾಪಿಷ್ಟ, ಖಂಡಿತಾ ಸೇರುವುದಿಲ್ಲ. ತನಗಿಂತ ಬೇರೊಬ್ಬ ಪುರುಷನೊಡನೆ ಸುಖಪಡಲು ಸೂಚಿಸುತ್ತಾನೆ.

ಯಮಿ : ಮಾನವರನ್ನು ನರಕ ಕೂಪದಲ್ಲಿ ಹಿಂಸಿಸುವ ಯಮನನ್ನು ದುರ್ಬಲನೆಂದು ಯಮನ ಮನಸ್ಸು ಹೃದಯ ಬಲಾಗದವನೆಂದು, ಯಮನು ಬೇರೊಬ್ಬ ಸ್ತ್ರೀಯನ್ನು ಅಪ್ಪಿಕೊಳ್ಳುವಂತೆ ಹೇಳುತ್ತಾಳೆ.

: ಯಮಿಯು ಬೇರೊಬ್ಬನನ್ನು ಆಲಂಗಿಸಲೆಂದು, ಅವರ ಪರಸ್ಪರ ಪ್ರೇಮ ವಶಳಾಗಲೆಂದು ಯಮನು ಸೂಚಿಸುತ್ತಾನೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಮೃತ್ಯುದಾತ

★ ಅಗ್ನಿಯು ಆ ಪಾತ್ರೆಯನ್ನು ಚಲಿಸುವಂತೆ ಮಾಡದಿರಲಿ. ಭಕ್ಷಕ, ಶಾಪನಾಶಕ ಯಮನ ಪ್ರಭುತ್ವ ಪ್ರದೇಶಕ್ಕೆ ಹೋಗುತ್ತಾನೆ. ಪಿತೃ ಪೂಜಾರ್ಥ ಜಾತವೇದಾಗ್ನಿಯು ವೀಕ್ಷಿಸುತ್ತಾ ಗೃಹದಿಂದಲೂ ಹೊರಟುಹೋಗುತ್ತಾನೆ. ಅಗ್ನಿ ದೇವತೆಗಳಿಗೂ ಪಿತೃಗಳಿಗೂ ಅವರವರ ನಿರ್ದಿಷ್ಟ ಹವಿಸ್ಸು ಅರ್ಪಿಸಿ ಅವರ ಭಾಗ ತಿಳಿಸಲಿ. ಜಾತವೇದಾಗ್ನಿಯು ದೇವತೆಗಳ ಹವಿಸ್ಸು ವಹಿಸುತ್ತಾ ಇಲ್ಲಿ ಎಲ್ಲರಿಗೂ ಗೋಚರವಾಗಲಿ. ಉತ್ಕೃಷ್ಟ ಸ್ಥಾನದಲ್ಲಿ ಯಜ್ಞ ಸ್ಥಾಪಿಸಲಿ. ಪೃಥ್ವಿಯು ಶೈತ್ಯಯುಕ್ತ, ಔಷಧಯುಕ್ತ ಸಂತೋಷಕಾರಕಳು. ವೃಕ್ಷಗಳಿಂದ ಕೂಡಿದವಳು. ಅಗ್ನಿಯನ್ನು ಸಂತೋಷಗೊಳಿಸುವವಳು.

★ ಯಜಮಾನನು ಅಗ್ನಿಯನ್ನು ಕರ್ಮಾರ್ತ ಸ್ಥಾಪಿಸಿ ಪ್ರಜ್ವಲಿಸುವಂತೆ ಮಾಡಿದ್ದಾನೆ. ಹವಿರಪೇಕ್ಷಿ ಪಿತೃಗಳನ್ನು ಹವಿರ್ಭಕ್ಷಣಕ್ಕೆ ಮತ್ತು ಪೂಜೆಗೆ ಅಗ್ನಿ ಕರೆಯುತ್ತಾನೆ. ಜಾತವೇದಾಗ್ನಿಯು ಚಿತೆಯಲ್ಲಿ ಅರ್ಪಿತ ಪ್ರೇತವನ್ನು ಪಡೆದು ಸ್ವಧಾ ರೂಪದಲ್ಲಿ ಉದಕಾದಿಗಳೊಂದಿಗೆ ಸಂಚರಿಸಿ ಆ ಪ್ರೇತವನ್ನು ಪಿತೃಗಳ ಬಳಿಗೆ ಕಳುಹಿಸುತ್ತದೆ. ಚಮಸ ಪಾತ್ರೆಯು ಸೋಮಾರ್ಹ ಪಿತೃಗಳಿಗೆ ಹವಿಸ್ಸಿನ ಪಾನಸಾಧನ. ಆ ಪಾತ್ರೆಯಿಂದ ಮರಣಧರ್ಮ ರಹಿತ ದೇವತೆಗಳು ಹರ್ಷಹೊಂದುತ್ತಾರೆ.

★ ದೇಹರಹಿತ ಪ್ರೇತವು ಪಿತೃ ಲೋಕ ತಲುಪಿದ ನಂತರ ಪಿತೃತ್ವ ಹೊಂದಿ ದೇವತೆಗಳ ಅಧೀನವಾಗುತ್ತದೆ. ಆ ಪ್ರೇತವು ಪಿತೃಲೋಕ ಜೀವನವನ್ನು ಹೊಂದಿ ದಗ್ಧಾವಶೇಷ ರೂಪ ಹೊಂದಿ ಸೇರಿಕೊಳ್ಳುತ್ತದೆ. ಉತ್ಪನ್ನ ಭಾಗಗಳನ್ನು ಅಗ್ನಿಯು ದಹಿಸಿ ಜ್ವಾಲಾಭಾಗ ಅರ್ಜಿ ಭಾಗವನ್ನು ಸಂಸ್ಕರಿಸಿ ಪ್ರೇತದ ಮಂಗಳಕರ ಭಾಗವನ್ನು ಸುಕೃತಿಗಳ ಸ್ಥಾನಕ್ಕೆ ವಹಿಸುತ್ತದೆ. ಕಾಗೆ, ನರಿ, ನಾಯಿ, ಇರುವೆಗಳಿಂದ ಕಚ್ಚಲ್ಪಟ್ಟ ಪ್ರದೇಶದ ಶರೀರವನ್ನು ಅಗ್ನಿಯು ದೋಷ ರಹಿತ ಮಾಡಿ ಆ ದೇಹವನ್ನು ಸಂಸ್ಕರಿಸುತ್ತದೆ. ಅಗ್ನಿಯು ಜ್ವಾಲಾರೂಪಿ ಕವಚವನ್ನು ಪ್ರೇತವು ಗೋಚರ್ಮ ಹಾಗೂ "ಸ್ಥೂಲ" ಆವೃತ ಆಗುವಂತೆ ಮಾಡಿದರೆ ಅಗ್ನಿಯು ಪ್ರೇತವನ್ನು ಸುತ್ತುವರಿಯುವುದಿಲ್ಲ. ಅಗ್ನಿಯು ಪ್ರೇತವನ್ನು ಸೂಡದೆ ಹಿಂಸಿಸದೆ ಶರೀರವನ್ನು , ಚರ್ಮವನ್ನು ಚದುರಿಸದೇ ಪಕ್ವ ಮಾಡಿ ಪಿತೃ ಲೋಕಕ್ಕೆ ಕಳುಹಿಸಲಿ ಎಂದು ಪ್ರಾರ್ಥಿಸಿದ್ದಾರೆ. ಪ್ರೇತದ ಚಕ್ಷುಗಳು ಸೂರ್ಯನಲ್ಲಿ, ಪ್ರಾಣವು ವಾಯುವಿನಲ್ಲಿ, ದೇಹದ ಅವಯುವಗಳು ಓಷಧಿಗಳಲ್ಲಿ ಸ್ಥಾಪಿತವಾಗಲಿ. ಪಿತೃ ದಹನ ಪ್ರದೇಶವನ್ನು ತಣ್ಣಗೆ ಮಾಡಿ ಆ ಪ್ರದೇಶವನ್ನು ಸಣ್ಣ ಪುಷ್ಕರಣೆ ಹಾಗೂ ಸುತ್ತಲೂ ಗರಿಕೆ ಬೆಳೆಯುವ ಪ್ರದೇಶವಾಗಿ ಮಾಡಲಿ.

ಬೇಡಿಕೆಗಳು : ಪುತ್ರಾದಿಗಳನ್ನು ಹಿಂಸಿಸದೆ ತಮ್ಮ ಮಾರ್ಗದಲ್ಲಿ ಹೋಗಲಿ. ದೀರ್ಘ ಆಯಸ್ಸು ಹೊಂದುವಂತಾಗಲಿ. ದೇವಯಾನ ಮಾರ್ಗ ಸಂಚರಿಸುವಂತಾಗಲಿ. ಹಿಂದಿನ ಕಾಲದ ಪುತ್ರನನ್ನು ಮುಂದಿನ ಕಾಲದ ಪುತ್ರನು ಅನುಸರಿಸುವಂತಾಗಲಿ. ತ್ವಷ್ಟನು ದೀರ್ಘಾಯುಸ್ಸು ಅನುಗ್ರಹಿಸಲಿ. ವಯಸ್ಸಿಗೆ ಅನುಗುಣವಾಗಿ ಕಾರ್ಯಮಾಡುತ್ತಾ ಜೀವನ ಅನುಭವಿಸುವಂತೆ ಮಾಡಲಿ. ದುಃಖ ರೋಗರಹಿತರಾಗುವಂತಾಗಲಿ. ಯಮನು ನಿವಾಸ ಕಲ್ಪಿಸಲಿ. ಪೃಥ್ವಿಯು ಭದ್ರ ಸ್ಥಾನ ಹೊಂದಲಿ. ಮೃತ್ಯು ದೇವತೆಯು ನಮ್ಮನ್ನು ರಕ್ಷಿಸಲಿ.

ಯಮನ ಸೂಚನೆ : ಸಂಬಂಧಿಗಳು ಮೃತ್ಯುವಿನ ಸ್ಥಾನವನ್ನು ತ್ಯಜಿಸಲಿ, ಮರಣ ನಿಶ್ಚಯಿಸಿರುವ ಪತ್ನಿಯು ನಿರ್ಧಾರ ಬದಲಿಸಿ ಗೃಹಕ್ಕೆ ಹೊರಟುಹೋಗಲಿ. ದೀರ್ಘಾಯುಸ್ಸು ಹೊಂದಿರಿ, ಪೂರ್ವ ದಿಕ್ಕಿಗೆ ಹೋಗಿರಿ. ದಿನದ ಸಂಧ್ಯಾ ಕಾಲದಲ್ಲಿ ಈ ಸ್ತುತಿ ವಾಕ್ಯವನ್ನು ಪ್ರಜಾಪತಿಯು ಕೇಳಲಿ. ನೂರಾರು ವರುಷ ತುಂಬು ಜೀವನಕ್ಕೆ ಯಾವ ಜೀವಂತ ಪುರುಷನು ಮೃತ್ಯು ಮಾರ್ಗ ಹಿಡಿಯದಿರಲಿ. ಪ್ರಜೆಗಳು ದನಗಳು ವೃದ್ಧಿಹೊಂದಿ ಪಾಪರಹಿತವಾಗಿ ಇರಲಿ. ಮೃತ್ಯುವು ಕಣ್ಣು ಕಿವಿಗಳುಳ್ಳದ್ದು. ಅವರಿಗೆ ತಮ್ಮದೇ ಆದ ಸ್ವಂತ ಮಾರ್ಗ ಇದೆ (ದೇವತೆಗಳ ಮಾರ್ಗ ಹೊರತುಪಡಿಸಿ).

ಪೃಥ್ವಿ : ಮಾತೃಸ್ವರೂಪಿ, ಸುಖಕಾರಕಗಳು, ಸ್ತ್ರೀರೂಪಿ, ಮಾನವರಿಗೆ ಸುಖದಾತಳು, ಆಶ್ರಯದಾತಳು. ಇಲ್ಲಿ ಜೀವಿಸುವವರ ಆಯಸ್ಸು ಅಹೋ ರಾತ್ರಿಗಳು ಪರಿವರ್ತನೆ ಆಗುತ್ತದೆ. ಋತುಗಳು ಪರಿವರ್ತನೆ ಆಗುತ್ತಿರುತ್ತವೆ. ಪೃಥ್ವಿಯು ಉದಾರ ದಾನ ಮಾಡುವವರಿಗೆ ಸುಖ ನೀಡುತ್ತಾಳೆ. ಮೃತ್ಯು ದೇವತೆಯ ಸಮೀಪ ರಕ್ಷಿಸಲು ಬೇಡಿದ್ದಾರೆ. ಮೇಲಿರುವ ಸಹಸ್ರಾರು ರೇಣುಗಳು ಮೃತನಿಗೆ ಆಶ್ರಯಸ್ಥಾನಿಗಳು, ಉದಕ ಸ್ಥಾನಿಗಳು ಆಗಲಿ. ಹಿಂಸೆ ಆಗದಿರಲಿ. ಈ ಲೋಕದಲ್ಲಿ ಪುತ್ರ ಪೌತ್ರಾದಿಗಳಿಂದ ಕೂಡಿ ಎಡರು ತೊಡರುಗಳನ್ನು ಜಯಿಸುತ್ತೇವೆ. ಶತ್ರುಗಳನ್ನು ಜಯಿಸುತ್ತೇವೆ. ಬಲ, ತೇಜಸ್ಸು, ವೀರ್ಯಕ್ಕಾಗಿ ಇಲ್ಲೇ ಇರಲು ಸಂಕಲ್ಪಿಸುತ್ತೇವೆ ಎಂದು ಉಳಿದವರು ಪ್ರತಿಜ್ಞೆ ಮಾಡುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಜಮದಗ್ನಿ ಭಾರ್ಗವರು

ದೇವತೆಗಳು ಮರಣರಹಿತರು, ಮಾನವರ ಸಕಲ ಸ್ಥಾನಗಳನ್ನು ಸೂಕ್ಷ್ಮ ದೃಷ್ಟಿಯಿಂದ ಸುತ್ತುವರಿದು ನೋಡುತ್ತಾರೆ.

ಮಿತ್ರಾವರುಣರು : ಇವರು ಅಧಿಕ ಬಲಶಾಲಿಗಳು, ಪ್ರಕಾಶಮಾನಿಗಳು, ಜ್ಞಾನಿಗಳು, ಕಾರ್ಯನೇತೃಗಳು, ಸೂರ್ಯನ ಕಿರಣಗಳೊಡನೆ ಸೇರಿ ತಮ್ಮ ಬಲದಿಂದಲೇ ಎಂಬಂತೆ ಕರ್ಮ ನೆರವೇರಿಸುತ್ತಾರೆ. ಯಜ್ಞವೇ ಧನವಾಗಿ ಉಳ್ಳವರು. ★ ಇಷ್ಟಾರ್ಥಸಿದ್ಧಿಗಾಗಿ ಶೀಘ್ರವಾಗಿ ಮಿತ್ರಾವರುಣರನ್ನು ಸೇರುವ ಇಚ್ಛೆಯಿಂದ ಯಜ್ಞಾರ್ಹವಾದ ಹವಿಸ್ಸನ್ನು ಸಂಸ್ಕರಿಸುತ್ತಾರೆ. ★ ಪ್ರೀತಿಕರ, ಪ್ರಶಂಸಾರ್ಹ ಗಾನರೂಪ ಸ್ತುತಿಗಳಿಂದ ಸ್ತುತಿಸುತ್ತಾರೆ. ಮಿತ್ರಾವರುಣರನ್ನು ಯಜ್ಞಾಭಿಮುಖವಾಗಿ ಕರೆಯುತ್ತಾರೆ. ಯಜಮಾನರು ಸಂತೋಷಕರ ಧನ ಪಡೆದು ಪ್ರಶಂಸಿತರಾಗಿ ದೇವದೂತರಾಗುತ್ತಾರೆ. ಆದಿತ್ಯನು ಸಕಲ ಲೋಕಗಳ ಮಧ್ಯೆ ಸ್ಥಾಪಿತನಾದವನು. ಅವನಿಂದ ರಕ್ಷಣೆ ಬೇಡಿದ್ದಾರೆ.

ಸೂರ್ಯ : ಸೂರ್ಯನು ಅದಿತಿ ಪುತ್ರ. ಹೊಂಬಣ್ಣದ ಜಯ ಸಾಧಕ, ವಸತಿದಾಯಕ, ಮರಣಧರ್ಮರಹಿತ, ಮೂರು ಲೋಕಕ್ಕೂ ಒಬ್ಬನೇ ಒಡೆಯ, ತಮೋ ನಿವಾರಣೆಗಾಗಿ ದೇವತೆಗಳಿಂದ ಕಳುಹಿಸಲ್ಪಟ್ಟ ದೇವತಾತ್ಮ. ಸೂರ್ಯನು ಅಧಿಕ ತೇಜಸ್ಸಿನಿಂದ, ಶಕ್ತಿಯಿಂದ ವೀರ್ಯಾಧಿಕ್ಯನಾಗಿರುವುದು ಸತ್ಯ. ಸ್ತೋತ್ರಗಳಿಂದ ಸ್ತುತಿಸಲ್ಪಡುವ ಪ್ರಕಾಶಮಾನಿ.

ಸೂರ್ಯಪ್ರಭಾದೇವಿ : ಅದೋಮುಖಿ ಪ್ರಸಾರವುಳ್ಳವಳು. ಪ್ರಕಾಶಯುಕ್ತಳು, ಸೌಂದರ್ಯವತಿ, ಬ್ರಹ್ಮಾಂಡದ ಮಧ್ಯೆ ಬೃಹತ್ ಸ್ಥಾನೀಯಳು, ದಶ ದಿಕ್ಕುಗಳಿಂದಲೂ ಬರುತ್ತಿರುವಾಗ ಚಿತ್ರ ವರ್ಣದ ಗೋವಿನಂತೆ ಕಾಣಲ್ಪಡುತ್ತಾಳೆ. ಗೋರೂಪ ದೇವಿಯು ಮರುತ್‌ಗಳಿಗೆ ಜನನಿ. ವಸುಗಳಿಗೆ ಪುತ್ರಿ. ವಾಕ್‌ನ್ನು ತಿಳಿಸಿಕೊಡುವ, ಉಚ್ಛರಿಸುವ ಸಮಸ್ತ ವಾಕ್‌ಗಳಿಂದ ಸೇವಿತಳು ಆದವಳು. ದೇವತೆಗಳ ಪೂಜೆಗೆ ಸಹಾಯಕಳು. ಗೋಮಾತೆಯನ್ನು ಪೂಜಿಸಲು ಹೇಳಿದ್ದಾರೆ.

ವಾಯು : ನಿಯಸ್ಸು, ಸೌಜ್ಞಿಕ ಅಶ್ವವುಳ್ಳವಳು. ಅಧ್ವರ್ಯುಯು ಅರ್ಪಿಸಿದ ಉತ್ತಮವಾದ ಸ್ತುತಿಗಳೊಡನೆ ಹವಿಸ್ಸನ್ನು ದಶಾಪವಿತ್ರದ ಮಧ್ಯೆ ಸೇರಿಸಲ್ಪಟ್ಟು ಶುದ್ಧ ಹಾಗೂ ಕ್ಷೀರಾದಿ ಎರಡು ಬಗೆಯ ಸೋಮಪಾನ ಮಾಡಲು ಈ ಯಜ್ಞಕ್ಕೆ ವಾಯುವು ಬರಲಿ ಎಂದು ಯಾಜ್ಞಿಕರು ಪ್ರಾರ್ಥಿಸಿದ್ದಾರೆ. ವಾಯು ಪವಮಾನರು ಸಕಲ ದಿಕ್ಕನ್ನು ವ್ಯಾಪಿಸಿರುವವರು.

ಅಶ್ವಿನಿ ದೇವತೆಗಳು : ಅನ್ನವನ್ನು ಧನವಾಗಿವುಳ್ಳವರು. ಜಮದಗ್ನಿ ಸ್ತುತಿತರು. ಸ್ತೋತ್ರ ಬೆಳೆಸುವವರು, ಪಠಿತವಾಗುವ ಅತಿಶಯ ಶಾಂತಿಯುತ ಸ್ತುತಿಗೆ ಅಭಿಮುಖ ಯಜಮಾನನ ಕರ್ಮಗಳಿಗೆ ಅಭಿಮುಖವಾಗಿ ದಯಮಾಡಿಸಲಿ ಎಂದು ಪ್ರಾರ್ಥಿಸಿದ್ದಾರೆ.

ಇಂದ್ರ : ಕೀರ್ತಿಯುತ, ಅಧಿಕ ಮಹಾತ್ಮದಿಂದ ಕೂಡಿದವನು, ದೇವತೆಗಳಿಗೆ ಹಿತೋಪೋದೇಶಕನಾಗಿ ಅವರ ಜೊತೆ ಸೇರಿ ಅಸುರರನ್ನು ನಾಶಮಾಡುವವನಾಗಿದ್ದಾನೆ ಎಂದಿದ್ದಾರೆ ಜಮದಗ್ನಿ ಭಾರ್ಗವರು.

### ಯಜಮಾನ ದಂಪತಿಗಳು

★ ಯಜಮಾನನು ದೇವಪೂಜಕ, ಸೋಮ ಹಿಂಡಿ ದಶಾಪವಿತ್ರದಲ್ಲಿ ಶುದ್ಧಿಮಾಡಿ ಕ್ಷೀರದ್ರಾಶ್ರಯಣ ದ್ರವ್ಯ ಸೇರಿಸಿ ದೇವತೆಗಳಿಗೆ ಅರ್ಪಿಸುತ್ತಾರೆ. ★ ಒಮ್ಮೆ ಯಾಗ ಮಾಡಿ ದನ ಹೊಂದಿದವ ಪುನಃ ಪುನಃ ಧನ ಪ್ರಾಪ್ತಿಗಾಗಿ ಸೋಮ, ಪುರೋಡಾಶ, ಸ್ತುತಿಗಳನ್ನು ಇಂದ್ರನಿಗೆ ಅರ್ಪಿಸಿ ಯಜ್ಞ ಮಾಡುತ್ತಾನೆ. ★ ಇಂತಹ ಹವಿರ್ದಾತರನ್ನು ಇಂದ್ರನು ಖಂಡಿತ ಪಾಪಗಳಿಂದ ರಕ್ಷಿಸುತ್ತಾನೆ. ★ ಅಂತಹವನಿಗೆ ಪುತ್ರ, ಪೌತ್ರರು ಪುಷ್ಕಲ ಕ್ಷೀರ ಕೊಡುವ ಧೇನು, ಅನ್ನ ಒದಗಿಸುತ್ತಾನೆ. ★ ಅಗ್ನಿಯು ಸ್ನೇಹಿತನಂತೆ ಇರುವವನು, ಅನೇಕರಿಗೆ ಬೇಕಾದವನು, ಯಜ್ಞಸಾಧಕ, ಧನ ಪ್ರಾಪ್ತಿಗಾಗಿ ಮಾನವರು ಸ್ತುತಿಸುತ್ತಾ, ಪೂಜಿಸುತ್ತಾ ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಾರೆ. ★ ಪೂಷ ದೇವನು ಧನಪ್ರದ, ದೇವತಾತ್ಮ, ಸರ್ವರಿಗೂ ಪೂಜ್ಯ, ಶತ್ರು ನಾಶಕ ★ ಅದಿತಿ ಪುತ್ರ, ಆದಿತ್ಯರಿಂದ ಕೊಡಲ್ಪಡುವ ಪಾಪರಹಿತ ಧನಕ್ಕಾಗಿ ಪೂಷನ್‌ನನ್ನು ಸಕಲ ಯಜಮಾನರು ಮನ:ಪೂರ್ವಕ ಶ್ರದ್ಧೆಯಿಂದ ಪೂರ್ಣವಾಗಿ ಸ್ತುತಿಸುತ್ತಾರೆ. ದೇವತೆಗಳನ್ನು ಪೂಜಿಸಿ ಹರ್ಷಗೊಳಿಸುತ್ತಾ ಇರುವ ಇವರನ್ನು ಯಾರೂ ಅತಿಕ್ರಮಿಸಲಾರರು. ಇವರು ಸ್ಥಾನಭ್ರಷ್ಟರು ಆಗುವುದಿಲ್ಲ, ಅಶ್ವ ಧನಯುಕ್ತನು, ಪುತ್ರ ಪೌತ್ರರಿಂದೊಡಗೂಡಿದವನು ಆಗುತ್ತಾನೆ. ಇವರು ಸಂಕಲ್ಪ ಮೀರದೆ ಪ್ರತಿಜ್ಞಾ ಭಂಗ ಮಾಡಿಕೊಳ್ಳದೆ ದೇವತೆಗಳಿಗೆ ಪ್ರಿಯವಾದ ಯಜ್ಞ ಮಾಡುತ್ತಾ ಅವರ ಅನುಗ್ರಹದಿಂದ ಸುಖವಾಗಿ ಇರುತ್ತಾರೆ. ಉತ್ತಮ ಸ್ತುತಿ ಅರ್ಪಿಸುತ್ತಾ ಸುಖಕರ ಅನ್ನ ಅರ್ಪಿಸುತ್ತಾ ಪೂಜೆ ಮಾಡುತ್ತಾ ಇರುತ್ತಾರೆ. ★ ಯಜ್ಞ ಆಚರಿಸುವ ಇಂತಹ ದಂಪತಿಗಳು ಸಮರ್ಥವಾಗಿ ಪುತ್ರ ಪೌತ್ರರೊಡನೆ ಪೂರ್ಣ ಆಯಸ್ಸನ್ನು ಪಡೆಯುತ್ತಾರೆ, ತಾವು ಅಪೇಕ್ಷಿಸಿದ್ದನ್ನು ಪಡೆಯುತ್ತಾರೆ. ಯಜಮಾನರು ವಿಷ್ಣುವಿನ ಅನುಗ್ರಹ, ಸುಖ ಫಲ ಪುಷ್ಪಗಳ ಸುಖ, ನದಿ ಪರ್ವತಗಳ ಸುಖ ಯಾಚಿಸುತ್ತಾರೆ. ಮಿತ್ರಾವರುಣರು, ಆರ್ಯಮರು ರಕ್ಷಕರಾಗಿರುವ ಯಜ್ಞ ನಿರ್ವಹಣ ಮಾರ್ಗವು ಯಜಮಾನರಿಗೆ ಸುಲಭವಾಗಿ ಸಿಗುತ್ತದೆ. ಪೂಷನ್‌ನು ಕಲ್ಯಾಣ ವಸ್ತುಗಳೊಡನೆ ವಿಸ್ತಾರ ಮಾರ್ಗಗಳನ್ನು ತೆರೆದು ದಯಮಾಡಿಸಲಿ ಎಂದು ಯಜಮಾನ ದಂಪತಿಗಳು ಪ್ರಾರ್ಥಿಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ನಚಿಕೇತ ಯಮರು

ಯಮನು ವಿವಸ್ವಂತನ ಪುತ್ರ, ತನ್ನ ಪರಿವಾರದೊಡನೆ ದೇವನಿರ್ಮಿತ ತನ್ನ ಸ್ಥಾನದಲ್ಲಿ ಸುಖವಾಗಿದ್ದಾನೆ. ವೇಣಪ್ರಿಯ, ಯಮನು ಸ್ತೋತ್ರಗಳಿಂದ ಪ್ರೀತನಾಗುವವನು. ವಾಜಶ್ರವನ ಪುತ್ರ ನಚಿಕೇತ. ವಾಜಶ್ರವನು ಮಾಡುತ್ತಿದ್ದ ಕಾರ್ಯಗಳನ್ನು ಕೋಪದಿಂದ ನೋಡುವವನು. ಪಿತೃ ಆಜ್ಞಾ ಪರಿಪಾಲನೆಗಾಗಿ ಮೃತ್ಯುವಿನ ಬಳಿಗೆ ಬರಲು ನಚಿಕೇತನು ಇಚ್ಛಿಸುತ್ತಾನೆ.

ಯಾರೂ ನೋಡಿರದ ಚಕ್ರಗಳಿಲ್ಲದೆ ಒಂದೇ ಅಚ್ಚಿನ ಎಲ್ಲೆಡೆಯಲ್ಲಿಯೂ ಸಂಚರಿಸುವಂತಹ ರಥದಲ್ಲಿ ನಚಿಕೇತನನು ಹೊರಟನು. ಯುಕ್ತಾ ಅಯುಕ್ತತೆಯನ್ನು ವಿವೇಚಿಸದೆ ನಿಶ್ಚಿತ ಮನಸ್ಸಿನಿಂದ ಯಮನಲ್ಲಿಗೆ ಬಂದಿದ್ದಾನೆ. ತಂದೆಯ ಹಿತೋಪದೇಶವು ಈತನೊಂದಿಗೆ ಬಂದಿದೆ. ಯಮನ ಬಳಿಗೆ ಕಳುಹಿಸಲು ಯಾವ ಪುರುಷನು ಪುತ್ರನನ್ನು ಪಡೆಯುವುದಿಲ್ಲ. ಕಳುಹಿಸಿದರೂ ಪುನಹ ಬರುವ ಉಪಾಯ ಹೇಳಿಕೊಟ್ಟಿರುವುದಿಲ್ಲ. ತಂದೆ ವಾಜಸ್ರವಸ್ಸಿಗೆ ಯಮನ ಮನೆಯಿಂದ ಹಿಂದಕ್ಕೆ ಬರುವ ಉಪಾಯ ಕಳುಹಿಸುವ ಮುಂಚೆ ತಿಳಿದಿತ್ತು. ಮಗನ ಪುನರಾಗಮನದ ಉಪಾಯವನ್ನು ನಿಶ್ಚಯಿಸಿದ್ದನು. ಅನಂತರ ನಚಿಕೇತನು ಆದಿತ್ಯನ ಮಹಿಮೆಯನ್ನು ತಿಳಿದು ಸ್ತೋತ್ರಗಳಿಂದ ಪರಿಚಾರಣ ಕರ್ಮಗಳಿಂದ ಪ್ರಸನ್ನಗೊಳಿಸಿಕೊಂಡನು. ಆದಿತ್ಯನು ಋಷಿಕುಮಾರನಿಗೆ ದೇಹ ಆತ್ಮಗಳಿಗೆ ಇರುವ ಬೇಧವನ್ನು ತಿಳಿಸಿ ವಿವೇಕ ಜ್ಞಾನ ಉಂಟುಮಾಡಿದನು.

ಈ ದೇಹವೇ ಚಕ್ರಗಳಿಲ್ಲದ ಒಂದು ರಥ. ಇದಕ್ಕೆ ಪ್ರಾಣವೇ ಆಧಾರ. ಪಾದಗಳ ಸಹಾಯದಿಂದ ಚಲಿಸುವುದು. ★ ಬ್ರಹ್ಮ ಸ್ವರೂಪ ಸೂರ್ಯನನ್ನು, ಬ್ರಹ್ಮಜ್ಞಾನವನ್ನು ಅರಿಯದೆ ತನ್ನ ಶರೀರದಲ್ಲೇ ಮುಕ್ತಿ ಪಡೆಯದೇ ಸಂಸಾರ, ಸಾಗರ ಶರೀರದಲ್ಲಿ ನರಳುತ್ತಾನೆ ಎಂಬ ದೇಹಾತ್ಮ ವಿವೇಕವನ್ನು ಭೋದಿಸಿದನು. ಶರೀರದಾರಿಯಾಗಿ ಜನರ ಮಧ್ಯದಲ್ಲಿ ಸಂಸಾರ ಕರ್ಮದಲ್ಲಿ ತೊಡಗಿ ಯಜ್ಞ ಮಾಡಿ ಆ ಕರ್ಮ ಫಲರೂಪವಾಗಿ ಸತ್ಯ, ಜ್ಞಾನ ಸ್ವರೂಪನು, ನಿರ್ಲಿಪ್ತನು ಆದ ಪರಮಾತ್ಮನನ್ನು ಶುದ್ಧ ಬುದ್ಧಿಯಿಂದ ತಿಳಿದು ಪರಮಾತ್ಮನನ್ನು ಸೇರುತ್ತಾನೆ. ಇವರು ಪರಮಾತ್ಮನ ಅಂಶವಾದ್ದರಿಂದ ತನಗೂ ಪರಮಾತ್ಮನಿಗೂ ತಾದಾತ್ಮ ಸಂಬಂಧವಿದೆ. ಎಲ್ಲರೂ ಪರಮಾತ್ಮನೇ ವಿನಹ ಬೇರೆ ಸ್ವತ್ತಿಲ್ಲ ಎನ್ನುತ್ತಾರೆ. ದೇಹ = ಆತ್ಮ = ಜ್ಞಾನ. ಸಾಮಾನ್ಯ ಜನರಿಗೆ ಆತ್ಮ ಎನ್ನುವ ಬೇರೆ ವಸ್ತುವಿದೆ ಎಂದು ತೋರುತ್ತದೆ. ಇದು ಮಿತ್ಯ. ಈ ಬುದ್ಧಿ ಬರುವುದಕ್ಕೆ ಮುಂಚೆಯೇ ಪ್ರಾಣಿಗಳ ಮನಸ್ಸು ಸೃಷ್ಟಿಸಲ್ಪಟ್ಟಿತ್ತು. ಮೊದಲು ಮನಸ್ಸು ತತ್ವಸೃಷ್ಟಿಯಾಗಿ ಅನಂತರ ಮನಸ್ಸಿನ ವ್ಯಾಪಾರ ಆಲೋಚನೆಗಳು, ವಿದ್ಯಾ ಬುದ್ಧಿ ಆತ್ಮ ಬೇರೆ ಎಂಬ ಬುದ್ಧಿ ಉಂಟಾಯಿತು. ಸೃಷ್ಟಿ ಪೂರ್ವದಲ್ಲಿ ಬ್ರಹ್ಮವು ಜಗದಾದಿಗಳು ಸಹ ಅವ್ಯಕ್ತಾವಸ್ಥೆಯಲ್ಲಿ ಇದ್ದವು. ನಂತರ ವ್ಯಕ್ತಾವಸ್ಥೆ ಅನಂತರ ಕಾರ್ಯಾವಸ್ಥೆಗೆ ಬಂದವು. ಇವೆಲ್ಲ ಬ್ರಹ್ಮ ಸೃಷ್ಟಿಯೇ. ಮೂಲ ಬ್ರಹ್ಮನೇ ವಿವಿಧಾಕಾರಗಳನ್ನು ವ್ಯಕ್ತ ಬ್ರಹ್ಮಭಾವ ಅರಿತ ಋಷಿ ನನಗಿಂತ ಬೇರೆ ಯಾವ ವಸ್ತುವು ಇಲ್ಲ ಎಂದು ವರ್ಣಿಸಿದ್ದಾನೆ. ಪ್ರಕಾಶಮಾನ ರಶ್ಮಿಗಳಿಂದ ನಿರ್ಮಿತ ಆದಿತ್ಯ ಮೊದಲು ದೇವತೆಗಳಿಂದ ನಿರ್ಮಿತನಾದನು. ಜನರು ಆದಿತ್ಯ ಪ್ರೀತ್ಯರ್ಥವಾಗಿ ಸ್ತೋತ್ರ, ಸ್ತುತಿ ವಾಕ್ಯಗಳಿಂದ ಅವನನ್ನು ಸ್ತುತಿಸುತ್ತಾರೆ. ★ **ಅಂಗುಷ್ಠ ಮಾತ್ರ, ಅಂತರಾತ್ಮ, ಪುರುಷ, ಹೃದಯದಲ್ಲಿ ಯಾವಾಗಲೂ ಇದ್ದಾನೆ. ಅವನನ್ನು ಶುದ್ಧ ನೆಂದು, ಅಮೃತನೆಂದು ತಿಳಿಯಬೇಕು.**

## ಯಮನು ಭಾವವೃತ್ತ ದೇವತೆಗಳಿಗೆ ಕೊಡುವ ಸೂಚನೆ

**1)** ಪಿತೃಗಳಲ್ಲಿ ಕೆಲವರು ಸೋಮವನ್ನು, ಕೆಲವರು ಘೃತವನ್ನು, ಕೆಲವರು ಮಧ್ಯವನ್ನು ಸೇವಿಸುತ್ತಾರೆ. ಅಂತವರ ಬಳಿಗೆ ನಿಯಮಾಧೀನ ಪ್ರೇತವು ಹೋಗಲೆಂದು ಯಮನು ಸೂಚಿಸುತ್ತಾನೆ. (2)ಪಾಪರಹಿತರಾಗಿ ತಪ್ಪಸ್ಸನ್ನಾಚರಿಸಿ ಉತ್ತಮ ಲೋಕ ಹೊಂದಿವರು (3) ಯಜ್ಞಯಗಾದಿ ತಪ್ಪಸ್ಸು ಆಚರಿಸಿ ಸ್ವರ್ಗ ಪಡೆದವರು (4) ಅಸಾಧ್ಯ ತಪಸ್ಸಿನಿಂದ ಬ್ರಹ್ಮೋಪಾಸನೆ ಮಾಡಿದವರು (5) ಪರಾಕ್ರಮ ಯುದ್ಧದಲ್ಲಿ ವೀರ ಸ್ವರ್ಗ ಗಳಿಸಿದವರು (6) ದಕ್ಷಿಣೆ, ದಾನಾದಿ ಯಾಗಾನುಷ್ಠಾನದಿಂದ ಉತ್ತಮಗೊಂಡವರು ನಿಯಮಾಧೀನ ಯಜ್ಞ ಮಾಡುತ್ತಾ ಸತ್ಯ ಕರ್ಮಾನುಷ್ಠಾನ ಮಾಡುವ ಉತ್ತಮ ತಪಸ್ಸು ಮಾಡಿ ಉತ್ತಮ ಲೋಕದಲ್ಲಿ ವಿಹರಿಸುವವರು ವಿಶಾಲ ದೃಷ್ಟಿಯ ಸರ್ವತೋಮುಖ ಜ್ಞಾನಿ ತಪ್ಪಸ್ಸಿನ ಮಹಿಮೆಯಿಂದಲೇ ಉತ್ಪನ್ನರಾದವರು ದ್ಯುಲೋಕವಾಸಿಗಳು ಆದ ಪಾತ್ರಗಳ ಬಳಿಗೆ ನಿಯಮಾಧೀನ ಪ್ರೇತವು ಹೋಗಲೆಂದು ಯಮನು ಆದೇಶಿಸಿದ್ದಾನೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ವೇದದ ಕಾಲದಿಂದಲೂ ಋಷಿಗಳು, ಮುನಿಗಳು, ಯಜಮಾನರು, ಯಾಜ್ಞಿಕರು, ಮುಂತಾದವರು ರಾಜ್ಯದ ಸಾರ್ವಭೌಮರಿಂದ ಹಿಡಿದು ರೈತನವರೆಗೆ ಎಲ್ಲರನ್ನೂ ಪ್ರಶಂಸಿದ್ದಾರೆ.

ರಾಜ್ಯ ಸ್ತುತಿ : ರಾಜನು ರಾಜ್ಯಪ್ರಾಪ್ತಿ ಉದ್ಯೋಗೋನ್ಮುಖನಾಗಲಿ. ಇಂದ್ರನು ಹವಿಸ್ಸಿನಿಂದ ಸಾಹಸವಂತ, ಕೀರ್ತಿವಂತನಾದಂತೆ ದೇವತೆಗಳಿಗೆ ಹವಿಸ್ಸು ಅರ್ಪಿಸುವ ಮೂಲಕ ರಾಜನು ಇಂದ್ರನಂತೆ ಆಗಲಿ.

ಸವಿತೃವು, ಸೋಮನು ಪೃಥ್ವಿಯಾದಿ ಭೂತಗಳು ರಾಜನು ಶಾಶ್ವತವಾಗಿ ವಿಶಿಷ್ಟವಾಗಿ ಇರುವಂತೆ ಸ್ಥಾಪಿಸಲಿ. ರಾಜನು ಶತ್ರುಗಳನ್ನು ಅವರ ಸೇನೆಗಳನ್ನು ಸೋಲಿಸಲಿ. ತುಚ್ಛವಾಗಿ ಕಾಣುವವರನ್ನು ಅವಹೇಳನ ಮಾಡುವವರನ್ನು ಸೋಲಿಸಲಿ. ಶತ್ರು ಹಂತಕನಾಗಿ ಪ್ರತಿಸ್ಪರ್ಧಿರಹಿತನಾಗಿ ಸೇವಾಕಾರ್ಯ ತತ್ಪರನಾಗಿ ಸರ್ವರಿಗೂ ಪ್ರಭುವಾಗಿ ರಾಜನು ಅತ್ಯುತ್ತಮ ಕೀರ್ತಿಶಾಲಿಯಾಗಲಿ ಎಂದು ಋಷಿಗಳು ಹಾರೈಸಿದ್ದಾರೆ.

### ರಾಜಾಶೀರ್ವಾದ

### ರಾಜ್ಯಕ್ಕೆ, ರಾಷ್ಟ್ರಕ್ಕೆ ಅಧಿಪತಿಯಾದವರಿಗೆ ಋಷಿಗಳ ಆಶೀರ್ವಾದ ಇಂತಿದೆ.

ರಾಜನು ಸ್ಥಿರಚಿತ್ತನಾಗಿ ಪ್ರಜೆಗಳಿಂದ ಅಪೇಕ್ಷಿತನಾಗಿ ಯಾವಾಗಲೂ ಸ್ವಾಮಿಯಾಗಿ ಪರ್ವತ ಜಗತ್ತುಗಳಂತೆ ಸ್ಥಿರವಾಗಿ, ಪ್ರಜಾಪಾಲಕನಾಗಿ ಇರಲಿ. ಶತ್ರುಗಳಿಂದ, ಅಹಿಂಸಿತನಾಗಿರಲಿ, ಸ್ಥಾನ ಹಾಗೂ ರಾಜ್ಯ ಭ್ರಷ್ಟನಾಗದೆ ರಾಜ್ಯವನ್ನು ಪಾಲಿಸಲಿ. ಸ್ವರ್ಗದಲ್ಲಿ ಇಂದ್ರನು ರಾಜ್ಯಭಾರ ಮಾಡಿದಂತೆ ಮಾಡಲಿ. ಬ್ರಹ್ಮಸ್ಪತಿಯು ರಾಜನಿಗೆ ಹಿತವಚನವನ್ನು ಹೇಳಿ ಸಂತಯಿಸಲಿ ಮತ್ತು ದಾನಾದಿ ಗುಣಯುಕ್ತನನ್ನಾಗಿ ಮಾಡಲಿ. ಹವಿಸ್ಸಿನಿಂದ ತೃಪ್ತರಾದ ಇಂದ್ರ,ವರುಣರು, ಅಗ್ನಿಯು ರಾಜ್ಯವನ್ನು ರಾಜನನ್ನು ಪ್ರಜೆಗಳನ್ನು ಎಲ್ಲರನ್ನೂ ಎಲ್ಲ ರೀತಿಯಿಂದಲೂ ರಕ್ಷಿಸಲಿ. ಯಜ್ಞಿಕರು ಹವಿಸ್ಸು ಪುರೋಡಾಶ ಸೋಮಗಳಿಂದ ಇಂದ್ರಾದಿ ದೇವತೆಗಳನ್ನು ತೃಪ್ತಿಪಡಿಸಲಿ. ರಾಜನಿಗೆ ಪ್ರಜೆಗಳು ರಾಜಭಕ್ತಿಯಿಂದ ಕರಾದಿ ರಾಜಾದಾಯಗಳನ್ನು ಕಾಲಕಾಲಕ್ಕೆ ತಲುಪಿಸಿ ಸಹಕರಿಸಿ ಪ್ರತಿಫಲ ರೂಪವಾಗಿ ಅನೇಕಾನೇಕ ಅನುಕೂಲತೆಗಳನ್ನು ಪಡೆಯಲಿ ಎಂದು ಆಶಿಸಿದ್ದಾರೆ.

### ಶ್ರದ್ಧಾಭಿಮಾನಿಗಳು

ಮಂತ್ರ ದಂಸಾರ ಋಷಿಯು ಶ್ರದ್ಧಾಭಿಮಾನಿ ದೇವತೆಯನ್ನು ಸ್ತುತಿಸುತ್ತಾನೆ. ಹೋಮಗಳಿಂದ ತೃಪ್ತಿಪಡಿಸಲು ಅಗ್ನಿಯನ್ನು ಪ್ರಜ್ವಲಿಸುತ್ತಾನೆ. ಶ್ರದ್ಧೆಯಿಂದ ಚರು ಪುರೋಡಾಶ ಅರ್ಪಿಸುವವರು, ಅರ್ಪಿಸಲು ಇಚ್ಛಿಸುವವರು ಶ್ರದ್ಧೆಯಿಂದ ಮಾಡುವವರು, ಮಾಡಬೇಕೆಂದಿರುವವರು, ಯಜ್ಞ ಮಾಡಿದವರು, ಅವರ ಸಂಬಂಧಿಗಳು ಭೋಗಾಪೇಕ್ಷಿಗಳೆಲ್ಲರೂ ಶ್ರದ್ದೆಯಿಂದ ಮಾಡಿದ ಕೆಲಸದಿಂದಾಗಿ ಅಪೇಕ್ಷಿಸುವುದನ್ನೂ ಧನವನ್ನು ಪಡೆಯುತ್ತಾರೆ. ಶ್ರದ್ಧಾ ದೇವತೆಯನ್ನು, ಪ್ರಾತ:ಕಾಲ, ಮಧ್ಯಾಹ್ನ, ಸಾಯಂಕಾಲದಲ್ಲಿ ಪ್ರಾರ್ಥಿಸಿ ಯಜ್ಞಕಾರ್ಯ ಹಾಗೂ ಈ ಲೋಕ ಶ್ರದ್ಧೆಯಿಂದ ಇರುವಂತಾಗಲಿ ಎಂದು ಹಾರೈಸಿದ್ದಾರೆ.

### ಋತ್ವಿಜರು

ಇಂದ್ರನ ಸ್ನೇಹಿತರು, ಮಧ್ಯಾಹ್ನ ಸಮಯದಲ್ಲಿ ಗೋವಿನ ಕೆಚ್ಚಲಿನಲ್ಲಿ ಪಕ್ವವಾದ ಹಾಲು, ಮೊಸರು ಅಗ್ನಿಯಲ್ಲಿ ಚೆನ್ನಾಗಿ ಪಕ್ವವಾದ ಹವಿಸ್ಸು ಸೋಮವನ್ನು ಇಂದ್ರನ ಉಪಚಾರಕ್ಕೆ ಸಿದ್ಧಪಡಿಸಿದ್ದಾರೆ. ಇವು ಇಂದ್ರಾರ್ಪಿತವಾಗಲಿ ಎಂದು ಕಾರ್ಯಕರ್ತರು ಸ್ತುತಿಸಲು ಕಾರ್ಯೋನ್ಮುಖರಾಗಲಿ. ಹವಿಸ್ಸು ಸಿದ್ಧಪಡಿಸಲಿ. ಹೋಮ ಹವನಾದಿಗಳನ್ನು ಮಾಡಲಿ. ಯಜ್ಞಯಾಗಾದಿಗಳನ್ನು ನೆರವೇರಿಸಲಿ. ಇಂದ್ರನನ್ನು ಸ್ತುತಿಸಿ ಮೇಲಿನಂತೆ ಸಂತೋಷಗೊಳಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯಲಿ ಎಂದಿದ್ದಾರೆ.

### ಧಾನಸ್ತುತಿ

ಋಷಿಗಳು ದೇವತೆಗಳ ತತ್ವಸ್ವರೂಪ, ವಿಶ್ವದ ರಹಸ್ಯ ತತ್ವಗಳು ದರ್ಶನ ಶಕ್ತಿಯನ್ನು ತಿಳಿದವರು. ಬ್ರಾಹ್ಮಣನಿಗೆ ಆರು ಕರ್ಮಗಳನ್ನು ಹೇಳಿದ್ದಾರೆ. (1) ಯಜನ : ತಾನೇ ಯಜ್ಞ ಮಾಡುವುದು (2) ಯಾಜನ : ಪುರೋಹಿತನಾಗಿ ಯಜ್ಞ ಮಾಡಿಸುವುದು (3) ಅಧ್ಯಯನ : ವೇದ ಶಾಸ್ತ್ರ ಪುರಾಣ ಇತಿಹಾಸಗಳನ್ನು ಓದುವುದು (4) ಅಧ್ಯಾಪನ : ಕಲಿತ ನಂತರ ಇತರರಿಗೆ ಈ ವಿದ್ಯೆಗಳನ್ನು ಕಲಿಸುವುದು (5) ದಾನ : ಸ್ವತ: ತಾನು ದಾನ ಮಾಡುವುದು (6)ಪ್ರತಿಗ್ರಹ : ದಾನಗಳನ್ನು ಸ್ವೀಕರಿಸುವುದು. ಕ್ಷತ್ರಿಯರಿಗೆ ಮತ್ತು ವೈಶ್ಯರಿಗೆ (1) ಯಜ್ಞ ಮಾಡಿಸುವುದು (2) ಅಧ್ಯಯನ (3) ದಾನ ಧರ್ಮಗಳನ್ನು ಮಾಡುವುದು.

ರಾಜನು ಗೋವು, ಧನ, ಧಾನ್ಯ, ರತ್ನಾದಿಗಳನ್ನು ದಾನ ಮಾಡಿದನು. ಅದರಿಂದ ಸೋಮಯಾಗ ಮಾಡಿ ಪಿತೃಗಳಿಗೆ ಸಂತೋಷಪಡಿಸಿ ಸಕಲ ಪ್ರಾಣಿಗಳೂ ಸಮೃದ್ಧಿಯಾಗಿ ಹಾಲು, ತುಪ್ಪ ಒದಗಿಸುತ್ತಾ ಗೋವುಗಳು ಸಂತೋಷವಾಗಿ ಇರಲಿ. ಕಾಲಕಾಲಕ್ಕೆ ಮಳೆ ಬೆಳೆಗಳಾಗಿ ಎಲ್ಲರೂ ಸುಖವಾಗಿ ಇರಲಿ ಎಂದು ಋಷಿಗಳೆಲ್ಲರೂ ಅನುಗ್ರಹಿಸಿ ಆಶೀರ್ವದಿಸಿದ್ದಾರೆ.

|| ಓಂ ಶ್ರೀ ಮಹಾಗಣಾಧಿಪತಯೇ ನಮ: ||

## ದಾನಸ್ತುತಿ

(1) ದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಪಡಿಸುವವರು. ದುಖ ಪಾಪಗಳಿಲ್ಲದೆ ದೇವಲೋಕ ಪ್ರಾಪ್ತವಾಗಿ ನೇವತೆಗಳೇ ಆಗುತ್ತಾರೆ. (2) ಭೂಮಿತಾಯಿ ಸಂತೋಷಿಸುತ್ತಾಳೆ. ನೀರು ಸಾರಯುತವಾಗಿ ಇರುತ್ತದೆ. ಬ್ರಹ್ಮವೇತ್ತರು ಯಜ್ಞಯಾಗಾದಿಗಳಿಂದ ಜ್ಞಾನಿಗಳಾಗಲು ಪ್ರಯತ್ನಿಸಬೇಕು. (3) ದಾತೃಗಳಿಗೆ ಲಭಿಸುವ ಉತ್ತಮ ಸ್ಥಾನ ಪ್ರಶಂಸೆ ದಕ್ಷಿಣೆಯ ಯಶಸ್ಸು ಲಭಿಸುತ್ತದೆ. (4) ಸೋಮಯಾಗ ಮಾಡುವವರಿಗೆ ಭೂಮಿಯಲ್ಲಿ ಚಂದನಾದಿ ಕಾಮ್ಯ ಪದಾರ್ಥಗಳು ಸೂರ್ಯಲೋಕದ ಭೋಗಗಳು, ಜರಾಮರಣರಾಹಿತ್ಯ, ದೀರ್ಘಾಯಸ್ಸು ಇಹಲೋಕದಲ್ಲೇ ಉಂಟಾಗುತ್ತದೆ. (5)ಹವಿಸ್ಸು ಸ್ತೋತ್ರಾರ್ಪಣೆ, ವ್ರತ ಇತ್ಯಾದಿ ದೇವ ಕಾರ್ಯ ನಿರತರಿಗೆ ಮುಪ್ಪಿಲ್ಲ, ಪಾಪವಿಲ್ಲ, ಶೋಕವಿಲ್ಲ ಎಂದು ಋಷಿಗಳು ಹೇಳಿದ್ದಾರೆ. ದಾತೃವನ್ನು ಪುತ್ರ, ಭೃತ್ಯಾದಿಗಳಿಂದ ಸಮೃದ್ಧರಾಗಿ ಬಾಳಲಿ ಎಂದು ಹಾರೈಸಿದ್ದಾರೆ.

**ಅನ್ನ, ಧನ, ದಾನ್ಯ :** ದೇವತೆಗಳಿಂದ ಮಾನವನು ಸೃಷ್ಟಿಯಾದುದು. ಹಸಿವೆಯನ್ನು ತಿಳಿಯದವನು ಮರಣ ಹೊಂದುತ್ತಾನೆ. ಧನ ದಾನ, ಅನ್ನ ದಾನ ಮಾಡಿದವನಿಗೆ ಧನದ ಕೊರತೆ ಆಗುವುದಿಲ್ಲ. ದಾನ ಮಾಡದ ಜಿಪುಣನಿಗೆ ಯಾರಿಂದಲೂ ಸುಖ, ಸಹಾಯ ದೊರೆಯುವುದಿಲ್ಲ. ದಾನಿಗಳಲ್ಲದವರಿಗೆ, ನಿರ್ದಯಿಗಳಿಗೆ ಯಾರೂ ಕನಿಕರಿಸುವುದಿಲ್ಲ, ಒಳ್ಳೆಯದನ್ನು ಬಯಸುವುದಿಲ್ಲ. ಅನ್ನದಾನಿ ಅಂದರೆ ಅನ್ನವಿಲ್ಲದೆ ಕೃಷನಾಗಿ ಮನೆಯ ಬಳಿ ಬಂದು ಯಾಚಿಸುವವನಿಗೆ ಅನ್ನ ನೀಡುವುದು. ಅನ್ನದಾನಿಗಳಿಗೆ ಯಜ್ಞ ಫಲ ದೊರೆಯುತ್ತದೆ. ಶತ್ರುಗಳು ಮಿತ್ರರಾಗುತ್ತಾರೆ. ಜೊತೆಯಲ್ಲಿರುವ ಸ್ನೇಹಿತನಿಗೆ ಅನ್ನ ನೀಡದವನು ಸ್ನೇಹಿತನೇ ಅಲ್ಲ. ಅನ್ನ, ಧನ, ಐಶ್ವರ್ಯವುಳ್ಳವರು ಯಾಚಕ ಅತಿಥಿಗಳಿಗೆ ದಾನಮಾಡಿದರೆ ಉತ್ತರೋತ್ತರ ವೃದ್ಧಿ ಹೊಂದುತ್ತಾರೆ. ಧನ ನಿಂತಲ್ಲೇ ನಿಲ್ಲುವುದಿಲ್ಲ. ಚಕ್ರದಂತೆ ಒಬ್ಬರಿಂದ ಒಬ್ಬರಿಗೆ ಸೇರುತ್ತಾ ಹೋಗುತ್ತದೆ.

**ನೇಗಿಲು :** ಕೃಷಿಕನಿಗೆ ಆಹಾರ ಒದಗಿಸುತ್ತದೆ. ಭೃತ್ಯನು ಯಜಮಾನನಿಗೆ, ಧನಾರ್ಜನೆಗೆ ಸಹಾಯಕನಾಗುತ್ತಾನೆ. ವೇದಾರ್ಥ ತಿಳಿದ ಬ್ರಾಹ್ಮಣ ತಿಳಿಯದವನಿಗಿಂತ ಶ್ರೇಷ್ಟ ದಾನ ಮಾಡುವುದನ್ನೇ ಎಲ್ಲರೂ ತಪ್ಪದೇ ಅನುಸರಿಸಬೇಕು ಎನ್ನುತ್ತಾರೆ ಋಷಿಗಳು.

**ದಕ್ಷಿಣೆಯ ದಾನ :** ಸೂರ್ಯನ ತೇಜಸ್ಸು ಜಗತ್ತನ್ನು ಕತ್ತಲೆಯಿಂದ ಮುಕ್ತ ಮಾಡಿದಾಗ ಯಜ್ಞಗಳು ಆರಂಭವಾಗುತ್ತವೆ. ಯಜ್ಞಗಳಲ್ಲಿ ವಾಯು, ಸೂರ್ಯ, ಇಂದ್ರರನ್ನು ಉದ್ದೇಶಿಸಿ ಏಳು ವಿಧ ಯಜ್ಞಗಳಲ್ಲಿ ಹವಿಸ್ಸು ಅರ್ಪಿಸಿ ಅಪಾರ ದಕ್ಷಿಣೆ ಕೊಡುವವನೇ ಅಧಿಕ ಗಣ್ಯ ಎನಿಸಿಕೊಳ್ಳುತ್ತಾನೆ. ಯಜ್ಞ ಯಜಮಾನರು ಯಜ್ಞಕ್ಕೆ ಅಂಗಭೂತವಾದ ಅಶ್ವ, ಗೋವು, ಸುವರ್ಣಾದಿ ದಾನಗಳನ್ನು ಮಾಡುವುದರಿಂದ (1) ಆದಿತ್ಯನನ್ನು (2) ಅಮೃತತ್ವವನ್ನು (3) ಆಯುಷ್ಯ ವೃದ್ಧಿಯನ್ನು ಹೊಂದುತ್ತಾರೆ. ದಕ್ಷಿಣೆಯು ಆತ್ಮಕ್ಕೆ ರಕ್ಷಾ ಕವಚ. ಯಾಗಕ್ಕೆ ಮುಂಚೆಯೇ ದಕ್ಷಿಣೆ ಅರ್ಪಿಸುವವನು ಅಗ್ನಿ, ವಾಯು, ಆದಿತ್ಯ ರೂಪವನ್ನು ನಾನಾ ಅವಶ್ಯಕತೆಯಿರುವ ಸಂಪತ್ತನ್ನು ಪಡೆಯುತ್ತಾನೆ. ಹಿಂಸೆ, ನೀಚಸ್ಥಿತಿ, ಶತ್ರು ಭಯಗಳಿಂದ ರಕ್ಷಣೆ ಒದಗಿಸುವುದು. ಪೂಜಿಸದ ದುಷ್ಟ ಯಜಮಾನರು ಪಾಪಗಳ ಭೀತಿಯಿಂದ ಯೋಗ್ಯ ಯಜ್ಞಾದಿಗಳಲ್ಲಿ ದಕ್ಷಿಣೆಯನ್ನು ಕೊಟ್ಟು ದೇವತೆಗಳನ್ನು ತೃಪ್ತಿಪಡಿಸುತ್ತಾರೆ. ದಕ್ಷಿಣೆಯು ದುಷ್ಟರಿಗೆ ಸೇರತಕ್ಕದ್ದಲ್ಲ. ದೇವತೆಗಳು ದಕ್ಷಿಣೆಯಿಂದ ತೃಪ್ತರಾಗಿ ಯಜ್ಞ ಯಜಮಾನರಿಗೆ ಅಧಿಕ ಶಕ್ತಿ, ರಥ, ಅಶ್ವ, ಗೋವುಗಳು, ಗೃಹ, ಶತ್ರುಗಳಿಂದ ರಕ್ಷಣೆಗಳನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದ್ದಾರೆ.

**ದಾನ, ಸ್ತುತಿ ಮತ್ತು ಫಲ :** ಆಕರ್ಷಕ ನೂರಾರು ಗೋವುಗಳನ್ನು ಋಷಿಗಳ ಕಾಲದಲ್ಲಿ ದಾನ ಮಾಡುತ್ತಿದ್ದರು. ಅಂತಹವರು ಅಂತರಿಕ್ಷದಲ್ಲೆಲ್ಲಾ ಸಂಚರಿಸುವ ಪಕ್ಷಿಯಂತೆ ಪೃಥ್ವಿಯ ಮೇಲೆ ದೇವತಾ ಅನುಗ್ರಹಕ್ಕೆ ಪಾತ್ರರಾಗಿರುತ್ತಿದ್ದರು. ಧರ್ಮ ಮಾರ್ಗವನ್ನು ಬಿಟ್ಟು ಜಿಪುಣರಾಗಬೇಡಿರೆಂದು ಹೇಳುತ್ತಾರೆ. ರಾಜನು ಪತ್ನಿ ಸಮೇತರಾಗಿ ಋಷಿಗಳಿಗೆ ನೂರು ಅಶ್ವಗಳು, ನಲವತ್ತು ಕುದುರೆಗಳು ಹತ್ತು ರಥಗಳು, ಸಾವಿರ ಹಸುಗಳು ವೃಷಭಗಳು ಹುಲ್ಲು ಮೊದಲಾದ ಆಹಾರ ಅನುಚರರುಗಳನ್ನು ಕೊಟ್ಟಿದ್ದಾನೆ. ಬಂಧು ಬಾಂದವರೆಲ್ಲ ಸೇರಿ ಈ ಉಡುಗೊರೆಯನ್ನು ಉಪಯೋಗಿಸಿ ಸೋಮಯಾಗ ವನ್ನು ಮಾಡಿ ಕೀರ್ತಿಶಾಲಿಗಳಾಗಿರಿ ಎಂದಿದ್ದಾನೆ. ದಾನ ಸ್ವೀಕರಿಸಿದ ಋಷಿಗಳು, ಪಿತೃಗಳು ಸ್ವರ್ಗದಲ್ಲಿ ಕೀರ್ತಿ ಪಡೆಯಲಿ ಎಂದು ಹಾರೈಸಿದ್ದಾರೆ.

**ಭಗ :** ಪೂಜ್ಯ, ಅದಿತಿ ಪುತ್ರ, ಧನಪ್ರಾಪಕ, ಸಕಲ ಶಕ್ತಿ ದಾರಕ, ಅಧಿಕ ಬಲವುಳ್ಳವನು, ಉತ್ತಮ ಯಜ್ಞ ಮಾರ್ಗದರ್ಶಕ, ಇವನ ಅನುಗ್ರಹದಿಂದ ಯಜಮಾನರು ಧನವಂತರಾಗುವರು. ಇಷ್ಟಾರ್ಥಗಳನ್ನು ಪಡೆಯುವರು. ಸ್ತುತಿಗಳನ್ನು ಫಲಪ್ರದವಾಗುವಂತೆ ಮಾಡುತ್ತಾರೆ.

**ದಧಿಕ್ರಾ ದೇವ :** ಅಶ್ವಾಭಿಮಾನಿ, ಶೀಘ್ರಗಾಮಿ, ಗಮನಶೀಲ, ತಿಳಿಯಬೇಕಾದದನ್ನೆಲ್ಲ ತಿಳಿದವನು. ಸೂರ್ಯ, ಆದಿತ್ಯ, ಉಷೋದೇವಿ, ವಸುಗಳು, ಆಂಗೀರಸುಗಳೊಡನೆ ಒಂದಾಗಿ ರಥದ ಮುಂಭಾಗದಲ್ಲಿ ಪ್ರಕಾಶಿಸುತ್ತಾ ಯಜ್ಞ ಮಾರ್ಗ ಅನುಸರಿಸುತ್ತಾನೆ. ದಧಿಕ್ರಾ ದೇವನು ಸಂಚಾರಯೋಗ್ಯ ಮಾರ್ಗವನ್ನು ಉದಕದೊಂದಿಗೆ ಸೇರಿಸಲಿ. ಸಮಸ್ತ ದೇವತೆಗಳು ಪಾಪಗಳನ್ನು ದೂರಮಾಡಿ ನಾಶಮಾಡಲಿ. ದೇಶದಲ್ಲಿ ದಾನಿಗಳು ದಿನ ದಿನವೂ ಹೆಚ್ಚಲಿ ಎಂದು ಹಾರೈಸಿದ್ದಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ವಿಶ್ವಕರ್ಮ

ವಿಶ್ವಕರ್ಮನು ಸರ್ವಜ್ಞ, ಹೋಮಸಂಪಾದಕ, ಮಂತ್ರರೂಪ ವಾಕ್ಯಗಳ ಒಡೆಯ, ಜಗನ್ನಿಯಾಮಕ, ಮನೋವೇಗದವ, ಉತ್ತಮ ಕರ್ಮಗಳನ್ನು ಉಳ್ಳವನು, ಎಲ್ಲರಿಗೂ ಮಂಗಳ ಉಂಟುಮಾಡುವವನು, ಧನವಂತ, ಸರ್ವಭೂತಗಳಲ್ಲೂ ಅಗ್ನಿ ರೂಪದಿಂದ ವ್ಯಾಪಿಸಿರುವವನು. ಸಕಲ ಲೋಕಗಳನ್ನು ಆಹುತಿ ರೂಪದಲ್ಲಿ ಅರ್ಪಿಸಿದವನು. ಯಾಜ್ಞಿಕರೆಲ್ಲರನ್ನೂ ಉತ್ಪಾದಿಸಿದವನು ಆಗಿದ್ದಾನೆ. ಈಶ್ವರನು ಸಕಲ ಲೋಕವನ್ನು ತನ್ನ ಸರ್ವತ್ರ ಪ್ರಸರಿತ ಕಣ್ಣುಗಳಿಂದ ನೋಡುವವನು. ಸರ್ವತ್ರ ಪ್ರಸರಿಸುವ ಮುಖವುಳ್ಳವನು. ನೀಡಿದ ಬಾಹು ಹಾಗು ಪಾದಗಳುಳ್ಳವನು, ತನ್ನ ಬಾಹುಗಳಿಂದ ದ್ಯುಲೋಕವನ್ನು ಪಾದಗಳಿಂದ ಭೂಲೋಕ, ದ್ಯಾವಾ ಪೃಥ್ವಿಗಳನ್ನು ಉತ್ಪನ್ನ ಮಾಡುತ್ತಾನೆ. ವಿಶ್ವಕರ್ಮನು ಚಕ್ಷುರಾದಿ ಇಂದ್ರಿಯ ಪಾಲಕ, ಆತ್ಮಾಭಿಮಾನಿ, ಧೀರ, ವಿಶೇಷ ಪ್ರಜ್ಞೆವುಳ್ಳ ಮನಸ್ಸಿನವನು. ಸಕಲ ಜಗತ್ತಿನ ಶ್ರೇಷ್ಟ ನಿರ್ಮಾಪಕ. ಎಲ್ಲರನ್ನೂ ಸೂಕ್ಷ್ಮವಾಗಿ ನೋಡುವವನು, ಪಾಲಕ, ಉತ್ಪಾದಕ, ನಿರ್ಮಾತೃ, ಸಕಲ ತೇಜೋಸ್ಥಾನಗಳನ್ನು ತಿಳಿದವನು. ಅಗ್ನಿಯಾದಿ ದೇವತೆಗಳಿಗೆ ನಾಮ ನಿರ್ದೇಶಕ.

ದ್ಯುಲೋಕ, ಪೃಥ್ವಿಲೋಕ ಅಸುರರಿಗಿಂತ ಹಿರಿದಾದ ರಹಸ್ಯ ತತ್ವ ಈಶ್ವರ ಸ್ವರೂಪ ತಿಳಿಯಲು ಭೂತ ಜಾತಗಳು ವಿಶ್ವಕರ್ಮನನ್ನು ಸಮೀಪಿಸುತ್ತವೆ. ಉದಕಗಳು ಜನಿಸಿದ ಇಂದ್ರಾದಿ ದೇವತೆಗಳು ಪರಸ್ಪರ ದರ್ಶನ ಮಾಡಿದ ವಿವರ ತಿಳಿಯಲು ಅಪೇಕ್ಷಿಸುತ್ತಾರೆ. ಸಕಲ ದೇವತೆಗಳೂ ಕೂಡಿಕೊಂಡಿರುವ ವಿಶ್ವಕರ್ಮ ರೂಪದ ಸಪರ್ಣ ಅಂಡವು ಗರ್ಭವನ್ನು ಸೃಷ್ಟಿಪೂರ್ವದಲ್ಲಿ ಧರಿಸಿ ಉದಕ ಸ್ಥಾಪಿತವಾಯಿತು. ಅತ್ಯಂತ ಪ್ರಾಚೀನವಾದ ಆ ಉದಕದಲ್ಲಿ ದ್ಯಾವಾ ಪೃಥ್ವಿಗಳು ವಿಸ್ತಾರವಾಗಿ ತೇಲುತ್ತವೆ. ನಂತರ ದಿಗಂತಗಳು, ಜ್ಯೋತಿ ಸ್ವರೂಪಗಳು, ಸಂಕಲ್ಪಗಳು ಈ ವಿಶ್ವಕರ್ಮನಲ್ಲಿ ಸಕಲ ಭೂತಜಾತಗಳು ಸ್ಥಾಪಿತವಾದವು. ಈ ಅದ್ವಿತೀಯ ಬ್ರಹ್ಮಾಂಡವು ಜನ್ಮರಹಿತವಾದ ಮೂಲ ತತ್ವದ ನಾಭಿಯಲ್ಲಿ ಸ್ಥಾಪಿತವಾಗಿದೆ ಅಂದರೆ ಸಕಲ ಗರ್ಭಬಂಧಕವಾದ ಉದಕಗಳಲ್ಲಿ ಅದ್ವಿತೀಯವಾದ ಬ್ರಹ್ಮಾಂಡ ಸ್ಥಾಪಿತವಾಗಿದೆ. ಈ ಭೂತಜಾತಗಳನ್ನು ಉತ್ಪತ್ತಿ ಮಾಡಿದ ವಿಶ್ವಕರ್ಮನನ್ನು ಯಾರೂ ಅರಿಯಲಾರರು ಎಂದಿದ್ದಾರೆ.

ಮೂಲ ಕಾರಣಗಳಿಂದ ಉತ್ಪನ್ನವಾದ ಭೂಮಿ, ವನ, ವೃಕ್ಷ, ದ್ಯಾವಾ ಪೃಥ್ವಿ ಇವುಗಳ ನಿರ್ಮಾಣದ ಆಧಾರ, ಮೂಲ ಕಾರಣ, ಪ್ರಕಾಶ ಸ್ವರೂಪ ಸತ್ಯಗಳನ್ನು ಪ್ರಾಜ್ಞರು ಧ್ಯಾನ ರೂಪದಿಂದ ಅರಿಯಲು, ವಿಮರ್ಶಿಸಲು ಋಷಿಗಳು ಆಶಿಸುತ್ತಾರೆ. ಮಿತ್ರರಾದ ಋಷಿಗಳಿಗೆ ವಿಶ್ವಕರ್ಮನು ಉತ್ಕೃಷ್ಟ, ಮಧ್ಯಮ, ನಿಕೃಷ್ಟ ಶರೀರ ವಿಶೇಷಗಳನ್ನೆಲ್ಲಾ ಹವಿಸ್ಸು ಸ್ವೀಕರಿಸುವ ಕಾಲದಲ್ಲಿ ವಿಶ್ವಕರ್ಮನು ಕೊಡಲಿ. ತಾನೂ ಪುಷ್ಟಿಹೊಂದಲಿ ಎಂದು ಆಶಿಸಿದ್ದಾರೆ.

ಸಪ್ತ ಋಷಿಗಳು ವಿಶ್ವಕರ್ಮನನ್ನು ಆದಿತ್ಯನೆಂದೇ ಭಾವಿಸಿದ್ದಾರೆ. ಚೈತನ್ಯರಹಿತ ಹಾಗೂ ಚೈತನ್ಯಯುತ ಲೋಕದ ಸಕಲ ಪ್ರಾಣಿಗಳನ್ನು ಸಂಸ್ಕರಿಸಲು ವಿಶ್ವಕರ್ಮನನ್ನು ಸ್ತುತಿಸುವಂತೆ ಅಧಿಕವಾಗಿ ಪೂಜಿಸುವಂತೆ ಯಜ್ಞ ಕರ್ತರಿಗೆ ಪ್ರಾಚೀನ ಋಷಿಗಳು ಸೂಚಿಸಿದ್ದಾರೆ. ಕರ್ಮಸ್ಥ ಯಾಜ್ಞಿಕರಿಗೆ ವಿಶ್ವಕರ್ಮನು ಸ್ವರ್ಗ ಪ್ರೇರಕನಾಗಿ ಯಜ್ಞ ರಕ್ಷಿಸಲಿ. ಕರ್ಮ ರಹಿತರನ್ನು ಮೋಹಪಾಶದಿಂದ ಆವೃತರಾಗುವಂತೆ ಮಾಡಲಿ.

ಪ್ರತ್ಯೇಕತೆ ಹೊಂದಿರುವ ಅನೇಕ ದೇವರುಗಳಿಂದ ಬೇರೆ ಬೇರೆಯಾದ ಪರತತ್ವಗಳು ಇರುತ್ತವೆ. ಈ ಪರತತ್ವ ಜ್ಞಾನ ಇಲ್ಲದೆ ಅಜ್ಞಾನದಿಂದ ಇರುವವರು ಭೋಗ ಪ್ರಧಾನವಾದ, ಕಾಮ್ಯಪ್ರಧಾನವಾದ ಅಭಿಮಾನಪೂರ್ವಕವಾದ ಕರ್ಮ ವ್ಯವಹಾರಗಳಲ್ಲಿ ತೊಡಗಿರುತ್ತಾರೆ. ಭೋಗಾಸಕ್ತರಾಗಿರುವವರೇ, ಅಜ್ಞಾನಿಗಳೇ ಜಗತ್ತಿನಲ್ಲಿ ಅಧಿಕವಾಗಿದ್ದಾರೆ ಎನ್ನುತ್ತಾರೆ.

ಉಷೋದೇವಿಯರು : ಕತ್ತಲು ನಾಶಮಾಡಿ, ಗೋವು, ಅಶ್ವ, ವೀರಪುತ್ರರು, ಕಲ್ಯಾಣಗಳಿಂದ ರಕ್ಷಿಸಲಿ. ವೃಷ್ಟಿ ರೂಪ ಉದಕ ಕರೆಯಲಿ. ಮಂಗಳದಾಯಿಕೆ , ವೇಗಗಾಮಿಯಾದ ಉಷೋದೇವಿಯು ಯಜ್ಞಾಭಿಮುಖವಾಗಿ ಬರಲಿ. ದಧಿಕ್ರಾ ದೇವತೆ, ಅಶ್ವಿನಿ ದೇವತೆ, ಪ್ರಜ್ವಲಿತ ಅಗ್ನಿ, ಭಗ, ಇಂದ್ರ, ಪೂಷಾ, ವಿಷ್ಣು, ಬ್ರಹ್ಮಣಸ್ಪತಿ, ಆದಿತ್ಯ, ಪೃಥ್ವಿ ಅಬ್‌ದೇವತೆ, ಸೂರ್ಯ ಈ ಎಲ್ಲರನ್ನು ರಕ್ಷಣಾರ್ಥವಾಗಿ ಆಹ್ವಾನಿಸಿದ್ದಾರೆ. ಆಹ್ವಾನಿತ ಇವರು ಇಳಾ, ಆಹ್ವಾನವನ್ನು ಕೇಳಿ ದರ್ಭಾಸೀನರಾಗುತ್ತಾರೆ. ಅಗ್ನಿಯು ಪ್ರಶಂಸಿತನಾಗುತ್ತಾನೆ. ವರುಣನು ಸ್ತುತಿಯಿಂದ ಉತ್ತೇಜಿತನಾಗುತ್ತಾನೆ. ಉಷ, ಸೂರ್ಯ, ವಾಗ್ದೇವಿಯರು ಸ್ತುತಿತರಾಗುತ್ತಾರೆ. ಎಲ್ಲರನ್ನೂ ಸ್ತುತಿಸಿ ಪೂಜಿಸಿ ಆರಾಧಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

## ಆದಿ ಪುರಷ (ಪುರುಷ ಸೂಕ್ತ)

ಆದಿಪುರುಷನು ಅಸಂಖ್ಯಾತ ತಲೆಗಳು, ಕಣ್ಣುಗಳು, ಕಾಲುಗಳು, ಬ್ರಹ್ಮಾಂಡರೂಪ ವಿಶ್ವವನ್ನು, ಸಕಲ ದಿಕ್ಕುಗಳನ್ನೂ ಸುತ್ತುವರಿದು ಅದಕ್ಕಿಂತಲೂ ಹತ್ತು ಅಂಗುಲ ಅತಿಕ್ರಮಿಸಿ ನಿಂತಿದ್ದಾನೆ. ಆದಿಪುರುಷನು ಅಮೃತತ್ವಕ್ಕೆ ಒಡೆಯ. ನಮಗೆ ಗೋಚರನಾಗದವನು, ಹಿಂದೆ, ಇಂದು, ಮುಂದೆ ನಮಗೆ ಕಂಡಿದ್ದ, ಕಾಣುತ್ತಿರುವ, ಮುಂದೆ ಕಾಣುವ ಎಲ್ಲವೂ ಸಹ ಈಶ್ವರಾಂಶವಾದ ಆದಿ ಪುರುಷನದೇ ಆಗಿದೆ. ಅಂತೆಯೇ ಹಿಂದೆ ಇದ್ದ ಲೋಕಗಳು ಈಗ ಇರುವ ಲೋಕಗಳು, ಮುಂದೆ ಬರುವ ಲೋಕಗಳು, ಆದಿತ್ಯನ ಸಾಮರ್ಥ್ಯದಿಂದಲೇ ಆಗುತ್ತವೆ.

ನಮಗೆ ಗೋಚರವಾಗುತ್ತಿರುವುದು ಎಲ್ಲವೂ ಕೇವಲ 1/4 ಭಾಗ ಮಾತ್ರ. ಉಳಿದ 3/4 ಭಾಗ ಅಗೋಚರವಾಗಿಯೇ ಇದೆ. ಆದಿ ಪುರುಷನು ಸಂಸಾರಾತೀತನಾಗಿ ಸ್ವಪ್ರಕಾಶದಿಂದ ಯುಕ್ತನಾಗಿ ದಿವ್ಯ ಲೋಕದಲ್ಲಿ ಯಾವ ಬದಲಾವಣೆಯೂ ಹೊಂದದೆ ನಿಜಸ್ಥಿತಿಯಲ್ಲಿ ಇರುವವನು. ಈ ಪುರುಷನು ವ್ಯಕ್ತಿ ರೂಪ ಹೊಂದಿ ಹಸಿವು, ಬಾಯಾರಿಕೆಯುಕ್ತ ಪ್ರಾಣ ರೂಪದಲ್ಲಿ ಹಾಗೂ ಅಚೇತನ ನಾನಾ ರೂಪಗಳಲ್ಲಿ ವ್ಯಾಪಿಸಿದ್ದಾನೆ. ಈ ಬ್ರಹ್ಮಾಂಡವು ಆದಿ ಪುರುಷನಿಂದ ಉತ್ಪನ್ನವಾಗಿ ಮೆರೆಯುತ್ತಿದೆ. ಮೊದಲು ವಿರಾಟ ಪುರುಷ ಉತ್ಪನ್ನನಾದನು. ಅನಂತರ ಜಗತ್ತಿನ ಸೃಷ್ಟಿ ಆಯಿತು. ಅನಂತರ ಅವನ ಅಂಶಗಳಾದ ದೇವತೆಗಳ ಉತ್ಪನ್ನವಾಯಿತು. ಈ ವಿರಾಟ್ ದೇಹವನ್ನು ಅನುಸರಿಸಿ ದೇಹಾಭಿಮಾನಿ ಪುರುಷನು ಚೇತನಾಚೇತನ ರೂಪವಾಗಿ ಕಾಣಿಸಿಕೊಂಡನು.

ದೇವ ತಿರ್ಯಙ್ಮನುಷ್ಯ ರೂಪಗಳನ್ನು ಧರಿಸಿದನು. ಜಗತ್ ಸೃಷ್ಟಿಯ ನಂತರ ಪುರುಷ ಅಂಗಗಳಾದ ದೇವತೆಗಳು ಉತ್ಪನ್ನವಾಯಿತು. ಪುರುಷ ಸಂಜ್ಞಾತ ಹವಿಸ್ಸಿನಿಂದ ಯಜ್ಞ ನೆರವೇರಿಸಿದರು. ಈ ಯಜ್ಞಕ್ಕೆ ವಸಂತ ಋತು ತುಪ್ಪವಾಯಿತು. ಗ್ರೀಷ್ಮ ಋತು ಸಮಿತ್ತಾಗಿ, ಶಿಶಿರ ಋತು ಹವಿಸ್ಸಾಯಿತು. ಯಜ್ಞ ಸಾಧನ ಭೂತ ವಿರಾಟ್ ಪುರುಷನನ್ನು ದರ್ಭಾಸನದ ಮೇಲೆ ಕೂರಿಸಿ ಪ್ರೋಕ್ಷಣೆ ಮಾಡಿದರು. ನಂತರ ಯೂಪಸ್ತಂಭಕ್ಕೆ ಈ ಪುರುಷನನ್ನು ಕಟ್ಟಿದರು. ವಿರಾಟ್ ಪಶು ರೂಪದ ಪಶುವನ್ನು ಆಹುತಿ ಅರ್ಪಿಸಿ ದೇವತೆಗಳು ಸಾಧ್ಯರು, ಋಷಿಗಳು ಯಾಗಮಾಡಿದರು. ಈ ಯಜ್ಞದಿಂದ ದಧಿ ಮಿಶ್ರಿತ ಆಜ್ಯ ನಂತರ ಪಕ್ಷ್ಯಾದಿಗಳು ಅನಂತರ ಅರಣ್ಯ ಮೃಗಗಳು ಗ್ರಾಮವಾಸಿಗಳಾದ ಅಶ್ವಗಳು, ಪುರುಷನು ಉತ್ಪನ್ನರಾದರು. ಋಗ್ / ಯಜಸ್ / ಸಾಮಗಳು ಗಾಯತ್ರಿ ಆದಿ ಛಂದಸ್ಸುಗಳು ಉತ್ಪನ್ನವಾದವು. ಅನಂತರ ಅಶ್ವಗಳು, ಇತರ ಪ್ರಾಣಿಗಳು, ಗೋವುಗಳು, ಆಡು, ಕುರಿ, ಇತ್ಯಾದಿ ಪ್ರಾಣಿಗಳು ಉತ್ಪನ್ನವಾದವು. ಯಜ್ಞ ಪುರುಷನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು, ತೊಡೆಯಿಂದ ವೈಶ್ಯರು, ಪಾದಗಳಿಂದ ಶೂದ್ರರು ಉತ್ಪನ್ನರಾದರು. ವಿರಾಟ್ ಪುರುಷನ ಹೊಕ್ಕಳಿಂದ ಅಂತರಿಕ್ಷ, ಶಿರಸ್ಸಿನಿಂದ ದ್ಯುಲೋಕ, ಪಾದಗಳಿಂದ ಭೂಮಿ, ಕಿವಿಗಳಿಂದ ದಿಕ್ಕುಗಳೂ ಉತ್ಪನ್ನವಾದವು. ದೇಹಗಳು ಇದೇ ರೀತಿ ಸಕಲ ಲೋಕಗಳು ವಿರಾಟ್ ಪುರುಷನ ದೇಹದಿಂದ ನಿರ್ಮಿತವಾಯಿತು. ಯಜ್ಞಕ್ಕೆ ಏಳು ಛಂದಸ್ಸುಗಳು ಪರಿಧಿಗಳಾಗಿ 21 ತತ್ವಗಳು ಸಮಿತ್ತುಗಳಾದವು. ದೇವತೆಗಳು ಮಾನಸ ಸಂಕಲ್ಪಿತ ರೂಪದ ಯಜ್ಞದಿಂದ ಪ್ರಜಾಪತಿಯನ್ನು ಪೂಜಿಸಿದರು. ಈ ಯಜ್ಞ ಪ್ರಾಕಾರಗಳು ಮುಖ್ಯ ಧರ್ಮಗಳಾಗಿ ಪ್ರಸಿದ್ಧವಾದವು. ಪ್ರಧಾನ ದೇವತೆಗಳು, ಸಾಧ್ಯರು, ವಾಸಮಾಡುವ ಸ್ವರ್ಗವನ್ನೂ ವಿರಾಟ್ ಪುರುಷನನ್ನು ಉಪಾಸನೆ ಮಾಡುವವನು ಮಹಾತ್ಮ್ಯವನ್ನು ಪಡೆಯುತ್ತಾನೆ. ಮನಸ್ಸಿನಿಂದ ಚಂದ್ರನು ಹುಟ್ಟಿದನು, ಕಣ್ಣಿನಿಂದ ಸೂರ್ಯನು ಹುಟ್ಟಿದನು, ಇಂದ್ರ ಅಗ್ನಿ ಬಾಯಿಯಿಂದ ಮೂಡಿ ಬಂದರು. ಪ್ರಾಣದಿಂದ ವಾಯುದೇವನ ಜನನವಾಯಿತು. ಹೊಕ್ಕಳದಿಂದ ಆಕಾಶ ಹುಟ್ಟಿತು. ತಲೆಯಿಂದ ಸ್ವರ್ಗ ನಿರ್ಮಾಣವಾಯಿತು. ಕಾಲುಗಳಿಂದ ಭೂಮಿ, ಕಿವಿಯಿಂದ ದಿಕ್ಕುಗಳು, ಹೀಗೆ ಎಲ್ಲಾ ಲೋಕಗಳಿಗೂ ಭಗವಂತನ ಅಂಗಗಳೇ ಸೃಷ್ಟಿ ಕಾರಣ ಎಂದು ಅನುಸಂಧಾನ ಮಾಡಿದರು. ಪಾದ ಭೂಮಿ, ಶಿರಸ್ಸು ಸ್ವರ್ಗ, ನಾಭಿ ಅಂತರಿಕ್ಷ, ಸ್ತೋತ್ರ ದಿಕ್ ದೇವತೆಗಳು, ಅಂತರಿಕ್ಷ ಗಣಪತಿ.

ಈ ಮಾನಸ ಯಜ್ಞಕ್ಕೆ ಸಪ್ತ ದಾತುಗಳು ಏಳು ಪರಿಧಿಗಳಾದವು. ಆದಿದೈವದ ಅನುಸಂಧಾನದಲ್ಲಿ ಗಾಯತ್ರಿ ಆದಿ ಏಳು ಛಂದಸ್ಸುಗಳು, ಏಳು ಪರಿಧಿಗಳು. ಕೈಕಾಲು, ಇಪ್ಪತ್ತು ಬೆರಳು, ಮಧ್ಯ ದೇಹ ಹೀಗೆ ಇಪ್ಪತ್ತೊಂದು ಆಧ್ಯಾತ್ಮಿಕದ ಸಮಿದ್‌ಗಳಾದವು. ಆದಿ ದೈವಿಕವಾಗಿ ಹನ್ನೆರಡು ಮಾಸಗಳು, ಐದು ಋತುಗಳು, ಮೂರು ಲೋಕಗಳು ಮತ್ತು ಸೂರ್ಯ ಹೀಗೆ ಇಪ್ಪತ್ತೊಂದು ಆಯಿತು. ಬ್ರಹ್ಮ ರುದ್ರಾದಿಗಳು ತಮ್ಮ ತಮ್ಮನ್ನೇ ಪಶುವಾಗಿ ಕಲ್ಪಿಸಿ ಮಾನಸ ಯಜ್ಞದಲ್ಲಿ ಭಗವಂತನನ್ನು ಪೂಜಿಸಿದರು. (ಸಂಜ್ಞಾ ದೇವಿ, ಸ್ವಾಹ ದೇವಿ , ಶಚಿ ದೇವಿ , ರೋಹಿಣಿ ದೇವಿ , ಸರ್ವ ದೇವತಾ ಸ್ತ್ರೀಯರು, ಮಿತ್ರಾ, ವರುಣರ ಪತ್ನಿಯರು , ತಾರಾ ದೇವಿ) ಜ್ಞಾನಿಗಳು ಹೀಗೆ ಯಜ್ಞ ಪುರುಷನನ್ನು ಮಾನಸ ಯಜ್ಞದಿಂದ ಪೂಜಿಸಿದರು. ಈ ನಾರಾಯಣನ ಪೂಜೆಯೇ ಧರ್ಮಗಳಲ್ಲೆಲ್ಲಾ ಹಿರಿಯ ಧರ್ಮವಾಗಿದೆ. ಪರಮ ಪುರುಷನ ಆರಾಧಕರಾದ ದೇವತೆಗಳು ಮಹಾಮಹಿಮರಾಗಿ ಮೋಕ್ಷ ಪಡೆಯುತ್ತಾರೆ. ಪೂರ್ವ ಕಲ್ಪದಲ್ಲಿ ಮುಕ್ತರಾಗಿರುವ ಜ್ಞಾನಿಗಳು ಇವರನ್ನು ಅಲ್ಲಿ ಸ್ವಾಗತಿಸುತ್ತಾರೆ.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

## ಸೂರ್ಯ (ಮಾಯಾಭೇದ)

ಭಗವಂತನ ಮಾಯೆಯಿಂದ ಅಭಿವ್ಯಕ್ತನಾದ ಸೂರ್ಯನನ್ನು ವಿದ್ವಾಂಸರು ಮನಸ್ಸಿನ ಏಕಾಗ್ರತೆಯಿಂದ ತಿಳಿಯುತ್ತಾರೆ. ಸೂರ್ಯ ಮಂಡಲದಲ್ಲಿ ಅಂತರ್ವರ್ತಿಯಾಗಿ ಇರುವ ಹಿರಣ್ಮಯ ಪುರುಷನನ್ನು ಪರಬ್ರಹ್ಮನೆಂದು ತಿಳಿಯುತ್ತಾರೆ. ಸೂರ್ಯೋಪಾಸನೆ ಮಾಡುವವರು ಸೂರ್ಯಲೋಕವನ್ನು ಅಂದರೆ ಪರಮ ಪದವನ್ನು ಪಡೆಯುತ್ತಾರೆ. ಸೂರ್ಯನು ಮೂರು ವೇದಗಳ ಮಹಿಮೆಯಿಂದ ತನ್ನ ಗತಿಯನ್ನು ನಿರ್ವಹಿಸುತ್ತಾನೆ. ಶರೀರದಲ್ಲಿನ ಪ್ರಾಣ ವಾಯುವು ವೇದದ ಉಚ್ಚಾರಣೆಯನ್ನು ಪ್ರೇರಿಸುತ್ತದೆ. ವೇದಗಳು ಸ್ವರ್ಗಪ್ರಾಪ್ತಿಗೆ ಸಾಧನಭೂತವಾದವು. ಋಷಿಗಳು ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಾ ವೇದಗಳು ನಾಶವಾಗದಂತೆ ರಕ್ಷಿಸುತ್ತಾರೆ.

ಆದಿತ್ಯನು ಅತಿ ಎತ್ತರದಲ್ಲಿ, ಅಂತರಿಕ್ಷದಲ್ಲಿ ಎಲ್ಲಾ ದಿಕ್ಕುಗಳನ್ನು ಬೆಳಗುತ್ತಾ ಲೋಕಗಳ ಮಧ್ಯೆ ಪುನಹ ಪುನಹ ಸುತ್ತುತ್ತಲೇ ಸಕಲ ಪ್ರಾಣಿಗಳನ್ನು ಕಾಪಾಡುತ್ತಾ ಇದ್ದಾನೆ.

## ಆಧ್ಯಾತ್ಮಪರ ಅರ್ಥ

ಜಗತ್ತು ಪರಮಾತ್ಮನ ಮಾಯೆಯಿಂದ ಆದುದು. ಅಂತರ್ಮುಖ ಪ್ರಜ್ಞೆ ಅಥವಾ ಪರಿಪಕ್ವಜ್ಞಾನದಿಂದ ವೇದಾಂತಿಗಳು ಸಮಸ್ತ ಪ್ರಾಣಿಗಳ ಆತ್ಮನೂ, ಪರಮಾತ್ಮನೂ ಒಂದೇ. ಪರಮಾತ್ಮನು ಪ್ರಾಣಿಗಳ ಶರೀರದಲ್ಲಿ ಜೀವಾತ್ಮನಾಗಿ ಪ್ರವಹರಿಸುತ್ತಾನೆ ಎಂಬ ಜೀವಾತ್ಮ, ಪರಮಾತ್ಮ ತಾದಾತ್ಮತೆಯನ್ನು ತಿಳಿಸುತ್ತಾರೆ. ಅವ್ಯಕ್ತಾವಸ್ಥೆಯಲ್ಲಿ ಸಕಲವೂ ಪರಮಾತ್ಮನ ಬೀಜರೂಪದಿಂದ ಇದ್ದು ಸೃಷ್ಟಿಯ ಕಾಲದಲ್ಲಿ ವ್ಯಕ್ತರೂಪವಾಗಿ, ಪ್ರಳಯ ಕಾಲದಲ್ಲಿ ಪುನಹ ಪರಮಾತ್ಮನಲ್ಲಿ ಲೀನವಾಗುತ್ತದೆ. ಪರಬ್ರಹ್ಮ ವಸ್ತುವನ್ನು ಮಾತ್ರ ಪಡೆಯಲು ವೇದಾಂತಿಗಳು ಇಚ್ಛಿಸುತ್ತಾರೆ. ಬ್ರಹ್ಮೋಪಾಸನೆಯಿಂದ ಬ್ರಹ್ಮನನ್ನು ಪಡೆಯುತ್ತಾರೆ. ಸರ್ವ ವ್ಯಾಪಕನಾದ ಪರಮಾತ್ಮನು ಸೃಷ್ಟಿಯನ್ನು ಹೇಗೆ ಮಾಡಬೇಕೆಂದು ಯೋಚಿಸಿದನೋ ಹಿರಣ್ಯಗರ್ಭನು ವೇದವನ್ನು ಮೊದಲು ಪಠಿಸಿ ನಂತರ ಸೃಷ್ಟಿ ಕ್ರಮವನ್ನು ಮುಂದುವರೆಸಿದನು. ಮನಸ್ಸಿನಲ್ಲಿ ಧ್ಯಾನಿಸಲ್ಪಡುವ ಸ್ವರ್ಗ ಸಾಧನಭೂತವಾದ ಅರ್ಥ ಸಹಿತ ವೇದವನ್ನು ಋಷಿಗಳು ಬ್ರಹ್ಮ ಪದವಿಯಲ್ಲಿದ್ದುಕೊಂಡು ರಕ್ಷಿಸುತ್ತಾರೆ. ತಾವೇ ನೆಲೆಸಿರುವ ಶರೀರವನ್ನು ರಕ್ಷಿಸುತ್ತಾ ನಾಶರಹಿತ ಶರೀರದ ನಾಡಿಗಳಲ್ಲಿ ಸಂಚರಿಸುವ ಪ್ರಣವ ಸ್ವರೂಪ ಆತ್ಮನನ್ನು ಋಷಿಗಳು ತಿಳಿದಿದ್ದಾರೆ. ಆತ್ಮನು ಭೂಲೋಕ, ಸ್ವರ್ಗಲೋಕಗಳ ನಡುವೆ ಉತ್ತಮ ಜನ್ಮ ಮನುಷ್ಯ, ಕನಿಷ್ಠ ಜನ್ಮ ಪಶು ಆದಿಗಳ ಮಧ್ಯೆ ಜನನ ಮರಣ ರೂಪದಲ್ಲಿ ಪುನ: ಪುನ: ಸುತ್ತುತ್ತಿರುತ್ತಾನೆ.

## ಪುರೂರವ ಊರ್ವಸಿಯರ ಸಂವಾದ

ಭಾರತದಲ್ಲಿ ಪುರೂರವನು ರಾಜನಾಗಿದ್ದಾನೆ. ಮಹತ್ತಾದ ಯುದ್ಧಗಳಿಗಾಗಿ ಹಾಗೂ ರಾಕ್ಷಸರು, ದಸ್ಯುಗಳ ನಾಶಕ್ಕಾಗಿ ದೇವತೆಗಳು, ನದಿಗಳು, ಅವನಿಗೆ ಸಹಾಯಕರಾಗಿದ್ದಾರೆ. ಹೀಗಿರುವಲ್ಲಿ ಒಂದು ಸಲ ದೇವತಾ ಸ್ತ್ರೀಯರು, ಅಪ್ಸರಾ ಸ್ತ್ರೀಯರು, ಊರ್ವಸಿಯು ಪುರೂರವನ ರಾಜ್ಯಕ್ಕೆ ಬಂದಿದ್ದಾರೆ. ಅವರು ರಾಜನ ಸಮೀಪಕ್ಕೆ ಬಂದರು. ಪುರೂರವನು ಮಾತಾಡಲು ಬಯಸಿದಾಗ ಅವರು ದೂರ ಓಡಿದರು.

ಊರ್ವಸಿಯು ಪುರೂರವನ ಮನೆಗೆ ಬಂದು ಅವಳು ಪುರೂರವನ ಕಾಮನೆಯನ್ನು ಈಡೇರಿಸುತ್ತಾಳೆ. ಪುರೂರವನ ಸಮಾಗಮ ಬಯಸಿದ್ದರಿಂದ ಊರ್ವಸಿಯು ಮಾವನ ಅನ್ನಾದಿ ಅವಶ್ಯಕತೆಗಳನ್ನು ಒದಗಿಸುತ್ತಾಳೆ. ಅಹೋರಾತ್ರಿ ಊರ್ವಸಿಯು ಪುರೂರವನ ಜೊತೆ ಸುಖ ಅನುಭವಿಸುತ್ತಿರುತ್ತಾಳೆ. ಪುರೂರವನು ಊರ್ವಸಿಯ ಉದರದಲ್ಲಿ ಪುತ್ರರೂಪಿ ವೀರ್ಯವನ್ನು ಸ್ಥಾಪಿಸಿರುತ್ತಾನೆ. ಊರ್ವಸಿಯಲ್ಲಿ ಗಾಢವಾದ ನಂಬಿಕೆಯನ್ನು ಇಟ್ಟಿರುತ್ತಾನೆ. ನಾಲ್ಕು ವರುಷಗಳ ಕಾಲ ಊರ್ವಸಿಯು ಪುರೂರವನ ಜೊತೆ ಇರುತ್ತಾಳೆ. ಊರ್ವಸಿಯು ತೇಜೋವತಿ ಉದಕ ನಿರ್ಮಾತೃ, ಊರ್ವಸಿಗಾಗಿ ಪುರೂರವನ ಹೃದಯದಲ್ಲಿ ವಿರಹವೇದನೆ ಪ್ರಾರಂಭವಾಗಿದೆ. ಊರ್ವಸಿಯು ಪುರೂರವನನ್ನು ಬಿಟ್ಟು ಹಿಂತಿರುತ್ತಿದ್ದಾಳೆ. ವಾಯುವಿನಂತೆ ದೂರ ಸರಿದು ಹಿಡಿತಕ್ಕೆ ಸಿಕ್ಕದಂತೆ ದೂರ ನಿಂತಿದ್ದಾಳೆ. ಪುರೂರವನು ಸಂಭಾಷಣೆಗೆ ನಿಲ್ಲುವಂತೆ ಹೇಳುತ್ತಾನೆ. ಕಠಿನ ಹೃದಯಿಯಾದ ಊರ್ವಸಿಯು ಸಂಭಾಷಣೆಯಿಂದ ಏನೂ ಉಪಯೋಗವಿಲ್ಲ, ಹಿಂಬಾಲಿಸದೆ ಹಿಂತಿರುಗು ಎಂದು ಹೇಳುತ್ತಾಳೆ. ಹೃದಯದೊಳಗೆ ಅಡಗಿರುವ ಭಾವನೆಗಳನ್ನು ಬಹಿರಂಗವಾಗಿ ಹೇಳದಿದ್ದರೆ ಕೊನೆಯ ದಿನಗಳಲ್ಲಿ ಸುಖ ಉಂಟಾಗುವುದಿಲ್ಲ. ಪುರೂರವನು ಪ್ರಾಣ ತ್ಯಾಗ ಮಾಡುವುದಾಗಿ ಹೇಳುತ್ತಾನೆ. ಊರ್ವಸಿಯು ಒಂದಲ್ಲೊಂದು ದಿನ ಮಾನವನು (ಪುರೂರವನು) ಮೃತ್ಯುವಿಗೆ ಒಳಗಾಗಲೇ ಬೇಕು ಎನ್ನುತ್ತಾನೆ. ನಮ್ಮ ಪುತ್ರನು ದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಗೊಳಿಸುತ್ತಾನೆ, ಆದರಿಂದ ನೀನು (ಪುರೂರವ) ಸ್ವರ್ಗದಲ್ಲಿ ನಮ್ಮೊಡನೆ ಸೇರಿ ಹರ್ಷ ಅನುಭವಿಸುತ್ತಿಯೆ. ಸ್ತ್ರೀಯರೊಂದಿಗೆ ಮಾಡುವ ಸುಖವು ಶಾಶ್ವತವಾಗಿ ಇರುವುದಿಲ್ಲ, ಇವು ನರಿಗಳ ಹೃದಯದಂತೆ, ನಂಬಿಕೆಗೆ ಅರ್ಹವಲ್ಲ, ಪ್ರಾಣವನ್ನಾದರೂ ತ್ಯಾಗಮಾಡು ಎಂದು ಊರ್ವಸಿಯು ಹೇಳಿ ಅದೃಶ್ಯಳಾದಳು.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಯಾಜ್ಞಿಕರು (ರೋಗಗಳು)

ವೇದಗಳ ಕಾಲದಲ್ಲಿ ಯಾಜ್ಞಿಕರು ರೋಗಗಳಿಂದ ನರಳುತ್ತಿರುವ ರೋಗಿಗಳ ಪರವಾಗಿ ನಾನಾ ದೇವತೆಗಳಿಗೆ ವಿಶೇಷವಾದ ಜಪಗಳು, ಪೂಜೆಗಳು, ಹೋಮಗಳನ್ನು ನಿಷ್ಠಾವಂತರಾಗಿದ್ದು ಕರ್ಮಗಳನ್ನು ಮಾಡಿ ರೋಗಗಳನ್ನು ಪರಿಹರಿಸಿದ ಉದಾಹರಣೆಗಳನ್ನು ಋಷಿಗಳು ಈ ಕೆಳಗೆ ಕಂಡಂತೆ ಕೊಟ್ಟಿದ್ದಾರೆ : -

ಮರಣೋನ್ಮುಖನಾಗಿರುವ ಸುಬಂಧು ಎಂಬುವವನಿಗೆ ಕೊಟ್ಟ ಬರವಸೆ

1) ಜೀವಿಯು ಯಮನಲ್ಲಿಗೆ ಹೋಗಿದ್ದರೂ, ದ್ಯುಲೋಕಕ್ಕೆ ಹೋಗಿದ್ದರೂ, ನಾಲ್ಕು ದಿಕ್ಕುಗಳನ್ನು ವ್ಯಾಪಿಸಿರುವ ಭೂಮಿಗೆ ಹೋಗಿದ್ದರೂ, ಜಲಭರಿತ ಸಮುದ್ರ ಅಥವಾ ಮೇಘ ಪ್ರದೇಶಕ್ಕೆ ಹೋಗಿದ್ದರೂ ಸರ್ವದಾ ಸಂಚರಿಸುತ್ತಿರುವ ಪ್ರಭೆಗಳ ಲೋಕಕ್ಕೂ ಹೋಗಿದ್ದರೂ ಅತ್ಯಂತ ದೂರವಾಗಿರುವ ಜಲ, ತರು, ಲತಾ ಸೇರಿದ್ದರೂ ಸೂರ್ಯಲೋಕ ಅಥವಾ ಯಶಸ್ವಿನ ಲೋಕ ಸೇರಿದ್ದರೂ ಬಹು ದೂರದ ದೊಡ್ಡ ಪರ್ವತ ಸೇರಿದ್ದರೂ ಸಕಲ ಜಗತ್ತನ್ನು ವ್ಯಾಪಿಸಲು ಹೋಗಿದ್ದರೂ, ಭೂತ ಕಾಲದ ತತ್ವಗಳಲ್ಲಿ ಐಕ್ಯವಾಗಿದ್ದರೂ ಸುಬಂಧುವಿನ ಚೇತನವನ್ನು ಇಲ್ಲಿಯೇ ವ್ಯಾಪಿಸುವಂತೆ, ಬಹುಕಾಲ ಜೀವಿಸುವಂತೆ, ಹಿಂತಿರುಗಿ ಬರುವಂತೆ ಮಾಡುತ್ತೇವೆ ಎಂಬ ಆಶ್ವಾಸನೆಯನ್ನು ನೀಡಿದ್ದಾರೆ.

2) ಅಸು ನೀತಿ ರಾಜನಲ್ಲಿಗೆ ಯೋಗ್ಯ ನಮಸ್ಕಾರಗಳನ್ನು ಅರ್ಪಿಸುತ್ತಾ ಯಾಜ್ಞಿಕರು ಆಗಮಿಸುತ್ತಾರೆ. ಸಜ್ಜನ ಪಾಲಕ, ಆಯುಧ ಇರಲಿ, ಇಲ್ಲದಿರಲಿ ಶತ್ರುಗಳನ್ನು ಸಂಹರಿಸುವ ರಾಜ ಐದು ಬಗೆಯ ಜನರು ಸುಖವಾಗಿದ್ದಾರೆ. ಇಕ್ವಾಕು ರಾಜರಂತೆ ಪ್ರಜಾ ರಕ್ಷಕರಾಗಿದ್ದಾರೆ. ಇಂದ್ರನು ಬಲ ಸ್ಥಾಪಿಸಲಿ ಎಂದು ಆಶೀರ್ವದಿಸಿದ್ದಾರೆ.

ಅಗ್ನಿಯು ಪಿತೃ ರೂಪಿ, ಜೀವ ತುಂಬುವವನು, ಕಲ್ಯಾಣ ಲಾಭಾರ್ಥವಾಗಿ ಸುಬಂಧುವಿನ ಚೇತನವನ್ನು ಅಗ್ನಿಯು ಪರಿಧಿಯಲ್ಲಿ ಪುನಹ ಜೀವಿಸುವುದಕ್ಕಾಗಿ ಸ್ಥಾಪಿಸಿದ್ದಾನೆ. (ಸಾಯಲಿಕ್ಕಲ್ಲ) ವಿವಸ್ವಂತನ ಪುತ್ರ ಯಮನಿಂದ ಸುಬಂಧುವಿನ ಜೀವವನ್ನು ಪುನಹ ತಂದಿದ್ದಾನೆ. ಅಗ್ನಿಯು ಶರೀರವನ್ನು ಪ್ರವೇಶಿಸಲಿ. ದುಃಖ:ತಪ್ತ ತಂದೆ, ತಾಯಿ ಇವರಿಗೆ ಸುಖಕರವಾಗಿ ಇರುವಂತೆ ಜೀವಿಸಲಿ. ಸೂರ್ಯ ಕಿರಣಗಳಂತೆ ಹಸುವು ಹಾಲು ಕರೆದಂತೆ ಪಾಪಗಳೆಲ್ಲ ಅಧೋಮುಖವಾಗಿ ನಾಶವಾಗಲಿ ಎಂದು ಋತ್ವಿಜರು ದೇವತೆಗಳಲ್ಲಿ ಪ್ರಾರ್ಥಿಸಿ ಸುಬಂಧುವನ್ನು ಆಶೀರ್ವದಿಸಿದ್ದಾರೆ.

3) ರಾಜಕ್ಷಯ : ರಾಜಕ್ಷಯ ಉಗ್ರ ರೋಗ, ಶರೀರ ಕೃಷಗೊಂಡು ಕ್ಷೀಣಿಸಿ ಮರಣ ಹೊಂದುತ್ತದೆ. ಸಾಯುವ ಸ್ಥಿತಿಯಲ್ಲಿದ್ದರೂ, ಸತ್ತಿದ್ದರೂ ಪಾಪದೇವತೆ ನಿರ್ಋತಿಯಿಂದ ಹಿಂದಿರುಗಿಸುವಂತಹ ಹವಿಸ್ಸನ್ನು ಇಂದ್ರ, ಅಗ್ನಿ, ಸವಿತೃ, ಬ್ರಹ್ಮಣಸ್ಪತಿಗಳಿಗೆ ಅರ್ಪಿಸುತ್ತಾರೆ ಮತ್ತು ಅವರನ್ನು ನಾನಾ ರೀತಿಯಿಂದ ತೃಪ್ತಿಪಡಿಸುತ್ತಾರೆ. ರೋಗಿಯನ್ನು ಕ್ಷಯರೋಗ ನಿವೃತ್ತಿ (ಬಿಡುಗಡೆ) ಮಾಡಿ ನೂರು ವರುಷ ಕಾಲ ಬದುಕುವಂತೆ ಮಾಡುತ್ತಾರೆ. ನಂತರ ಕ್ರಮವಾಗಿ ಚೇತರಿಸಿಕೊಂಡು ಸಮಸ್ತ ಇಂದ್ರಿಯಗಳ ನ್ಯೂನತೆ ಇಲ್ಲದೆ ಪೂರ್ಣಾಯುಸ್ಸಿನಿಂದ ಬದುಕಲು ಆಗುತ್ತದೆ.

4) ರಾಕ್ಷೋಹಾಗ್ನಿ : ವ್ಯಾಧಿರೂಪ ರಾಕ್ಷಸನು ಸ್ತ್ರೀಯರಿಗೆ ಗರ್ಭದಲ್ಲಿ ಸೇರಿ ಯೋನಿಯನ್ನೆಲ್ಲಾ ಆವರಿಸಿ ಅಲ್ಲಿಯ ಮಾಂಸವನ್ನೆಲ್ಲಾ ತಿನ್ನುತ್ತಾನೆ. ಗರ್ಭ ಪಿಂಡವನ್ನು ನಾಶಮಾಡುತ್ತಾನೆ. ಮೂರು ತಿಂಗಳಾದ ಮೇಲೆ ಅಲುಗಾಡುವ ಶಿಶುವನ್ನು ನಾಶಮಾಡುತ್ತಾನೆ. ಹತ್ತು ತಿಂಗಳ ನಂತರ ಕೊಲ್ಲಲು ಇಚ್ಛಿಸುತ್ತಾನೆ. ಇಂತಹ ರಾಕ್ಷಸನು ನಾಶವಾಗಲಿ. ಸ್ತ್ರೀಯನ್ನು ನಿದ್ರಾವಸ್ಥೆಯಲ್ಲಿ ಮಂಕುಮಾಡಿ ಬುದ್ಧಿ ಭ್ರಮಣ ಮಾಡಿ ಗರ್ಭದ ಶಿಶುವನ್ನು ನಾಶಮಾಡುವ ರಾಕ್ಷಸನನ್ನು ರಾಕ್ಷೋಹಅಗ್ನಿಯು ಓಡಿಸಲಿ, ರೋಗಿಯನ್ನು ರಕ್ಷಿಸಲಿ ಎಂದು ಯಾಜ್ಞಿಕರು ರಾಕ್ಷೋಹ ಅಗ್ನಿಯ ಮೂಲಕ ಸಂಬಂಧಪಟ್ಟ ದೇವತೆಗಳನ್ನು ಪೂಜೆ, ಹವಿಸ್ಸುಗಳಿಂದ ತೃಪ್ತಿಪಡಿಸಿ ರೋಗದಿಂದ ಗುಣಮುಖ ಆಗುವಂತೆ ಮಾಡುತ್ತಾರೆ.

5) ಯಕ್ಷ ರೋಗ : ಇದು ಕಣ್ಣು, ಕಿವಿ, ಮೂಗು, ಮೆದುಳು, ನಾಲಿಗೆ ವ್ಯಾಪಿಸಿದ್ದರೂ ಕತ್ತಿನ ರಕ್ತನಾಳ, ನರ, ಮೂಳೆ, ಕೀಲು, ಹೆಗಲು, ಬಾಹು ವ್ಯಾಪಿಸಿದ್ದರೂ, ಕರುಳು, ಉದರ, ಪಾರ್ಶ್ವ, ಹೃದಯಗಳಲ್ಲಿ ವ್ಯಾಪಿಸಿದ್ದರೂ, ಮೂತ್ರಕೋಶ, ಮೂತ್ರಜನನಾಂಗ, ಪಿತ್ತಕೋಶ, ಇತರ ಮಾಂಸಖಂಡ, ರಕ್ತನಾಳಗಳಲ್ಲಿ ವ್ಯಾಪಿಸಿದ್ದರೂ, ತೊಡೆ, ರೋಮಕೂಪ, ಮೊಳಕಾಲು, ಹಿಮ್ಮಡಿ, ಪಾದದ ಬೆರಳುಗಳು, ಜಘನ, ಸೊಂಟ, ಸ್ನಾಯುಗಳಲ್ಲಿ ವ್ಯಾಪಿಸಿದ್ದರೂ, ಕೂದಲು, ಉಗುರು, ಶರೀರದ ಸಮಸ್ತ ಪ್ರದೇಶದಲ್ಲಿ ವ್ಯಾಪಿಸಿದ್ದರೂ ಅವೆಲ್ಲವನ್ನೂ ಯಾಜ್ಞಿಕರು ಸುಪ್ರಸಿದ್ಧ ವೈದ್ಯರಂತೆ ವೇದದ ಕಾಲದಲ್ಲಿ ರೋಗಗಳನ್ನೆಲ್ಲ ಪರಿಹರಿಸುತ್ತಿದ್ದರೆಂದು ಋಷಿಗಳು ತಿಳಿಸಿದ್ದಾರೆ.

ಆಯುರ್ವ್ವಯದ ವೈದ್ಯರು ಅತ್ಯುತ್ತಮ ಔಷದೋಪಚಾರಗಳನ್ನು ಮಾಡುತ್ತಿದ್ದರು. ಜೊತೆಗೆ ಯಾಜ್ಞಿಕರು ಅನಿಷ್ಟನಿವಾರಣೆಗಾಗಿ, ಇಷ್ಟಾರ್ಥಪ್ರಾಪ್ತಿಗಾಗಿ, ಆರೋಗ್ಯ, ಆಯಸ್ಸು ಇಷ್ಟಾರ್ಥಗಳಿಗಾಗಿ, ಜಪ, ತಪ, ಪೂಜೆಗಳು ಯಜ್ಞಗಳನ್ನು ಮಾಡಿ ರೋಗಿಗಳು ಗುಣಮುಖರಾಗಿ ನೂರು ವರುಷ ಮಕ್ಕಳು, ಮೊಮ್ಮಕ್ಕಳೊಂದಿಗೆ ಸುಖವಾಗಿ ಬಾಳುವಂತೆ ಮಾಡುತ್ತಿದ್ದರು.

॥ ಓಂ ಶ್ರೀ ಮಹಾಗಣಾಧಿಪತಯೇ ನಮಃ ॥

# ಅಶ್ವಸ್ತುತಿ

ಅಶ್ವಗಳು ಮಹರಾಜರುಗಳಿಂದ, ಋಷಿಗಳಿಂದ, ಶ್ರೀಮಂತರುಗಳಿಂದ ಪ್ರಯಾಣಕ್ಕಾಗಿ ಹಾಗೂ ರಥಗಳಿಗಾಗಿ ಉಪಯೋಗಿಸುತ್ತಿದ್ದರು. ಉಳಿದವರು ಎತ್ತಿನ ಬಂಡಿಗಳಲ್ಲಿ, ಎತ್ತುಗಳಿಂದ ಭಾರದ ವಸ್ತುಗಳನ್ನು, ಜನರನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಲು ಉಪಯೋಗಿಸುತ್ತಾರೆ. ಇಂದ್ರ, ಅಗ್ನಿ, ವಾಯು ಅವರು ಅಶ್ವರೂಢರಾಗಿಯೇ ಬರುತ್ತಿದ್ದರೆಂದು ತಿಳಿದುಬರುತ್ತದೆ. ತ್ರೇತಾಯುಗದಲ್ಲಿ ಅಶ್ವಮೇಧ ಯಾಗ ಎಂದೇ ನಡೆಯುತ್ತಿತ್ತು. ಯಾರು ಯಾವ ಆಹಾರವನ್ನು ಸ್ವೀಕರಿಸುತ್ತಾರೋ ಅದನ್ನೇ ದೇವತೆಗಳಿಗೂ ಅರ್ಪಿಸುತ್ತಾರೆ. ಹಾಗಾಗಿ ಆಗ ಆ ಕಾಲದಲ್ಲಿ ಆಡುಗಳನ್ನು, ಅಶ್ವಗಳನ್ನು ಛೇದಿಸಿ ವಿವಿಧ ಭಾಗಗಳಿಂದ ಮಾಂಸಾದಿಗಳನ್ನು ತೆಗೆದು ಬೇಯಿಸಿ ಅದನ್ನು ಹವಿಸ್ಸಿನ ರೂಪದಿಂದ ದೇವತೆಗಳಿಗೆ ಅಗ್ನಿಯ ಮೂಲಕ ಅರ್ಪಿಸಿ ಉಳಿದುದನ್ನು ಅವರೂ ಸ್ವೀಕರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಯಜ್ಞಾಶ್ವವು ದೇವತೆಗಳಿಂದ, ದೇವತೆಗಳಿಗಾಗಿ, ದೇವತೆಗಳ ರೂಪದಲ್ಲೇ ಇರುವುದು. ಸುಂದರ, ದಷ್ಟಪುಷ್ಟ ವೀರ್ಯಕರ್ಮಯುಕ್ತವಾದದ್ದು ಆಗಿರುತ್ತದೆ. ಸುವರ್ಣಾಭರಣಗಳಿಂದ ಅಲಂಕೃತವಾದ ಅಶ್ವವು ಯಾರಿಂದಲೂ ನಿಂದಿತವಾಗುವುದಿಲ್ಲ. ಮೇಧಾಶ್ವವು ಆದಿತ್ಯನಿಂದ ಉತ್ಪನ್ನವಾಗಿ ಗಿಡುಗ ಹಕ್ಕಿಯಂತಹ ರೆಕ್ಕೆ, ಜಿಂಕೆಯ ಕಾಲುಗಳಂತಹ ಕಾಲುಗಳು ದೃಢವಾದ ಉಕ್ಕಿನಂತಹ ಪಾದಗಳು ಆಕರ್ಷಕ ಹೇಷಾರವದಿಂದ ಕೂಡಿರುತ್ತದೆ. ಇಂದ್ರನಿಗಿಂತಲೂ ಹೆಚ್ಚು ಮನೋವೇಗವುಳ್ಳ ಯಮನಿಂದ ದತ್ತವಾದ ಈ ಅಶ್ವವನ್ನು ವಾಯುವು ರಥಕ್ಕೆ ಸೇರಿಸಿದನು. ಇಂದ್ರನು ರಥದಲ್ಲಿ ಕುಳಿತನು. ಸೋಮನು ರಥದ ಸಾರಥಿಯಾದನು. ರಮ್ಯವಾದ ಚಲನಾತ್ಮಕ ಶರೀರ ಹಾಗೂ ವೇಗದ ಮನಸ್ಸುವುಳ್ಳದಾಗಿದೆ. ಅಗ್ನಿ, ವಾಯು, ಸೋಮ ಆದಿತ್ಯರ ಸಂಬಂಧಿ ಅಶ್ವದ್ಯುಲೋಕ, ಭೂಲೋಕ, ಅಂತರಿಕ್ಷದಲ್ಲಿ ಮೂರು ಮೂರು ಬಂಧನಗಳಿಂದ ಕೂಡಿದೆ ಎನ್ನಲಾಗಿದೆ. ಉತ್ತಮ ರಥ, ಮಾನವರು, ಗೋವುಗಳು, ಸುಂದರ ಸ್ತ್ರೀಯರು, ದೇವ ಸಮ್ಮೂಹ ಎಲ್ಲಾ ಇಂತಹ ಅಶ್ವದ ಸ್ನೇಹವನ್ನು ಅಪೇಕ್ಷಿಸುತ್ತಾರೆ. ಯಜ್ಞಾಶ್ವದ ಮುಂದೆ ನಾನಾ ಬಣ್ಣದ ಅಜಗಳು ಧ್ವನಿಮಾಡುತ್ತಾ ವೇಗವಾಗಿ ಓಡುತ್ತಾ ಇಂದ್ರನಿಗೂ, ಪೂಷನ್‌ನಿಗೂ ಅನ್ನಕ್ಕಾಗಿ ಸಿದ್ಧವಾಗುತ್ತದೆ. ಪ್ರಥಮಾರ್ಪಿತ ಅಜವನ್ನು ತ್ವಷ್ಟರು ಶ್ರೇಷ್ಟ ಪ್ರೀತಿದಾಯಕ ಅನ್ನ ಮಾಡುತ್ತಾರೆ. ಅಶ್ವವು ಮೂರು ಸಲ ಅಗ್ನಿ ಪ್ರದಕ್ಷಿಣೆ ಮಾಡುತ್ತದೆ. ಸಂಚಾರ ಕಾಲದಲ್ಲಿ ಆಗುತ್ತಿದ್ದ ಹಿಂಸೆ, ಹೊಗೆ ಹಾಗೂ ಶಬ್ದ ಇವೆಲ್ಲವನ್ನೂ ಮಂತ್ರಗಳಿಂದ ಶಮನ ಮಾಡುತ್ತಾರೆ. ಅಶ್ವದ ದೇಹದ ಸ್ವರೂಪ ತಿಳಿದವನು ಅವಯವಗಳನ್ನು ತುಂಡು ಮಾಡುತ್ತಾನೆ. ಇಬ್ಬರು ಛೇದಕರು ತುಂಡುಗಳನ್ನು ಪಿಂಡದ ರೂಪದಲ್ಲಿ ಅಗ್ನಿಯಲ್ಲಿ ಆಹುತಿ ಕೊಡುತ್ತಾರೆ. ಅಶ್ವವನ್ನು ಕಟ್ಟಿದ ಹಗ್ಗ, ತಿನ್ನುವ ಹುಲ್ಲು, ಹೊದಿಸಿರುವ ಹೊದಿಕೆ, ಆಭರಣಗಳು ಎಲ್ಲಾ ದೇವತೆಗಳಿಗೆ ಅರ್ಪಿಸುತ್ತಾರೆ. ಮಾಂಸ ಛೇದಿಸುವಾಗ ವಧಾ ಸ್ತಂಭಕ್ಕೆ ಕಟ್ಟಿಗೆಗೆ, ಛೇದಕನ ಕೈಗೆ, ಉಗುರುಗಳಿಗೆ ಅಂಟಿಕೊಂಡ ಮಾಂಸವು ದೇವತೆಗಳಿಗೆ ಅರ್ಪಿತವಾಗಲಿ. ಅಶ್ವದ ಉದರ ಭಾಗದಲ್ಲಿ ಜೀರ್ಣವಾಗದೆ ಉಳಿದ ಆಹಾರವು ಹೊರಬರುತ್ತದೆ. ಹುಳಿಯಾದ ದುರ್ಗಂಧಯುತ ಮಾಂಸ ಎಲ್ಲವನ್ನೂ ಶುದ್ಧಮಾಡಿ ದೇವತಾಯೋಗ್ಯ ಮಾಡುತ್ತಾರೆ. ಆಹುತಿ ಅರ್ಪಣೆಯಿಂದ ಪ್ರವಹಿಸುವ ಘೃತಾಧಿಗಳು ತುಂಬಿ ಹರಿಯುತ್ತವೆ. ಬೇಯುತ್ತಿರುವಾಗ ಆಸಕ್ತಿಯಿಂದ ನೋಡುತ್ತಾ ವಾಸನೆ ಅನುಭವಿಸಿ ಬೆಂದ ನಂತರ ದೇವತೆಗಳಿಗೆ ಅರ್ಪಿಸಿ ತಮಗೂ ಕೊಡಲಿ ಎಂದು ಅಪೇಕ್ಷಿಸಿದವರಿಗೂ ಸಿಗುತ್ತದೆ. ಮೇಧಾವಿ ಋತ್ವಿಜರು ಈ ಕಾರ್ಯವನ್ನು ಅನುಮೋದಿಸಿ ತೃಪ್ತಿ ಸೂಚಿಸುತ್ತಾರೆ. ಯಜ್ಞ ಭೂಮಿಯ ಸುತ್ತಲೂ ಅರ್ಪಿಸಿರುವ ದವಸ ಧಾನ್ಯಗಳನ್ನು ಅಶ್ವವು ಪ್ರದಕ್ಷಿಣೆ ಬರುವಾಗ ಆತುರದಿಂದ ಭಕ್ಷಿಸುತ್ತದೆ. ಇಂತಹ ಅಶ್ವವು ದೇವತೆಗಳನ್ನು ಧ್ಯಾನಿಸುತ್ತಾ ವಧಾ ಸ್ಥಾನಕ್ಕೆ ಕರೆತರಲ್ಪಟ್ಟಾಗ ಋತ್ವಿಜರು ಕರ್ಮಗಳನ್ನು ಮಾಡುತ್ತಾರೆ. ಅನಂತರ ಅಶ್ವವು ಸ್ವರ್ಗವನ್ನು ಸೇರುತ್ತದೆ. ಮಾಂಸ ಬೇಯುತ್ತಿರುವ ಪಾತ್ರೆ ಕೆಳಗೆ ಬೀಳದೆ ಇರಲಿ. ಪಾತ್ರೆಯಿಂದ, ಸಲಾಕೆಯಿಂದ ಮಾಂಸಭಾಗ ವ್ಯರ್ಥವಾಗದೆ ದೇವತೆಗಳಿಗೆ ಸೇರಲಿ. ಈ ಕಾರ್ಯವನ್ನು ಮಾಡುವ ಋತ್ವಿಜರ ಇಷ್ಟಾರ್ಥಗಳು ಎಲ್ಲಾ ಕೈಗೂಡಲಿ. ಈ ಹರಿರೂಪದ ಅಶ್ವವು ವಿಶ್ವದ ಧನ. ಇದು ಯಾಜ್ಞಿಕರಿಗೆ ಪುತ್ರ, ಪೌತ್ರರನ್ನು ಕೊಡಲಿ. ಅಪೇಕ್ಷಿತವಾದದ್ದನ್ನೆಲ್ಲಾ ಅನುಗ್ರಹಿಸಲಿ.

॥ ಓಂ ಶ್ರೀ ಮಹಾಗಣಾಧಿಪತಯೇ ನಮ: ॥

# ಗ್ರಾವಗಳು

ದ್ಯಾವಾ ಪೃಥ್ವಿಗಳು ಗ್ರಾವಗಳು ಸಹೋತ್ಪನ್ನರು, ಪರ್ವತಗಳು ಗ್ರಾವಗಳಿಗೆ ಪಿತೃರೂಪಿ. ಅನೇಕ ಯುಗಗಳಿಂದ ಅಚಲ, ನಿಶ್ಚಲ, ದೃಢಕಾಯವಾಗಿ ಸುಸ್ಥಿತಿಯಲ್ಲಿ ಇವೆ. ಇವರು ಯಾವ ಯಜ್ಞ ಸಂಬಂಧವನ್ನು ಬಯಸುವುದಿಲ್ಲ. ಕ್ಷಯ ರಹಿತ ಪಚ್ಚೆ ವರ್ಣದವರು ತಮ್ಮ ಶಬ್ದದಿಂದ ಪೃಥ್ವಿಯನ್ನು ತುಂಬುತ್ತಾರೆ. ಸೋಮವನ್ನು ಹಿಂಡುವಾಗ ಗ್ರಾವಗಳು ಅಶ್ವಗಳಂತೆ ಕುಣಿಯುತ್ತಾ ಯಜಮಾನನನ್ನು ಬಲಯುತವನ್ನಾಗಿ ಮಾಡುತ್ತವೆ. ಆದಿತ್ಯನಿಗಿಂತಲೂ ಬಲಶಾಲಿಗಳು, ವಾಯುವಿಗಿಂತಲೂ ಶೀಘ್ರವಾಗಿ ಸೋಮ ಹಿಂಡುವವರು, ಗ್ರಾವಗಳು ಸೋಮ ಹಿಂಡಲು ಆತುರದಿಂದ ಇವೆ. ಹಿತಕರ ಶಬ್ದವನ್ನು ಮಾಡುತ್ತವೆ. ಹೋತೃರೂಪಿ ಅಗ್ನಿಗೆ ಅರ್ಪಿತವಾಗುವ ಮೊದಲೇ ಗ್ರಾವಗಳು ಸೋಮರುಚಿ ಪಡೆಯುತ್ತವೆ. ಇಂದ್ರನನ್ನು ಕರೆಯುತ್ತಿರುವಂತೆ ಶಬ್ದ ಮಾಡುತ್ತವೆ. ಸಂಚಾರಶೀಲ ಜಿಂಕೆಗಳು ನರ್ತನಮಾಡುತ್ತಿರುವಂತೆ ಇರುತ್ತವೆ. ಸಹಸ್ರಾರು ಜನ ಸೇರಿ ಒಟ್ಟಿಗೆ ಮಾಡುವ ಶಬ್ದದಂತೆ ಇರುತ್ತದೆ. ಪಕ್ವಮಾಡಿದ ಮಾಂಸದ ಮುಂದೆ ಮಾಂಸ ಭಕ್ಷಕರು ಮಾಡುವ ಶಬ್ದದಂತೆ ಇರುತ್ತದೆ. ಗಟ್ಟಿಯಾಗಿ ಉಸಿರು ಬಿಡುವ ಕುದುರೆಗಳ ಶ್ವಾಸದಂತೆ ಎಲ್ಲರಿಗೂ ಕೇಳಿಸುತ್ತದೆ. ಗ್ರಾವಗಳು ಕರ್ಮನಿರತವಾದವು. ಮರಣರಹಿತ, ರೋಗರಹಿತ, ತೃಷೆ ರಹಿತ, ಅಧಿಕ ಶಕ್ತಿಯುತ ಇಂದ್ರ ಪಾನಾರ್ಥ ಪುಷ್ಟವಾಗಿ ಬೆಳೆದಿರುತ್ತವೆ. ಗ್ರಾವಗಳು ದುಷ್ಟಬುದ್ಧಿಯ ಶತ್ರುಗಳನ್ನು ನಾಶಮಾಡುತ್ತವೆ. ದುಖವನ್ನು ಪರಿಹರಿಸುತ್ತವೆ. ಜನರಿಂದ ಗೌರವಿಸಲ್ಪಟ್ಟಿವೆ. ಗ್ರಾವಗಳು ಇಂದ್ರನಿಗಾಗಿ ಪೂರ್ಣವಾಗಿ ಸೋಮಾಭಿಷೇಚನ ಕರ್ಮ ಮಾಡಿತು (ತ್ವಷ್ಟ ಪುತ್ರನ ವಧಾ ಸಮಯದಲ್ಲಿ).

ಅಗ್ನಿಯು ಸೋಮರಸ ತಯಾರಿಸಿತು. ಗ್ರಾವಗಳ ಶಬ್ದಕ್ಕೆ ಪ್ರತಿಯಾಗಿ ಯಾಜ್ಞಿಕರು ಸ್ತುತಿವಾಕ್ಯ ಅರ್ಪಿಸುತ್ತಾರೆ. ಋತ್ವಿಜರು ಸೋಮರಸವನ್ನು, ಹವಿಸ್ಸನ್ನು ಸ್ತೋತ್ರ ಪಠಣದಿಂದ ಶುದ್ಧಿ ಗೊಳಿಸುತ್ತಾರೆ. ಸೋಮ ಹಿಂಡುವ ಕಲ್ಲುಗಳು ತಮ್ಮ ಅಭಿಶವಣ ಕರ್ಮವನ್ನು ಸೋಮ ಸುರಿಸುವ ಕಾಲದಲ್ಲಿ ತಮ್ಮ ಶಬ್ದದಿಂದ ಪ್ರಕಟಿಸುತ್ತವೆ. ಹತ್ತು ಅಂಗುಲಿಗಳಿಂದ ಹಿಂಡುವ ವ್ಯಾಪಾರ ಮಾಡುತ್ತವೆ. ಯಾಜ್ಞಿಕರು ಇವರನ್ನು ಪೂಜಿಸುತ್ತಾರೆ. ಸವಿತೃವನ್ನು ಪ್ರಾರ್ಥಿಸಿ ಸೋಮಾಭಿಶವಣ ಕಾರ್ಯವನ್ನು ಮಾಡುತ್ತಾರೆ. ಸವಿತೃ ಪ್ರೇರಿತ ಗ್ರಾವಗಳು ಪರಸ್ಪರ ಸಹಕರಿಸುತ್ತಾ ಸೋಮ ಲತೆಯನ್ನು ಜಜ್ಜಿ ಸೋಮರಸ ಉತ್ಪಾದಿಸಿ ಮಾದಕ ಶಕ್ತಿ ಉಂಟುಮಾಡುತ್ತದೆ.

ಪ್ರಾರ್ಥನೆ : ಯಾಜ್ಞಿಕರು ಗೃಹಗಳಲ್ಲಿ ಪ್ರಭಾವಯುತ ಸ್ತುತಿಯಿಂದ ಕೂಡಿರಲಿ. ಕಾರ್ಯತತ್ಪರರಾಗಿ ಇರಲಿ. ಅನೇಕ ಪುತ್ರ, ಪೌತ್ರರು, ಧನಸಂಪತ್ತು ಯುಕ್ತರಾಗಿ ಇರಲಿ. ಸಕಲ ಧನವನ್ನು ಯಜಮಾನನಿಗೆ ಕೊಡಲಿ. ಗ್ರಾವಗಳು ಕರ್ಮ ವಿಘ್ನಕಾರಕ ರಾಕ್ಷಸರು, ಪಾಪ ದೇವತೆಗಳು, ದುಷ್ಟ ಬುದ್ಧಿಯವರುಗಳನ್ನು ತಡೆಯಲಿ. ಯಾಜ್ಞಿಕರು ದೇವತೆಗಳಿಗೆ ಶಕ್ತಿ ಬರುವಂತಹ ಸ್ತೋತ್ರಗಳನ್ನು ಸಂಪಾದಿಸಲಿ. ಗ್ರಾವಗಳು ಗೋಕ್ಷೀರದಿಂದ ನಮಗೆ ಸುಖ ಉಂಟುಮಾಡಲಿ ಎಂದು ಯಾಜ್ಞಿಕರು ಪ್ರಾರ್ಥಿಸಿದ್ದಾರೆ.

++++++++

ಛಂದೋಭಿಮಾನಿ ದೇವತೆಗಳು, ಮಹಾಲಕ್ಷ್ಮೀ, ಸರಸ್ವತಿ, ಭಾರತಿ, ಉಮಾ,
ಗಾಯತ್ರಿ, ಗರುಡ ಮತ್ತು ಎಲ್ಲಾ ದೇವತಾ ಸ್ತ್ರೀಯರಿಗೆ ನಮೋ ನಮ:
ಋಷಿಗಳಿಗೆ, ಮುನಿಗಳಿಗೆ, ಯಾಜ್ಞಿಕರಿಗೆ, ಯಜ್ಞನಿರ್ವಾಹಕ ಯಜಮಾನರುಗಳು
ಮತ್ತು ಅವರ ಪರಿವಾರದವರಿಗೆ ನಮೋ ನಮ:
ಋಗ್ವೇದ ದಂಸ್ಪ್ರಾರರಾದ ಇಂದ್ರ, ಅಗ್ನಿ, ಶ್ರೀ ಲಕ್ಷ್ಮೀನಾರಾಯಣ
ಇವರುಗಳಿಗೆ ಅನಂತ ಸಾಷ್ಟಾಂಗ ನಮಸ್ಕಾರಗಳು.
ಕಾಲೇ ವರುಷತು ಪರ್ಜನ್ಯ: ಪೃಥ್ವೀ ಸಸ್ಯಶಾಲಿನಿ, ದೇಶೋಽಯಂ ಕ್ಷೋಭರಹಿತೋ
ಸರ್ವೇ ಜನಾ: ಸುಖಿನೋ ಭವಂತು
ಓಂ ಶಾಂತಿ ಶಾಂತಿ ಶಾಂತಿ:

॥ ಹರ ನಮ: ಪಾರ್ವತಿ ಪತೆಯೇ ಹರಹರ ಮಹಾದೇವ ॥

ಶ್ರೀ ಶಂಕರಾಚಾರ್ಯ ವಿರಚಿತ



# ಗುರ್ವಷ್ಟಕಂ

ಶರೀರಂ ಸುರೂಪಂ ಸದಾ ರೋಗಮುಕ್ತಂ।
ಯಶಶ್ಚಾರುಚಿತ್ರಂ ಧನಂ ಮೇರು ತುಲ್ಯಮ್ ॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೧॥

ಒಬ್ಬನು ಮನ್ಮಥನಂತೆ ಸುಂದರನಾಗಿರಬಹುದು. ಒಳ್ಳೆಯ ಆರೋಗ್ಯವಂತನಾಗಿರಲೂ ಬಹುದು. ಐಶ್ವರ್ಯದಲ್ಲಿ ಮೇರುತುಲ್ಯನಾದ ಕುಬೇರನೇ ಆಗಿರಬಹುದು. ಇಷ್ಟಿದ್ದರೂ ಅವನ ಮನಸ್ಸು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಪದ್ಮದಲ್ಲಿ ನೆಲೆನಿಂತಿಲ್ಲವಾದರೆ ಏನು ಪ್ರಯೋಜನವುಂಟು? ನಿಷ್ಪ್ರಯೋಜಕವೇ ಸರಿ. ಅವನ ಭೋಗೈಶ್ವರ್ಯಗಳಿಗೆಲ್ಲ ಏನು ಫಲ? ಏನು ಫಲ? ಏನು ಫಲ?

ಕಲತ್ರಂ ಧನಂ ಪುತ್ರ ಪೌತ್ರಾದಿ ಸರ್ವಂ।
ಗ್ರಹಂ ಬಾಂಧವಾಃ ಸರ್ವ ಮೇ ತದ್ಧಿಜಾತಮ್ ॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೨॥

ಮಕ್ಕಳು - ಮೊಮ್ಮಕ್ಕಳೂ, ಬಂಧು - ಬಾಂಧವರೂ, ಮನೆಯೂ ಐಶ್ವರ್ಯವೂ ಏನೂ ಕೊರತೆಯಿಲ್ಲದೆ ತುಂಬಿ ತುಳುಕುತ್ತಿರಬಹುದು. ಆದರೂ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಪದ್ಮದಲ್ಲಿ ನೆಲೆ ನಿಂತಿಲ್ಲವಾದರೆ ಏನು ಫಲ? ಅಂಥವರ ಬದುಕಿಗೆ ಏನು ಫಲ? ಏನು ಫಲ? ಏನು ಫಲ?

ಷಡಂಗಾದಿ ವೇದೋ ಮುಖೇ ಶಾಸ್ತ್ರವಿದ್ಯಾ।
ಕವಿತ್ವಾದಿ ಗದ್ಯಂ ಸುಪದ್ಯಂ ಕರೋತಿ ॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೩॥

ಷಟ್ ಶಾಸ್ತ್ರಗಳೂ, ವೇದೋಪನಿಷತ್ತುಗಳೂ ಕಂಠಪಾಠವಾಗಿರಬಹುದು. ಅನೇಕ ಗ್ರಂಥಾದಿಗಳನ್ನೂ ಅವೆಲ್ಲಕ್ಕೆ ಭಾಷ್ಯಾದಿಗಳನ್ನೂ ಅಮೂಲ್ಯವಾದ ಪದ-ಪದ್ಯಾದಿಗಳನ್ನೂ ರಚಿಸಬಹುದು. ಆದರೂ ಅವನ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದ

ಕಮಲದಲ್ಲಿ ನೆಲೆ ನಿಂತಿಲ್ಲವಾದರೆ ಏನೂ ಪ್ರಯೋಜನವಿಲ್ಲ. ಅಂಥವರ ಆ ಓದಿಗೂ, ಪಾಂಡಿತ್ಯಕ್ಕೂ ಏನು ಫಲ? ಏನು ಫಲ? ಏನು ಫಲ?

ವಿದೇಶೇಷು ಮಾನ್ಯಃ ಸ್ವದೇಶೇಷು ಧನ್ಯಃ।
ಸದಾಚಾರ ವೃತ್ತೇಷು ಮತ್ತೋನ ಚಾನ್ಯಃ॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿ ಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೪॥

ಹೋದ ಕಡೆಯಲ್ಲೆಲ್ಲ ಮಾನ್ಯತೆಯನ್ನು ಪಡೆದು ದೇಶ ವಿದೇಶಗಳಲ್ಲೆಲ್ಲ ಧನ್ಯ-ಧನ್ಯ-ಧನ್ಯನೆಂದು ಮನ್ನಣೆಯನ್ನು ಹೊಂದಿರಬಹುದು. ಸದಾಚಾರ ವ್ರತಗಳಲ್ಲಿ ಅವನ ಸಮಾನರು ಇನ್ನಾರು ಇಲ್ಲವೆನ್ನುವಷ್ಟು ಶ್ರೇಷ್ಠನೇ ಆಗಿರಬಹುದು. ಆದರೂ ಅವನ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಪದ್ಮದಲ್ಲಿ ನೆಲೆ ನಿಂತಿಲ್ಲವಾದರೆ ಏನು ಫಲವುಂಟು? ಅಂಥವರ ಆ ಮನ್ನಣೆ-ಧನ್ಯತೆಗಳಿಗೆ ಏನು ಫಲ? ಏನು ಫಲ? ಏನು ಫಲ?

ಕ್ಷಮಾಮಂಡಲೇ ಭೂಪ ಭೂಪಾಲ ವಂದ್ಯೈಃ।
ಸದಾ ಸೇವಿತಂ ಯಸ್ಯ ಪಾದಾರವಿಂದಮ್।
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೫॥

ಭೂಮಂಡಲಕ್ಕೆಲ್ಲ ಚಕ್ರವರ್ತಿಯಾಗಿದ್ದು ವಂದಿಮಾಗಧರಿಂದಲೂ ಅನೇಕ ರಾಜ-ಮಹಾರಾಜರುಗಳಿಂದಲೂ ಸದಾ ಸೇವಿಸಲ್ಪಟ್ಟು ಪಾದಾರವಿಂದಕ್ಕೆ ನಮಸ್ಕಾರ ಮಾಡಿಸಿ ಕೊಳ್ಳುತ್ತಿದ್ದರೂ ಅವನ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಪದ್ಮದಲ್ಲಿ ನೆಲೆ ನಿಂತಿಲ್ಲವಾದರೆ ಅವೆಲ್ಲವೂ ನಿಷ್ಪ್ರಯೋಜಕವು. ಅಂಥವನ ಆ ಚಕ್ರವರ್ತಿ ಪದವಿಗೂ ರಾಜಮಹಾರಾಜರುಗಳ ಹೊಗಳಿಕೆಗೂ ಏನು ಫಲ? ಏನು ಫಲ? ಏನು ಫಲ?

ಯಶಶ್ಚೇದ್ ಗತಂ ದಿಕ್ಷು ದಾನಪ್ರಪಾತ್।
ಜಗದ್ವಸ್ತು ಸರ್ವಂ ಕರೇಯತ್ ಪ್ರಸಾದಾತ್॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೬॥

ದಾನ ಮಾಡುವುದರಲ್ಲಿ ದಾನಶೂರ ಕರ್ಣನೇ ಆಗಿ ದಶದಿಕ್ಕುಗಳಲ್ಲಿಯೂ ತನ್ನ ಯಶೋ-ದುಂದುಭಿಯನ್ನು ಮೊಳಗಿಸಿದ್ದರೂ, ಜಗತ್ತಿನ ಇವೆಲ್ಲವೂ ಕೇವಲ ಯಾರ ಕೃಪಾಪ್ರಸಾದ ದಿಂದಲೇ ಕರಗತವಾಗುವುದೋ ಅಂಥ ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದ ಪದ್ಮದಲ್ಲಿ ಮನಸ್ಸು ನೆಲೆನಿಂತಿಲ್ಲವಾದರೆ ಅಂಥ ಆ ಡಂಭಾಚಾರಿಗಳ ದಾನ ಧರ್ಮಾದಿಗಳಿಗೂ ಏನು ಫಲ? ಏನು ಫಲ? ಏನು ಫಲ?

ನ ಭೋಗೇ ನ ಯೋಗೇ ನ ವಾಜಿ ಮೇಧೇ ।
ನ ಕಾಂತಾ ಸುಖೇ ನೈವ ವಿತ್ತೇಷು ಚಿತ್ತಮ್॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೭॥

ವಿಷಯೋಪಭೋಗಗಳೆನ್ನೆಲ್ಲ ಬಿಟ್ಟಿದ್ದರೂ, ಸಕಲ ಸಂಪತ್ತನ್ನೂ ತ್ಯಜಿಸಿದ್ದರೂ, ಅಶ್ವಮೇಧಾದಿ ಯಜ್ಞಗಳಿಂದ ದೊರಕುವ ಇಂದ್ರಪದವಿಯನ್ನು ಧಿಕ್ಕರಿಸಿದ್ದರೂ, ಕಠೋರ ತಪಸ್ಸಿನಿಂದ ಪ್ರಾಪ್ತವಾಗುವ ಅಷ್ಟಸಿದ್ಧಿಗಳನ್ನೆಲ್ಲ ಮನಃಪೂರ್ವಕವಾಗಿ ಗಾಳಿಗೆ ತೂರಿದ್ದರೂ ಅವನ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಾರವಿಂದದಲ್ಲಿ ನೆಲೆನಿಂತಿಲ್ಲವಾದರೆ ಏನು ಪ್ರಯೋಜನ? ಅವನ ಆ ಸರ್ವ ಸಂಗ ಪರಿತ್ಯಾಗಕ್ಕೂ ಏನು ಫಲ? ಏನು ಫಲ? ಏನು ಫಲ?

ಅರಣ್ಯೇನ ವಾ ಸ್ವಸ್ಯಗೇಹೇ ನ ಕಾರ್ಯೇ ।
ನ ದೇಹೇ ಮನೋವರ್ತತೇ ಮೇ ತ್ವನರ್ಘ್ಯೇ ॥
ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ॥೮॥

ಸಕಲ ಕರ್ಮ ಸನ್ಯಾಸವನ್ನು ತೆಗೆದುಕೊಂಡು ಮನೆಯಲ್ಲಿದ್ದಷ್ಟೇ ಸುಖಾನಂದದಿಂದ ಅರಣ್ಯದಲ್ಲಿ ಮರಗಳ ಬುಡದಲ್ಲಿ ಪರ್ಣಕುಟಿಯಲ್ಲಿ ವಾಸಿಸುತ್ತಿದ್ದರೂ, ದೇಹ ಪೋಷಣೆಯನ್ನಾದರೂ ಮಾಡಿಕೊಳ್ಳಬೇಕೆಂಬ ಬಯಕೆ ಇಲ್ಲದವನಾಗಿದ್ದರೂ ಕೂಡ ಮನಸ್ಸೊಂದು ಆತ್ಮಸ್ವರೂಪನೇ ಆದ ಸದ್ಗುರುವಿನ ಪಾದಪದ್ಮದಲ್ಲಿ ನೆಲೆನಿಂತಿಲ್ಲವಾದರೆ ಎಲ್ಲವೂ ನಿಷ್ಪ್ರಯೋಜಕವೇ ಸರಿ. ಅವನ ಆ ಕರ್ಮಸನ್ಯಾಸಕ್ಕೆ ಏನು ಫಲ? ಏನು ಫಲ? ಏನು ಫಲ?

ಗುರೋರಷ್ಟಕಂ ಯಃ ಪಠೇತ್ಪುಣ್ಯದೇಹೀ।
ಯತಿರ್ಭೂಪತಿ ಬ್ರಹ್ಮಚಾರೀ ಚ ಗೇಹೀ ॥
ಲಭೇದ್ವಾಂಛಿತಾರ್ಥಂ ಪದಂ ಬ್ರಹ್ಮ ಸಂಜ್ಞಂ ।
ಗುರೋರುಕ್ತವಾಕ್ಯೇ ಮನೋಯಸ್ಯ ಲಗ್ನಮ್ ॥

ಯಾವ ಪುಣ್ಯವಂತನು ಈ ಸದ್ಗುರು ಸ್ತೋತ್ರವನ್ನು ಓದಿ ಇಲ್ಲವೆ ಕೇಳಿ ಆತ್ಮಸ್ವರೂಪನೇ ಆದ ಸದ್ಗುರುವಿನಲ್ಲಿ ವಿಶ್ವಾಸವಿಟ್ಟು ಅವನು ತೋರಿದ ದಾರಿಯಲ್ಲಿಯೇ ನಡೆಯುತ್ತಾನೋ, ಅವನು ಯತಿಯೇ ಆಗಿರಲಿ, ಭೂಪತಿಯೇ ಆಗಿರಲಿ, ಸಂಸಾರಿಯೇ ಆಗಿರಲಿ ಎಲ್ಲರ ಕೊನೆಯ ಬಯಕೆಯಾದ ಬ್ರಹ್ಮ ಸಂಜ್ಞಾರೂಪಿ ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವೇ ಇರಲಾರದು.

ಇತಿ ಶ್ರೀಮತ್ ಶಂಕರಾಚಾರ್ಯ ವಿರಚಿತ
ಗುರ್ವಷ್ಟಕಮ್ ಸಮಾಪ್ತಂ

# ತುಳಸೀ ಗಿಡದ ಮಹತ್ವ

ಜಗತ್ತಿನಲ್ಲಿ ಪರಮಾತ್ಮನಿಂದ ಸೃಷ್ಟಿಯಾಗಿರತಕ್ಕಂಥ ಪ್ರತಿಯೊಂದು ಗಿಡಮರಗಳಿಂದಲೂ ಪಾಠವನ್ನು ಕಲಿಯುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ತುಳಸೀ ಗಿಡದಲ್ಲಿ ಅನೇಕ ಅರ್ಥಗರ್ಭಿತವಾದ ವಿಷಯಗಳು ಅಡಕವಾಗಿವೆ. ಅನಾದಿ ಕಾಲದಿಂದಲೂ ಎಲ್ಲರ ಮನೆಯ ಮುಂದೆಯೂ ತುಳಸೀ ಗಿಡವನ್ನು ಬೆಳೆಸಿ ಪ್ರಾತಃಕಾಲ ಸ್ನಾನವಾದ ಮೇಲೆ ತುಳಸೀ ಗಿಡಕ್ಕೆ ಪೂಜೆ ಮಾಡಿ, ನಂತರ ಮುಂದಿನ ಕೆಲಸಗಳಿಗೆ ಅಣಿಯಾಗುತ್ತಾರೆ. ಅಂದರೆ ಇದರಲ್ಲಿ ಮಹತ್ತರವಾದ, ಉಪಯುಕ್ತವಾದ ಅಂಶಗಳು ಇದೆ ಎಂದು ಅರ್ಥವಾಗುತ್ತದೆ.

ತುಳಸಿಯಲ್ಲಿ ಪ್ರಧಾನವಾದ ದೇವತಾ ಶಕ್ತಿಯಿರುವುದರಿಂದ ವಿಧವಿಧವಾಗಿ ಸ್ತೋತ್ರಮಾಡಿ ಮನಸ್ಸಿನ ಏಕಾಗ್ರತೆಯಿಂದ ಪೂಜೆ ಮಾಡುತ್ತಾರೆ. ಓಂಕಾರದಿಂದ ಸೃಷ್ಟಿಕರ್ತನಾದ ಪರಬ್ರಹ್ಮನಿಂದ ಉದಯಿಸಿದ ವೇದಗಳು ಹೇಗೆ ಶಾಶ್ವತವೋ ಅಂತೆಯೇ ಸೃಷ್ಟಿ ನಿಯಮಗಳೂ ಶಾಶ್ವತವೇ ಆಗಿದೆ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳ ಮಹತ್ವವನ್ನು ಸೃಷ್ಟಿ ಸ್ಥಿತಿ, ಲಯಗಳ ವಿವರಣೆಯನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಸ್ವರೂಪವನ್ನು ಪ್ರಕೃತಿ ನಿಯಮಕ್ಕೂ, ನಮ್ಮ ಶರೀರಕ್ಕೂ ಇರುವ ಸಂಬಂಧವನ್ನು 'ಅರಿತು' ವಿಮರ್ಶೆ ಮಾಡಿ ಮನುಷ್ಯನಲ್ಲಿ ಅಡಗಿರುವ ಜ್ಞಾನದೀಪದಿಂದ ತುಳಸೀ ಗಿಡದಲ್ಲಿ ಪರಮಾತ್ಮನನ್ನು ಯಾವ ರೂಪದಲ್ಲಿ ಬೇಕಾದರೂ ಕಾಣಬಹುದು.

## ತುಳಸೀ ಧ್ಯಾನ ಶ್ಲೋಕ

ಯನ್ಮೂಲೇ ಸರ್ವ ತೀರ್ಥಾನಿ । ಯನ್ಮಧ್ಯೇ ಸರ್ವ ದೇವತಾ ॥
ಯದಗ್ರೇ ಸರ್ವ ವೇದಾಶ್ಚ । ತುಲಸಿ ತ್ವಾಂ ನಮಾಮ್ಯಹಂ ॥

ತುಲಸೀ ವೃಕ್ಷದ ಮೂಲದಲ್ಲಿ ಸಕಲ ತೀರ್ಥಕ್ಷೇತ್ರಗಳೂ, ಗಿಡದ ಮಧ್ಯಭಾಗದಲ್ಲಿ ಎಲ್ಲಾ ದೇವತೆಗಳೂ, ಗಿಡದ ಮೇಲ್ಭಾಗದಲ್ಲಿ ಚತುರ್ವೇದಗಳು ನೆಲೆಸಿರುವಂತಹ ಪರಬ್ರಹ್ಮ ಸ್ವರೂಪವಾದ ತುಳಸಿಗೆ ನಮಸ್ಕರಿಸುತ್ತೇವೆ.

ಯೋಗಿಗಳಿಗೆ ಅಖಂಡ ಚಿತ್ತಶಾಂತಿಯೆಂಬುದೇ ಪ್ರಿಯವಾದುದು. ವಿಷಯಾಸಕ್ತರಿಗೆ ಆಸೆ, ಆಕಾಂಕ್ಷೆಗಳ ಭೋಗ ಸುಖವೇ ಸರ್ವಸ್ವ. ಶ್ರೀಕೃಷ್ಣನಿಗೆ ಪ್ರಿಯವಾದ ತುಳಸೀ ದಳಗಳಿಂದ

ಅರ್ಚಿಸಿದರೆ ಬಹಳ ಪ್ರಿಯ. ಪರಬ್ರಹ್ಮನಿಂದ ಅಗ್ನಿರೂಪವು ಪ್ರಥಮದಲ್ಲಿ ಉದಯಿಸುವುದು (ಸೂರ್ಯ) ಇದೇ ಋಗ್ವೇದ ಜ್ಞಾನಶಕ್ತಿ ತುಳಸಿಯ ಮೇಲ್ಭಾಗ. (ಬುದ್ಧಿ)

ವಾಯುಪಿನಿಂದ ಅಗ್ನಿಯು ಸ್ಫೋಟವಾಗುವುದೇ ಯಜುರ್ವೇದ, ಕ್ರಿಯಾಶಕ್ತಿ ತುಳಸಿಯ ರೆಂಬೆಗಳು. (ಮನಸ್ಸು).

ಅಗ್ನಿಯು ಸ್ಫುಟವಾಗುತ್ತಾ ಉನ್ನತ ಸ್ಥಿತಿಯನ್ನು ಪಡೆಯುವುದು. ಇದೇ ಸೂರ್ಯ ರೂಪ ಸಾಮವೇದ ಇಚ್ಛಾಶಕ್ತಿ (ಶರೀರ) ಸ್ಫುಟವಾದ ಜ್ವಾಲೆಯು ತಗ್ಗುತ್ತಾ ಪರಬ್ರಹ್ಮನಲ್ಲಿ ಲೀನವಾಗುವುದು ಇದೇ ಅಥರ್ವಣ ವೇದ. ತುಳಸಿಯ ಮೂಲ. (ಪ್ರಾಣ)

ಅಥರ್ವಣ ವೇದವು ಕರ್ಮ ಮಾರ್ಗದಲ್ಲಿ ವ್ಯತಿರಿಕ್ತವಾದ ದೋಷಗಳನ್ನೆಲ್ಲಾ ಪರಿಹರಿಸಿ, ಧರೆ ಉದ್ಧಾರಕ್ಕೆ ಜ್ಞಾನ ಮಾರ್ಗದಲ್ಲಿ ಉನ್ನತ ಸ್ಥಿತಿಗೆ ಬಂದು, ಆತ್ಮ ಸಾಕ್ಷಾತ್ಕಾರ, ಉತ್ತೇಜಿಸಿ, ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಮಾರ್ಗದರ್ಶನಕ್ಕೆ ಪ್ರಚೋದಿಸುವುದು.

## ಸಕಲ ದೋಷ ವಿಮುಕ್ತಿಗೆ ತುಳಸೀ ಗಿಡದ ಪೂಜೆ

ತುಲಸ್ಯಮೃತ ಜನ್ಮಾಸಿ ತಥಾತ್ವಂ ಕೇಶವ ಪ್ರಿಯೆ ।
ಕೇಶವಾರ್ಥಂ ಚಿನೋ ಮಿತ್ವಾಂ ವರದಾಭವ ಶೋಭನೇ ॥
ತದಂಗ ಸಂಭವೈರ್ನಿತ್ಯಂ ಪೂಜಯಾಮಿಯಥಾಹರಿಂ ।
ತಥಾಕುರು ಪವಿತ್ರಾಂಗಿ ತಥಾ ಮಲ ವಿನಾಶಿನೀ ।
ಮಂತ್ರೇಣಾನೇನಯಃ ಕುರ್ಯಾದ್ವಿ ಚಿತ್ಯ ತುಲಸೀ ದಳಂ ॥

ಪರಬ್ರಹ್ಮ ಸ್ವರೂಪಿಯಾದ ತುಳಸೀ ದೇವಿಯು ಅಮೃತಮಯಳಾಗಿ ಕೇಶವನ ಪ್ರಿಯಳು. ಆದ್ದರಿಂದಲೇ ತುಳಸೀ ದಳವು ಕೇಶವನ ಪೂಜೆಗೆ ಬಹಳ ಶ್ರೇಷ್ಠ. ಪ್ರತಿನಿತ್ಯವೂ ತುಳಸಿಯನ್ನು ಪೂಜಿಸಿ, ಅಭಿಷೇಕ ಮಾಡಿ, ಆ ತೀರ್ಥವನ್ನು ಸೇವಿಸುವುದರಿಂದ ಕೇಶವನ ಅನುಗ್ರಹವಾಗಿ ಸಕಲ ದೋಷಗಳಿಂದಲೂ ವಿಮುಕ್ತರಾಗುತ್ತಾರೆ.

## ಕಸ್ಯವೇಶ್ಮನಿ ವಿಪ್ರರ್ಷೇ ಲಕ್ಷ್ಮೀರ್ಭವತಿ ನಿಶ್ಚಲಾ

ಪ್ರತಿನಿತ್ಯವೂ ತುಳಸಿಯನ್ನು ಅಮೃತ ಎಂದರೆ ಹಾಲಿನಿಂದ ಅಭಿಷೇಕ ಮಾಡಿ, ಪೂಜಾದಿಗಳನ್ನು ಭಕ್ತಿಪೂರ್ವಕವಾಗಿ ಮಾಡಿದರೆ ಲಕ್ಷ್ಮೀದೇವಿಯು ಪ್ರಸನ್ನಳಾಗಿ ಸಕಲ ಸಂಪತ್ತಿನಿಂದ ಜೀವನದಲ್ಲಿ ಶಾಂತಿ-ಸಮಾಧಾನದಿಂದಿರಲು ಅನುಗ್ರಹಿಸುತ್ತಾಳೆ.

॥ ಓಂ ಶ್ರೀ ಮಹಾಗಣಪತಯೇ ನಮಃ ॥

# [1]ಅಂಭೃಣೀ[2] ಸೂಕ್ತಮ್

## (ಋಗ್ವೇದದಲ್ಲಿ 10ನೇ ಮಂಡಲದಿಂದ)

ಮಹಾಲಕ್ಷ್ಮೀಚ ವಿದ್ಮಹೇ ವಿಷ್ಣುಪತ್ನೀಚ ಧೀಮಹೇ ತನ್ನೋಮಹಾಲಕ್ಷ್ಮೀ ಪ್ರಚೋದಯಾತ್

"ಮಹಾಲಕ್ಷ್ಮಿಯು[1] ಬ್ರಹ್ಮ, ರುದ್ರ, ಮೊದಲಾದ ಎಲ್ಲಾ ದೇವತೆಗಳ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕಾರಣಳೂ ಐಶ್ವರ್ಯಪ್ರದಳೂ ಆಗಿದ್ದಾಳೆ : ಅದೇ ರೀತಿ ಜಗತ್ತಿನ ಎಲ್ಲಾ ವ್ಯಾಪಾರಗಳಿಗೆ ನಿಯಾಮಕಳೂ, ರಾಷ್ಟ್ರಕ್ಕೆ ಅಭಿಮಾನಿಯಾಗಿದ್ದು ದ್ರವ್ಯಾದಿದಾಯಕಳಾಗಿರುವವಳೂ ಆಕೆಯೇ.[2] ಮೋಕ್ಷ ಕೊಡುವ ಸಾಮರ್ಥ್ಯವೂ ಕೂಡ ಲಕ್ಷ್ಮೀದೇವಿಗೆ ಉಂಟು : ಆದರೆ ಮಹಾಲಕ್ಷ್ಮಿಯ ಈ ಎಲ್ಲಾ ಹಿರಿಮೆಗೂ ಕಾರಣಪುರುಷನಾದ ಪರದೇವತೆಯು ಸಾಕ್ಷಾತ್ ನಾರಾಯಣನೇ ಆಗಿದ್ದಾನೆ. ಲಕ್ಷ್ಮಿಯ ಎಲ್ಲಾ ಕಾರ್ಯಗಳನ್ನು ಮುಖ್ಯವಾಗಿ ಮಾಡುವವನೂ ಸಹ ಅವನೇ. ಅವನು ಮಹಾಲಕ್ಷ್ಮಿಯ ಶ್ರೀ ರೂಪ ಭೂರೂಪಗಳಿಗಿಂತಲೂ ಶ್ರೇಷ್ಠನಾಗಿರುವ ಸರ್ವೋತ್ತಮದೇವತೆ : ಅವನ ಮಹಿಮೆಗೆ ಪಾರವೇ ಇಲ್ಲ" ಎಂಬುದು ಈ ಸೂಕ್ತದ ಸಾರಾಂಶ.

**ಅಹಂ[1] ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ ।**
**ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥ ॥೧॥**

ನಾನು ಏಕಾದಶ ರುದ್ರರಿಂದಲೂ, ಅಷ್ಟವಸುಗಳಿಂದಲೂ, ಏಕಾದಶ ಆದಿತ್ಯರಿಂದಲೂ, ದಶ ವಿಶ್ವೇದೇವತೆಗಳಿಂದಲೂ ಕೂಡಿಕೊಂಡು ಸಂಚರಿಸುತ್ತೇನೆ. ನಾನು ಮಿತ್ರಾವರುಣರನ್ನು, ಇಂದ್ರ ಅಗ್ನಿಗಳನ್ನು ಮತ್ತು ಅಶ್ವಿನೀ ದೇವತೆಗಳನ್ನು ಕೂಡ ಭರಣ ಮಾಡುತ್ತೇನೆ.

**ಅಹಂ[1] ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತಪೂಷಣಂ ಭಗಮ್ ।**
**ಅಹಂ ದಧಾಮಿ ದ್ರವಿಣಂ ಹವಿಷ್ಮತೇ ಸುಪ್ರಾವ್ಯೇ[1] ಯಜಮಾನಾಯ ಸುನ್ವತೇ ॥೨॥**

ನಾನು ಸೋಮಲತೆಗೆ ಅಭಿಮಾನಿಯಾದ ಚಂದ್ರನನ್ನು, ತ್ವಷ್ಟ್ರ, ಪೂಷಣ ಮತ್ತು ಭಗ ಮೊದಲಾದವರನ್ನು ಕೂಡ ಪಾಲಿಸುತ್ತೇನೆ. ನಾನು ಅತ್ಯಂತ ಹೆಚ್ಚಾಗಿ ಸಂರಕ್ಷಿಸಲ್ಪಡಬೇಕಾದ ಮೂರು ಲೋಕಗಳಲ್ಲೂ ನೆಲೆಸಿದ್ದು ಸೋಮರಸವನ್ನು ಅರ್ಪಿಸುವ, ಯಜ್ಞಯೋಗ್ಯವಾದ ಬಹುವಿಧ ಅನ್ನವನ್ನು ಹೊಂದಿರುವ, ಬ್ರಹ್ಮ ಇಂದ್ರ ಮೊದಲಾದ ಯಜ್ಞಶೀಲರಿಗೆಲ್ಲ ಐಶ್ವರ್ಯವನ್ನು ಅತಿಶಯವಾಗಿ ಕೊಡುತ್ತೇನೆ.

**ಅಹಂ [1]ರಾಷ್ಟ್ರೀ ಸಂಗಮನೀ ವಸೂನಾಂ [2]ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ ।**
**ತಾಂ ಮಾ ದೇವಾ ವ್ಯದಧುಃ ಪುರುತ್ರಾ [3]ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್* ॥೩॥**

ನಾನು ಭೂ ರೂಪದಿಂದ ರಾಷ್ಟ್ರಕ್ಕೆ ಅಭಿಮಾನಿ ದೇವತೆಯಾಗಿದ್ದೇನೆ ; ನಾನು ಧನಧಾನ್ಯ ರತ್ನಾದಿಗಳನ್ನು ತಂದು ಕೊಡುವವಳಾಗಿಯೂ ಯಜ್ಞಯೋಗ್ಯವಾದ ಸಂಪತ್ತುಗಳಿಗೆ ಆದಿಭೂತ ಕರ್ತೃವಾಗಿಯೂ ಇದ್ದೇನೆ. ಮಹತ್ತರವಾದ ಬ್ರಹ್ಮಾದಿಲೋಕಗಳನ್ನು ಪಾಲಿಸುವ ಇಂತಹ ನನ್ನನ್ನು ದೇವತೆಗಳು, ಭೂರಿ ದ್ರವ್ಯಗಳನ್ನು ನೆಲೆಗೊಳಿಸುವವಳು

ಎಂಬುದಾಗಿಯೂ, ಬಹುವಿಧ ದ್ರವ್ಯವನ್ನು ತ್ರಿವಿಧ ಜೀವರಿಗೂ ಅವರವರ ಯೋಗ್ಯತೆಗೆ ಅನುಗುಣವಾಗಿ ಅವರವರ ಮನೆಗಳಲ್ಲಿ ತುಂಬಿಸುವವಳನ್ನಾಗಿಯೂ ತಿಳಿದು ಸ್ತುತಿಸುತ್ತಾರೆ.

**ಮಯಾ ಸೋ [1]ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್**
**ಅಮಂತವೋ ಮಾಂ ತ ಉಪಕ್ಷಿಯಂತಿ[2] । ಶ್ರು ಶ್ರುತ ಶ್ರದ್ಧಿವಂ ತೇ ವದಾಮಿ[3] ॥೪॥**

ನಾನು ಹೇಳಿದ ರೀತಿಗಿಂತ ವಿರುದ್ಧವಾದ ರೀತಿಯಲ್ಲಿ ತಿಳಿಯುವವನು, ಬದುಕುವುದನ್ನು ಮಾತ್ರವೇ ಪುರುಷಾರ್ಥವೆಂದು ತಿಳಿದು ತತ್ವದ ಬಗ್ಗೆ ಗಮನವನ್ನೇ ಕೊಡದಿರುವವನು ಮತ್ತು ಈ ರೀತಿಯಾಗಿ ನನ್ನಿಂದ ಹೇಳಲ್ಪಟ್ಟ ತತ್ವಗಳನ್ನು ಶ್ರದ್ಧೆಯಿಂದ ಶಿಷ್ಯ ಭಾವದಿಂದ ಕೇಳುವವನು ಈ ಮೂವರು ನನ್ನಿಂದಲೇ ಅನ್ನವನ್ನು ಪಡೆಯುತ್ತಾರೆ. ನನ್ನನ್ನು ಅವಮಾನಿಸುವವರೆಲ್ಲರೂ ಬೇಗನೇ ನಾಶವನ್ನು ಹೊಂದುತ್ತಾರೆ. ಶ್ರದ್ಧಾಳುಗಳು ಗ್ರಹಿಸುವ ಇಂತಹ ವಚನವನ್ನು ನಿನಗೆ ನಾನು ಹೇಳುತ್ತಿದ್ದೇನೆ; (ಶ್ರದ್ಧೆಯಿಂದ) ಕೇಳು; ತಟಸ್ಥರಾಗಿರುವ ಇತರ ಜನಗಳು ಸಹ ಇದನ್ನು ಕೇಳಿಸಿಕೊಳ್ಳಲಿ.

**[1]ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ**
**ಯಂ ಕಾಮಯೇ ತಂ ತಮುಗ್ರಂ[2] ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್[3] ॥೫॥**

ದೇವತೆಗಳಿಂದಲೂ ಮತ್ತು ಉತ್ತಮ ಮನುಷ್ಯರಿಂದಲೂ ಸೇವಿಸಲ್ಪಡುವ ಈ ಮಾತನ್ನು ನಾನೇ ಸ್ವತಃ ಹೇಳುತ್ತಿದ್ದೇನೆ; ನಾನು ಇಷ್ಟ ಪಡುವ ಆಯಾ ಯೋಗ್ಯತೆಯ ಯಾವ ಜೀವನವನ್ನು ಬೇಕಾದರೂ ರುದ್ರನನ್ನಾಗಿ ಮಾಡಬಲ್ಲೆ; ಬ್ರಹ್ಮನನ್ನಾಗಿ ಮಾಡಬಲ್ಲೆ ; ಋಷಿಯನ್ನಾಗಿ ಆಗಲೀ ಉತ್ತಮ ಮೇಧಾಮಿಯನ್ನಾಗಿ ಆಗಲಿ, ಮಾಡಬಲ್ಲೆ . ಬ್ರಹ್ಮರುದ್ರಾದಿಗಳು ಅತ್ಯಂತ ಸಮರ್ಥರಾದ ದೇವತೆಗಳೆಂದು ಪ್ರಸಿದ್ಧರಾಗಿರುವುದರಿಂದ ಅಂತಹವರ ಸೃಷ್ಟಿ ಸ್ಥಿತ್ಯಾದಿಗಳಿಗೆ ನಾನೇ ಸಮರ್ಥಳೇ 'ಹೊರತು' ಬೇರಾರು ಅಲ್ಲ ಎದು ಭಾವ.

**ಅಹಂ [1]ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ [2]ಶರವೇ ಹಂತವಾ ಉ[3] ।**
**ಅಹಂ ಜನಾಯ [4]ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆವಿವೇಶ[5] ॥೬॥**

ನಾನು ಪ್ರಳಯದ ಕಾಲದಲ್ಲಿ, ಬ್ರಹ್ಮದೇವರ ಪಂಚಮ ಶಿರಸ್ಸನ್ನು ಕತ್ತರಿಸಿದ, ಜಗತ್ಸಂಹಾರಕನಾದ ರುದ್ರನನ್ನು ಸಂಹರಿಸಲೆಂದೇ ಧನುಸ್ಸನ್ನು ಕರ್ಣಪರ್ಯಂತ ಎಳೆಯುತ್ತೇನೆ. ನಾನು ಜನಗಳಿಗೆ ಕೈವಲ್ಯವನ್ನು ಸಹ ಕರುಣಿಸಬಲ್ಲೆನು ನಾನು ದ್ಯಾವಾಪೃಥಿವೀ (ಮೊದಲಾದವುಗಳನ್ನು) ರಕ್ಷಿಸುವ ಸಲುವಾಗಿ ಅವುಗಳನ್ನು ಅಭಿಮಾನಿದೇವತೆಯಾಗಿ ಪ್ರವೇಶಿಸಿದವಳಾಗಿದ್ದೇನೆ.

**ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮಯೋನಿರಪ್ಸ್ವಂತಃ ಸಮುದ್ರೇ ।**
**ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ* ॥೭॥**

ನಾನು ಈ ಜಗತ್ತಿನ ತಂದೆಯಾದ ಚತುರ್ಮುಖ ಬ್ರಹ್ಮನನ್ನು ಸರ್ವಜೀವೋತ್ತಮನನ್ನಾಗಿ ಸೃಷ್ಟಿಸಿದ್ದೇನೆ. ಸಮುದ್ರೋದಕ ಮಧ್ಯದಲ್ಲಿ ನನಗೆ ಕಾರಣಪುರುಷನಾದ ಸ್ವಾಮಿಯು ಇದ್ದಾನೆ. ಈ ಎಲ್ಲಾ ಭುವನಗಳು

ಮುಖ್ಯವಾಗಿ ರಕ್ಷಿತವಾಗಿರುವುದು ಆ ನಾರಾಯಣನಿಂದಲೇ. ನಾನು ಈ ದ್ಯಾವಾ ಪೃಥಿವೀ (ಮೊದಲಾದವುಗಳನ್ನು) ನನ್ನಶರೀರದಿಂದ ಧರಿಸಿರುವುದು ನಿಮಿತ್ತಮಾತ್ರಳಾಗಿ ಮಾತ್ರ.
ಅಭಿಮಾನಿ ಮತ್ತು ಅಭಿಮನ್ಯಮಾನಗಳಾದ ಸಮುದ್ರ ಮತ್ತು ನೀರು ಈ ಎರಡಕ್ಕೂ ಮುಖ್ಯ ಆಧಾರನಾದ ಸರ್ವಾಂತರ್ಯಾಮಿ ನಾರಾಯಣನೇ ನನಗೆ ಕಾರಣನು ಎಂದು ಶ್ರೀದೇವಿಯ ಅಭಿಪ್ರಾಯವು.

*ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ ವಿಶ್ವಾ।
[1]ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ ॥೮॥

ಎಲ್ಲಾ ಲೋಕಗಳ ಸೃಷ್ಟ್ಯಾದಿ ಕಾರ್ಯಗಳಿಗೆ ತೊಡಗುವ ನಾನೇ ಮುಖ್ಯಪ್ರಾಣನಂತೆ ಭಗವಂತನಿತ್ತ ಓರಿಮೆಯಿಂದ ಜಗತ್ತನ್ನೆಲ್ಲ ಸುವಾಸಿತವಾಗಿಸುತ್ತೇನೆ. ನನ್ನ ಈ ಪೃಥಿವೀ ಅಭಿಮಾನಿಯಾದ ಭೂರೂಪಕ್ಕಿಂತಲೂ, ದ್ಯುಲೋಕಾಭಿಮಾನಿಯಾದ ಶ್ರೀರೂಪಕ್ಕಿಂತಲೂ ಆ ಪರಮಾತ್ಮನೇ ಶ್ರೇಷ್ಠನು. ನನ್ನ ಮಹಿಮೆಗೆ ಈ ತೆರನಾದ ಪರಿಮಿತಿ ಇದೆ. (ಅವನ ಮಹಿಮೆಗೆ ಮಾತ್ರ ಯಾವ ಪರಿಮಿತಿಯೂ ಇಲ್ಲ ಎಂದು ಭಾವ).

## ಶ್ರೀ ಭೂ ಅಂಭೃಣೀ ಪತಿ ಮೂಲ ನಾರಾಯಣನಿಗೆ ನಮಸ್ಕಾರಗಳು

ಆಶ್ವಲಾಯನ ಸೂತ್ರ - ಋಗ್ವೇದ ಪರಿಚಯ ಎಂಬ ಗ್ರಂಥದಿಂದ ಈ ವಿಚಾರಗಳನ್ನುಗ್ರಂಥಕರ್ತರು, ಸಂಸ್ಕೃತ ವಿದ್ವಾಂಸ ರಾದ ವೇ॥ ರಾ॥ ಸೂರ್ಯನಾರಾಯಣರವರ ಅನುಮತಿ, ಸಲಹೆ, ಪ್ರೋತ್ಸಾಹಗಳೊಂದಿಗೆ ವಿದ್ವಾಂಸರಾದ ವೇ॥ ಬ್ರ॥ ಎಸ್.ವಿ.ಶ್ಯಾಮಭಟ್ಟರು, 1 ನೇ ಬ್ಲಾಕ್, ರಾಜಾಜಿನಗರ, ರವರ ಪರಿಶೀಲನೆ ಹಾಗೂ ಮುನ್ನುಡಿಯೊಂದಿಗೆ ಮತ್ತು ಯಡ ತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠ, ಕೃಷ್ಣರಾಜನಗರ, ಮೈಸೂರು ಜಿಲ್ಲೆ, ಇಲ್ಲಿಯ ಶ್ರೀ ಶ್ರೀ ಶಂಕರಭಾರತೀ ಮಹಾಸ್ವಾಮಿಗಳ ಆಶೀರ್ವಾದೊಂದಿಗೆ ಈ ರೂಪ ಕೊಡಲು ಸಾಧ್ಯವಾಗಿದೆ.

ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರವನ್ನು ಈ ಸಂದರ್ಭದಲ್ಲಿ ತಿಳಿಯಬಯಸುತ್ತೇನೆ.

ಈ ಕೆಲಸವನ್ನು ಮಾಡಲು ನನಗೆ ಕೃಪೆ ಮಾಡಿದ ದಿವಂಗತ ಮಾತಾ-ಪಿತೃಗಳಿಗೂ ಮತ್ತು ಎಲ್ಲ ಗುರುವರ್ಯರು ಗಳಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಹೆಬ್ಬೂರು ಕೋದಂಡಾಶ್ರಮ ಮಠದ ಹಿರಿಯ ಸ್ವಾಮಿಗಳವರು ಮೊದಲಿನಿಂದಲೂ ನನಗೆ ಪ್ರೋತ್ಸಾಹ ಸಲಹೆ, ಆಶೀರ್ವಾದವನ್ನು ನೀಡುತ್ತಾ ಬಂದಿರುತ್ತಾರೆ. ಅವರಿಗೂ ನನ್ನ ಹೃತ್ಪೂರ್ವಕವಾದ ನಮಸ್ಕಾರವನ್ನು ತಿಳಿಸುತ್ತೇನೆ.

ಬೆಂಗಳೂರಿನಲ್ಲಿ ಆವನಿ ಶೃಂಗೇರಿ ಮಠದ ಶ್ರೀ ಶ್ರೀ ಗಳವರಿಗೆ ಕಳೆದ ವರ್ಷದ ದತ್ತಾತ್ರೇಯ ಜಯಂತಿಯ ದಿನ ನಾನು ಬರೆದ ಪುಸ್ತಕಗಳನ್ನು ತಲುಪಿಸಿದೆ. ಅವರು ನೋಡಿ ಸಂತೋಷದಿಂದ ಆಶೀರ್ವದಿಸಿದರು. ಈ ನಿಟ್ಟಿನಲ್ಲಿ ನನಗೆ ಸಹಕಾರ ನೀಡಿದ ಎಲ್ಲರಿಗೂ ನನ್ನ ಅಭಿನಂದನೆಗಳು.

ಎನ್.ಆರ್.ನಂಜುಂಡಯ್ಯ,

ದಿನಾಂಕ: 17.10.2005 ರಾಜಾಜಿನಗರ, ಬೆಂಗಳೂರು-10.

॥ ಹರ ನಮಃ ಪಾರ್ವತಿ ಪತಯೇ ಹರಹರ ಮಹಾದೇವ ॥